# ಪಿತೃಯಜ್ಞವಿಧಿಃ

ಭಾಗ 1



ಪ್ರಕಾಶನ
ತತ್ವಸಂಶೋಧನಸಂಸತ್ (ರಿ)
ಕರ್ನಾಟಕಸಂಸ್ಕೃತವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ
ಶ್ರೀಪಲಿಮಾರು ಮಠ - ಉಡುಪಿ

# ಪಿತೃಯಜ್ಞವಿಧಿಃ

## ಭಾಗ ಒಂದು

ಸಂಗ್ರಾಹಕ

ಸೂರ್ಯಪ್ರಕಾಶ ಎನ್. ರಾವ್



ಪ್ರಕಾಶನ

ತತ್ವಸಂಶೋಧನ ಸಂಸತ್

[ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ.]

ಶ್ರೀಪಲಿಮಾರು ಮಠ , ಉಡುಪಿ.

ಸಹಕಾರ

ಮಧ್ವ ಪ್ರಕಾಶನ, ಮುಲ್ಕಿ

# PITRYAJNAVIDHIH

A Collection of methods of funeral rituals

Collected by **Suryaprakasha N. Rao**
Manthralaya House,
Kenchanakere Post,
Bellayaru, Mulki-574 154. (Da. Ka.)
 9844213352  9845407916

ಪ್ರಕಾಶಕರು : **ತತ್ವಸಂಶೋಧನ ಸಂಸತ್** (ರಿ.)
(ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)
ಶ್ರೀಪಲಿಮಾರುಮಠ, ಉಡುಪಿ.

**© ಹಕ್ಕುಗಳು ಕಾಯ್ದಿರಿಸಲ್ಪಟ್ಟಿವೆ.**

ಪ್ರಕಟಣ ವರ್ಷ : 2022
ಪುಟಗಳು : ೨೮+590
ಪ್ರತಿಗಳು : 1000
**ಬೆಲೆ** : **ರೂ. 600/-** [ಎರಡು ಸಂಪುಟಗಳಿಗೆ]

ಮುಖಪುಟ ವಿನ್ಯಾಸ : ರಘುನಂದನ್ ಶರ್ಮಾ
ತತ್ವ ಸಂಶೋಧನ ಸಂಸತ್, ಶ್ರೀಪಲಿಮಾರುಮಠ
ಅಕ್ಷರಸಂಯೋಜನೆ : 'ಶ್ರೀನವದುರ್ಗಾ ಲೇಸರ್‌ಟೆಕ್', ಉಡುಪಿ.
C/o. ಡಾ। ಪದ್ಮನಾಭ ಕೇಕುಣ್ಣಾಯ. [9342438727]
ಮುದ್ರಕರು : ಪವನ್ ಪ್ರಿಂಟರ್ಸ್, ಬೆಂಗಳೂರು



|| Sri Krishnaya Namaha Sri ||

**SHRI KRISHNA MATHA**

JAGATHGURU SRIMADHWACHARYA MAHASAMSTHANAM SRI JANARDANA THEERTHA PEETHAM

**PARYAYA SRI KRISHNAPURA MATHA-2022-24, UDUPI-576101**

Ph : 0820 - 2520598 Email: paryaya@krishnapuramatha.org



# ಅನುಗ್ರಹಸಂದೇಶ



ನಮ್ಮ ಅಭಿಮಾನಿಗಳು ಹಾಗೂ ವಿದ್ಯಾಶಿಷ್ಯರೂ ಆಗಿರುವ ಸೂರ್ಯಪ್ರಕಾಶ ಎನ್. ರಾವ್ ಇವರು ಉತ್ತರಷೋಡಶಸಂಸ್ಕಾರಗಳ ಬಗ್ಗೆ ವಿಷಯಗಳನ್ನು ಸಂಗ್ರಹಿಸಿ **'ಪಿತೃಯಜ್ಞವಿಧಿಃ'** ಎಂಬ ಪುಸ್ತಕವನ್ನು ಪ್ರಕಟಿಸಿರುವರು. ಈ ಹಿಂದೆ ವೈದಿಕ ಪೂಜಾಪದ್ಧತಿಯ ಬಗ್ಗೆ ವಿಷಯಗಳನ್ನು ಸಂಗ್ರಹಿಸಿ ಪುಸ್ತಕವನ್ನು ಪ್ರಕಟಿಸಿರುವ ಶ್ರೀಯುತರ ಪ್ರಕಟಣೆಗಳಲ್ಲಿ ನವೀನತೆಯನ್ನೂ ಪ್ರಾಮಾಣಿಕತೆಯನ್ನೂ ನಾವು ಗಮನಿಸಿದ್ದೇವೆ. ಹಿಂದಿನಿಂದಲೂ ಧಾರ್ಮಿಕವಿಚಾರಗಳ ಬಗ್ಗೆ ಒಲವಿದ್ದು ಶ್ರದ್ಧೆಯಿಂದ, ಗುರುಭಕ್ತಿಯಿಂದ ಅಧ್ಯಯನ ನಡೆಸಿರುವ ಶ್ರೀಯುತರು ಶ್ರದ್ಧೆಯಿಂದ ಪೌರೋಹಿತ್ಯವನ್ನೂ ನಡೆಸುತ್ತಿರುವುದು ಅಲ್ಲದೆ ಈಗ ಹೊಸ ಪುಸ್ತಕಗಳ ಸಂಪಾದನೆ ಹಾಗೂ ಪ್ರಕಟನೆಗೆ ಮುಂದಾಗಿರುವುದು ಸಂತೋಷದ ಸಂಗತಿ. ಪುಣ್ಯಕ್ಷೇತ್ರಗಳ ಯಾತ್ರೆಗಳ ಹವ್ಯಾಸವನ್ನೂ ಇಟ್ಟುಕೊಂಡಿರುವ ಶ್ರೀಯುತರಿಂದ ಧಾರ್ಮಿಕಕ್ಷೇತ್ರಕ್ಕೆ ಉಪಯುಕ್ತಗಳಾದಂತಹ ಇನ್ನೂ ಅನೇಕ ಪುಸ್ತಕಗಳು ಪ್ರಕಟನೆಗೊಳ್ಳಲಿ. ಸಜ್ಜನರು ಸೂರ್ಯಪ್ರಕಾಶರಾಯರ ಪ್ರಕಟನೆಗಳನ್ನು ಆದರದಿಂದ ಸ್ವೀಕರಿಸಿ ಪ್ರೋತ್ಸಾಹಿಸಲಿ.

ಸಂಪಾದಕರಿಗೆ, ಪ್ರಕಾಶಕರಿಗೆ ಹಾಗೂ ಇದಕ್ಕೆ ಸಹಕರಿಸಿದವರೆಲ್ಲರಿಗೂ ನಮ್ಮ ಆರಾಧ್ಯಮೂರ್ತಿ ಶ್ರೀಕಾಲೀಯಮರ್ದನ ಕೃಷ್ಣದೇವರು ಅನುಗ್ರಹಿಸಲಿ ಎಂದು ಹಾರೈಸುತ್ತೇವೆ.

ಶ್ರೀಕೃಷ್ಣಾಪುರ ಮಠ
ಉಡುಪಿ–೫೭೬ ೧೦೧

**(ಶ್ರೀವಿದ್ಯಾಸಾಗರತೀರ್ಥ ಶ್ರೀಪಾದಂಗಳವರು)**

**SRI ADMAR MUTT**
UDUPI - 576 101
Phone 2520317

Camp [illegible]
Date 10.01.20೨೨



# ಅನುಗ್ರಹಸಂದೇಶ

ನಾರಾಯಣ ಸ್ಮರಣೆಗಳು.

**"ಪಾಂತಿ ಇತಿ ಪಿತರಃ"** – ನಮ್ಮನ್ನು ಯಾರು ರಕ್ಷಿಸುತ್ತಾರೋ ಅವರು ಪಿತೃಗಳು. ಅಂತಹ ಪಿತೃಸಂಬಂಧಿ ಯಜ್ಞವನ್ನು ಮಾಡಿಲ್ಲವಾದರೆ ನಾವು ಕೃತಘ್ನರಾಗುವೆವು. ಕೃತಘ್ನತೆಗೆ ಪ್ರಾಯಶ್ಚಿತ್ತವೇ ಇಲ್ಲ. ಆದ್ದರಿಂದ ಅಗತ್ಯ ಪಿತೃಯಜ್ಞವನ್ನು ಮಾಡಲೇಬೇಕು. ಅದನ್ನು ಶಾಸ್ತ್ರೀಯವಾಗಿ ಮಾಡಿದಾಗಲೇ ಜನಾರ್ದನನ ಪ್ರೀತಿ ಪಿತೃದ್ವಾರಾ ಲಭ್ಯವಾಗುವುದು. ನಮ್ಮ ಮನೆಯ ಎಲ್ಲಾ ಮಂಗಳಕಾರ್ಯಗಳೂ ಶೀಘ್ರದಲ್ಲಿ ನಿರ್ವಿಘ್ನವಾಗಿ ಜರಗುವುದು.

ಈ ಪುಸ್ತಕದ ಪ್ರಯೋಜನವು ಅಧಿಕಾರಿ ಸಾತ್ತ್ವಿಕರಿಗೆ ಸಿಗಲಿ. ಸಂಪಾದಕರಿಗೆ ಹಾಗೂ ಪ್ರಕಾಶಕರಿಗೆ ಪಿತ್ರಂತರ್ಗತ ಜನಾರ್ದನನ ಪ್ರೀತಿಯು ಸಿಗಲಿ ಎಂದು ಶ್ರೀಕೃಷ್ಣ–ಮುಖ್ಯಪ್ರಾಣರಲ್ಲಿ ನಮ್ಮ ಪ್ರಾರ್ಥನೆ.

ಇತ್ಯನೇಕ ಸಪ್ರೇಮ ನಾರಾಯಣ ಸ್ಮರಣೆಗಳು.

ಶ್ರೀಶ್ರೀ ವಿಶ್ವಪ್ರಿಯತೀರ್ಥಶ್ರೀಪಾದರು






# ಅನುಗ್ರಹ ಸಂದೇಶ

ಪಿತೃಯಜ್ಞ ಎನ್ನುವ ಶಬ್ದವನ್ನು ಪ್ರಯೋಗಮಾಡುತ್ತೇವೆ. ಪಿತೃ ಎನ್ನುವಾಗ ಮಾತೃವನ್ನು ಬಿಟ್ಟಿದ್ದಾರೆ ಎಂದು ಚಿಂತನೆ ಮಾಡುವ ಅವಕಾಶ ಇಲ್ಲ. ಯಾಕೆಂದರೆ ಪಿತೃಶಬ್ದದಲ್ಲಿ ಮಾತೃಶಬ್ದವೂ ಸೇರಿಕೊಂಡಿರುತ್ತದೆ. 'ಮಾತಾ ಚ ಪಿತಾ ಚ ಪಿತರೌ' ಎಂದು ಒಟ್ಟು ಸೇರಿದಾಗ ವ್ಯಾಕರಣರೀತ್ಯಾ ಮಾತೃಶಬ್ದವು ಹೋಗಿ ಪಿತೃಶಬ್ದ ಮಾತ್ರ ಉಳಿಯುತ್ತದೆ. ಹಾಗಾಗಿ ಪಿತೃಯಜ್ಞ ಎಂದು ಹೇಳುವಾಗ ಅಲ್ಲಿ ಮಾತೃ ಕೂಡ ಸೇರಿಕೊಂಡಿರುತ್ತಾಳೆ. ಹಾಗಾಗಿ ಇದೊಂದು ಪಾವನವಾದ ಯಜ್ಞ. ಉಪನಿಷತ್ತು ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯದೇವೋ ಭವ, ಎಂದು ಹೇಳುತ್ತಾ ನಮಗೆ ಪೂಜ್ಯವಾದ ವಸ್ತುಗಳ ಪಟ್ಟಿಯಲ್ಲಿ ತಾಯಿ–ತಂದೆ–ಗುರುಗಳಿಗೆ ಮೊದಲ ಸ್ಥಾನವನ್ನು ನೀಡಿದೆ.

ನಾವು ಯಾರ ಋಣವನ್ನಾದರೂ ಪರಿಹಾರ ಮಾಡಿಕೊಳ್ಳಬಹುದು. ಆದರೆ ತಾಯಿ, ತಂದೆ, ಗುರುಗಳ ಋಣವನ್ನು ಎಂದೆಂದೂ ಪರಿಹಾರ ಮಾಡಿಕೊಳ್ಳಲು ಸಾಧ್ಯವಿಲ್ಲ. "ನಮಗೆ ಯೌವನ ಬಂದಿದೆ, ತಾಕತ್ತು ಬಂದಿದೆ; ನಾವು ವಿದ್ಯಾವಂತರು ನಾವೇ ಸಂಪಾದನೆ ಮಾಡುತ್ತೇವೆ" ಎಂದು ನಾವು ಹೇಳಬಹುದು. ಆದರೆ ಇವೆಲ್ಲವೂ ಆಗಬೇಕಾದರೆ ಈ ಶರೀರ–ಇಂದ್ರಿಯಗಳು ಬೇಕು ತಾನೆ? ಇದನ್ನು ಕೊಟ್ಟವರು

ಯಾರು ಎಂಬ ಪ್ರಶ್ನೆ ಉಂಟೇ ಉಂಟಲ್ಲ. ನಾವೇ ಸಂಪಾದನೆ ಮಾಡಿಕೊಂಡು ಬಂದದ್ದಲ್ಲ ಇದು.

'ಮಾತೃ' ಎಂಬ ಶಬ್ದಕ್ಕೆ ನಿರ್ಮಾತೃ ಎಂದು ಅರ್ಥ. ನಮ್ಮ ಶರೀರವನ್ನು ನಿರ್ಮಿಸಿದವಳು ಅವಳು. ಪಿತೃ ಎಂಬ ಶಬ್ದಕ್ಕೆ 'ಪಾತಿ ಇತಿ ಪಿತಾ' ರಕ್ಷಣೆ ಮಾಡುವವನು ಎಂದು ಅರ್ಥ. ನಮ್ಮನ್ನು ರಕ್ಷಣೆ ಮಾಡುವುದರಿಂದ ತಂದೆಗೆ ಈ ಹೆಸರು. ಹಾಗಾಗಿ ಈ ಶರೀರವನ್ನು ನಿರ್ಮಾಣ ಮಾಡಿಕೊಟ್ಟ, ರಕ್ಷಣೆ ಮಾಡಿದ ಆ ತಂದೆ-ತಾಯಿಗಳ ಒಳಗಿದ್ದ ಪ್ರಾಣದೇವರು ಹಾಗೂ ಭಗವಂತನನ್ನು ನಾವು ಎಂದೂ ಮರೆಯಲು ಸಾಧ್ಯವಿಲ್ಲ.

ಅವರು ಪೂಜಾ ಪ್ರತೀಕಗಳು. ಆ ಪ್ರತೀಕಗಳಿಗೆ ಪೂಜೆ ಮಾಡುವ ವಿಧಾನಗಳನ್ನು ಶಾಸ್ತ್ರಗಳಲ್ಲಿ ಒತ್ತು ಕೊಟ್ಟು ಹೇಳಿದ್ದಾರೆ. ನಮ್ಮ ದಿನನಿತ್ಯದ ಪೂಜೆಯಲ್ಲಿ ತಾಯಿ-ತಂದೆ-ಗುರುಗಳಿಗೆ ವಿಶಿಷ್ಟವಾದ ಸ್ಥಾನವು ಇದೆ. ಬದುಕಿರುವಾಗ ತಾಯಿ-ತಂದೆಯರನ್ನು ಚೆನ್ನಾಗಿ ನೋಡಿಕೊಳ್ಳಬೇಕು. 'ಜೀವತೋ ವಾಕ್ಯಕರಣಾತ್'-ಅವರು ಏನು ಹೇಳುತ್ತಾರೆ ಅದನ್ನು ಅಕ್ಷರಶಃ ಪರಿಪಾಲನೆ ಮಾಡಬೇಕು. ಅವರ ಮನಸ್ಸಿಗೆ ನೋವಾಗದಿರುವ ಹಾಗೆ, ಮನಸ್ಸಿಗೆ ಆಘಾತವು ಆಗದಿರುವ ಹಾಗೆ, ನಡೆದುಕೊಳ್ಳಬೇಕು. ಬದುಕಿರುವಷ್ಟು ಕಾಲ ಅವರ ಶುಶ್ರೂಷೆ ಮಾಡಿ, ಅವರ ಸೇವೆಯನ್ನು ಮಾಡಿ ಅವರ ಅನುಗ್ರಹವನ್ನು ಸಂಪಾದನೆ ಮಾಡಿಕೊಳ್ಳಬೇಕು. ಹಾಗಾಗಿಯೇ ದೇವರ ಪೂಜೆಯನ್ನು ಮಾಡಿದ ಮೇಲೆ ತಾಯಿ-ತಂದೆಯರಿಗೆ, ಗೋವಿಗೆ, ಗುರುಗಳಿಗೆ ನಮಸ್ಕಾರವನ್ನು ಮಾಡುವ ಸಂಪ್ರದಾಯವು ನಮ್ಮಲ್ಲಿ ಚಾಲ್ತಿಯಲ್ಲಿದೆ.

ತಂದೆ-ತಾಯಿಗಳ ಮರಣದ ಅನಂತರ ಇನ್ನೂ ವಿಶೇಷವಾದಂತಹ ಶ್ರಾದ್ಧರೂಪದ ಆರಾಧನೆಯನ್ನು ಶಾಸ್ತ್ರಗಳಲ್ಲಿ ತಿಳಿಸಿದ್ದಾರೆ. ಶ್ರದ್ಧೆಯಿಂದ ಮಾಡುವ ಕಾರ್ಯಕ್ರಮವದು. ಸಂಧ್ಯಾವಂದನೆಯೂ ಶ್ರದ್ಧೆಯಿಂದಲೇ ಮಾಡುವಂತಹದ್ದು. ಆದರೆ ಅದನ್ನು 'ಶ್ರಾದ್ಧ' ಎಂದು ಕರೆಯುವುದಿಲ್ಲ. ಆದರೆ ಅದಕ್ಕಿಂತಲೂ ಜಾಸ್ತಿ ಶ್ರದ್ಧೆ ನಮಗೆ ಪಿತೃಕಾರ್ಯದಲ್ಲಿ ಬೇಕು. ಹಾಗಾಗಿಯೇ ಇದನ್ನು ಶ್ರಾದ್ಧ ಎಂದು ಕರೆಯುತ್ತಾರೆ.

ತಂದೆ-ತಾಯಿಗಳ ಮರಣಾನಂತರದಲ್ಲಿ ಅವಶ್ಯವಾಗಿ ಮಾಡಬೇಕಾದ ಕರ್ತವ್ಯಗಳನ್ನು ಈ ಹೊತ್ತಗೆಯಲ್ಲಿ ನೀಡಲಾಗಿದೆ. ಪರಮಪೂಜ್ಯರಾದಂತಹ ಶ್ರೀಕೃಷ್ಣಾಪುರಮಠಾಧೀಶರಾದ ಶ್ರೀ ವಿದ್ಯಾಸಾಗರತೀರ್ಥರಲ್ಲಿ ಅಧ್ಯಯನವನ್ನು ನಡೆಸಿರುವ, ನಮ್ಮವರೇ ಆದ ಸೂರ್ಯಪ್ರಕಾಶ್ ಎನ್. ರಾವ್ ಅವರು ಪರಿಶ್ರಮ ಪಟ್ಟು '**ಪಿತೃಯಜ್ಞವಿಧಿಃ**' ಎನ್ನುವ ಹೆಸರಿನಲ್ಲಿ ವಿಸ್ತೃತವಾದ ಪ್ರಯೋಗವನ್ನು ನಮ್ಮ ಮುಂದೆ ಪ್ರಮಾಣಬದ್ಧವಾಗಿ ಪ್ರಸ್ತುತಪಡಿಸಿದ್ದಾರೆ. ಪೌರೋಹಿತ್ಯಭಾಗವನ್ನು ಕೂಡ ಚೆನ್ನಾಗಿ ಬಲ್ಲವರಾದ್ದರಿಂದ ಅದನ್ನು

ಜೀರ್ಣಿಸಿಕೊಂಡು ನಮಗೆ ಅರ್ಥವಾಗುವ ಭಾಷೆಯಲ್ಲಿ ಬರೆದಿದ್ದಾರೆ. ಸಾಮಾನ್ಯರಿಗೂ ಉಪಯೋಗವಾಗುವಂತಹ ಕೃತಿ ಇದು. ಇದರ ಅಧ್ಯಯನವನ್ನು ಮಾಡಿದರೆ ನಮಗೆ ಆ ಕರ್ಮಾಂಗವನ್ನು ಇನ್ನಷ್ಟು ಶ್ರದ್ಧೆಯಿಂದ ಮಾಡಲು ಸಾಧ್ಯವಾಗುತ್ತದೆ. ಸೂರ್ಯಪ್ರಕಾಶ ರಾಯರ ಈ ಸಾಧನೆ–ಸೇವೆ ವಿಶೇಷವಾದಂತಹದ್ದು. 'ದೇವರು ಅವರ ಈ ಸೇವೆಯನ್ನು ಸ್ವೀಕಾರ ಮಾಡಲಿ; ಅವರಿಂದ ಇನ್ನಷ್ಟು ಸಾಧನೆಗಳನ್ನು ಮಾಡಿಸಲಿ' ಎಂದು ನಮ್ಮ ಆರಾಧ್ಯಮೂರ್ತಿಗಳಾದ ರಾಮ–ಕೃಷ್ಣ–ವೇದವ್ಯಾಸ–ಮುಖ್ಯಪ್ರಾಣರಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

**ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರು,**

ಶ್ರೀಹೃಷೀಕೇಶತೀರ್ಥಸಂಸ್ಥಾನ, ಶ್ರೀಪಲಿಮಾರುಮಠ,

ರಜತಪೀಠಪುರ,

ಯಾರು ಎಂಬ ಪ್ರಶ್ನೆ ಉಂಟೇ ಉಂಟಲ್ಲ. ನಾವೇ ಸಂಪಾದನೆ ಮಾಡಿಕೊಂಡು ಬಂದದ್ದಲ್ಲ ಇದು.

'ಮಾತೃ' ಎಂಬ ಶಬ್ದಕ್ಕೆ ನಿರ್ಮಾತೃ ಎಂದು ಅರ್ಥ. ನಮ್ಮ ಶರೀರವನ್ನು ನಿರ್ಮಿಸಿದವಳು ಅವಳು. ಪಿತೃ ಎಂಬ ಶಬ್ದಕ್ಕೆ 'ಪಾತಿ ಇತಿ ಪಿತಾ' ರಕ್ಷಣೆ ಮಾಡುವವನು ಎಂದು ಅರ್ಥ. ನಮ್ಮನ್ನು ರಕ್ಷಣೆ ಮಾಡುವುದರಿಂದ ತಂದೆಗೆ ಈ ಹೆಸರು. ಹಾಗಾಗಿ ಈ ಶರೀರವನ್ನು ನಿರ್ಮಾಣ ಮಾಡಿಕೊಟ್ಟ, ರಕ್ಷಣೆ ಮಾಡಿದ ಆ ತಂದೆ–ತಾಯಿಗಳ ಒಳಗಿದ್ದ ಪ್ರಾಣದೇವರು ಹಾಗೂ ಭಗವಂತನನ್ನು ನಾವು ಎಂದೂ ಮರೆಯಲು ಸಾಧ್ಯವಿಲ್ಲ.

ಅವರು ಪೂಜಾ ಪ್ರತೀಕಗಳು. ಆ ಪ್ರತೀಕಗಳಿಗೆ ಪೂಜೆ ಮಾಡುವ ವಿಧಾನಗಳನ್ನು ಶಾಸ್ತ್ರಗಳಲ್ಲಿ ಒತ್ತು ಕೊಟ್ಟು ಹೇಳಿದ್ದಾರೆ. ನಮ್ಮ ದಿನನಿತ್ಯದ ಪೂಜೆಯಲ್ಲಿ ತಾಯಿ–ತಂದೆ–ಗುರುಗಳಿಗೆ ವಿಶಿಷ್ಟವಾದ ಸ್ಥಾನವು ಇದೆ. ಬದುಕಿರುವಾಗ ತಾಯಿ–ತಂದೆಯರನ್ನು ಚೆನ್ನಾಗಿ ನೋಡಿಕೊಳ್ಳಬೇಕು. 'ಜೀವತೋ ವಾಕ್ಯಕರಣಾತ್'–ಅವರು ಏನು ಹೇಳುತ್ತಾರೆ ಅದನ್ನು ಅಕ್ಷರಶಃ ಪರಿಪಾಲನೆ ಮಾಡಬೇಕು. ಅವರ ಮನಸ್ಸಿಗೆ ನೋವಾಗದಿರುವ ಹಾಗೆ, ಮನಸ್ಸಿಗೆ ಆಘಾತವು ಆಗದಿರುವ ಹಾಗೆ, ನಡೆದುಕೊಳ್ಳಬೇಕು. ಬದುಕಿರುವಷ್ಟು ಕಾಲ ಅವರ ಶುಶ್ರೂಷೆ ಮಾಡಿ, ಅವರ ಸೇವೆಯನ್ನು ಮಾಡಿ ಅವರ ಅನುಗ್ರಹವನ್ನು ಸಂಪಾದನೆ ಮಾಡಿಕೊಳ್ಳಬೇಕು. ಹಾಗಾಗಿಯೇ ದೇವರ ಪೂಜೆಯನ್ನು ಮಾಡಿದ ಮೇಲೆ ತಾಯಿ–ತಂದೆಯರಿಗೆ, ಗೋವಿಗೆ, ಗುರುಗಳಿಗೆ ನಮಸ್ಕಾರವನ್ನು ಮಾಡುವ ಸಂಪ್ರದಾಯವು ನಮ್ಮಲ್ಲಿ ಚಾಲ್ತಿಯಲ್ಲಿದೆ.

ತಂದೆ–ತಾಯಿಗಳ ಮರಣದ ಅನಂತರ ಇನ್ನೂ ವಿಶೇಷವಾದಂತಹ ಶ್ರಾದ್ಧರೂಪದ ಆರಾಧನೆಯನ್ನು ಶಾಸ್ತ್ರಗಳಲ್ಲಿ ತಿಳಿಸಿದ್ದಾರೆ. ಶ್ರದ್ಧೆಯಿಂದ ಮಾಡುವ ಕಾರ್ಯಕ್ರಮವದು. ಸಂಧ್ಯಾವಂದನೆಯೂ ಶ್ರದ್ಧೆಯಿಂದಲೇ ಮಾಡುವಂತಹದ್ದು. ಆದರೆ ಅದನ್ನು 'ಶ್ರಾದ್ಧ' ಎಂದು ಕರೆಯುವುದಿಲ್ಲ. ಆದರೆ ಅದಕ್ಕಿಂತಲೂ ಬಾರೀ ಶ್ರದ್ಧೆ ನಮಗೆ ಪಿತೃಕಾರ್ಯದಲ್ಲಿ ಬೇಕು. ಹಾಗಾಗಿಯೇ ಇದನ್ನು ಶ್ರಾದ್ಧ ಎಂದು ಕರೆಯುತ್ತಾರೆ.

ತಂದೆ–ತಾಯಿಗಳ ಮರಣಾನಂತರದಲ್ಲಿ ಅವಶ್ಯವಾಗಿ ಮಾಡಬೇಕಾದ ಕರ್ತವ್ಯಗಳನ್ನು ಈ ಹೊತ್ತಗೆಯಲ್ಲಿ ನೀಡಲಾಗಿದೆ. ಪರಮಪೂಜ್ಯರಾದಂತಹ ಶ್ರೀಕೃಷ್ಣಾಪುರಮಠಾಧೀಶರಾದ ಶ್ರೀ ವಿದ್ಯಾಸಾಗರತೀರ್ಥರಲ್ಲಿ ಅಧ್ಯಯನವನ್ನು ನಡೆಸಿರುವ, ನಮ್ಮವರೇ ಆದ ಸೂರ್ಯಪ್ರಕಾಶ್ ಎನ್. ರಾವ್ ಅವರು ಪರಿಶ್ರಮ ಪಟ್ಟು '**ಪಿತೃಯಜ್ಞವಿಧಿಃ**' ಎನ್ನುವ ಹೆಸರಿನಲ್ಲಿ ವಿಸ್ತೃತವಾದ ಪ್ರಯೋಗವನ್ನು ನಮ್ಮ ಮುಂದೆ ಪ್ರಮಾಣಬದ್ಧವಾಗಿ ಪ್ರಸ್ತುತಪಡಿಸಿದ್ದಾರೆ. ಪೌರೋಹಿತ್ಯಭಾಗವನ್ನು ಕೂಡ ಚೆನ್ನಾಗಿ ಬಲ್ಲವರಾದ್ದರಿಂದ ಅದನ್ನು

ಜೀರ್ಣಿಸಿಕೊಂಡು ನಮಗೆ ಅರ್ಥವಾಗುವ ಭಾಷೆಯಲ್ಲಿ ಬರೆದಿದ್ದಾರೆ. ಸಾಮಾನ್ಯರಿಗೂ ಉಪಯೋಗವಾಗುವಂತಹ ಕೃತಿ ಇದು. ಇದರ ಅಧ್ಯಯನವನ್ನು ಮಾಡಿದರೆ ನಮಗೆ ಆ ಕರ್ಮಾಂಗವನ್ನು ಇನ್ನಷ್ಟು ಶ್ರದ್ಧೆಯಿಂದ ಮಾಡಲು ಸಾಧ್ಯವಾಗುತ್ತದೆ. ಸೂರ್ಯಪ್ರಕಾಶ ರಾಯರ ಈ ಸಾಧನೆ–ಸೇವೆ ವಿಶೇಷವಾದಂತಹದ್ದು. 'ದೇವರು ಅವರ ಈ ಸೇವೆಯನ್ನು ಸ್ವೀಕಾರ ಮಾಡಲಿ; ಅವರಿಂದ ಇನ್ನಷ್ಟು ಸಾಧನೆಗಳನ್ನು ಮಾಡಿಸಲಿ' ಎಂದು ನಮ್ಮ ಆರಾಧ್ಯಮೂರ್ತಿಗಳಾದ ರಾಮ–ಕೃಷ್ಣ–ವೇದವ್ಯಾಸ–ಮುಖ್ಯಪ್ರಾಣರಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

**ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರು,**
ಶ್ರೀಹೃಷೀಕೇಶತೀರ್ಥಸಂಸ್ಥಾನ, ಶ್ರೀಪಲಿಮಾರುಮಠ,
ರಜತಪೀಠಪುರ,



**SRI ADMAR MUTT**
UDUPI - 576 101
Phone 2520317

Car Street,
Udupi - 576101
Karnataka, India
Phone :

# ಅನುಗ್ರಹ ಸಂದೇಶ

## ಜೀವತೋ ವಾಕ್ಯಕರಣಾತ್ ಮೃತೇ ತು ಪಿಂಡದಾನತಃ

ಈ ರೀತಿಯಾಗಿ ಪಿತೃಗಳ ಅನುಗ್ರಹವನ್ನು ನಾವು ಪಡೆದುಕೊಳ್ಳಬೇಕು ಅಂತ ಶಾಸ್ತ್ರಗಳು ಹೇಳುತ್ತಿವೆ. ಪಿತೃಗಳು ನಮ್ಮ ಕಣ್ಣೆದುರಿನಲ್ಲಿರುವಾಗ ಅವರ ವಾಕ್ಯಗಳನ್ನು ನಡೆಸಿಕೊಟ್ಟು ಅವರಿಗೆ ಅತೀವವಾದ ಗೌರವವನ್ನು ಕೊಡಮಾಡಿ ಅವರ ಅಂತರ್ಯಾಮಿಯಾದ ಭಗವಂತನನ್ನು ಆರಾಧಿಸುವ ಮೂಲಕ ಅವರನ್ನು ಸಂತೋಷಪಡಿಸಿ ಅನುಗ್ರಹವನ್ನು ಪಡೆಯಬೇಕು. ಅವರು ಇಹಲೋಕವನ್ನು ತ್ಯಜಿಸಿದ ಅನಂತರದಲ್ಲಿ ಪಿಂಡದಾನವನ್ನು ಶ್ರದ್ಧೆಯಿಂದ ಮಾಡುವುದರ ಮೂಲಕವಾಗಿ ನಾವು ಸಾಧನೆಯನ್ನು ಮಾಡಬೇಕು. ಹೀಗೆ ಶ್ರಾದ್ಧಾದಿ ಕರ್ಮವೂ ಕೂಡ ಒಂದು ಯಜ್ಞವನ್ನೇ ಮಾಡಿದ ಫಲವನ್ನು ನೀಡುತ್ತದೆ.

**'ಜನ್ಮನಾ ಜಾಯತೇ ಜಂತುಃ'** ಎಂಬಂತೆ ನಾವು ಸಾಮಾನ್ಯ ಪ್ರಾಣಿಗಳಂತೆ ಹುಟ್ಟುತ್ತೇವೆ. ಆದರೆ ಒಳ್ಳೆಯ ಸಂಸ್ಕಾರಗಳಿಂದ ನಿಯಮಗಳನ್ನು ರೂಢಿಸಿಕೊಂಡು ಮನುಷ್ಯರು ಅನಿಸಿಕೊಳ್ಳುತ್ತೇವೆ. ಮನುಷ್ಯನಿಗೆ ಮಾತ್ರ ವಿಷಯಗಳನ್ನು ಚೆನ್ನಾಗಿ ಅರಿಯುವ ಸಾಮರ್ಥ್ಯ, ಭಗವಂತನನ್ನು ಆರಾಧನೆ ಮಾಡುವಂತಹ ಒಂದು ವಿಶೇಷವಾದ ಶಕ್ತಿ, ಕೈ–ಕಾಲು–ನಾಲಗೆಗಳನ್ನು ಉಪಯೋಗ ಮಾಡಿಕೊಂಡು ಭಗವಂತನ ಬಗ್ಗೆ ತಿಳಿದುಕೊಳ್ಳುವ ಅವಕಾಶವಿದೆ. ಪಿತೃಯಜ್ಞವು ಅಂತಹ ಭಗವಂತನ ಅರಿವು ಮೂಡಿಸಿ ಎತ್ತರವಾದ ಗತಿಯನ್ನು ತಂದುಕೊಂಡುವಂತಹ ಒಂದು ವಿಧವಾದ ಆರಾಧನೆ. ಪಿತೃಗಳ ಅಂತರ್ಯಾಮಿಯಾದ ಭಗವಂತನ ಆರಾಧನೆ. ಹಾಗಾಗಿ ಏನನ್ನು ಮಾಡುವುದಿದ್ದರೂ ಕೂಡ ಅದಕ್ಕೆ ಮಾರ್ಗದರ್ಶಕರು. ಅದೇ ರೀತಿ ನಮ್ಮ ಹಿತವನ್ನು ಬಯಸುವವರು

ಜೊತೆಯಿದ್ದಾಗ ಆ ಕ್ರಿಯೆ ಚೆನ್ನಾಗಿ ಆಗುತ್ತದೆ. '**ಪಿತೃಯಜ್ಞವಿಧಿಃ**' ಎಂಬ ಪುಸ್ತಕವನ್ನು ಬರೆಯುವುದರ ಮೂಲಕವಾಗಿ ತಾವು ಮನೆ–ಮನೆಗೆ ಹೋಗಲಿಕ್ಕೆ ಆಗದಿದ್ದರೂ ಕೂಡ ಯಾರು ಶ್ರದ್ಧಾಳುಗಳಿದ್ದಾರೆಯೋ ಅವರಿಗೆ ಪುಸ್ತಕವನ್ನು ಓದುವಂತಹ ಅವಕಾಶ ಮಾಡಿಕೊಟ್ಟು ಅವರನ್ನು ಒಳ್ಳೆಯ ಮಾರ್ಗದಲ್ಲಿ ನಡೆಸುವಂತಹ ಶ್ರೀ ಸೂರ್ಯಪ್ರಕಾಶ ಎನ್. ರಾವ್ ಇವರಿಗೆ ಶ್ರೀಕೃಷ್ಣಮುಖ್ಯಪ್ರಾಣ ದೇವರ ಅನುಗ್ರಹ ಸದಾ ಇರಲಿ.

ಇತ್ಯನೇಕ ನಾರಾಯಣ ಸ್ಮರಣೆಗಳು,

**(ಶ್ರೀಶ್ರೀ ಈಶಪ್ರಿಯತೀರ್ಥ ಶ್ರೀಪಾದಂಗಳವರು)**
ಪರ್ಯಾಯ ಶ್ರೀ ಅದಮಾರು ಮಠ,
ಶ್ರೀಕೃಷ್ಣ ಮಠ, ಉಡುಪಿ.



# ಶುಭಾಶಂಸನೆ

**"ಸತ್ಯೈಲೋಕ್ಯಕುಟುಂಬಪಾಲನಪರಾಃ ಕುರ್ಯಾದ್ಧರಿರ್ಮಂಗಲಮ್ ।"**

ಅಲ್ಲಿಂದ ಕುಟುಂಬಪದ್ಧತಿ ವ್ಯವಸ್ಥೆ ಪ್ರಾರಂಭವಾಗಿದ್ದರೂ ಇಚ್ಛಾಸೃಷ್ಟಿಯೇ ಪ್ರಧಾನವಾದ ಕಾಲ. ಕೌಟುಂಬಿಕ ಪದ್ಧತಿ ನೆಲೆಗೊಳ್ಳಬೇಕಿದ್ದರೆ '**ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ** ॥' ಬ್ರಹ್ಮನ ಸೃಷ್ಟಿಗಳೆಲ್ಲ ಅರ್ಥಿಯದು. ತಂದೆತಾಯಿಗಳ ಶುಕ್ರಶೋಣಿತಮಿಶ್ರಣದಿಂದ ಆದ ಸೃಷ್ಟಿ ಕಶ್ಯಪರಿಂದ ಮಹಾನುಭಾವನ ಪತ್ನಿಯರು ದಿತಿ, ಅದಿತಿ, ಧನು, ಕದ್ರು, ಕೈಕಸೆ, ವಿನತೆ. ಅನುಕ್ರಮವಾಗಿ ದೈತ್ಯರು, ಆದಿತೇಯರು, ದಾನವರು, ನಾಗರು, ಯಾತುಧಾನರು, ಪಕ್ಷಿಗಳು –ಹೀಗೆ ಜೀವರಾಶಿಗಳು ಹುಟ್ಟಿಕೊಂಡವು. ಭೂಮಿಯಲ್ಲಿ ಜನಿಸಿದ ಜೀವರಾಶಿಗಳಲ್ಲಿ ಮಾನವ ಬುದ್ಧಿವಂತನೆಂದು ತಿಳಿದು ಉಳಿದ ಪ್ರಾಣಿಗಳನ್ನು ತನ್ನ ಅಧೀನವನ್ನಾಗಿ ಮಾಡಿಕೊಂಡು ತನ್ನ ಉಪಯೋಗಕ್ಕೆ ಬಳಸಿಕೊಂಡನು. ವೇದಗಳ, ಅಂದರೆ ಶ್ರುತಿಗಳ ಕಾಲದಲ್ಲಿ ಮುಂದಿನ ಜನಾಂಗಕ್ಕೆ ಮನು, ಮಾನವಧರ್ಮದ ಮೊದಲ ಸ್ಮೃತಿಕರ್ತಾ. ಎಲ್ಲಾ ವರ್ಣದ ಮಾನವನ ಧರ್ಮಗಳನ್ನು ನಿರ್ಣಾಯಕವಾಗಿ ತಿಳಿಸಿದ್ದಾನೆ. ಅವನು ದಿಕ್ಕುಗಳ ಸೂಕ್ಷ್ಮತೆಯನ್ನೂ ಕೊಟ್ಟಿದ್ದಾನೆ. ದಿಕ್ಕು ಒಂದೇ. ಆದರೂ ಅವಧಿಭೇದೇನ ಪಿಂಗಡಿಸಿದ್ದಾರೆ.

ಅಮರರು ಪೂರ್ವದಲ್ಲಿ (ಹಿಂದೆ) ಇದ್ದ ದಿಕ್ಕನ್ನು ಪೂರ್ವ ಎಂದು ಕರೆದರು. ಸ್ವರ್ಗದ ಬಾಗಿಲು, ಧರ್ಮದ ಸ್ವರೂಪ. ಸೂರ್ಯನ ಉದಯ, ವಿಷ್ಣುವಿನಿಂದ ಬ್ರಹ್ಮನಿಗೆ ವೇದದ ಉಪದೇಶ ಈ ದಿಕ್ಕಿನಲ್ಲಿ ಆಗಿರುವುದರಿಂದ ಯಜ್ಞ,ಜಪ, ತಪ, ಅನುಷ್ಠಾನಗಳಿಗೆ ಈ ದಿಕ್ಕಿಗೆ ಅಭಿಮುಖ ಉತ್ತಮ ಫಲದಾಯಿ. ವಿವಸ್ವಾನ್ ನಾಮಕ ಸೂರ್ಯನು ಗುರುಗಳಿಗೆ ದಕ್ಷಿಣೆಯಾಗಿ ಕೊಟ್ಟದ್ದರಿಂದ 'ದಕ್ಷಿಣಾ' ಎಂಬ ಹೆಸರು ಬಂತು. ಮೂರು ಲೋಕದ ಪಿತೃಗಣಗಳು ವಿಶ್ವೇದೇವತೆಗಳ ಜೊತೆಯಲ್ಲಿ ಇಲ್ಲಿ ವಾಸ ಮಾಡುತ್ತಾರೆ.

ಸತ್ಯ, ಧರ್ಮ, ಕರ್ಮಗಳು ಇಲ್ಲಿ ನಿಯಂತ್ರಿಸಲ್ಪಡುತ್ತವೆ. ಮೃತಜೀವಿ ಇಲ್ಲಿ ಬಂದು ತನ್ನ ಯೋಗ್ಯತೆಯನ್ನು ನಿರ್ಧರಿಸಿ ಮುಂದಿನ ಸ್ಥಾನಕ್ಕೆ ಹೋಗಬೇಕಾಗಿದೆ. ಅದರ ನಿರ್ಣಾಯಕ ಯಮದೇವ. ಅಧಿಪತಿ ರಾಮದೇವರು (ಯಮನಿಗೆ ಪ್ರಚೋದಿಸುವವನು). ಜೀವನ ಅರ್ಧ ಆಯುಸ್ಸನ್ನು ಕಳೆಯುವ ರಾತ್ರಿನಿದ್ರೆ, ವರುಣನಿಗೆ ಈ ಲೋಕದ ಆಧಿಪತ್ಯವನ್ನು ಕಾಶ್ಯಪರ ಬೇಡಿಕೆಯಂತೆ ಉಪೇಂದ್ರನು ಕೊಟ್ಟಿರುವನು. ಇಲ್ಲಿ ವಾಯುದೇವನ ಮರುದ್ಗಣಗಳ, ಮಂದರಪರ್ವತದ ಉತ್ಪತ್ತಿ ಸೂರ್ಯದೇವನು ಅಸ್ತಮಿಸುವ ದಿಕ್ಕು ಪಶ್ಚಿಮ. ಪಾಪದಿಂದ ದಾಟಿಸುವ ಶ್ರೇಯಸ್ಸನ್ನು ಹೊಂದಿಸುವ ಉತ್ತಾರಣ ಫಲವಿರುವುದರಿಂದ ಜ್ಞಾನಿಗಳು ಈ ದಿಕ್ಕನ್ನು ಉತ್ತರವೆಂದು ಕರೆದರು. ಕೈಲಾಸ, ಬದರಿಕಾಶ್ರಮ ಗಂಗೆಯ ಉತ್ಪತ್ತಿ. ಇಲ್ಲಿ ಸೌಮ್ಯನಲ್ಲದ, ವಿಧೇಯನಲ್ಲದ ಧರ್ಮವನ್ನು ಮಾಡದ ಯಾವ ವ್ಯಕ್ತಿಯೂ ಇರುವುದಿಲ್ಲ. ದಾನ, ಪ್ರತಿಗ್ರಹ ಸಮಯದಲ್ಲಿ ಪಾಪದೂರನಾಗಬೇಕಾದರೆ ಈ ದಿಕ್ಕಿಗೆ ಮುಖ ಮಾಡಿರಬೇಕು.

ಸ್ಮೃತಿಗಳನ್ನು ಅನಂತರ ೧೮ ಋಷಿಗಳು ಕೊಡುಗೆಯನ್ನಿತ್ತರು. ಅತ್ರಿ, ವಿಷ್ಣು, ಹಾರೀತ, ಉಶನಸ, ಆಂಗೀರಸ, ಯಮ, ಆಪಸ್ತಂಬ, ಸಂವರ್ತ, ಕಾತ್ಯಾಯನ, ಬೃಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೌತಮ, ಶಾತಾತಪ, ವಸಿಷ್ಠ. ಕೃಷ್ಣನ ಸಂದೇಶದಂತೆ– **'ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।'** ಹಾಗೂ ವೇದದ ಹೇಳಿಕೆಯಂತೆ, **'ಬ್ರಾಹ್ಮಣೋऽಸ್ಯ ಮುಖಮಾಸೀತ್'**. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ ಎಂಬ ವಿಭಾಗವಾಯಿತು. ಬ್ರಾಹ್ಮಣನಿಗೆ ಷಟ್ಕರ್ಮ, ಕ್ಷತ್ರಿಯ ವೈಶ್ಯರು ತ್ರಿಕರ್ಮಿಗಳೆಂದು ಮೂರು ವರ್ಗದ ಪರಿಚಾರಕರು ಶೂದ್ರರು. ಮೇಲಿನ ಶಾಸ್ತ್ರಗಳೆಲ್ಲ ಬ್ರಾಹ್ಮಣನ ಆಚರಣೆಗೆ ಒತ್ತುಕೊಟ್ಟವು. ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ.

ಜೀವಿಗೆ ದೇಹಗಳು ನಾಲ್ಕು– ಪಾಂಚಭೌತಿಕ, ಧರ್ಮ, ಪಾರಮಾರ್ಥಿಕ, ಲಿಂಗಶರೀರ. ಸ್ವಸ್ವರೂಪ ಧರ್ಮಸಾಧನೆಗೆ ಪಾಂಚಭೌತಿಕ ಶರೀರ, ಐಹಿಕಾಮುಷ್ಮಿಕ ಅರ್ಥಗಳ ಪರಮಗುರಿ ಪಾರಮಾರ್ಥಿಕದಿಂದ ಇಚ್ಛಾಕಾಮನೆಗಳ ಪರಿಪೂರ್ಣತೆ. ಲಿಂಗಶರೀರದಿಂದ, ಸ್ವಸ್ವರೂಪ ದಿಂದ ಮುಕ್ತಿ. ಬ್ರಾಹ್ಮಣನಿಗೆ ಉಪನಿಷತ್ ಉಪದೇಶಿಸಿದ **'ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್ ।' 'ಮಾತೃದೇವೋ ಭವ । ಪಿತೃದೇವೋ ಭವ ।'** ಎಂಬ ಆಚರಣೆ ಅನಿವಾರ್ಯ. ಎಲ್ಲಿ ತಂದೆತಾಯಿಗಳನ್ನು ಗೌರವದಿಂದ ಕಾಣುವರೋ ಅದು ಉತ್ತಮ ಕುಟುಂಬ. ಯಾಕೆಂದರೆ ತಂದೆ ಇರುವವರೆಗೂ ಜವಾಬ್ದಾರಿ ತಿಳಿಯದು. ತಾಯಿ ಇರುವವರೆಗೂ ಹಸಿವು ತಿಳಿಯದು. ಮಕ್ಕಳ ಗೆಲುವಿಗಾಗಿ ಧರ್ಮಾರ್ಥಕಾಮಮೋಕ್ಷಾದಿ ಗಳನ್ನು ಕಳಕೊಳ್ಳುವುದಕ್ಕೂ ಸಿದ್ಧ. ಧರ್ಮದ ದಾರಿಯಲ್ಲಿ ಮಕ್ಕಳನ್ನು ತರಲು, ವಿದ್ಯೆ, ಸ್ಥಾನ, ಮಾನ, ಘನತೆ, ಗೌರವಗಳನ್ನು ಪ್ರಾಪ್ತಿಸಿಕೊಳ್ಳುವಲ್ಲಿ, ಮಕ್ಕಳ ಇಚ್ಛೆಯನ್ನು ಪೂರೈಸುವಲ್ಲಿ ತಮ್ಮ ಜೀವನವನ್ನೇ ಹಗುರವಾಗಿಸಿ ಮಕ್ಕಳಿಂದ 'ಥೂ, ಛೀ' ಎಂದು

**ಹೇಳಿಸಿಕೊಂಡು** ಸರ್ವತ್ಯಾಗವನ್ನೂ ಮಾಡಿ ಮೌನಕ್ಕೆ ಬಲಿಯಾದವನು ಮಕ್ಕಳ ಗೆಲುವಿಗಾಗಿ ತಮ್ಮ ಜೀವನದಲ್ಲಿ ಸೋತವನು (ತಂದೆ) ರೋಗರುಜಿನಗಳಿಂದ ಪಾರಾಗಿಸಲು ಹೋರಾಟ, ಹಸಿವು, ತೃಷೆಗಳನ್ನು ದೂರವಾಗಿಸಿ ತಾಯಿ ಮಕ್ಕಳ ಗೆಲುವಿಗಾಗಿ ದೇವರಲ್ಲಿ ಸೆರಗೊಡ್ಡಿ ಬೇಡುವಳು. ತಾಯಿ–ತಂದೆಯೆಂದರೆ–

**ಜನಿತಾ ಚೋಪನೇತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ ।**
**ಅನ್ನದಾತಾ ಭಯಸ್ತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥**

**ರಾಜಪತ್ನೀ ಜ್ಯೇಷ್ಠಪತ್ನೀ ಗುರುಪತ್ನೀ ತಥೈವ ಚ ।**
**ಪತ್ನೀಮಾತಾ ಸ್ವಮಾತಾ ಚ ಪಂಚೈತಾಃ ಮಾತರಃ ಸ್ಮೃತಾಃ ॥**

ಈಗ ಸಾಮಾನ್ಯ ಈ ಕಾರ್ಯಗಳನ್ನು ತಂದೆತಾಯಿಗಳೇ ನೆರವೇರಿಸುವರು. ಆದರೂ ಕಾಲವೈಪರೀತ್ಯದಿಂದಲೋ ಕಲಿಯುಗಪರಿಣಾಮದಿಂದಲೋ ಮಕ್ಕಳು ಸಚ್ಚಾರಿತ್ರ್ಯ, ಸದ್ಬುದ್ಧಿಗಳನ್ನು ಹೊಂದದೆ ಸಂಪತ್ತಿನ ಆಸೆಗಾಗಿ ಅಡ್ಡದಾರಿಯನ್ನು ಹಿಡಿಯುತ್ತಾರೆ. ಸತ್‌ಸಂಪತ್ತಿನ ಕ್ರೋಡೀಕರಣಕ್ಕೆ ಬಿಡಬೇಕಾದ '**ನಿದ್ರಾ, ತಂದ್ರಾ, ಭಯ, ಕ್ರೋಧ, ಆಲಸ್ಯ, ದೀರ್ಘಸೂತ್ರತಾ**'ಗಳಲ್ಲಿ ತೊಳಲಾಡುತ್ತಾ ಧರ್ಮವನ್ನು ತಿಳಿದು ಆಚರಿಸದ ಅಧರ್ಮವನ್ನು ತಿಳಿದೂ ಆಚರಿಸುವ ದುರ್ಯೋಧನನಂತೆ ತಮ್ಮ ತಂದೆ ತಾಯಿಯಂದಿರನ್ನು ಧೃತರಾಷ್ಟ್ರ ಗಾಂಧಾರಿಯನ್ನಾಗಿಸುತ್ತಾರೆ. ಹಾಗೆ ಮಾಡದೆ ತತ್ತ್ವಾಭಿಮಾನಿ ದೇವತೆಗಳು ಧರ್ಮಮಾರ್ಗದಲ್ಲಿ ಪ್ರೇರಿಸುವಂತಾಗಿ–

**ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।**
**ಚತ್ವಾರಿ ತಸ್ಯ ವರ್ಧಂತೇ ಆಯುರ್ವಿತ್ತಂ ಯಶೋ ಬಲಮ್ ॥**

–ಎಂಬಂತಾಗಿ ಬದುಕಿರುವಾಗ ಅವರ '**ವಾಕ್ಯಕರಣಾತ್**' ಮಾತುಗಳನ್ನು ಅನುಸರಿಸಿ ಉತ್ತಮ ಪುಣ್ಯಕ್ಷೇತ್ರಗಳ ಸಂದರ್ಶನ ಮಾಡಿಸಿ ಕಾಲಕಾಲಕ್ಕೆ ಯಜ್ಞ, ದಾನ, ಜಪಾದಿಗಳನ್ನು ಮಾಡಿಸಿ ಸಂತೃಪ್ತಿಯ ಬದುಕನ್ನು ಕೊಟ್ಟು ಜೀವನಸಾರ್ಥಕ್ಯವನ್ನು ನೀಡಿ ತಂದೆ ತಾಯಿಗಳನ್ನು ನೋಡಿಕೊಂಡಾಗಲೇ ಪುತ್ರನೆಂಬ ಪದಕ್ಕೆ ಸಾರ್ಥಕ್ಯ ದೊರೆತಂತಾಗುವುದು. ಈ ದಾರಿಯಲ್ಲಿ ನಡೆದ ಸೂರ್ಯಪ್ರಕಾಶರು ಸಮಾಜದ ಕಣ್ಣು ತೆರೆಯಿಸಲು ಯೋಗ್ಯ, ಉತ್ತರದಾಯಿ ಮನುಷ್ಯನ ಉತ್ತರದಲ್ಲಿ ಮಾಡಲಿರುವ ಸತ್‌ಕೃತ್ಯಗಳ ಕೈಪಿಡಿ ಹಾಗೂ ಕೈಗನ್ನಡಿಯೊಂದನ್ನು ನೀಡಿ ಸಹಕರಿಸಲಿದ್ದಾರೆ. ಅವರ ಭಗೀರಥಪ್ರಯತ್ನ ಜನರಿಗೆ ತಿಳಿದು ಜ್ಞಾನಸಂಗ್ರಹಕ್ಕೆ ಅನುಕೂಲವಾಗಲಿ. ಅವರ ಜೀವನದಲ್ಲಿ ಸದಾಚಾರ, ಸತ್‌ಪುತ್ರತ್ವ ಪಡೆದು ಮುಂದೆಯೂ ಮಹಾಮಾರ್ಗದರ್ಶಕರಾಗಲಿ ಎಂದು ಆಶಿಸೋಣ.

**– ತೋಕೂರು ರಾಮಚಂದ್ರ ಭಟ್ಟ**



# ನಿರ್ದೇಶಕರ ನುಡಿ.......

ಭಾರತೀಯ ಸಂಸ್ಕೃತಿಗೆ ಮೂಲ ಪಂಚಾಂಗಗಳು ಸಂವಿಧಾನದಂತಿರತಕ್ಕಂತಹ ವೇದೋಪನಿಷತ್ತುಗಳು. ಯಾರೂ ಬರೆದದ್ದಲ್ಲ; ಅಪೌರುಷೇಯ ಸಂವಿಧಾನ. ಅಂತಹ ಉಪನಿಷತ್ತುಗಳು ಮಾನವನ ಜೀವನವನ್ನು ಸಾರ್ಥಕಗೊಳಿಸಲು ಅನೇಕ ಉಪದೇಶಗಳನ್ನು ನೀಡಿವೆ, ಪ್ರತ್ಯಕ್ಷವಾಗಿ ನಮಗೆ ಕಣ್ಣೆದುರಿಗೆ ನಿಲ್ಲಿಸಿವೆ. ಅವುಗಳಲ್ಲಿ ಒಂದು ಉಪನಿಷತ್ತಿನ ಉಪದೇಶ. **'ಶ್ರದ್ಧಯಾ ದೇಯಮ್ ಅಶ್ರದ್ಧಯಾ ದೇಯಮ್'** ಎಂಬ ಉಪದೇಶ. ಅಂದರೆ ನಾವು ಯಾವುದನ್ನು ಯಾರಿಗೆ ಕೊಡಬೇಕಾದರೂ ಕೂಡ ಶ್ರದ್ಧೆಯಿಂದ ನೀಡಬೇಕು. 'ಅ' ಅಂದರೆ ಪರಮಾತ್ಮ, ಅಂತಹ ಪರಮಾತ್ಮನ ಉದ್ದೇಶ್ಯವಾಗಿ ಅವನಲ್ಲಿ ಆಸ್ತಿಕ್ಯದ ಬುದ್ಧಿಯಿಂದ ದಾನ ಮಾಡಬೇಕು. **'ಅಶ್ರದ್ಧಯಾ ಅದೇಯಮ್'** ಅಂತಲೂ ಆಗುತ್ತದೆ. ಶ್ರದ್ಧೆ ಇಲ್ಲದೆ ಯಾವುದನ್ನೂ ಮಾಡಬೇಡ ಎಂಬತಕ್ಕಂತಹ ಚಿಂತನೆಯನ್ನೂ ಕೊಡುತ್ತದೆ.

ಅದೇ ಮುಂದುವರಿಸಿ ಹೇಳುತ್ತದೆ– **'ಸಂವಿದಾ ದೇಯಮ್'** ಎಂದು. ವೇದ ಉಪನಿಷತ್ತುಗಳು ಧರ್ಮಶಾಸ್ತ್ರಗಳು, ಯಾವ ದಾನವನ್ನು ಯಾವಾಗ ಹೇಗೆ ಮಾಡಬೇಕೆಂಬ ಸ್ಪಷ್ಟ ಚಿತ್ರಣ ನೀಡಿದೆ. ಅದೇ ಶ್ರದ್ಧೆಯಿಂದ ಮಾಡತಕ್ಕಂತಹದ್ದು. ಜೊತೆಗೆ **'ಸಂವಿದಾ ದೇಯಮ್'** ಶ್ರದ್ಧೆ ಬರಬೇಕಾದರೆ ಸುಮ್ಮನೆ ಅಲ್ಲಿ ಹೇಳಿದ್ದಾರೆ ಆದ್ದರಿಂದ ಮಾಡುತ್ತೇನೆ ಅಂದರೆ ಶ್ರದ್ಧೆ ಬರುವುದಿಲ್ಲ. ಶ್ರದ್ಧೆ ಬರಬೇಕಾದರೆ ತಿಳಿವಳಿಕೆ ಬೇಕು. ಅದನ್ನೆ ಉಪನಿಷತ್ತು ಹೇಳುತ್ತದೆ– **'ಸಂವಿದಾ ದೇಯಮ್' 'ಸಂವಿತ್'** ಎಂದರೆ ಜ್ಞಾನ, ಅರಿವನ್ನು ಮೂಡಿಸಿಕೊಂಡು ಅನಂತರ ಕರ್ಮವನ್ನು ಮಾಡು. ಅರಿವಿಲ್ಲದ ಕರ್ಮ ಅದು ವ್ಯರ್ಥ. ಅದರಿಂದ ತಿಳಿದು ಮಾಡಬೇಕು. ತಿಳಿದು ಶ್ರದ್ಧೆಯಿಂದ ಮಾಡಬೇಕು. ಅಶ್ರದ್ಧೆಯಿಂದ ಮಾಡಕೂಡದು. 'ಅ' ಅಂದರೆ ಪರಮಾತ್ಮನನ್ನು ಉದ್ದೇಶವಾಗಿಟ್ಟುಕೊಂಡು ಅವನನ್ನೇ ಗುರಿಯನ್ನಾಗಿ ಇಟ್ಟುಕೊಂಡು ಮಾಡತಕ್ಕಂತಹದ್ದು ಕರ್ಮ. ಅಂತಹ ಎಲ್ಲಾ ಕರ್ಮಗಳಿಗೆ ಸಂವಿಧಾನ ಇದೆ. ಸಾರ್ವಕಾಲಿಕ ನಿಯಮವೂ ಹೌದು. ಅಂತಹ ಸಾರ್ವಕಾಲಿಕ ನಿಯಮಗಳಲ್ಲಿ ಕರ್ಮಗಳಲ್ಲಿ ಒಂದು ಶ್ರಾದ್ಧ. ಮನುಷ್ಯ **'ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ'** ಕೃಷ್ಣ ಗೀತೆಯಲ್ಲಿ ನಮಗೆ ಕೊಟ್ಟ ಸಂದೇಶ. ಹುಟ್ಟಿದವ

**ಸಾಯಲೇ ಬೇಕು, ಸತ್ತವ ಪುನಃ ಹುಟ್ಟಲೇಬೇಕು.** ಇದು ಲೋಕದ ಧರ್ಮ. ಕರ್ಮ **ಸಿದ್ಧಾಂತದ** ಧರ್ಮ. ಆ ಹುಟ್ಟು-ಸಾವುಗಳ ಮಧ್ಯದಲ್ಲಿ ಆ ಜೀವನ ಉಂಟಲ್ಲವೇ? **ಅದರ ಸಾರ್ಥಕ್ಯಕ್ಕೆ ಬೇಕಾದ** ಅನೇಕ ನಿಯಮಗಳನ್ನು ನಾವು ವಿಧಾನ ಮಾಡಿಕೊಂಡಿದ್ದೇವೆ **ಶಾಸ್ತ್ರವೂ ವಿಧಾನ ಮಾಡಿದೆ. ಶಾಸ್ತ್ರ** ಅಂತ ಹೇಳಿದರೆ ಅದು 'ಶಾಸನಾತ್ ತ್ರಾಯತೇ ಇತಿ **ಶಾಸ್ತ್ರಮ್'** ಈ ರೀತಿ ಇರಬೇಕು ಈ ರೀತಿ ಇರಬಾರದು ಎಂಬ ಶಾಸನವನ್ನು ಮಾಡಿ ತನ್ಮೂಲಕ ರಕ್ಷಣೆ ಮಾಡತಕ್ಕಂತಹದು ಶಾಸ್ತ್ರ ಹೊರತು ನಮ್ಮನ್ನು ಕೊಲ್ಲಲಿಕ್ಕೆ ಇರುವುದು ಶಾಸ್ತ್ರ ಅಲ್ಲ. ಇದು ಹುಟ್ಟು-ಸಾವುಗಳ ಮಧ್ಯದ ಜೀವನದ ಬಗ್ಗೆ ಅನೇಕ ಚಿಂತನೆಗಳನ್ನು ನಮ್ಮ ಹಿರಿಯರು ವೇದಕಾಲದ ಚಿಂತನೆಗಳಾಗಿ ನಮಗೆ ನೀಡಿದ್ದಾರೆ. ಆದರೆ ಹೇಗೆ ಹುಟ್ಟಿನಿಂದ ಸಾವಿನವರೆಗಿನ ಚಿಂತನೆಗಳನ್ನು ನೀಡಿದರೋ ಸತ್ತ ಅನಂತರ ಪುನಃ ಹುಟ್ಟಿನ ಮಧ್ಯದ ಚಿಂತನೆಗಳನ್ನು ಕೂಡ ನಮಗೆ ಧರ್ಮಶಾಸ್ತ್ರ ಹಿರಿಯರು ವೇದೋಪನಿಷತ್ತುಗಳು ನೀಡಲಿಕ್ಕೆ ಮರೆಯುವುದಿಲ್ಲ. ಸತ್ತ ಅನಂತರ ಮನುಷ್ಯ ಏನಾಗುತ್ತಾನೆ? ಅನೇಕ ಪ್ರಶ್ನೆಗಳಿವೆ. ಔರ್ಧ್ವದೇಹಿಕ ಕರ್ಮ ದೇಹತ್ಯಾಗ ಮಾಡಿದ ಅನಂತರ ಜೀವ ಎಲ್ಲೆಲ್ಲಿಗೆ ಹೋಗುತ್ತಾನೆ ಎಂಬುದನ್ನು ನಮಗೆ ವೇದವ್ಯಾಸರು ಗರುಡಪುರಾಣದ 'ಪ್ರೇತಕಾಂಡ'ದಲ್ಲಿ ಸ್ಪಷ್ಟವಾಗಿ ತಿಳಿಸಿಕೊಟ್ಟಿದ್ದಾರೆ. ಪ್ರತಿಯೊಬ್ಬರ ಜೀವನ ಯೋಗ್ಯತೆ ಆ ಯೋಗ್ಯತೆಗನುಗುಣವಾಗಿ ಅವನ ಕರ್ಮಕ್ಕನುಗುಣವಾಗಿ ಅವರು ಇಂತಿಂತಹ ಲೋಕವನ್ನು ಸೇರುತ್ತಾನೆ ಎಂಬತಕ್ಕಂತಹದು ನಮಗೆ ಸಿದ್ಧಾಂತ ಇದು. ಈ ಮಧ್ಯದಲ್ಲಿ ಯಾರು ಮಗನಾಗಿರುತ್ತಾನೆ ಅವ ತಂದೆ ತಾಯಿಗಳ ಬಂಧುಬಳಗದ ಶ್ರಾದ್ಧಾದಿಗಳನ್ನು ಮಾಡುವ ಮೂಲಕ ಅವರ ಋಣವನ್ನು ಪರಿಹಾರ ಮಾಡಿಕೊಳ್ಳಲಿಕ್ಕೆ ಒಂದು ದೊಡ್ಡ ಅವಕಾಶವನ್ನು ನಮಗೆ ವೇದಾಂತಗಳು ಮಾಡಿಕೊಟ್ಟಿವೆ. ಋಣ ಇಟ್ಟುಕೊಂಡು ಹೋದವನ ಗತಿ ದುರ್ಭರ. ಆ ಋಣ ಮುಕ್ತವಾದ ಅನಂತರವೇ ಹೋದರೆ ತೃಪ್ತಿಯ ಜೀವನ. ತೃಪ್ತಿಯ ಸಾವು ಅಂತ ಹೇಳುತ್ತಾರೆ. ಸತ್ತ ಮೇಲೂ ಕೂಡ ಆ ಮಗನಾದವನಿಗೆ ಅವನಿಂದ ದೇಹದ ಭಾಗವನ್ನು ಹಿಡಿದುಕೊಂಡು ಬಂದದ್ದರಿಂದ ಆ ಋಣ ಇದ್ದೇ ಇರುತ್ತದೆ. ಆ ಜೀವನ ಉತ್ತಮ ಗತಿಗಾಗಿ ಅವನನ್ನು ಉದ್ದೇಶವಾಗಿ ಶ್ರದ್ಧೆಯಿಂದ ಮಾಡುವ ಕರ್ಮಗಳಿಗೆ ಶ್ರಾದ್ಧ ಔರ್ಧ್ವದೈಹಿಕ ಕರ್ಮ ಎಂಬತಕ್ಕಂತಹ ಹೆಸರು. **'ಶ್ರದ್ಧಯಾ ದೀಯತೇ ಯತ್ರ ತತ್ ಶ್ರಾದ್ಧಂ ಪರಿಕೀರ್ತಿತಮ್'** ಎಂಬುದು ಆರ್ಷವಚನ. ಪ್ರಾಣೋತ್ಕ್ರಮಣ ಆಗುತ್ತದೆ ಅಂದಾಗ ಆ ದೇಹವನ್ನು ಸಮರ್ಪಣೆ ಮಾಡತಕ್ಕಂತಹದ್ದು, ದೇಹದಲ್ಲಿ ಎಲ್ಲಾ ತತ್ತ್ವಾಭಿಮಾನಿದೇವತೆಗಳನ್ನು ಚಿಂತನೆ ಮಾಡುವಂತಹದ್ದು ಇದು ಬಹುಮುಖ್ಯವಾಗಿ ನಮಗೆ ಶಾಸ್ತ್ರ ತಿಳಿಸಿಕೊಡುತ್ತೆ. ಅಷ್ಟು ಮಾತ್ರ ಅಲ್ಲ. ತೀರಿಕೊಂಡ ಅನಂತರ ಆ ದೇಹವನ್ನು ಯಾವ ಅಗ್ನಿಯಲ್ಲಿ ಆಹುತಿಯಾಗಿ ಕೊಡಬೇಕು ಅದನ್ನು **'ಅಂತ್ಯೇಷ್ಟಿ'** ಎಂದು ಕರೆಯುತ್ತಾರೆ. 'ಇಷ್ಟಿ' ಅಂದರೆ ಯಾಗ; ಕೊನೆಯ ಯಾಗವೆಂದರೆ ಆ ದೇಹದ ಒಳಗೆ ಇದ್ದ ಜೀವವು ಹೋದ ಅನಂತರ

ಕೊನೆಯ ಯಾಗ ಇದು. ಆ ಯಾಗವು ಯಾವ ಅಗ್ನಿಯಲ್ಲಿ ಮಾಡಬೇಕೆಂಬತಕ್ಕಂತಹ ಚಿತ್ರಣವನ್ನು ನಮಗೆ ಕೊಡುತ್ತಾರೆ. ಗೃಹಸ್ಥರು ಯಾವ ಅಗ್ನಿಯಲ್ಲಿ ತಮ್ಮ ದೇಹವನ್ನು ಸಮರ್ಪಣೆ ಮಾಡಿಕೊಳ್ಳಬೇಕು, ಬ್ರಹ್ಮಚಾರಿಗಳು, ವಾನಪ್ರಸ್ಥರು ಹೀಗೆ ಯಾವ ಯಾವ ಅಗ್ನಿ ಅಥವಾ ಬೇರೆ ಮಾಧ್ಯಮಗಳ ಮೂಲಕ ಸಮರ್ಪಿಸಬೇಕು. ಋಣದವರಿಗೆ ಎಂಬತಕ್ಕಂತಹದು ಸ್ಪಷ್ಟವಾಗಿ ಸಂವಿಧಾನವನ್ನು ವ್ಯವಸ್ಥೆ ಮಾಡಿಕೊಟ್ಟಿದ್ದಾರೆ. ಅದರಿಂದ ಔರ್ಧ್ವದೇಹಿಕ ಕರ್ಮ ಎನ್ನುವುದು ಕೇವಲ ಈಗಿನ ಕೆಲವರ ಬಾಯಲ್ಲಿ ಹೇಳುವಂತೆ ಸುಟ್ಟುಹಾಕುವುದು. ಅಷ್ಟು ಮಾತ್ರ ಅಲ್ಲ. ಅದಕ್ಕೂ ಯಜ್ಞ ಪರಿಕಲನೆ ಕೊಟ್ಟದ್ದು. ಆ ಯಜ್ಞದಲ್ಲಿ ಆಹುತಿ ನಮ್ಮ ಶರೀರವೆ. ಆ ಶರೀರವನ್ನು ಆಹುತಿ ಕೊಡುವಾಗ ಅಗ್ನಿಯ ಚಿಂತನೆ ಇದೆ. ಯಾವ ರೀತಿ ಕೊಡಬೇಕು, ಮನೆಯಿಂದ ಶ್ಮಶಾನದವರೆಗೆ ಹೋಗುವಾಗ ಏನೆಲ್ಲ ಕರ್ಮಗಳಿವೆ ಇವುಗಳಿಗೆಲ್ಲ ಶಾಸ್ತ್ರೀಯ ಹಿನ್ನಲೆಯನ್ನು ತುಂಬಾ ವಿಸ್ತಾರವಾಗಿ ನಮಗೆ ಪುರಾಣಗಳು, ಇತಿಹಾಸಗಳು, ಧರ್ಮಶಾಸ್ತ್ರಗ್ರಂಥಗಳು ತಿಳಿಸಿಕೊಟ್ಟಿವೆ. ಅದಕ್ಕನುಗುಣವಾಗಿ ನಾವು ಮಾಡಿಕೊಂಡು ಬಂದರೆ ಅವರಿಗೂ, ಸದ್ಗತಿ ಮಾಡಿದಂತಹ ವ್ಯಕ್ತಿಗೂ ಋಣದಿಂದ ಮುಕ್ತನಾಗುವಂತಹ ಅದ್ಭುತವಾದ ಒಂದು ಫಲ. ಬೇರೆ ಯಾವುದರಿಂದಲೂ ಈ ಫಲ ಸಿಗುವುದಿಲ್ಲ.

ಹೀಗೆ ಈ **ಪಿತೃಯಜ್ಞವಿಧಿ** ಎಂಬಂತಹದ್ದು ಸಾರ್ವಕಾಲಿಕ, ಸಾರ್ವದೇಶಿಕವಾಗಿ ಸರ್ವವಿದಿತವಾದಂತಹ ಸತ್ಯ ವಿಚಾರಗಳು. ತುಂಬ ಫಲವನ್ನು ಕೊಡತಕ್ಕಂತಹ ಕಾರ್ಯ ಇದು. ಹೀಗೆ ದೇಹತ್ಯಾಗ ಮಾಡಿದ ಅನಂತರ ಮೊದಲ ೧೩ , ೧೪ ದಿನಗಳ ಕೆಲವು ಕರ್ಮಗಳು ಒಂದು ಔರ್ಧ್ವದೇಹಿಕ ಕರ್ಮ. ೧೪ ದಿನಗಳ ಅನಂತರ ಒಂದು ವರ್ಷಪರ್ಯಂತ ಮಾಡುವಂತಹ ೧೬ ಮಾಸಿಕಶ್ರಾದ್ಧಗಳು, ಮಧ್ಯದಲ್ಲಿ ಮಾಡತಕ್ಕಂತಹ ಗೋದಾನಗಳು, ಸಾಂವತ್ಸರಿಕ ಶ್ರಾದ್ಧಾದಿಗಳು ಬಹಳ ಮಹತ್ವ ಹೊಂದಿರುವಂತಹವು. ಅಂತಹ ಆ ಕರ್ಮಗಳ ಚಿಂತನೆಯನ್ನು ವಿಸ್ತಾರವಾಗಿ, ಪ್ರಮಾಣಸಹಿತವಾಗಿ ಈ ಹೊತ್ತಗೆಯಲ್ಲಿ ಕೊಡಲಾಗಿದೆ. ಮತ್ತೊಂದು, ಈಗಿನ ಕಾಲದ ಕೆಲವು ಬುದ್ಧಿಜೀವಿಗಳ ಪ್ರಶ್ನೆ– "ಶಾದ್ಧಮಾಡುವ ಮೂಲಕ ಪಿಂಡವನ್ನು ಇಲ್ಲಿ ಸಮರ್ಪಣೆ ಮಾಡಿದರೆ ಅದೇ ಪಿಂಡ ಹೋಗಿ ಮೇಲಿನ ಲೋಕದಲ್ಲಿರತಕ್ಕಂತಹವರ ಹೊಟ್ಟೆ ತುಂಬಿಸುತ್ತದಾ?" ಎಂದು. ಇದು ಅವೈಜ್ಞಾನಿಕ ಎಂಬತಕ್ಕಂತಹದು ಒಂದು ಕ್ಷುಲ್ಲಕ ಮಾತಾಗಿದೆ. ಅದಕ್ಕೆ ಉತ್ತರವಾಗಿ ವೈಜ್ಞಾನಿಕವಾದಂತಹ ಚಿಂತನೆ ಈ ಕಾಲಕ್ಕೆ ಉಪಯುಕ್ತವಾದ ಪ್ರಮಾಣಗಳು ಬೇಕಾದಷ್ಟು ಇವೆ. ಆದರೂ ಲೌಕಿಕ ದೃಷ್ಟಾಂತವನ್ನು ನೋಡುವುದಾದರೆ ನಾವು ಪರದೇಶಕ್ಕೆ ಹೋಗಿ ಅಲ್ಲಿ ನಾವು ವ್ಯವಹಾರ ಮಾಡಬೇಕು ಅಂದಾಗ ನಾವು ಭಾರತೀಯ ಕರೆನ್ಸಿ ಹಿಡಿದುಕೊಂಡು ಅಲ್ಲಿಗೆ ಹೋದರೆ ಅಲ್ಲಿಗೆ ಚಲಾವಣೆ ಆಗುವುದಿಲ್ಲ. ಅಲ್ಲಿ ಬೇರೆಯೇ ವ್ಯವಸ್ಥೆ. ಆಗ ನಾವು ಇಲ್ಲಿ ಭಾರತೀಯ ಕರೆನ್ಸಿಯನ್ನು ಧನಾಗಾರಕ್ಕೆ ಹೋಗಿ ಯಾವ ದೇಶಕ್ಕೆ

ಹೋಗುತ್ತೇವೆಯೋ ಆ ದೇಶದ ಚಲಾವಣೆಯಲ್ಲಿರುವ ಕರೆನ್ಸಿಗೆ ಮಾರ್ಪಾಟು ಮಾಡಿಕೊಂಡು ಅಲ್ಲಿ ಹೋಗಿ ನಾವು ವ್ಯವಹಾರ ಮಾಡಿ ಜೀವನ ಮಾಡುವುದು ಉಂಟು. ಅದೇ ರೀತಿಯಲ್ಲಿ ನಾವು ತಿನ್ನುವ ಆಹಾರ ಇಲ್ಲಿಯ ಕರೆನ್ಸಿ; ಅದು ಅನ್ನ. ಅನ್ನದ ಮೂಲಕ ಪಿಂಡದ ರೂಪದಲ್ಲಿ ನಾವು ಸಮರ್ಪಣೆ ಮಾಡಿದೆವು ಅಂದರೆ ಆ ಪಿಂಡಪ್ರದಾನ ಮಾಡುವ ವ್ಯಕ್ತಿಯ ಒಳಗಿರತಕ್ಕಂತಹ ಅಭಿಪ್ರಾಯ ಭಾವುಕತನವೇ ಆ ಪಿತೃಲೋಕದಲ್ಲಿರತಕ್ಕಂತಹ ವ್ಯಕ್ತಿಗಳಿಗೆ ಸಿಗುತ್ತದೆ. ಅಲ್ಲಿಯ ಕರೆನ್ಸಿಯೇ ಬೇರೆ. ಭಗವಂತ ಅಲ್ಲಿಯ ಕರೆನ್ಸಿಗೆ ಮಾರ್ಪಾಟು ಮಾಡಿ ಅಲ್ಲಿ ನಮ್ಮ ಸಂಬಂಧಿಕರು ಯಾರು ಇರುತ್ತಾರೆ ಅವರಿಗೆ ಪುಣ್ಯವನ್ನು ಸಮರ್ಪಣೆ ಮಾಡುತ್ತಾರೆ. ಅವರಿಗೆ ಆ ರೂಪದಲ್ಲಿ ಸಿಗುತ್ತದೆ ಹೊರತು ಇಲ್ಲಿ ಹಾಕಿದ ಪಿಂಡವೇ ನೇರ ಹೋಗುವುದಲ್ಲ. ಹೇಗೆ ಇಲ್ಲಿಯ ಕರೆನ್ಸಿ ಬೇರೆ ದೇಶದಲ್ಲಿ ಹೇಗೆ ಚಲಾವಣೆ ಇಲ್ಲವೋ ಹಾಗೆ. ಹೀಗೆ ಪ್ರತಿ ಒಂದು ವಿಷಯವನ್ನು ಲೌಕಿಕವಾಗಿ ದೃಷ್ಟಾಂತವನ್ನು ನೋಡಿದಾಗ ಮಹತ್ವ ತಿಳಿಯುತ್ತದೆ. ಇದು ಮೌಢ್ಯ ಅಲ್ಲ. ಅಂಧಶ್ರದ್ಧೆ ಅಲ್ಲ. ಶಾಸ್ತ್ರೀಯವಾದ ಪ್ರಮಾಣಸಹಿತವಾದ ಶ್ರದ್ಧೆಯಿಂದ ಮಾಡತಕ್ಕಂತಹ ಕರ್ಮ ಔರ್ಧ್ವದೇಹಿಕ ಕರ್ಮ. ಶ್ರಾದ್ಧಕರ್ಮ. ಈ ವಿವರಣೆಗಳನ್ನು ಈಗಿನ ಕಾಲಕ್ಕೆ ಅನುಗುಣವಾಗಿ ಶಾಸ್ತ್ರಕ್ಕೆ ಸ್ವಲ್ಪವೂ ಚ್ಯುತಿ ಬಾರದ ರೀತಿಯಲ್ಲಿ, ಸಾಮಾನ್ಯ ಜನರಿಗೂ ಅರ್ಥವಾಗುವ ಕ್ರಮದಲ್ಲಿ ಒಂದು ಹೊತ್ತಗೆಯಲ್ಲಿ ಸಂಗ್ರಹ ಮಾಡಿ ನಮ್ಮ ತತ್ವಸಂಶೋಧನ ಸಂಸತ್ತಿನ ಮೂಲಕ ಆಸ್ತಿಕ ಸಮಾಜಕ್ಕೆ ಉಡುಗೊರೆಯನ್ನಾಗಿ ಕೊಡುತ್ತಿದ್ದೇವೆ.

ಈ ರೀತಿ ಒಂದು ಆಗಬೇಕೆಂಬ ಸಂಕಲ್ಪ ನಮ್ಮ ಗುರುಗಳದ್ದು. ಈಗಿನ ಜನಾಂಗದ ಮಕ್ಕಳಿಗೆ ಅದರ ಬಗ್ಗೆ ಶ್ರದ್ಧೆ, ಆಸ್ಥೆ, ಬರಬೇಕೆಂಬ ಹಂಬಲದಿಂದ ನಮ್ಮ ಸಂಸ್ಥೆಯ ಅಧ್ಯಕ್ಷರಾದ ಶ್ರೀಪಲಿಮಾರು ಮಠಾಧೀಶರು ಈ ಒಂದು ಹೊತ್ತಗೆಯನ್ನು ಸಮಾಜಕ್ಕೆ ಅನುಗ್ರಹ ಕವಚವನ್ನು ನೀಡಿರತಕ್ಕಂತಹ ನಮ್ಮ ಸಂಸ್ಥೆಯ ಅಧ್ಯಕ್ಷರಾದ ಶ್ರೀಪಲಿಮಾರು ಮಠಾಧೀಶರಾದ ಶ್ರೀಶ್ರೀವಿದ್ಯಾಧೀಶತೀರ್ಥ ಶ್ರೀಪಾದರಿಗೆ 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ' ಎಂದು ವೈದಿಕ ನಮನಗಳನ್ನು ಸಮರ್ಪಣೆ ಮಾಡುತ್ತೇನೆ.

ಜೊತೆಗೆ ಭಾವೀ ಪರ್ಯಾಯ ಮಠಾಧೀಶರಾದಂತಹ ಶ್ರೀಕೃಷ್ಣಾಪುರ ಮಠಾಧೀಶರಾದ ಶ್ರೀಶ್ರೀವಿದ್ಯಾಸಾಗರತೀರ್ಥ ಶ್ರೀಪಾದರು ನಮ್ಮ ಈ ಹೊತ್ತಗೆಗೆ ಅವರ ಅಮೂಲ್ಯವಾದ ಸಂದೇಶವನ್ನು ನೀಡಿದ್ದಾರೆ. ಅವರಲ್ಲಿ ಅಧ್ಯಯನ ಮಾಡಿರತಕ್ಕಂತಹ ಒಬ್ಬ ವಿದ್ವಾಂಸರು ಸಾಮಾಜಿಕ ಕಳಕಳಿಯಿಂದ ವರ್ಷಗಳ ತಪಸ್ಸಿನ ಫಲರೂಪವಾಗಿ ಕೃತಿಯನ್ನು ನಮಗೆ ನೀಡುತ್ತಿದ್ದಾರೆ. ಅಂತಹ ಶಿಷ್ಯರನ್ನು ತಯಾರು ಮಾಡಿ ಸಮಾಜಕ್ಕೆ ಕಾಣಿಕೆಯಾಗಿ ನೀಡಿರುವಂತಹ ತನ್ಮೂಲಕ ಈ ಮಹತ್ಕಾರ್ಯದಲ್ಲಿ ತಮ್ಮ ಅನುಗ್ರಹ ಕವಚವನ್ನು ಅನುಗ್ರಹಿಸಿರುವಂತಹ ಶ್ರೀಶ್ರೀವಿದ್ಯಾಸಾಗರತೀರ್ಥರಿಗೆ ಹೃತ್ಪೂರ್ವಕ ಅನಂತನಮನಗಳನ್ನು ಸಲ್ಲಿಸುತ್ತೇನೆ.

ಅದೇ ರೀತಿಯಲ್ಲಿ ಈ ಇಂತಹದ್ದೊಂದು ಯಾವುದೇ ಆಸ್ತಿಕ ಕಾರ್ಯ ಸಮಾಜಮುಖಿ ಕಾರ್ಯವೆಂದು, ಆದರೆ ಅದಕ್ಕೆ ಮೊದಲು ಇದ್ದೇನೆ ಎಂಬಂತಹ ಆಂತರಿಕ ಧೈರ್ಯವನ್ನು ಕೊಡತಕ್ಕಂತವರು ಪರ್ಯಾಯ ಶ್ರೀಅದಮಾರು ಮಠದ ಶ್ರೀಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರು. ಅವರು ಈ ಗ್ರಂಥಕ್ಕೆ ವಿಶೇಷ ಅನುಗ್ರಹ ಕವಚ ನೀಡಿ ನಮಗೆ ಅನುಗ್ರಹಿಸಿದ್ದಾರೆ. ಪರ್ಯಾಯ ಶ್ರೀಅದಮಾರು ಮಠಾಧೀಶರಾದ ಶ್ರೀಶ್ರೀವಿಶ್ವಪ್ರಿಯತೀರ್ಥಶ್ರೀಪಾದರಿಗೆ ಹೃತ್ಪೂರ್ವಕ ಅನಂತ ನಮನಗಳನ್ನು ಸಲ್ಲಿಸುತ್ತೇನೆ.

ಜೊತೆಗೆ ಅದಮಾರು ಮಠದ ಕಿರಿಯ ಶ್ರೀಪಾದರಾದ ಶ್ರೀಈಶಪ್ರಿಯ ತೀರ್ಥಶ್ರೀಪಾದರು ತಾವು ತಮ್ಮ ಅನುಗ್ರಹ ಸಂದೇಶದ ಮೂಲಕ ಹೃದಯತುಂಬಿ ಅನುಗ್ರಹಿಸಿದ್ದಾರೆ. ಅಂತಹ ಶ್ರೀಶ್ರೀಈಶಪ್ರಿಯತೀರ್ಥಶ್ರೀಪಾದರಿಗೆ ನಮ್ಮ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತಿದ್ದೇನೆ.

ಜೊತೆಗೆ ಇಂತಹ ಒಂದು ಅದ್ಭುತ ಕಾರ್ಯ ಮಾಡಬೇಕಾದರೆ ಸಾಮಾನ್ಯ ತಿಳಿವಳಿಕೆ ಸಾಲದು. ದೊಡ್ಡ ತಪಸ್ಸೇ ಮಾಡಿರಬೇಕು. ಅಂತಹ ಅದ್ಭುತ ತಪಸ್ಸನ್ನು ಮಾಡಿ ವರ್ಷಗಟ್ಟಲೆ ಅಧ್ಯಯನ ಜೊತೆಗೆ ತಾವು ಪುರೋಹಿತರಾಗಿ ಸ್ವಯಂ ಅಧ್ಯಯನ ಮಾಡುತ್ತಾ, ಸ್ವಾಧ್ಯಾಯವನ್ನು ನಡೆಸುತ್ತಾ ಸಮಾಜದಲ್ಲಿ ಬರತಕ್ಕಂತಹ ಅಂಕುಡೊಂಕುಗಳನ್ನು ಮನಗಂಡು ನಮ್ಮ ಸಮಾಜ ಈ ಅಂಕುಡೊಂಕುಗಳಿಂದ ಮೇಲೆ ಬರಬೇಕೆಂಬ ಸದುದ್ದೇಶದಿಂದ ಈ ಒಂದು ಗ್ರಂಥವನ್ನು ರಚನೆ ಮಾಡಿ ಸಮಾಜಕ್ಕೆ ದೊಡ್ಡ ಕೊಡುಗೆಯನ್ನು ಕೊಟ್ಟಿರತಕ್ಕಂತವರು ನಮ್ಮವರೇ ಆದಂತಹ ಮುಲ್ಕಿಯ ವಿದ್ವಾನ್ ಸೂರ್ಯಪ್ರಕಾಶ್ ಭಟ್ ಇವರು. ಅವರಿಗೆ ಎಷ್ಟು ರೀತಿಯಲ್ಲಿ ಧನ್ಯವಾದ ಸಮರ್ಪಣೆ ಮಾಡಿದರೂ ಕಡಮೆಯೇ ಆಗುತ್ತದೆ. ಹೀಗೆ ಪುರೋಹಿತರೂ ಸ್ವಯಂ ವಿದ್ವಾಂಸರೂ ಆಗಿರತಕ್ಕಂತಹ ವಿ। ಸೂರ್ಯಪ್ರಕಾಶ್ ಭಟ್ಟರಿಗೆ ನಮ್ಮ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಅನಂತ ನಮನಗಳನ್ನು ಸಲ್ಲಿಸುತ್ತೇನೆ.

ಜೊತೆಗೆ ಇಂತಹದೊಂದು ಗ್ರಂಥ ಆಗುತ್ತಾ ಇದೆ ಎಂದು ಹೇಳಿದ ತತ್ಕ್ಷಣ ತನು ಮನ ಧನಗಳಿಂದ ತಮ್ಮ ಸಂಪೂರ್ಣ ಸಹಕಾರವನ್ನು ನೀಡಿ ತಾವೇ ಇದಕ್ಕೆ ಪ್ರಾಯೋಜಕರಾಗಿ ಅನೇಕ ಗ್ರಂಥಗಳನ್ನು ಪ್ರತೀ ವರ್ಷ ವಿದ್ವಾಂಸರುಗಳಿಗೆ, ಮಠಾಧಿಪತಿಗಳಿಗೆ, ಸಾಮಾನ್ಯ ಜನರಿಗೂ ಕೂಡ ಉಚಿತವಾಗಿ ಜ್ಞಾನಸಂದೇಶಗಳನ್ನು ಹಂಚುವಂತಹ ದೊಡ್ಡ ಸಂಪತ್ತು, ಅವರು ಹರಿದಾಸಸಾಹಿತ್ಯಕ್ಕೆ ದೊಡ್ಡ ಸಂಪತ್ತಾಗಿ ಉಳಿದಿರುವ 'ನಿನ್ನ ಒಲುಮೆ ಪ್ರತಿಷ್ಠಾನಮ್'ನ ಮುಖ್ಯಸ್ಥರಾದ ವಿದ್ವಾನ್ ಮೈಸೂರು ರಾಮಚಂದ್ರಾಚಾರ್ಯರವರಿಗೆ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಣೆ ಮಾಡುತ್ತಾ ಇದ್ದೇನೆ.

**ಅವರ ತಾಯಿಯ ಸವಿನೆನಪಿಗಾಗಿ ಈ ಕೃತಿಯನ್ನು ಲೋಕಾರ್ಪಣೆ ಮಾಡುತ್ತಾ ಇದ್ದಾರೆ. ಅವರಿಗೆ ಭಗವಂತ ಶ್ರೇಯಸ್ಸು ಮಾಡಲಿ ಎಂದು ಪ್ರಾರ್ಥನೆ ಮಾಡಿಕೊಂಡು ಧನ್ಯವಾದ ಸಮರ್ಪಣೆ ಮಾಡುತ್ತೇನೆ.**

**ಜೊತೆಗೆ ಈ** ಗ್ರಂಥದ ಪುಟಸಂಯೋಜನೆ, ಅಕ್ಷರಸಂಯೋಜನೆ ಮಾಡಿಕೊಟ್ಟಿರುವವರು ನಮ್ಮವರೇ ಆದ ವಿದ್ವಾಂಸರಾದಂತಹ ಡಾ। ಪದ್ಮನಾಭ ಕೇಕುಣ್ಣಾಯರು. **ಅವರಿಗೂ ಕೃತಜ್ಞತೆಗಳನ್ನು ಸಮರ್ಪಣೆ ಮಾಡುತ್ತಾ,** ಅದೇ ರೀತಿಯಲ್ಲಿ ಅಚ್ಚುಕಟ್ಟಾದಂತಹ, ಅನ್ವರ್ಥಕವಾದಂತಹ ಮುಖಪುಟವನ್ನು ವಿನ್ಯಾಸಮಾಡಿಕೊಟ್ಟಿರತಕ್ಕಂತಹ ನಮ್ಮ ಸಂಸ್ಥೆಯ ಶ್ರೀ ರಘುನಂದನ ಶರ್ಮರಿಗೆ, ಜೊತೆಗೆ ನಮ್ಮ ತತ್ವಸಂಶೋಧನ ಸಂಸತ್‌ನ ಸಮಸ್ತ ಸಿಬ್ಬಂದಿ ವರ್ಗಕ್ಕೂ ಹೃತ್ಪೂರ್ವಕ ಧನ್ಯವಾದ ಸಮರ್ಪಣೆ ಮಾಡುತ್ತೇನೆ.

ಸಾಧಕರ ಕೈಗೆ ಇದೊಂದು ಧರ್ಮಮಾರ್ಗದ ದೊಡ್ಡ ಉಪಾಯನವನ್ನು ಶ್ರೀಪಾದರು ತತ್ವಸಂಶೋಧನ ಸಂಸತ್ತಿನ ಮೂಲಕ, ಸೂರ್ಯಪ್ರಕಾಶ್ ಭಟ್ಟರ ಮೂಲಕ, ಮೈಸೂರು ರಾಮಚಂದ್ರಾಚಾರ್ಯರ ಮೂಲಕ ನೀಡುತ್ತಾ ಇದ್ದಾರೆ. ಈ ಉಪಾಯನವನ್ನು ಸ್ವೀಕಾರ ಮಾಡಿ ಉತ್ತರೋತ್ತರವಾಗಿ ಶ್ರೇಯಸ್ಸನ್ನು ಪಡೆದು ಈ ಕೃತಿಯ ಸಂಪೂರ್ಣ ಫಲವನ್ನು ಅನುಭವಿಸಬೇಕು ಎಂಬಂತಹ ಚಿಂತನೆಯಿಂದ ಈ ಕೃತಿ ಸರ್ವಪಿತ್ರಂತರ್ಗತ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀಜನಾರ್ದನ ವಾಸುದೇವನಿಗೆ ಸಮರ್ಪಣೆ ಮಾಡುತ್ತಾ ಶ್ರೀಕೃಷ್ಣಾರ್ಪಣಂ ಅಸ್ತು.

**– ವಿದ್ವಾನ್ ಡಾ॥ ವಂಶೀಕೃಷ್ಣಾಚಾರ್ಯಪುರೋಹಿತ್**
ನಿರ್ದೇಶಕರು, ತತ್ವಸಂಶೋಧನ ಸಂಸತ್
ಶ್ರೀಪಲಿಮಾರುಮಠ, ಉಡುಪಿ.



## ಮುನ್ನುಡಿ

# "ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್"

ವಿಸ್ಮಯಾವಹ ಪ್ರಪಂಚ. ಬಗೆಬಗೆಯ ಜೀವರಾಶಿ, ಮರಗಿಡ, ಫಲಪುಷ್ಪ, ಪೊದರು, ಹುಲ್ಲು, ಕ್ರಿಮಿಕೀಟ, ಸರೀಸೃಪಗಳು, ನಾಲ್ಕು ಕಾಲಿನ ಜೀವವೈವಿಧ್ಯ, ಪಕ್ಷಿಪ್ರಪಂಚ, ಬೆರಗುಗೊಳಿಸುವ ಮಾನವಪ್ರಪಂಚ. ಆ ಮಾನವನಿಂದ ಬಗೆಬಗೆಯ ಆಲೋಚನೆ; ಹೊಸಹೊಸ ಆವಿಷ್ಕಾರಗಳು. ಹುಟ್ಟಿದಂದಿನಿಂದ ಮರಣಾಂತ ಬಗೆಬಗೆಯ ಸಾಧನೆ. ಕೆಲವು ಸಾರ್ಥಕ, ಹಲವು ನಿರರ್ಥಕ. ಸುಖಕ್ಕಾಗಿ ಪರದಾಟ, ದುಃಖನಿವೃತ್ತಿಗಾಗಿ ಹೋರಾಟ, ಮಳೆ, ನೀರು, ಗಾಳಿ, ಬೆಂಕಿ, ಭೂಮಿ, ಆಕಾಶ, ಆಕಾಶಕಾಯಗಳು, ಗುಡುಗು, ಮಿಂಚು. ಒಂದು ಕ್ಷಣ ನಿಂತು ಆಲೋಚನೆ ಮಾಡಿದರೆ ಇದರ ಹಿಂದಿರುವ ದೇವತಾಶಕ್ತಿಗಳ ಕರುಣೆ.

ಈ ಪ್ರಕೃತಿ, ಪ್ರಪಂಚ, ಜೀವವೈವಿಧ್ಯ, ದೇವತಾಶಕ್ತಿಗಳು, ಇವುಗಳ ಹಿಂದೆ ಇರುವ ನಿಯಾಮಕ ಆ ಪರಶಕ್ತಿ. ಅದೆಷ್ಟು ಅದ್ಭುತ! **'ಬಹುಚಿತ್ರ ಜಗತ್ ಬಹುಧಾಕರಣಾತ್ ಪರಶಕ್ತಿಃ ಅನಂತಗುಣಃ ಪರಮಃ'**. ಅದನ್ನು ಕಾಣುವುದೇ ಬದುಕಿನ ಗುರಿ. ಅದನ್ನು ತೋರುವ ದಾರಿ ವೇದ. ಅದನ್ನು ಪಡೆಯಲು ಮಾಡುವ ಕ್ರಿಯೆ, ಶ್ರೌತ ಸ್ಮಾರ್ತಕರ್ಮಾನುಷ್ಠಾನಗಳು.

ಇಹಪರದ ಸಾಧನೆಗಾಗಿ ನಿತ್ಯಕರ್ಮಾನುಷ್ಠಾನಗಳು, ಕರ್ತವ್ಯಕರ್ಮಗಳು, ಷೋಡಶ ಸಂಸ್ಕಾರಗಳು, ಇಹದ ಉತ್ಕರ್ಷಕ್ಕಾಗಿ ಶಾಂತಿಕ, ಪೌಷ್ಟಿಕ, ದೋಷಮಾರ್ಜಕ ಗುಣಸಂಪಾದಕ ಕರ್ಮಗಳು. ಪರದ ಸಾಧನೆಗಾಗಿ, ಪಾಪಪರಿಹಾರಕ ಪ್ರಾಯಶ್ಚಿತ್ತಕರ್ಮಗಳು. ಅಪರಷೋಡಶಸಂಸ್ಕಾರಗಳು, ಋಣಪರಿಹಾರಕ, ಪೈತೃಕದೋಷಮಾರ್ಜಕ, ದುರ್ಗತಿನಿವಾರಕ ಶ್ರಾದ್ಧಕರ್ಮಗಳು.

**ಇಹದ ಸಾಧನೆ ಪರಮಪದದ ಪ್ರಾಪ್ತಿಗಾಗಿ ಇಹದ ಸಾಧನೆಗೆ ಸಾಧನ ಈ ದೇಹ. ದೇಹಕ್ಕೆ ಮುಖ್ಯ ಕಾರಣ ಭಗವಂತ;** ನಿಮಿತ್ತ ಕಾರಣ ಪಾಪಪುಣ್ಯಗಳು; ಉಪಾದಾನಕಾರಣ **ತಂದೆತಾಯಿಯರು.** ಆದರಿಂದ ತಂದೆತಾಯಿಯರ ಋಣ ದೊಡ್ಡದು. ಆದ್ದರಿಂದ **ಜೀವಿತಕಾಲದಲ್ಲಿ** ವೃದ್ಧ ತಂದೆತಾಯಿಯರ **ಶುಶ್ರೂಷಾ,** ದೇಹಾಂತ್ಯದಲ್ಲಿ ಅವರಿಗೆ ಮಾಡುವ ಔರ್ಧ್ವದೇಹಿಕ ಕ್ರಿಯಾಭಾಗ, ಯಾವಜ್ಜೀವನಪರ್ಯಂತ ಸಾಂವತ್ಸರಿಕಶ್ರಾದ್ಧ, ಷಣ್ಣವತಿಶ್ರಾದ್ಧ, ತೀರ್ಥಶ್ರಾದ್ಧ, ಜೀವಿತದಲ್ಲೊಮ್ಮೆ ಗಯಾಶ್ರಾದ್ಧ –ಇದು ಪುತ್ರನ ಪುತ್ರತ್ವಕ್ಕೆ ಸಾರ್ಥಕ್ಯ ತಂದುಕೊಡುವಂತಹದ್ದು. ಆದ್ದರಿಂದಲೇ **'ದೇವಕಾರ್ಯಾತ್ ದ್ವಿಜಾತೀನಾಂ ಪಿತೃಕಾರ್ಯಂ ವಿಶಿಷ್ಯತೇ'** ಎನ್ನುತ್ತದೆ ಸ್ಮೃತಿ.

**'ಪರೇಷಾಮುಪಕಾರಾರ್ಥಂ ಯಃ ಜೀವತಿ ಸಃ ಜೀವತಿ'** ಎನ್ನುತ್ತದೆ ವೇದ. ಹಾಗೆಂದು ವೃದ್ಧ ತಂದೆತಾಯಿಯರ ಶುಶ್ರೂಷಾ, ದೇಹಾಂತ್ಯದಲ್ಲಿ ಮಾಡುವ ಸಂಸ್ಕಾರ, ಶ್ರಾದ್ಧಕರ್ಮಗಳು, ಅವರಿಗೆ ಮಾಡುವ ಉಪಕಾರವಲ್ಲ, ಕರ್ತವ್ಯಕರ್ಮಗಳು. ಮಾಡಿದರೆ ಪುಣ್ಯ ಇಲ್ಲ. ಇಲ್ಲವೆಂದಲ್ಲ, ಮಾಡದಿದ್ದರೆ ಪಾಪ ಕಟ್ಟಿಟ್ಟ ಬುತ್ತಿ. ಅಧಃಪಾತ ನಿಶ್ಚಯ. ಹಾಗಿದ್ದರೆ ಅದರ ನಡೆ ಹೇಗೆ? ಕರ್ಮಗಳೋ ಗಹನ, ಸಂಪ್ರದಾಯಭೇದ. ಪ್ರಾದೇಶಿಕಭೇದ, ಬಳಕೆಯ ಮಂತ್ರಭೇದಗಳ ಬಲೆ. ಯಾವುದು ಸರಿ, ಯಾವುದು ತಪ್ಪು ಎಂಬ ಗೊಂದಲ ಬೇಡ. ಬಹುಋಷಿಮತಂ– ನಿಮ್ಮ ನಿಮ್ಮ ಸಂಪ್ರದಾಯದಂತೆ ನಡೆಸಿ. ಎಲ್ಲವುಗಳ ಗುರಿಯೂ ಒಂದೇ. ಭಗವಂತ ಪ್ರೀತನಾಗಲಿ. ಉತ್ತಮ ಗತಿಯನ್ನು ಕರುಣಿಸಲಿ. ಅದಕ್ಕಾಗಿ ಸೂರ್ಯಪ್ರಕಾಶರ ತುಡಿತ. ತಂದೆತಾಯಿಯರ ಮೇಲೆ ಇನ್ನಿಲ್ಲದ ಪ್ರೀತಿ ಇರುವ ಯಜಮಾನವರ್ಗಕ್ಕಾಗಿ, ಮಾಡುವ ಪುರೋಹಿತವೃತ್ತಿಯಲ್ಲಿ ಪೂರ್ಣತೆಯನ್ನು ಹಂಬಲಿಸುವ ಯಾಜಕವರ್ಗಕ್ಕಾಗಿ ಶಾಖಾ, ಸಂಪ್ರದಾಯ, ಪ್ರಾದೇಶಿಕಭೇದಗಳಲ್ಲಿ ಕರ್ಮದ ಬಗೆಬಗೆಯಲ್ಲಿ ಹೇಗೆ ವಿಸ್ತಾರಗೊಂಡಿದೆ ಎಂದು ತಿಳಿಯಬಯಸುವ ಚಿಂತಕರಿಗಾಗಿ ಇಲ್ಲಿದೆ ಸಮೃದ್ಧ ಶ್ರಾದ್ಧಭೋಜನ.

**'ಹರಿರ್ದಾತಾ ಹರಿರ್ಭೋಕ್ತಾ.....'** ಯಜಮಾನನಲ್ಲಿ, ಉಣ್ಣುವವನಲ್ಲಿ, ಉಣ್ಣುವ ಪದಾರ್ಥಗಳಲ್ಲಿ ಎಲ್ಲದರೊಳಗಿದ್ದು ಉಣ್ಣುವವ, ಕೊಡುವವ, ಇರುವವ ಹರಿಯೇ. ಆದ್ದರಿಂದ ಭೋಜನ ಎಂದರೆ ಅದು ಭೋಗ ಅಲ್ಲ; ಯಜ್ಞ– ಪ್ರಾಣಾಗ್ನಿಹೋತ್ರ. ಅದಕೆಂದೆ ಆಚಾರ್ಯಮಧ್ವರು **'ಸಂಕರ್ಷಣಶ್ಚ ಪ್ರದ್ಯುಮ್ನಃ ....'** ಉಣ್ಣುವವನೊಳಗೆ ಭಗವಂತ ಸಂಕರ್ಷಣನಾಗಿ ಪ್ರದ್ಯುಮ್ನನಾಗಿ ಇದ್ದು ಉಣ್ಣಿಸುತ್ತಾನೆ. ಅನಿರುದ್ಧ ನಾರಾಯಣನಾಗಿ ತಿನ್ನುವ ಪದಾರ್ಥದೊಳಗಿದ್ದು ದೇಹಕ್ಕೆ ಆಪ್ಯಾಯಕರ ಆಗುವಂತೆ ಅಪಥ್ಯವಾಗದಂತೆ ನೋಡಿಕೊಳ್ಳುತ್ತಾನೆ. ವಾಸುದೇವನಾಗಿ ದೇಹದೊಳಗಿದ್ದು ಪದಾರ್ಥಗಳ ಸಾರ ದೇಹಕ್ಕೆ ಹೇಗೆ, ಎಲ್ಲಿಗೆ ಎಷ್ಟು ಬೇಕೋ ಅಲ್ಲಿಗೆ ಪುಷ್ಟಿಯಾಗುವಂತೆ ಮಾಡುತ್ತಾನೆ. ಆದ್ದರಿಂದ ಭೋಜನ ಅದೊಂದು ಭಗವಂತನ ಪಂಚಮೂರ್ತಿ ಆರಾಧನೆ. ಅದಕ್ಕಾಗಿ

ಐದು ಬ್ರಾಹ್ಮಣರನ್ನು ಶ್ರಾದ್ಧದಲ್ಲಿ ಕೂರಿಸಿ ಪುರೂರವ, ಆರ್ದ್ರವಸಂಜ್ಞಕ ವಿಶ್ವೇದೇವತೆಗಳಲ್ಲಿ ನಾರಾಯಣ ಅನಿರುದ್ಧರನ್ನು ಪಿತೃ–ಪಿತಾಮಹ–ಪ್ರಪಿತಾಮಹರಲ್ಲಿ ವಸು–ರುದ್ರ–ಆದಿತ್ಯರನ್ನು ಅಂತರ್ಯಾಮಿಯಾಗಿ ಪ್ರದ್ಯುಮ್ನ–ಸಂಕರ್ಷಣ–ವಾಸುದೇವರನ್ನು ಆ ವಿಪ್ರರಲ್ಲಿ ಆವಾಹಿಸಿ ಅವರನ್ನು ಪೂಜಿಸಿ ಅವರಿಗೆ ಭೋಜನವನ್ನು ಇತ್ತು, ಅವರಲ್ಲಿ ಪ್ರಾರ್ಥನೆ– ಭಗವಂತ ಪ್ರೀತನಾಗಲಿ. ನಮ್ಮ ಪಿತೃಗಳಿಗೆ ಸದ್ಗತಿಯಾಗಲಿ. ಪಿತೃಪ್ರಸಾದ ನಮಗೆ ಪ್ರಾಪ್ತಿಯಾಗಲಿ. ಹೀಗೆ ಪಿತೃಗಳ ಆರಾಧನೆ ಅದು ವಸು–ರುದ್ರ–ಆದಿತ್ಯರ ಆರಾಧನೆ. ಅದು ಅಂತರ್ಯಾಮಿ ನಾರಾಯಣನ ಆರಾಧನೆ. ಆಮೇಲೆ ಪಿಂಡರೂಪದಲ್ಲಿ ಆರಾಧನೆ. ಭೂರಿಭೋಜನದ ರೂಪದಲ್ಲಿ ಆರಾಧನೆ. ಇಷ್ಟೂ ಆಗಲಿಲ್ಲ, ಕೂರ್ಚರೂಪದಲ್ಲಿ ಪಿತೃಗಳ ಆರಾಧನೆ. ಅದೂ ಕಷ್ಟ– ಒಬ್ಬ ಬ್ರಾಹ್ಮಣನನ್ನು ಕರೆದು ಅವನಿಗೆ ಅಶನವಿತ್ತು ಆರಾಧನೆ. ಆಗಲಿಲ್ಲ ಭೋಜನಕ್ಕೆ ಬೇಕಾದ ಹಸಿ ಸಾಮಗ್ರಿ ಇತ್ತು ಆರಾಧನೆ. ಅದು **'ಆಮಶ್ರಾದ್ಧ'**. ಆಗಲಿಲ್ಲ, ಒಬ್ಬನಿಗೆ ದಕ್ಷಿಣೆ ಇತ್ತು ಆರಾಧನೆ– **'ಹಿರಣ್ಯಶ್ರಾದ್ಧ'**. ಅದೂ ಕಷ್ಟ– ಶ್ರಾದ್ಧಸಂಕಲ್ಪ ಮಾಡಿ ಪಿತೃ ತರ್ಪಣವಿತ್ತು ಶ್ರಾದ್ಧ. ಅದು **'ಸಂಕಲ್ಪಶ್ರಾದ್ಧ'**. ಹೀಗೆ ನಿಮಗೆ ಯಾವುದು ಸಾಧ್ಯವೋ ಆ ರೀತಿ ಶ್ರಾದ್ಧ ಮಾಡಿ. ಅಂತೂ ಇಂತೂ ಮಾಡಲೇಬೇಕಾದ ಕರ್ತವ್ಯಕರ್ಮ ಶ್ರಾದ್ಧ. ಎಲ್ಲಿಯಾದರೂ ತೀರ್ಥಕ್ಷೇತ್ರಕ್ಕೆ ಹೋಗಿ ತೀರ್ಥಶ್ರಾದ್ಧ ಮಾಡಿದ್ದರೆ? ಶ್ರಾದ್ಧ ನಿಲ್ಲಿಸಬಹುದೋ? ಇಲ್ಲ; ಆಗುವುದೇ ಇಲ್ಲ. ನಿಲ್ಲಿಸಬಹುದು; ಯಾವತ್ತು? ನಿನ್ನ ದೇಹ ಬಿದ್ದರೆ, ಅಂದರೆ ದೇಹಾಂತ್ಯವಾದರೆ. ಈ ದೇಹ ಇರುವವರೆಗೆ ತಂದೆತಾಯಿಯರ ಋಣ ಇದ್ದೇ ಇದೆ. ಈ ದೇಹ ತಂದೆತಾಯಿಯರ ಕೊಡುಗೆ, ದೇಣಿಗೆ, ಭಿಕ್ಷೆ, ಪ್ರಸಾದ –ಎಲ್ಲವೂ.

ಹರಿವಂಶದಲ್ಲಿ ಶ್ರಾದ್ಧದ ಮಹತ್ತ್ವವನ್ನು ತಿಳಿಸುವ ಒಂದು ಆಖ್ಯಾಯಿಕಾ ಹೀಗೆ– **'ಸಪ್ತವ್ಯಾಧಾ ದಶಾರ್ಣೇಷು** .....' ವಿಶ್ವಾಮಿತ್ರರ ಏಳು ಜನ ಮಕ್ಕಳು ಗಾರ್ಗ್ಯರಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಒಮ್ಮೆ ಗಾರ್ಗ್ಯರಿಂದ ಆದೇಶಿಸಲ್ಪಟ್ಟು ಗೋವುಗಳನ್ನು ಮೇಯಿಸಲು ಕೊಂಡುಹೋದವರಿಗೆ ಹಸಿವೆ. ಜಿಹ್ವಾಚಾಪಲ್ಯದ ನಿಮಿತ್ತ ತಲೆಗೊಂದು ದುರ್ಬುದ್ಧಿ ಹೊಕ್ಕಿತು. ಗೋಮಾಂಸಭಕ್ಷಣೆ ತೆವಲು ಋಷಿಕುಮಾರರಿಗೆ! ಇಬ್ಬರು ತಡೆದರು. ಐವರು ಕೇಳಲಿಲ್ಲ. ಕೊನೆಗೆ ಒಂದು ಪರಿಹಾರ ಕಂಡುಕೊಂಡರು. ಶ್ರಾದ್ಧ! ಶ್ರಾದ್ಧಭೋಜನವಾಗಿ ಹಸುವನ್ನು ಕೊಂದು ಇಬ್ಬರು ವಿಶ್ವೇದೇವತೆಗಳ ಸ್ಥಾನದಲ್ಲಿ, ಮೂವರು ಪಿತೃಸ್ಥಾನದಲ್ಲಿ, ಒಬ್ಬ ಅತಿಥಿಯಾಗಿ, ಒಬ್ಬ ಶ್ರಾದ್ಧಕರ್ತೃವಾಗಿ ಆಮಿಷದಿಂದ ಶ್ರಾದ್ಧ ಮಾಡಿ ಮುಗಿಸಿದರು. ಇಂತಹ ಘೋರಕರ್ಮದ ಫಲ– ಮುಂದಿನ ಏಳು ಜನ್ಮಗಳಲ್ಲಿ ಹಿಂಸ್ರಕವ್ಯಾಧರಾಗಿ, ಮತ್ತಿನ ಜನ್ಮದಲ್ಲಿ ಭಯಗ್ರಸ್ತ ಜಿಂಕೆಗಳಾಗಿ, ಮುಂದೆ ಚಕ್ರವಾಕಪಕ್ಷಿಗಳಾಗಿ, ಆಮೇಲೆ ಹಂಸಪಕ್ಷಿಗಳಾಗಿ ಅನಂತರ ಕುರುಕ್ಷೇತ್ರದಲ್ಲಿ ಬ್ರಾಹ್ಮಣರಾಗಿ ಹುಟ್ಟಿದರು. ಗೋಹತ್ಯೆಗಾಗಿ ವ್ಯಾಧ, ಜಿಂಕೆ, ಚಕ್ರವಾಕ, ಹಂಸಗಳ ಜನ್ಮಗಳಾದರೆ, ಶ್ರಾದ್ಧಕ್ಕಾಗಿ ಬ್ರಹ್ಮಣಜನ್ಮ. ಏನಿದೆ ಅಂತಹದ್ದು ಶ್ರಾದ್ಧದಲ್ಲಿ? ಏನು ದೊಡ್ಡಸ್ತಿಕೆ ಬ್ರಾಹ್ಮಣನದ್ದು?

ತಂದೆತಾಯಿಯರ ಸದ್ಗತಿಗಾಗಿ ಮಾಡುವ ಆರಾಧನೆ ಶ್ರಾದ್ಧ. ಅವರಿಗೆ ದುರ್ಗತಿ ಆಗಿಲ್ಲ– ಅದರ ಫಲ ಮಾಡಿದ ಕರ್ತೃವಿಗೆ. ಸದ್ಗತಿ ಆಗಿಲ್ಲ– ಅದರ ಫಲ ಆ ಜೀವಗಳಿಗೆ. ಮಾಡಿದ ಶ್ರಾದ್ಧಕರ್ಮದಿಂದ ಅವರ ದುರ್ಗತಿ ಪರಿಹಾರವಾದಾಗ ಆ ಪಿತೃಗಳ ಅನುಗ್ರಹದಿಂದ ಪುನಃ ಅದರ ಫಲ ಕರ್ತೃವಿಗೆ. ಅಷ್ಟೇ ಅಲ್ಲ. ತಂದೆತಾಯಿಯರನ್ನು ನಿಮಿತ್ತ ಮಾಡಿಕೊಂಡು ಮಾಡುವ ಶ್ರಾದ್ಧದಲ್ಲಿ ಲೋಕದ ಹಿತಚಿಂತನೆಯಿದೆ. ಆ ಚತುರ್ಮುಖನಿಂದ ತೃಣಾಂತ ಚರಾಚರಗಳಿಗೆ ತೃಪ್ತಿಯಾಗಲಿ ಎನ್ನುವ ಪ್ರಾರ್ಥನೆ ಇದೆ. ಅಷ್ಟೇ ಏನು? ಬ್ರಹ್ಮನಿಂದ ಆರಂಭಗೊಂಡು ತಮ್ಮ ತಂದೆತಾಯಿಯರ ವರೆಗೆ ತಂದೆಯ ಕುಲದಲ್ಲಿ, ತಾಯಿಯ ಕಡೆಯಲ್ಲಿ, ಗುರುಗಳ ಪರಂಪರೆಯಲ್ಲಿ, ಹೆಣ್ಣು ಕೊಟ್ಟ ಮಾವನ ಕಡೆಯಿಂದ, ಬಂಧುಗಳ ಕಡೆಯಿಂದ ಯಾರಿಗೆಲ್ಲ ದುರ್ಗತಿ ಇದೆಯೋ, ಯಾರಿಗೆಲ್ಲ ಪಿಂಡೋದಕಗಳು, ಅಪರಕ್ರಿಯಾಕರ್ಮಗಳು, ಲುಪ್ತವಾಗಿದೆಯೋ, ನಮ್ಮ ಮನೆಯ ಪರಿಚಾರಕವರ್ಗ, ಆಶ್ರಿತವರ್ಗ, ಸೇವಕವರ್ಗ, ಮಿತ್ರರು, ಸುಹೃದಯರು, ಪಶುಗಳು, ವೃಕ್ಷಗಳು, ಪಕ್ಷಿಗಳು, ಕ್ರಿಮಿಕೀಟಸರೀಸೃಪಗಳು ಪ್ರತ್ಯಕ್ಷ ಪರೋಕ್ಷ ಉಪಕಾರ ಎಸಗಿದವರು ಮಹಾಪಾತಕದಿಂದಾಗಿ ಪ್ರೇತಯೋನಿಯಲ್ಲಿಯೋ, ರಾಕ್ಷಸಯೋನಿ ಯಲ್ಲಿಯೋ ಇರುವ ಜೀವಗಳ ಉದ್ಧಾರಕ್ಕಾಗಿ ಅಲ್ಲ ಅವರಿಂದ ಪಡೆದ ಉಪಕಾರದ ಋಣಪರಿಹಾರಕ್ಕಾಗಿ ಬಲಿಹರಣರೂಪವಾದ ಪಿಂಡಪ್ರದಾನ, ಕಾಕಬಲಿಯಿಂದ ಯಮಲೋಕದಲ್ಲಿರುವ ಜೀವಗಳ ಉದ್ಧಾರ –ಹೀಗೆ ಮನುಷ್ಯನಾಗಿ ಹುಟ್ಟಿ ಸಾಮಾಜಿಕ ಬದ್ಧತೆಯನ್ನು ಹುಟ್ಟಿದಂದಿನಿಂದ ಮರಣದವರೆಗೆ ಭಗವಂತನ ಸೃಷ್ಟಿಯನ್ನು ಸ್ವಾರ್ಥಕ್ಕಾಗಿ ಬಳಸಿದ ಋಣಪರಿಹಾರಕ್ಕಾಗಿ ಶ್ರಾದ್ಧ. ಎಂತಹ ಅದ್ಭುತ ಯೋಚನೆ! ಎನಿತು ಸಾಮಾಜಿಕ ಬದ್ಧತೆ! ತೃಣಾಂತದವರೆಗಿನ ಜೀವಗಳ ಉದ್ಧಾರದ ಕಳಕಳಿ. ಹೀಗೆ ಯೋಚಿಸಬಲ್ಲವ, ಯೋಚಿಸುವವ, ಹಾಗೆ ನಡೆದುಕೊಳ್ಳುವವ ಉದಾತ್ತಗುಣಗಳುಳ್ಳ ಉದಾರಚರಿತ ಬ್ರಾಹ್ಮಣ. ಇನಿತೂ ಇಲ್ಲದವ ಬ್ರಾಹ್ಮಣಬ್ರುವ.

ಆದ್ದರಿಂದಲೇ ಬ್ರಾಹ್ಮಣರಿಗೆ '**ಪಿತೃಕಾರ್ಯಂ ವಿಶಿಷ್ಯತೇ**'. ಇದರಿಂದ ಮಾತಾಪಿತೃಗಳ ಋಣ, ಭಗವಂತನ ಸೃಷ್ಟಿಯನ್ನು ಉಪಭುಂಜಿಸಿದ ಋಣ, ಋಷಿಗಳ, ವಸುರುದ್ರಾದಿತ್ಯರ, ವಿಶ್ವೇದೇವತೆಗಳ, ಪಿತೃದೇವತೆಗಳ, ತತ್ತ್ವಾಭಿಮಾನಿದೇವತೆಗಳ, ಮುಖ್ಯಪ್ರಾಣನ, ಕೊನೆಗೆ ಮೋಕ್ಷದಾತ ನಾರಾಯಣನ ಅನುಗ್ರಹದಿಂದ ಎಲ್ಲಾ ಋಣಗಳಿಂದ ಮುಕ್ತನಾಗಿ ಇಹದಲ್ಲಿ ನಮ್ಮ ಪರಂಪರೆಯಲ್ಲಿ ಕೊಡುಗೈಗಳ ಸಮೃದ್ಧಿ, ವೇದವಿದರ ಅಭಿವೃದ್ಧಿ ಮಾಡುವ ಕರ್ಮಗಳಲ್ಲಿ, ಶ್ರದ್ಧಾವಂತರು, ಕೈಎತ್ತಿಕೊಡುವವರು, ಅನ್ನವಂತರು, ಅತಿಥಿಅಭ್ಯಾಗತರ ಭಾಗ್ಯ ಬೇಡಿದವರಿಗೆ ಇಕ್ಕುವ ಸಂಪತ್ತು ನಾವೆಂದಿಗೂ ಇನ್ನೊಬ್ಬರ ಎದುರು ಕೈಚಾಚದಂತೆ ಬದುಕುವ ಬದುಕು ನೀಡುತ್ತಾನೆ. ಶ್ರಾದ್ಧನಿಯಾಮಕ ಗದಾಧರ ಪರದಲ್ಲಂತೂ ಉತ್ತಮಗತಿಯನ್ನೇ ಕರುಣಿಸುತ್ತಾನೆ. ಇದು ಶ್ರದ್ಧೆಯಿಂದ ಮಾಡಬೇಕಾದ ಶ್ರಾದ್ಧ.

ಇದರ ಆಮೂಲಾಗ್ರ ಪರಿಚಯ ಈ ಹೊತ್ತಗೆಯಲ್ಲಿದೆ. ಇಲ್ಲಿ ವಿಭಿನ್ನ ಸಂಪ್ರದಾಯಗಳ ಸಂಗ್ರಹ ಇದೆ. ವಿಸ್ತಾರ ವಿವೇಚನೆ ಇದೆ. ಕಷ್ಟಸಾಧ್ಯ ಪ್ರಯತ್ನ ಇದೆ. '**ದೇವಪಿತೃಕಾರ್ಯಾಭ್ಯಾಂ ಪ್ರಮದಿತವ್ಯಮ್**' ಎನ್ನುತ್ತದೆ ತೈತ್ತಿರೀಯ. ಅದಕ್ಕಾಗಿ ವಿಸ್ತಾರವಾದ '**ಶ್ರೌತವಿಷ್ಣುಪೂಜಾವಿಧಿ ವರ್ಣನಮ್**' ಎಂಬ ದೇವಪೂಜಾಪದ್ಧತಿಯ ಪಾಥೇಯ ಕೊಟ್ಟ ಸೂರ್ಯಪ್ರಕಾಶರಿಂದ '**ಪಿತೃಯಜ್ಞವಿಧಿಃ**' ಎಂಬ ಪಿತೃಗಳ ಆರಾಧನೆಯ ಸವಿಸ್ತಾರಕರ್ಮಗಳ ಪಾಥೇಯವಿದು. ಇದು ಸೂರ್ಯಪ್ರಕಾಶರ ಸಾಹಸ, ಕಾಳಜಿ, ಕರ್ಮನಿಷ್ಠೆ. ಪ್ರಯೋಗಗಳ ಮೇಲಣ ಪ್ರೀತಿ. ಅವರಿಗೆ ಹರಿಗುರುಗಳ, ಪಿತೃದೇವತೆಗಳ ಕರುಣಾಕವಚ ಎಂದೆಂದೂ ಇರಲಿ. ವೈದಿಕಪ್ರಪಂಚಕ್ಕೆ ಇನ್ನಷ್ಟು ಪಾಥೇಯ ಅವರಿಂದ ಬರಲಿ ಎಂದು ಭಗವತ್ಪ್ರೀತಿಯ ಹರಕೆ ಹೊತ್ತು, ಈ ಹೊತ್ತಗೆಗೆ ನಲ್ಮೆಯ '**ಮುನ್ನುಡಿ**' ಎಂಬ ಒಸಗೆ ಇತ್ತ ಮಿತ್ರ,

**–ತೋಕೂರು ಸುಬ್ರಹ್ಮಣ್ಯ ಭಟ್**

# ನಿವೇದನೆ

ಲೋಕಪ್ರದಕ್ಷಿಣೆಯ ಪಂಥವಿತ್ತರು ಹರನು
ನವಿಲೇರಿ ಆರುಮೊಗ ಹಾರಿ ಹೊರಟ ।
ಅಂಗೈಲಿ ಬೆಣ್ಣೆಯ ಹುಡುಕೆ ಭೂತಕನ್ನಡಿ ಬೇಕೆ?
ಗಣಪ ನಮಿಸಿದ 'ಲೋಕ' ನಿಮಗೆ ಶರಣು ॥

ನವಮಾಸ ಉದರದಲಿ ಹೊತ್ತು ಲೋಕದಿ ಇಟ್ಟು
ಜಗದ ನಿಯಮದ ಪರಿಚಯವ ನಮಗಿತ್ತು ।
ಸಾಧನೆಗೆ ದೇಹ–ದೇಣಿಗೆ ಕೊಟ್ಟ ದೇವತೆಯೇ
ಶರಣೆಂಬೆ ಹಡೆದವ್ವ–ಪಿತರೇ ನಿಮಗೆ ॥

ಸಂದಾಯ ಹೇಗಿನ್ನು ದೇಹ ನಿಮ್ಮಯ ಭಿಕ್ಷೆ
ನಿಮ್ಮ ಮರೆಯಲು ನನಗೆ ಇನ್ನೆಲ್ಲಿ ರಕ್ಷೆ? ।
ತವ ಪಾದಸನ್ನಿಧಿಯೇ ತೀರ್ಥಕ್ಷೇತ್ರವು ಎಮಗೆ
ನಿಮ್ಮ ಸೇವೆಯ ಮರೆಯ ಜೀವನವೇ ಶಿಕ್ಷೆ ॥

ಎನ್ನ ಇಹಪರ ಗತಿಗೆ ಸೇತು ನಿಮ್ಮಯ ಪೂಜೆ
ಇದ್ದಾಗ ಜೀವರೊಳು ಲಕ್ಷ್ಮೀನಾರಾಯಣರು ।
ಅವರು ತೆರಳಿದ ಮೇಲೂ ವಸುರುದ್ರಆದಿತ್ಯರದು
ನಮ್ಮ ಶ್ರದ್ಧೆಯ ಬಲಕೆ ಒಲಿವ ದೇವತೆಯು ॥

ನಾನು ದೇಹದೊಳಿದ್ದು ಇಲ್ಲಿರದ ನಿಮ್ಮುದ್ದಿಶ್ಯ
ತಿಲತರ್ಪಣಾದಿಗಳೆಲ್ಲ ಹೇಗೆ ಸಂದಾಯ? ।
ದೇವತೆಗಳೇ ವಾಹಕರು ಅವರಾತ್ಮ ಕುಳಿತಿಹ ದೇಹ
ಪೋಷಿಸುತ ಮಾಡುವರು ಅದರ ವಿತರಣೆಯ ॥

ಪರಲೋಕದ ಯಾತ್ರೆ ಮಾಡಿ ಬಂದವರೇ ಎಲ್ಲಾ
ಅನುಭವಿಸಿ ಹೇಳಲು ಇಲ್ಲಿ ಯಾರಿಗೂ ಗೊತ್ತಿಲ್ಲ! ।
ದೇಹ ನಿಜ ಆತ್ಮ ನಿಜ ಪರಮಾತ್ಮನೂ ನಿಜನು
ಪುನರಾವೃತ್ತಿಗಳ ಸಹಜ ಸಮ್ಮೇಳನ ॥

ಪಿತೃಯಜ್ಞವಿಧಿಯನ್ನು ಸಂಗ್ರಹಿಸಿ ವರ್ಣಿಸಿಹೆ
ದೇವ–ಗುರು ಕಾರುಣ್ಯದೊಲುಮೆಯಿಂದ ।
ತಪ್ಪುಗಳು ಎನಗಿರಲಿ ಒಪ್ಪಿತವು ಅಚ್ಯುತನ
ಪಾದಾರವಿಂದದಿ ಇರಿಸಿ ನಮಿಪೆ ಮುದದಿಂದ ॥

ವಂದನೆಯು ಮನದಿಂದ ಅಭಿವಾದನವ ಪೇಳುವೆನು
ಪಿತಾಮಹಗೂ – ಮಾತೆಯ ಚರಣಗಳಿಗೂ ।
ತೃಣಮಾತ್ರ ನಾನಿಲ್ಲಿ ಪ್ರೇರಣೆಯು ಹರಿಕರುಣೆ
ಯತ್ನವದು ಫಲವಿತ್ತು ಪುಸ್ತಕಕೆ ಬಂತು ॥

ಜ್ಞಾನ ವೈರಾಗ್ಯನಿಧಿ ಗುರುಪದಕೆ ಶರಣೆಂಬೆ
ವಿದ್ಯಾಸಾಗರತೀರ್ಥ ಯತಿವರರ ನಮಿಸುತಾ ।
ಧೀರ ಹರಿ ಗೋಪಾಲ ಪೊಡವಿನಾಯಕ ಕೃಷ್ಣ
ವಂದಿಸುವೆ ಕುಲದೈವ ಶ್ರೀವಿಷ್ಣುಮೂರ್ತಿ ॥

ನಿರ್ಣಯವು ನಿನ್ನದಿದು ನಿನ್ನಿಷ್ಟದಂತೆಯೇ ಎಲ್ಲ
ನಂಬಿಹೆನು ತವ ಪಾದ ಅಚಲ ಭಕ್ತಿಯೊಳು ।
ನೆರವಾದ ವಿದ್ವನ್ಮಿತ್ರಬಾಂಧವರಿಗೂ ನಮಿಪೆ
ಕೈಹಿಡಿದು ನಡೆಸಿದ ನಿಮಗೆಲ್ಲಾ ಶರಣು ॥

* * *

## "ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ"

ನಮ್ಮ ಕುಲದೇವರಾದ ಮಟ್ಟು ಶ್ರೀವಿಷ್ಣುಮೂರ್ತಿಗೆ, ಇಷ್ಟದೇವರಾದ ಉಡುಪಿ ಶ್ರೀಕೃಷ್ಣಮುಖ್ಯಪ್ರಾಣರಿಗೆ, ಗ್ರಾಮದೇವರಾದ ಶ್ರೀಚಂದ್ರಮೌಳೀಶ್ವರನಿಗೆ; ಈ ಕೃತಿರಚನೆಗೆ ಪ್ರೇರಣೆ ನೀಡಿದ ಮಧ್ವಾಂತರ್ಗತ ವೇದವ್ಯಾಸದೇವರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತಾ, ನನ್ನ ಗುರುಮಠ ಸೋದೇ ವಾದಿರಾಜಗುರ್ವಂತರ್ಗತ ಶ್ರೀಹಯವದನ ಭೂವರಾಹಾತ್ಮಕ ತ್ರಿವಿಕ್ರಮ ದೇವರಿಗೆ ನಮಿಸುತ್ತಾ ಹಾಗೂ ರಾಘವೇಂದ್ರ ಗುರ್ವಂತರ್ಗತ ಪ್ರಾಣಸ್ಥಶ್ರೀಸೀತಾಪತಿರಾಮಚಂದ್ರದೇವರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ವಾತ್ಸಲ್ಯಪೂರಿತ ಚಿತ್ತದಿಂದ ಆಶೀರ್ವದಿಸಿ, ಧರ್ಮಮಾರ್ಗದಲ್ಲಿ ನಡೆಯಲು ಆಸಕ್ತಿ ಮೂಡಿಸಿದಂತಹ ನನ್ನ ಮಾತಾಪಿತೃಗಳಿಗೆ ಅನಂತಾನಂತ ಸಾಷ್ಟಾಂಗನಮನಗಳು.

ನನ್ನನ್ನು ತಮ್ಮ ಶಿಷ್ಯನಾಗಿ ಸ್ವೀಕರಿಸಿ ಅಶನ, ವಸನ, ವಿದ್ಯೆ ಕೊಟ್ಟು ಪ್ರೇಮಪೂರ್ವಕ ಆಶೀರ್ವದಿಸಿದ ಗುರುಗಳಾದ ಪರಮಪೂಜ್ಯ ಕೃಷ್ಣಾಪುರಮಠಾಧೀಶರಾದ ಶ್ರೀಶ್ರೀವಿದ್ಯಾಸಾಗರತೀರ್ಥ ಶ್ರೀಪಾದರ ಪಾದಕಮಲಗಳಲ್ಲಿ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳು.

ನನ್ನ ಮೊದಲ ಕೃತಿ '**ಶ್ರೌತವಿಷ್ಣುಪೂಜಾವಿಧಿವರ್ಣನಮ್**'ಗೆ ಮಧ್ವಮಠಗಳ ಯತಿವರೇಣ್ಯರು, ಶೃಂಗೇರಿಶಾರದಾಪೀಠದ ಯತಿವರೇಣ್ಯರು ಹಾಗೂ ಯದುಗಿರಿ ಯತಿರಾಜಮಠದ ಯತಿವರೇಣ್ಯರು ಅನುಗ್ರಹ ಸಂದೇಶದೊಂದಿಗೆ ಹರಸಿದ್ದು ಅವರೆಲ್ಲರ ವಿಶೇಷಾನುಗ್ರಹ ಈ ಕೃತಿಗೆ ಕಾರಣವಾಗಿದ್ದು ಅವರೆಲ್ಲರ ಪಾದಕಮಲಗಳಲ್ಲಿ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ಮುನ್ನುಡಿ ನೀಡಿದ ತೋಕೂರು ಸುಬ್ರಹ್ಮಣ್ಯ ಭಟ್ ಹಾಗೂ ಹಿನ್ನುಡಿ ನೀಡಿದ ಡಾ। ಶತಾವಧಾನಿ ಉಡುಪಿ ರಾಮನಾಥ ಆಚಾರ್ಯ ಹಾಗೂ ಶುಭಾಶಂಸನೆ ನೀಡಿದ ತೋಕೂರು ರಾಮಚಂದ್ರ ಭಟ್ –ಇವರಿಗೆ ಸಾಷ್ಟಾಂಗ ನಮಸ್ಕಾರಗಳು.

ಕುಲಪುರೋಹಿತರಾದ ಪ್ರವೀಣಕುಮಾರ ತಂತ್ರಿ ಮಟ್ಟು, ಪೌರೋಹಿತ್ಯಪಾಠ ಮಾಡಿದ ಶ್ರೀರಮಣಾಚಾರ್ಯ ಅಂಬಲಪಾಡಿ ಹಾಗೂ ವೇದಪಾಠ ಮಾಡಿದ ಶ್ರೀನಿವಾಸ ಉಪಾಧ್ಯಾಯ, ಗುಲ್ವಾಡಿ, ಹಾಗೂ ವೃತ್ತಿಯಲ್ಲಿ ಕೈಹಿಡಿದು ನಡೆಸಿದ ವಾಸುದೇವ ಭಟ್ ತೋಕೂರು, ವಿನೋದಾಚಾರ್ಯ ಹೊಸಬೆಟ್ಟು, ಲಕ್ಷೀಶ ಆಚಾರ್ಯ ಚಿತ್ರಾಪುರ, ಮೋಹನ ಕಾರಂತ ಕುಳಾಯಿ ಹಾಗೂ ಸಲಹಾಮಿತ್ರರಾಗಿ ವೆಂಕಟೇಶ ಉಡುಪ ಅತ್ತೂರು, ರಘುಪತಿ ಭಟ್ ಸಸಿಹಿತ್ಲು, ಸೂರ್ಯ ಮೈಯ್ಯ ಸರಪಾಡಿ, ಪವನ್ ಮೈರ್ಪಾಡಿ, ಅಶ್ವತ್ಥ ಆಚಾರ್ಯ ಪೆರ್ಡೂರು, ವಾದಿರಾಜ ಉಪಾಧ್ಯಾಯ, ಪುನರೂರು ಅನಂತ ಭಟ್, ಪ್ರದ್ಯುಮ್ನ ಉಪಾಧ್ಯಾಯ ಮೂಡುಬೆಳ್ಳೆ, ಡಾ। ಪದ್ಮನಾಭ ಕೇಕುಣ್ಣಾಯ ಹಾಗೂ ಪ್ರೋತ್ಸಾಹ ನೀಡಿದ ವೈದಿಕ ಮಿತ್ರವೃಂದಕ್ಕೆ ಹೃತ್ಪೂರ್ವಕ ಪ್ರಣಾಮಗಳು.

**– ಸೂರ್ಯಪ್ರಕಾಶ ಎನ್ ರಾವ್, ಮುಲ್ಕಿ .**

# ವಿಷಯಾನುಕ್ರಮಣಿಕೆ

## ಭಾಗ ೧



## ಪ್ರಥಮ ಗುಚ್ಛ



## ದ್ವಿತೀಯ ಗುಚ್ಛ

## ತೃತೀಯ ಗುಚ್ಛ



## ಚತುರ್ಥ ಗುಚ್ಛ

# ವಿಷಯಾನುಕ್ರಮಣಿಕೆ
## ಭಾಗ ೨

### ಪಂಚಮ ಗುಚ್ಛ



### ಷಷ್ಠಗುಚ್ಛ

## ಸಪ್ತಮ ಗುಚ್ಛ



## ಅಷ್ಟಮ ಗುಚ್ಛ



ಹಿನ್ನುಡಿ

* * *

# ಪಿತೃಯಜ್ಞವಿಧಿವರ್ಣನಮ್

## ಪ್ರಥಮ ಗುಚ್ಛ

### ಪಿತೃಸ್ತುತಿಃ – ೧



ಮಾರ್ಕಂಡೇಯ ಋಷಿಃ । ಅನುಷ್ಟುಪ್ ಛಂದಃ । ಪಿತರೋ ದೇವತಾಃ ॥

*ರುಚಿರುವಾಚ ॥*

ನಮಸ್ಯೇಽಹಂ ಪಿತೄನ್ಶ್ರಾದ್ಧೇ ಯೇ ವಸಂತ್ಯಧಿದೇವತಾಃ ।
ದೇವೈರಪಿ ಹಿ ತರ್ಪ್ಯಂತೇ ಯೇ ಚ ಶ್ರಾದ್ಧೇ ಸ್ವಧೋತ್ತರೈಃ ॥ ೧ ॥

ನಮಸ್ಯೇಽಹಂ ಪಿತೄನ್ಸ್ವರ್ಗೇ ಯೇ ತರ್ಪ್ಯಂತೇ ಮಹರ್ಷಿಭಿಃ ।
ಶ್ರಾದ್ಧೈರ್ಮನೋಮಯೈರ್ಭಕ್ತ್ಯಾ ಭುಕ್ತಿಮುಕ್ತಿಮಭೀಪ್ಸುಭಿಃ ॥ ೨ ॥

ನಮಸ್ಯೇಽಹಂ ಪಿತೄನ್ಸ್ವರ್ಗೇ ಸಿದ್ಧಾಃ ಸಂತರ್ಪಯಂತಿ ಯಾನ್ ।
ಶ್ರಾದ್ಧೇಷು ದಿವ್ಯೈಃ ಸಕಲೈರುಪಹಾರೈರನುತ್ತಮೈಃ ॥ ೩ ॥

ನಮಸ್ಯೇಽಹಂ ಪಿತೄನ್ಭಕ್ತ್ಯಾ ಯೇಽರ್ಚ್ಯಂತೇ ಗುಹ್ಯಕೈರಪಿ ।
ತನ್ಮಯತ್ವೇನ ವಾಂಛಾದ್ಭಿರೃದ್ಧಿಮಾತ್ಯಂತಿಕೀಂ ಪರಾಮ್ ॥ ೪ ॥

ನಮಸ್ಯೇಽಹಂ ಪಿತೄನ್ಮರ್ತ್ಯೈರರ್ಚ್ಯಂತೇ ಭುವಿ ಯೇ ಸದಾ ।
ಶ್ರಾದ್ಧೇಷು ಶ್ರದ್ಧಯಾಽಭೀಷ್ಟ ಲೋಕಪ್ರಾಪ್ತಿಪ್ರದಾಯಿನಃ ॥ ೫ ॥

ನಮಸ್ಯೇಽಹಂ ಪಿತೄನ್ವಿಪ್ರೈರರ್ಚ್ಯಂತೇ ಭುವಿ ಯೇ ಸದಾ ।
ವಾಂಛಿತಾಽಭೀಷ್ಟಲಾಭಾಯ ಪ್ರಾಜಾಪತ್ಯಪ್ರದಾಯಿನಃ ॥ ೬ ॥

ನಮಸ್ಯೇಽಹಂ ಪಿತೄನ್ಯೇವೈ ತರ್ಪ್ಯಂತೇ ಅರಣ್ಯವಾಸಿಭಿಃ ।
ವನ್ಯೈಃ ಶ್ರಾದ್ಧೈರ್ಯತಾಹಾರೈಸ್ತಪೋ ನಿರ್ಧೂತಕಿಲ್ಬಿಷೈ ॥ ೭ ॥

ನಮಸ್ಯೇಽಹಂ ಪಿತೄನ್ವಿಪ್ರೈರ್ನೈಷ್ಠಿಕವ್ರತಚಾರಿಭಿಃ ।
ಯೇ ಸಂಯುತಾತ್ಮಭಿರ್ನಿತ್ಯಂ ಸಂತರ್ಪ್ಯಂತೇ ಸಮಾಧಿಭಿಃ ॥ ೮ ॥

ನಮಸ್ಯೇಽಹಂ ಪಿತೄನ್ಶ್ರಾದ್ಧೈರಾಜನ್ಯಾಸ್ತರ್ಪಯಂತಿ ಯಾನ್ ।
ಕವ್ಯೈರಶೇಷೈರ್ವಿಧಿವಲ್ಲೋಕತ್ರಯಫಲಪ್ರದಾನ್ ॥ ೯ ॥

ನಮಸ್ಯೇಽಹಂ ಪಿತೄನ್ವೈಶ್ಯೈರರ್ಚಯಂತೇ ಭುವಿ ಯೇ ಸದಾ ।
ಸ್ವಕರ್ಮಾಭಿರತೈರ್ನಿತ್ಯಂ ಪುಷ್ಪಧೂಪಾಽನ್ನವಾರಿಭಿಃ ॥ ೧೦ ॥

ನಮಸ್ಯೇಽಹಂ ಪಿತೄನ್ಶ್ರಾದ್ಧೈರ್ಯೇ ಶೂದ್ರೈರಪಿ ಭಕ್ತಿದಃ ।
ಸಂತರ್ಪ್ಯಂತೇ ಜಗತ್ಯತ್ರ ನಾಮ್ನಾ ಖ್ಯಾತಾಃ ಸುಕಾಲಿನಃ ॥ ೧೧ ॥

ನಮಸ್ಯೇಽಹಂ ಪಿತೄನ್ಶ್ರಾದ್ಧೈಃ ಪಾತಾಲೇ ಯಾ ಮಹಾಸುರೈಃ ।
ಸಂತರ್ಪ್ಯಂತೇ ಸ್ವಧಾ ಹಾರಾಸ್ತ್ಯಕ್ತ ದಂಭಮದೈಃ ಸದಾ ॥ ೧೨ ॥

ನಮಸ್ಯೇಽಹಂ ಪಿತೄನ್ಶ್ರಾದ್ಧೈರರ್ಚ್ಯಂತೇ ಯೇ ರಸಾತಲೇ ।
ಭೋಗೈರಶೇಷೈರ್ವಿಧಿವನ್ನಾಗೈಃ ಕಾಮಾನ್ ಅಭೀಪ್ಸುಭಿಃ ॥ ೧೩ ॥

ನಮಸ್ಯೇಽಹಂ ಪಿತೄನ್ಶ್ರಾದ್ಧೈಃ ಸರ್ಪೈಃ ಸಂತರ್ಪಿತಾನ್ಸದಾ ।
ತತ್ರೈವ ವಿಧಿವನ್ಮಂತ್ರ ಭೋಗಸಂಪತ್ಸಮನ್ವಿತೈಃ ॥ ೧೪ ॥

ಪಿತೄನ್ನಮಸ್ಯೇ ನಿವಸಂತಿ ಸಾಕ್ಷಾದ್
ಯೇ ದೇವಲೋಕೇ ಚ ತಥಾಂತರಿಕ್ಷೇ ।
ಮಹೀತಲೇ ಯೇ ಚ ಸುರಾದಿ ಪೂಜ್ಯಾಸ್ತೇ
ಮೇ ಪ್ರತೀಚ್ಛಂತು ಮಯೋಪನೀತಮ್ ॥ ೧೫ ॥

ಪಿತೄನ್ನಮಸ್ಯೇ ಪರಮಾತ್ಮಭೂತಾಃ
ಯೇ ವೈ ವಿಮಾನೇ ನಿವಸಂತಿ ಮೂರ್ತಾಃ ।
ಯಜಂತಿ ಯಾನಸ್ತಮಲೈರ್ಮನೋಭಿ–
ರ್ಯೋಗೀಶ್ವರಾಃ ಕ್ಲೇಶ ವಿಮುಕ್ತಿ ಹೇತೂನ್ ॥ ೧೬ ॥

ಪಿತೄನ್ನಮಸ್ಯೇ ದಿವಿ ಯೇ ಚ ಮೂರ್ತಾಃ
ಸ್ವಧಾಭುಜಃ ಕಾಮ್ಯ ಫಲಾಭಿಸಂಧೌ ।

ಪ್ರದಾನಶಕ್ತಾಃ ಸಕಲೇಪ್ಸಿತಾನಾಂ
ವಿಮುಕ್ತಿದಾ ಯೇಽನಭಿಸಂಹಿತೇಷು ॥ ೧೭ ॥

ತೃಪ್ಯಂತು ತೇಽಸ್ಮಿನ್ಪಿತರಃ ಸಮಸ್ತಾ
ಇಚ್ಛಾವತಾಂ ಯೇ ಪ್ರದಿಶಂತಿಕಾಮಾನ್ ।
ಸುರತ್ವಮಿಂದ್ರತ್ವಮತೋಽಧಿಕಂ ವಾ
ಸುತಾನ್ ಪಶೂನ್ ಸ್ವಾನಿ ಬಲಂ ಗೃಹಾಣಿ ॥ ೧೮ ॥

ಸೋಮಸ್ಯ ಯೇ ರಶ್ಮಿಷು ಯೇಽರ್ಕ ಬಿಂಬೇ
ಶುಕ್ಲೇ ವಿಮಾನೇ ಚ ಸದಾ ವಸಂತಿ ।
ತೃಪ್ಯಂತು ತೇಽಸ್ಮಿನ್ಪಿತರೋಽನ್ನ ತೋಯೈ–
ರ್ಗಂಧಾದಿನಾ ಪುಷ್ಟಿಮಿತೋ ವ್ರಜಂತು ॥ ೧೯ ॥

ಯೇಷಾಂ ಹತೇಽಗ್ನೌ ಹವಿಷಾ ಚ ತೃಪ್ತಿ–
ರ್ಯೇ ಭುಂಜತೇ ವಿಪ್ರಶರೀರಸಂಸ್ಥಾಃ ।
ಯೇ ಪಿಂಡದಾನೇನ ಮುದಂ ಪ್ರಯಾಂತಿ
ತೃಪ್ಯಂತು ತೇಽಸ್ಮಿನ್ಪಿತರೋನ್ನತೋಯೈಃ ॥ ೨೦ ॥

ಯೇ ಖಡ್ಗಿಮಾಂಸೇನ ಸುರೈರಭೀಷ್ಟೈಃ
ಕೃಷ್ಣೈಸ್ತಿಲೈರ್ದಿವ್ಯ ಮನೋಹರೈಶ್ಚ ।
ಕಾಲೇನ ಶಾಕೇನ ಮಹರ್ಷಿವರ್ಯೈಃ
ಸಂಪ್ರೀಣಿತಾಸ್ತೇ ಮುದಮತ್ರ ಯಾಂತು ॥ ೨೧ ॥

ಕವ್ಯಾನ್ಯಶೇಷಾಣಿ ಚ ಯಾನ್ಯಭೀಷ್ಟಾನ್
ಯತೀವ ತೇಷಾಮಮರಾರ್ಚಿತಾನಾಮ್ ।
ತೇಷಾಂ ತು ಸಾನ್ನಿಧ್ಯಮಿಹಾಸ್ತು ಪುಷ್ಪ
ಗಂಧಾಽನ್ನ ಭೋಜ್ಯೇಷು ಮಯಾಕೃತೇಷು ॥ ೨೨ ॥

ದಿನೇ ದಿನೇ ಯೇ ಪ್ರತಿಗೃಹ್ಣತೇಽರ್ಚಾಂ
ಮಾಂಸಾತಪೂಜ್ಯಾಂ ಭುವಿ ಯೇಽಷ್ಟಕಾಸು ।
ಯೇ ವತ್ಸರಾಂತೇಽಭ್ಯುದಯೇ ಚ ಪೂಜ್ಯಾಃ
ಪ್ರಯಾಂತು ತೇ ಮೇ ಪಿತರೋಽತ್ರತೃಪ್ತಿಮ್ ॥ ೨೩ ॥

ಪೂಜ್ಯಾ ದ್ವಿಜಾನಾಂ ಕುಮುದೇಂದುಭಾಸೋ
ಯೇ ಕ್ಷತ್ರಿಯಾಣಾಂ ಚ ನವಾಽರ್ಕ ವರ್ಣಾಃ ।
ತಥಾ ವಿಶಾಂ ಯೇ ಕನಕಾವದಾತಾ
ನೀಲೀನಿಭಾಃ ಶೂದ್ರಜನಸ್ಯ ಯೇ ಚ ॥ ೨೪ ॥

ತೇಽಸ್ಮಿನ್ ಸಮಸ್ತಾ ಮಮ ಪುಷ್ಪಗಂಧಾ
ಧೂಪಾನ್ನತೋಯಾದಿ ನಿವೇದನೇನ ।
ತಥಾಽಗ್ನಿ ಹೋಮೇನ ಚ ಯಾಂತು ತೃಪ್ತಿಂ
ಸದಾ ಪಿತೃಭ್ಯಃ ಪ್ರಣತೋಽಸ್ಮಿ ತೇಭ್ಯಃ ॥ ೨೫ ॥

ಯೇ ದೇವಪೂರ್ವಾಣ್ಯತಿತೃಪ್ತಿಹೇತೋಃ
ಅಶ್ನಂತಿ ಕವ್ಯಾನಿ ಶುಭಾಹುತಾನಿ ।
ತೃಪ್ತಾಶ್ಚ ಯೇ ಭೂತಿಸೃಜೋ ಭವಂತಿ
ತೃಪ್ಯಂತು ತೇಽಸ್ಮಿನ್ ಪ್ರಣತೋಽಸ್ಮಿತೇಭ್ಯಃ ॥ ೨೬ ॥

ರಕ್ಷಾಂಸಿ ಭೂತಾನ್ಯಸುರಾಂಸ್ತಥೋಗ್ರಾನ್
ನಿರ್ನಾಶಯಂತಸ್ತ್ವಶಿವಂ ಪ್ರಜಾನಾಮ್ ।
ಆದ್ಯಾ ಸುರಾಣಾಂ ಅಮರೇಶಪೂಜ್ಯಾ
ತೃಪ್ಯಂತು ತೇಽಸ್ಮಿನ್ ಪ್ರಣತೋಽಸ್ಮಿ ತೇಭ್ಯಃ ॥ ೨೭ ॥

ಅಗ್ನಿಷ್ವಾತ್ತಾಃ ಬರ್ಹಿಷದಃ ಆಜ್ಯಪಾಃ ಸೋಮಪಾಸ್ತಥಾ ।
ವ್ರಜಂತು ತೃಪ್ತಿಂ ಶ್ರಾದ್ಧೇಽಸ್ಮಿನ್ ಪಿತರಸ್ತರ್ಪಿತಾ ಮಯಾ ॥ ೨೮ ॥

ಅಗ್ನಿಷ್ವಾತ್ತಾಃ ಪಿತೃಗಣಾಃ ಪ್ರಾಚೀಂ ರಕ್ಷತು ಮೇ ದಿಶಮ್ ।
ತಥಾ ಬರ್ಹಿಷದಃ ಪಾಂತು ಯಾಮ್ಯಾಂ ಯೇ ಪಿತರಃ ಸ್ಮೃತಾಃ ॥ ೨೯ ॥

ಪ್ರತೀಚೀಮ್ ಆಜ್ಯಪಾಸ್ತದ್ವದ್ ಉದೀಚೀಮಪಿ ಸೋಮಪಾಃ ।
ರಕ್ಷೋ ಭೂತಪಿಶಾಚೇಭ್ಯಃ ತಥೈವಾಽಸುರ ದೋಷತಃ ॥ ೩೦ ॥

ಸರ್ವತಶ್ಚಾಧಿಪಸ್ತೇಷಾಂ ಯಮೋ ರಕ್ಷಾಂ ಕರೋತು ಮೇ ।
ವಿಶ್ವೋ ವಿಶ್ವಭುಗಾರಾಧ್ಯೋ ಧರ್ಮೋ ಧನ್ಯಃ ಶುಭಾನನಃ ॥ ೩೧ ॥

ಭೂತಿದೋ ಭೂತಿಕೃದ್ಭೂತಿಃ ಪಿತೄಣಾಂ ಯೇ ಗಣಾನವ ।
ಕಲ್ಯಾಣಃ ಕಲ್ಯಾಣಕರ್ತಾ ಚ ಕಲ್ಯಃ ಕಲ್ಯತರಾಽಶ್ರಯಃ ॥ ೩೨ ॥

ಕಲ್ಯತಾಹೇತುರನಘಃ ಷಡ್ ಇಮೇ ತೇ ಗಣಾಃ ಸ್ಮೃತಾಃ ।
ವರೋ ವರೇಣ್ಯೋ ವರದಃ ಪುಷ್ಟಿದ: ತುಷ್ಟಿದಸ್ತಥಾ ॥ ೩೩ ॥

ವಿಶ್ವಪಾತಾ ತಥಾ ಧಾತಾ ಸಪ್ತೈವೈತೇ ತಥಾ ಗಣಾಃ ।
ಮಹಾನ್ ಮಹಾತ್ಮಾ ಮಹಿತೋ ಮಹಿಮಾವಾನ್ಮಹಾಬಲಃ ॥ ೩೪ ॥

ಗಣಾಃ ಪಂಚ ತಥೈವೇತಿ ಪಿತೄಣಾಂ ಪಾಪನಾಶನಾಃ ।
ಸುಖದೋ ಧನದಶ್ಚಾನ್ಯೋ ಧರ್ಮದೋಽನ್ಯಶ್ಚ ಭೂತಿದಃ ॥ ೩೫ ॥

ಪಿತೄಣಾಂ ಕಥ್ಯತೇ ಚೈತತ್ ತಥಾ ಗುಣಚತುಷ್ಟಯಮ್ ।
ಏಕತ್ರಿಂಶತ್ ಪಿತೃಗಣಾ ಯೈರ್ವ್ಯಾಪ್ತಮಖಿಲಂ ಜಗತ್ ।
ತೇ ಮೇಽನುತೃಪ್ತಾಸ್ತುಷ್ಯಂತು ಯಚ್ಛಂತು ಚ ಸದಾ ಹಿತಮ್ ॥ ೩೬ ॥

## ಪಿತೃಸ್ತುತಿಃ – ೨

*ರುಚಿರುವಾಚ ॥*

ಅಮೂರ್ತಾನಾಂ ಚ ಮೂರ್ತಾನಾಂ ಪಿತೄಣಾಂ ದೀಪ್ತತೇಜಸಾಮ್ ।
ನಮಸ್ಯಾಮಿ ಸದಾ ತೇಷಾಂ ಧ್ಯಾನಿನಾಂ ದಿವ್ಯಚಕ್ಷುಷಾಮ್ ॥ ೧ ॥

ಇಂದ್ರಾದೀನಾಂ ಚ ನೇತಾರೋ ದಕ್ಷ ಮಾರೀಚಯೋಸ್ತಥಾ ।
ಸಪ್ತರ್ಷೀಣಾಂ ತಥಾಽನ್ಯೇಷಾಂ ತಾನ್ ನಮಸ್ಯಾಮಿ ಕಾಮದಾನ್ ॥ ೨ ॥

ಮನ್ವಾದೀನಾಂ ಮುನೀಂದ್ರಾಣಾಂ ಸೂರ್ಯಾ ಚಂದ್ರಮಸೋಸ್ತಥಾ ।
ತಾನ್ ನಮಸ್ಯಾಮ್ಯಹಂ ಸರ್ವಾನ್ ಪಿತರಶ್ಚಾರ್ಣವೇಷು ಯೇ ॥ ೩ ॥

ನಕ್ಷತ್ರಾಣಾಂ ಗ್ರಹಾಣಂ ಚ ವಾಯ್ವಗ್ನ್ಯೋರ್ನಭಸಸ್ತಥಾ. ।
ದ್ಯಾವಾಪೃಥಿವ್ಯಾಶ್ಚ ತಥಾ ನಮಸ್ಯಾಮಿ ಕೃತಾಂಜಲಿಃ ॥ ೪ ॥

ದೇವರ್ಷೀಣಾಂ ಗ್ರಹಾಣಾಂ ಚ ಸರ್ವಲೋಕನಮಸ್ಕೃತಾನ್ ।
ಅಕ್ಷಯ್ಯಸ್ಯ ಸದಾ ದಾತೄನ್ ನಮಸ್ಯಾಮಿ ಕೃತಾಂಜಲಿಃ ॥ ೫ ॥

ಪ್ರಜಾಪತೇಃ ಕಶ್ಯಪಾಯ ಸೋಮಾಯ ವರುಣಾಯ ಚ ।
ಯೋಗೇಶ್ವರೇಭ್ಯಶ್ಚ ಸದಾ ನಮಸ್ಯಾಮಿ ಕೃತಾಂಜಲಿಃ ॥ ೬ ॥

ನಮೋ ಗಣೇಭ್ಯಃ ಸಪ್ತಭ್ಯಸ್ತಥಾ ಲೋಕೇಷು ಸಪ್ತಸು ।
ಸ್ವಯಂಭುವೇ ನಮಸ್ಯಾಮಿ ಬ್ರಹ್ಮಣೇ ಯೋಗಚಕ್ಷುಷೇ ॥ ೭ ॥

ಸೋಮಾಧಾರಾನ್ ಪಿತೃಗಣಾನ್ ಯೋಗಮೂರ್ತಿಧರಾಂಸ್ತಥಾ ।
ನಮಸ್ಯಾಮಿ ತಥಾ ಸೋಮಂ ಪಿತರಂ ಜಗತಾಮಹಮ್ ॥ ೮ ॥

ಅಗ್ನಿರೂಪಾಂಸ್ತಥೈವಾಽನ್ಯಾನ್ ನಮಸ್ಯಾಮಿ ಪಿತೄನಹಮ್ ।
ಅಗ್ನಿಷೋಮಮಯಂ ವಿಶ್ವಂ ಯತ ಏತದಶೇಷತಃ ॥ ೯ ॥

ಯೇ ತು ತೇಜಸಿ ಯೇ ಚೈತೇ ಸೋಮಸೂರ್ಯಾಗ್ನಿಮೂರ್ತಯಃ ।
ಜಗತ್ಸ್ವರೂಪಿಣಶ್ಚೈವ ತಥಾ ಬ್ರಹ್ಮಸ್ವರೂಪಿಣಃ ॥ ೧೦ ॥

ತೇಭ್ಯೋಽಖಿಲೇಭ್ಯೋ ಯೋಗಿಭ್ಯಃ ಪಿತೃಭ್ಯೋ ಯತಮಾನಸಃ ।
ನಮೋ ನಮೋ ನಮಸ್ತೇ ಮೇ ಪ್ರಸೀದಂತು ಸ್ವಧಾ ಭುಜಃ ॥ ೧೧ ॥

## ಫಲಶ್ರುತಿಃ

*ಪಿತರ ಊಚುಃ*

ಸ್ತೋತ್ರೇಣಾನೇನ ಚ ನರೋ ಯೋಽಸ್ಮಾನ್ ಸ್ತೋಷ್ಯತಿ ಭಕ್ತಿತಃ ।
ತಸ್ಯ ತುಷ್ಟಾ ವಯಂ ಭೋಗಾನಾತ್ಮಜ್ಞಾನಂ ತಥೋತ್ತಮಮ್ ॥ ೧ ॥

ಶರೀರಾರೋಗ್ಯಮರ್ಥಂ ಚ ಪುತ್ರಪೌತ್ರಾದಿಕಂ ತಥಾ ।
ಪ್ರದಾಸ್ಯಾಮೋ ನ ಸಂದೇಹೋ ಯಚ್ಚಾನ್ಯದಭಿವಾಂಛಿತಮ್ ॥ ೨ ॥

ತಸ್ಮಾತ್ಪುಣ್ಯಫಲಂ ಲೋಕೇ ವಾಂಛದ್ಭಿಃ ಸತತಂ ನರೈಃ ।
ಪಿತೄಣಾಂ ಚಾಕ್ಷಯಾಂ ತೃಪ್ತಿಂ ಸ್ತ್ವಯಾ ಸ್ತೋತ್ರೇಣ ಮಾನವೈಃ ॥ ೩ ॥

ವಾಂಛದ್ಭಿಃ ಸತತಂ ಸ್ತ್ವಯಾ ಸ್ತೋತ್ರೇಣಾನೇನ ವೈ ಯತಃ ।
ಶ್ರಾದ್ಧೇ ಚ ಇಮಂ ಭಕ್ತ್ಯಾ ಅಸ್ಮತ್ಪ್ರೀತಿಕರಂ ಸ್ತವಮ್ ॥ ೪ ॥

ಪಠಿಷ್ಯಂತಿ ದ್ವಿಜಾಗ್ರ್ಯಾಣಾಂ ಭುಂಜತಾಂ ಪುರತಃ ಸ್ಥಿತಃ ।
ಸ್ತೋತ್ರಶ್ರವಣಸಂಪ್ರೀತ್ಯಾ ಸನ್ನಿಧಾನೇ ಪರೇ ಕೃತೇ ॥ ೫ ॥

ಅಸ್ಮಾಕಮಕ್ಷಯಂ ಶ್ರಾದ್ಧಂ ತದ್ಭವಿಷ್ಯತ್ಯಸಂಶಯಮ್ ।
ಯದ್ಯಪ್ಯಶ್ರೋತ್ರಿಯಂ ಶ್ರಾದ್ಧಂ ಯದ್ಯಪ್ಯುಪಹತಂ ಭವೇತ್ ॥ ೬ ॥

ಅನ್ಯಾಯೋಪಾತ್ತ ವಿತ್ತೇನ ಯದಿ ವಾ ಕೃತಮನ್ಯಥಾ ।
ಅಶ್ರಾದ್ಧೈರ್ಹೇರುಪಹತೈರುಪಹಾರೈಸ್ತಥಾಕೃತಮ್ ॥ ೭ ॥

ಅಕಾಲೇಽಪ್ಯಥವಾಽದೇಶೇ ವಿಧಿಹೀನಮಥಾಪಿ ವಾ ।
ಅಶ್ರದ್ಧಯಾ ವಾ ಪುರುಷೈರ್ದಂಭಮಾಶ್ರಿತ್ಯ ವಾ ಕೃತಮ್ ॥ ೮ ॥

ಅಸ್ಮಾಕಂ ತೃಪ್ತಯೇ ಶ್ರಾದ್ಧಂ ತಥಾಪ್ಯೇತದುದೀರಣಾತ್ ।
ಯತ್ರೈತತ್ಪಠ್ಯತೇ ಶ್ರಾದ್ಧೇ ಸ್ತೋತ್ರಮಸ್ಮತ್ಸುಖಾವಹಮ್ ॥ ೯ ॥

ಅಸ್ಮಾಕಂ ಜಾಯತೇ ತೃಪ್ತಿಸ್ತತ್ರ ದ್ವಾದಶವಾರ್ಷಿಕೀ ।
ಹೇಮಂತೇ ದ್ವಾದಶಾಬ್ದಾನಿ ತೃಪ್ತಿಮೇತತ್ ಪ್ರಯಚ್ಛತಿ ॥ ೧೦ ॥

ಶಿಶಿರೇ ದ್ವಿಗುಣಾಬ್ದಂಶ್ಚ ತೃಪ್ತಿಂ ಸ್ತೋತ್ರಮಿದಂ ಶುಭಮ್ ।
ವಸಂತೇ ಷೋಡಶಸಮಾಸ್ತೃಪ್ತಯೇ ಶ್ರಾದ್ಧಕರ್ಮಣಿ ॥ ೧೧ ॥

ಗ್ರೀಷ್ಮೇ ಷೋಡಶೈವೈತತ್ ಪಠಿತಂ ತೃಪ್ತಿಕಾರಕಮ್ ।
ವಿಕಲೇಽಪಿ ಕೃತೇ ಶ್ರಾದ್ಧೇ ಸ್ತೋತ್ರೇಣಾನೇನ ಸಾಧಿತೇ ॥ ೧೨ ॥

ವರ್ಷಾಸು ತೃಪ್ತಿರಸ್ಮಾಕಮಕ್ಷಯಾ ಜಾಯತೇ ರುಚೇ ।
ಶರತ್ಕಾಲೇಽಪಿ ಪಠಿತಂ ಶ್ರಾದ್ಧಕಾಲೇ ಪ್ರಯಚ್ಛತಿ ॥ ೧೩ ॥

ಅಸ್ಮಾಕಮೇತತ್ಪುರುಷಸ್ತೃಪ್ತಿಂ ಪಂಚದಶಾಬ್ದಿಕೀಮ್ ।
ಯಸ್ಮಿನ್ ಗೃಹೇ ಚ ಲಿಖಿತಮೇತತ್ತಿಷ್ಠತಿ ನಿತ್ಯದಾ ॥ ೧೪ ॥

ಸನ್ನಿಧಾನಂ ಕೃತೇ ಶ್ರಾದ್ಧೇ ತತ್ರಾಽಸ್ಮಾಕಂ ಭವಿಷ್ಯತಿ ।
ತಸ್ಮಾದೇತತ್ತ್ವಯಾ ಶ್ರಾದ್ಧೇ ವಿಪ್ರಾಣಾಂ ಭುಂಜತಃ ಪುರಃ ॥ ೧೫ ॥

ಶ್ರವಣೀಯಂ ಮಹಾಭಾಗ ಅಸ್ಮಾಕಂ ಪುಷ್ಟಿಹೇತುಕಮ್ ।
ಇತ್ಯುಕ್ತ್ವಾ ಪಿತರಸ್ತಸ್ಯ ಸ್ವರ್ಗತಾ ಮುನಿಸತ್ತಮ ॥ ೧೬ ॥

॥ ಸ್ವಸ್ತಿ ಶ್ರೀ ಮಾರ್ಕಂಡೇಯ ಮಹಾಪುರಾಣೇ ರೌಚ್ಯೇ ಮನ್ವಂತರೇ ರುಚಿಕೃತ ಪಿತೃಸ್ತೋತ್ರಂ ಸಂಪೂರ್ಣಮ್ ॥

* * *



# ಮಾತಾಪಿತೃಪೂಜಾ



ಪುಂಡರೀಕನು ಕಾಶೀಸಮೀಪದ ಕುಕ್ಕುಟಾಶ್ರಮವನ್ನು ಸೇರಿ ಅಲ್ಲಿ ವೃದ್ಧರಾದ ತಂದೆತಾಯಿಗಳನ್ನು ಪರಮಭಕ್ತಿಯಿಂದ ಸೇವಿಸುತ್ತಿದ್ದ ಕುಕ್ಕುಟಮಹರ್ಷಿಗಳನ್ನು ಕಂಡು ತನಗೂ ತಂದೆತಾಯಿಗಳ ಪೂಜಾವಿಧಾನವನ್ನು ಉಪದೇಶಿಸುವಂತೆ ಕುಕ್ಕುಟಮಹರ್ಷಿಗಳಲ್ಲಿ ಕೇಳಿಕೊಳ್ಳುತ್ತಾನೆ. ಆಗ ಮಹರ್ಷಿಗಳು, ಮಹಾಭಾರತದಲ್ಲಿ ಭೀಷ್ಮಾಚಾರ್ಯರು ಹೇಳಿದ ಮಾತಾಪಿತೃಗಳ ಮಹತ್ತ್ವವನ್ನು ತಿಳಿಸಿ ಪೂಜೆಯ ವಿಧಿಯನ್ನು ಉಪದೇಶಿಸುತ್ತಾರೆ. ಇವರ ಉಪದೇಶದಿಂದ ತಾನೂ ತಂದೆತಾಯಿಯರ ಪೂಜೆಯನ್ನು ಭಕ್ತಿಯಿಂದ ಮಾಡಿ ಮುಂದೆ ಪಾಂಡುರಂಗವಿಠ್ಠಲನ ಪೂರ್ಣಾನುಗ್ರಹಕ್ಕೆ ಪಾತ್ರನಾಗುತ್ತಾನೆ.

*ಕುಕ್ಕುಟಮಹರ್ಷಿರುವಾಚ ॥*

**ಮಾತಾಪಿತ್ರೋರ್ಗುರೂಣಾಂ ಚ ಪೂಜಾ ಬಹುಮತಾ ಮಮ ।**
**ಇಹ ಯುಕ್ತೋ ನರೋ ಲೋಕಾನ್ ಯಶಶ್ಚ ಮಹದಶ್ನುತೇ ॥**

**ಮಾತೃವೃತ್ತ್ಯಾ ತ್ವಿಮಂ ಲೋಕಂ ಪಿತೃವೃತ್ತ್ಯಾ ತಥಾ ಪರಮ್ ।**
**ಬ್ರಹ್ಮಲೋಕಂ ಗುರೋರ್ವೃತ್ತ್ಯಾ ನಿಯಮೇನ ತರಿಷ್ಯತಿ ॥** *(ಮಹಾಭಾರತ)*

ತಂದೆತಾಯಿಯರ ಪೂಜೆಯನ್ನು ದಿನವೂ ಬೆಳಗ್ಗೆ ಹಾಗೂ ಸಾಯಂಕಾಲದಲ್ಲಿ ಮಾನಸಪೂಜೆ ಹಾಗೂ ಪಿತೃಗೀತಾಪಾರಾಯಣ, ಮಧ್ಯಾಹ್ನ ಊಟದ ಮೊದಲು ಬಾಹ್ಯಪೂಜೆ ಮಾಡಬೇಕು. ಸಪತ್ನೀಕನಾಗಿ ಪೂಜೆ ಮಾಡುವುದು ಉತ್ತಮ. ತಂದೆ ತಾಯಿಯರಲ್ಲಿ ಯಾರಾದರೂ ಒಬ್ಬರು ಸತ್ತಿದ್ದರೆ ಅವರ ಸ್ಥಾನದಲ್ಲಿ ದೇವರ ಮೂರ್ತಿ ಇಲ್ಲವೇ ಹೂವಿಟ್ಟು ಪೂಜಿಸುವುದು. ಪೂಜಾಕರ್ತೃ ತನ್ನ ಎದುರು ಎರಡು ಮಣೆಗಳನ್ನಿಟ್ಟು ಆಚಮನ ಮಾಡಿ ಪ್ರಾಣಾಯಾಮ, ಭೂಶುದ್ಧಿ, ಭೂತೋಚ್ಚಾಟನೆ, ಕರಶುದ್ಧಿ, ಗುರುವಂದನೆ, ಪಾಪಪುರುಷನಿರಸನ ಮಾಡಿ ಸಂಕಲ್ಪ ಮಾಡಬೇಕು.

**ಅದ್ಯ ಪೂರ್ವೋಚ್ಚರಿತ.....ಮಾತಾಪಿತೃವಚನೋಲ್ಲಂಘನಾದಿ ಸಮಸ್ತಪಾಪ ನಿರಸನಾರ್ಥಂ ಸರ್ವದೇವತಾ ಪ್ರೀತಯೇ ಮಾತಾಪಿತ್ರಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಮಾತಾಪಿತೃ ಪೂಜಾಂ ಕರಿಷ್ಯೇ ॥** ಕೈಮುಗಿದು ಗುರು–ಗಣಪತಿಯರನ್ನು ಪ್ರಾರ್ಥಿಸಿ ಲಕ್ಷ್ಮೀನಾರಾಯಣರನ್ನು ಮನಸಿನಲ್ಲಿ ಸ್ಮರಿಸಿ–

**ಸುಮುಖೌ ಸುಂದರತರೌ ಸುನಾಸೌ ಸುಖಚಿತ್ತನೂ ।**
**ಸುರಾರಾಧಿತಪಾದಾಬ್ಜೌ ರಮಾನಾರಾಯಣೌ ಸ್ತುಮಃ ॥**

ತಂದೆಯ ಕೈಹಿಡಿದು–

**ಪಿತ್ರಂತರ್ಗತ ಕೇಶವಾಯ ನಮಃ ಸ್ವಾಗತಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥** –ಎಂದು ಸ್ವಾಗತಿಸಿ, ತಾಯಿಯ ಕೈಹಿಡಿದು (ತಂದೆಯ ಎಡಬದಿಯಲ್ಲಿ ನಿಲ್ಲಿಸಿ),

**ಮಾತ್ರಂತರ್ಗತ ಶ್ರಿಯೈ ನಮಃ ಸ್ವಾಗತಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥** ಎಂದು ಸ್ವಾಗತಿಸಿ, ಎರಡು ದರ್ಭೆಯನ್ನು ಹಿಡಿದುಕೊಂಡು,

**ಪಿತ್ರಂತರ್ಗತ ನಾರಾಯಣಾಯ ನಮಃ ಇದಮಾಸನಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ. ॥** –ಎಂದು ಮಣೆಯ ಮೇಲೆ ಇಟ್ಟು ಕುಳ್ಳಿರಿಸಿ, ಅನಂತರ ಪುನಃ ಎರಡು ದರ್ಭೆ ಹಿಡಿದು.

**ಮಾತ್ರಂತರ್ಗತ ಲಕ್ಷ್ಮ್ಯೈ ನಮಃ ಇದಮಾಸನಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥** –ಎಂದು ಮಣೆಯ ಮೇಲೆ ಇಟ್ಟು ತಾಯಿಯನ್ನು ಕುಳ್ಳಿರಿಸಿ, ಕೈಮುಗಿದು ತಂದೆಯನ್ನು ನೋಡಿ,

**ಮನ ಇಂದ್ರಿಯಯುಕ್ತಂ ಚ ಸೂಕ್ಷ್ಮದೇಹವಿದಾಯಿನಮ್ ।**
**ಧ್ಯಾಯೇನ್ಮೇ ಜನ್ಮದಾತಾರಮಶಿವಾನಾಂ ವಿನಾಶನಮ್ ॥**

**ಪಿತ್ರಂತರ್ಗತ ಮಾಧವಾಯ ನಮಃ ಧ್ಯಾಯಾಮಿ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥**

ಬಳಿಕ ತಾಯಿಯನ್ನು ನೋಡಿ–

**ದಶೇಂದ್ರಿಯಸಮಾಯುಕ್ತಾಂ ಸ್ಥೂಲದೇಹವಿಧಾಯಿನೀಮ್ ।**
**ಧ್ಯಾಯೇಜ್ಜಯಾಂ ಗರ್ಭಧಾತ್ರೀಂ ವರಾಭಯಕರಾಂ ಶುಭಾಮ್ ॥**

**ಮಾತ್ರಂತರ್ಗತ ಕಮಲಾಯೈ ನಮಃ ಆವಾಹಯಾಮಿ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥**

ಅಕ್ಷತೆ ಹಿಡಿದುಕೊಂಡು, ತಂದೆಯನ್ನು ಕುರಿತು–

**ಇಹಾಗಚ್ಛೇಹ ತಿಷ್ಠೇಹ ಸನ್ನಿಧೇ ಹಿ ಪಿತಃ ಸದಾ ।**
**ಅಧಿಷ್ಠಾನಂ ಕುರುಷ್ವಾತ್ರ ಮಮ ಪೂಜಾಂ ಗೃಹಾಣ ಚ ॥**

**ಪಿತ್ರಂತರ್ಗತ ಗೋವಿಂದಾಯ ನಮಃ ಆವಾಹಯಾಮಿ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥** –ಎಂದು ಅಕ್ಷತೆಯನ್ನು ತಂದೆಯ ತಲೆಗೆ ಹಾಕಿ–

**ಹೇ ಪಿತ! ಆಜ್ಞಾಪಯ ಮಾತರಂ ಆವಾಹಯಾಮಿ ॥**

[**ತಥಾಸ್ತು**] ಎನ್ನಲು ತಾಯಿಯನ್ನು ಕುರಿತು ಅಕ್ಷತೆಯನ್ನು ಹಿಡಿದುಕೊಂಡು–

**ಇಹಾಗಚ್ಛೇಹ ತಿಷ್ಠೇಹ ಸನ್ನಿಧೇಹ್ಯಂಬ ಮೇ ಸದಾ ।**
**ಅಧಿಷ್ಠಾನಂ ಕುರುಷ್ವಾತ್ರ ಮಮ ಪೂಜಾಂ ಗೃಹಾಣ ಚ ॥**

**ಮಾತ್ರಂತರ್ಗತ ಪದ್ಮಾಯೈ ನಮಃ ಆವಾಹಯಾಮಿ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥** –ಎಂದು ತಲೆಗೆ ಅಕ್ಷತೆ ಹಾಕಿ ಆವಾಹಿಸಿ,

ತಂದೆಯ ಪಾದಗಳೆರಡನ್ನು ಹರಿವಾಣದಲ್ಲಿಟ್ಟು–

**ಪಿತ್ರಂತರ್ಗತ ವಿಷ್ಣವೇ ನಮಃ ಏತತ್ಪಾದ್ಯಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥** –ಎನ್ನುತ್ತಾ ನೀರಿನಿಂದ ತೊಳೆದು ಬೇರೆ ತೆಗೆದಿಟ್ಟು, ಕೈತೊಳೆದುಕೊಂಡು, ತಾಯಿಯ ಪಾದಗಳೆರಡನ್ನು ಹರಿವಾಣದಲ್ಲಿಟ್ಟು–

**ಮಾತ್ರಂತರ್ಗತ ಪದ್ಮಿನ್ಯೈ ನಮಃ ಏತತ್ಪಾದ್ಯಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥** –ಎಂದು ನೀರಿನಿಂದ ತೊಳೆದು ಬೇರೆ ತೆಗೆದಿಟ್ಟು ಕೈತೊಳೆದುಕೊಂಡು ಅಕ್ಷತೆ ನೀರು ಹಿಡಿದು ತಂದೆಯ ಕೈಗೆ ಕೊಟ್ಟು–

**ಪಿತ್ರಂತರ್ಗತ ಮಧುಸೂದನಾಯ ನಮಃ ಇದಮರ್ಘ್ಯಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥**

ಪುನಃ ಅಕ್ಷತೆ ನೀರು ಹಿಡಿದುಕೊಂಡು ತಾಯಿಯ ಕೈಗೆ ಕೊಟ್ಟು–

**ಮಾತ್ರಂತರ್ಗತ ಕಮಲಾಲಯಾಯೈ ನಮಃ ಇದಮರ್ಘ್ಯಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥**

ಒಂದು ಉದ್ಧರಣೆ ನೀರನ್ನು ತಂದೆಯ ಕೈಯಲ್ಲಿ ಕೊಟ್ಟು–

**ಪಿತ್ರಂತರ್ಗತ ತ್ರಿವಿಕ್ರಮಾಯ ನಮಃ ಇದಮಾಚಮನೀಯಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥**

ತಂದೆಯು ಆ ನೀರನ್ನು ತನ್ನ ತುಟಿಗೆ ಮುಟ್ಟಿಸಿ ಬಿಡಬೇಕು, ತಂದೆಯ ಕೈಗೆ ನೀರನ್ನು ಪ್ರೋಕ್ಷಣೆ ಮಾಡಿ, ತಾಯಿಯ ಕೈಗೆ ಒಂದು ಉದ್ಧರಣೆ ನೀರನ್ನು ಹಾಕಿ–

**ಮಾತ್ರಂತರ್ಗತ ರಮಾಯೈ ನಮಃ ಇದಮಾಚಮನೀಯಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥**

ತಾಯಿಯು ಆ ನೀರನ್ನು ತುಟಿಗೆ ಮುಟ್ಟಿಸಿ ಬಿಡಬೇಕು ತಾಯಿಯ ಕೈಗೆ ನೀರು ಪ್ರೋಕ್ಷಣೆ ಮಾಡಿ, ತಂದೆಯ ಹಣೆಗೆ ಗಂಧ ಮುಟ್ಟಿಸಿ–

**ಪಿತ್ರಂತರ್ಗತ ವಾಮನಾಯ ನಮಃ ಏಷೋ ಗಂಧಃ । ನಮಃ ಪಿತ್ರೇ ಜನ್ಮಧಾತ್ರೇ ಸರ್ವದೇವಮಯಾಯ ನಮಃ ॥**

ತಾಯಿಯ ಹಣೆಗೆ ಗಂಧ ಮುಟ್ಟಿಸಿ–

**ಮಾತ್ರಂತರ್ಗತ ವೃಷಾಕಪಾಯ್ಯೈ ನಮಃ ಏಷೋ ಗಂಧಃ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥**

ತಂದೆಗೆ ಹೂಕೊಟ್ಟು–

**ಪಿತ್ರಂತರ್ಗತ ಶ್ರೀಧರಾಯ ನಮಃ ಏತತ್ಪುಷ್ಪಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥**

ತಾಯಿಗೆ ಪುಷ್ಪ ಕೊಟ್ಟು–

**ಮಾತ್ರಂತರ್ಗತ ಧನ್ಯಾಯೈ ನಮಃ ಏತತ್ಪುಷ್ಪಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥**

ತಂದೆಗೆ ಧೂಪ ತೋರಿಸಿ–

**ಪಿತ್ರಂತರ್ಗತ ಹೃಷೀಕೇಶಾಯ ನಮಃ ಏಷೋ ಧೂಪಃ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥**

ತಾಯಿಗೆ ಧೂಪ ತೋರಿಸಿ–

**ಮಾತ್ರಂತರ್ಗತ ವೃದ್ಧ್ಯೈ ನಮಃ ಏಷೋ ಧೂಪಃ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥**

ತಂದೆಗೆ ದೀಪ ತೋರಿಸಿ–

**ಪಿತ್ರಂತರ್ಗತ ಪದ್ಮನಾಭಾಯ ನಮಃ ಏಷೋ ದೀಪಃ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥**

ತಾಯಿಗೆ ದೀಪ ತೋರಿಸಿ–

ಮಾತ್ರಂತರ್ಗತ ಯಜ್ಞಾಯೈ ನಮಃ ಏಷೋ ದೀಪಃ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥

ತಂದೆಗೆ ಒಂದು ಲೋಟ ಹಾಲನ್ನು ಕೊಟ್ಟು–

ಪಿತ್ರಂತರ್ಗತ ದಾಮೋದರಾಯ ನಮಃ ಏತನ್ನೈವೇದ್ಯಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥

ತಾಯಿಗೆ ಒಂದು ಲೋಟ ಹಾಲನ್ನು ಕೊಟ್ಟು–

ಮಾತ್ರಂತರ್ಗತ ಇಂದಿರಾಯೈ ನಮಃ ಏತನ್ನೈವೇದ್ಯಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥

ತಂದೆಗೆ ಒಂದು ಲೋಟ ನೀರು ಕೊಟ್ಟು–

ಪಿತ್ರಂತರ್ಗತ ಮಹಾವಿಷ್ಣವೇ ನಮಃ ಇದಂ ಪಾನಾರ್ಥಂ ಜಲಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥

ತಾಯಿಗೆ ಒಂದು ಲೋಟ ನೀರು ಕೊಟ್ಟು–

ಮಾತ್ರಂತರ್ಗತ ಶ್ರಿಯೈ ನಮಃ ಇದಂ ಪಾನಾರ್ಥಂ ಜಲಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥

ತಂದೆಗೆ ತಾಂಬೂಲ ಕೊಟ್ಟು–

ಪಿತ್ರಂತರ್ಗತ ವಾಸುದೇವಾಯ ನಮಃ ಇದಂ ತಾಂಬೂಲಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥

ತಾಯಿಗೆ ತಾಂಬೂಲ ಕೊಟ್ಟು–

ಮಾತ್ರಂತರ್ಗತ ಮಾಯಾಯೈ ನಮಃ ಇದಂ ತಾಂಬೂಲಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥

ಆರತಿ ಹಿಡಿದು–

ಪಿತ್ರಂತರ್ಗತ ಸಂಕರ್ಷಣಾಯ ನಮಃ ಇದಂ ನೀರಾಜನಮ್ । ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ ॥ –ಎಂದು ತಂದೆಗೆ ಆರತಿ ಮಾಡಿ,

ತಾಯಿಗೆ ಆರತಿ ಮಾಡುವುದು–

ಮಾತ್ರಂತರ್ಗತ ಜಯಾಯೈ ನಮಃ ಇದಂ ನೀರಾಜನಮ್ । ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ ॥

ತಂದೆಯ ಚರಣಾರವಿಂದದಲ್ಲಿ ನಮಸ್ಕಾರ ಮಾಡಿ-

ಪಿತ್ರಂತರ್ಗತ ಪ್ರದ್ಯುಮ್ನಾಯ ನಮಃ । ನಮಸ್ಕಾರಾನ್ ಸಮರ್ಪಯಾಮಿ ॥

ಪಿತಾ ಸ್ವರ್ಗಃ ಪಿತಾ ಧರ್ಮಃ ಪಿತಾ ಹಿ ಪರಮಂ ತಪಃ ।
ಪಿತರಿ ಪ್ರೀತಿಮಾಪನ್ನೇ ಪ್ರೀಯಂತೇ ಸರ್ವದೇವತಾಃ ॥

ತಾಯಿಯ ಪಾದಕಮಲದಲ್ಲಿ ನಮಸ್ಕಾರ ಮಾಡಿ-

ಮಾತ್ರಂತರ್ಗತ ಕೃತ್ಯೈ ನಮಃ । ನಮಸ್ಕಾರಾನ್ ಸಮರ್ಪಯಾಮಿ ॥

ಮಾತಾ ಧರಿತ್ರೀ ಜನನೀ ದಯಾರ್ದ್ರಹೃದಯಾ ಶಿವಾ ।
ತ್ವಾಂ ನಮಾಮಿ ಮಹಾಮಾಯಾ ನಿರ್ದೋಷಾ ಸರ್ವದುಃಖಹೃತ್ ॥

ತಂದೆಗೆ ಕೈ ಮುಗಿದು-

ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ಚ ।
ಸುಖದಾಯ ಪ್ರಸನ್ನಾಯ ಸುಪ್ರೀತಾಯ ಮಹಾತ್ಮನೇ ॥

ಸರ್ವಯಜ್ಞಸ್ವರೂಪಾಯ ಸ್ವರ್ಗಾಯ ಪರಮೇಷ್ಠಿನೇ ।
ಸರ್ವತೀರ್ಥಾವಲೋಕಾಯ ಕರುಣಾಸಾಗರಾಯ ಚ ॥

ನಮಃ ಸದಾಶುತೋಷಾಯ ಶಿವರೂಪಾಯ ತೇ ನಮಃ ।
ಸದಾಪರಾಧಕ್ಷಮಿಣೇ ಸುಖಾಯ ಸುಖದಾಯ ಚ ॥

ದುರ್ಲಭಂ ಮಾನುಷಮಿದಂ ಯೇನ ಲಬ್ಧಂ ಮಯಾ ವಪುಃ ।
ಸಂಭಾವನೀಯಂ ಧರ್ಮಾರ್ಥೇ ತಸ್ಮೈ ಪಿತ್ರೇ ನಮೋ ನಮಃ ॥

ತೀರ್ಥಸ್ನಾನತಪೋಹೋಮಜಪಾದಿರ್ಯಸ್ಯ ದರ್ಶನಮ್ ।
ಮಹಾಗುರೋಶ್ಚ ಗುರವೇ ತಸ್ಮೈ ಪಿತ್ರೇ ನಮೋ ನಮಃ ॥

ಯಸ್ಯ ಪ್ರಣಾಮಸ್ತವನಾತ್ ಕೋಟಿಶಃ ಪಿತೃತರ್ಪಣಮ್ ।
ಅಶ್ವಮೇಧಶತೈಸ್ತುಲ್ಯಂ ತಸ್ಮೈ ಪಿತ್ರೇ ನಮೋ ನಮಃ ॥

ಇದಂ ಸ್ತೋತ್ರಂ ಪಿತುಃ ಪುಣ್ಯಂ ಯಃ ಪಠೇತ್ ಪ್ರಯತೋ ನರಃ ।
ಪ್ರತ್ಯಹಂ ಪ್ರಾತರುತ್ಥಾಯ ಪಿತೃಶ್ರಾದ್ಧದಿನೇಽಪಿ ಚ ॥

ಸ್ವಜನ್ಮದಿವಸೇ ಸಾಕ್ಷಾತ್ ಪಿತುರಗ್ರೇ ಸ್ಥಿತೋಽಪಿ ವಾ ।
ನ ತಸ್ಯ ದುರ್ಲಭಂ ಕಿಂಚಿತ್ ಸರ್ವಜ್ಞತ್ವಾದಿ ವಾಂಛಿತಮ್. ॥

ನಾನಾಪಕರ್ಮಕೃತ್ವಾಽಪಿ ಯಃ ಸ್ತೌತಿ ಪಿತರಂ ಸುತಃ ।
ಸ ಧ್ರುವಂ ಪ್ರವಿಧಾಯ್ಯೈವ ಪ್ರಾಯಶ್ಚಿತ್ತಂ ಸುಖೀ ಭವೇತ್ ।
ಪಿತೃಪ್ರೀತಿಕರೋ ನಿತ್ಯಂ ಸರ್ವಕರ್ಮಾಣ್ಯಥಾರ್ಹತಿ ॥

–ಎಂದು ಪ್ರಾರ್ಥಿಸಿ, ತಾಯಿಗೆ ಕೈ ಮುಗಿದು–

ನಾಸ್ತಿ ಗಂಗಾಸಮಂ ತೀರ್ಥಂ ನಾಸ್ತಿ ವಿಷ್ಣುಸಮಃ ಪ್ರಭುಃ ।
ನಾಸ್ತಿ ಶಂಭುಸಮಂ ಪೂಜ್ಯೋ ನಾಸ್ತಿ ಮಾತೃಸಮೋ ಗುರುಃ ॥

ಮಾತಾ ಧರಿತ್ರೀ ಜನನೀ ದಯಾರ್ದ್ರಹೃದಯಾ ಶಿವಾ ।
ದೇವೀ ತ್ರಿಭುವನಶ್ರೇಷ್ಠಾ ನಿರ್ದೋಷಾ ಸರ್ವದುಃಖಹೃತ್ ॥

ಆರಾಧನೀಯಾ ಪರಮಾ ದಯಾ ಶಾಂತಿಃ ಕ್ಷಮಾ ಧೃತಿಃ ।
ಸ್ವಾಹಾ ಸ್ವಧಾ ಚ ಗೌರೀ ಚ ಪದ್ಮಾ ಚ ವಿಜಯಾ ಜಯಾ ॥

ದುಃಖಹಂತ್ರೀತಿ ನಾಮಾನಿ ಮಾತುರೇಕೈಕವಿಂಶತಿ ।
ಶೃಣುಯಾಚ್ಛ್ರಾವಯೇನ್ಮರ್ತ್ಯಃ ಸರ್ವದುಃಖಾದ್ವಿಮುಚ್ಯತೇ ॥

–ಎಂದು ಪ್ರಾರ್ಥಿಸಿ ಒಂದು ಉದ್ಧರಣೆ ನೀರು ಹಿಡಿದುಕೊಂಡು–

ಪಿತ್ರಂತರ್ಗತ ಅನಿರುದ್ಧಾಯ ನಮಃ । ಅಪರಾಧಂ ಕ್ಷಮ್ಯತಾಮ್ ॥

ನಮಃ ಪಿತ್ರೇ ಜನ್ಮದಾತ್ರೇ ಸರ್ವದೇವಮಯಾಯ ನಮಃ । ಪಿತಃ ಕ್ಷಮಸ್ವ ॥

– ಎಂದು ಹರಿವಾಣಕ್ಕೆ ಬಿಟ್ಟು, ಪುನಃ ನೀರು ಹಿಡಿದುಕೊಂಡು–

ಮಾತ್ರಂತರ್ಗತ ಶಾಂತ್ಯೈ ನಮಃ । ಅಪರಾಧಂ ಕ್ಷಮ್ಯತಾಮ್ ॥

ನಮೋ ಮಾತ್ರೇ ಗರ್ಭಧಾತ್ರ್ಯೈ ತ್ರಿಭುವನಶ್ರೇಷ್ಠಾಯೈ ನಮಃ । ಮಾತಃ ಕ್ಷಮಸ್ವ ॥

– ಎಂದು ಹರಿವಾಣಕ್ಕೆ ಬಿಟ್ಟು,

ಮಾತಾಪಿತ್ರಂತರ್ಗತಭಾರತೀರಮಣ ಮುಖ್ಯಪ್ರಾಣಾಂತರ್ಗತಲಕ್ಷ್ಮೀನಾರಾಯಣ ಪ್ರೀತ್ಯರ್ಥೇ ವರಾಹಪುರಾಣೋಕ್ತ ಪಿತೃಗೀತಾಪಠನಂ ಕರಿಷ್ಯೇ. ॥

ಪಿತೃಗೀತಾಂಸ್ತಥೈವಾತ್ರ ಶ್ಲೋಕಾಂಸ್ತಾಞ್ಛೃಣು ಸತ್ತಮ ।
ಶ್ರುತ್ವಾ ತಥೈವ ಭವಿತಾ ಭಾವ್ಯಂ ತತ್ರ ವಿಧಾತ್ಮನಾ ॥

ಅಪಿ ಧನ್ಯಃ ಕುಲೇ ಜಾಯಾದಸ್ಮಾಕಂ ಮತಿಮಾನ್ನರಃ ।
ಅಕುರ್ವನ್ ವಿತ್ತಶಾಠ್ಯಂ ಯಃ ಪಿಂಡಾನ್ನೋ ನಿರ್ವಪಿಷ್ಯತಿ ॥

ರತ್ನವಸ್ತ್ರಮಹಾಯಾನಂ ಸರ್ವತೋಽಯಾದಿಕಂ ವಸು ।
ವಿಭವೇ ಸತಿ ವಿಪ್ರೇಭ್ಯ ಅಸ್ಮಾನ್ನುದ್ದಿಶ್ಯ ದಾಸ್ಯತಿ ॥

ಅನ್ನೇನ ವಾ ಯಥಾ ಶಕ್ತ್ಯಾ ಕಾಲೇಽಸ್ಮಿನ್ ಭಕ್ತಿನಮ್ರಧೀಃ ।
ಭೋಜಯಿಷ್ಯತಿ ವಿಪ್ರಾಗ್ರ್ಯಾಂಸ್ತನ್ಮಾತ್ರವಿಭವೋ ನರಃ ॥

ಅಸಮರ್ಥೋಽನ್ನದಾನಸ್ಯ ವನ್ಯಶಾಕಂ ಸ್ವಶಕ್ತಿತಃ ।
ಪ್ರದಾಸ್ಯತಿ ದ್ವಿಜಾಗ್ರೇಭ್ಯಃ ಸ್ವಲ್ಪಂ ಯೋ ವಾಽಪಿ ದಕ್ಷಿಣಾಮ್ ॥

ತತ್ರಾಪ್ಯಸಾಮರ್ಥ್ಯಯುತಃ ಕರಾಗ್ರಸ್ಥಾಸಿತಾಂಸ್ತಿಲಾನ್ ।
ಪ್ರಣಮ್ಯ ದ್ವಿಜಮುಖ್ಯಾಯ ಕಸ್ಮೈ ಚಿದಪಿ ದಾಸ್ಯತಿ ॥

ತಿಲೈಃ ಸಪ್ತಾಷ್ಟಭಿರ್ವಾಽಪಿ ಸಮವೇತಂ ಜಲಾಂಜಲಿಮ್ ।
ಭಕ್ತಿ ನಮ್ರಃ ಸಮುದ್ದಿಶ್ಯ ಯೋಽಸ್ಮಾಕಂ ಸಂಪ್ರದಾಸ್ಯತಿ ॥

ಯತಃ ಕುತಶ್ಚಿತ್ ಸಂಪ್ರಾಪ್ಯ ಗೋಭ್ಯೋ ವಾಽಪಿ ಗವಾಹ್ನಿಕಮ್ ।
ಅಭಾವೇ ಪ್ರೀಣಯೇತ್ತಸ್ಮಾತ್ ಭಕ್ತ್ಯಾ ಯುಕ್ತಃ ಪ್ರದಾಸ್ಯತಿ ॥

ಸರ್ವಾಭಾವೇ ವನಂ ಗತ್ವಾ ಕಕ್ಷಾಮೂಲ ಪ್ರದರ್ಶಕಃ ।
ಸೂರ್ಯಾದಿಲೋಕಪಾಲಾನಾಮಿದಮುಚ್ಚೈಃ ಪಠಿಷ್ಯತಿ ॥

ನ ಮೇಽಸ್ತಿ ವಿತ್ತಂ ನ ಧನಂ ನ ಚಾನ್ಯ–
ಚ್ಛ್ರಾದ್ಧಸ್ಯ ಯೋಗ್ಯಂ ಸ್ವಪಿತೃನ್ನತೋಽಸ್ಮಿ ।
ತೃಪ್ಯಂತು ಭಕ್ತ್ಯಾ ಪಿತರೌ ಮಯೈತೌ
ಭುಜೌ ತತೌ ವರ್ತ್ಮನಿ ಮಾರುತಸ್ಯ ॥

ಇತ್ಯೇವ ಪಿತೃಭಿರ್ಗೀತಂ ಭಾವಾಭಾವಪ್ರಯೋಜನಮ್ ।
ಕೃತಂ ತೇನ ಭವೇಚ್ಛ್ರಾದ್ಧಂ ಯ ಏವಂ ಕುರುತೇ ದ್ವಿಜಃ ॥

ಎಂದು ಸ್ತುತಿಸಿ ಅಕ್ಕಿಕಾಳು ಹಿಡಿದುಕೊಂಡು–

ಪಿತ್ರಂತರ್ಗತನಾರಾಯಣಾಯ ನಮಃ । ಯಥಾಸ್ಥಾನಮುದ್ವಾಸಯಾಮಿ ॥

ಪುನಃ ಅಕ್ಕಿಕಾಳು ಹಿಡಿದುಕೊಂಡು–

ಮಾತ್ರಂತರ್ಗತ ಲಕ್ಷ್ಮ್ಯೈ ನಮಃ । ಯಥಾಸ್ಥಾನಮುದ್ವಾಸಯಾಮಿ ॥

ಎಂದು ಉದ್ವಾಸನೆ ಮಾಡಬೇಕು. ಅನಂತರ ಮತಾಪಿತೃಗಳ ಪಾದೋದಕವನ್ನು ಪ್ರೋಕ್ಷಣೆ ಮಾಡಿಕೊಳ್ಳಬೇಕು.

ಸದ್ಯಃ ಫಲಪ್ರದಂ ಪುಣ್ಯಂ ಸರ್ವಪಾಪವಿನಾಶನಮ್ ।
ಸರ್ವಮಂಗಲಮಾಂಗಲ್ಯಂ ಸರ್ವದುಃಖವಿನಾಶನಮ್ ॥

ಸರ್ವಶತ್ರುಪ್ರಶಮನಂ ಸರ್ವಭೋಗಪ್ರದಾಯಕಮ್ ।
ಸರ್ವತೀರ್ಥಸ್ಯ ಫಲದಂ ಮೂರ್ಧ್ನಿಪಾದಾಂಬುಧಾರಣಮ್. ॥

ಮಹಾಪಾಪಗ್ರಹಗ್ರಸ್ತಾ ವ್ಯಾಪ್ತಾ ರೋಗಶತೈರಪಿ ।
ಪಿತೃಪಾದೋದಕಂ ಪೀತ್ವಾ ಮುಚ್ಯಂತೇ ನಾತ್ರ ಸಂಶಯಃ ॥

ಕಾಯೇನ ವಾಚಾ ಮನಸಾ...... ಸಮರ್ಪಯಾಮಿ ॥
ಅನೇನ ಮಾತಾಪಿತ್ರಂತರ್ಗ ಲಕ್ಷ್ಮೀನಾರಾಯಣಃ ಪ್ರೀಯತಾಮ್ ॥

* * *



# ಮರಣಪೂರ್ವಪ್ರಾಯಶ್ಚಿತ್ತಾನಿ



ಸಾಧಾರಣವಾಗಿ ಪ್ರತಿಯೊಬ್ಬ ಮನುಷ್ಯನೂ ತನ್ನ ಅವಸಾನದ ಕಾಲವನ್ನು ಶಕುನಾದಿಗಳಿಂದ ತಿಳಿದಾಗ ಲೌಕಿಕ ವ್ಯವಹಾರಗಳಲ್ಲಿ ಮನಸಿಡದೆ ಆತ್ಮೋದ್ಧಾರಕ್ಕೆ ಸಂಬಂಧಪಟ್ಟ ಪುಣ್ಯಕರ್ಮಗಳನ್ನು ಮಾಡಿ ಸಾಂಪ್ರದಾಯಿಕಸ್ಥಿತಿಯನ್ನು ಸಂಪಾದಿಸಿಕೊಳ್ಳಬೇಕು

ತಂದೆತಾಯಿಯರು ದೈಹಿಕವಾಗಿ, ಮಾನಸಿಕವಾಗಿ ಶಕ್ತರಿರುವಾಗ ಅವರು ತಿಳಿದೋ ತಿಳಿಯದೆಯೋ ಮಾಡಿರತಕ್ಕ ಸಮಸ್ತಪಾಪಗಳ ಪರಿಹಾರಕ್ಕಾಗಿ ಮಗನಾದವನು ಅವರಿಂದ ಪ್ರಾಯಶ್ಚಿತ್ತ ಸತ್ಕರ್ಮಗಳನ್ನು ತಾನೇ ನಿಂತು ಅವರಿಂದ ಮಾಡಿಸಬೇಕು. ಹಿಂದಿನ ದಿನ ಪ್ರಾಯಶ್ಚಿತ್ತದ ಉದ್ದೇಶಕ್ಕೆ ವೇದೋತ್ಪನ್ನರಾದ ನಾಲ್ಕೈದು ಬ್ರಾಹ್ಮಣರನ್ನು ಹಾಗೂ ಗೋದಾನಾದಿಗಳಿಗೆ ಪ್ರತ್ಯೇಕವಾಗಿ ಬ್ರಾಹ್ಮಣರನ್ನು ಆಮಂತ್ರಿಸಬೇಕು.

ಮರುದಿನ ಬೆಳಗ್ಗೆ ನಿತ್ಯಕರ್ಮಗಳನ್ನು ಮಾಡಿ ವೇದಜ್ಞರಾದ ಬ್ರಾಹ್ಮಣರಿಗೆ ಆಸನಾದಿ ತಾಂಬೂಲ ದಕ್ಷಿಣೆಗಳನ್ನು ನೀಡಿ ತನ್ನ ಪಾಪಾದಿಗಳ ನಿವಾರಣೆಗೆ ತನ್ನ ಶಕ್ತ್ಯನುಸಾರ ಬ್ರಾಹ್ಮಣರ ವಚನದಂತೆ ಪ್ರಾಯಶ್ಚಿತ್ತಾದಿಗಳನ್ನು ಮಾಡಬೇಕು.

## ಬ್ರಹ್ಮದಂಡಃ

ಅಕ್ಕಿಹಿಡಿದು,

**ಬ್ರಾಹ್ಮಣೇಭ್ಯೋ ಮಹದ್ಭ್ಯಶ್ಚ ವೇದವಿದ್ಭ್ಯೋ ವಿಶೇಷತಃ ।**
**ಪುರಾಣಶಾಸ್ತ್ರವಿದ್ಭ್ಯಶ್ಚ ಸರ್ವೇಭ್ಯೋ ವೈ ನಮೋ ನಮಃ ॥**

–ಎಂದು ಬ್ರಾಹ್ಮಣರಿಗೆ ಹಾಕಿ ಸ್ವಾಗತಿಸಿ, ಹದಿನಾಲ್ಕು ಚಿಲ್ಲರೆ, ದರ್ಭೆ ತುಲಸಿ ಹೂ ಹಿಡಿದು–

**ಸಮಸ್ತಸಂಪತ್ ಸಮವಾಪ್ತಿಹೇತವಃ ಸಮುತ್ಥಿತಾಪತ್ಕುಲಧೂಮಕೇತವಃ ।**
**ಅಪಾರಸಂಸಾರಸಮುದ್ರಸೇತವಃ ಪುನಂತು ಮಾಂ ಬ್ರಾಹ್ಮಣಪಾದಪಾಂಸವಃ ॥**

ಮಂತ್ರವನ್ನು ಪಠಿಸುತ್ತಾ ಬ್ರಾಹ್ಮಣರಿಗೆ ಮೂರು ಪ್ರದಕ್ಷಿಣೆ ಬಂದು ಬ್ರಾಹ್ಮಣರ ಎದುರಿಟ್ಟು–

**ಹೇ ಪರಿಷತ್ ಮಮ ತತ್ರಸ್ಥೇ ತಮುಸ್ಸಾರ್ಯ ತಸ್ಯ ಶರೀರದ್ರವ್ಯಾಕಾರ–ಶಕ್ತ್ಯಾದಿಕಮ್ ಉತ್ತಮಮಧ್ಯಮಾದಿ ಭಕ್ಷಾಂಶ್ಚ ವಿಚಾರ್ಯ ಅಸ್ಮಿನ್ ಪಕ್ಷೇ ಅಯಂ ಶಕ್ತ ಇತಿ ನಿಶ್ಚಿನಿಯುಃ ತತಸ್ತೇ ಅನುವಾದಾರ್ಥಮ್ ಅನುವಾದಕಂ ಕಲ್ಪಯೇತಿ ಬ್ರೂಯುಃ ॥** ಎಂದು ಬ್ರಾಹ್ಮಣರಲ್ಲಿ ನಿವೇದನೆ ಮಾಡಿಕೊಳ್ಳಬೇಕು.

## ಪುಸ್ತಕಾದಿಪೂಜಾ

ಯಜಮಾನನು ಶಾಸ್ತ್ರಗ್ರಂಥಗಳನ್ನು ವ್ಯಾಸಪೀಠದಲ್ಲಿಟ್ಟು ಗಂಧಪುಷ್ಪಾದಿಗಳಿಂದ ಅಲಂಕರಿಸಿ ದಕ್ಷಿಣೆ ಇಟ್ಟು ಬ್ರಾಹ್ಮಣರನ್ನು ಆಮಂತ್ರಿಸಿ ಉತ್ತರಮುಖವಾಗಿ ಉತ್ತಮ ಆಸನದಲ್ಲಿ ಕುಳ್ಳಿರಿಸಿ–

**ಪ್ರಾಣಸ್ಥಲಕ್ಷ್ಮೀನಾರಾಯಣಸ್ವರೂಪಿಣೇ ಬ್ರಾಹ್ಮಣೇಭ್ಯ ಇದಮಾಸನಮ್ । ಲಕ್ಷ್ಮೀ ನಾರಾಯಣಂ ಭವತ್ಸು ಆವಾಹಯಿಷ್ಯೇ ॥ ಇದಂ ತೇ ಪಾದ್ಯಮ್ । ಇದಂ ವೋ ಅರ್ಘ್ಯಮ್ । ಗಂಧಾದಿಸಕಲಾರಾಧನೈಃ ಸ್ವರ್ಚಿತಮ್ । ಇಮಾಂ ಭೃತಿರೂಪಾಂ ದಕ್ಷಿಣಾಮ್ ಅನುವಾದಕಾಯ ತುಭ್ಯಮಹಂ ಸಂಪ್ರದದೇ । ನ ಮಮ ನ ಮಮ ।**

ಅನಂತರ ಅನುವಾದಕರು ಪ್ರಾಯಶ್ಚಿತ್ತವನ್ನು ಹೇಳಬೇಕು.

**ಅನುವಾದಕಃ – ..... ಶರ್ಮಣಃ ......ಗೋತ್ರಸ್ಯ** ಜನ್ಮಪ್ರಭೃತಿ ಏತತ್ಕಾಲಪರ್ಯಂತಂ **(ಮರಣ ಕಾಲಪರ್ಯಂತಂ) ಮಹಾಪಾತಕ ವ್ಯತಿರಿಕ್ತಾನಾಂ ಪೂರ್ವೋಕ್ತ ಪಾತಕಾನಾಂ ಕ್ಷಯ ಅನೇನ ಪರಿಷದುಪದಿಷ್ಟೇನ ಪ್ರತಿಕೃಚ್ಛ್ರಮ್ ಏತತ್ ಪ್ರತ್ಯಾಮ್ನಾಯ ಗೋನಿಷ್ಕ್ರ–ಯಾದಿದಾನೇನ ಸರ್ವಪ್ರಾಯಶ್ಚಿತ್ತೇನ 'ಅಮುಕ' ಪ್ರತ್ಯಾಮ್ನಾಯದ್ವಾರಾ ಪ್ರಾಚ್ಯೋದೀ–ಚ್ಯಾಂಗ ಸಹಿತೇನ ಅಚೀರ್ಣೇನ ಭವಿಷ್ಯತಿ । ತೇನ ತವ ಶುದ್ಧಿರ್ಭವಿಷ್ಯತಿ । ತ್ವಂ ಕೃತಾರ್ಥೋ ಭವಿಷ್ಯತಿ ॥** –ಎಂದು ಮೂರು ಬಾರಿ ಹೇಳಬೇಕು ಆಗ ಯಜಮಾನನು **'ಭವದನುಗ್ರಹಃ'** ಎಂದು ಬ್ರಾಹ್ಮಣರನ್ನು ಸಮ್ಮಾನಿಸಿ ಪರಿಷತ್ತನ್ನು ವಿಸರ್ಜಿಸಬೇಕು.

## ಪ್ರಾಜಾಪತ್ಯಕೃಚ್ಛ್ರಮ್

ಮೂರು ದಿನ ಬೆಳಗ್ಗೆ ಮಾತ್ರ ಭೋಜನ, ಮೂರುದಿನ ಸಾಯಂಕಾಲ ಮಾತ್ರ ಭೋಜನ, ಮೂರುದಿನ ತಾನಾಗಿ ಲಭ್ಯವಾದರೆ ಮಾತ್ರ ಭೋಜನ, ಮೂರುದಿನ ಉಪವಾಸ – ಹೀಗೆ ಒಟ್ಟು ಹನ್ನೆರಡು ದಿನದ **ಪ್ರಾಜಾಪತ್ಯಕೃಚ್ಛ್ರ** ಎಂದು ಹೇಳುತ್ತಾರೆ.

ಅಶಕ್ತನಾದಲ್ಲಿ ಹನ್ನೆರಡು ಸಾವಿರ ಸಂಖ್ಯೆಯಲ್ಲಿ ಗಾಯತ್ರೀಮಂತ್ರ ಜಪ, ಹೋಮ ಮಾಡಿ ಹನ್ನೆರಡು ವಿಪ್ರರ ಆರಾಧನೆ ಮಾಡಬೇಕು.

ನಿಷ್ಕಮ್ : ತನ್ನ ಶಕ್ತ್ಯನುಸಾರ ಹಿರಣ್ಯದಾನ ಮಾಡಬೇಕು.

**ಓಮ್ ಇದಂ ಮೇ ಜ್ಯೋತಿರಮೃತಂ ಹಿರಣ್ಯಂ ಪಕ್ವಂ ಕ್ಷೇತ್ರಾತ್ ಕಾಮದುಘಾ ಮ ಏಷಾ । ಇದಂ ಧನಂ ನಿದಧೇ ಬ್ರಾಹ್ಮಣೇಷು ಕೃಣ್ವೇ ಪಂಥಾಂ ಪಿತೃಷು ಯಃ ಸ್ವರ್ಗಃ ॥**

**ವಪನಮ್ :**

**ಅದ್ಯ ಪೂರ್ವೋಚ್ಚರಿತ ......ಶರ್ಮಣಃ ಜನ್ಮಪ್ರಭೃತಿ ಅದ್ಯ ಯಾವತ್ ಜ್ಞಾತಾಜ್ಞಾತ ಕೃತ ಸಂಭಾವಿತ ನವವಿಧಾನಾಂ ಪಾಪಾನಾಂ ನಿರಸನಪೂರ್ವಕ ಮರಣಕಾಲೇ ದೇಹಶುದ್ಧ್ಯರ್ಥಂ ಪ್ರಾಣಸ್ಥಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಪರಿಷದುಪದಿಷ್ಟಂ (ಅಮುಕ) ಪ್ರಾಯಶ್ಚಿತ್ತಂ ತತ್ಪ್ರತ್ಯಾಮ್ನಾಯ ಗೋನಿಷ್ಕ್ರಯಾದಿ ದಾನದ್ವಾರಾ ಪ್ರಾಚ್ಯೋದೀಚ್ಯಾಂಗ ಸಹಿತ ಯಥಾಶಕ್ತಿ ವಪನಮಾಚರಿಷ್ಯೇ ॥** –ಎಂದು ಸಂಕಲ್ಪಿಸಿ ಕ್ಷೌರ ಮಾಡಿಕೊಳ್ಳಬೇಕು. ಅಶಕ್ತನಾದಲ್ಲಿ ಎರಡರಷ್ಟು ಪರಿಷದ್ದಕ್ಷಿಣೆ ಕೊಡಬೇಕು.

## ದಶವಿಧಸ್ನಾನಮ್

**ದಂತಶೋಧನಮ್ :**

ಕ್ಷೌರದ ಅನಂತರ ಪೂರ್ವಾಭಿಮುಖವಾಗಿ ಕುಳಿತು,

**ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ ।**
**ಬ್ರಹ್ಮ ಪ್ರಜ್ಞಾಂ ಚ ಮೇಧಾಂ ಚ ತ್ವನ್ನೋ ದೇಹಿ ವನಸ್ಪತೇ ॥**

–ಎಂದು ಪ್ರಾರ್ಥಿಸಿ ಅಪಾಮಾರ್ಗಸಮಿಧೆಯಿಂದ–

**ಮುಖದುರ್ಗಂಧನಾಶಾಯ ದಂತಾನಾಂ ಚ ವಿಶುದ್ಧಯೇ ।**
**ಷ್ಠೀವನಾಯ ಚ ಗಾತ್ರಾಣಾಂ ದಂತಾನ್ ಸಂಶೋಧಯಾಮ್ಯಹಮ್ ॥**

ಹಲ್ಲುಜ್ಜಿ ಇನ್ನೊಂದು ಸಮಿಧೆಯಿಂದ ಜಿಹ್ವಾಲೇಪನ ಮಾಡಿ ಹನ್ನೆರಡು ಬಾರಿ ಬಾಯಿ ಮುಕ್ಕಳಿಸಿ ಆಚಮನ ಮಾಡಿ ಭಸ್ಮಾದಿಯಾಗಿ ದಶವಿಧ ಸ್ನಾನ ಮಾಡಬೇಕು

**ಭಸ್ಮಸ್ನಾನಮ್ :**

ಭಸ್ಮ ಹಿಡಿದು–

**ಓಮ್ ಈಶಾನಃ ಸರ್ವವಿದ್ಯಾನಾಂ....ಸದಾಶಿವೋಮ್ ॥** ಎಂದು ಶಿರಸ್ಸಿನಲ್ಲಿ,
**ಓಂ ತತ್ಪುರುಷಾಯ......ಪ್ರಚೋದಯಾತ್ ॥** ಎಂದು ಮುಖಕ್ಕೆ,

**ಓಮ್ ಅಘೋರೇಭ್ಯೋ...ರೂಪೇಭ್ಯಃ** ॥ ಎಂದು ಹೃದಯದಲ್ಲಿ,
**ಓಂ ವಾಮದೇವಾಯ....ಮನೋನ್ಮನಾಯ ನಮಃ** ॥ ಎಂದು ಗುಹ್ಯದಲ್ಲಿ,
**ಓಂ ಸದ್ಯೋ ಜಾತಂ ..... ನಮಃ** ॥ ಎಂದು ಪಾದಗಳೆರಡಕ್ಕೆ ಹಚ್ಚಿ,
**ಓಮ್** ಎಂದು ಪ್ರಣವದಿಂದ ಸರ್ವಾಂಗಕ್ಕೆ ಹಚ್ಚಿ,

**ಓಮ್ ಯದ್ವಾ ಅಗ್ನಿರಿತಿ ಭಸ್ಮ । ವಾಯುರಿತಿ ಭಸ್ಮ । ಜಲಮಿತಿ ಭಸ್ಮ । ಸ್ಥಲಮಿತಿ ಭಸ್ಮ । ವ್ಯೋಮೇತಿ ಭಸ್ಮ । ಸರ್ವಗ್ಂ ವಾ ಇದಂ ಭಸ್ಮ ।**

ಎಂದು ಹಚ್ಚಿ ಸ್ನಾನ ಮಾಡಿ

**ಗೋಮಯಸ್ನಾನಮ್ :**

**ಗಂಧದ್ವಾರಾಂ ದುರಾಧರ್ಷಾಂ ...... ಹ್ವಯೇ ಶ್ರಿಯಮ್ ।**

– ಮಂತ್ರದಿಂದ ಗೋಮಯ ಹಚ್ಚಿ ಸ್ನಾನಮಾಡಿ,

**ಮೃತ್ತಿಕಾಸ್ನಾನಮ್ :**

**ಓಂ ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ । ದೂರೇದೃಶೇ ದೇವಜಾತಾಯ ಕೇತವೇ ದಿವಸ್ಪುತ್ರಾಯ ಸೂರ್ಯಾಯ ಶಂಸತ** ॥ –ಎಂದು ಸೂರ್ಯದೇವನಿಗೆ ತೋರಿಸಿ,

**'ಸ್ಯೋನಾ ಪೃಥಿವೀ....'** ಮಂತ್ರದಿಂದ ಸರ್ವಾಂಗಕ್ಕೆ ಹಚ್ಚಿ ಸ್ನಾನ ಮಾಡಿ,

**ಪಂಚಗವ್ಯಸ್ನಾನಮ್ :**

**ಓಂ ಪಂಚಜನಾ ಮಮ ಹೋತ್ರಂ ಜುಷಂತಾಂ ಗೋಜಾತಾ ಉತ ಯೇ ಯಜ್ಞಿಯಾಸಃ । ಪೃಥಿವೀ ನಃ ಪಾರ್ಥಿವಾತ್ ಪಾತ್ವಂಹಸೋಽಂತರಿಕ್ಷಂ ದಿವ್ಯಾತ್ ಪಾತ್ವಸ್ಮಾನ್** ॥ –ಎಂದು ಪಂಚಗವ್ಯದಿಂದ ಸ್ನಾನ ಮಾಡಬೇಕು.

**ಶುದ್ಧೋದಕಸ್ನಾನಮ್ :**

ಅಘಮರ್ಷಣಸೂಕ್ತ ಪಠಿಸುತ್ತಾ **'ಋತಂ ಚ ಸತ್ಯಂ ............. ಸ್ವಾಹಾ ॥'** ಎಂದು ಮೂರು ಬಾರಿ ಮುಳುಗಿ ಸ್ನಾನಮಾಡಿ ಕೈಯಿಂದ ಶಂಖಮುದ್ರೆ ಮಾಡಿ ನೀರನ್ನು ಎತ್ತಿ **ಪುರುಷಸೂಕ್ತ**ದಿಂದ ತಲೆಗೆ ಹಾಕಿಕೊಳ್ಳುತ್ತಾ ಸ್ನಾನ ಮಾಡಿ ತಲೆ ಒರಸಿಕೊಂಡು

ಪುಂಡ್ರಧಾರಣೆ ಮಾಡಿ **'ಸ್ನಾನಾಂಗತರ್ಪಣಂ ಕರಿಷ್ಯೇ ॥'** ಎಂದು ಸಂಕಲ್ಪಿಸಿ, ಸ್ನಾನಾಂಗತರ್ಪಣವನ್ನು ಕೊಟ್ಟು ಸಂಧ್ಯಾವಂದನೆ ಮಾಡಿ ನೀರು ಹಿಡಿದುಕೊಂಡು ಮನೆಗೆ ಹೋಗಿ ದೇವರ ಪೂಜೆ ಮಾಡುವವನಾಗಬೇಕು.

**ವಿಷ್ಣುಶ್ರಾದ್ಧಮ್ :**

**ಸರ್ವಪ್ರಾಯಶ್ಚಿತ್ತಪೂರ್ವಾಂಗತ್ವೇನ ವಿಹಿತಂ ವಿಷ್ಣುಶ್ರಾದ್ಧಂ ಕರಿಷ್ಯೇ ।**

ದೇವರ ಪೂಜೆಯ ಸಮಯದಲ್ಲಿ ಕಲಶಪ್ರತಿಷ್ಠಾಪನೆ ಮಾಡಿ ಗಂಗೆಯ ತೀರ್ಥವಿದ್ದಲ್ಲಿ ಕಲಶಕ್ಕೆ ಹಾಕಿ ಪವಮಾನಸೂಕ್ತಾಭಿಮಂತ್ರಣ ಮಾಡಿ ದೇವರಿಗೆ ಪವಮಾನಕಲಶ ಅಭಿಷೇಕ ಮಾಡಿ ಅಪೂಪಮೋದಕಾದಿಗಳನ್ನು ಸಮರ್ಪಿಸಿ ಆರತಿ ಮಾಡಿ ಬ್ರಾಹ್ಮಣರನ್ನು ಸ್ವಾಗತಿಸಿ,

**ಸರ್ವಪ್ರಾಯಶ್ಚಿತ್ತಾಂಗಾದ್ಯ ವಿಷ್ಣುಶ್ರಾದ್ಧಸಂಪತ್ತಯೇ ವಿಷ್ಣೋರ್ದ್ದೇಶೇನ ತ್ರಿಭ್ಯೋಽಧಿಕ ಬ್ರಾಹ್ಮಣಾನ್ ಭೋಜಯಿಷ್ಯೇ ।**

ಮೂರಕ್ಕಿಂತ ಹೆಚ್ಚು ವಿಪ್ರರ ಆರಾಧನೆ ಮಾಡಬೇಕು. ಅಶಕ್ತನಾದಲ್ಲಿ ಆಮಾನ್ನದಾನ ಕೊಡಬೇಕು.

**ಪೂರ್ವಾಂಗಹೋಮಃ :**

**ಪ್ರಾಣಸ್ಥಲಕ್ಷ್ಮೀನಾರಾಯಣಪ್ರೀತ್ಯರ್ಥಂ ಸರ್ವಪ್ರಾಯಶ್ಚಿತ್ತ ಪೂರ್ವಾಂಗಹೋಮಂ ಕರಿಷ್ಯೇ ॥ ತದಂಗ ಪಂಚಗವ್ಯ ಪುಣ್ಯಾಹ ವಾಚನಂ ಕರಿಷ್ಯೇ ॥**

–ಎಂದು ಪುಣ್ಯಾಹ ಮಾಡಿ ವಿಟಪನಾಮಾಗ್ನಿಯನ್ನು ಪ್ರತಿಷ್ಠಾಪಿಸಿ ಅನ್ವಾಧಾನ ಮಾಡಬೇಕು.

**ಅತ್ರ ಪ್ರಧಾನಮ್ :**

**ಪಾಪಾಪಹ ಮಹಾವಿಷ್ಣುಂ ಪ್ರಣವ ವ್ಯಸ್ತಸಮಸ್ತವ್ಯಾಹೃತಿಭಿಃ ಅಷ್ಟೋತ್ತರಶತವಾರಮ್ ಆಜ್ಯೇನ, ಪುನಃ ಇರಾವತೀತಿ ಪೃಥಿವೀಂ, ಇದಂ ವಿಷ್ಣುರಿತಿ ವಿಷ್ಣುಂ, ಮಾನಸ್ತೋಕೇತಿ ರುದ್ರಂ, ಬ್ರಹ್ಮಜ್ಞಾನ ಮಿತಿ ಬ್ರಹ್ಮಾಣಮ್, ಅಗ್ನಿಂ ದೂತಮಿತಿ ಅಗ್ನಿಮ್, ಆಪ್ಯಾಯಸ್ವೇತಿ ಸೋಮಮ್, ಗಾಯತ್ರ್ಯಾ ಸವಿತಾರಂ, ಪ್ರಣವೇನ ಆತ್ಮಾನಮ್, ಪ್ರಜಾಪತೇತಿ ಪ್ರಜಾಪತಿಮ್, ಅಗ್ನಯೇ ಸ್ವಿಷ್ಟಕೃತೇ ಸ್ವಾಹೇತಿ ಅಗ್ನಿಂ ಸ್ವಿಷ್ಟಕೃತಂ ಚ ದಶದೇವತಾಃ ಜಲಕೂರ್ಚೇನ ಏಕೈಕಸಂಖ್ಯಯಾ ಪಂಚಗವ್ಯದ್ರವ್ಯೇಣ ಆಜ್ಯಶೇಷೇಣ ಸ್ವಿಷ್ಟಕೃತಮ್ ॥** –ಎಂದು ಅನ್ವಾಧಾನ ಮಾಡಿ ಹೋಮವನ್ನು ಪೂರ್ಣಗೊಳಿಸಬೇಕು.

**ವ್ರತಗ್ರಹಣಮ್ :**

**ವ್ರತಗ್ರಹಣಂ ಕರಿಷ್ಯೇ ।** ಎಂದು ಪಾಲಾಶದ ಎಲೆಯ ದೊಣ್ಣೆ ಮಾಡಿ ಹೋಮದಲ್ಲಿ ಉಳಿದ ಎಲ್ಲಾ ಪಂಚಗವ್ಯವನ್ನು **'ಯತ್ವಗಸ್ಥಿಗತಂ...'** ಮಂತ್ರದಿಂದ ಕುಡಿಯಬೇಕು ಅಶಕ್ತನಾದಲ್ಲಿ ಪಂಚಗವ್ಯ ಹೋಮ ಮಾಡಬೇಕು.

**ಉತ್ತರಾಂಗಾನಿ :**

**ಸರ್ವಪ್ರಾಯಶ್ಚಿತ್ತಸ್ಯ ಸಾಂಗತಾ ಸಿದ್ಧ್ಯರ್ಥಮ್ ಉತ್ತರಾಂಗಾನಿ ಕರಿಷ್ಯೇ ॥**

ವಿಟಪನಾಮಾಗ್ನಿಯನ್ನು ಪ್ರತಿಷ್ಠಾಪಿಸಿ ಅನ್ವಾಧಾನ ಮಾಡಬೇಕು.

**ಅತ್ರ ಪ್ರಧಾನಮ್ :**

**ವ್ಯಸ್ತಸಮಸ್ತವ್ಯಾಹೃತಿಭಿಃ ಪ್ರತ್ಯೇಕಂ ಪ್ರತ್ಯೇಕಂ ಸಪ್ತವಿಂಶತಿ ವಾರಮ್ ಆಜ್ಯೇನ** –ಎಂದು ಅನ್ವಾಧಾನ ಮಾಡಿ ಹೋಮವನ್ನು ಪೂರ್ಣಗೊಳಿಸಬೇಕು.

**ಪ್ರಾಯಶ್ಚಿತ್ತೋತ್ತರಾಂಗತ್ವೇನ ವಿಷ್ಣುಶ್ರಾದ್ಧಂ ಕರಿಷ್ಯೇ ॥** –ಎಂದು ಸಂಕಲ್ಪಿಸಿ, ದೇವರಿಗೆ ಉತ್ತರಪೂಜೆ ಮಾಡಿ ಬ್ರಾಹ್ಮಣರನ್ನು ಸ್ವಾಗತಿಸಿ ಗೋದಾನ ದಶದಾನಗಳನ್ನು ನೀಡಿ ಬ್ರಾಹ್ಮಣರ ಆರಾಧನೆಯನ್ನು ಮಾಡಿ ಆಶೀರ್ವಾದ ಪಡೆದುಕೊಳ್ಳಬೇಕು.

## ಪಂಚಗೋದಾನವಿಧಿಃ



**ಶುಭಪುಣ್ಯತಿಥೌ** .... ಪ್ರಾಣಸ್ಥಶ್ರೀಮಹಾವಿಷ್ಣುಪ್ರೇರಣಯಾ ಶ್ರೀಮಹಾವಿಷ್ಣು ಪ್ರೀತ್ಯರ್ಥಂ ಮಮ ಜನ್ಮಪ್ರಭೃತಿ ಏತಾವತ್ಕಾಲಪರ್ಯಂತಂ ಬಾಲ್ಯ–ಕೌಮಾರ–ಯೌವನ–ವಾರ್ಧಕ್ಯಾದ್ಯವಸ್ಥಾಸು ಜಾಗ್ರತ್–ಸ್ವಪ್ನ–ಸುಷುಪ್ತ್ಯವಸ್ಥಾಸು ಮನೋವಾಕ್ಕಾಯಕರ್ಮಭಿಃ ಕರ್ಮೇಂದ್ರಿಯೈಃ ಜ್ಞಾನೇಂದ್ರಿಯೈಶ್ಚ ಜನ್ಯವ್ಯಾಪಾರೈಃ ಜ್ಞಾತಾ–ಜ್ಞಾತಕಾಮಾಕಾಮಸಕೃದಸಕೃತ್ಕಾಯಿಕವಾಚಿಕಮಾನಸಿಕಸ್ಪೃಷ್ಟಾಸ್ಪೃಷ್ಟಭುಕ್ತಾಭುಕ್ತ ಪೀತಾಪೀತಾದೀನಾಂ ಬ್ರಹ್ಮಹತ್ಯಾಸುರಾಪಾನಸ್ವರ್ಣಸ್ತೇಯಗುರುದಾರಗಮನತತ್ ಸ್ಸಂಯೋಗಿತ್ವರೂಪಪಂಚಮಹಾಪಾತಕಾನಾಂ ಗುರುನಿಂದಾದ್ಯತಿಪಾತಕಾನಾಂ ಗೋವಧಾದ್ಯುಪಪಾತಕಾನಾಮ್ ಅಗಮ್ಯಾಗಮನಾದ್ಯನುಪಾತಕಾನಾಂ ಗರ್ದಭ ವಧಾದಿಸಂಕಲೀಕರಣಾನಾಂ ಕ್ರಿಮಿಕೀಟವಧಾದಿಮಲಿನೀಕರಣಾನಾಂ ಮದ್ಯಗಂಧಾ–

ದ್ಯಾಘ್ರಾಣಾದಿಜಾತಿಭ್ರಂಶಾನಾಂ ಶೂದ್ರಸೇವಾದ್ಯಪಾತ್ರೀಕರಣಾನಾಂ ವಿಹಿತ ಕರ್ಮಪರಿತ್ಯಾಗಾದಿಪ್ರಕೀರ್ಣಕಾನಾಂ ನವಾನಾಂ ನವವಿಧಾನಾಂ ಬಹೂನಾಂ ಬಹು-ವಿಧಾನಾಂ ರಹಸಿ ಕೃತಾನಾಂ ಪ್ರಕಾಶಕೃತಾನಾಂ ಪಾಪಾನಾಂ ಮಧ್ಯೇ ಸಂಭಾವಿತಾಶೇಷ-ಪಾಪಕ್ಷಯದ್ವಾರಾ ಸಕಲಪಾಪಾಪಹಶ್ರೀಮಹಾವಿಷ್ಣುಪ್ರೀತ್ಯರ್ಥಂ ಮಮ ಸುಖೇನ ಪ್ರಾಣೋತ್ಕ್ರಮಣಾರ್ಥಂ ಸರ್ವಪ್ರಾಯಶ್ಚಿತ್ತಾರ್ಥಂ ನಾನಾ ಗೋತ್ರೇಭ್ಯಃ ಬ್ರಾಹ್ಮಣೇಭ್ಯಃ ಸಾಕ್ಷಾತ್‌ಪಂಚಸವತ್ಸಗೋದಾನ(ಪ್ರತ್ಯಾಮ್ನಾಯ ರಜತದಾನಂ ಹಿರಣ್ಯದಾನಂ ವಾ)ಪೂರ್ವಕ ಪ್ರಾಜಾಪತ್ಯಕೃಚ್ಛ್ರಪ್ರತ್ಯಾಮ್ನಾಯ ಯಥಾಶಕ್ತಿ ಹಿರಣ್ಯದಾನಂ, ದಶದಾನಂ, ಜಲದಾನಂ, ದೀಪದಾನಂ ಚ ಸದ್ಯಃ ಕರಿಷ್ಯೇ ॥ –ಎಂದು ಸಂಕಲ್ಪಿಸಿ ದಾನಗಳನ್ನು ನೀಡಬೇಕು.

ಸವತ್ಸಪಂಚಗೋದಾನಂ ಕರಿಷ್ಯೇ ॥ ಗವಾಂತರ್ಗತ ಪ್ರಾಣಸ್ಥಗೋಪಾಲಕೃಷ್ಣಾಯ ನಮಃ ॥ –ಎಂದು ಕೈಮುಗಿದು,

ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವ ಚ ।<br>ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ॥

ಸೌರಭೇಯಿ ಸರ್ವಹಿತೇ ಪವಿತ್ರೇ ಪಾಪನಾಶಿನಿ ।<br>ಜಗದ್ವಂದ್ಯೇ ಜಗತ್ಪೂಜ್ಯೇ ಮನೋಽಭೀಷ್ಟಾರ್ಥದೇ ಶುಭೇ ॥

ಲಕ್ಷ್ಮೀಸ್ವರೂಪಾಂ ಪರಮಾಂ ರಾಧಾಸಹಚರೀಂ ಪರಾಮ್ ।<br>ಗವಾಮಧಿಷ್ಠಾತು ದೇವೀಂ ಗವಾಂ ಮಧ್ಯಾಂ ಗವಾಂ ಪ್ರಸೂಮ್ ॥

ಪವಿತ್ರರೂಪಾಂ ಪೂತಾಂ ಚ ಭಕ್ತಾನಾಂ ಸರ್ವಕಾಮದಾಮ್ ।<br>ಯಯಾ ಪೂತಂ ಸರ್ವವಿಶ್ವಂ ತಾಂ ದೇವೀಂ ಸುರಭಿಂ ಭಜೇ ॥

–ಎಂದು ಪ್ರಾರ್ಥಿಸಿ ದನದ ನಾಲ್ಕು ಕಾಲುಗಳಿಗೆ ನೀರು ಹಾಕಿ,

ಓಂ ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿ ಸ್ರವಂತು ನಃ ॥ ಅಕ್ಕಿಕಾಳು ಹಿಡಿದುಕೊಂಡು–

ಮಾತಾರುದ್ರಾಣಾಮಿತಿ ಭಾರ್ಗವೋ ಜಮದಗ್ನಿರ್ಗೌಸ್ತ್ರಿಷ್ಟುಪ್ ।

ಓಂ ಮಾತಾರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಮ-ಮೃತಸ್ಯ ನಾಭಿಃ । ಪ್ರನುವೋಚಂ ಚಿಕಿತುಷೇ ಜನಾಯ ಮಾ ಗಾಮನಾಗಾಮದಿತಿಂ ವಧಿಷ್ಟ ॥

**ಗವಾಂತರ್ಗತ ಪ್ರಾಣಸ್ಥಶ್ರೀಗೋಪಾಲಕೃಷ್ಣಮ್ ಆವಾಹಯಾಮಿ ॥** –ಎಂದು ಆವಾಹಿಸಿ ಗೋವಿನ ದೇಹದ ನಾನಾ ಭಾಗಗಳಲ್ಲಿ ನೆಲೆಸಿರುವ ದೇವತೆಗಳನ್ನು ಅಕ್ಷತೆ ಹಿಡಿದು ಆವಾಹಿಸಬೇಕು. ಕೆಲವರಲ್ಲಿ ಸ್ವಸ್ತಿಕೆ ಇಡುವ ಕ್ರಮ ಇದೆ.

**ಶೃಂಗಯೋಃ ಬ್ರಹ್ಮವಿಷ್ಣೂ ಆವಾಹಯಾಮಿ ।**
**ಅಗ್ರಯೋಃ ಸರ್ವತೀರ್ಥದೇವತಾ ಆವಾಹಯಾಮಿ ।**
**ಲಲಾಟೇ ಮಹಾದೇವಮ್ । ಅಗ್ರೇ ಮಹಾದೇವೀಮ್ ।**
**ನಾಸಿಕಾಯಾಂ ಷಣ್ಮುಖಮ್ । ಕರ್ಣಯೋಃ ಅಶ್ವಿನೌ ।**
**ಚಕ್ಷುಷೋಃ ಶಶಿಭಾಸ್ಕರೌ । ದಂತೇಷು ವಾಯುಮ್ ।**
**ಜಿಹ್ವಾಯಾಂ ವರುಣಮ್ । ಹೂಂಕಾರೇ ಸರಸ್ವತೀಮ್ ।**
**ಗಂಡಯೋಃ ಯಮದಕ್ಷೌ । ಓಷ್ಠಯೋಃ ಸಂಧ್ಯಾದ್ವಯಮ್ ।**
**ಗ್ರೀವಾಯಾಮ್ ಇಂದ್ರಮ್ । ಕುಕ್ಷಿದೇಶೇ ರಕ್ಷಾಂಸಿ ।**
**ಉರಸಿ ಸಾಧ್ಯಾನ್ । ಚತುಃಪಾದೇಷು ಧರ್ಮಜ್ಞಾನವೈರಾಗ್ಯೈಶ್ವರ್ಯಾನ್ ।**
**ಖುರಮಧ್ಯೇ ಗಂಧರ್ವಮ್ । ಖುರಾಗ್ರೇ ಪನ್ನಗಾನ್ ।**
**ಖುರಪಾರ್ಶ್ವೇ ಅಪ್ಸರಸಃ । ಪೃಷ್ಠೇ ಏಕಾದಶರುದ್ರಾನ್ ।**
**ಸರ್ವಸಂಧಿಷು ವಸೂನ್ । ಶ್ರೋಣಿತಟೇ ಪಿತೄನ್ ।**
**ಭಾಲೇ ಆದಿತ್ಯಾನ್ । ಗೋಮೂತ್ರೇ ಗಂಗಾಮ್ ।**
**ಗೋಮಯೇ ಗೋದಾವರೀಮ್ । ಕ್ಷೀರೇ ಸಾಗರಮ್ ।**
**ದಧನಿ ನರ್ಮದಾಮ್ । ಘೃತೇ ಹುತಾಶನಮ್ ।**
**ಉದರೇ ಪೃಥಿವೀಮ್ । ಲಾಂಗೂಲೇ ಸೋಮಮ್ ।**
**ಪಯೋಧರೇಷು ಸಾಗರಾನ್ । ರೋಮಸು ತ್ರಯಸ್ತ್ರಿಂಶತ್ಕೋಟಿದೇವತಾ ಆವಾಹಯಾಮಿ ॥** –ಎಂದು ಹೇಳಿ ಆವಾಹನೆ ಮಾಡಿ,

**ಸೌರಭೇಯಿ ಸರ್ವಹಿತೇ ಪವಿತ್ರೇ ಪಾಪನಾಶಿನಿ ।**
**ಪ್ರತಿಗೃಹ್ಣ ಮಯಾ ದತ್ತಂ ಪಾದ್ಯಂ ತ್ರೈಲೋಕ್ಯವಂದಿತೇ ॥** ಪಾದ್ಯಮ್ ॥

**ಸರ್ವದೇವಮಯೇ ದೇವಿ ಸರ್ವತೀರ್ಥಮಯೇ ಶುಭೇ ।**
**ಗೃಹಾಣಾರ್ಘ್ಯಂ ಮಯಾದತ್ತಂ ಸೌರಭೇಯಿ ನಮೋಽಸ್ತು ತೇ ॥** ಅರ್ಘ್ಯಮ್ ॥

**ದೇಹಸ್ಥಿತಾಸಿ ರುದ್ರಾಣೀ ಶಂಕರಸ್ಯ ಸದಾ ಪ್ರಿಯಾ ।**
**ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು ॥** ಆಚಮನೀಯಮ್ ॥

**ಯಾ ಲಕ್ಷ್ಮೀಃ ಸರ್ವಲೋಕೇಷು ಯಾ ಚ ದೇವೇಷ್ವವಸ್ಥಿತಾ ।**
**ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು ॥** ಸ್ನಾನಮ್ ॥

ಆಚ್ಛಾದನಂ ಗವೇ ದದ್ಯಾತ್ ಸಮ್ಯಕ್ಶುದ್ಧಂ ಸುಶೋಭನಮ್ ।
ಸುರಭಿರ್ವಸ್ತ್ರದಾನೇನ ಪ್ರೀಯತಾಂ ಪರಮೇಶ್ವರೀ ॥ ವಸ್ತ್ರಯುಗ್ಮಮ್ ॥

ಸರ್ವದೇವಪ್ರಿಯಂ ದೇವಿ ಚಂದನಂ ಚಂದ್ರಸನ್ನಿಭಮ್ ।
ಕಸ್ತೂರಿಕುಂಕುಮಾಢ್ಯಂ ಚ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥ ಚಂದನಮ್ ॥

ಅಕ್ಷತಾಂ ಚ ಸುರಶ್ರೇಷ್ಠೇ ಕುಂಕುಮೇನ ಸಮನ್ವಿತಮ್ ।
ಹರಿದ್ರಾ ಕುಂಕುಮಂ ಚೈವ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥ ಅಕ್ಷತಾನ್ ॥

ಪೃಷ್ಠೇ ವಸ್ತ್ರಂ ಸಮರ್ಪಯಾಮಿ । ಫಾಲೇ ಕುಂಕುಮಂ ಸರ್ಪಯಾಮಿ । ಶೃಂಗೇ ಸುವರ್ಣಮ್ । ಖುರೇ ರೌಪ್ಯಮ್ । ಪೃಷ್ಠೇ ತಾಮ್ರಮ್ । ಫಾಲೇ ಆದರ್ಶಮ್ । ನೇತ್ರಯೋಃ ರತ್ನದ್ವಯಮ್ । ಕಂಠೇ ಘಂಟಾಮ್ । ಪುಚ್ಛೇ ಮುಕ್ತಾಫಲಾನಿ । ಕಂಠೇ ಪುಷ್ಪಮಾಲಾಂ ಸಮರ್ಪಯಾಮಿ ॥

ಅಂಗಪೂಜಾಂ ಕರಿಷ್ಯೇ ॥

| | |
|---|---|
| ಓಂ ನಂದಿನ್ಯೈ ನಮಃ | ಪಾದಾನ್ ಪೂಜಯಾಮಿ । |
| ಜಗದುತ್ಪತ್ತಿಕಾರಿಣ್ಯೈ ನಮಃ | ಜಾನೂನಿ ಪೂಜಯಾಮಿ । |
| ಶ್ರೀಮತ್ಯೈ ನಮಃ । | ಕಂಠಂ ಪೂಜಯಾಮಿ । |
| ಪವಿತ್ರಾಯೈ ನಮಃ । | ಉದರಂ ಪೂಜಯಾಮಿ । |
| ಯಜ್ಞಸಾಧನಾಯೈ ನಮಃ । | ಮುಖಂ ಪೂಜಯಾಮಿ । |
| ಅಘನಾಶಿನ್ಯೈ ನಮಃ । | ಶಿರಃ ಪೂಜಯಾಮಿ । |
| ಸರ್ವೇಶ್ವರ್ಯೈ ನಮಃ । | ಸರ್ವಾಂಗಾನಿ ಪೂಜಯಾಮಿ ॥ |

ನಾಮಪೂಜಾಂ ಕರಿಷ್ಯೇ ॥

ಓಂ ಧೇನವೇ ನಮಃ । ನಾರಾಯಣ್ಯೈ ನಮಃ । ವೈಷ್ಣವ್ಯೈ । ಬ್ರಹ್ಮಪುತ್ರ್ಯೈ । ಸಾವಿತ್ರ್ಯೈ । ಪಾಪಹರಾಯೈ । ನಂದಿನ್ಯೈ । ತ್ರೈಲೋಕ್ಯಜನನ್ಯೈ । ಲೋಕಮಾತ್ರೇ । ಅಮೃತೋದ್ಭವಾಯೈ । ಲಕ್ಷ್ಮೀಸಹೋದರ್ಯೈ । ಶ್ರಿಯೈ । ಸುರಭ್ಯೈ । ಶ್ರೀಮತ್ಯೈ । ತೇಜೋವತ್ಯೈ । ಕಾಂತ್ಯೈ ನಮಃ ।

ಓಮ್ ಆ ಗಾವ ಇತ್ಯಯಷ್ಟರ್ಚಸ್ಯ ಸೂಕ್ತಸ್ಯ ಬಾರ್ಹಸ್ಪತ್ಯೋ ಭಾರದ್ವಾಜಃ ಗಾವಸ್ತ್ರಿಷ್ಟುಪ್ । ಜಗತ್ಯನುಷ್ಟುಬಾದಿ ಛಂದಾಂಸಿ । ಗೋರುಪಸ್ಥಾನೇ ವಿನಿಯೋಗಃ ॥

ಓಮ್ ಆಗಾವೋ ಅಗ್ಮನ್ನುತ ಭದ್ರಮಕ್ರನ್ ತ್ಸೀದಂತು ಗೋಷ್ಠೇ ರಣ-ಯಂತ್ವಸ್ಮೇ । ಪ್ರಜಾವತೀಃ ಪುರುರೂಪಾ ಇಹ ಸ್ಯುರಿಂದ್ರಾಯ ಪೂರ್ವೀ-

ರುಷಸೋ ದುಹಾನಾಃ ॥ ೧ ॥ ಇಂದ್ರೋ ಯಜ್ವನೇ ಪೃಣತೇ ಚ ಶಿಕ್ಷತ್ಯು- ಪೇದ್ದದಾತಿ ನ ಸ್ವಂ ಮುಷಾಯತಿ । ಭೂಯೋ ಭೂಯೋ ರಯಿಮಿದಸ್ಯ ವರ್ಧಯನ್ನಭಿನ್ನೇ ಖಿಲ್ಯೇ ನಿ ದಧಾತಿ ದೇವಯುಮ್ ॥ ೨ ॥ ನ ತಾ ನಶಂತಿ ನದಭಾತಿ ತಸ್ಕರೋ ನಾಸಾಮಾಮಿತ್ರೋ ವ್ಯಥಿರಾದಧರ್ಷತಿ । ದೇವಾಂಶ್ಚ ಯಾಭಿರ್ಯಜತೇ ದದಾತಿ ಚ ಜ್ಯೋಗಿತ್ತಾಭಿಃ ಸಚತೇ ಗೋಪತಿಃ ಸಹ ॥ ೩ ॥ ನ ತಾ ಅರ್ವಾರೇಣುಕಕಾಟೋ ಅಶ್ನುತೇ ನ ಸಂಸ್ಕೃತ- ತ್ರಮುಪ ಯಂತಿ ತಾ ಅಭಿ। ಉರುಗಾಯಮಭಯಂ ತಸ್ಯ ತಾ ಅನು ಗಾವೋ ಮರ್ತಸ್ಯ ವಿ ಚರಂತಿ ಯಜ್ವನಃ ॥ ೪ ॥ ಗಾವೋ ಭಗೋ ಗಾವ ಇಂದ್ರೋ ಮೇ ಅಚ್ಛಾನ್ ಗಾವಃ ಸೋಮಸ್ಯ ಪ್ರಥಮಸ್ಯ ಭಕ್ಷಃ । ಇಮಾ ಯಾ ಗಾವಃ ಸ ಜನಾಸ ಇಂದ್ರ ಇಚ್ಛಾಮೀದ್ಧೃದಾ ಮನಸಾ ಚಿದಿಂದ್ರಮ್ ॥ ೫ ॥ ಯೂಯಂ ಗಾವೋ ಮೇದಯಥಾ ಕೃಶಂ ಚಿದಶ್ರೀರಂ ಚಿತ್ಕೃಣುಥಾ ಸುಪ್ರತೀಕಮ್ । ಭದ್ರಂ ಗೃಹಂ ಕೃಣುಥ ಭದ್ರವಾಚೋ ಬೃಹದ್ವೋ ವಯ ಉಚ್ಯತೇ ಸಭಾಸು ॥ ೬ ॥ ಪ್ರಜಾವತೀಃ ಸೂಯವಸಂ ರಿಶಂತೀಃ ಶುದ್ಧಾ ಅಪಃ ಸುಪ್ರಪಾಣೇ ಪಿಬಂತೀಃ । ಮಾ ವಸ್ತೇನ ಈಶತ ಮಾ ಘಶಂಸಃ ಪರಿ ವೋ ಹೇತೀ ರುದ್ರಸ್ಯ ವೃಜ್ಯಾಃ ॥ ೭ ॥ ಉಪೇದಮುಪ ಪರ್ಚನಮಾಸು ಗೋಷೂಪ ಪೃಚ್ಯತಾಮ್ । ಉಪ ಋಷಭಸ್ಯ ರೇತಸ್ಯುಪೇಂದ್ರ ತವ ವೀರ್ಯೇ ॥ ೮ ॥

ದೇವದ್ರುಮರಸೋದ್ಭೂತಂ ಘೃತೇನ ಚ ಸಮನ್ವಿತಮ್ ।
ಪ್ರಯಚ್ಛಾಮಿ ಮಹಾಭಾಗೇ ಧೂಪಂ ತೇ ಪ್ರತಿಗೃಹ್ಯತಾಮ್ ॥ ಧೂಪಮ್ ॥
ಆನಂದಕೃತ್ ಸರ್ವಲೋಕೇ ದೇವಾನಾಂ ಚ ಪ್ರಿಯಃ ಸದಾ ।
ಗೌಸ್ತ್ವಂ ಪಾಹಿ ಜಗದ್ವಂದ್ಯೇ ದೀಪೋಽಯಂ ಪ್ರತಿಗೃಹ್ಯತಾಮ್ ॥ ದೀಪಮ್ ॥

ಗೆರಸೆಯಲ್ಲಿ ನೈವೇದ್ಯಕ್ಕೆ ಹರಳು ಬೆಲ್ಲ ಬಾಳೇಹಣ್ಣು ಹಾಕಿ–

**ಸುರಭಿರ್ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದಾಶ್ರಿತಾ ।**
**ಗೋಗ್ರಾಸಸ್ತು ಮಯಾ ದತ್ತಃ ಸುರಭಿಃ ಪ್ರತಿಗೃಹ್ಯತಾಮ್ ॥**

**ಗಾವೋ ಮೇ ಮಾತರಃ ಸರ್ವಾಃ ಪಿತರಶ್ಚಾಪಿ ತಾದೃಶಃ ।**
**ಗ್ರಾಸಮುಷ್ಟಿಪ್ರದಾನೇನ ಸ ಮೇ ವಿಷ್ಣುಃ ಪ್ರಸೀದತು ॥**

ಎಂದು ದನದ ಎದುರು ಇಡಬೇಕು. ಅನಂತರ ಆರತಿ ಮಾಡಿ ಅಕ್ಕಿ ಹಿಡಿದು ಮೂರು ಪ್ರದಕ್ಷಿಣೆ ಬರಬೇಕು.

**ಗವಾಂ ದೃಷ್ಟ್ವಾ ನಮಸ್ಕೃತ್ಯ ಕುರ್ಯಾದ್ಯಸ್ತು ಪ್ರದಕ್ಷಿಣಮ್ ।**
**ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥**

**ಸರ್ವಕಾಮದುಘೇ ದೇವಿ ಸರ್ವತೀರ್ಥಾಭಿಷೇಚನಿ ।**
**ಪಾವನಿ ಸುರಭಿಶ್ರೇಷ್ಠೇ ದೇವಿ ತುಭ್ಯಂ ನಮೋಽಸ್ತು ತೇ ॥**

ಎಂದು ಅಕ್ಕಿಕಾಳು ಹಾಕಿ ನಮಸ್ಕರಿಸಿ ದನದ ಮೈಯನ್ನು ಸವರಬೇಕು. ಅನಂತರ ದನವನ್ನು ಪೂರ್ವಮುಖವಾಗಿ ನಿಲ್ಲಿಸಿ ಎರಡು ದರ್ಭೆ, ಅಕ್ಕಿ ಹಾಗೂ ದನದ ಬಾಲ ಹಿಡಿದು ತರ್ಪಣ ಕೊಡಬೇಕು.


ದೇವತಾತರ್ಪಣಮ್


ಋಷಿತರ್ಪಣಮ್


ಪಿತೃತರ್ಪಣಮ್

ಬ್ರಹ್ಮಾ ತೃಪ್ಯತು । ರುದ್ರಸ್ತೃಪ್ಯತು। ವಿಷ್ಣುಸ್ತೃಪ್ಯತು । ರಾಕಾದ್ಯಾ ದೇವತಾಸ್ತೃಪ್ಯಂತು । ಮನವಸ್ತೃಪ್ಯಂತು । ಋಷಯಸ್ತೃಪ್ಯಂತು । ರುದ್ರಾಸ್ತೃಪ್ಯಂತು । ದಿತಿಜಾಸ್ತೃಪ್ಯಂತು । ಸಾಧ್ಯಾಸ್ತೃಪ್ಯಂತು । ಮರುದ್ಗಣಾಸ್ತೃಪ್ಯಂತು । ಗ್ರಹಾಸ್ತೃಪ್ಯಂತು । ನಕ್ಷತ್ರಾಣಿ ತೃಪ್ಯಂತು । ಯೋಗಾಸ್ತೃಪ್ಯಂತು । ರಾಶಯಸ್ತೃಪ್ಯಂತು । ವಸುಧಾಸ್ತೃಪ್ಯತು । ಅಶ್ವಿನೌ ತೃಪ್ಯೇತಾಮ್ । ಯಕ್ಷಾಸ್ತೃಪ್ಯಂತು । ರಕ್ಷಾಂಸಿ ತೃಪ್ಯಂತು । ಮಾತರಸ್ತೃಪ್ಯಂತು । ದೇವಮಾತರಸ್ತೃಪ್ಯಂತು । ಶ್ರೀಸ್ತೃಪ್ಯತು । ರುದ್ರಾಣೀ ತೃಪ್ಯತು । ಪಿಶಾಚಾಸ್ತೃಪ್ಯಂತು । ಸುಪರ್ಣಾಸ್ತೃಪ್ಯಂತು । ಪಶವಸ್ತೃಪ್ಯಂತು । ದಾನವಾಸ್ತೃಪ್ಯಂತು । ದೈತ್ಯಾಸ್ತೃಪ್ಯಂತು। ಯೋಗಿನಸ್ತೃಪ್ಯಂತು । ವಿದ್ಯಾಧರಾಸ್ತೃಪ್ಯಂತು । ಓಷಧಯಸ್ತೃಪ್ಯಂತು । ದಿಗ್ಗಜಾಸ್ತೃಪ್ಯಂತು ।

**ದೇವತಾಗಣಾಸ್ತೃಪ್ಯಂತು । ಯಜ್ಞಾಸ್ತೃಪ್ಯಂತು। ದೇವಪತ್ನ್ಯಸ್ತೃಪ್ಯಂತು । ಲೋಕಪಾಲಾಸ್ತೃಪ್ಯಂತು । ಅನಿರುದ್ಧಸ್ತೃಪ್ಯತು । ಬಲದೇವಸ್ತೃಪ್ಯತು । ನಾರದಸ್ತೃಪ್ಯತು । ಜಂತವಸ್ತೃಪ್ಯಂತು । ಸ್ಥಾವರಾಣಿ ತೃಪ್ಯಂತು ॥** ಎಂದು ಹೇಳಿ ತರ್ಪಣ ಕೊಟ್ಟು ಅನಂತರ ಯಜ್ಞೋಪವೀತ ಮಾಲಾಕಾರ ಮಾಡಿ ಋಷಿತೀರ್ಥದಿಂದ–

**ಸನಕಸ್ತೃಪ್ಯತು । ಸನಂದನಸ್ತೃಪ್ಯತು । ಸನತ್ಸುಜಾತಸ್ತೃಪ್ಯತು ॥ ಸನಾತನಸ್ತೃಪ್ಯತು । ಸನತ್ಕುಮಾರಸ್ತೃಪ್ಯತು । ಕಪಿಲಸ್ತೃಪ್ಯತು । ಓಳ್ಹರಿಸ್ತೃಪ್ಯತು । ಆಸುರೀ ತೃಪ್ಯತು । ಪಂಚಶಿಖಾಸ್ತೃಪ್ಯಂತು ॥**

(ಎಡ) ಪಿತೃತೀರ್ಥದಿಂದ ಎಳ್ಳು ಹಿಡಿದು–

**ಕವ್ಯವಾಹನಸ್ತೃಪ್ಯತು । ಅನಲಸ್ತೃಪ್ಯತು । ಸೋಮಸ್ತೃಪ್ಯತು । ಯಮಸ್ತೃಪ್ಯತು । ಅರ್ಯಮಾಸ್ತೃಪ್ಯತು । ಅಗ್ನಿಷ್ವಾತ್ತಾಸ್ತೃಪ್ಯಂತು । ಬರ್ಹಿಷದಸ್ತೃಪ್ಯಂತು । ಸೋಮಪಾ–ಸ್ತೃಪ್ಯಂತು । ಆಜ್ಯಪಾಸ್ತೃಪ್ಯಂತು । ಪಿತರಸ್ತೃಪ್ಯಂತು । ಯಮಂ ತರ್ಪಯಾಮಿ । ಧರ್ಮರಾಜಂ ತರ್ಪಯಾಮಿ । ಮೃತ್ಯುಂ ತರ್ಪಯಾಮಿ । ಅಂತಕಂ ತರ್ಪ–ಯಾಮಿ । ವೈವಸ್ವತಂ ತರ್ಪಯಾಮಿ । ಕಾಲಂ ತರ್ಪಯಾಮಿ । ಸರ್ವಭೂತಕ್ಷಯಂ ತರ್ಪಯಾಮಿ । ಔದುಂಬರಂ ತರ್ಪಯಾಮಿ । ದಧ್ನಂ ತರ್ಪಯಾಮಿ । ನೀಲಂ ತರ್ಪಯಾಮಿ । ಪರಮೇಷ್ಠಿನಂ ತರ್ಪಯಾಮಿ । ವೃಕೋದರಂ ತರ್ಪಯಾಮಿ । ಚಿತ್ರಂ ತರ್ಪಯಾಮಿ । ಚಿತ್ರಗುಪ್ತಂ ತರ್ಪಯಾಮಿ ॥**

**ಮಾತೃಪಕ್ಷಾಶ್ಚ ಯೇ ಕೇಚಿದ್ ಯೇ ಕೇಚಿತ್ಪಿತೃಪಕ್ಷಕಾಃ ।**
**ಗುರುಶ್ವಶುರಬಂಧೂನಾಂ ಯೇ ಕುಲೇಷು ಸಮುದ್ಭವಾಃ ॥**
**ಯೇ ಚಾನ್ಯೇ ಲುಪ್ತಪಿಂಡಾ ವೈ ಪುತ್ರದಾರವಿವರ್ಜಿತಾಃ ।**
**ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥**

**ಕ್ರಿಯಾಲೋಪಗತಾ ಯೇ ಚ ಜಾತ್ಯಂಧಾಃ ಪಂಗವಸ್ತಥಾ ।**
**ವಿರೂಪಾ ಆಮಗರ್ಭಾಶ್ಚ ಜ್ಞಾತಾಜ್ಞಾತಾಃ ಕುಲೇ ಮಮ ॥**
**ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥**

–ಎಂದು ತರ್ಪಣ ಕೊಟ್ಟು ಅನಂತರ ಪಂಚಗೋದಾನವನ್ನು ಕೊಡಬೇಕು.

## ಪಾಪಧೇನುದಾನಮ್

(ಬಲ) **ಮನೋವಾಕ್ಕಾಯ ಕರ್ಮಭಿ ಆಜನ್ಮೋಪಾರ್ಜಿತ ಪಾಪಾಪನೋದ–ನಾರ್ಥಂ ಪಾಪಧೇನುದಾನಂ ಕರಿಷ್ಯೇ ॥**

–ಎಂದು ಸಂಕಲ್ಪಿಸಿ, ಗೋತ್ರಾಭಿವಂದನಪೂರ್ವಕ ಬ್ರಾಹ್ಮಣರನ್ನು ಸ್ವಾಗತಿಸಿ,

**ತವ ಪಾದೋದಕಂ ತೀರ್ಥಮುಖೇ ವೇದಾಃ ಪ್ರತಿಷ್ಠಿತಾಃ ।**
**ಪಾದ್ಯಂ ಗೃಹಾಣ ವಿಪ್ರೇಂದ್ರ ಭೂಮಿದೇವ ನಮೋಽಸ್ತು ತೇ ॥**
–ಎಂದು ಕಾಲು ತೊಳೆದು,

**ಭೂಮಿದೇವಾಗ್ರಜನ್ಮಾಸಿ ತ್ವಂ ವಿಪ್ರಪುರುಷೋತ್ತಮ ।**
**ಪ್ರತ್ಯಕ್ಷಯಜ್ಞಪುರುಷ ಅರ್ಘ್ಯೋಽಯಂ ಪ್ರತಿಗೃಹ್ಯತಾಮ್ ॥**

**ಅರ್ಘ್ಯಾಚಮನೀಯವಸ್ತ್ರಯಜ್ಞೋಪವೀತಗಂಧಾಲಂಕಾರಪುಷ್ಪಧೂಪ ದೀಪಾನ್ ಇದಮಾಮಂ ಭೋಜನಪರ್ಯಾಪ್ತಂ ಯಥಾಶಕ್ತಿದಕ್ಷಿಣಾತಾಂಬೂಲಸಹಿತ–ಮಮೃತರೂಪೇಣಸಂಪದ್ಯತಾಮ್ ॥** –ಎಂದು ತಾಂಬೂಲ ದಕ್ಷಿಣೆ ಕೊಟ್ಟು

**ಯದರ್ಚನಂ ಕೃತಂ ವಿಪ್ರ ತವ ವಿಷ್ಣುಸ್ವರೂಪಿಣಃ ।**
**ತತ್ಸರ್ವಂ ಮಮ ದಾನಸ್ಯ ವಿಷ್ಣವೇಽಸ್ತು ಸಮರ್ಪಣಮ್ ॥**

–ಎಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಿ ಬ್ರಾಹ್ಮಣರನ್ನು ಉತ್ತರಮುಖಮಾಡಿ ನಿಲ್ಲಿಸಿ ಗಂಧಪುಷ್ಪಾಕ್ಷತೆಗಳನ್ನು ಕೊಟ್ಟು ಕಂಚಿನ ಪಾತ್ರೆಯಲ್ಲಿ ತುಪ್ಪವನ್ನು ಹಾಕಿ ಎಳ್ಳುತುಲಸಿದರ್ಭೆಪುಷ್ಪ ಸಹಿತವಾಗಿ ತುಪ್ಪದ ಪಾತ್ರೆಯನ್ನು ಬ್ರಾಹ್ಮಣರ ಕೈಯಲ್ಲಿ ಕೊಟ್ಟು ಯಜಮಾನ ಎಡಕೈಯಲ್ಲಿ ನೀರು ಹಿಡಿದು ಬಲಕೈಯಲ್ಲಿ ತುಪ್ಪದ ಪಾತ್ರೆಯ ಮೇಲೆ ದನದ ಬಾಲವನ್ನು ಹಿಡಿದು ನೀರು ನೆಲಕ್ಕೆ ಬಿಡುತ್ತಾ,

**ಆಜನ್ಮೋಪಾರ್ಜಿತಂ ಪಾಪಂ ಮನೋವಾಕ್ಕಾಯ ಕರ್ಮಭಿಃ ।**
**ತತ್ಸರ್ವಂ ನಾಶಮಾಯಾಂತು ಪಾಪಧೇನುಂ ಪ್ರದಾನತಃ ॥**

**......ಗೋತ್ರೋತ್ಪನ್ನ ......ಶರ್ಮಾಽಹಂ ಮನೋವಾಕ್ಕಾಯಕರ್ಮಭಿ ಆಜನ್ಮೋಪಾರ್ಜಿತ ಪಾಪಾಪನೋದನಕಾಮೋಹಂ ಇಮಾಂ ಕೃಷ್ಣಾಂ ಸವತ್ಸಾಂ ವಸ್ತ್ರಾಭರಣಾದ್ಯುಪಸ್ಕರಯುತಾಂ ರುದ್ರದೈವತ್ಯಾಂ ಪಾಪಧೇನುಂ .....ಗೋತ್ರಾಯ .......ಶರ್ಮಣೇ ತುಭ್ಯಮಹಂ ಸಂಪ್ರದದೇ ದತ್ತಂ ನ ಮಮ ॥**

**ಕ ಇದಂ ಕಸ್ಮಾ ಅದಾತ್ ಪೃಥಿವೀ ಪ್ರತಿಗೃಹ್ಣಾತು ॥** –ಎಂದು ಹೇಳಬೇಕು ಆಗ ಬ್ರಾಹ್ಮಣರು–

**ಓಂ ದೇವಸ್ಯ ತ್ವಾ ಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮ್ ॥** –ಎಂದು ಹೇಳಿ,

**ಗೃಹ್ಣಾಮಿ ಸುರಭೀಂ ದೇವೀಂ ಸರ್ವದೇವಮಯೀಂ ಶುಭಾಮ್ ॥**
–ಎಂದು ಬ್ರಾಹ್ಮಣರು ಹೇಳಬೇಕು. ಆಗ ಯಜಮಾನ–

ಯಜ್ಞಸಾಧನಭೂತಾ ಯಾ ವಿಶ್ವಸ್ಯಾಘೌಘನಾಶಿನೀ ।
ವಿಶ್ವರೂಪಧರೋ ದೇವಃ ಪ್ರೀಯತಾಮನಯಾ ಗವಾ ॥

ಘೃತಕ್ಷೀರಪ್ರದಾ ಗಾವೋ ಘೃತಯೋನ್ಯೋ ಘೃತೋದ್ಭವಾಃ ।
ಘೃತನದ್ಯೋ ಘೃತಾವರ್ತಾಸ್ತಾ ಮೇ ಸಂತು ಸದಾ ಗೃಹೇ ॥

–ಎಂದು ನೀರು ಬಿಟ್ಟು, ವೀಳ್ಯದೆಲೆ ಅಡಕೆ ಕೊಟ್ಟು ದಕ್ಷಿಣೆ ಕೊಟ್ಟು,
ಮಮ ಸಮಸ್ತ ಪಾಪನಿಬರ್ಹಣಮಸ್ತ್ವಿತಿ ಭವಂತೋ ಬ್ರುವಂತು ॥

–ಎಂದು ಹೇಳಲು ಬ್ರಾಹ್ಮಣರು–

(ಸಮಸ್ತ ಪಾಪ ನಿಬರ್ಹಣಮಸ್ತು ॥ –ಎಂದು ಹೇಳಬೇಕು.)

ಸರ್ವೇಷಾಮೇವ ಭೂತಾನಾಂ ಗಾವಃ ಶರಣಮುತ್ತಮಮ್ ।
ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾ ಕೃತಮ್ ।
ಏಕತ್ರ ಮಂತ್ರಾಸ್ತಿಷ್ಠಂತಿ ಹವಿರೇಕತ್ರ ತಿಷ್ಠತಿ ॥

–ಎಂದು ಪಠಿಸಬೇಕು ಹೀಗೆ ಹಿಂದಿನ ಕ್ರಮದಂತೆ ಉಳಿದ ನಾಲ್ಕು ಧೇನುಗಳನ್ನು ದಾನ ಕೊಡಬೇಕು.

## ಉತ್ಕ್ರಾಂತಿಧೇನುದಾನಮ್

ಅಸೂತ್ಕ್ರಾಂತೌ ಪ್ರವೃತ್ತಸ್ಯ ಸುಖೋತ್ಕ್ರಮಣ ಸಿದ್ಧಯೇ ।
ತುಭ್ಯಮೇನಾಂ ಸಂಪ್ರದದೇ ಧೇನುಮುತ್ಕ್ರಾಂತಿಸಂಜ್ಞಿಕಾಮ್ ॥

ಮಮ ಸುಖೇನ ಪ್ರಾಣೋತ್ಕ್ರಮಣಪ್ರತಿಬಂಧಕೋಕ್ತನಿಷ್ಕೃತ್ಯನುಕ್ತ ನಿಷ್ಕೃತಿ–ಜನಿತಸಕಲಪಾಪಕ್ಷಯದ್ವಾರಾ ಸುಖೇನ ಪ್ರಾಣೋತ್ಕ್ರಮಣಸಿದ್ಧ್ಯರ್ಥಂ ಇಮಾ–ಮುತ್ಕ್ರಾಂತಿ ಸಂಜ್ಞಿಕಾಧೇನುಂ ಯಥಾಶಕ್ತಿ ಸೋಪಸ್ಕರಾಂ ರುದ್ರದೈವತ್ಯಾಂ...... (ಇತ್ಯಾದಿ ಹಿಂದಿನ ಕ್ರಮದಂತೆ) ಮಮ ಸುಖೇನ ಪ್ರಾಣೋತ್ಕ್ರಮಣ ಸಿದ್ಧಿರಸ್ತ್ವಿತಿ ಭವಂತೋ ಬ್ರುವಂತು ॥ (ತವ ಸುಖೇನ ಪ್ರಾಣೋತ್ಕ್ರಮಣ ಸಿದ್ಧಿರಸ್ತು ॥) ಎಂದು ಪ್ರತಿವಚನ ಹೇಳಬೇಕು.

## ವೈತರಣೀಧೇನುದಾನಮ್

ವಿಷ್ಣುರೂಪ ದ್ವಿಜಶ್ರೇಷ್ಠ ಭೂದೇವ ಗತಿ ಪಾವನ ।
ತರ್ತುಂ ವೈತರಣೀಮೇತಾಂ ಕೃಷ್ಣಾಂ ಗಾಂ ಪ್ರದದಾಮ್ಯಹಮ್ ॥

ಧೇನುಕೇ ತ್ವಂ ಪ್ರತೀಕ್ಷಸ್ವ ಯಮದ್ವಾರೇ ಮಹಾಪಥೇ ।
ಉತ್ತಿತೀರ್ಷುರಯಂ ದೇವಿ ವೈತರಣ್ಯೈ ನಮೋಽಸ್ತು ತೇ ॥

ಯಮದ್ವಾರೇ ಪಥೇ ಘೋರೇ ಘೋರಾ ವೈತರಣೀ ನದೀ ।
ತರ್ತುಂ ತಾಮಿಹ ಯಚ್ಛಾಮಿ ಕೃಷ್ಣಾಂ ವೈತರಣೀಂ ತು ಗಾಮ್. ॥

ಮಮ ಯಮದ್ವಾರಸ್ಥಿತ ವೈತರಣಾಖ್ಯ ನದ್ಯುತ್ತಾರಣಾರ್ಥಮ್ ಇಮಾಂ ಕೃಷ್ಣಾಂ ಸವತ್ಸಾಂ ಗಾಂ ಕೃಷ್ಣವಸ್ತ್ರಯುಗಚ್ಛನ್ನಾಂ ಸಪ್ತಧಾನ್ಯಯುತಾಂ ರಕ್ತಮಾಲ್ಯಾದ್ಯಲಂಕೃತಾಂ ಯಥಾಶಕ್ತಿ ಸ್ವರ್ಣಶೃಂಗಾದ್ಯುಪಸ್ಕರೋಪೇತಾಂ ರುದ್ರದೈವತ್ಯಾಂ....... (ಇತ್ಯಾದಿ ಹಿಂದಿನ ಕ್ರಮದಂತೆ) ಯಮದ್ವಾರಸ್ಥಿತ ವೈತರಣ್ಯಾಖ್ಯನದ್ಯುತ್ತಾರಣಮಸ್ತ್ವಿತಿ ಭವಂತೋ ಬ್ರುವಂತು ॥ [ವೈತರಣೀನದ್ಯುತ್ತಾರಣಮಸ್ತು ॥] ಎಂದು ಪ್ರತಿವಚನ ಹೇಳಬೇಕು.

### ಋಣಧೇನುದಾನಮ್

ಐಹಿಕಾಮುಷ್ಮಿಕಂ ಯಚ್ಚ ಸಪ್ತಜನ್ಮಾರ್ಜಿತಂತ್ವೃಣಮ್ ।
ತತ್ಸರ್ವಂ ಶುದ್ಧಿಮಾಯಾತು ಗಾಮೇಕಾಂ ದದತೋ ಮಮ ॥

ಮಮ ಐಹಿಕಾಮುಷ್ಮಿಕ ಸಪ್ತಜನ್ಮಾರ್ಜಿತರ್ಣಪರಿಹಾರಾರ್ಥಂ ಯಥಾಶಕ್ತ್ಯಲಂ-ಕೃತಾಂ ಸವತ್ಸಾಮಿಮಾಂ ಗಾಂ ರುದ್ರದೈವತ್ಯಾಂ............. (ಇತ್ಯಾದಿ ಹಿಂದಿನ ಕ್ರಮದಂತೆ) ಮಮ ಸಪ್ತಜನ್ಮಕೃತಂ ಪಾಪಂ ಪರಿಹಾರೋಽಸತ್ವಿತಿ ಭವಂತೋ ಬ್ರುವಂತು ॥ [ಸಮಸ್ತ ಪಾಪ ಪರಿಹಾರೋಽಸ್ತು ॥] ಎಂದು ಪ್ರತಿವಚನ ಹೇಳಬೇಕು.

### ಮೋಕ್ಷಧೇನುದಾನಮ್

ಮೋಕ್ಷದೋ ವಾಸುದೇವಸ್ತು ವೇದಶಾಸ್ತ್ರೇಷು ಗೀಯತೇ ।
ತತ್ಪ್ರೀತಯೇ ದ್ವಿಜಾಗ್ರಾಯ ಮೋಕ್ಷಧೇನುಂ ದದಾಮ್ಯಹಮ್ ॥

ಸಂಸಾರಮೋಕ್ಷವಾಪ್ತಿಕಾಮೋಽಹಂ ಮಹಾವಿಷ್ಣುಪ್ರೀತ್ಯರ್ಥಮ್ ಇಮಾಂ ಮೋಕ್ಷಧೇನುಂ ಯಥಾಶಕ್ತಿಸೋಪಸ್ಕರಾಂ ರುದ್ರದೈವತ್ಯಾಂ....... (ಇತ್ಯಾದಿ ಹಿಂದಿನ ಕ್ರಮದಂತೆ) ಮಮ ಸಂಸಾರ ಮೋಕ್ಷಾರ್ಥಂ ಮಹಾವಿಷ್ಣುಃ ಸುಪ್ರೀತೋಽಸ್ತ್ವಿತಿ ಭವಂತೋ ಬ್ರುವಂತು । [ಸಂಸಾರಮೋಕ್ಷಪ್ರಾಪ್ತಿರಸ್ತು ॥] ಎಂದು ಪ್ರತಿವಚನ ಹೇಳಬೇಕು.

ಹೀಗೆ ಸಾಕ್ಷಾತ್ಪಂಚಸವತ್ಸಗೋದಾನ ಕೊಡಬೇಕು. ಒಂದು ವೇಳೆ ಪಂಚಗೋದಾನವನ್ನು ಕೊಡುವ ಶಕ್ತಿ ಇಲ್ಲದಿದ್ದರೆ ಒಂದು ಕಪಿಲಧೇನುವನ್ನು ಕೊಡಬೇಕು. ಇಲ್ಲದಿದ್ದರೆ ಮನೆಯಲ್ಲಿ ದನ ಸಾಕುವ ಐದು ಜನ ಯೋಗ್ಯರಾದ ಹಾಗೂ ಬಡವರಾದ ಬ್ರಾಹ್ಮಣರ ಮನೆಯ ದನವನ್ನು ಉತ್ತಮ ಮೌಲ್ಯ ಕೊಟ್ಟು ತನ್ನ ಮನೆಗೆ ತಂದು ಒಂದು ವರ್ಷದ ಬದಲಿಗೆ ಒಂದು ದಿನದ ಮಟ್ಟಿಗಾದರೂ ಸಾಕಿ ಮರುದಿನ ಅವನಿಗೇ ಗೋದಾನ ಕೊಡುವುದು ಉತ್ತಮ. ಇಲ್ಲವೇ ಆ ಐದು ಜನ ಬ್ರಾಹ್ಮಣರನ್ನು ಆಮಂತ್ರಿಸಿ ಪಾದತೊಳೆದು ಗಂಧ-ಪುಷ್ಪಾಕ್ಷತೆಗಳನ್ನು ಕೊಟ್ಟು ತಾಂಬೂಲ ಕೊಟ್ಟು ಐದು ಬ್ರಾಹ್ಮಣರಿಗೂ ಬೆಳ್ಳಿಯ ದಾನ

ಇಲ್ಲವೇ ಸ್ವರ್ಣದಾನ ಕೊಟ್ಟು ದಕ್ಷಿಣೆ ಕೊಟ್ಟು ಅನಂತರ ದನದ ಆಹಾರೋಪಚಾರಕ್ಕಾಗಿ ಎಂದು ತನ್ನ ಸಂಪತ್ತಿಗೆ ಸರಿಯಾದ ಕಾಣಿಕೆಯನ್ನು ಇಲ್ಲವೇ ದ್ರವ್ಯಗಳನ್ನು ನೀಡಿ ಬ್ರಾಹ್ಮಣರಿಂದ ಪ್ರತಿವಚನವನ್ನು ಪಡೆದುಕೊಳ್ಳಬೇಕು. ಅನಂತರ ಗೋಮತೀವಿದ್ಯೆಯನ್ನು ಹೇಳಬೇಕು.

**ಓಂ ಗಾವೋ ಮಾಮುಪತಿಷ್ಠಂತು ಹೇಮಶೃಂಗ್ಯಃ ಪಯೋಮುಚಃ ।**
**ಸುರಭ್ಯಃ ಸೌರಭೇಯಾಶ್ಚ ಸರಿತಃ ಸಾಗರಂ ಯಥಾ ॥**

**ಗಾ ವೈ ಪಶ್ಯಾಮ್ಯಹಂ ನಿತ್ಯಂ ಗಾವಃ ಪಶ್ಯಂತು ಮಾಂ ಸದಾ ।**
**ಗಾವೋಽಸ್ಮಾಕಂ ವಯಂ ತಾಸಾಂ ಯತೋ ಗಾವಸ್ತತೋ ವಯಮ್ ॥**

**ಗಾವೋ ಮಮಾಗ್ರತಸ್ಸಂತು ಪೃಷ್ಠತಸ್ಸಂತು ಗೋವೃಷಾಃ ।**
**ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಮ್ ॥**

**ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।**
**ಯಸ್ಮಾತ್ತಸ್ಮಾಚ್ಛಿವಂ ಮೇ ಸ್ಯಾದಿಹ ಲೋಕೇ ಪರತ್ರ ಚ ॥**

–ಎಂದು ಪಠಿಸಿ ಕೃಷ್ಣಾರ್ಪಣ ಬಿಟ್ಟು ದನವನ್ನು ಅವರವರ ಮನೆಗಳಿಗೆ ತಲುಪಿಸುವ ಸೂಕ್ತ ವ್ಯವಸ್ಥೆಯನ್ನು ಮಾಡಬೇಕು

## ದಶದಾನಾನಿ

**ಗೋದಾನಮ್–** ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।
ಯಸ್ಮಾತ್ತಸ್ಮಾಚ್ಛಿವಂ ಮೇ ಸ್ಯಾದಿಹ ಲೋಕೇ ಪರತ್ರ ಚ ॥

**ಭೂದಾನಮ್–** ಸರ್ವಸಸ್ಯಾಶ್ರಯಾ ಭೂಮಿಃ ವರಾಹೇಣ ಸಮುದ್ಧೃತಾ ।
ಅನಂತ ಸಸ್ಯಫಲದಾ ಅತಃ ಶಾಂತಿಂ ಪ್ರಯಚ್ಛ ಮೇ ॥

**ತಿಲದಾನಮ್–** ತಿಲಾಃ ಕಶ್ಯಪ ಸಂಭೂತಾಸ್ತಿಲಾಃ ಪಾಪಹರಾಃ ಶುಭಾಃ ।
ತಿಲದಾನಪ್ರದಾನೇನ ಸಮೇ ವಿಷ್ಣುಃ ಪ್ರಸೀದತು ॥

**ಹಿರಣ್ಯದಾನಮ್–** ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತ ಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥

**ಆಜ್ಯದಾನಮ್–** ಕಾಮಧೇನುಸಮುದ್ಭೂತಂ ಸರ್ವಕ್ರತುಷು ಸಂಸ್ಥಿತಮ್ ।
ದೇವಾನಾಮಾಜ್ಯಮಾಹಾರಮತಃ ಶಾಂತಿಂ ಪ್ರಯಚ್ಛ ಮೇ ॥

ವಸ್ತ್ರದಾನಮ್– ಶೀತವಾತೋಷ್ಣ ಸಂತ್ರಾಣಂ ಲಜ್ಜಯಾ ರಕ್ಷಣಂ ಪರಮ್ ।
ದೇಹಾಲಂಕರಣಂ ವಸ್ತ್ರಮತಃ ಶಾಂತಿಂ ಪ್ರಯಚ್ಛ ಮೇ ॥

ಧಾನ್ಯದಾನಮ್– ಧಾನ್ಯಂ ಕರೋತಿ ದಾತಾರಂ ಇಹಲೋಕೇ ಪರತ್ರ ಚ ।
ತಸ್ಮಾತ್ಪ್ರಯಚ್ಛ ತೇ ಧಾನ್ಯಮತಃ ಶಾಂತಿಂ ಪ್ರಯಚ್ಛ ಮೇ ॥

ಗುಡದಾನಮ್– ಮಧುರಂ ರಸಸಂಯುಕ್ತಮಿಕ್ಷುದಂಡೋದ್ಭವಂ ಗುಡಮ್ ।
ತಸ್ಮಾದಸ್ಯ ಪ್ರದಾನೇನ ಪರಾಲಕ್ಷ್ಮೀಃ ಸ್ಥಿರಾಗೃಹೇ ॥

ರೌಪ್ಯದಾನಮ್– ತೃಪ್ರೀತಿಕರಂ ಚಾಶು ರಜತಂ ಪಾಪನಾಶನಮ್ ।
ಸರ್ವಭೂತಪ್ರಿಯಕರಮತಃ ಶಾಂತಿಂ ಪ್ರಯಚ್ಛ ಮೇ ॥

ಲವಣದಾನಮ್– ರಸಾನಾಮಗ್ರಜಂ ಶ್ರೇಷ್ಠಂ ಲವಣಂ ಬಲವರ್ದನಮ್ ।
ದ್ವಿಜೇಂದ್ರಾಯ ಮಯಾದತ್ತಮತಃ ಶಾಂತಿಂ ಪ್ರಯಚ್ಛ ಮೇ ॥

ಜಲದಾನಮ್– ವಾರಿಪೂರ್ಣೋ ಘಟಶ್ಚಾಯಂ ದೇವತ್ರಯಮಯೋ ಯತಃ ।
ಪ್ರೀಯತಾಂ ಧರ್ಮರಾಜಸ್ತು ದಾನೇನಾನೇನ ಪುಣ್ಯದಃ ॥

ದೀಪದಾನಮ್– ದಿವ್ಯಜ್ಞಾನಪ್ರದಂ ಜ್ಯೋತಿರಂಧಕಾರನಿವಾರಣಮ್ ।
ತಸ್ಮಾದಸ್ಯ ಪ್ರದಾನೇನ ಮಮ ಪಾಪಂ ಪ್ರಣಶ್ಯತು ॥

ತುಳಸಿ, ನೀರು ಹಿಡಿದು,

ವ್ರತಚ್ಛಿದ್ರಂ ತಪಚ್ಛಿದ್ರಂ ಯಚ್ಛಿದ್ರಂ ಯಜ್ಞಕರ್ಮಣಿ ।
ಸರ್ವಂ ಭವತು ಮೇಽಚ್ಛಿದ್ರಂ ಯಸ್ಯ ಚೇಚ್ಛಂತಿ ವೈ ದ್ವಿಜಾಃ ॥

ಅನೇನ ದಾನದಕ್ಷಿಣಾದಿಕರ್ಮಣಾ ಪ್ರಾಣಸ್ಥಪಾಪಾಪಹಾಶ್ರೀಮಹಾವಿಷ್ಣುಃ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥ –ಎಂದು ಕೆಳಗೆ ಬಿಟ್ಟು, ಅಚ್ಯುತಾನಂತ ಗೋವಿಂದಾಯ ನಮಃ ॥ –ಎಂದು ನಾಮಸ್ಮರಣೆ ಮಾಡಬೇಕು.

* * *

# ಮರಣಾತ್ಪೂರ್ವಕೃತ್ಯಮ್



## ಮರಣಸೂಚಕ ಲಕ್ಷಣಗಳು

ಶ್ರೀಮದ್ಭಾಗವತದಲ್ಲಿ ಕೃಷ್ಣಬಲರಾಮರು ಮಥುರೆಯನ್ನು ಪ್ರವೇಶಿಸಿದ ಸಮಯದಲ್ಲಿ ಮಕ್ಕಳ ಆಟಿಕೆಯಂತೇ ಯಾವುದೇ ಶ್ರಮವಿಲ್ಲದೇ ಧನುಸ್ಸನ್ನು ಮುರಿದು ಕಂಸನ ಸೈನಿಕರನ್ನು ಸಂಹರಿಸಿದ ಸುದ್ದಿಯನ್ನು ಕೇಳಿ ಜಾಗ್ರದವಸ್ಥೆಯಲ್ಲೂ ಸ್ವಪ್ನದಲ್ಲೂ ಕಂಸನು ಮೃತ್ಯುಸೂಚಕವಾದ ಅನೇಕ ದೃಶ್ಯಗಳನ್ನು ನೋಡಿದನು-

**ಅದರ್ಶನಂ ಸ್ವಶಿರಸಃ ಪ್ರತಿರೂಪೇ ಚ ಸತ್ಯಪಿ ।**
**ಅಸತ್ಯಪಿ ದ್ವಿತೀಯೇ ಚ ದ್ವೈರೂಪ್ಯಂ ಜ್ಯೋತಿಷಾಂ ತಥಾ ॥**

ಹೀಗೇ ನೀರಿನಲ್ಲಿ, ಕನ್ನಡಿಯಲ್ಲಿ ತನ್ನ ಶರೀರದ ಪ್ರತಿಬಿಂಬ ಕಂಡರೂ ತನ್ನ ತಲೆಯನ್ನು ಕಾಣದಿರುವುದು, ಪ್ರೇತಗಳನ್ನು ತಬ್ಬಿಕೊಂಡಂತೆ, ದಾಸವಾಳದ ಮಾಲೆಯನ್ನು ಧರಿಸಿ ದಿಗಂಬರನಾಗಿ ಎಲ್ಲಿಗೋ ಹೋಗುತ್ತಿರುವವನಂತೆ –ಹೀಗೆ ಅನೇಕ ಅಪಶಕುನ ಗಳನ್ನು ನೋಡಿದನು ಎಂದು ತಿಳಿಯುತ್ತದೆ.

ಹೀಗೆ ಪ್ರತಿಯೊಬ್ಬರಿಗೂ ಒಂದಲ್ಲ ಒಂದು ರೀತಿಯಲ್ಲಿ ತಮ್ಮ ಕೊನೆಯ ದಿನಗಳಲ್ಲಿ ಮೃತ್ಯುಸೂಚಕಗಳು ಜಾಗ್ರದವಸ್ಥೆಯಲ್ಲೂ ಸ್ವಪ್ನದಲ್ಲೂ ಕಾಣದೇ ಇರಲಾರದು. ಅವುಗಳಲ್ಲಿ ಪ್ರಮುಖವಾಗಿ ಸೂರ್ಯನು ಚಂದ್ರನಂತೆ, ಚಂದ್ರನು ಸೂರ್ಯನಂತೆ ಕಾಣುವುದು. ಸೂರ್ಯನು ಛಿದ್ರ ಉಳ್ಳವನಂತೆ, ಕಿರಣರಹಿತನಂತೆ. ರಾಹುಗ್ರಸ್ತನಂತೆ ಕಾಣುವುದು ಸೂರ್ಯ-ಚಂದ್ರರೇ ಕಾಣದಿರುವುದು, ಸೂರ್ಯ- ಚಂದ್ರರು ಆಗಸದಿಂದ ಕಕ್ಷೆ ಕಳಚಿ ಬಿದ್ದಂತೆ ಕಂಡರೆ, ಹಗಲು ಇಬ್ಬರು ಸೂರ್ಯರ ದರ್ಶನ, ರಾತ್ರಿ ಇಬ್ಬರು ಚಂದ್ರರ ದರ್ಶನ, ಹಗಲು ನಕ್ಷತ್ರಗಳ ದರ್ಶನ, ರಾತ್ರಿ ಇತರರಿಗೆ ನಕ್ಷತ್ರಗಳು ಕಾಣಿಸಿದಾಗ ತನಗೆ ಕಾಣಿಸದಿರುವುದು ಆಗ ಮರಣಕ್ಕೆ ಸಮೀಪದಲ್ಲಿದ್ದಾನೆ ಎಂದು ತಿಳಿಯಬೇಕು.

ಆಗಸವು ಕೆಂಬಣ್ಣವುಳ್ಳದ್ದಾಗಿ ಕಾಣಿಸುವುದು, ಮೋಡಗಳ ಸಮೂಹದಲ್ಲಿ ಇತರರು ಮಿಂಚನ್ನು ಕಾಣುವಾಗ ತಾನು ಕಾಣದಿರುವುದು, ಇತರರಿಗೆ ಮಿಂಚು ಕಾಣದಿರುವಾಗ ತನಗೆ ಮಾತ್ರವೇ ಕಾಣಿಸುವುದು ಅಥವಾ ಮೋಡವಿಲ್ಲದ ಸಮಯದಲ್ಲಿ ಮಿಂಚನ್ನು ಕಾಣುವುದು. ಹಗಲಲಿನಲ್ಲಿ ಉಲ್ಕೆಯು ಕಾಣುವುದು, ಅಕಾಲದಲ್ಲಿ ಕಾಮನಬಿಲ್ಲಿನ ದರ್ಶನ,

ಒಂದೇ ಬಾರಿಗೆ ನಾಲ್ಕು ದಿಕ್ಕುಗಳಲ್ಲಿ ಕಾಮನ ಬಿಲ್ಲಿನ ದರ್ಶನ, ಭೂಮಿಯಲ್ಲಿ ಯಾರಿಗೂ ಕಾಣದಿರುವ ಛಿದ್ರವು ಕಾಣಿಸಿದರೆ, ಅಥವಾ ತನ್ನ ನೆರಳು ಛಿದ್ರವಾದಂತೆ ಕಾಣುವುದು, ಗಾಳಿಯು ಹಾರಿಸಿಕೊಂಡು ಹೋಗುವಂತೆ ಕಾಣುವುದು ಮುಂತಾದುವು ಕಂಡರೆ ಆಗ ಮರಣಕ್ಕೆ ಸಮೀಪದಲ್ಲಿದ್ದಾನೆ ಎಂದು ತಿಳಿಯಬೇಕು.

ದೇಹದಲ್ಲಿ ರೋಮಗಳು ಬೆಳೆಯದೇ ಇರುವುದು, ಗುದದ್ವಾರವು ತೆರೆದುಕೊಳ್ಳುವುದು, ನೆತ್ತಿಯು ದುರ್ಗಂಧ ಉಳ್ಳದ್ದಾಗಿ ಅನುಭವವಾಗುವುದು, ಕನ್ನಡಿಯಲ್ಲಿ ತನ್ನ ತಲೆಯನ್ನು ಕಾಣದಿರುವುದು ಅಥವಾ ವಿಕೃತಾಂಗ ಉಳ್ಳವನಾಗಿ ಕಾಣುವುದು, ಕಣ್ಣುಗುಡ್ಡೆಗಳು ವಕ್ರ ಹಾಗು ವಿರೂಪವಾಗಿ ಕಾಣುವುದು, ನವಿಲಿನ ಕುತ್ತಿಗೆಯಂತೆ ಬೆಂಕಿಯು ನೀಲ ಬಣ್ಣವುಳ್ಳದ್ದಾಗಿ ಕಾಣಿಸುವುದು, ಚಿನ್ನವನ್ನು ತಿಂದು ಕಾರುವುದು, ಎರಡು ಕಿವಿಗಳನ್ನು ಮುಚ್ಚಿದಾಗ ಬೆಂಕಿಯು ಪ್ರಜ್ವಲಿಸುವಂತೆ ಧ್ವನಿಯು ಕೇಳದಿರುವುದು, ಮಲ-ಮೂತ್ರವಿಸರ್ಜನೆ, ಹಸಿವು-ನೀರಡಿಕೆಗಳು ಒಟ್ಟಿಗೆ ಉಂಟಾಗುವುದು, ಇತರ ವ್ಯಕ್ತಿಗಳ ಕಾಲುಗಳು ಮರಳಿನಲ್ಲಿ ಅಥವಾ ಕೆಸರಿನಲ್ಲಿ ಮುಚ್ಚಿಹೋಗದಿರುವಾಗ ಯಾವ ವ್ಯಕ್ತಿಯ ಕಾಲುಗಳು ಮರಳಲ್ಲಿ ಅಥವಾ ಕೆಸರಿನಲ್ಲಿ ಮುಚ್ಚಿಹೋಗುವುದೋ, ಯಾರಿಗೆ ಅಂಗೈಯಲ್ಲಿ ಹಾಗೂ ನಾಲಗೆಯ ಮೂಲದಲ್ಲಿ ನೋವು ಕಾಣಿಸುವುದೋ, ಯಾರ ಕುತ್ತಿಗೆ-ತುಟಿ-ನಾಲಿಗೆ-ಹಲ್ಲುಗಳು ಒಣಗುವವೋ, ಹಾಗು ಕೆನ್ನೆಗಳು ಕಳೆಗುಂದುವವೋ, ಯಾರ ವೃಷಣಗಳು ಗಟ್ಟಿಯಾದಂತೆ ಅನುಭವಕ್ಕೆ ಬರುವುದೋ, ಸಂಭೋಗಕಾಲದಲ್ಲಿ ಸೀನುವುದು ಮೊದಲಾದ ಲಕ್ಷಣಗಳು ಕಂಡಾಗ ಮರಣಕ್ಕೆ ಸಮೀಪದಲ್ಲಿದ್ದಾನೆ ಎಂದು ತಿಳಿಯಬೇಕು.

ನಾಲಿಗೆ ಕಪ್ಪಾಗುವುದು, ಎಡಗಣ್ಣು ಬಿದ್ದಂತೆ ಕಾಣುವುದು, ನಾಲಿಗೆ-ಕಣ್ಣು-ಮೂಗು ಮೊದಲಾದ ಜ್ಞಾನೇಂದ್ರಿಯಗಳು ಅವುಗಳಿಂದ ಗ್ರಾಹ್ಯವಾದ ರಸ-ರೂಪ-ಗಂಧಗಳನ್ನು ಗ್ರಹಿಸದಿರುವುದು, ಯಾರ ದೇಹದಲ್ಲಿ ಶವದಂತೆ ವಾಸನೆ ಕಾಣಿಸುವುದೋ ಅಥವಾ ಬೇವಿನವಾಸನೆ ಕಾಣಬರುವುದೋ, ಹೊಕ್ಕುಳು-ಪೃಷ್ಠ(ಗುದ)ದಲ್ಲಿ ಕಂಪನ ಕಾಣಿಸುವುದು, ಬುದ್ಧಿಯು ಮಲಿನವಾಗುವುದು, ನಾಲಿಗೆ ತೊದಲುವುದು, ನಿಷ್ಕಾರಣವಾಗಿ ಕಿವುಡುತನದ ಅನುಭವವಾಗುವುದು, ಕಣ್ಣುಗಳ ನೋಟದಲ್ಲಿ ಅಸ್ಪಷ್ಟತೆ, ನಿದ್ರೆ ಅತಿಯಾಗುವಿಕೆ, ಮೂಗಿನ ಮೇಲೆ ಬೊಕ್ಕೆ ಏಳುವುದು, ಸುಗಂಧ ಉಳ್ಳವಸ್ತುಗಳು ದುರ್ಗಂಧಯುಕ್ತವಾದ ವಸ್ತುಗಳಂತೆ ಅನುಭವಕ್ಕೆ ಗೋಚರವಾದರೆ ಆಗ ಅವನು ಮರಣಕ್ಕೆ ಸಮೀಪದಲ್ಲಿದ್ದಾನೆಂದು ತಿಳಿಯಬೇಕು.

ಸ್ವಪ್ನದಲ್ಲಿ ಕತ್ತೆ, ಹಂದಿ ಮೊದಲಾದ ಪ್ರಾಣಿಗಳು ಎಳೆಯುವ ರಥದಲ್ಲಿ ಪ್ರಯಾಣ ಮಾಡುವುದು, ಕಪ್ಪು ಕರುವಿನಿಂದ ಕೂಡಿದ ಕಪ್ಪುಹಸು ದಕ್ಷಿಣದಿಕ್ಕಿಗೆ ಅಭಿಮುಖವಾಗಿ ಹೋಗುವುದು, ಪಾರಿವಾಳ-ಹದ್ದು-ಗೂಬೆ-ಕಾಗೆ ಮೊದಲಾದ ಪಕ್ಷಿಗಳು ನೆತ್ತಿಯನ್ನು ಮುಟ್ಟಿದಂತೆ ಕಂಡರೆ, ತಲೆಯಲ್ಲಿ ಓತಿಕೇತವು ಹತ್ತಿಹೋದಂತೆ ಕಂಡರೆ, ಗಿಡದಿಂದ ಬಿದ್ದಂತೆ, ಬಾವಿಯಲ್ಲಿ ಬಿದ್ದಂತೆ, ಮರ ಅಥವಾ ಪರ್ವತದ ತುದಿಯಲ್ಲಿ ಗಂಧರ್ವರನ್ನು ಕಂಡರೆ, ಹಗಲು ಪಿಶಾಚಿಗಳ ದರ್ಶನವಾದರೆ, ಹದ್ದು-ಕಾಗೆ-ನರಿ-ಒಂಟೆ-ಕತ್ತೆಗಳು, ಹಂದಿ ಹಾಗೂ ಕೋತಿಯು ವ್ಯಕ್ತಿಯ ಮೇಲೆ ಸ್ವಪ್ನದಲ್ಲಾಗಲೀ, ಜಾಗ್ರತ್ಕಾಲದಲ್ಲಾಗಲಿ ಆಕ್ರಮಣಗೈದಂತೆ ಕಂಡರೆ -ಆಗ ಅವನು ಮರಣಕ್ಕೆ ಸಮೀಪದಲ್ಲಿದ್ದಾನೆಂದು ತಿಳಿಯಬೇಕು.

ಸ್ವಪ್ನದಲ್ಲಿ ಜೇನುತುಪ್ಪವನ್ನು ತಿನ್ನುವುದು, ಕಮಲದ ನಾಳಗಳನ್ನು ಭಕ್ಷಿಸುವುದು, ಕೆಂದಾವರೆಯನ್ನು ತಲೆಯಲ್ಲಿ ಧರಿಸುವುದು, ಪ್ರೇತಪಿಶಾಚಗಳನ್ನು ಕಂಡರೆ, ಗಂಧರ್ವನಗರ ದರ್ಶನವಾದರೆ, ಕತ್ತೆಯನ್ನೇರಿದಂತೆ, ತೈಲಪಾನ, ತೈಲಾಭ್ಯಂಜನ ಮಾಡಿಕೊಂಡಂತೆ, ಕ್ಷೌರ ಮಾಡಿಸಿಕೊಂಡಂತೆ, ತನ್ನ ಶರೀರದ ಮೇಲೆ ಹುಲ್ಲು, ಒಣಗಿದ ಕಟ್ಟಿಗೆ ಇವುಗಳನ್ನು ಕಂಡರೆ, ಹಸಿರಾದ ಮರಗಳು ಚಿನ್ನದ ಬಣ್ಣದಂತೆ ಹಳದಿಯಾಗಿ ಕಂಡರೆ, ಕಬ್ಬಿಣದ ದಂಡಧಾರಿಯೂ, ಕಪ್ಪುಬಣ್ಣದವನೂ, ಕಪ್ಪು ಬಣ್ಣದ ದಂತವುಳ್ಳ ಕಪ್ಪುಬಟ್ಟೆ ತೊಟ್ಟವನೂ ಆದ ವ್ಯಕ್ತಿಯನ್ನು ಸ್ವಪ್ನದಲ್ಲಿ ಕಂಡರೆ ಆಗ ಅವನು ಮರಣಕ್ಕೆ ಸಮೀಪದಲ್ಲಿದ್ದಾನೆಂದು ತಿಳಿಯಬೇಕು.

ಮಲಗುವ ಮನೆ ಬಿದ್ದುಹೋದಂತೆ ಕನಸು ಕಂಡರೆ ವ್ಯಕ್ತಿಯ ಪತ್ನಿಯು ಮೊದಲು ಮೃತಳಾಗುವಳೆಂದು ತಿಳಿಯಬೇಕು. ಕನಸಿನಲ್ಲಿ ಹೆಂಡತಿಯ ಅಪಹರಣ, ಅಥವಾ ಹಾಸಿಗೆಯ ಅಪಹರಣವಾದರೆ ಆ ವ್ಯಕ್ತಿಯ ಪತ್ನಿಯು ಮೃತಳಾಗುವಳು. ತನ್ನ ಕೈಕಾಲುಗಳು ತುಂಡಾದಂತೆ ಸ್ವಪ್ನ ಕಂಡರೆ ತಂದೆ–ತಾಯಿಗಳಲ್ಲಿ ಯಾರಿಗಾದರೂ ಮರಣ ಸಂಭವಿಸುವುದು ಎಂದು ತಿಳಿಯಬೇಕು.

ಮರಣದ ಸೂಚನೆಗಳನ್ನು ದೇವತೆಗಳು ನೀಡುತ್ತಾರೆ. ಒಂದಲ್ಲ ಒಂದು ದಿನ ಮರಣವನ್ನು ಸ್ವಾಗತಿಸಲೇಬೇಕಾದ ಸಾಧಕನು ಇದನ್ನು ಅರಿಯುವುದು ಅನಿವಾರ್ಯವಾಗಿದೆ. ಆದರೆ ಭಯಂಕರ ದುಃಖರೂಪವಾದ ಅಕಾಲಮೃತ್ಯುವನ್ನು ಪ್ರಾಯಶ್ಚಿತ್ತೋಪಾಯಗಳ ಮೂಲಕ ತಡೆಗಟ್ಟಬಹುದು. ಈ ಹಿನ್ನೆಲೆಯಲ್ಲಿ ಮೃತ್ಯುವಿನ ಸೂಚನೆ ದೊರಕಿದಾಗ ಅದರ ಪರಿಹಾರೋಪಾಯವನ್ನು ಅವಶ್ಯವಾಗಿ ಮಾಡಬೇಕು. ಈ ಸಮಯದಲ್ಲಿ ಚಿಂತೆಯನ್ನು ಮಾಡದೆ ಪರೀಕ್ಷಿತರಾಜನಂತೆ ವ್ಯಾಸವಿರಚಿತ **ಶ್ರೀಮದ್ಭಾಗವತದ** ಅರ್ಥಾನುಸಂಧಾನ ಮಾಡಿ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು.

**'ಅದಿತ್ ಪ್ರತ್ನಸ್ಯ ರೇತಸಃ...'** ಎಂಬ ಒಂದು ಮಂತ್ರ, **'ಯತ್ರ ಬ್ರಹ್ಮಾಪವಮಾನ....'** ಎಂಬ ಆರು ಮಂತ್ರಗಳು **'ಉದ್ವಯಂ........'** ಎಂಬ ಒಂದು ಮಂತ್ರ ಪಠಿಸಬೇಕು. **'ಯದಂತಿ ಯಚ್ಚ ದೂರಕೇ'** ಎಂಬುದಾಗಿ ಏಳು ಮಂತ್ರಗಳನ್ನು ಜಪಿಸಬೇಕು. **ರಾತ್ರಿಸೂಕ್ತ** ಜಪವನ್ನು ದುಃಸ್ವಪ್ನ ಮತ್ತು ದುರಿತಪರಿಹಾರಕ್ಕಾಗಿ **'ಗಜೇಂದ್ರಮೋಕ್ಷ'**ವನ್ನು ಪಠಿಸಬೇಕು. ಬ್ರಾಹ್ಮಣರಿಗೆ ಗೋವುಗಳನ್ನು ದಾನ ಮಾಡಬೇಕು. ಇಲ್ಲವೇ **ಮಹಾಭಾರತದ** ಕಥಾಶ್ರವಣ ಮಾಡಬೇಕು.

**'ಎಚ್ಚೆತ್ತವರು ಕಟ್ಟಬಹುದು ಪರಲೋಕಕ್ಕೆ ಬುತ್ತಿ'** ಎಂಬ ಉಕ್ತಿಯಂತೆ. ಅಂತ್ಯಕಾಲದ ಸೂಚನೆ ಒದಗಿದಾಗ ಹೆಂಡತಿ ಮಕ್ಕಳು ಐಶ್ವರ್ಯ, ದೇಹ ಮೊದಲಾದವುಗಳ ಮೇಲೆ ಅಭಿಮಾನ ತೊರೆದು ಉಪವಾಸವನ್ನು ಮಾಡಿದವನಾಗಿ ಮನಸಾ ವಿರಕ್ತನಾಗಿ ಆತುರ ಸಂನ್ಯಾಸ ಕೈಗೊಂಡು, ಪುಣ್ಯತೀರ್ಥಗಳಿಗೆ ಸಾಧನೆಗೆ ತೆರಳಬೇಕು ಎನ್ನುತ್ತಾರೆ, ಶುಕಮುನಿಗಳು. ಅಂತ್ಯಕಾಲವನ್ನು ಗುರುತಿಸಿದ ಸಾಧಕನು ಮನೆಯಲ್ಲಿ ಮರಣವನ್ನು ಸ್ವಾಗತಿಸದೆಯೇ ಬೇರೊಂದು ಪವಿತ್ರಕ್ಷೇತ್ರದಲ್ಲಿ ಭಗವದಾರಾಧನೆಯೊಂದಿಗೆ ದೇಹವನ್ನು ತೊರೆಯಬೇಕೆನ್ನುತ್ತಾರೆ. ಪ್ರಾಣವು ಕಂಠಕ್ಕೆ ಬಂದಾಗಲೂ, **'ನಾನು ಸಂನ್ಯಾಸ ತೆಗೆದು**

**ಕೊಂಡಿದ್ದೇನೆ'** ಎಂದು ಯಾವನು ಹೇಳುವನೋ ಅವನು ಮರಣಹೊಂದಿ ವಿಷ್ಣುಪುರಕ್ಕೆ ಹೋಗುತ್ತಾನೆ.

ಅಸ್ವಾಸ್ಥ್ಯದಿಂದ ಪೀಡಿತನಾಗಿದ್ದರೆ ಮಗನಿಂದಾಗಲಿ ಬೇರೆಯವರಿಂದಾಗಲಿ ಸಂಕಲ್ಪ ಕಾರ್ಯವನ್ನು ಮಾಡಿ ದಾನಾದಿ ಸತ್ಕರ್ಮಗಳನ್ನು ಮಾಡಬೇಕು. ಒಂದು ವೇಳೆ ಮೇಲುಸಿರು ಪ್ರಾರಂಭವಾದಾಗ ಮಗನು ಆಚಮನ ಮಾಡಿ, **'ಅಸ್ಮತ್ಪಿತುಃ .....ಶರ್ಮಣಃ ಸುಖೇನ ಪ್ರಾಣೋತ್ಕ್ರಮಣಾರ್ಥಂ ಶಾಶ್ವತವಿಷ್ಣುಲೋಕಾವಾಪ್ತ್ಯರ್ಥಂ ದರ್ಭಾಸನಂ ಕರಿಷ್ಯೇ ॥'** ಎಂದು ಸಂಕಲ್ಪಿಸಿ ಆಕಾಶ ಕಾಣದ ಜಾಗದಲ್ಲಿ (ಮನೆಯ ವಾಸ್ತುವಿನ ಹೊರಗೆ ಚಾವಡಿಯಲ್ಲಿ) ಭೂಮಿಯನ್ನು ಗೋಮಯದಿಂದ ಶುದ್ಧಪಡಿಸಿ ಆಯತಾಕಾರದ ಮಂಡಲ ಮಾಡಿ ದಕ್ಷಿಣಾಗ್ರವಾಗಿ ದರ್ಭೆ ಮತ್ತು ಎಳ್ಳು ಹರಡಿ ತಂದೆಯ ದೇಹವನ್ನು ನಾಲ್ಕು ಜನ ಸೇರಿ ಮೆಲ್ಲನೆ ಹಿಡಿದು ಮಂಚ ಹಾಗೂ ಹಾಸಿಗೆಯಿಂದ ಎತ್ತಿ ಆಯತಾಕಾರದ ಮಂಡಲದ ಮೇಲೆ ಶಿರಸ್ಸು ದಕ್ಷಿಣಕ್ಕೆ ಬರುವಂತೆ ಮಲಗಿಸಬೇಕು. ತಾನು ಸ್ನಾನ ಮಾಡಿ ಮೈಒರೆಸಿ ಶಿಖಾಬಂಧನ ಮಾಡಿ ಗೋಪೀಚಂದನ ಧರಿಸಿ ಬಂದು ಸಂಕಲ್ಪ ಮಾಡಬೇಕು.

**ಶುಭಪುಣ್ಯತಿಥೌ ಪ್ರಾಣಸ್ಥಶ್ರೀಮಹಾವಿಷ್ಣುಪ್ರೇರಣಯಾ ಶ್ರೀಮಹಾವಿಷ್ಣುಪ್ರೀತ್ಯರ್ಥಂ .....ಅಸ್ಮತ್ಪಿತುಃ ಜನ್ಮಪ್ರಭೃತಿ ಏತಾವತ್ಕಾಲಪರ್ಯಂತಂ** (ಪುಟಸಂಖ್ಯೆ 22) **ನಾನಾಗೋತ್ರೇಭ್ಯಃ ಬ್ರಾಹ್ಮಣೇಭ್ಯಃ ಸಾಕ್ಷಾತ್ ಪಂಚಸವತ್ಸಗೋದಾನ(ಪ್ರತ್ಯಾಮ್ನಾಯ ರಜತಂ ಸುವರ್ಣಂ ವಾ)ಪೂರ್ವಕ ಪ್ರಾಜಾಪತ್ಯಕೃಚ್ಛ್ರಪ್ರತ್ಯಾಮ್ನಾಯ ಯಥಾಶಕ್ತಿ ಹಿರಣ್ಯದಾನಂ, ದಶದಾನಂ, ಜಲದಾನಂ, ದೀಪದಾನಂ ಚ ಸದ್ಯಃ ಕರಿಷ್ಯೇ ॥** – ಎಂದು ಸಂಕಲ್ಪಿಸಿ, ಕ್ರಮದಿಂದ ಬ್ರಾಹ್ಮಣರನ್ನು ಆಹ್ವಾನಿಸಿ ದಾನಾದಿಗಳನ್ನು ದಕ್ಷಿಣೆಯನ್ನು ತಂದೆಯ ಕೈಗೆ ಮುಟ್ಟಿಸಿ ದಾನವನ್ನು ಮಗನು ಕೊಡುವ ಸಂದರ್ಭದಲ್ಲಿ–

**".......ಗೋತ್ರೋತ್ಪನ್ನ .....ಶರ್ಮಾऽಹಂ ಮಮ ಪಿತುಃ ....ಗೋತ್ರಸ್ಯ .....ಶರ್ಮಣಃ ಪರಲೋಕೇ ಸುಖಸಿದ್ಧಯೇ .....ಗೋತ್ರಾಯ ......ಶರ್ಮಣೇ ತುಭ್ಯಮಹಂ ಸಂಪ್ರದದೇ ॥ ಪರಲೋಕೇ ಸುಖಸಿದ್ಧಿಪ್ರಾಪ್ತಿರಸ್ತ್ವಿತಿ ಭವಂತೋ ಬ್ರುವಂತು ॥** –ಎಂದು ಬ್ರಾಹ್ಮಣರಿಗೆ ಕೊಟ್ಟು (**ಪರಲೋಕೇ ಸುಖಸಿದ್ಧಿಪ್ರಾಪ್ತಿರಸ್ತು**) ಎಂದು ಪ್ರತಿವಚನವನ್ನು ಪಡೆದು, ಅನಂತರ ತನ್ನ ಹತ್ತಿರದಲ್ಲೇ ತುಲಸೀಗಿಡದ ಕುಂಡವನ್ನು ಹಾಗೂ ಶಾಲಗ್ರಾಮವನ್ನು ಇಟ್ಟು ಶಂಖನಿನಾದವನ್ನು ಮಾಡಿ, ಶಾಲಗ್ರಾಮತೀರ್ಥ ಮತ್ತು ಗಂಗಾದಿತೀರ್ಥಗಳನ್ನು ಬಾಯಿಗೆ ಹಾಕಿ, ತಂದೆಯ ಶಿರಸ್ಸಿನ ಬಳಿ ಉತ್ತರಾಭಿಮುಖವಾಗಿ ಕುಳಿತು, ತನ್ನ ಬಲತೊಡೆಯಲ್ಲಿ ತಂದೆಯ ಶಿರಸ್ಸು ಇರುವಂತೆ ಇಟ್ಟು ಪ್ರಾಣೋತ್ಕ್ರಮಣದವರೆಗೆ ಕರ್ಣಸೂಕ್ತಾದಿ ಪಾರಾಯಣ, ವಿಷ್ಣುಸಹಸ್ರನಾಮ, ರುದ್ರಾಧ್ಯಾಯ, ಅಷ್ಟಾಕ್ಷರಾದಿ ಮಂತ್ರಗಳ ಜಪ ಮಾಡುವವನಾಗಬೇಕು. (ಗಮನಿಸಿ: ಗರ್ಭಿಣೀ, ರಜಸ್ವಲೆ, ಸಕೇಶಿನಿ ಇವರ ಮರಣಸೂಚನೆಯಿದ್ದಲ್ಲಿ ಹಾಗೂ ಸರ್ಪದಿಂದ, ಕುಷ್ಠಾದಿಮಹಾರೋಗದಿಂದ ಮರಣ ಸೂಚನೆ ಸಿಕ್ಕಿದಾಗ ಹೆಚ್ಚಿನ ಮಾಹಿತಿಗಾಗಿ ಪುಟಸಂಖ್ಯೆ 240–241 ನೋಡಿ.)

## ದ್ವಿತೀಯ ಗುಚ್ಛ

# ಮರಣೋತ್ತರ ವಿಧಿಃ



### ಮೊದಲ ದಿನದ ಸಾಮಗ್ರಿಗಳು - ದಹನಸಾಮಗ್ರಿಗಳು

ಅಕ್ಕಿ 100 ಗ್ರಾಂ, ಎಳ್ಳು 1/4 ಕೆಜಿ, ದರ್ಬೆ 2 ಕಟ್ಟು, ಕರ್ಪೂರ 50, ಬೆಂಕಿಪೊಟ್ಟಣ 1, ಗೋಪಿ 1, ಬಾಳೆಎಲೆಯ ದೊಣ್ಣೆತಟ್ಟೆಗಳು 10, ಕೃಷ್ಣಾಜಿನ, ಗಂಧದ ಕೊರಡು, ಪೆರಣೆ, ತೆಂಗಿನಕಾಯಿ 1, ಅಕ್ಕಿ ಅಥವಾ ಗೋಧಿಹಿಟ್ಟು 1 ಕೆಜಿ, ಭತ್ತ 1/4 ಕೆಜಿ, ಲಾವಂಚಮಾಲೆ 1, ತುಳಸೀಮಾಲೆ 1, ಮಾವಿನ ತುದಿ 3, ಹಲಸಿನ ತುದಿ 3, ಶಮಿಸಮಿಧೆ 4, ಅತ್ತಿ (ಅಶ್ವತ್ಥ) ಸಮಿಧೆ 6, ಅತ್ತಿಎಲೆಗಳು 6, ದೇವರ ತೀರ್ಥ, ಗಂಗಾತೀರ್ಥ, ನಿರ್ಮಾಲ್ಯ ಹೂ-ತುಳಸಿ, ಚಿಲ್ಲರೆನಾಣ್ಯಗಳು 170, ಗೋಮೂತ್ರ ಹಾಗೂ ಹಾಲು ಹಾಗೂ ಮೊಸರು 1 ಲೋಟ, ತುಪ್ಪ 1 ಕೆಜಿ, ಮೃತ್ತಿಕೆ, ಗೋಮಯ ಹಾಗೂ ಗಂಧ ಒಂದು ನೆಲ್ಲಿಕಾಯಿಯಷ್ಟು, ಕತ್ತಿ, ಚೂರಿ, ಶವಕ್ಕೆ 5 ಮೀಟರಿನ ಖಾದಿ ಬಟ್ಟೆ, ಕ್ರಿಯಾಕರ್ತೃಗಳಿಗೆ 6 ಮೊಳದ ಬೈರಾಸು ಇಲ್ಲವೇ ಖಾದಿ ಬಟ್ಟೆ, ಹೊಸ ಮಡಕೆ 3, ಬಿದಿರು 3, ಹುರಿಹಗ್ಗ 2 ಕಟ್ಟು, ಇಡೀ ಬಾಳೆಎಲೆ 1, ಬಂಗಾರದ ತುಂಡು 5, ಸಿಪ್ಪೆ ಸುಲಿಯದ ತೆಂಗಿನಕಾಯಿ 1, ಬಿಳಿಕಲ್ಲು 3, ಗೆರಸೆ 1, ಮೊಳೆ (ಒಬ್ಬರಿಗೆ 1), ಒಲೆಗೆ 9 ಇಟ್ಟಿಗೆ ಇಲ್ಲವೇ 3 ಕೆಂಪು ಕಲ್ಲು, ಬುಟ್ಟಿ 1, ಮಾವಿನ ಚೆಕ್ಕೆಗಳು, ತುಲಸೀಕಾಷ್ಠ, ಮಡಲು, ತೆಂಗಿನಗರಿಯ ಕಂತೆ 1 (3), ಗುದ್ದಲಿ, ತೆಂಗಿನ ಸಿಪ್ಪೆ, ಕಟ್ಟಿಗೆ, ಜಲಪಾತ್ರೆ.

### ಶ್ಮಶಾನಕ್ಕೆ ಕೊಂಡೊಯ್ಯುವ ಸಾಮಗ್ರಿಗಳು

(ಮೇಲಿನ ಸಾಹಿತ್ಯದೊಂದಿಗೆ ಆಯ್ದ ಸಾಮಾಗ್ರಿಗಳು)

ಗೆರಸೆ, ನೀರಿನ ಮಡಕೆ, ಅಗ್ನಿ, ಹಾಲು, ತುಪ್ಪ, ಮೊಸರು, ಗೋಮಯ, ಎಳ್ಳು, ದರ್ಭೆ, ಪಿಂಡ 5, ಚಿಲ್ಲರೆ, ಒರಣ್ಯ ಬಟ್ಟೆ, ಶಮಿಸಮಿಧೆ 3, ಅತ್ತಿಸಮಿಧೆ 5, ಅತ್ತಿಎಲೆಗಳು 3, ಕತ್ತಿ, ಪಿಕಾಸಿ, ಅಕ್ಕಿ, ಗಂಧ, ತುಳಸಿ, ಗಂಧದ ಕೊರಡು, ಕೃಷ್ಣಾಜಿನ, ಬಿಳಿಕಲ್ಲು 3, ಬಾಳೆಲೆ ದೊಣ್ಣೆ 4, ಕಬ್ಬಿಣದ ಸರಿಗೆ ಇಲ್ಲವೇ ಮೊಳೆ 3, ಹಲಸಿನ-ಮಾವಿನ ತುದಿಗಳು, ಮಾವಿನ ಚಕ್ಕೆಗಳು.

[ಆದ್ಯನಾರಾಯಣಬಲಿ ಸಾಹಿತ್ಯಗಳು

ಅಕ್ಕಿ 1 ಕೆಜಿ, ತೆಂಗಿನಕಾಯಿ 2, ವೀಳ್ಯೆದೆಲೆ 8, ಅಡಕೆ 8, ಬಾಳೇಹಣ್ಣು 4, ತಾಮ್ರ ಕಲಶ 2, ದರ್ಭೆ 1 ಕಟ್ಟು, ಹಲಸಿನ–ಮಾವಿನ ತುದಿಗಳು 2+2, ನಾಣ್ಯ 10, ಬೈರಾಸು 2, ಬಾಳೆಎಲೆ 6, ಜೇನುತುಪ್ಪ $^1/_4$ ಲೋಟೆ, ಎಕ್ಕಗಿಡ, ದಾರ,

ಪಂಚಕಾದಿದಹನಸಾಹಿತ್ಯ

ಅಕ್ಕಿಹಿಟ್ಟು $^1/_2$ ಕೆ.ಜಿ., ಪಟ್ಟೆನೂಲು 2 ಮೀಟರ್, ಪಂಚರತ್ನ ಒಂದು ಇಲ್ಲವೇ 5 ಸುವರ್ಣ, ತುಪ್ಪ 50 ಗ್ರಾಂ.]

ಪ್ರಾಣಪಕ್ಷಿ ಹಾರಿ ಹೋದ ಬಳಿಕ ನಿಷ್ಕ್ರಿಯತೆಯನ್ನು ಖಚಿತಪಡಿಸಿ ಆಕಾಶ ಕಾಣದ ಜಾಗದಲ್ಲಿ (ಮನೆಯ ವಾಸ್ತುವಿನ ಹೊರಗೆ ಚಾವಡಿಯಲ್ಲಿ) ಭೂಮಿಯನ್ನು ಗೋಮಯ ದಿಂದ ಶುದ್ಧಪಡಿಸಿ ಆಯತಾಕಾರದ ಮಂಡಲ ಮಾಡಿ ದಕ್ಷಿಣಾಗ್ರವಾಗಿ ದರ್ಭೆಯನ್ನು ಹರಡಿ, ಎಳ್ಳು ಚೆಲ್ಲಿ, ದಕ್ಷಿಣಕ್ಕೆ ಶಿರಸ್ಸು ಬರುವಂತೆ ಶವವನ್ನು ಅಂಗಾತವಾಗಿ ಮಲಗಿಸಿ, ಪಾದಾಂಗುಷ್ಠಗಳೆರಡನ್ನು, ಕೈಯ ಅಂಗುಷ್ಠಗಳೆರಡನ್ನು ದರ್ಭೆಯಿಂದ ಕಟ್ಟಿ ಶವದ ನವರಂಧ್ರಗಳಲ್ಲಿ ಕ್ರಿಮಿಗಳು ಪ್ರವೇಶಿಸದಂತೆ ಹತ್ತಿಯನ್ನು ಇಡಬೇಕು. ಅನಂತರ ಬಿಳಿಯ ಬಟ್ಟೆಯಿಂದ ಪೂರ್ಣ ಆಚ್ಛಾದನೆ ಮಾಡಿ, ಶಿರಃಪ್ರದೇಶದ ನೆಲದಲ್ಲಿ ಅಕ್ಕಿ ಹರಡಿ ತೆಂಗಿನಕಾಯಿಯನ್ನು ಒಡೆದು ಅದರ ಕಣ್ಣಿರುವ ಅರ್ಧಭಾಗದಲ್ಲಿ ತುಪ್ಪದ ದೀಪವನ್ನು ಹಚ್ಚಿ, ಪಾದದೇಶದಲ್ಲಿ ಭತ್ತ ಹರಡಿ, ತೆಂಗಿನಕಾಯಿಯ ಉಳಿದ ಅರ್ಧಭಾಗದಲ್ಲಿ ಎಳ್ಳೆಣ್ಣೆ ದೀಪವನ್ನು ಹಚ್ಚಬೇಕು. ದೀಪ ನಂದಿಹೋಗದಂತೆ ಜಾಗ್ರತೆ ವಹಿಸಬೇಕು. ಅನಂತರ ಬಂಧುಗಳಿಗೆ ಮೃತವಾರ್ತೆಯನ್ನು ತಿಳಿಸಬೇಕು. ಪುತ್ರನು ಸಮೀಪದಲ್ಲಿ ಇಲ್ಲವಾದರೆ ಸಂಬಂಧಪಟ್ಟ ಕರ್ಮಾಧಿಕಾರಿಗಳು ಇಷ್ಟು ಕ್ರಿಯೆಯನ್ನು ಮಾಡಿ ಮಗನಿಗೆ ತಿಳಿಸಬೇಕು. ತತ್‌ಕ್ಷಣ ಬರುವ ನಿರೀಕ್ಷೆ ಇದ್ದರೆ ನಿರೀಕ್ಷಿಸಬೇಕು ಇಲ್ಲವಾದರೆ ಸಂಬಂಧಪಟ್ಟ ಅಧಿಕಾರಿಗಳು ಬ್ರಾಹ್ಮಣರ ಅನುಜ್ಞೆಯನ್ನು ಪಡೆದು ಶವಸಂಸ್ಕಾರವನ್ನು ಮುಂದುವರಿಸಬೇಕು.

ಕ್ರಿಯಾಕರ್ತೃಗಳು ಉಟ್ಟ ಬಟ್ಟೆಯಲ್ಲಿ ಸ್ನಾನ ಮಾಡಿ, ಬಂದು ಪೂರ್ವಾಭಿಮುಖವಾಗಿ ಕುಳಿತು ಆಚಮನ ಮಾಡಿ ಗೋಪೀಚಂದನ ಹಾಗೂ ಮುದ್ರಾಧಾರಣೆ ಮಾಡಿ, ಪ್ರಾಣಾಯಾಮ ಮಾಡಿ, ಸಂಧ್ಯಾವಂದನೆ ಮಾಡದೇ ಇದ್ದಲ್ಲಿ ಅರ್ಘ್ಯಪ್ರದಾನಾಂತದವರೆಗೆ ಮಾಡಿ ಮಾನಸಿಕವಾಗಿ ಹತ್ತು ಗಾಯತ್ರಿ ಹಾಗೂ ಅಷ್ಟಾಕ್ಷರಮಂತ್ರ ಜಪಿಸಿ, ಆಚಾರ್ಯರಿಂದ ನಾಲ್ಕು ಎಳೆಯ ಪವಿತ್ರ ಪಡೆದು ಧರಿಸಿ ಸಂಕಲ್ಪ ಮಾಡಬೇಕು. '**ಪ್ರಾಣಸ್ಥಪ್ರಾಜ್ಞರೂಪಿ ಪರಮಾತ್ಮಾಪ್ರೇರಣಯಾ......**' (ಎಡ) **ಅಸ್ಮತ್ಪಿತುಃ [ಮಾತುಃ] ......ಗೋತ್ರಸ್ಯ [ಗೋತ್ರಾಯಾಃ] ......ಶರ್ಮಣಃ [ನಾಮ್ನ್ಯಾಃ] ಪ್ರೇತಸ್ಯ [ಪ್ರೇತಾಯಾಃ] ಉದ್ಗತಾನ್ ಪ್ರಾಣಾನ್ ಪುನರಾವಾಹನಂ ಕರ್ತುಂ ಸುಖೇನ ಪ್ರಾಣೋತ್ಕ್ರಮಣಸಿದ್ಧ್ಯರ್ಥಮ್ ಅಮಂತ್ರಕ ಮರಣೇ ಸಂಸ್ಕಾರಾರ್ಥಂ ಚ** (ಬಲ) **ಜೀವಸೂಕ್ತಮಂತ್ರಪಠನಪೂರ್ವಕ ಅಮೃತತ್ವ ಪ್ರಾಪ್ತಯೇ ಕರ್ಣಸೂಕ್ತಾದಿ ಜಪಂ ಕರಿಷ್ಯೇ ॥**

(ಹೆಂಗುಸರಿಗೆ ಸಪಿಂಡೀಕರಣದವರೆಗೆ 'ದಾ' ಶಬ್ದದ ಬದಲು 'ನಾಮ'ಶಬ್ದವನ್ನು ಹೇಳಬೇಕು.) ತನ್ನ ಹತ್ತಿರದಲ್ಲೇ ತುಲಸಿಗಿಡದ ಕುಂಡವನ್ನು ಹಾಗೂ ಶಾಲಗ್ರಾಮವನ್ನು ಇಟ್ಟು ಉತ್ತರಾಭಿಮುಖವಾಗಿ ಕುಳಿತು, ತಂದೆಯ ಶಿರವನ್ನು ನಾರಾಯಣಸ್ಮರಣೆಯೊಂದಿಗೆ ತನ್ನ ಬಲತೊಡೆಯ ಮೇಲಿಟ್ಟು ಮುಖದ ಭಾಗದ ಬಟ್ಟೆಯನ್ನು ಸ್ವಲ್ಪ ಸರಿಸಿ–

**ಓಂ ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ । ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥** –ಎಂದು ಪಠಿಸಿ ತನ್ನ ಕೈಯನ್ನು ಮೃತಜೀವಿಯ ಎದೆಯ ಮೇಲಿಟ್ಟು ಜೀವಸೂಕ್ತ ಪಠಿಸಬೇಕು.

## ಜೀವಸೂಕ್ತಮ್

ಮಾ ಪ್ರ ಗಾಮೇತಿ ಷಡೃಚಸ್ಯ ಗೌಪಾಯನೋ ಬಂಧುಃ ಶ್ರುತಬಂಧುರ್ವಿಶ್ವೇ ದೇವಾ ಗಾಯತ್ರೀ । ಯತ್ತೇ ಯಮಮಿತಿ ದ್ವಾದಶರ್ಚಸ್ಯ ಸೂಕ್ತಸ್ಯ ಗೌಪಾಯನ ಬಂಧುಃ ಶ್ರುತಬಂಧುರ್ವಿಪ್ರಬಂಧುಶ್ಚ ಮನ ಆವರ್ತನಮನುಷ್ಟುಪ್ । ಪ್ರತಾರ್ಯಾ–ಯುರಿತಿ ದಶರ್ಚಸ್ಯ ಸೂಕ್ತಸ್ಯ ಗೌಪಾಯನ ಬಂಧ್ವಾದಯ ನಿರ್ಋತ್ಯಾದಿ ತ್ರಿಷ್ಟುಬಾದಿ ಛಂದಾಂಸಿ । ಆಜನಮಿತಿ ಶ್ರುತಬಂಧುರ್ವಿಪ್ರಬಂಧುಶ್ಚ ಅಗಸ್ತ್ಯ ಸ್ವಸಾ ಏಷಾಂ ಮಾತಾ ಋಷಿಕಾ ಅನುಷ್ಟುಬಾದಿ ಛಂದಾಂಸಿ ಅಸಮಾತ್ಯಾದಿದೇವತಾಃ ॥ ಜೀವಸೂಕ್ತ ಜಪಾಭಿಮಂತ್ರಣೇ ವಿನಿಯೋಗಃ ॥

**ಓಂ ಮಾ ಪ್ರ ಗಾಮ ಪಥೋ ವಯಂ ಮಾ ಯಜ್ಞಾದಿಂದ್ರ ಸೋಮಿನಃ । ಮಾಂತಃಸ್ಥುರ್ನೋ ಅರಾತಯಃ ॥ ೧ ॥ ಯೋ ಯಜ್ಞಸ್ಯ ಪ್ರಸಾಧನಸ್ತಂತು–ರ್ದೇವೇಷ್ವಾತತಃ । ತಮಾಹುತಂ ನಶೀಮಹಿ ॥ ೨ ॥ ಮನೋ ನ್ವಾ ಹುವಾಮಹೇ ನಾರಾಶಂಸೇನ ಸೋಮೇನ । ಪಿತೄಣಾಂ ಚ ಮನ್ಮಭಿಃ ॥ ೩ ॥ ಆ ತ ಏತು ಮನಃ ಪುನಃ ಕ್ರತ್ವೇ ದಕ್ಷಾಯ ಜೀವಸೇ । ಜ್ಯೋಕ್ಚ ಸೂರ್ಯಂ ದೃಶೇ ॥ ೪ ॥ ಪುನರ್ನಃ ಪಿತರೋ ಮನೋ ದದಾತು ದೈವ್ಯೋ ಜನಃ । ಜೀವಂ ವ್ರಾತಂ ಸಚೇಮಹಿ ॥ ೫ ॥ ವಯಂ ಸೋಮಂ ವ್ರತೇ ತವ ಮನಸ್ತನೂಷು ಬಿಭ್ರತಃ । ಪ್ರಜಾವಂತಃ ಸಚೇಮಹಿ ॥ ೬ ॥**

ಓಂ ಯತ್ತೇ ಯಮಂ ವೈವಸ್ವತಂ ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೧ ॥ ಯತ್ತೇ ದಿವಂ ಯತ್ ಪೃಥಿವೀಂ ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೨ ॥ ಯತ್ತೇ ಭೂಮಿಂ ಚತುರ್ಭೃಷ್ಟಿಂ ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೩ ॥ ಯತ್ತೇ ಚತಸ್ರಃ ಪ್ರದಿಶೋ ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೪ ॥ ಯತ್ತೇ ಸಮುದ್ರಮರ್ಣವಂ ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೫ ॥ ಯತ್ತೇ ಮರೀಚೀಃ ಪ್ರವತೋ ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೬ ॥

ಓಂ ಯತ್ತೇ ಅಪೋ ಯದೋಷಧೀರ್ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೭ ॥ ಯತ್ತೇ ಸೂರ್ಯಂ ಯದುಷಸಂ ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೮ ॥ ಯತ್ತೇ ಪರ್ವತಾನ್ ಬೃಹತೋ ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೯ ॥ ಯತ್ತೇ ವಿಶ್ವಮಿದಂ ಜಗನ್ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೧೦ ॥ ಯತ್ತೇ ಪರಾಃ ಪರಾವತೋ ಮನೋ ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ೧೧ ॥ ಯತ್ತೇ ಭೂತಂ ಚ ಭವ್ಯಂ ಚ ಮನೋ

ಜಗಾಮ ದೂರಕಮ್ । ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥ ॥೧೨॥

ಓಂ ಪ್ರ ತಾರ್ಯಾಯುಃ ಪ್ರತರಂ ನವೀಯಃ ಸ್ಥಾತಾರೇವ ಕ್ರತುಮತಾ ರಥಸ್ಯ । ಅಧ ಚ್ಯವಾನ ಉತ್ತವೀತ್ಯರ್ಥಂ ಪರಾತರಂ ಸು ನಿರ್ಋತಿರ್ಜಿಹೀತಾಮ್ ॥ ೧ ॥ ಸಾಮನ್ನು ರಾಯೇ ನಿಧಿಮನ್ನ್ವನ್ನಂ ಕರಾಮಹೇ ಸು ಪುರುಧ ಶ್ರವಾಂಸಿ । ತಾ ನೋ ವಿಶ್ವಾನಿ ಜರಿತಾ ಮಮತ್ತು ಪರಾತರಂ ಸು ನಿರ್ಋತಿರ್ಜಿಹೀತಾಮ್ ॥ ೨ ॥ ಅಭೀ ಷ್ವಗರ್ಯಃ ಪೌಂಸ್ಯೈರ್ಭವೇಮ ದ್ಯೌರ್ನ ಭೂಮಿಂ ಗಿರಯೋ ನಾಜ್ರಾನ್ । ತಾ ನೋ ವಿಶ್ವಾನಿ ಜರಿತಾ ಚಿಕೇತ ಪರಾತರಂ ಸು ನಿರ್ಋತಿರ್ಜಿಹೀತಾಮ್ ॥ ೩ ॥ ಮೋ ಷು ಣಃ ಸೋಮ ಮೃತ್ಯವೇ ಪರಾ ದಾಃ ಪಶ್ಯೇಮ ನು ಸೂರ್ಯಮುಚ್ಚರಂತಮ್ । ದ್ಯುಭಿರ್ಹಿತೋ ಜರಿಮಾ ಸೂನೋ ಅಸ್ತು ಪರಾತರಂ ಸು ನಿರ್ಋತಿರ್ಜಿಹೀತಾಮ್ ॥ ೪ ॥ ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತವೇ ಸು ಪ್ರ ತಿರಾ ನ ಆಯುಃ । ರಾರಂಧಿ ನಃ ಸೂರ್ಯಸ್ಯ ಸಂದೃಶಿ ಘೃತೇನ ತ್ವಂ ತನ್ವಂ ವರ್ಧಯಸ್ವ ॥ ೫ ॥

ಓಮ್ ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಮ್ । ಜ್ಯೋಕ್ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿ ॥ ೬ ॥ ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಮ್ । ಪುನರ್ನಃ ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾಂ ಯಾ ಸ್ವಸ್ತಿಃ ॥ ೭ ॥ ಶಂ ರೋದಸೀ ಸುಬಂಧವೇ

ಯಹ್ವೀ ಋತಸ್ಯ ಮಾತರಾ । ಭರತಾಮಪ ಯದ್ರಪೋ ದ್ಯೌಃ ಪೃಥಿವಿ ಕ್ಷಮಾ ರಪೋ ಮೋ ಷು ತೇ ಕಿಂ ಚನಾಮಮತ್ ॥ ೮ ॥ ಅವ ದ್ವಕೇ ಅವ ತ್ರಿಕಾ ದಿವಶ್ಚರಂತಿ ಭೇಷಜಾ । ಕ್ಷಮಾ ಚರಿಷ್ಣ್ವೇಕಕಂ ಭರತಾಮಪ ಯದ್ರಪೋ ದ್ಯೌಃ ಪೃಥಿವಿ ಕ್ಷಮಾ ರಪೋ ಮೋ ಷು ತೇ ಕಿಂ ಚನಾಮಮತ್ ॥ ೯ ॥ ಸಮಿಂದ್ರೇರಯ ಗಾಮನಡ್ವಾಹಂ ಯ ಆವಹದುಶೀನರಾಣ್ಯಾ ಅನಃ । ಭರತಾಮಪ ಯದ್ರಪೋ ದ್ಯೌಃ ಪೃಥಿವಿ ಕ್ಷಮಾ ರಪೋ ಮೋ ಷು ತೇ ಕಿಂ ಚನಾಮಮತ್ ॥ ೧೦ ॥

ಓಮ್ ಆ ಜನಂ ತ್ವೇಷಸಂದೃಶಂ ಮಾಹೀನಾನಾಮುಪಸ್ತುತಮ್ । ಅಗನ್ಮ ಬಿಭ್ರತೋ ನಮಃ ॥ ೧ ॥ ಅಸಮಾತಿಂ ನಿತೋಶನಂ ತ್ವೇಷಂ ನಿಯಯಿನಂ ರಥಮ್ । ಭಜೇರಥಸ್ಯ ಸತ್ಪತಿಮ್ ॥ ೨ ॥ ಯೋ ಜನಾನ್ಮಹಿಷಾಁ ಇವಾಽತಿತಸ್ಥೌ ಪವೀರವಾನ್ । ಉತಾಪವೀರವಾನ್, ಯುಧಾ ॥ ೩ ॥ ಯಸ್ಯೇಕ್ಷ್ವಾಕುರುಪ ವ್ರತೇ ರೇವಾನ್ಮರಾಯ್ಯೇಧತೇ । ದಿವೀವ ಪಂಚ ಕೃಷ್ಟಯಃ ॥ ೪ ॥ ಇಂದ್ರ ಕ್ಷತ್ರಾಸಮಾತಿಷು ರಥಪ್ರೋಷ್ಠೇಷು ಧಾರಯ । ದಿವೀವ ಸೂರ್ಯಂ ದೃಶೇ ॥ ೫ ॥ ಅಗಸ್ತ್ಯಸ್ಯ ನದ್ಭ್ಯಃ ಸಪ್ತೀ ಯುನಕ್ಷಿ ರೋಹಿತಾ । ಪಣೀನ್ನ್ಯಕ್ರಮೀರಭಿ ವಿಶ್ವಾನ್ರಾಜನ್ನರಾಧಸಃ ॥ ೬ ॥

ಓಮ್ ಅಯಂ ಮಾತಾಯಂ ಪಿತಾಽಯಂ ಜೀವಾತುರಾಗಮತ್ । ಇದಂ ತವ ಪ್ರಸರ್ಪಣಂ ಸುಬಂಧವೇಹಿ ನಿರಿಹಿ ॥ ೭ ॥ ಯಥಾ ಯುಗಂ ವರತ್ರಯಾ ನಹ್ಯಂತಿ ಧರುಣಾಯ ಕಮ್ । ಏವಾ ದಾಧಾರ ತೇ ಮನೋ ಜೀವಾತವೇ ನ ಮೃತ್ಯವೇಽಥೋ ಅರಿಷ್ಟತಾತಯೇ ॥ ೮ ॥ ಯಥೇಯಂ ಪೃಥಿವೀ ಮಹೀ

ದಾಧಾರೇಮಾನ್, ವನಸ್ಪತೀನ್ । ಏವಾ ದಾಧಾರ ತೇ ಮನೋ ಜೀವಾತವೇ ನ ಮೃತ್ಯವೇಽಥೋ ಅರಿಷ್ಟತಾತಯೇ ॥ ೯ ॥ ಯಮಾದಹಂ ವೈವಸ್ವತಾತ್ ಸುಬಂಧೋರ್ಮನ ಆಭರಮ್ । ಜೀವಾತವೇ ನ ಮೃತ್ಯವೇಽಥೋ ಅರಿಷ್ಟತಾತಯೇ ॥ ೧೦ ॥ ನ್ಯಗ್ವಾತೋಽವ ವಾತಿ ನ್ಯಕ್ತಪತಿ ಸೂರ್ಯಃ। ನೀಚೀನಮಘ್ನ್ಯಾ ದುಹೇ ನ್ಯಗ್ಭವತು ತೇ ರಪಃ ॥ ೧೧ ॥ ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ । ಅಯಂ ಮೇ ವಿಶ್ವಭೇಷ-ಜೋಽಯಂ ಶಿವಾಭಿಮರ್ಶನಃ ॥ ೧೨ ॥

ಓಂ ಚಕ್ಷುಶ್ಚ ಶ್ರೋತ್ರಂ ಚ ಮನಶ್ಚ ವಾಕ್ಚ ಪ್ರಾಣಾಪಾನೌ ದೇಹ ಇದಂ ಶರೀರಮ್। ದ್ವೌಪ್ರತ್ಯಂಚಾವನುಲೋಮೌ ವಿಸರ್ಗಾ ವೇತಂ ತಂ ಮನ್ಯೇ ದಶಯಂತ್ರಮುತ್ಸಮ್ ॥ ೮ ॥ ನಖಶ್ಚ ಪೃಷ್ಠಶ್ಚ ಕರೌ ಚ ಬಾಹೂ ಜಂಘೇ ಚೋರೂ ಉದರಂ ಶಿರಶ್ಚ । ರೋಮಾಣಿ ಮಾಂಸಂ ರುಧಿರಾಸ್ಥಿಮಜ್ಜಮೇ-ತಚ್ಛರೀರಂ ಜಲಬುದ್ಬುದೋಪಮಮ್ ॥ ೯ ॥ ಭ್ರುವೌ ಲಲಾಟೇ ಚ ತಥಾ ಚ ಕರ್ಣೌ ಹನೂ ಕಪೋಲೌ ಛುಬುಕಸ್ತಥಾ ಚ। ಓಷ್ಠೌ ಚ ದಂತಾಶ್ಚ ತಥೈವ ಜಿಹ್ವಾ ಮೇ ತಚ್ಛರೀರಂ ಮುಖರತ್ನಕೋಶಮ್ ॥ ೧೦ ॥

ಅನಂತರ, ದರ್ಭೆಯಿಂದ ತಂದೆಯ ಬಲಕಿವಿಯನ್ನು (ಹೆಂಗುಸರಿಗೆ ಎಡಕಿವಿಯನ್ನು) ಮುಟ್ಟಿಕೊಂಡು ಕರ್ಣಸೂಕ್ತವನ್ನು ಜಪಿಸಬೇಕು.

* * *

# ಕರ್ಣಸೂಕ್ತಮ್



ನಾನಾನಮಿತಿ ಚತುರ್ಋಚಸ್ಯ ಆಂಗಿರಸಃ ಶಿಶುಃ ಪವಮಾನಃ ಸೋಮಃ ಪಂಕ್ತಿಶ್ಛಂದಃ । ಶರ್ಯಣಾವತೀತ್ಯೇಕಾದಶರ್ಚಸ್ಯ ಮಾರೀಚಕಶ್ಯಪಃ ಪವಮಾನಃ ಸೋಮಃ ಪಂಕ್ತಿಃ। ಯ ಇಂದೋ ಇತಿ ಚತುರ್ಋಚಸ್ಯ ಮಾರೀಚ ಕಶ್ಯಪಃ ಸೋಮಃ ಪವಮಾನಃ ಪಂಕ್ತಿಃ । ಬ್ರಹ್ಮಣಾಗ್ನಿರಿತಿರಕ್ಷೋಹಾ ರಕ್ಷೋಹಾನುಷ್ಟುಪ್। ನಾಸದಾಸೀನ್ನೋ ಸದಾಸೀದಿತಿ ಪ್ರಜಾಪತಿಃ ಪರಮೇಷ್ಠೀ ಭಾವವೃತ್ತಂ ತ್ರಿಷ್ಟುಪ್॥ ಅಮೃತತ್ವ ಪ್ರಾಪ್ತಯೇ ಜಪೇ ವಿನಿಯೋಗಃ ॥

ಓಂ ನಾನಾನಂ ವಾ ಉ ನೋ ಧಿಯೋ ವಿ ವ್ರತಾನಿ ಜನಾನಾಮ್ । ತಕ್ಷಾ ರಿಷ್ಟಂ ರುತಂ ಭಿಷಗ್ ಬ್ರಹ್ಮಾ ಸುನ್ವಂತಮಿಚ್ಛತೀಂದ್ರಾಯೇಂದೋ ಪರಿ ಸ್ರವ ॥ ೧ ॥ ಜರತೀಭಿರೋಷಧೀಭಿಃ ಪರ್ಣೇಭಿಃ ಶಕುನಾನಾಮ್ । ಕಾರ್ಮಾರೋ ಅಶ್ಮಭಿರ್ದ್ಯುಭಿರ್ಹಿರಣ್ಯವಂತಮಿಚ್ಛತೀಂದ್ರಾಯೇಂದೋ ಪರಿ ಸ್ರವ ॥ ೨ ॥ ಕಾರುರಹಂ ತತೋ ಭಿಷಗುಪಲಪ್ರಕ್ಷಿಣೀ ನನಾ । ನಾನಾಧಿಯೋ ವಸೂಯವೋಽನು ಗಾ ಇವ ತಸ್ಥಿಮೇಂದ್ರಾಯೇಂದೋ ಪರಿ ಸ್ರವ ॥ ೩ ॥ ಅಶ್ವೋ ವೋಹ್ಲಾ ಸುಖಂ ರಥಂ ಹಸನಾಮುಪಮಂತ್ರಿಣಃ । ಶೇಪೋ ರೋಮಣ್ವಂತೌ ಭೇದೌ ವಾರಿನ್ಮಂಡೂಕ ಇಚ್ಛತೀಂದ್ರಾಯೇಂದೋ ಪರಿ ಸ್ರವ ॥ ೪ ॥

ಓಂ ಶರ್ಯಣಾವತಿ ಸೋಮಮಿಂದ್ರಃ ಪಿಬತು ವೃತ್ರಹಾ । ಬಲಂ ದಧಾನ

ಆತ್ಮನಿ ಕರಿಷ್ಯನ್ವೀರ್ಯಂ ಮಹದಿಂದ್ರಾಯೇಂದೋ ಪರಿ ಸ್ರವ ॥ ೫ ॥ ಆ
ಪವಸ್ವ ದಿಶಾಂ ಪತ ಆರ್ಜೀಕಾತ್ಸೋಮ ಮೀಢ್ವಃ । ಋತವಾಕೇನ ಸತ್ಯೇನ
ಶ್ರದ್ಧಯಾ ತಪಸಾ ಸುತ ಇಂದ್ರಾಯೇಂದೋ ಪರಿ ಸ್ರವ ॥ ೬ ॥ ಪರ್ಜನ್ಯವೃದ್ಧಂ
ಮಹಿಷಂ ತಂ ಸೂರ್ಯಸ್ಯ ದುಹಿತಾಭರತ್ । ತಂ ಗಂಧರ್ವಾಃ ಪ್ರತ್ಯಗೃಭ್ಣನ್
ತಂ ಸೋಮೇ ರಸಮಾದಧುರಿಂದ್ರಾಯೇಂದೋ ಪರಿ ಸ್ರವ ॥ ೭ ॥ ಋತಂ
ವದನ್ನೃತದ್ಯುಮ್ನ ಸತ್ಯಂ ವದನ್ ಸತ್ಯಕರ್ಮನ್ । ಶ್ರದ್ಧಾಂ ವದನ್‌ತ್ಸೋಮ
ರಾಜನ್ ಧಾತ್ರಾ ಸೋಮ ಪರಿಷ್ಕೃತ ಇಂದ್ರಾಯೇಂದೋ ಪರಿ ಸ್ರವ ॥ ೮ ॥
ಸತ್ಯಮುಗ್ರಸ್ಯ ಬೃಹತಃ ಸಂ ಸ್ರವಂತಿ ಸಂಸ್ರವಾಃ। ಸಂ ಯಂತಿ ರಸಿನೋ
ರಸಾಃ ಪುನಾನೋ ಬ್ರಹ್ಮಣಾ ಹರ ಇಂದ್ರಾಯೇಂದೋ ಪರಿ ಸ್ರವ ॥ ೯ ॥

ಓಂ ಯತ್ರ ಬ್ರಹ್ಮಾ ಪವಮಾನ ಛಂದಸ್ಯಾಂ೩ ವಾಚಂ ವದನ್ । ಗ್ರಾವ್ಣಾ
ಸೋಮೇ ಮಹೀಯತೇ ಸೋಮೇನಾನಂದಂ ಜನಯನ್ನಿಂದ್ರಾಯೇಂದೋ
ಪರಿ ಸ್ರವ ॥ ೧೦ ॥ ಯತ್ರ ಜ್ಯೋತಿರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಮ್ ।
ತಸ್ಮಿನ್ಮಾಂ ಧೇಹಿ ಪವಮಾನಾಽಮೃತೇ ಲೋಕೇ ಅಕ್ಷಿತ ಇಂದ್ರಾಯೇಂದೋ
ಪರಿ ಸ್ರವ ॥ ೧೧ ॥ ಯತ್ರ ರಾಜಾ ವೈವಸ್ವತೋ ಯತ್ರಾವರೋಧನಂ ದಿವಃ ।
ಯತ್ರಾಮೂರ್ಯಹ್ವತೀರಾಪಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ
ಪರಿ ಸ್ರವ ॥ ೧೨ ॥ ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ ।
ಲೋಕಾ ಯತ್ರ ಜ್ಯೋತಿಷ್ಮಂತಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ
ಪರಿ ಸ್ರವ ॥ ೧೩ ॥ ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಮ್ ।
ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ
ಸ್ರವ ॥ ೧೪ ॥ ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।

ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ೧೫ ॥

ಓಂ ಯ ಇಂದೋಃ ಪವಮಾನಸ್ಯಾಽನು ಧಾಮಾನ್ಯಕ್ರಮೀತ್ । ತಮಾಹುಃ ಸುಪ್ರಜಾ ಇತಿ ಯಸ್ತೇ ಸೋಮಾವಿಧನ್ಮನ ಇಂದ್ರಾಯೇಂದೋ ಪರಿ ಸ್ರವ ॥ ೧೬ ॥ ಋಷೇ ಮಂತ್ರಕೃತಾಂ ಸ್ತೋಮೈಃ ಕಶ್ಯಪೋದ್ವರ್ಧಯನ್ಗಿರಃ । ಸೋಮಂ ನಮಸ್ಯ ರಾಜಾನಂ ಯೋ ಜಜ್ಞೇ ವೀರುಧಾಂ ಪತಿರಿಂದ್ರಾಯೇಂದೋ ಪರಿ ಸ್ರವ ॥ ೧೭ ॥ ಸಪ್ತ ದಿಶೋ ನಾನಾಸೂರ್ಯಾಃ ಸಪ್ತ ಹೋತಾರ ಋತ್ವಿಜಃ । ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷ ನ ಇಂದ್ರಾಯೇಂದೋ ಪರಿ ಸ್ರವ ॥ ೧೮ ॥ ಯತ್ತೇ ರಾಜಞ್ಛೃತಂ ಹವಿಸ್ತೇನ ಸೋಮಾಭಿ ರಕ್ಷ ನಃ । ಅರಾತೀವಾ ಮಾ ನಸ್ತಾರೀನ್ಮೋ ಚ ನಃ ಕಿಂಚನಾಮಮದಿಂದ್ರಾಯೇಂದೋ ಪರಿ ಸ್ರವ ॥ ೧೯ ॥

ಓಂ ಬ್ರಹ್ಮಣಾಗ್ನಿಃ ಸಂವಿದಾನೋ ರಕ್ಷೋಹಾ ಬಾಧತಾಮಿತಃ । ಅಮೀವಾ ಯಸ್ತೇ ಗರ್ಭಂ ದುರ್ಣಾಮಾ ಯೋನಿಮಾಶಯೇ ॥ ೧ ॥ ಯಸ್ತೇ ಗರ್ಭಮಮೀವಾ ದುರ್ಣಾಮಾ ಯೋನಿಮಾಶಯೇ । ಅಗ್ನಿಷ್ಟಂ ಬ್ರಹ್ಮಣಾ ಸಹ ನಿಷ್ಕ್ರವ್ಯಾದಮನೀನಶತ್ ॥ ೨ ॥ ಯಸ್ತೇ ಹಂತಿ ಪತಯಂತಂ ನಿಷತ್ಸ್ನುಂ ಯಃ ಸರೀಸೃಪಮ್ । ಜಾತಂ ಯಸ್ತೇ ಜಿಘಾಂಸತಿ ತಮಿತೋ ನಾಶಯಾಮಸಿ ॥ ೩ ॥ ಯಸ್ತ ಊರೂ ವಿಹರತ್ಯಂತರಾ ದಂಪತೀ ಶಯೇ । ಯೋನಿಂ ಯೋ ಅಂತರಾರೇಳ್ಹಿ ತಮಿತೋ ನಾಶಯಾಮಸಿ ॥ ೪ ॥ ಯಸ್ತ್ವಾ ಭ್ರಾತಾ ಪತಿರ್ಭೂತ್ವಾ ಜಾರೋ ಭೂತ್ವಾ ನಿಪದ್ಯತೇ । ಪ್ರಜಾಂ ಯಸ್ತೇ ಜಿಘಾಂಸತಿ

ತಮಿತೋ ನಾಶಯಾಮಸಿ ॥ ೫ ॥ ಯಸ್ತ್ವಾ ಸ್ವಪ್ನೇನ ತಮಸಾ ಮೋಹಯಿತ್ವಾ ನಿಪದ್ಯತೇ । ಪ್ರಜಾಂ ಯಸ್ತೇ ಜಿಘಾಂಸತಿ ತಮಿತೋ ನಾಶಯಾಮಸಿ ॥ ೬ ॥

ಓಂ ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮಾ ಪರೋ ಯತ್ । ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಮ್ ॥ ೧ ॥ ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ । ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥ ೨ ॥ ತಮ ಆಸೀತ್ತಮಸಾ ಗೂಳ್ಹಮಗ್ರೇಽಪ್ರಕೇತಂ ಸಲಿಲಂ ಸರ್ವಮಾ ಇದಮ್ । ತುಚ್ಛ್ಯೇನಾಭ್ವಪಿಹಿತಂ ಯದಾಸೀತ್ತಪಸಸ್ತನ್ಮಹಿನಾಜಾಯತೈಕಮ್ ॥ ೩ ॥ ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂ ಯದಾಸೀತ್ । ಸತೋ ಬಂಧುಮಸತಿ ನಿರವಿಂದನ್, ಹೃದಿ ಪ್ರತೀಷ್ಯಾ ಕವಯೋ ಮನೀಷಾ ॥ ೪ ॥ ತಿರಶ್ಚೀನೋ ವಿತತೋ ರಶ್ಮಿರೇಷಾಮಧಃ ಸ್ವಿದಾಸೀ೩ ದುಪರಿ ಸ್ವಿದಾಸೀ೩ತ್ । ರೇತೋಧಾ ಆಸನ್ಮಹಿಮಾನ ಅಸಂತ್ಸ್ವಧಾ ಅವಸ್ತಾತ್ಪ್ರಯತಿಃ ಪರಸ್ತಾತ್ ॥ ೫ ॥ ಕೋ ಅದ್ಧಾ ವೇದ ಕ ಇಹ ಪ್ರ ವೋಚತ್ಕುತ ಆಜಾತಾ ಕುತ ಇಯಂ ವಿಸೃಷ್ಟಿಃ । ಅರ್ವಾಗ್ದೇವಾ ಅಸ್ಯ ವಿಸರ್ಜನೇನಾಽಥಾ ಕೋ ವೇದ ಯತ ಆಬಭೂವ ॥ ೬ ॥ ಇಯಂ ವಿಸೃಷ್ಟಿರ್ಯತ ಆಬಭೂವ ಯದಿ ವಾ ದಧೇ ಯದಿ ವಾ ನ । ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್‌ತ್ಸೋ ಅಂಗ ವೇದ ಯದಿ ವಾ ನ ವೇದ ॥ ೭ ॥

ಓಂ ಯತ್ರ ತತ್ಪರಮಂ ಪದಂ ವಿಷ್ಣೋರ್ಲೋಕೇ ಮಹೀಯತೇ ।

ದೇವೈಃ ಸುಕೃತಕರ್ಮಭಿಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ತತ್ಪರಮಾಪ್ಯಂ ಭೂತಾನಾಮಧಿಪತಿಮ್ । ಭಾವಭಾವೀ ಚ ಯೋಗೀಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ಲೋಕಾಸ್ತನೂತ್ಯಜಃ ಶ್ರದ್ಧಯಾ ತಪಸಾ ಜಿತಾಃ । ತೇಜಶ್ಚ ಯತ್ರ ಬ್ರಹ್ಮ ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ದೇವಾ ಮಹಾತ್ಮಾನಃ ಸೇಂದ್ರಾಶ್ಚ ಸಮರುದ್ಗಣಾಃ । ಬ್ರಹ್ಮಾ ಚ ಯತ್ರ ವಿಷ್ಣುಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ಗಂಗಾ ಚ ಯಮುನಾ ಚ ಯತ್ರ ಪ್ರಾಚೀ ಸರಸ್ವತೀ । ಯತ್ರ ಸೋಮೇಶ್ವರೋ ದೇವಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ತದ್ವಿಷ್ಣುರ್ಮ–ಹೀಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥

ಓಂ ಓಂ ನಮೋ ನಾರಾಯಣಾಯ ಓಮ್ ॥

ಓಮ್ ಇತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ ।
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥

ಶ್ರೀಮನ್ನಾರಾಯಣವಾಸುದೇವ ಗೋವಿಂದ ವೈಕುಂಠ ಮುಕುಂದ ಕೃಷ್ಣ ।
ಶ್ರೀಕೇಶವಾನಂತ ಮುಕುಂದವಿಷ್ಣೋ ಮಾಂ ತ್ರಾಹಿ ಸಂಸಾರಭುಜಂಗದಷ್ಟಮ್ ॥

ಹೀಗೆ ನಾರಾಯಣಸ್ಮರಣೆಯೊಂದಿಗೆ ಗಂಗಾದಿ ತೀರ್ಥವನ್ನು ಪ್ರಾಶನ ಮಾಡಿಸಿ ತುಳಸೀಪುಷ್ಪಗಳಿಂದ ಅಲಂಕರಿಸಿ ದಾನಸಂಕಲ್ಪ ಮಾಡಬೇಕು.

(ಸೂಚನೆ : ಹೆಚ್ಚಿನ ಕಡೆಗಳಲ್ಲಿ ಹತ್ತನೇ ದಿನದವರೆಗೆ ಯಾವುದೇ ದಾನದಕ್ಷಿಣೆಗಳನ್ನು ಪಡೆಯದ ಕಾರಣ ಯಜಮಾನನು ಅವನ ಸಂಪತ್ತಿಗೆ ಸರಿಯಾಗಿ ಮೊದಲನೆಯ ದಿನದಿಂದ ಹತ್ತನೇ ದಿನದ ವರೆಗೆ ಯಾವುದೇ ಗೋದಾನವಾಗಲಿ ಆಮಾನ್ನದಾನವಾಗಲಿ ಮುಂದೆ ಕೊಡುವುದಾದರೆ ಮಾತ್ರ ಸೂತಕಾಂತದಲ್ಲಿ ಕೊಡುತ್ತೇನೆಂದು ಸಂಕಲ್ಪ ಮಾಡಬೇಕೇ ಹೊರತು ಕೊಡುತ್ತೇನೆಂದು ಹೇಳಿ ಕೊನೆಗೆ ಕೊಡದಿದ್ದರೆ ಮಹಾದೋಷವಾಗುವುದು.

ಹಾಗಾಗಿ ದಾನಸಂಕಲ್ಪದ ಮೊದಲು ಯಜಮಾನನಲ್ಲಿ ಕೇಳಿ ಮಾಡುವುದು ಉತ್ತಮ ಎಂಬುದು ಪ್ರಾಜ್ಞರ ಅಭಿಪ್ರಾಯವಾಗಿದೆ.)

**ಶುಭಪುಣ್ಯತಿಥೌ**..... (ಎಡ) **ಮಮ ಪಿತುಃ ಜನ್ಮಪ್ರಭೃತಿ ಏತಾವತ್ಕಾಲಪರ್ಯಂತಂ** (ಪುಟಸಂಖ್ಯೆ 22) (ಬಲ) **ಪ್ರಾಣಸ್ಥಶ್ರೀಮಹಾವಿಷ್ಣುಪ್ರೀತ್ಯರ್ಥಂ ದಶದಾನಮ್, ಉತ್ಕ್ರಾಂತಿಸಂಜ್ಞಕಗೋದಾನಂ ತಿಲದಾನಂ ಚ ಬ್ರಾಹ್ಮಣಾಭಾವೇ ಸೂತಕಾಂತೇ ಕರಿಷ್ಯೇ ॥** –ಎಂದು ಸಂಕಲ್ಪಿಸಿ,

**ಓಮ್ ಅಸುನೀತೇ .......... ಮೃಳಯಾ ನಃ ಸ್ವಸ್ತಿ** ॥ (ಪುಟಸಂಖ್ಯೆ 42)

–ಎಂದು ಪಠಿಸಿ ಜೀವವು ದೇಹದಿಂದ ಸುಖವಾಗಿ ಹೊರಟಿತು ಎಂದು ಭಾವಿಸಿ ಮುಖದ ಬಟ್ಟೆಯನ್ನು ಮುಚ್ಚಿ ತಂದೆಯ ಶಿರವನ್ನು ಕೆಳಗಿಟ್ಟು ಅನಂತರ ಶವಕ್ಕೆ ಒಂದು ಪ್ರದಕ್ಷಿಣೆ ಬಂದು ನಮಸ್ಕಾರ ಮಾಡಿ ಆಚಮನ ಮಾಡಿ ಪವಿತ್ರ ಬಿಚ್ಚಿ ಹಾಕಬೇಕು.

ಪ್ರಾಣ ಹೋಗಿ ಹತ್ತು ಘಂಟೆಯ ಅನಂತರ ಶವವು ಹಳಸಿದ ವಸ್ತುವಾಗುತ್ತದೆ ಮತ್ತು ಪ್ರಾಣ ಹೋಗುವ ಸಮಯದಲ್ಲಿ ವಾಂತಿ, ಕಫ, ಜೊಲ್ಲು, ಮಲ, ಮೂತ್ರ ವಿಸರ್ಜನೆಯಾದರೆ ದೇಹವು ನಿಷಿದ್ಧವಸ್ತುಸಮಾನವಾಗುವುದರಿಂದ **'ಶರೀರಶುದ್ಧ್ಯರ್ಥಂ ತಾತ್ಕಾಲಿಕ ಪಂಚಗವ್ಯಮೇಲನಂ ಕರಿಷ್ಯೇ'** ಎಂದು ಸಂಕಲ್ಪಿಸಿ ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ –ಈ ಐದು ದ್ರವ್ಯಗಳನ್ನು ಒಟ್ಟು ಮಾಡಿ, ಶವದ ಬಾಯಿಗೆ ಸ್ವಲ್ಪ ಹಾಕಿ ಅನಂತರ ದೇಹಕ್ಕೆ ಪ್ರೋಕ್ಷಣೆ ಮಾಡಬೇಕು. ರಾತ್ರಿ ದಹನ ಮಾಡುವುದಾದರೆ ಸೂರ್ಯಾಸ್ತವಾಗಿ ನಾಲ್ಕು ಘಂಟೆಯ ಒಳಗೆ ಮಾಡಬೇಕು. ಅನಂತರವಾದರೆ ಮರುದಿನ ಮಾಡಬೇಕು. ಹೆಂಡತಿ ಸತ್ತಾಗ ಮಕ್ಕಳಿದ್ದರೆ ಗಂಡನಿಗೆ ಯಾವುದೇ ಕ್ರಿಯಾಭಾಗ ಇರುವುದಿಲ್ಲ. ಮಕ್ಕಳಿಲ್ಲದಿದ್ದರೆ ಗಂಡನಿಗೆ ಅಧಿಕಾರ; ಗಂಡನ ತಂದೆ ಇದ್ದರೆ ಗಂಡನ ತಂದೆಗೆ (ಮಾವ) ಅಧಿಕಾರ ಇದೆ.

ಕ್ರಿಯಾಕರ್ತೃವು ಮನೆಯ ಹೊರಗೆ ತಾನು ದಕ್ಷಿಣಕ್ಕೆ ಮುಖಮಾಡಿ ಕುಳಿತು ಬೆಂಕಿ ಮಾಡುವಂತೆ ಒಂಬತ್ತು ಇಟ್ಟಿಗೆಗಳಿಂದ ಒಲೆ ಮಾಡಿ ಹೊಸ ಮಡಕೆಯಲ್ಲಿ ನೀರು ತುಂಬಿಸಿ ಒಲೆಯ ಮೇಲಿಟ್ಟು ಅನಂತರ ಬೆಂಕಿ ಮಾಡಿ, ಬಿಸಿನೀರು ತಯಾರಿಸಬೇಕು. ಅನಂತರ ಕತ್ತಿ(ಕೊಡಲಿ)ಯೊಂದಿಗೆ ಮಾವಿನ ಮರದ ಬಳಿಗೆ ಹೋಗಿ ಕತ್ತಿಯಿಂದ ಮರಕ್ಕೆ ಮೂರು ಗುರುತು ಮಾಡಿ ಒಂದು ಗೆಲ್ಲನ್ನು ಕಡಿದು ಚಿಕ್ಕ ಚಿಕ್ಕ ಚೆಕ್ಕೆ ಮಾಡಿ ಉತ್ತರಕ್ಕೆ ಮುಖಮಾಡಿ ನಿಂತು ಕತ್ತಿಯನ್ನು ಹಿಂದೆ ಬಿಸಾಡಿ ಚಿತಿನಿರ್ಮಾಣದ ಜವಾಬ್ದಾರಿಯನ್ನು ಸಂಬಂಧಪಟ್ಟವರಿಗೆ ವಹಿಸಬೇಕು. ಚಿತೆಗೆ ಗಂಧ, ಮಾವು, ಬೆರಣಿ, ತುಳಸೀಕಾಷ್ಠಗಳನ್ನು ಬಳಸಬೇಕು. ಅನಂತರ ಒಂದು ಮಾವಿನ ಚೆಕ್ಕೆ ಮತ್ತು ಎಳ್ಳನ್ನು ಹಿಡಿದು,

**ತಿಲೋऽಸಿ ಸೋಮದೈವತ್ಯೋ ಗೋಸವೇ ದೇವನಿರ್ಮಿತಃ । ಪ್ರತ್ನವದ್ಭಿಃ ಪ್ರತ್ತಃ ಸ್ವಧಯೇಹಿ ಪ್ರೇತ ಇಮಾನ್ ಲೋಕಾನ್ ಪ್ರೀಣಯಾಹಿ ನಃ ॥**

ಎಂದು ಬಿಸಿನೀರಿನಲ್ಲಿ ಹಾಕಿ, ಸ್ವಲ್ಪ ಗೋಮಯ ಮತ್ತು ಮೃತ್ತಿಕೆಯನ್ನು ನೀರಿಗೆ ಹಾಕಿ, ಉಳಿದ ಚೆಕ್ಕೆಯನ್ನು ಶ್ಮಶಾನಕ್ಕೆ ಹೋಗುವಾಗ ತೆಗೆದುಕೊಂಡುಹೋಗುವ ಸಾಹಿತ್ಯದೊಂದಿಗೆ ತೆಗೆದಿಡಬೇಕು.




ಚಿತೆಯ ಬಳಿಗೆ ಶವವನ್ನು ಕೊಂಡೊಯ್ಯುವ ಶಿಬಿಕೆಯೊಂದನ್ನು (ಏಣಿಯಂತಿರುವ ಎಂಟು ಅಡಿ ಉದ್ದವಿರುವ ಹಾಗೂ ೧೫ ಅಡ್ಡ ಕೋಲುಗಳನ್ನು ಹೊಂದಿರುವ ಚಟ್ಟ) ಬಿದಿರಿನಿಂದ ಮಾಡಿ ಶಿಬಿಕೆಯ ಮಧ್ಯೆ ತೆಂಗಿನ ಹೆಣೆದ ಗರಿ ಇಟ್ಟು ಎರಡನ್ನೂ ಒಟ್ಟಿಗೆ ಬಿಗಿಯಾಗಿ ಹಗ್ಗದಿಂದ ಕಟ್ಟಿ, ದಕ್ಷಿಣಕ್ಕೆ ತುದಿಯಿರುವಂತೆ ತುಳಸೀಕಟ್ಟೆಯಿಂದ ದೂರ ಇಡಬೇಕು. ಹಾಗೆಯೇ, ಬೆಂಕಿ ಕೊಂಡೊಯ್ಯುವ ಶಿಕ್ಯವೊಂದನ್ನು (ಅಗ್ನಿ ಕೊಂಡೊಯ್ಯುವ ಮಡಕೆ) ಮಾಡಬೇಕು. ಮಡಕೆಗೆ ಸೀಳು ಬಿದಿರನ್ನು ಮಡಕೆಯ ಕುತ್ತಿಗೆಗೆ ಸರಿಯಾಗಿ ತ್ರಿಕೋಣಾಕಾರ ಮಾಡಿ ಹಗ್ಗದಿಂದ ಕಟ್ಟಿ ಅದರ ಮೂರು ಮೂಲೆಗೆ ಹಗ್ಗವನ್ನು ತೂಗು ಬಿಟ್ಟು ಅದನ್ನು ಚಟ್ಟದ ಬಳಿ ಇಡಬೇಕು. ಅನಂತರ ತನ್ನ ದೇಹದಲ್ಲಿ ಮೊದಲು ಧರಿಸಿದ್ದ ಬೆಳ್ಳಿ ಬಂಗಾರದ ಆಭರಣಗಳನ್ನು ತೆಗೆದು ಕುಟುಂಬದ ಹಿರಿಯ ಸದಸ್ಯರ ಕೈಯಲ್ಲಿ (ಕೆಲವು ಕಡೆ ಸೋದರಮಾವನ ಕೈಯಲ್ಲಿ) ಕೊಟ್ಟು ಅವರಿಂದ ಒಬ್ಬರಿಗೆ ಒಂದರ ಹಾಗೆ ನೂತನ ವಸ್ತ್ರವನ್ನು (ಕೋರಬಟ್ಟೆ ಇಲ್ಲವೇ ಆರು ಮೊಳದ ಬೈರಾಸು) ಪಡೆದು, ಕೋರಬಟ್ಟೆಯಾದರೆ ಅಡ್ಡ ಧರಿಸಿ, ಕಚ್ಚೆ ಬೈರಾಸಾಗಿದ್ದರೆ ಒಳಕಚ್ಚೆ ಧರಿಸಿ, ವಪನ ಮಾಡಿಸಿಕೊಳ್ಳಬೇಕು.

## ಕ್ಷೌರವಿಧಿಃ

(ಸೂಚನೆ:- ತಂದೆ, ತಾಯಿ, ಹೆಂಡತಿ, ಮಗ, ಮೊಮ್ಮಗ, ಸಹೋದರ, ಸಹೋದರನ ಮಗ, ಸೊಸೆ, ಚಿಕ್ಕಪ್ಪ - ಇವರ ಕ್ರಿಯೆಯಲ್ಲಿ ಮಾತ್ರ ಕ್ಷೌರ ಮಾಡಬೇಕು. ಅನ್ಯಬಂಧುಗಳ ಕಾರ್ಯದಲ್ಲಿ ವಪನ ಮಾಡಲಿಕ್ಕಿಲ್ಲ. ದಹನ ರಾತ್ರಿ ವೇಳೆಯಾದರೆ ಕ್ಷೌರ ಮಾಡಬಾರದು. ಮರುದಿನ ಮಾಡಬೇಕು. ಅನಂತರವಾದರೆ ಧರ್ಮೋದಕದ ಅನಂತರ ಮಾಡಬೇಕು.)

ಕೈ ಕಾಲು ಮುಖ ತೊಳೆದು ದಂತಧಾವನ ಮಾಡಿಕೊಂಡು, ಕ್ಷೌರಿಕನಿಗೆ ಬಾಳೆಯೆಲೆ



ಇಲ್ಲವೇ ಹರಿವಾಣದಲ್ಲಿ ಅಕ್ಕಿ, ತೆಂಗಿನಕಾಯಿ, ವೀಳ್ಯದೆಲೆ, ಅಡಕೆ, ಬಟ್ಟೆ ಸಹಿತ ಗೌರವಧನವನ್ನಿಟ್ಟು ಪೂರ್ವಕ್ಕೆ ಮುಖಮಾಡಿ ಕುಳಿತು, ಕೇಶವಾದಿ ನಾಮದಿಂದ ಆಚಮನ ಮಾಡಿ, ಆಚಾರ್ಯರಿಂದ ಒಂದು ಎಳೆಯ ಪವಿತ್ರ ಧರಿಸಿ,ಸಂಕಲ್ಪ–

**ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾಪ್ರೇರಣಯಾ ಶ್ರೀಪ್ರಾಜ್ಞರೂಪಿ ಪರಮಾತ್ಮಾಪ್ರೀತ್ಯರ್ಥಂ (ಎಡ) ಅಸ್ಮತ್ ಪಿತುಃ .......ಗೋತ್ರಸ್ಯ ......ಶರ್ಮಣ ಪ್ರೇತಸ್ಯ ಅಂಧತ್ವ ಮೂಕತ್ವ ಬಧಿರತ್ವ ಪೈಶಾಚತ್ವ ನಿವೃತ್ತಿಮುದ್ದಿಶ್ಯ ಔರ್ಧ್ವದೇಹಿಕಕರ್ಮಾಧಿಕಾರ ಸಿದ್ಧ್ಯರ್ಥಂ (ಬಲ) ಮಯಾ ಜ್ಞಾತಾಜ್ಞಾತಕೃತಸಕಲಪಾಪಕ್ಷಯದ್ವಾರಾ ದೇಹಶುದ್ಧ್ಯರ್ಥಂ ಕೃಚ್ಛ್ರಾಚರಣಂ ಕರಿಷ್ಯೇ। ವಪನಂ ಚ ಕರಿಷ್ಯೇ॥ (ಕುರುಷ್ವ) ॥**

(ಎಡ) ಜುಟ್ಟು ಕಟ್ಟಿಕೊಳ್ಳದೆ, ಕನಿಷ್ಠಪೂರ್ವಕರಾಗಿ ಚಿಲ್ಲರೆ, ಎಳ್ಳು, ದರ್ಭೆ ಹಿಡಿದು ಮಂತ್ರಪೂರ್ವಕವಾಗಿ ನಿಂತಲ್ಲೇ ಮೂರು ಪ್ರದಕ್ಷಿಣೆ ಬಂದು–

**ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।**
**ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥**

**ಆಧಿವ್ಯಾಧಿಹರಂ ನೃಣಾಂ ಮೃತ್ಯುದಾರಿದ್ರ್ಯನಾಶನಮ್ ।**
**ಶ್ರೀಪುಷ್ಟಿಕೀರ್ತಿದಂ ವಂದೇ ವಿಪ್ರಶ್ರೀಪಾದಪಂಕಜಮ್ ॥**

**ಹೇ ಪರಿಷತ್ ಬ್ರಾಹ್ಮಣಾಃ ಮಯಾ ಸಮರ್ಪಿತಾಂ ದಕ್ಷಿಣಾಂ ಕೃಚ್ಛ್ರರೂಪಾಂ ಸ್ವೀಕೃತ್ಯ ಅಸ್ಮತ್ಪಿತುಃ ..........ಗೋತ್ರಸ್ಯ .........ಶರ್ಮಣಃ ಪ್ರೇತಸ್ಯ ಔರ್ಧ್ವದೇಹಿಕ ಕರ್ಮಾಧಿಕಾರಸಿದ್ಧ್ಯರ್ಥಂ ವಪನಂ ಕರ್ತುಮ್ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು** ॥ –ಎಂದು ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲ ಮಾಡಿ ಅದರಲ್ಲಿಟ್ಟು ಬ್ರಾಹ್ಮಣರಿಂದ ಅನುಜ್ಞೆ ಕೇಳಬೇಕು.

**ಆತ್ಮನಃ ಶುದ್ಧಿಕಾಮೋ ವಾ ಪಿತೄಣಾಂ ಮುಕ್ತಿಹೇತವೇ ।**
**ವಪನಂ ಕಾರಯಾಮ್ಯದ್ಯ ವಿಪ್ರಾಣಾಂ ಸನ್ನಿಧಾವಹಮ್ ॥**

**ಯಾನಿಕಾನಿ ಚ ಪಾಪಾನಿ ಬ್ರಹ್ಮಹತ್ಯಾ ಸಮಾನಿ ಚ ।**
**ಮೇರುಮಂದರತುಲ್ಯಾನಿ ಪಾಪಾನಿ ವಿವಿಧಾನಿ ಚ ॥**
**ಕೇಶಾನಾಶ್ರಿತ್ಯ ತಿಷ್ಠಂತಿ ತಸ್ಮಾತ್ಕೇಶಾನ್ವಪಾಮ್ಯಹಮ್ ॥**

**'ಅಧಿಕಾರಸಂಪದಸ್ತು'** ಎಂದು ಬ್ರಾಹ್ಮಣರಿಂದ ಪ್ರತಿವಚನವನ್ನು ಪಡೆದು, ದಕ್ಷಿಣಕ್ಕೆ ಮುಖಮಾಡಿ ಕುಳಿತು, ಕನಿಷ್ಠಪೂರ್ವಕರಾಗಿ (ಕೆಲವರಲ್ಲಿ ಒಂದು ದರ್ಭೆಯಿಂದ

ವಪನಮಾಡಿದಂತೆ ಮಾಡಿ ಅದನ್ನು ದಕ್ಷಿಣಕ್ಕೆ ಎಸೆದು ಆಮೇಲೆ ಕ್ಷೌರಿಕನಿಂದ ವಪನಮಾಡುವ ಕ್ರಮ.) ಜುಟ್ಟು ಇರುವ ಹಾಗೆ ತಲೆಕೂದಲು ಗಡ್ಡಮೀಸೆಗಳನ್ನು ಕ್ಷೌರಿಕನಿಂದ ವಪನ ಮಾಡಿಸಿ, (ಬಲ) ಗೋಮಯ ತುಳಸೀಮೃತ್ತಿಕಾದಿಗಳಿಂದ ಪೂರ್ವಮುಖವಾಗಿ ಸ್ನಾನ ಮಾಡಿ, ಅನಂತರ (ಎಡ) ದಕ್ಷಿಣಕ್ಕೆ ಮುಖ ಮಾಡಿ ಸ್ನಾನ ಮಾಡಬೇಕು. ಮುಳುಗಿ ಸ್ನಾನ ಮಾಡಲು ಕೆರೆ ಇಲ್ಲದಿದ್ದರೆ ಬಾವಿಯನ್ನು ಮುಟ್ಟದೆ, ಬಂಧುಮಿತ್ರರ ಸಹಾಯದಿಂದ ಇಲ್ಲವೇ ಜಲಪೂರಕಯಂತ್ರದ ಸಹಾಯದಿಂದ ನೀರು ಹಾಕಿಸಿಕೊಂಡು ಸ್ನಾನ ಮಾಡಿ (ಬಲ) ಮೈ ಒರೆಸದೇ ಶಿಖಾಬಂಧನ ಮಾಡದೆ, ಆಚಮನ ಮಾಡಿ ಪವಿತ್ರವನ್ನು ಬಿಚ್ಚಿ ಹಾಕಬೇಕು. ಕ್ರಿಯಾಕರ್ತೃಗಳು ಬಾವಿ ಕೆರೆಯನ್ನು ಮುಟ್ಟಿದ ಪಕ್ಷದಲ್ಲಿ ಬೇರೆ ಯಾರೂ ಅದನ್ನು ಮುಟ್ಟಬಾರದು. ಎಲ್ಲಾ ಬ್ರಹ್ಮದಂಡಾದಿಗಳ ಚಿಲ್ಲರೆಯನ್ನು ತುಳಸೀಕಟ್ಟೆಯ ಬಳಿ ಇಡಬೇಕು ಹನ್ನೊಂದನೇ ದಿನದಂದು ಆಚಾರ್ಯರಿಗೆ ಮುಟ್ಟಿಸಬೇಕು. ಹತ್ತು ದಿನಗಳ ಆಮಾನ್ನದಾನವಿದ್ದರೆ ಅದನ್ನು ಹನ್ನೊಂದನೆಯ ದಿನ ಕೊಡಬೇಕು.

## ಶವಸಂಸ್ಕಾರವಿಧಿಃ



ಪುನಃ ಸ್ನಾನ ಮಾಡಿ, ತಲೆ ಒರೆಸಿಕೊಳ್ಳದೆ, ಜುಟ್ಟು ಕಟ್ಟದೇ ಗೋಪೀಚಂದನವನ್ನು ಹಾಗೂ ಪಂಚಮುದ್ರಾಧಾರಣೆ ಮಾಡಿ, ಸಂಧ್ಯಾಸಮಯವಾಗಿದ್ದರೆ ಅರ್ಘ್ಯಪ್ರದಾನಾಂತದ ವರೆಗೆ ಮಾಡಿ, ಮಾನಸಿಕವಾಗಿ ಹತ್ತು ಗಾಯತ್ರೀಮಂತ್ರ ಹಾಗೂ ಅಷ್ಟಾಕ್ಷರಮಂತ್ರ ಜಪಿಸಿ, ಆಚಮನ ಮಾಡಿ, ಒಂದು ಎಳೆಯ ಪವಿತ್ರವನ್ನು ಆಚಾರ್ಯರಿಂದ ಪಡೆದು ಸಂಕಲ್ಪ ಮಾಡಬೇಕು.

**ಪ್ರಾಣಸ್ಥಪಾಪಾಪಹ ಶ್ರೀಮಹಾವಿಷ್ಣುಪ್ರೀತ್ಯರ್ಥಮ್ (ಎಡ) ಅಸ್ಮತ್ಪಿತುಃ ......ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಮರಣಕಾಲೇ ಸಂಭಾವಿತ ಊರ್ಧ್ವೋಚ್ಛಿಷ್ಟ ಮರಣ, ಅಧರೋಚ್ಛಿಷ್ಟಮರಣ, ಉಭಯೋಚ್ಛಿಷ್ಟಮರಣ, ಅಸ್ಪೃಶ್ಯಸ್ಪೃಷ್ಟಮರಣ, ಖಟ್ವಾಮರಣ, ಶಯ್ಯಾಮರಣ, ಅಂತರಾಲಮರಣ, ಕರ್ಣಸೂಕ್ತಶ್ರವಣರಾಹಿತ್ಯ ಪರ್ಯುಷಿತಮರಣ, ಅಸ್ನಾನಾದಿಮರಣಾದಿಜನಿತ ಪ್ರತ್ಯವಾಯಪರಿಹಾರಾರ್ಥಂ,**



ಇಲ್ಲವೇ ಹರಿವಾಣದಲ್ಲಿ ಅಕ್ಕಿ, ತೆಂಗಿನಕಾಯಿ, ವೀಳ್ಯದೆಲೆ, ಅಡಕೆ, ಬಟ್ಟೆ ಸಹಿತ ಗೌರವಧನವನ್ನಿಟ್ಟು ಪೂರ್ವಕ್ಕೆ ಮುಖಮಾಡಿ ಕುಳಿತು, ಕೇಶವಾದಿ ನಾಮದಿಂದ ಆಚಮನ ಮಾಡಿ, ಆಚಾರ್ಯರಿಂದ ಒಂದು ಎಳೆಯ ಪವಿತ್ರ ಧರಿಸಿ,ಸಂಕಲ್ಪ–

**ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾಪ್ರೇರಣಯಾ ಶ್ರೀಪ್ರಾಜ್ಞರೂಪಿ ಪರಮಾತ್ಮಾಪ್ರೀತ್ಯರ್ಥಂ** (ಎಡ) **ಅಸ್ಮತ್ ಪಿತುಃ .......ಗೋತ್ರಸ್ಯ ......ಶರ್ಮಣ ಪ್ರೇತಸ್ಯ ಅಂಧತ್ವ ಮೂಕತ್ವ ಬಧಿರತ್ವ ಪೈಶಾಚತ್ವ ನಿವೃತ್ತಿಮುದ್ದಿಶ್ಯ ಔರ್ಧ್ವದೇಹಿಕಕರ್ಮಾಧಿಕಾರ ಸಿದ್ಧ್ಯರ್ಥಂ** (ಬಲ) **ಮಯಾ ಜ್ಞಾತಾಜ್ಞಾತಕೃತಸಕಲಪಾಪಕ್ಷಯದ್ವಾರಾ ದೇಹಶುದ್ಧ್ಯರ್ಥಂ ಕೃಚ್ಛ್ರಾಚರಣಂ ಕರಿಷ್ಯೇ। ವಪನಂ ಚ ಕರಿಷ್ಯೇ॥ (ಕುರುಷ್ವ) ॥**

(ಎಡ) ಜುಟ್ಟು ಕಟ್ಟಿಕೊಳ್ಳದೆ, ಕನಿಷ್ಠಪೂರ್ವಕರಾಗಿ ಚಿಲ್ಲರೆ, ಎಳ್ಳು, ದರ್ಭೆ ಹಿಡಿದು ಮಂತ್ರಪೂರ್ವಕವಾಗಿ ನಿಂತಲ್ಲೇ ಮೂರು ಪ್ರದಕ್ಷಿಣೆ ಬಂದು–

**ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।**
**ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥**

**ಆಧಿವ್ಯಾಧಿಹರಂ ನೄಣಾಂ ಮೃತ್ಯುದಾರಿದ್ರ್ಯನಾಶನಮ್ ।**
**ಶ್ರೀಪುಷ್ಟಿಕೀರ್ತಿದಂ ವಂದೇ ವಿಪ್ರಶ್ರೀಪಾದಪಂಕಜಮ್ ॥**

**ಹೇ ಪರಿಷತ್ ಬ್ರಾಹ್ಮಣಾಃ ಮಯಾ ಸಮರ್ಪಿತಾಂ ದಕ್ಷಿಣಾಂ ಕೃಚ್ಛ್ರರೂಪಾಂ ಸ್ವೀಕೃತ್ಯ ಅಸ್ಮತ್ಪಿತುಃ ..........ಗೋತ್ರಸ್ಯ .........ಶರ್ಮಣಃ ಪ್ರೇತಸ್ಯ ಔರ್ಧ್ವದೇಹಿಕ ಕರ್ಮಾಧಿಕಾರಸಿದ್ಧ್ಯರ್ಥಂ ವಪನಂ ಕರ್ತುಮ್ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು** ॥ –ಎಂದು ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲ ಮಾಡಿ ಅದರಲ್ಲಿಟ್ಟು ಬ್ರಾಹ್ಮಣರಿಂದ ಅನುಜ್ಞೆ ಕೇಳಬೇಕು.

**ಆತ್ಮನಃ ಶುದ್ಧಿಕಾಮೋ ವಾ ಪಿತೄಣಾಂ ಮುಕ್ತಿಹೇತವೇ ।**
**ವಪನಂ ಕಾರಯಾಮ್ಯದ್ಯ ವಿಪ್ರಾಣಾಂ ಸನ್ನಿಧಾವಹಮ್ ॥**

**ಯಾನಿಕಾನಿ ಚ ಪಾಪಾನಿ ಬ್ರಹ್ಮಹತ್ಯಾ ಸಮಾನಿ ಚ ।**
**ಮೇರುಮಂದರತುಲ್ಯಾನಿ ಪಾಪಾನಿ ವಿವಿಧಾನಿ ಚ ॥**
**ಕೇಶಾನಾಶ್ರಿತ್ಯ ತಿಷ್ಠಂತಿ ತಸ್ಮಾತ್ಕೇಶಾನ್ವಪಾಮ್ಯಹಮ್ ॥**

**'ಅಧಿಕಾರಸಂಪದಸ್ತು'** ಎಂದು ಬ್ರಾಹ್ಮಣರಿಂದ ಪ್ರತಿವಚನವನ್ನು ಪಡೆದು, ದಕ್ಷಿಣಕ್ಕೆ ಮುಖಮಾಡಿ ಕುಳಿತು, ಕನಿಷ್ಠಪೂರ್ವಕರಾಗಿ (ಕೆಲವರಲ್ಲಿ ಒಂದು ದರ್ಭೆಯಿಂದ

ವಪನಮಾಡಿದಂತೆ ಮಾಡಿ ಅದನ್ನು ದಕ್ಷಿಣಕ್ಕೆ ಎಸೆದು ಆಮೇಲೆ ಕ್ಷೌರಿಕನಿಂದ ವಪನಮಾಡುವ ಕ್ರಮ.) ಜುಟ್ಟು ಇರುವ ಹಾಗೆ ತಲೆಕೂದಲು ಗಡ್ಡಮೀಸೆಗಳನ್ನು ಕ್ಷೌರಿಕನಿಂದ ವಪನ ಮಾಡಿಸಿ, (ಬಲ) ಗೋಮಯ ತುಳಸೀಮೃತ್ತಿಕಾದಿಗಳಿಂದ ಪೂರ್ವಮುಖವಾಗಿ ಸ್ನಾನ ಮಾಡಿ, ಅನಂತರ (ಎಡ) ದಕ್ಷಿಣಕ್ಕೆ ಮುಖ ಮಾಡಿ ಸ್ನಾನ ಮಾಡಬೇಕು. ಮುಳುಗಿ ಸ್ನಾನ ಮಾಡಲು ಕೆರೆ ಇಲ್ಲದಿದ್ದರೆ ಬಾವಿಯನ್ನು ಮುಟ್ಟದೆ, ಬಂಧುಮಿತ್ರರ ಸಹಾಯದಿಂದ ಇಲ್ಲವೇ ಜಲಪೂರಕಯಂತ್ರದ ಸಹಾಯದಿಂದ ನೀರು ಹಾಕಿಸಿಕೊಂಡು ಸ್ನಾನ ಮಾಡಿ (ಬಲ) ಮೈ ಒರೆಸದೇ ಶಿಖಾಬಂಧನ ಮಾಡದೆ, ಆಚಮನ ಮಾಡಿ ಪವಿತ್ರವನ್ನು ಬಿಚ್ಚಿ ಹಾಕಬೇಕು. ಕ್ರಿಯಾಕರ್ತೃಗಳು ಬಾವಿ ಕೆರೆಯನ್ನು ಮುಟ್ಟಿದ ಪಕ್ಷದಲ್ಲಿ ಬೇರೆ ಯಾರೂ ಅದನ್ನು ಮುಟ್ಟಬಾರದು. ಎಲ್ಲಾ ಬ್ರಹ್ಮದಂಡಾದಿಗಳ ಚಿಲ್ಲರೆಯನ್ನು ತುಳಸೀಕಟ್ಟೆಯ ಬಳಿ ಇಡಬೇಕು ಹನ್ನೊಂದನೇ ದಿನದಂದು ಆಚಾರ್ಯರಿಗೆ ಮುಟ್ಟಿಸಬೇಕು. ಹತ್ತು ದಿನಗಳ ಆಮಾನ್ನದಾನವಿದ್ದರೆ ಅದನ್ನು ಹನ್ನೊಂದನೆಯ ದಿನ ಕೊಡಬೇಕು.

## ಶವಸಂಸ್ಕಾರವಿಧಿಃ



ಪುನಃ ಸ್ನಾನ ಮಾಡಿ, ತಲೆ ಒರೆಸಿಕೊಳ್ಳದೆ, ಜುಟ್ಟು ಕಟ್ಟದೇ ಗೋಪೀಚಂದನವನ್ನು ಹಾಗೂ ಪಂಚಮುದ್ರಾಧಾರಣೆ ಮಾಡಿ, ಸಂಧ್ಯಾಸಮಯವಾಗಿದ್ದರೆ ಅರ್ಘ್ಯಪ್ರದಾನಾಂತದ ವರೆಗೆ ಮಾಡಿ, ಮಾನಸಿಕವಾಗಿ ಹತ್ತು ಗಾಯತ್ರೀಮಂತ್ರ ಹಾಗೂ ಅಷ್ಟಾಕ್ಷರಮಂತ್ರ ಜಪಿಸಿ, ಆಚಮನ ಮಾಡಿ, ಒಂದು ಎಳೆಯ ಪವಿತ್ರವನ್ನು ಆಚಾರ್ಯರಿಂದ ಪಡೆದು ಸಂಕಲ್ಪ ಮಾಡಬೇಕು.

**ಪ್ರಾಣಸ್ಥಪಾಪಾಪಹ ಶ್ರೀಮಹಾವಿಷ್ಣುಪ್ರೀತ್ಯರ್ಥಮ್ (ಎಡ) ಅಸ್ಮತ್ಪಿತುಃ ......ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಮರಣಕಾಲೇ ಸಂಭಾವಿತ ಊರ್ಧ್ವೋಚ್ಛಿಷ್ಟ ಮರಣ, ಅಧರೋಚ್ಛಿಷ್ಟಮರಣ, ಉಭಯೋಚ್ಛಿಷ್ಟಮರಣ, ಅಸ್ಪೃಶ್ಯಸ್ಪೃಷ್ಟಮರಣ, ಖಟ್ವಾಮರಣ, ಶಯ್ಯಾಮರಣ, ಅಂತರಾಲಮರಣ, ಕರ್ಣಸೂಕ್ತಶ್ರವಣರಾಹಿತ್ಯ ಪರ್ಯುಷಿತಮರಣ, ಅಸ್ನಾನಾದಿಮರಣಾದಿಜನಿತ ಪ್ರತ್ಯವಾಯಪರಿಹಾರಾರ್ಥಂ,**

**ಯಾವಜ್ಜೀವನಪರ್ಯಂತ ಸಂಧ್ಯಾವಂದನಾದಿ ಲೋಪಜನಿತ ಸಕಲದೋಷ–ಪರಿಹಾರಾರ್ಥಂ** (ಬಲ) **ಪಂಚದಶ, ದ್ವಾದಶ, ನವ, ಷಟ್, ತ್ರಿಕೃಚ್ಛ್ರಾದ್ರವ್ಯ ಅನ್ಯತಮ ಪ್ರಾಯಶ್ಚಿತ್ತಂ ತತ್ಪ್ರತ್ಯಾಮ್ನಾಯ ದ್ರವ್ಯದಾನಮ್ ಆಶೌಚಾಂತೇ ಅಹಮಾಚರಿಷ್ಯೇ। ತದಂಗ ಯಥಾಶಕ್ತಿ ಬ್ರಹ್ಮದಂಡಂ ಕರಿಷ್ಯೇ॥**

ಎಂದು ೧೪ ನಾಣ್ಯ, ಎಳ್ಳು, ದರ್ಭೆ ಹಿಡಿದು ಮಂತ್ರಪೂರ್ವಕವಾಗಿ ನಿಂತಲ್ಲಿ ಮೂರು ಪ್ರದಕ್ಷಿಣೆ ಬಂದು ಬ್ರಹ್ಮದಂಡ ಇಟ್ಟು, '**ಪೂರ್ವೋಕ್ತ ದೋಷಪರಿಹಾರಪೂರ್ವಕ ದಾಹಾಧಿಕಾರ ಸಂಪದಸ್ತ್ವಿತಿ ಭವಂತೋ ಬ್ರುವಂತು । (ಅಧಿಕಾರಸಂಪದಸ್ತು ॥)**. ಎಂದು ಪ್ರತಿವಚನ ಪಡೆದುಕೊಳ್ಳಬೇಕು.

**ಶವಸಂಸ್ಕಾರಾಧಿಕಾರಸಿದ್ಧ್ಯರ್ಥಂ ಬ್ರಹ್ಮದಂಡಂ ಕರಿಷ್ಯೇ ॥** ಎಂದು ಸಂಕಲ್ಪಿಸಿ,

(ಹಗಲು ಮರಣವಾಗಿ ರಾತ್ರಿ ದಹನ ಮಾಡುವುದಾದರೆ ಇಲ್ಲವೇ ರಾತ್ರಿ ಮರಣ ಹೊಂದಿ ಮರುದಿನ ದಹನ ಮಾಡುವುದಾದರೆ, '**ರಾತ್ರಾವಕೃತ (ದಿವಾವಕೃತ) ಸಂಸ್ಕಾರ ಜನಿತದೋಷಪರಿಹಾರಪೂರ್ವಕ ಶವಸಂಸ್ಕಾರಾಧಿಕಾರಸಿದ್ಧ್ಯರ್ಥಂ ಬ್ರಹ್ಮದಂಡಂ ಕರಿಷ್ಯೇ ॥**' ಎಂದು ಸೇರಿಸಿಕೊಳ್ಳಬೇಕು)

ಹಿಂದಿನ ಕ್ರಮದಂತೆ ಬ್ರಹ್ಮದಂಡ ಇಟ್ಟು, '**ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು । (ಅಧಿಕಾರ ಸಂಪದಸ್ತು ॥)** ಎಂದು ಪ್ರತಿವಚನ ಪಡೆದುಕೊಳ್ಳಬೇಕು. (ಕೆಲವರಲ್ಲಿ ಗೋ, ದೀಪ, ಕ್ಷುರದಾನ ಕೊಡುವ ಪದ್ಧತಿ ಇದೆ. ಹಾಗೆ ಕೊಡುವುದಿದ್ದಲ್ಲಿ ಹನ್ನೊಂದನೆಯ ದಿನ ಕೊಡುವುದಾಗಿ ಸಂಕಲ್ಪಿಸಬೇಕು.)

ಅಂಗಳದಲ್ಲಿ ಮಾಡಿನ ಅಂಚಿನ ನೀರು ಬೀಳುವ ಜಾಗದಲ್ಲಿ ತುಳಸೀಕಟ್ಟೆಯ ಎದುರು ತುಳಸೀಕಟ್ಟೆಗೆ ತಾಗದ ಹಾಗೆ ಗೋಮಯದಿಂದ ಆಯತಾಕಾರದ ಮಂಡಲ ಮಾಡಿ ದಕ್ಷಿಣಾಗ್ರವಾಗಿ ದರ್ಭೆಯನ್ನು ಹಾಕಿ ಅದರ ಮೇಲೆ ಹಲಗೆ ಇಲ್ಲವೇ ಮರದ ಮೂರು ತುಂಡು ಇಟ್ಟು (ಬೇಕಾದರೆ ಅದರ ಮೇಲೆ ಇಡಿ ಬಾಳೆಲೆಯನ್ನೂ ಇಡಬಹುದು) ಅನಂತರ ಕ್ರಿಯಾಕರ್ತೃಗಳು ಶವದ ಬಳಿಗೆ ಬಂದು ಹಿಂದೆ ಹಚ್ಚಿಟ್ಟ ಧಾನ್ಯಸಹಿತ ತೆಂಗಿನ ಹೋಳಿನ ದೀಪಗಳೆರಡನ್ನು ಗೆರಸೆಯಲ್ಲಿಟ್ಟು ಉಪವೀತವನ್ನು ಎಡದಿಂದ, ಬಾಂಧವರು ಉಪವೀತವನ್ನು ಮಾಲಾಕಾರ ಮಾಡಿ, ನಾರಾಯಣಸ್ಮರಣೆಯೊಂದಿಗೆ ಬಂಧುಗಳ ಸಹಾಯದಿಂದ ದೀಪವನ್ನು ಎದುರುಮಾಡಿಕೊಂಡು ಶವದ ಕಾಲು ಮುಂದು ಮಾಡಿ ಅಂಗಳಕ್ಕೆ ತಂದು, ಹಲಗೆಯ ಮೇಲೆ ದಕ್ಷಿಣಶಿರವಾಗಿರುವಂತೆ ಮಲಗಿಸಬೇಕು. ದೀಪಸಹಿತ ಗೆರಸೆಯನ್ನು ಅಲ್ಲೇ ಇಡಬೇಕು.

ಮೃತವ್ಯಕ್ತಿಯು ಅಪಮೃತ್ಯುವಿನಿಂದ ಮರಣಹೊಂದಿದ್ದಲ್ಲಿ ಶವಸ್ನಾನಸಂಸ್ಕಾರಕ್ಕಿಂತ ಮೊದಲು ಮುಂದೆ ಹೇಳುವ '**ಆದ್ಯನಾರಾಯಣಬಲಿ**'ಯನ್ನು ಮಾಡಿ, ಅನಂತರ ಶವಸ್ನಾನವನ್ನು ಮಾಡಬೇಕು. ಒಂದು ವೇಳೆ ಮೃತವ್ಯಕ್ತಿಯದು ಸಹಜ ಮರಣವಾಗಿದ್ದಲ್ಲಿ ಶವಸ್ನಾನಸಂಸ್ಕಾರ (ಪುಟಸಂಖ್ಯೆ 60) ಮಾಡುವವನಾಗಬೇಕು.

# ಆದ್ಯನಾರಾಯಣಬಲಿಃ

1. ಸ್ವಸ್ತಿಕೆ
2. ಪಿಂಡಸ್ಥಳ
3. ಅಗ್ನಿ
4. ತುಳಸಿಕಟ್ಟೆ
5. ಶವ




ಪೂ
ಉ ದ
ಪ

## ಬ್ರಹ್ಮಚಾರಿಮರಣೇ ನಾರಾಯಣಬಲಿಃ

ಹದಿನಾರು ಅಥವಾ ಹದಿನಾಲ್ಕು ವರ್ಷದೊಳಗಿನ ಬ್ರಹ್ಮಚಾರಿಯು ಮರಣ ಹೊಂದಿದಾಗ ಮಾಡುವ ವ್ರತವಿಸರ್ಗವಿಧಿ–

ತುಳಸಿಕಟ್ಟೆಯ ಎದುರು ಶವವನ್ನು ತಂದು ಹಲಗೆಯಲ್ಲಿ ಮಲಗಿಸಿದ ಅನಂತರ ಕ್ರಿಯಾಕರ್ತೃ ಪೂರ್ವಮುಖವಾಗಿ ಕುಳಿತು (ಬಲ) ಸಂಕಲ್ಪ ಮಾಡಬೇಕು,

**ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ..... ಪ್ರೀತ್ಯರ್ಥಂ** (ಎಡ) **ಅಸ್ಮನ್ಮಿತ್ರಸ್ಯ** (ಸಂಬಂಧವಾಚಕಶಬ್ದ) **.......ಗೋತ್ರಸ್ಯ .....ಶರ್ಮಣಃ ಬ್ರಹ್ಮಚಾರಿಣಃ ಪ್ರೇತಸ್ಯ ಅವಕೀರ್ಣದೋಷನಿವೃತ್ತ್ಯರ್ಥಂ ದ್ವಾದಶಾಬ್ದ, ಷಡಬ್ದ, ತ್ರ್ಯಬ್ದಾನ್ಯತಮ ಪ್ರಾಯಶ್ಚಿತ್ತಾಂ ಗೋನಿಷ್ಕ್ಯ ಪ್ರತ್ಯಾಮ್ನಾಯ ಯಥಾಶಕ್ತಿದ್ರವ್ಯೇಣ ತಥಾ ಮೃತಬ್ರಹ್ಮಚಾರಿಣಃ ಬ್ರಹ್ಮಚರ್ಯಾಶ್ರಮೇಣ ಮರಣದೋಷನಿವೃತ್ತಿಪೂರ್ವಕ ಉತ್ತಮಲೋಕಾವಾಪ್ತ್ಯರ್ಥಂ** (ಬಲ) **ಬ್ರಹ್ಮಚಾರಿಭ್ಯಃ ಪ್ರತ್ಯೇಕಂ ಕೌಪೀನಾದಿ ಪದಾರ್ಥಾನ್ ಸದ್ಯಃ (ಸೂತಕಾಂತೇ) ಕರಿಷ್ಯೇ ॥ ತದಂಗ ಬ್ರಹ್ಮಚಾರಿಣೋ ವ್ರತವಿಸರ್ಗಂ ಕರಿಷ್ಯೇ ॥** ಸಂಕಲ್ಪ ಮಾಡಿ,

**ನಾಂದೀಶ್ರಾದ್ಧಸಂಪೂರ್ಣಫಲಪ್ರಾಪ್ತ್ಯರ್ಥಂ ಹಿರಣ್ಯೇನ ಕರಿಷ್ಯೇ ॥ (ಕುರುಷ್ವ) ॥** ಸುವರ್ಣ (ಇಲ್ಲವೇ ಅದರ ಮೌಲ್ಯ) ಹಿಡಿದು,

**ಓಮ್ ಇದಂ ಮೇ ಜ್ಯೋತಿರಮೃತಂ ಹಿರಣ್ಯಂ ಪಕ್ವಂ ಕ್ಷೇತ್ರಾತ್ ಕಾಮದುಘಾ ಮ ಏಷಾ । ಇದಂ ಧನಂ ನಿದಧೇ ಬ್ರಾಹ್ಮಣೇಷು ಕೃಣ್ವೇ ಪಂಥಾಂ ಪಿತೃಷು ಯಃ ಸ್ವರ್ಗಃ ॥**

ಎಂದು ಸುವರ್ಣವನ್ನು ಭೂಮಿಯ ಮೇಲಿಟ್ಟು **'ನಾಂದೀಶ್ರಾದ್ಧಸಂಪೂರ್ಣಫಲಾವಾಪ್ತಿರಸ್ತ್ವಿತಿ ಭವಂತೋ ಬ್ರುವಂತು ।'** (ನಾಂದೀಶ್ರಾದ್ಧಸಂಪೂರ್ಣಫಲಪ್ರಾಪ್ತಿರಸ್ತು ಎಂದು) ಬ್ರಾಹ್ಮಣರಿಂದ ಪ್ರತಿವಚನ ಪಡೆದು, **ದುರ್ಗತಿಪರಿಹಾರಾರ್ಥಂ ಕೃಚ್ಛ್ರಾಚರಣಂ ಕರಿಷ್ಯೇ ॥** ಎಂದು **ಬ್ರಹ್ಮದಂಡ** ಇಟ್ಟು ಬ್ರಾಹ್ಮಣರಿಂದ (**'ಕುರುಷ್ವ'** ಎಂದು) ಪ್ರತಿವಚನ ಪಡೆದು ಶಿಕ್ಯದಲ್ಲಿ (ಬಿದಿರು ಕಟ್ಟಿದ ಮಡಕೆ) ಮೊದಲು ಹಚ್ಚಿಟ್ಟ ತೆಂಗಿನ ಹೋಳಿನಲ್ಲಿದ್ದ ದೀಪದಿಂದ, ಕೆಂಡ ಸಿದ್ಧಪಡಿಸಿ ಕಪಾಲಾಗ್ನಿಯನ್ನು ಮಾಡಬೇಕು. [ಬ್ರಹ್ಮಚಾರಿ, ವಾನಪ್ರಸ್ಥರಿಗೆ ಕಪಾಲಾಗ್ನಿ =ಕೆಂಡಗಳ ಮೇಲೆ ಮಡಕೆ ತುಂಡು ಇಟ್ಟು ಜೊತೆಗೆ ಕಟ್ಟಿಗೆ ಚೂರು ಇಟ್ಟಾಗ ಜ್ವಲಿಸುವ ಅಗ್ನಿ.]

ಯಮಸ್ಯೇತಿ ವೈವಸ್ವತೀ ಯಮೀ ಋಷಿಕಾ । ತ್ರಿಷ್ಟುಪ್ ಛಂದಃ । ಯಮೋ ದೇವತಾಃ । ಕಪಾಲಾಗ್ನಿಸಿದ್ಧಯೇ ಆಜ್ಯಹೋಮೇ ವಿನಿಯೋಗಃ ॥

**ಓಂ ಯಮಸ್ಯ ಮಾ ಯಮ್ಯ೧ಂ ಕಾಮ ಆಗನ್ತ್ಸಮಾನೇ ಯೋನೌ ಸಹಶೇಯ್ಯಾಯ । ಜಾಯೇವ ಪತ್ಯೇ ತನ್ವಂ ರಿರಿಚ್ಯಾಂ ವಿ ಚಿದ್ವೃಹೇವ ರಥ್ಯೇವ ಚಕ್ರಾ ಸ್ವಾಹಾ ॥ ಯಮಾಯ ಇದಂ ನ ಮಮ ॥** –ಎಂದು ಮೂರು ತುಪ್ಪದ ಆಹುತಿ ನೀಡಿ, ಅಗ್ನಿ ಸಂಪಾದಿಸಬೇಕು.

### ಅಗ್ನಿಧ್ಯಾನಮ್

ಅಕ್ಕಿ ಹಿಡಿದು–

**ಅಗ್ನಿಂ ಪ್ರಜ್ವಲಿತಂ ವಂದೇ ಜಾತವೇದಂ ಹುತಾಶನಮ್ ।**
**ಸುವರ್ಣವರ್ಣಮನಲಂ ಸಮಿದ್ಧಂ ವಿಶ್ವತೋಮುಖಮ್ ॥**

**ಅಗ್ನೇ ವೈಶ್ವಾನರ ಶಾಂಡಿಲ್ಯಗೋತ್ರ ಮೇಷಾರೂಢ ವರಪ್ರದ ಪ್ರಾಙ್ಮುಖೋ ದೇವ ಮಮ ಸಮ್ಮುಖೋ ವರದೋ ಭವ ॥** (ಎಂದು ಅಗ್ನಿಗೆ ಅಕ್ಕಿ ಹಾಕಿ)

### ಪರಿಷೇಕಃ

ಅಗ್ನಿಯ ಈಶಾನ್ಯದಿಂದಾರಂಭಿಸಿ, ಪ್ರದಕ್ಷಿಣೆಯಾಗಿ ಮೂರು ಸಲ ನೀರನ್ನು ಪರಿಷೇಚನ ಮಾಡಬೇಕು– **ಅದಿತೇಽನುಮನ್ಯಸ್ವ । ಅನುಮತೇಽನುಮನ್ಯಸ್ವ । ಸರಸ್ವತೇಽನುಮನ್ಯಸ್ವ । ದೇವ ಸವಿತಃ ಪ್ರಸುವ ॥**

**ಅಗ್ನ್ಯಲಂಕರಣಮ್**

**ಅಗ್ನಯೇ ನಮಃ । ಜಾತವೇದಸೇ ನಮಃ । ಸಹೋಜಸೇ ನಮಃ । ಅಜಿರಾಪ್ರಭವೇ ನಮಃ । ವೈಶ್ವಾನರಾಯ ನಮಃ । ನರ್ಯಾಪಸೇ ನಮಃ । ಪಂಕ್ತಿರಾಧಸೇ ನಮಃ । ವಿಸರ್ಪಿಣೇ ನಮಃ ॥ ಓಂ ರಾಮ್ ಅಗ್ನಯೇ ನಮಃ ।**

**ಓಂ ಕವಿಮಗ್ನಿಮುಪ ಸ್ತುಹಿ ಸತ್ಯಧರ್ಮಾಣಮಧ್ವರೇ । ದೇವಮಮೀವ-ಚಾತನಮ್ ॥ ಓಂ ಭೂರ್ಭುವಃಸ್ವಃ ಕವ್ಯವಾಹನಮಗ್ನಿಂ ಪ್ರತಿಷ್ಠಾಪಯಾಮಿ ॥**

**ಓಂ ಭಾಂ ಭಾರ್ಗವಾಯ ನಮಃ ॥** ಧ್ಯಾನ, ಅಲಂಕಾರ, ಪಂಚೋಪಚಾರ ಪೂಜೆ ಮಾಡಿ **ವ್ಯಸ್ತಸಮಸ್ತವ್ಯಾಹೃತಿ** ಮಂತ್ರದಿಂದ ಹೋಮಿಸಿ ಪ್ರಧಾನಹೋಮದಲ್ಲಿ ನಾಲ್ಕು ಸಮಿಧೆಗಳಿಂದ ಅಥವಾ ತುಪ್ಪದಿಂದ ಹೋಮಿಸಬೇಕು–

**೧. ಅಗ್ನಯೇ ವ್ರತಪತಯೇ ಸ್ವಾಹಾ ।**
**೨. ಅಗ್ನಯೇ ವ್ರತಾನುಷ್ಠಾನಫಲಸಂಪಾದನಾಯ ಸ್ವಾಹಾ ।**
**೩. ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ।**
**೪. ಭೂರ್ಭುವಃಸ್ವಃ ಸ್ವಾಹಾ ॥**

**ವ್ಯಸ್ತಸಮಸ್ತ ವ್ಯಾಹೃತಿ** ಮಂತ್ರಗಳಿಂದ ಹೋಮಿಸಿ,

**ಅಸ್ಮನ್ಮಿತ್ರಸ್ಯ .....ಗೋತ್ರಸ್ಯ ............ಶರ್ಮಣಃ ಪ್ರೇತಸ್ಯ ಬ್ರಹ್ಮಚಾರಿಮರಣ ನಿಮಿತ್ತಾರಿಷ್ಟಪರಿಹಾರಾರ್ಥಂ ತಥಾ ಔರ್ಧ್ವದೇಹಿಕ ಸಂಸ್ಕಾರಪ್ರಧಾನಯೋಗ್ಯತಾ ಸಿದ್ಧ್ಯರ್ಥಂ ನಾರಾಯಣಬಲಿಂ ಕರಿಷ್ಯೇ ॥**

ಎರಡು ಕಲಶವನ್ನು ಪ್ರತಿಷ್ಠಾಪಿಸಿ **'ಇದಂ ವಿಷ್ಣುಃ....'** ಮಂತ್ರದಿಂದ ವಿಷ್ಣುವನ್ನು **'ಯಮಾಯ ಸೋಮಂ......'** ಮಂತ್ರದಿಂದ ಯಮನನ್ನು ಆವಾಹಿಸಿ ಪುರುಷಸೂಕ್ತದಿಂದ ಷೋಡಶೋಪಚಾರಪೂಜೆ ಮಾಡಿ, ದಕ್ಷಿಣಕ್ಕೆ ಮುಖಮಾಡಿ ಕುಳಿತು, ಕೈಮುಗಿದು–

**ನಾರಾಯಣ ನಮಸ್ತೇಽಸ್ತು ಶಂಖಚಕ್ರಗದಾಧರ ।**
**ಅಕ್ಷಯ್ಯ ಪಿಂಡದಾನೇನ ಪ್ರೇತತೃಪ್ತಿಕರೋ ಭವ ॥**

(ಎಡ) ದಕ್ಷಿಣಾಗ್ರವಾಗಿ ದರ್ಭೆಯನ್ನು ಹರಡಿ, ಎಳ್ಳು ನೀರು ಹಿಡಿದು **'ಶುಂಧಂತಾಂ ವಿಷ್ಣುದೈವತಃ ಪ್ರೇತಃ ॥'** ಎಂದು ದರ್ಭೆಯ ಮೇಲೆ ಎಳ್ಳು ನೀರು ಬಿಟ್ಟು, ಅನಂತರ ತುಪ್ಪ, ಜೇನುತುಪ್ಪ, ಎಳ್ಳುಮಿಶ್ರಿತ ಅಕ್ಕಿಹಿಟ್ಟಿನಿಂದ ಹತ್ತು ಪಿಂಡಗಳನ್ನು ಮಾಡಿ ಒಂದು ಪಿಂಡವನ್ನು ಹಿಡಿದು, **ಅಸ್ಮನ್ಮಿತ್ರ ......ಗೋತ್ರ ......ಶರ್ಮನ್ ಪ್ರೇತ ವಿಷ್ಣುದೈವತ ಅಯಂ ತೇ ಪಿಂಡಃ ॥** –ಎಂದು ದರ್ಭೆಯ ಮೇಲೆ ಒಂದೊಂದಾಗಿ ಹತ್ತು ಪಿಂಡಗಳನ್ನಿಟ್ಟು,

ಪುನಃ ಎಳ್ಳುನೀರು ಹಿಡಿದು '**ಶುಂಧಂತಾಂ ವಿಷ್ಣುದೈವತಃ ಪ್ರೇತಃ ॥**' ಎಂದು ಪಿಂಡಗಳ ಮೇಲೆ ಎಳ್ಳುನೀರು ಬಿಡಬೇಕು. (ಕೆಲವರಲ್ಲಿ ಈ ಕೆಳಗಿನ 10 ದೇವತೆಗಳನ್ನುದ್ದೇಶಿಸಿ ಪಿಂಡಪ್ರದಾನ ಮಾಡುವ ಕ್ರಮವಿದೆ– '**ವಿಷ್ಣವೇ । ಶಿವಾಯ । ಯಮಾಯ । ಸೋಮಾಯ । ಹವ್ಯಾಯ । ಕವ್ಯಾಯ । ಕಾಲಾಯ । ರುದ್ರಾಯ । ಚಿತ್ರಾಗುಪ್ತಾಯ । ವಿಶ್ವರೂಪಾಯ**') ಅನಂತರ ಗಂಧಪುಷ್ಪಾದಿಗಳಿಂದ ಅಲಂಕಾರ ಮಾಡಿ ಪೂಜೆ ಮಾಡಿ (ಬಲ) ಅಕ್ಕಿ ಹಿಡಿದು,

**ಅನಾದಿ ನಿಧನೋ ದೇವಃ ಚಕ್ರಶಂಖಗದಾಧರಃ ।**
**ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದೋ ಭವ ॥**

**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯಂತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥**

–ಎಂಬ ಎರಡು ಮಂತ್ರಗಳಿಂದ ಪಿಂಡಕ್ಕೆ ಹಾಕಿ ನಮಸ್ಕಾರ ಮಾಡಿ, ಪಿಂಡಕ್ಕೆ ಹೋಮದ ಭಸ್ಮವನ್ನು ಮುಟ್ಟಿಸಿ, '**ಪಿಂಡಾನುದ್ವಾಸಯಿಷ್ಯೇ**' (**ಅಸ್ತು ಉದ್ವಾಸಯ**)' ಎಂದು ಪ್ರತಿವಚನವನ್ನು ಪಡೆದು ಒಂದು ಪಾತ್ರೆಗೆ ನೀರು ಹಾಕಿ, '**ಗಂಗಾಮಾವಾಹಯಾಮಿ**' ಎಂದು ಆವಾಹಿಸಿ '**ನಾರಾಯಣಬಲಿಪಿಂಡೋಽಯಂ ಗಯಾರ್ಪಿತೋಽಸ್ತು**' ಎಂದು ಪಿಂಡಗಳನ್ನು ಕ್ರಮವಾಗಿ ತೆಗೆದು ಪಾತ್ರೆಯಲ್ಲಿ ಹಾಕಿ, ಪೂರ್ವಕ್ಕೆ ಮುಖಮಾಡಿ ಕುಳಿತು–

ಅಕ್ಕಿ ಹಿಡಿದು, ಓಂ ಸ್ವಸ್ತಿ ।
**ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಮ್ ।**
**ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ ॥** –ಎಂದು ಅಗ್ನಿಗೆ ಹಾಕಿ

**ಉತ್ತರಪರಿಷೇಕಃ**

ಅಗ್ನಿಯ ಈಶಾನ್ಯದಿಂದಾರಂಭಿಸಿ, ಪ್ರದಕ್ಷಿಣೆಯಾಗಿ ಮೂರು ಸಲ ನೀರನ್ನು ಪರಿಷೇಚನ ಮಾಡಬೇಕು– **ಅದಿತೇಽನ್ವಮಂಸ್ಥಾಃ । ಅನುಮತೇಽನ್ವಮಂಸ್ಥಾಃ । ಸರಸ್ವತೇಽನ್ವಮಂಸ್ಥಾಃ । ದೇವ ಸವಿತಃ ಪ್ರಾಸಾವೀಃ ॥**

ಅಕ್ಕಿ ಹಿಡಿದು–

**ಗಚ್ಛ ಗಚ್ಛ ಸುರಶ್ರೇಷ್ಠ ಸ್ವಸ್ಥಾನಂ ಯಜ್ಞಪೂರುಷ ।**
**ಯತ್ರ ಬ್ರಹ್ಮಾದಯೋ ದೇವಾಸ್ತತ್ರ ಗಚ್ಛ ಹುತಾಶನ ॥**

–ಎಂದು ಅಗ್ನಿಗೆ ಹಾಕಿ–

**ಯಜ್ಞೇಶ್ವರಾಯ ನಮಃ । ಯಥಾಸ್ಥಾನಮುದ್ವಾಸಯಾಮಿ ॥**

ಎಂದು ಉದ್ವಾಸನೆ ಮಾಡಬೇಕು. ಕಲಶದೇವತೆಗಳನ್ನು ಉದ್ವಾಸನೆ ಮಾಡಿ ಕೃಷ್ಣಾರ್ಪಣ ಬಿಟ್ಟು ಶಿಕ್ಯವನ್ನು (ಅಗ್ನಿಯನ್ನು) ಶ್ಮಶಾನಕ್ಕೆ ಕೊಂಡೊಯ್ಯುವ ಸಲುವಾಗಿ ಸ್ವಲ್ಪ ದೂರದಲ್ಲಿ ದರ್ಭೆಯ ಮೇಲಿಟ್ಟು ರಕ್ಷಿಸಬೇಕು.

ಪಿಂಡವನ್ನು ನೀರಿಗೆ ಹಾಕಿ ಕಲಶದ ತೀರ್ಥವನ್ನು ಸ್ವಲ್ಪ ಬಿಸಿನೀರಿಗೆ ಹಾಕಿ ಉಳಿದ ತೀರ್ಥವನ್ನು ಶವಕ್ಕೆ ಪ್ರೋಕ್ಷಣೆ ಮಾಡಿ ಅನಂತರದ ತೈಲಾಭ್ಯಂಗಾದಿಗಳನ್ನು ಮುಂದುವರಿಸಬೇಕು. ಹನ್ನೆರಡನೆಯ ದಿನ ಯಥಾಶಕ್ತಿ ಬ್ರಹ್ಮಚಾರಿ ಆರಾಧನೆ ಮಾಡಬೇಕು.

## ಸ್ನಾತಕಸ್ಯ ಮರಣೇ ನಾರಾಯಣಬಲಿಃ

ಸಮಾವರ್ತನೆಯಾದ ಹಾಗೂ ಹದಿನಾಲ್ಕು ವರ್ಷದ ಅನಂತರದ ಬ್ರಹ್ಮಚಾರಿ ಮರಣಹೊಂದಿದಾಗ,

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮನ್ಮಿತ್ರಸ್ಯ ......ಗೋತ್ರಸ್ಯ .......ಶರ್ಮಣಃ ಬ್ರಹ್ಮಚಾರಿಣಃ ಪ್ರೇತಸ್ಯ ದುರ್ಮರಣ ದೋಷಪರಿ– ಹಾರಾರ್ಥಮ್ ಔರ್ಧ್ವದೇಹಿಕ ಸಂಸ್ಕಾರಯೋಗ್ಯತಾ ಸಿದ್ಧ್ಯರ್ಥಂ** (ಬಲ) **ವ್ರತವಿಸರ್ಗ ಪೂರ್ವಕ ಅರ್ಕವಿವಾಹವಿಧಿಂ ಕರಿಷ್ಯೇ ॥ (ಕುರುಷ್ವ)**

ಸಂಕಲ್ಪ ಮಾಡಿ ವ್ರತವಿಸರ್ಗವಿಧಿಯಂತೆ ಕರ್ಮ ಮಾಡಿ ಪ್ರಧಾನಾಹುತಿ ಕೊಟ್ಟು ಪುನಃ ಸಂಕಲ್ಪ ಮಾಡಬೇಕು.

**ಅರ್ಕವಿವಾಹವಿಧಿಂ ಕರಿಷ್ಯೇ** ॥ ಎಂದು ಸಂಕಲ್ಪ ಮಾಡಿ, (ಎಡ) ಎಕ್ಕದ ಗಿಡ ತಂದು ಶವದ ಎಡಬದಿಯಲ್ಲಿ ಇಟ್ಟು ಅರಸಿನ ನೀರನ್ನು ಪ್ರೋಕ್ಷಣೆ ಮಾಡಿ (ಬಲ) ಪುನಃ ಅಗ್ನಿಗೆ ವ್ಯಸ್ತಸಮಸ್ತವ್ಯಾಹೃತಿಯಿಂದ ಹೋಮಿಸಿ, ನಾಲ್ಕು ತುಪ್ಪದ ಆಹುತಿ ಕೊಡಬೇಕು.

೧. **ಅಗ್ನಯೇ ಸ್ವಾಹಾ ।**

೨. **ಬೃಹಸ್ಪತಯೇ ಸ್ವಾಹಾ ।**

೩. **ವಿವಾಹವಿಧಿಯೋಜಕಾಯ ಸ್ವಾಹಾ ।**

೪. **ಯಸ್ಮೈ ತ್ವಾ ಕಾಮಕಾಮಾಯ ವಯಂ ಸಮ್ರಾಡ್ಯಜಾಮಹೇ । ತಮಸ್ಮಭ್ಯಂ ಕಾಮಂ ದತ್ವಾಽಥೇದಂ ತ್ವಂ ಘೃತಂ ಪಿಬ ಸ್ವಾಹಾ । ಕಾಮಾಯ ಇದಂ ನ ಮಮ ॥**

ವ್ಯಸ್ತಸಮಸ್ತ ವ್ಯಾಹೃತಿಮಂತ್ರಗಳಿಂದ ಆಹುತಿ ನೀಡಿ (ಎಡ) ಅನಂತರ ಶವ ಮತ್ತು ಎಕ್ಕದ ಗಿಡವನ್ನು ಒಟ್ಟಿಗೆ ನೂಲಿನಿಂದ ಕಟ್ಟಬೇಕು.

**ಓಂ ಪರಿ ತ್ವಾ ಗಿರ್ವಣೋ ಗಿರ ಇಮಾ ಭವಂತು ವಿಶ್ವತಃ । ವೃದ್ಧಾಯು– ಮನು ವೃದ್ಧಯೋ ಜುಷ್ಟಾ ಭವಂತು ಜುಷ್ಟಯಃ ॥**

–ಎಂದು ನೂಲು ಕಟ್ಟಿ ಉಳಿದ ಕರ್ಮಾಂಗವನ್ನು ಬ್ರಹ್ಮಚಾರಿಮರಣದ ಕ್ರಮದಂತೆ ಎರಡು ಕಲಶವನ್ನು ಪ್ರತಿಷ್ಠಾಪಿಸಿ ವಿಷ್ಣು ಮತ್ತು ಯಮನನ್ನು ಆವಾಹಿಸಿ ಪೂಜಿಸಿ ಹತ್ತು ಪಿಂಡಗಳನ್ನಿಟ್ಟು ಆರಾಧನೆ ಮಾಡಬೇಕು

## ಗೃಹಸ್ಥಾದಿ ದುರ್ಮರಣೇ ನಾರಾಯಣಬಲಿಃ

ಅಪಮೃತ್ಯುವಿನಿಂದ ಮರಣಹೊಂದಿದ ಗೃಹಸ್ಥ, ಹೆಂಗುಸು, ಗರ್ಭಿಣಿಸ್ತ್ರೀ, ಪ್ರೌಢಕನ್ಯೆ ಮರಣ ಹೊಂದಿದ ಸಮಯದಲ್ಲಿ (ಹೋಮಾದಿಗಳು ಇಲ್ಲ.)–

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ (ಮಾತುಃ) ......ಗೋತ್ರಸ್ಯ(ಗೋತ್ರಾಯಾಃ) ......ಶರ್ಮಣಃ (ನಾಮ್ನ್ಯಾಃ) ಪ್ರೇತಸ್ಯ (ಪ್ರೇತಾಯಾಃ) ದುರ್ಮರಣದೋಷಪರಿಹಾರಾರ್ಥಮ್ ಔರ್ಧ್ವದೇಹಿಕಸಂಸ್ಕಾರ ಯೋಗ್ಯತಾ ಸಿದ್ಧ್ಯರ್ಥಂ ದುರ್ಮರಣನಿಮಿತ್ತ ಆದ್ಯನಾರಾಯಣಬಲಿಂ ಕರಿಷ್ಯೇ ॥ (ಕುರುಷ್ವ) ॥**

ಹಿಂದಿನ ಕ್ರಮದಂತೆ ಎರಡು ಕಲಶಗಳನ್ನು ಪ್ರತಿಷ್ಠಾಪಿಸಿ ವಿಷ್ಣುವನ್ನು, ಯಮನನ್ನು ಆವಾಹಿಸಿ ಷೋಡಶೋಪಚಾರಪೂಜೆ ಮಾಡಿ, ಎಳ್ಳುನೀರು ಹಿಡಿದು–

**ಶುಂಧಂತಾಂ ವಿಷ್ಣುದೈವತಃ (ತೇ) ಪ್ರೇತಃ (ತೇ)** ॥ ಎಂದು ದರ್ಭೆಯ ಮೇಲೆ ನೀರು ಬಿಟ್ಟು, ಅನಂತರ ತುಪ್ಪ, ಜೇನುತುಪ್ಪ, ಎಳ್ಳುಮಿಶ್ರಿತ ಅಕ್ಕಿಹಿಟ್ಟಿನಿಂದ ಹತ್ತು ಪಿಂಡ ಗಳನ್ನು ಮಾಡಿ ಒಂದು ಪಿಂಡವನ್ನು ಹಿಡಿದು–

**ಅಸ್ಮತ್ಪಿತಃ (ಮಾತಃ) .......ಗೋತ್ರ (ತ್ರೇ) .......ಶರ್ಮನ್ (ನಾಮ್ನಿ) ಪ್ರೇತ(ತೇ) ವಿಷ್ಣುದೈವತ(ತೇ) ಅಯಂ ತೇ ಪಿಂಡಃ ॥**

ಎಂದು ದರ್ಭೆಯ ಮೇಲೆ ಒಂದೊಂದಾಗಿ ಹತ್ತು ಪಿಂಡಗಳನ್ನಿಟ್ಟು ಪುನಃ ಎಳ್ಳುನೀರು ಹಿಡಿದು–

**ಶುಂಧಂತಾಂ ವಿಷ್ಣುದೈವತಃ (ದೈವತೇ) ಪ್ರೇತಃ (ಪ್ರೇತೇ)** ॥ ಎಂದು ಪಿಂಡಗಳ ಮೇಲೆ ನೀರು ಬಿಟ್ಟು ಇತ್ಯಾದಿ ಹಿಂದಿನ ಕ್ರಮದಂತೆ ಮಾಡಬೇಕು.

## ಶವಸ್ನಾನಮ್

ಕನಿಷ್ಠಪೂರ್ವಕರಾಗಿ ಶವದ ಪಾದದಿಂದ ಶಿರಃಪರ್ಯಂತ **'ಚಿತ್ತಿಃ ಸ್ರುಗಾಸೀಽತ್'** ಮಂತ್ರಗಳಿಂದ ಕೈಯಿಂದ ಎಳ್ಳೆಣ್ಣೆ ಹಚ್ಚಬೇಕು.

**ಓಂ ಚಿತ್ತಿಃ ಸ್ರುಗಾಸೀಽತ್ । ಚಿತ್ತಮಾಜ್ಯಮಾಸೀಽತ್ । ವಾಗ್ವೇದಿರಾಸೀಽತ್ ।**

ಆಧೀತಂ ಬರ್ಹಿರಾಸೀ೩ತ್ । ಕೇತೋರಗ್ನಿರಾಸೀ೩ತ್ । ವಿಜ್ಞಾತಮಗ್ನಿ-ರಾಸೀಽತ್ ॥ ಪ್ರಾಣೋಹವಿರಾಸೀ೩ತ್ । ಸಾಮಾಧ್ವರ್ಯುರಾಸೀ೩ತ್ । ವಾಚಸ್ಪತಿಹೋರ್ತಾಸೀ೩ತ್ । ಮನ ಉಪವಕ್ತಾಸೀ೩ತ್। ತೇ ವಾ ಏತಂ ಗ್ರಹಮಗೃಹ್ಣತ । ವಾಚಸ್ಪತೇ ವಿಧೇನಾಮನ್ । ವಿಧೇಮತೇ ನಾಮ। ವಿಧೇಸ್ತ್ವಮಸ್ಮಾಕಂ ನಾಮದ್ಯಾಂ ಗಚ್ಛ ॥

(ಹೆಂಡತಿ ಸತ್ತಾಗ ಶವಕ್ಕೆ ಗಂಡ ಎಣ್ಣೆ ಹಚ್ಚಲಿಕ್ಕಿಲ್ಲ.) ತಾಯಿ ಮೊದಲ್ಗೊಂಡು ಹೆಣ್ಣು ಮಕ್ಕಳು ಕನಿಷ್ಠಪೂರ್ವಕವಾಗಿ ಪಾದದಿಂದ ಶಿರಃಪರ್ಯಂತ ಎಣ್ಣೆ ಹಚ್ಚಬೇಕು. ಅನಂತರ ಆಶೌಚವಿರುವ ಬಂಧುಗಳು ಎಣ್ಣೆ ಹಚ್ಚಿ, ಆಶೌಚವಿಲ್ಲದ ಬಂಧುಗಳೂ ಶವವನ್ನು ಮುಟ್ಟದೇ ಎಣ್ಣೆಯನ್ನು ಸಿಂಪಡಿಸಿ ಒಂದೊಂದು ತಂಬಿಗೆ ಬಿಸಿನೀರಿನಿಂದ ಪಾದದಿಂದ







1. 2. 3. ಕ್ರಿಯಾಕರ್ತೃಗಳ ಉತ್ತರೀಯ
4. ಶವಕ್ಕೆ ಕೌಪೀನ
5. ಶವಕ್ಕೆ ಕಟಿಸೂತ್ರ
6. ಶವ ಕಟ್ಟುವ ಬಟ್ಟೆಸಹಿತ ಹಗ್ಗ.

ಶಿರಃಪರ್ಯಂತ ಸ್ನಾನ ಮಾಡಿಸಿ, ಅನಂತರ ಕ್ರಿಯಾಕರ್ತೃಗಳು, ತಾಯಿ, ಹೆಣ್ಣುಮಕ್ಕಳು ಬಿಸಿನೀರಿನಿಂದ ಸ್ನಾನ ಮಾಡಿಸಬೇಕು.

ಅನಂತರ ಚಟ್ಟದ ಮೇಲೆ ತೆಂಗಿನ ಗರಿಯನ್ನು ದಕ್ಷಿಣಕ್ಕೆ ತುದಿ ಬರುವಂತೆ ಇಟ್ಟು ಅದರ ಮೇಲೆ ಇಡೀ ಬಾಳೆಎಲೆ ಇಟ್ಟು, ಅದರ ಮೇಲೆ ದರ್ಭೆ, ಎಳ್ಳು ಹರಡಿ ನೂತನ ಬಟ್ಟೆಯಲ್ಲಿ ಮೂರು ಅಂಶ ಬಿಟ್ಟು ಪಾದ ಪ್ರದೇಶದ ನಾಲ್ಕನೇ ಒಂದಂಶವನ್ನು ಹರಿದು ಬೇರೆ ತೆಗೆದು, ಹರಿದು ತೆಗೆದ ಬಟ್ಟೆಯಲ್ಲಿ ಶವಕ್ಕೆ ಕಟಿಸೂತ್ರ ಕೌಪೀನ, ಉತ್ತರೀಯ ಹಾಗೂ ಕ್ರಿಯಾಕರ್ತೃಗಳ ಸಂಖ್ಯೆಗೆ ಸರಿಯಾಗಿ ಉತ್ತರೀಯ ಮಾಡಿ, ಉಳಿದ ವಸ್ತ್ರವನ್ನು ಚಟ್ಟದ ಮೇಲೆ ಶವದ ಕಾಲು ಬರುವ ಭಾಗದಿಂದ ಪ್ರಾರಂಭಿಸಿ ತಲೆಯ ಬಳಿ ತಂದು

ಒಟ್ಟು ಮಾಡಿ ಇಡಬೇಕು. ಕಟಿಸ್ಥಾನ ಬರುವಲ್ಲಿ ಕೌಪೀನ ಹಾಗೂ ಉಡಿದಾರ ಇಟ್ಟು ಶವದ ಮೈಯನ್ನು ಒರೆಸದೆ, ಶವವನ್ನು ನಾಲ್ಕು ಜನ ಎತ್ತಿ ತಂದು ಚಟ್ಟದ ಮೇಲೆ ದಕ್ಷಿಣಕ್ಕೆ ತಲೆ ಇರುವಂತೆ ಮಲಗಿಸಿ ಒಂದು ಬಟ್ಟೆಯನ್ನು ಅಡ್ಡ ಹಿಡಿದು ನಿಂತು, ಶವದ ಕಾಲನ್ನು ಎತ್ತಿ ಹಳೆಯ ವಸ್ತ್ರವನ್ನು ಬಿಚ್ಚಿ ಕೌಪೀನವನ್ನು ಕಟ್ಟಬೇಕು. ಬೇರೆ ಬಟ್ಟೆಯಿಂದ ಮುಂಡಾಸು ಸುತ್ತಿ, ಗೋಪೀಚಂದನ, ಪಂಚಮುದ್ರೆ, ತುಳಸೀಮೃತ್ತಿಕೆ, ಗಂಧಾಕ್ಷತೆಗಳಿಂದ ಅಲಂಕರಿಸಿ, (ಮುತ್ತೈದೆಯಾದರೆ ಕುಂಕುಮಾದಿ ಸೌಭಾಗ್ಯದ್ರವ್ಯಗಳಿಂದ ಅಲಂಕರಿಸಬೇಕು. ಮಂಗಲಸೂತ್ರ, ಕಾಲುಂಗುರ, ಮೂಗುತಿ ಬಿಟ್ಟು ಉಳಿದ ಆಭರಣಗಳಿದ್ದಲ್ಲಿ ತೆಗೆದಿಡಬಹುದು.) ಲಾವಂಚದ ಮಾಲೆ, ದಾಸವಾಳದ ಮಾಲೆ, ತುಲಸೀಮಾಲೆಯನ್ನು ಹಾಕಿ, ಪಾದಾಂಗುಷ್ಠಗಳನ್ನು ಜೊತೆ ಸೇರಿಸಿ ದರ್ಭೆಯಿಂದ ಕಟ್ಟಿ, ಎರಡು ಕೈಗಳ ನಡುವೆ ಸಿಪ್ಪೆ ಇರುವ ತೆಂಗಿನಕಾಯಿ ಇಟ್ಟು (ಕೆಲವರಲ್ಲಿ ತೆಂಗಿನಕಾಯಿ ಇಡುವುದಿಲ್ಲ), ಕೈಗಳೆರಡನ್ನು ನಮನ ಮುದ್ರೆ ಮಾಡಿ, ದರ್ಭೆಯಿಂದ ಕಟ್ಟಿ ನಾಲಗೆಯ ಅಡಿ ಸುವರ್ಣ ಮತ್ತು ಎಳ್ಳು ಇಟ್ಟು, ಶವದ ನವದ್ವಾರಗಳಲ್ಲಿ ಹತ್ತಿ ಇಟ್ಟು, ತಲೆಯ ಬಳಿಯಿರುವ ಬಟ್ಟೆಯನ್ನು ಮುಖದಿಂದ ಆರಂಭಿಸಿ, ಪಾದದ ವರೆಗೆ ತಂದು ಪಾದದ ಅಡಿಭಾಗ ಕಾಣುವಂತೆ ಸರಿಯಾಗಿ ಮುಚ್ಚಬೇಕು. ಹುರಿಹಗ್ಗದಿಂದ ಶವದ ಮುಖದ ಜಾಗವನ್ನು ಬಿಟ್ಟು, ಕುತ್ತಿಗೆಯ ಭಾಗದಿಂದ ಹಿಡಿದು ಪಾದದವರೆಗೆ ಚಟ್ಟದ ಇಕ್ಕೆಲಗಳಲ್ಲಿ ಗುಣಿಸುವಿನಾಕಾರದಲ್ಲಿ ಕಟ್ಟಬೇಕು. ಶವವನ್ನು ಹೊರುವಾಗ ಕಳಕ್ಕೆ ಬೀಳದಂತೆ ಸರ್ವಾಂಗಗಳನ್ನು ಹಗ್ಗದಿಂದ ಗಟ್ಟಿಯಾಗಿ ಕಟ್ಟಿ ಉಳಿದ ಹಗ್ಗವನ್ನು ತುಂಡು ಮಾಡದೆ, ಚಟ್ಟದಲ್ಲೇ ಸುತ್ತಿಡಬೇಕು.

**ಸಂಕಲ್ಪಃ**

(ಬಲ) **ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ....ಪ್ರೀತ್ಯರ್ಥಂ** (ಎಡ) **ಅಸ್ಮತ್ಪಿತುಃ .....ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಔರ್ಧ್ವದೇಹಿಕಸಂಸ್ಕಾರಾರ್ಥಂ** (ಬಲ) **ಪ್ರಥಮದಿನಾದಾರಭ್ಯ ದ್ವಾದಶಾಹ(ದಶಾಹ)ಪರ್ಯಂತಮ್ ಅಹತವಸ್ತ್ರಧಾರಣಂ ಖಡ್ಗಧಾರಣಂ ಚ ಕರಿಷ್ಯೇ ॥ (ಕುರುಷ್ವ) ॥**

ಹಿಂದೆ ನೂತನ ಬಟ್ಟೆಯಿಂದ ಮಾಡಿದ್ದ ಉತ್ತರೀಯವನ್ನು ಹಿಡಿದು, ಅದರಲ್ಲಿ ಹುರಿದ ಎಳ್ಳು, ಕಬ್ಬಿಣದ ಚೂರನ್ನು ಇಲ್ಲವೇ ನಾಣ್ಯವನ್ನಿಟ್ಟು ಗ್ರಂಥಿ ಮಾಡಿ,

ಆಧೀಷಮಾಣಾಯಾ ಇತಿ ಮಂತ್ರಸ್ಯ ಐಂದ್ರೋ ವಿಮದಃ ಪೂಷಾಽನುಷ್ಟುಪ್ । ಪೂಷಾತ್ವ ಇತಿ ಯಾಮಾಯನೋ ದೇವಶ್ರವಾಃ ಪೂಷಾತ್ರಿಷ್ಟುಪ್ । ಖಡ್ಗಸಹಿತ ಅಹತವಸ್ತ್ರಧಾರಣೇ ವಿನಿಯೋಗಃ ॥

**ಓಮ್ ಆಧೀಷಮಾಣಾಯಾಃ ಪತಿಃ ಶುಚಾಯಾಶ್ಚ ಶುಚಸ್ಯ ಚ । ವಾಸೋವಾಯೋಽವೀನಾಮಾ ವಾಸಾಂಸಿ ಮರ್ಮೃಜತ್ ॥ ಪೂಷಾ**

ತ್ವೇತಶ್ಚ್ಯಾವಯತು ಪ್ರ ವಿದ್ವಾನನಷ್ಟಪಶುರ್ಭುವನಸ್ಯ ಗೋಪಾಃ । ಸ ತ್ವೈತೇಭ್ಯಃ ಪರಿ ದದತ್ಪಿತೃಭ್ಯೋಽಗ್ನಿರ್ದೇವೇಭ್ಯಃ ಸುವಿದತ್ರಿಯೇಭ್ಯಃ ॥

ತಂತುದೇವಿ ನಮಸ್ತುಭ್ಯಂ ಅಯಸಾ ಚ ಸಮನ್ವಿತೇ ।
ಆ ದ್ವಾದಶಾಹ(ಆದ್ಯಾದ್ದಶಾಹ)ಪರ್ಯಂತಂ ಸರ್ವಾರಿಷ್ಟಂ ನಿವಾರಯ ॥

**ಖಡ್ಗಸಹಿತ ಅಹತವಸ್ತ್ರಂ ಧಾರಯಾಮಿ** ॥ –ಎಂದು ಮೃತ ವ್ಯಕ್ತಿ ತಂದೆ, ತಾಯಿ, ಅಣ್ಣ ಆಗಿದ್ದರೆ ಕುತ್ತಿಗೆಯಲ್ಲಿ ಮಾಲಾಕಾರ ಮಾಡಿ, ಇತರ ವ್ಯಕ್ತಿಗಳಾದರೆ ಬಲಕೈಯ ಮಣಿಗಂಟಿನಲ್ಲಿ ಧರಿಸಬೇಕು.

## ಅಗ್ನಿನಿರ್ಣಯಃ

**ಉತ್ತಪನಾಗ್ನಿಃ**

ವಿಧವೆಯರು ಮರಣಹೊಂದಲು **'ಉತ್ತಪನಾಗ್ನಿ'**ಯಿಂದ ದಹನ ಮಾಡಬೇಕು. [ಒಂದು ಮುಷ್ಟಿ ದರ್ಭೆಯನ್ನು ಪ್ರಜ್ವಲಿಸಿ, ಆ ಜ್ವಾಲೆಯಿಂದ ಇನ್ನೊಂದು ಮುಷ್ಟಿ ದರ್ಭೆಯನ್ನು ಪ್ರಜ್ವಲಿಸಿ, ಪುನಃ ಮತ್ತೊಂದು ಮುಷ್ಟಿ ದರ್ಭೆಯನ್ನು ಪ್ರಜ್ವಲಿಸಿದ ಅಗ್ನಿಯೇ 'ಉತ್ತಪನಾಗ್ನಿ'.]

ಪ್ರಕೇತುನಾ ಇತ್ಯಸ್ಯ ತ್ವಾಷ್ಟ್ರಃ ತ್ರಿಶಿರಾಋಷಿಃ । ತ್ರಿಷ್ಟುಪ್‌ಛಂದಃ । ಅಗ್ನಿರ್ದೇವತಾ । ಉತ್ತಪನಾಗ್ನಿಸಿದ್ಧಯೇ ಆಜ್ಯಹೋಮೇ ವಿನಿಯೋಗಃ ॥

ಓಂ ಪ್ರ ಕೇತುನಾ ಬೃಹತಾ ಯಾತ್ಯಗ್ನಿರಾ ರೋದಸೀ ವೃಷಭೋ ರೋರವೀತಿ । ದಿವಶ್ಚಿದಂತಾँ ಉಪಮಾँ ಉದಾನಳಪಾಮುಪಸ್ಥೇ ಮಹಿಷೋ ವವರ್ಧ ಸ್ವಾಹಾ ॥ ಉತ್ತಪನಾಗ್ನಯ ಇದಂ ನ ಮಮ ॥

–ಎಂದು ಮೂರು ಆಹುತಿ ಕೊಡಬೇಕು.

**ಕಪಾಲಾಗ್ನಿಃ**

ಬ್ರಹ್ಮಚಾರಿ ವಾನಪ್ರಸ್ಥರನ್ನು ಯತಿಗಳನ್ನು **'ಕಪಾಲಾಗ್ನಿ'**ಯಿಂದ ದಹನ ಮಾಡಬೇಕು. ['ಕಪಾಲಾಗ್ನಿ' =ಕೆಂಡಗಳ ಮೇಲೆ ಮಡಕೆ ತುಂಡು ಇಟ್ಟು ಜೊತೆಗೆ ಕಟ್ಟಿಗೆ ಚೂರು ಇಟ್ಟಾಗ ಜ್ವಲಿಸುವ ಅಗ್ನಿ.]

ಯಮಸ್ಯೇತಿ ವೈವಸ್ವತೀ ಯಮೀ ಋಷಿಕಾ । ತ್ರಿಷ್ಟುಪ್ ಛಂದಃ । ಯಮೋ

ದೇವತಾ । ಕಪಾಲಾಗ್ನಿಸಿದ್ಧಯೇ ಆಜ್ಯಹೋಮೇ ವಿನಿಯೋಗಃ ॥

**ಓಂ ಯಮಸ್ಯ ಮಾ ಯಮ್ಯಗ್ಂ ಕಾಮ ಆಗನ್ತ್ಸಮಾನೇ ಯೋನೌ ಸಹಶೇಯ್ಯಾಯ । ಜಾಯೇವ ಪತ್ಯೇ ತನ್ವಂ ರಿರಿಚ್ಯಾಂ ವಿ ಚಿದ್ವೃಹೇವ ರಥ್ಯೇವ ಚಕ್ರಾ ಸ್ವಾಹಾ ॥ ಯಮಾಯ ಇದಂ ನ ಮಮ ॥**

ಎಂದು ಮೂರು ಆಹುತಿ ಕೊಡಬೇಕು.

**ತುಷಾಗ್ನಿಃ**

ಉಪನಯನವಾಗದ ಗಂಡುಮಕ್ಕಳು, ಮತ್ತು ವಿವಾಹವಾಗದ ಹೆಣ್ಣುಮಕ್ಕಳನ್ನು **ತುಷಾಗ್ನಿ**ಯಿಂದ ದಹನ ಮಾಡಬೇಕು. [ತುಷಾಗ್ನಿ = ಜ್ವಲಿಸುವ ಕೆಂಡದ ಮೇಲೆ ಭತ್ತದ ಹೊಟ್ಟನ್ನು ಹಾಕಿದಾಗ ಆಗುವ ಅಗ್ನಿ.]

**ಆಹಿತಾಗ್ನಿಃ**

'**ಆಹಿತಾಗ್ನೇಃ ವೈತಾನಿಕಾಗ್ನಿಃ**' ಪ್ರತಿನಿತ್ಯ ಅಗ್ನಿಹೋತ್ರ ಮಾಡುವವರಲ್ಲಿ ವೇದಿಯಲ್ಲಿರುವ ಅಗ್ನಿ– **ಶ್ರೌತಾಗ್ನಿ**. ಅಗ್ನಿಹೋತ್ರಿಗಳನ್ನು ಈ ಅಗ್ನಿಯಿಂದ ದಹನ ಮಾಡಬೇಕು.

**ಔಪಾಸನಾಗ್ನಿಃ**

ವಿವಾಹಸಂಸ್ಕಾರದಿಂದ ಸಂಪಾದಿಸಿದ ಅಗ್ನಿ– **ಸ್ಮಾರ್ತಾಗ್ನಿ**. ಗೃಹಸ್ಥರು ಮರಣ ಹೊಂದಿದಲ್ಲಿ ಅವರನ್ನು **ಔಪಾಸನಾಗ್ನಿ**ಯಿಂದ ದಹನ ಮಾಡಬೇಕು.

**ಮಾತೃಮರಣೇ**

ತಾಯಿ ಸತ್ತಾಗ ಮಗನು ಲೌಕಿಕಾಗ್ನಿಯನ್ನು ಶಿಕ್ಯದಲ್ಲಿ ಪ್ರತಿಷ್ಠಾಪಿಸಿ ತಂದೆಯ ಕೈಯಲ್ಲಿ ಸಮಿಧೆ ಕೊಡಬೇಕು. ತಂದೆಯು ಅದನ್ನು ಹಿಡಿದು '**ಪ್ರತ್ಯವರೋಹ ........ ಪ್ರಜಾನನ್** ॥' ಎಂದು ಅರ್ಧಮಂತ್ರದಿಂದ '**ಹೃದಿಸ್ಥಮಗ್ನಿಂ ಪ್ರತಿಷ್ಠಾಪಯಾಮಿ** ॥' ಎಂದು ಹೇಳಿ ಮಗನ ಕೈಯಲ್ಲಿ ಸಮಿಧೆ ಕೊಟ್ಟು ಅಗ್ನಿಗೆ ಹಾಕಿಸಬೇಕು. ತಂದೆಯು ಒಂದು ವೇಳೆ ಔಪಾಸನ ಮಾಡದೇ ಇದ್ದ ಪಕ್ಷದಲ್ಲಿ (ಪುಟಸಂಖ್ಯೆ 65) ಹೇಳಿದ ಕ್ರಮದಂತೆ ತಂಡುಲದಾನವನ್ನು ಸೂತಕಾಂತ್ಯದಲ್ಲಿ ಕೊಡುವುದಾಗಿ ಸಂಕಲ್ಪಿಸಿ ಔಪಾಸನೆಯನ್ನು ಮಾಡಿ ಹಿಂದಿನ ಕ್ರಮದಂತೆ ಮಗನ ಕೈಯಲ್ಲಿ ಸಮಿಧೆಯನ್ನು ಕೊಡಬೇಕು. ಅನಂತರ ಉಳಿದ ಅರ್ಧ ಅಗ್ನಿಯಿಂದ ತನ್ನ ಮರಣದ ವರೆಗೆ ಔಪಾಸನವನ್ನು ಮಾಡಬೇಕು. ಔಪಾಸನ ಆಹುತಿ ಹೆಂಗುಸರಿಗಿಲ್ಲ.

* * *

# ಪ್ರೇತಸ್ಯ ಪುನಃಸಂಧಾನಮ್



(ಗ್ರಾಮದಿಂದ ಹೊರಗೆ ಹೋಗಿ ಶವದಹನ ಮಾಡುವುದಾದರೆ ಗೃಹ್ಯಾಗ್ನಿಯು ಲೌಕಿಕಾಗ್ನಿಯಾಗುವುದರಿಂದ ಶ್ಮಶಾನಕ್ಕೆ ಅಗ್ನಿ ಕೊಂಡುಹೋಗುವಾಗ ಲೌಕಿಕಾಗ್ನಿಯನ್ನು ಕೊಂಡುಹೋಗಿ ಅನಂತರ ದಹನಪ್ರದೇಶದಲ್ಲೇ ಔಪಾಸನವನ್ನು ಮಾಡುವ ಕ್ರಮವಿದೆ.) ಶವದ ಸಮೀಪ ವಾಯವ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ಕುಳಿತು, ಪವಿತ್ರ ತೆಗೆದು, ಕೇಶವಾದಿ ನಾಮದಿಂದ ಆಚಮನ ಮಾಡಿ, ಆ ಪವಿತ್ರವನ್ನು ಧರಿಸಿ, ಪ್ರಾಣಾಯಾಮ ಮಾಡಿ,

ತಂದೆ ಸತ್ತಾಗ ಮಗ (ಬಲ) **ಅದ್ಯ ಪೂರ್ವೋಚ್ಚರಿತ..... ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ .......ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಅಗ್ನಿವಿಚ್ಛೇದನದಿನಾದಾರಭ್ಯ ಏತಾವತ್ಕಾಲಪರ್ಯಂತಂ ನಾಸ್ತಿಕ್ಯಾದಿ ಅಗ್ನಿತ್ಯಾಗೇ, ಆಲಸ್ಯಾದಿತ್ಯಾಗೇ, ಪ್ರಮಾದಾತ್ ತ್ಯಾಗೇ ಔಪಾಸನವಿಚ್ಛೇದ ದೋಷ ಪರಿಹಾರಾರ್ಥಮ್** (ಬಲ) **ಔಪಾಸನದ್ರವ್ಯದಾನಂ ಸೂತಕಾಂತೇ ಕರಿಷ್ಯೇ । ತದಂಗ ದಾಹಾಯ ಅಗ್ನಿಸಿದ್ಧ್ಯರ್ಥಂ ಪ್ರೇತಾಧಾನಂ ಕರಿಷ್ಯೇ । ತದಂಗ ಬ್ರಹ್ಮದಂಡಂ ಕರಿಷ್ಯೇ । (ಕುರುಷ್ವ) ॥** ಎಂದು ಬ್ರಹ್ಮದಂಡ ಇಟ್ಟು, **ದಾಹಾಯ ಅಗ್ನಿಸಿದ್ಧ್ಯರ್ಥಂ ಪ್ರೇತಾಧಾನಂ ಕರ್ತುಮ್ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ॥ (ಅಧಿಕಾರ ಸಂಪದಸ್ತು) ॥** ಎಂದು ಪ್ರತಿವಚನ ಪಡೆದು (ಎಡ) ದಕ್ಷಿಣಾಭಿಮುಖವಾಗಿ ಕುಳಿತು (ದಕ್ಷಿಣ–ಆಗ್ನೇಯದ ಮಧ್ಯಭಾಗ) ನೀರಿನಿಂದ ಭೂಮಿಯನ್ನು ಪ್ರೋಕ್ಷಿಸಿ ಚೌಕಾಕಾರದ ಮಂಡಲ ಮಾಡಿ, ಶವದ ಮುಂಭಾಗದಲ್ಲಿ ಸಿದ್ಧಗೊಳಿಸಿದ ಶಿಕ್ಯದಲ್ಲಿ (ಬಿದಿರುಕಟ್ಟಿದ ಮಡಕೆ) ಮೊದಲು ಹಚ್ಚಿಟ್ಟ ತೆಂಗಿನ ಹೋಳಿನಲ್ಲಿದ್ದ ದೀಪದಿಂದ ಕೆಂಡ ಸಿದ್ಧಪಡಿಸಬೇಕು. **'ಲೌಕಿಕಾಗ್ನಿ'** ಎಂಬ ಹೆಸರಿನಿಂದ ಅಗ್ನಿಪ್ರತಿಷ್ಠೆ ಮಾಡಿ, ೨ ಸಮಿಧೆ ಹಿಡಿದು, ಅನ್ವಾಧಾನ ಮಾಡಬೇಕು.

**ಅಸ್ಮಿನ್ನಗ್ನೌ ಔಪಾಸನವಿಚ್ಛೇದನದೋಷಪರಿಹಾರಾರ್ಥಮ್ ಅಯಾಸಮಗ್ನಿಂ ದ್ವಾದಶವಾರಂ ಗೃಹೀತಾಜ್ಯೇನ ವ್ಯಾಹೃತಿಚತುಷ್ಟಯೇನ ಚ ಪ್ರಾಯಶ್ಚಿತ್ತಾಹುತಿಂ ಹೋಷ್ಯೇ ॥**

ಸಮಿಧೆಗಳೆರಡನ್ನು ಶವದ ಬಲಕೈಗೆ ಮುಟ್ಟಿಸಿ ಅಗ್ನಿಗೆ ಹಾಕಿ, ಅಪ್ರದಕ್ಷಿಣೆಯಾಗಿ ಪರಿಸಮೂಹನ ಪರಿಸ್ತರಣಾದಿ ಕ್ರಿಯಾಭಾಗ ಮಾಡಬೇಕು. ಹನ್ನೆರಡು ಬಾರಿ ಸ್ರುವದಲ್ಲಿ ತುಪ್ಪವನ್ನು ತುಂಬಿಸಿ,

ಅಯಾಶ್ಚೇತಿ ವಿಮದೋ ಅಯಾ ಅಗ್ನಿಃ ಪಂಕ್ತಿಃ । ಲೌಕಿಕಾಗ್ನೇಃ ಔಪಾಸನೀ–ಯತ್ವ ಸಿದ್ಧಯೇ ಆಜ್ಯಹೋಮೇ ವಿನಿಯೋಗಃ ॥

**ಓಮ್ ಅಯಾಶ್ಚಾಗ್ನೇಽಸ್ಯನಭಿಶಸ್ತೀಶ್ಚ ಸತ್ಯಮಿತ್ತ್ವಮಯಾ ಅಸಿ । ಅಯಾಸಾ ವಯಸಾ ಕೃತೋಽಯಾಸನ್ ಹವ್ಯಮೂಹಿಷೇ ಯಾನೋ ಧೇಹಿ ಭೇಷಜಂ ಸ್ವಾಹಾ ॥ ಅಯಸೇಽಗ್ನಯ ಇದಂ ನ ಮಮ** ॥ ಎಂದು ಹೋಮಿಸಿ,

**ಯಸ್ಯಾಗ್ನಯೋ ಜುಹ್ವತೋ ಮಾಂಸಕಾಮಾಃ ಸಂಕಲ್ಪಯಂತೋ ಯಜಮಾನ–ಮಾಂಸಮ್ । ಜಾನಂತು ತೇ ಹವಿಷೇ ಸಾದಿತಾಯ ಸ್ವರ್ಗಂ ಲೋಕಮಿದಂ ಪ್ರೇತಂ ನಯಂತು ಸ್ವಾಹಾ ॥ ಸ್ವರಿದಂ ನ ಮಮ** ॥ ತುಪ್ಪದಿಂದ–

**ಭೂಃ ಸ್ವಾಹಾ । ಅಗ್ನಯೇ ಪ್ರಾಣಸ್ಥ ಅನಿರುದ್ಧಾಯ ಇದಂ ನ ಮಮ ।**

**ಭುವಃ ಸ್ವಾಹಾ । ವಾಯವೇ ಪ್ರಾಣಸ್ಥ ಪ್ರದ್ಯುಮ್ನಾಯ ಇದಂ ನ ಮಮ ।**

**ಸ್ವಃ ಸ್ವಾಹಾ । ಸೂರ್ಯಾಯ ಪ್ರಾಣಸ್ಥ ಸಂಕರ್ಷಣಾಯ ಇದಂ ನ ಮಮ ।**

**ಭೂರ್ಭುವಃಸ್ವಃ ಸ್ವಾಹಾ । ಪ್ರಜಾಪತಯೇ ಪ್ರಾಣಸ್ಥ ವಾಸುದೇವಾಯ ಇದಂ ನ ಮಮ** ॥ ಎಂದು ಹೋಮಿಸಿ, **ಪುನಃ** ವ್ಯಸ್ತಸಮಸ್ತ ವ್ಯಾಹೃತಿಮಂತ್ರಗಳಿಂದ **ಮಂತ್ರಗಳಿಂದ ಹೋಮಿಸಿ,**

**ಸಂಕಲ್ಪಃ**

**ಪ್ರೇತೌಪಾಸನಹೋಮಂ ಕರಿಷ್ಯೇ** । ಎರಡು ಸಮಿಧೆಗಳನ್ನು ಶವದ ಬಲಕೈಗೆ ಸ್ಪರ್ಶ ಮಾಡಿಸಿ, ಅವುಗಳಲ್ಲಿ ಒಂದು ಸಮಿಧೆಯನ್ನು ಹಿಡಿದು–

**ಓಂ ಪ್ರತ್ಯವರೋಹ ಜಾತವೇದಃ ಪುನಸ್ತ್ವಂ ದೇವೇಭ್ಯೋ ಹವ್ಯಂ ವಹತು**

**ಪ್ರಜಾನನ್। ಪ್ರಜಾಂ ಪುಷ್ಟಿಂ ರಯಿಮಸ್ಮಾಸು ಧೇಹ್ಯಥಾ ಭವ ಯಜಮಾನಾಯ ಶಂ ಯೋಃ॥ ಪ್ರತ್ಯವರೋಹ ಜಾತವೇದಃ ಸ್ವರ್ಗಾಯ ಲೋಕಾಯ ಪ್ರಜಾನನ್। ಪ್ರಜಾಂ ಪುಷ್ಟಿಂ ರಯಿಮಸ್ಮಾಸು ಧೇಹಿ ಪ್ರೇತಾಹುತಿಶ್ಚಾಸ್ಯ ಜುಷಸ್ವ ಸ್ವಾಹಾ** ॥ ಎಂದು ಒಂದು ಸಮಿಧೆಯನ್ನು ಹೋಮಿಸಿ–

**ಓಮ್ ಉಪಾವರೋಹ ಜಾತವೇದ ಇಮಾಂ ತಂ ಸ್ವರ್ಗಾಯ ಲೋಕಾಯ ನಯ ಪ್ರಜಾನನ್ । ಆಯುಃ ಪ್ರಜಾಂ ರಯಿಮಸ್ಮಾಸು ಧೇಹ್ಯಜಸ್ರೋ ದೀದಿಹಿ ನೋ ದುರೋಣೇ** ॥ ಎಂದು ಎರಡನೆಯ ಸಮಿಧೆಯನ್ನು ಹೋಮಿಸಬೇಕು.

[ನಿತ್ಯೋಪಾಸನ ಮಾಡುವವರು ಕೃಷ್ಣಪಕ್ಷದಲ್ಲಿ ಮರಣವಾದರೆ ದೋಷಪರಿಹಾರಕ್ಕಾಗಿ, ಮೃತದಿನದಿಂದ ಹಿಡಿದು, ಅಮಾವಾಸ್ಯಾಪರ್ಯಂತ ವೃದ್ಧಿಕ್ಷಯಾನುಸಾರವಾಗಿ ಆಗುವ ತಿಥಿಯನ್ನು ಲೆಕ್ಕ ಮಾಡಿ ಆ ತಿಥಿಯಷ್ಟು ಅಕ್ಕಿಮುಷ್ಟಿಯನ್ನು ಹಿಡಿದು ನೀರಿನಿಂದ ತೊಳೆದು ಅಭಿಘಾರ ಮಾಡಿ ಬೆಳಗ್ಗೆ ಮರಣವಾದರೆ '**ಸೂರ್ಯಪ್ರಜಾಪತಿ**'ಗೆ ಸಂಜೆ ಮರಣವಾದರೆ '**ಅಗ್ನಿಪ್ರಜಾಪತಿ**'ಗೆ ಒಂದೊಂದು ಆಹುತಿಯನ್ನು ಮಾತ್ರ ಕೊಡಬೇಕು. ಶುಕ್ಲಪಕ್ಷದಲ್ಲಿ ಬೆಳಗ್ಗೆ ಮರಣವಾದರೆ '**ಸೂರ್ಯಪ್ರಜಾಪತಿ**'ಗೆ, ಸಂಜೆ ಮರಣವಾದರೆ '**ಅಗ್ನಿಪ್ರಜಾಪತಿ**'ಗೆ ಅಕ್ಕಿಯಿಂದ ಒಂದೊಂದು ಆಹುತಿಯನ್ನು ಕೊಡಬೇಕು.]

**ಅದ್ಯ ಸಾಯಂ (ಪ್ರಾತಃ) ಔಪಾಸನಂ ಕರಿಷ್ಯೇ** ॥ ಬೇರೆ ಒಂದು ಸಮಿಧೆ ಹಿಡಿದು ಶವದ ಬಲಕೈಗೆ ಮುಟ್ಟಿಸಿ ಮೌನದಿಂದ **ಸ್ವಾಹಾ** ॥ ಎಂದು ಅಗ್ನಿಗೆ ಹಾಕಿ, ವ್ಯಾಹೃತಿ ಹೋಮ ಮಾಡಿ, ಎರಡು ಆಹುತಿಗೆ ಬೇಕಾಗುವಷ್ಟು ಅಕ್ಕಿ ಹಿಡಿದು ನೀರಿನಿಂದ ತೊಳೆದು ಶವದ ಬಲಕೈಗೆ ಮುಟ್ಟಿಸಿ ಆ ಅಕ್ಕಿಯನ್ನು ಕೈಗಳೆರಡರಿಂದ ಸಮಪಾಲು ಮಾಡಿ ಬಲಕೈಯ ಅಕ್ಕಿಯನ್ನು ಅಭಿಘಾರ ಮಾಡಿ, **ಅಗ್ನಯೇ** (*ಪ್ರಾತಃ*– **ಸೂರ್ಯಾಯ**) **ಸ್ವಾಹಾ । ಅಗ್ನಯ (ಸೂರ್ಯಾಯ) ಇದಂ ನ ಮಮ** ॥ ಎಂದು ಅಗ್ನಿಗೆ ಆಹುತಿ ನೀಡಿ ಅನಂತರ ಎಡಕೈಯ ಅಕ್ಕಿಯನ್ನು ಬಲಕೈಗೆ ಹಾಕಿ ಅಭಿಘಾರ ಮಾಡಿ, **ಪ್ರಜಾಪತಯೇ ಸ್ವಾಹಾ । ಪ್ರಜಾಪತಯ ಇದಂ ನ ಮಮ** ॥ ಎಂದು ಅಗ್ನಿಗೆ ಆಹುತಿ ನೀಡಿ, ವ್ಯಾಹೃತಿ ಹೋಮ ಮಾಡಬೇಕು.]

ಅನಂತರ, ಅಪ್ರದಕ್ಷಿಣೆಯಾಗಿ ಉತ್ತರ ಪರಿಷೇಕ ಹಾಗೂ ಗೋತ್ರಾಭಿವಂದನೆ ಮಾಡಿ (ಬಲ) ಪೂರ್ವಾಭಿಮುಖವಾಗಿ ಕುಳಿತು ಕೃಷ್ಣಾರ್ಪಣ ಬಿಟ್ಟು (ಎಡ) ಹೋಮ ಶಿಕ್ಯ(ಮಡಕೆ)ದಲ್ಲಿ ಮಾಡದಿದ್ದಲ್ಲಿ ಈಗ ಅಗ್ನಿಯನ್ನು ಶಿಕ್ಯದಲ್ಲಿಡಬೇಕು. ಕ್ರಿಯಾಕರ್ತೃಗಳು ಹಾಗೂ ತಾಯಿ, ಹೆಣ್ಣುಮಕ್ಕಳು ಎಳ್ಳನ್ನು ಹಿಡಿದು '**ಏತೋನ್ವಿಂದ್ರಂ**'ಮಂತ್ರದಿಂದ ಶವದ ಮೇಲೆ ಹಾಕಿ, ಮೂರು ಪ್ರದಕ್ಷಿಣೆ ಬಂದು ನಮಸ್ಕರಿಸಬೇಕು.

ಓಮ್ ಏತೋ ನ್ವಿಂದ್ರಂ ಸ್ತವಾಮ ಶುದ್ಧಂ ಶುದ್ಧೇನ ಸಾಮ್ನಾ । ಶುದ್ಧೈರುಕ್ಥೈರ್ವಾವೃಧ್ವಾಂಸಂ ಶುದ್ಧ ಆಶೀರ್ವಾನ್ ಮಮತ್ತು ॥ ಇಂದ್ರ ಶುದ್ಧೋ ನ ಆ ಗಹಿ ಶುದ್ಧಃ ಶುದ್ಧಾಭಿರೂತಿಭಿಃ । ಶುದ್ಧೋ ರಯಿಂ ನಿ ಧಾರಯ ಶುದ್ಧೋ ಮಮದ್ಧಿ ಸೋಮ್ಯಃ ॥ ಇಂದ್ರ ಶುದ್ಧೋ ಹಿ ನೋ ರಯಿಂ ಶುದ್ಧೋ ರತ್ನಾನಿ ದಾಶುಷೇ । ಶುದ್ಧೋ ವೃತ್ರಾಣಿ ಜಿಘ್ನಸೇ ಶುದ್ಧೋ ವಾಜಂ ಸಿಷಾಸಸಿ ॥ ಅನಂತರ ಮೃತನ ಹೆಂಡತಿಯು ಪುನಃ ಪ್ರದಕ್ಷಿಣೆ ಬರಬೇಕು.

ಓಮ್ ಅಯಂ ಮಾತಾಯಂ ಪಿತಾಽಯಂ ಜೀವಾತು ರಾಗಮತ್ । ಇದಂ ತವ ಪ್ರಸರ್ಪಣಂ ಸುಬಂಧವೇ ಹಿ ನಿರಿಹಿ ॥ ಇಮಾ ನಾರೀರವಿಧವಾಃ ಸುಪತ್ನೀರಾಂಜನೇನ ಸರ್ಪಿಷಾ ಸಂ ವಿಶಂತು । ಅನಶ್ರವೋಽನಮೀವಾಃ ಸುರತ್ನಾ ಆ ರೋಹಂತು ಜನಯೋ ಯೋನಿಮಗ್ರೇ ॥ ೭ ॥ ಉದೀರ್ಷ್ವ ನಾರ್ಯಭಿ ಜೀವಲೋಕಂ ಗತಾಸುಮೇತಮುಪ ಶೇಷ ಏಹಿ । ಹಸ್ತಗ್ರಾಭಸ್ಯ ದಿಧಿಷೋಸ್ತವೇದಂ ಪತ್ಯುರ್ಜನಿತ್ವಮಭಿ ಸಂ ಬಭೂಥ ॥

ಎಂದು ಹಣೆಯ ಕುಂಕುಮವನ್ನು ಅಳಿಸಿ, ಮಾಂಗಲ್ಯ, ಬಳೆ, ಕಾಲುಂಗುರ, ಹೂ, ಮೂಗುತಿ, ಕರ್ಣಾಭರಣ –ಇವುಗಳನ್ನು ಶವದ ಕಾಲಿನ ಬಳಿಯಿಟ್ಟು, ನಮಸ್ಕಾರ ಮಾಡಿ ಒಳಗೆ ಹೋಗಬೇಕು. ಮೃತನ ಪತ್ನಿ ಮುಂಡನ ಮಾಡುವ ಯೋಚನೆ ಇದ್ದರೆ ಈ ಸಂದರ್ಭದಲ್ಲಿ ಮಾಡಬೇಕು. ಪತ್ನಿಯು ರಜಸ್ವಲೆಯಾಗಿದ್ದರೆ ನಾಲ್ಕನೇ ದಿನ ಸ್ನಾನ ಮಾಡಿ, ಮುತ್ತೈದೆತನದ ದ್ರವ್ಯಗಳನ್ನು ವಿಸರ್ಜಿಸಬೇಕು. (ಕೆಲವರಲ್ಲಿ ಹತ್ತನೆಯ ದಿನ ಮಂಗಲದ್ರವ್ಯವನ್ನು ತೆಗೆಯುವ ಸಂಪ್ರದಾಯವಿದೆ). ಅನಂತರ ಎಲ್ಲಾ ಬಂಧುಗಳು ಶವದ ಮೇಲೆ ಎಳ್ಳು ಹಾಕಿ, ಮೂರು ಪ್ರದಕ್ಷಿಣೆ ಬಂದು ನಮಸ್ಕಾರ ಮಾಡಬೇಕು. ಅನಂತರ ಕ್ರಿಯಾಕರ್ತೃಗಳು ಜಲಪಾತ್ರೆ, ಎಳ್ಳು ಹಿಡಿದು ಅಪ್ರದಕ್ಷಿಣೆಯಾಗಿ ಮೂರು ಸುತ್ತು ಬರಬೇಕು. ಮೊದಲ ಸುತ್ತಿಗೆ–

ಓಂ ವಾತಾಸ್ತೇ ವಾಂತು ಪಥಿ ಪುಣ್ಯಗಂಧಾ ಮನಃಸುಖಾ ಗಾತ್ರಸುಖಾನುಲೋಮಾಃ । ತ್ವಚಃಸುಖಾ ಮಾಂಸಸುಖಾ ಅಸ್ಥಿಸೌಖ್ಯಾ

**ವಹಂತು ತ್ವಾಂ ಮರುತಃ ಸುಕೃತಾಂ ಯತ್ರ ಲೋಕಾಃ ॥**

ಎಂದು ಶವದ ಪಾದದೇಶದಲ್ಲಿ **ತಿಲೋದಕಮುಪತಿಷ್ಠತು** ॥ ಎಂದು ತಿಲೋದಕ ಕೊಟ್ಟು, ಎರಡನೇ ಸುತ್ತಿಗೆ ಶವದ ಮಧ್ಯಭಾಗದಲ್ಲಿ, ಮೂರನೇ ಸುತ್ತಿಗೆ ಶವದ ಶಿರೋದೇಶದಲ್ಲಿ ತಿಲೋದಕ ಕೊಡಬೇಕು.

## ಪ್ರೇತನಿರ್ಹರಣಪ್ರಕಾರಃ



(ಬಲ) ಪೂರ್ವಾಭಿಮುಖವಾಗಿ ಕುಳಿತು ಪವಿತ್ರ ತೆಗೆದು ಆಚಮನ ಮಾಡಿ, ಪುನಃ ಪವಿತ್ರ ಧರಿಸಿ,

**ಪ್ರಾಣಸ್ಥಪ್ರಾಜ್ಞರೂಪಿಪರಮಾತ್ಮಾ..... ಪ್ರೀತ್ಯರ್ಥಂ** (ಎಡ) **ಅಸ್ಮತ್ .......ಪ್ರೇತಸ್ಯ ಶವಸ್ಯ ಶ್ಮಶಾನಂಪ್ರತಿನಯನ ಅಧಿಕಾರಸಿದ್ಧ್ಯರ್ಥಂ** (ಬಲ) **ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ)** ॥ ಎಂದು ಬ್ರಹ್ಮದಂಡ ಇಟ್ಟು, **'ಶ್ಮಶಾನಂಪ್ರತಿನಯನಾಧಿಕಾರಸಿದ್ಧಿರಸ್ತ್ವಿತಿ ಭವಂತೋ ಬ್ರುವಂತು** ॥ ಎಂದು ಹೇಳಿ (**'ಶ್ಮಶಾನಂಪ್ರತಿನಯನಾಧಿಕಾರಸಿದ್ಧಿರಸ್ತು'**) ಎಂದು ಪ್ರತಿವಚನ ಪಡೆದುಕೊಳ್ಳಬೇಕು.

(ಎಡ) ಅಕ್ಕಿ ಹಿಟ್ಟಿನಿಂದ ೬ ಪಿಂಡಗಳನ್ನು ಮಾಡಿ, ಮೃತಸ್ಥಾನದಲ್ಲಿ ದಕ್ಷಿಣಕ್ಕೆ ಮುಖಮಾಡಿ ಕುಳಿತು ದಕ್ಷಿಣಕ್ಕೆ ತುದಿ ಬರುವಂತೆ ನೀರಿನಿಂದ ತ್ರಿಕೋನ ಮಂಡಲವನ್ನು ಮಾಡಿ **'ಮೃತಸ್ಥಾನೇ ಮಂಡಲೇ ದರ್ಭಪತ್ರಮುಪತಿಷ್ಠತು ॥'** ಎಂದು ದಕ್ಷಿಣಾಗ್ರವಾಗಿ ದರ್ಭೆ ಇಟ್ಟು. **'ದರ್ಭಸ್ಯೋಪರಿ ಏತತ್ತಿಲೋದಕಮುಪತಿಷ್ಠತು ॥'** ಎಂದು ತಿಲೋದಕ ಕೊಟ್ಟು ಸಕ್ತುಪಿಂಡ ಹಿಡಿದು **'ಅಸ್ಮತ್......ಪ್ರೇತಸ್ಯ ಮೃತಸ್ಥಾನೇ ಶವಾಯ ಬ್ರಹ್ಮದೈವತ ಸ್ಥಾನೇ ಪಿಂಡ ಉಪತಿಷ್ಠತು ॥'** ಎಂದು ಪಿಂಡ ಇಟ್ಟು **'ಪಿಂಡಸ್ಯೋಪರಿ ತಿಲೋದಕ–ಮುಪತಿಷ್ಠತು ॥'** ಎಂದು ಪಿಂಡಪ್ರದಾನ ಮಾಡಬೇಕು.

ಅನಂತರ ಬಾಗಿಲ ಒಳಭಾಗದಲ್ಲಿ ಹಿಂದಿನ ಕ್ರಮದಂತೆ ಮಂಡಲ ಮಾಡಿ, ದರ್ಭೆ ಹರಡಿ ತಿಲೋದಕ ಕೊಟ್ಟು, **'ಪಂಥಾಯ ವಿಷ್ಣುದೈವತಸ್ಥಾನೇ ಪಿಂಡ ಉಪತಿಷ್ಠತು ॥'**

ಎಂದು ಒಂದು ಪಿಂಡವನ್ನಿಟ್ಟು ಪುನಃ ತಿಲೋದಕ ಕೊಡಬೇಕು. (ಒಂದು ವೇಳೆ ಪಿಂಡ ಇಲ್ಲದಿದ್ದರೆ ತಿಲೋದಕವನ್ನಾದರೂ ಕೊಡಬೇಕು.

ಉಳಿದ ೭ ಪಿಂಡಗಳಲ್ಲಿ ೨ ಪಿಂಡಗಳನ್ನು ಶ್ಯಾಮಶಬಲರಿಗಾಗಿ ಬೇರೆಯೇ ತೆಗೆದಿಟ್ಟು, ಇನ್ನುಳಿದ ೫ ಪಿಂಡಗಳನ್ನು ಶ್ಮಶಾನಕ್ಕೆ ಕೊಂಡುಹೋಗುವ ಸಾಹಿತ್ಯದಲ್ಲಿಡಬೇಕು. ಅನಂತರ ಬಿಸಿನೀರು ಮಾಡಿದ ಒಲೆಯ ಬಳಿ ಬಂದು ಎಳ್ಳುನೀರು ಹಿಡಿದು– **ಅಸ್ಮತ್ಪಿತುಃ ........ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಚುಲ್ಲ್ಯುದ್ವಾಸನಮುಪತಿಷ್ಠತು** ॥ ಎಂದು ಎಳ್ಳು ನೀರು ಬಿಡಬೇಕು. ಮುಂದೆ, ಶವವನ್ನು ಶ್ಮಶಾನಕ್ಕೆ ಕೊಂಡುಹೋದ ಅನಂತರ ಮನೆಯಲ್ಲಿರುವವರು ಒಲೆಯನ್ನು ತೆಗೆದು ಶವವನ್ನು ಮಲಗಿಸಿದ ಸ್ಥಳವನ್ನು ಶುದ್ಧ ಮಾಡಿ, ಒಂದು ಬತ್ತಿಯ ದೀಪವನ್ನು ದಕ್ಷಿಣಮುಖವಾಗಿ ಹಚ್ಚಿಡಬೇಕು. ಹಾಗೂ ಶವಸ್ನಾನಕ್ಕಾಗಿ ಶವವನ್ನು ಹಲಗೆಯ ಮೇಲೆ ಮಲಗಿಸಿದ್ದಲ್ಲಿ ಆ ಹಲಗೆಯನ್ನು ಹತ್ತುದಿನದ ವರೆಗೆ ಮನೆಯೊಳಗೆ ಕೊಂಡೊಯ್ಯುವಂತಿಲ್ಲ. ಹನ್ನೊಂದನೆಯ ದಿನದ ಶುದ್ಧದ ಬಳಿಕ ಕೊಂಡೊಯ್ಯಬಹುದು.

ದಹನಕಾರ್ಯಕ್ಕೆ ಬೇಕಾದ ಎಲ್ಲಾ ಸಾಹಿತ್ಯಗಳನ್ನು ಕಳುಹಿಸಿ, ಸಮರ್ಥರಾದ ನಾಲ್ಕು ಜನ ಶವವಾಹಕರನ್ನು ಗೊತ್ತುಪಡಿಸಿ ಎಲ್ಲರೂ ಉಪವೀತವನ್ನು ಮಾಲಾಕಾರ ಮಾಡಿಕೊಂಡು ತಲೆಗೆ ವಸ್ತ್ರವನ್ನು ತಲೆ ಕಾಣುವಂತೆ ಸುತ್ತಬೇಕು. ಶವವನ್ನು ಮೃತನ ಮಕ್ಕಳು ಹೊತ್ತರೆ ಉತ್ತಮ. ಅಗ್ನಿ ಮತ್ತು ಜಲಕುಂಭಸಹಿತ ಮಗನು ಶವದ ಶಿರೋದೇಶದಲ್ಲಿಯೂ ಉಳಿದವರು ಉಳಿದ ಭಾಗದಲ್ಲೂ ಚಟ್ಟವನ್ನು ಹೆಗಲಲ್ಲಿರಿಸಿ ಅಗ್ನಿ ಮತ್ತು ಶವದ ನಡುವೆ ಯಾರೂ ನುಸುಳದಂತೆ ಹೊದಿಕೆ ಇಲ್ಲದ ವೃದ್ಧರು ಬಂಧುಗಳು ಹಿಂದುಗಡೆಯಿಂದ ಶವವನ್ನು ಅನುಸರಿಸಿ ನಾಲ್ಕು ಹೆಜ್ಜೆ ನಡೆದು ಅನಂತರ ಮೆಲ್ಲನೆ ಹೆಗಲಿಂದ ಶವವನ್ನು ಕೆಳಗಿರಿಸಿ ಆಚ್ಛಾದಿತ ವಸ್ತ್ರವನ್ನು ಸರಿಸಿ ಶವದ ಮುಖವನ್ನು **'ಭೂತಸಂಜ್ಞಾ'** ದೇವತೆಗೆ ತೋರಿಸಿ **'ಭೂತಸಂಜ್ಞಾಯತಿಲೋದಕಮುಪತಿಷ್ಠತು ॥'** –ಎಂದು ನೆಲದ ಮೇಲೆ ತಿಲೋದಕ ಕೊಟ್ಟು ಎಲ್ಲರೂ ಶವದ ಮುಖವನ್ನು ನೋಡಬೇಕು.

ಇಮೇ ಜೀವಾ ಇತ್ಯಸ್ಯ ಯಾಮಾಯನಃ ಸಂಕುಸುಕೋ ಮೃತ್ಯುಸ್ತ್ರಿಷ್ಟುಪ್ । ಪ್ರೇತಮುಖಾವಲೋಕನೇ ವಿನಿಯೋಗಃ ॥

**ಓಮ್ ಇಮೇ ಜೀವಾ ವಿ ಮೃತೈರಾವವೃತ್ರನ್ನಭೂದ್ಭದ್ರಾ ದೇವಹೂ– ತಿರ್ನೋ ಅದ್ಯ । ಪ್ರಾಂಚೋ ಅಗಾಮ ನೃತಯೇ ಹಸಾಯ ದ್ರಾಘೀಯ ಆಯುಃ ಪ್ರತರಂ ದಧಾನಾಃ** ॥ ಪುನಃ ಆಚ್ಛಾದನೆ ಮಾಡಿ, ಶವದ ತಲೆಯ ದಕ್ಷಿಣಪಾರ್ಶ್ವ ದಲ್ಲಿ ನೀರು ಪ್ರೋಕ್ಷಣೆ ಮಾಡಿ ಒಂದು ದರ್ಭೆಯನ್ನು ದಕ್ಷಿಣಾಗ್ರವಾಗಿಟ್ಟು–

ಅತಿ ದ್ರವೇತಿ ದ್ವಯೋ ಯಮಶ್ವಾನೌ ತ್ರಿಷ್ಟುಪ್ । ಮಾರ್ಗೇ ಪಿಂಡದಾನೇ ವಿನಿಯೋಗಃ ॥

**ಓಮ್ ಅತಿ ದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ । ಅಥಾ ಪಿತೄನ್ ತ್ಸುವಿದತ್ರಾಁ ಉಪೇಹಿ ಯಮೇನ ಯೇ ಸಧಮಾದಂ ಮದಂತಿ ॥**

**'ಶ್ಯಾಮಾಯ ಅಯಂ ಪಿಂಡ ಉಪತಿಷ್ಠತು ॥'** –ಎಂದು ಒಂದು ಪಿಂಡ ಇಟ್ಟು ತಿಲೋದಕ ಕೊಡುವುದು. ಅನಂತರ ಶವದ ತಲೆಯ ವಾಮಪಾರ್ಶ್ವದಲ್ಲಿ ನೀರು ಪ್ರೋಕ್ಷಣೆ ಮಾಡಿ ಒಂದು ದರ್ಭೆಯನ್ನು ದಕ್ಷಿಣಾಗ್ರವಾಗಿ ಇಟ್ಟು,

**ಓಂ ಯೌ ತೇ ಶ್ವಾನೌ ಯಮ ರಕ್ಷಿತಾರೌ ಚತುರಕ್ಷೌ ಪಥಿರಕ್ಷೀ ನೃಚಕ್ಷಸೌ । ತಾಭ್ಯಾಮೇನಂ ಪರಿ ದೇಹಿ ರಾಜನ್ ಸ್ವಸ್ತಿ ಚಾಸ್ಮಾ ಅನಮೀವಂ ಚ ಧೇಹಿ ॥**

**'ಶಬಲಾಯ ಅಯಂ ಪಿಂಡ ಉಪತಿಷ್ಠತು ॥'** ಎಂದು ಒಂದು ಪಿಂಡ ಇಟ್ಟು ತಿಲೋದಕ ಕೊಡುವುದು. (ಪಿಂಡವಿಲ್ಲದಿದ್ದರೆ ತಿಲೋದಕವನ್ನಾದರೂ ಬಿಡಬೇಕು.)

ಶವವಾಹಕರಲ್ಲಿ ಹಿಂದಿನವರು ಮುಂದಿನಿಂದಲೂ, ಮುಂದಿನವರು ಹಿಂದಿನಿಂದಲೂ ಶವ ಹೋಗುವಾಗ ಮನೆಯನ್ನು ನೋಡಿಕೊಂಡು ಹೋಗಬಾರದೆಂಬ ಉದ್ದೇಶದಿಂದ ಶವದ ಕಾಲನ್ನು ಮುಂದೆ ಮಾಡಿ ಹೆಗಲ ಮೇಲಿರಿಸಿ ಊರಿನ ಪಶ್ಚಿಮದ್ವಾರದಿಂದ ದಹನಪ್ರದೇಶಕ್ಕೆ ಹೋಗಬೇಕು.

ಪರೇಯಿವಾಂಸಮಿತಿ ವೈವಸ್ವತೋ ಯಮೋ ಯಮಸ್ತ್ರಿಷ್ಟುಪ್ । ಶವನಯ–ನಾರ್ಥೇ ವಿನಿಯೋಗಃ ॥

**ಓಂ ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮ–ನುಪಸ್ಪಶಾನಮ್ । ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ॥**

## ಔರ್ಧ್ವದೇಹಿಕ ವಿಧಿಃ

ಶವವನ್ನು ಶ್ಮಶಾನಕ್ಕೆ ತಂದು ಚಿತೆ ನಿರ್ಮಾಣವಾಗದೆ ಇದ್ದಲ್ಲಿ ಚಿತೆಗೆ ಗೊತ್ತುಪಡಿಸಿದ ಸ್ಥಳದ ಉತ್ತರದಲ್ಲಿ, ಶವದ ತಲೆ ದಕ್ಷಿಣಕ್ಕಿರುವಂತೆ ಶವವನ್ನಿಡಬೇಕು. ಒಂದು ವೇಳೆ ಚಿತೆ ನಿರ್ಮಾಣವಾಗಿದ್ದಲ್ಲಿ ಚಿತೆಗೆ ಅಪ್ರದಕ್ಷಿಣೆಯಾಗಿ ಸುತ್ತು ಬಂದು ಚಿತೆಯ ಉತ್ತರದಲ್ಲಿ ಶವದ ತಲೆ ದಕ್ಷಿಣಕ್ಕೆ, ಅಂದರೆ ಸ್ವಲ್ಪ ಆಗ್ನೇಯಕ್ಕೆ ಮಾಡಿ ಕೆಳಗಿರಿಸಿ ಅಗ್ನಿಯನ್ನು,

ಜಲಕುಂಭವನ್ನು ಈಶಾನ್ಯದಲ್ಲಿ ಇಟ್ಟು (ಬಲ) ಕೈಕಾಲು ಮುಖ ತೊಳೆದು ಪವಿತ್ರ ತೆಗೆದು ಆಚಮನ ಮಾಡಿ ಪುನಃ ಪವಿತ್ರ ಧರಿಸಿ,




**ಸಂಕಲ್ಪಃ**

(ಬಲ) **ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್ ದಹನದೇಶೇ ಭೂಶುದ್ಧ್ಯರ್ಥಂ ಹಿರಣ್ಯದಾನಂ ಸೂತಕಾಂತೇ ಕರಿಷ್ಯೇ ॥** (ಎಡ) **ಅಸ್ಮತ್ .......ಪ್ರೇತತ್ವವಿಮೋಕ್ಷಾರ್ಥಮ್** (ಬಲ) **ಔರ್ಧ್ವದೇಹಿಕಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

ಎಂದು ಬ್ರಹ್ಮದಂಡ ಇಟ್ಟು '**ಔರ್ಧ್ವದೇಹಿಕಕರ್ಮಕರ್ತುಮ್ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ॥**' ಎಂದು ಹೇಳಿ, **(ಅಧಿಕಾರಸಂಪದಸ್ತು)** ॥ ಎಂದು ಪ್ರತಿವಚನ ಪಡೆದು, (ಎಡ) ಚಿತೆಯ ಬಳಿ ದಕ್ಷಿಣಕ್ಕೆ ಮುಖಮಾಡಿ ಕುಳಿತು '**ಉಪಸರ್ಪ**' ಮಂತ್ರದಿಂದ ಭೂಮಿಯನ್ನು ಪ್ರಾರ್ಥಿಸಿ ಮುಳ್ಳು, ಗಿಡಗಳನ್ನು ತೆಗೆದು ಹಾಕುವುದು.

ಉಪ ಸರ್ಪೇತ್ಯಸ್ಯ ಸಂಕುಸುಕಃ ಪಿತೃಮೇಧಾಸ್ತ್ರಿಷ್ಟುಪ್ । ಭೂಮಿಪ್ರಾರ್ಥನೇ ವಿನಿಯೋಗಃ ॥

**ಓಮ್ ಉಪ ಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಮ್ । ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿರ್ಋತೇರುಪಸ್ಥಾತ್** ॥ ಎಳ್ಳು ಹಿಡಿದು,

**ಓಂ ಮೃತ್ಯೋಃ ಪದಂ ಯೋಪಯಂತೋ ಯದೈತ ದ್ರಾಘೀಯ ಆಯುಃ ಪ್ರತರಂ ದಧಾನಾಃ । ಆಪ್ಯಾಯಮಾನಾಃ ಪ್ರಜಯಾ ಧನೇನ ಶುದ್ಧಾಃ ಪೂತಾ ಭವತ ಯಜ್ಞಿಯಾಸಃ ॥**

–ಎಂದು, **'ಶ್ಮಶಾನಭೂಮೌ ಸ್ಥಿತಾಃ ಕ್ರಿಮಿಕೀಟಾದಯಃ ಅನ್ಯತ್ರ ಗಚ್ಛಂತು'** ಎಂದು ಎಳ್ಳು ಸುತ್ತಲೂ ಬಿಸಾಡಿ, **'ವಾತಾಸ್ತೇ'** ಮಂತ್ರದಿಂದ ವಾಸೋದಕದಿಂದ ಶವವನ್ನು ಪ್ರೋಕ್ಷಣೆ ಮಾಡಬೇಕು.

**ಓಂ ವಾತಾಸ್ತೇ ವಾಂತು ಪಥಿ ಪುಣ್ಯಗಂಧಾ ಮನಃ ಸುಖಾ ಗಾತ್ರ ಸುಖಾನುಲೋಮಾಃ । ತ್ವಚಃ ಸುಖಾ ಮಾಂಸಸುಖಾ ಅಸ್ಥಿಸೌಖ್ಯಾ ವಹಂತು ತ್ವಾಂ ಮರುತಃ ಸುಕೃತಾಂ ಯತ್ರ ಲೋಕಾಃ ॥**

**'ಅಪಸರ್ಪಂತು'** ಮಂತ್ರದಿಂದ ಭೂಮಿಯನ್ನು ಪ್ರೋಕ್ಷಿಸಬೇಕು.

**ಅಪಸರ್ಪಂತು ತೇ ಪ್ರೇತಾ ಯೇ ಕೇಚಿದಿಹ ಪೂರ್ವಜಾಃ ।**
**ಸ್ವಸ್ತಿ ನಃ ಕೃಣುತಾಮಾಶು ಆಪಾತಃ ಪುನರಾಗಮತ್ ॥**

ಚಿತೆ ನಿರ್ಮಾಣವಾಗದೇ ಇದ್ದಲ್ಲಿ ವಾಯವ್ಯದಿಂದ ಆಗ್ನೇಯಪರ್ಯಂತ ಆಯತಾಕಾರದ ಎಂಟು ಅಡಿ ಅಗಲದ ಹಾಗೂ ಅರ್ಧ ಅಡಿಯ ಹೊಂಡ ಮಾಡಿ **'ದಿವಿಜಾತಾ'** ಮಂತ್ರದಿಂದ ಚಿತೆಯ ಹೊಂಡಕ್ಕೆ ನೀರು ಹಾಕಬೇಕು. ಚಿತೆ ನಿರ್ಮಾಣವಾಗಿದ್ದರೆ ಚಿತೆಯ ಬುಡದಲ್ಲಿ ನೀರು ಹಾಕಬೇಕು.

**ಓಂ ದಿವಿ ಜಾತಾ ಅಪ್ಸುಜಾತಾ ಯಾ ಜಾತಾ ಓಷಧೀಭ್ಯಃ ॥ ಅಥೋ ಯಾ ಅಗ್ನಿಜಾ ಆಪಸ್ತಾನಃ ಶುಂಧಂತು ಶುಂಧನೀಃ ॥**

**'ಅಪೇತವೀತ'** ಮಂತ್ರದಿಂದ ಮಾವಿನ ತುದಿಯಿಂದ ಪಂಚಗವ್ಯ ಪ್ರೋಕ್ಷಣೆ ಮಾಡಬೇಕು.

ಅಪೇತೇತಿ ಯಮಃ ಪಿತರಸ್ತ್ರಿಷ್ಟುಪ್ । ಭೂಮಿಪ್ರೋಕ್ಷಣೇ ವಿನಿಯೋಗಃ ॥

**ಓಮ್ ಅಪೇತ ವೀತ ವಿ ಚ ಸರ್ಪತಾತೋಽಸ್ಮಾ ಏತಂ ಪಿತರೋ ಲೋಕಮಕ್ರನ್ । ಅಹೋಭಿರದ್ಭಿರಕ್ತುಭಿರ್ವ್ಯಕ್ತಂ ಯಮೋ ದದಾತ್ಯವಸಾನ-ಮಸ್ಮೈ ॥**

**ಚಿತಿ ನಿರ್ಮಾಣವಾಗದೇ ಇದ್ದಲ್ಲಿ ಹೊಂಡದಲ್ಲಿ ಕ್ರಮವಾಗಿ ಪಾದಸ್ಥಾನದಲ್ಲಿ ಮಧ್ಯದಲ್ಲಿ, ಹಾಗೂ ಶಿರಃಸ್ಥಾನದಲ್ಲಿ** –ಮೂರು ಕಡೆ ಶಮೀ ಸಮಿಧೆಯಿಂದ ಉತ್ತರದಿಂದ ದಕ್ಷಿಣಕ್ಕೆ **ಮುಂದಿನ ಮಂತ್ರಗಳಿಂದ ಮೂರು ಗೆರೆ ಎಳೆಯಬೇಕು.** ಇಲ್ಲವೇ ಚಿತಿನಿರ್ಮಾಣವಾಗಿದ್ದಲ್ಲಿ, ಚಿತೆಯ ಬುಡದಲ್ಲಿ ಶಮೀಸಮಿಧೆ ಹಿಡಿದು, ಉತ್ತರದಿಂದ ದಕ್ಷಿಣಕ್ಕೆ '**ಯಮಾಯ ದಹನಪತಯೇ ಚೋಲ್ಲಿಖಾಮಿ** ॥' ಎಂದು ಒಂದು ರೇಖೆ ಎಳೆದು ಆ ಸಮಿತ್ತನ್ನು ರೇಖೆಯ ಮೇಲಿಟ್ಟು ಬೇರೆ ಸಮಿಧೆಯಿಂದ ಹಿಂದೆ ಬರೆದ ರೇಖೆಯ ಉತ್ತರದಲ್ಲಿ (ಕರ್ಮಿಯ ಬಲಭಾಗದಲ್ಲಿ) '**ಕಾಲಾಯ ದಹನಪತಯೇ ಚೋಲ್ಲಿಖಾಮಿ** ॥' ಎಂದು ರೇಖೆ ಎಳೆದು ಆ ಸಮಿತ್ತನ್ನು ರೇಖೆಯ ಮೇಲಿಟ್ಟು ಪುನಃ ಬೇರೆ ಸಮಿಧೆಯಿಂದ ಹಿಂದೆ ಮೊದಲು ಬರೆದ ರೇಖೆಯ ದಕ್ಷಿಣದಲ್ಲಿ (ಕರ್ಮಿಯ ಎಡಭಾಗದಲ್ಲಿ) ಉತ್ತರದಿಂದ ದಕ್ಷಿಣಕ್ಕೆ '**ಮೃತ್ಯವೇ ದಹನಪತಯೇ ಚೋಲ್ಲಿಖಾಮಿ** ॥' ಎಂದು ರೇಖೆ ಎಳೆದು ಆ ಸಮಿತ್ತನ್ನು ರೇಖೆಯ ಮೇಲಿಟ್ಟು ನೀರಿನಿಂದ ಮೂರು ಸಮಿಧೆಗಳಿಗೂ ಪ್ರೋಕ್ಷಣೆ ಮಾಡಿ ಮೂರನ್ನೂ ತುಂಡು ಮಾಡಿ ಹಿಂದೆ ಬಿಸಾಡಿ, ಮೂರು ರೇಖೆಗಳ ಮೇಲೆ ಬಂಗಾರದ (ಅಥವಾ ಕಬ್ಬಿಣದ) ಸರಿಗೆ ಮತ್ತು ಎಳ್ಳು ಇಡಬೇಕು. ಅನಂತರ ಮೂರು ರೇಖೆಗಳ ಮೇಲೆ ಕ್ರಮವಾಗಿ ಮೂರು ಚಿಕ್ಕ ಶಿಲಾಖಂಡಗಳನ್ನಿಟ್ಟು ಅದರ ಮೇಲೆ ಎಳ್ಳು ನೀರು ಹಿಡಿದು '**ಯಮಾಯ ದಹನಪತಯೇ ಪಿತೃಭ್ಯಃ ಸ್ವಧಾ ನಮಃ । ತಿಲೋದಕಮುಪತಿಷ್ಠತು** ॥' ಎಂದು ಶಿಲೆಯ ಮೇಲೆ ತಿಲೋದಕ ನೀಡಿ, ಹೀಗೆ, ಉಳಿದೆರಡು ಸ್ಥಾನಗಳಲ್ಲಿಯೂ ಕ್ರಮವಾಗಿ, '**ಕಾಲಾಯ ದಹನಪತಯೇ ಪಿತೃಭ್ಯಃ ಸ್ವಧಾ ನಮಃ । ತಿಲೋದಕಮುಪತಿಷ್ಠತು ॥ ಮೃತ್ಯವೇ ದಹನಪತಯೇ ಪಿತೃಭ್ಯಃ ಸ್ವಧಾ ನಮಃ । ತಿಲೋದಕಮುಪತಿಷ್ಠತು** ॥ –ಎಂದು ಮೂರು ಶಿಲೆಗಳ ಮೇಲೆ ತಿಲೋದಕ ಕೊಟ್ಟು, ಅನಂತರ, '**ಚಿತಿಯೋರ್ಜ್ಯಾ**' ಎಂದು ಹೇಳಿ ಕರ್ಮಿಯು, ಕಟ್ಟಿಗೆ ಹಿಡಿದು,

ಚಿತ್ತಿಮಚಿತ್ತಿಂ ಇತಿ ಗೌತಮ ವಾಮದೇವೋಽಗ್ನಿಸ್ತ್ರಿಷ್ಟುಪ್ । ಚಿತಿಕರಣಾರ್ಥೇ ವಿನಿಯೋಗಃ ॥

**ಓಂ ಚಿತ್ತಿಮಚಿತ್ತಿಂ ಚಿನವದ್ವಿ ವಿದ್ವಾನ್ ಪೃಷ್ಠೇವ ವೀತಾ ವೃಜಿನಾ ಚ ಮರ್ತಾನ್ । ರಾಯೇ ಚ ನಃ ಸ್ವಪತ್ಯಾಯ ದೇವ ದಿತಿಂ ಚ ರಾಸ್ವಾದಿತಿ-ಮುರುಷ್ಯ** ॥

–ಎಂದು ನಡು ರೇಖೆಯಲ್ಲಿ ಕಟ್ಟಿಗೆ ಇಟ್ಟು ಚಿತೆಯ ಪೂರ್ಣ ದಕ್ಷಿಣಕ್ಕೆ ಮಾಡದೇ ಸ್ವಲ್ಪ ಆಗ್ನೇಯಕ್ಕೆ ಮುಖಮಾಡಿ, ಕುಶಲವ್ಯಕ್ತಿಗಳಿಂದ ಚಿತೆ ನಿರ್ಮಾಣ ಮಾಡಿಸಬೇಕು. ಚಿತೆ ನಿರ್ಮಾಣ ಆಗಿದ್ದರೆ ಚಿತೆಯ ಮೇಲೆ ಒಂದು ಕಟ್ಟಿಗೆ ಇಟ್ಟು '**ಅತಿಷ್ಠಂತೀನಾಂ**' ಮಂತ್ರದಿಂದ ಚಿತೆಯನ್ನು ಮುಟ್ಟಬೇಕು.

**ಓಮ್ ಅತಿಷ್ಠಂತೀನಾಮನಿವೇಶನಾನಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಮ್। ವೃತ್ರಸ್ಯ ನಿಣ್ಯಂ ವಿ ಚರಂತ್ಯಾಪೋ ದೀರ್ಘಂ ತಮ ಆಶಯ-ದಿಂದ್ರ ಶತ್ರುಃ ॥**

**ಓಮ್ ಆ ರೋಹತಾಯುರ್ಜರಸಂ ವೃಣಾನಾ ಅನುಪೂರ್ವಂ ಯತಮಾನಾ ಯತಿಷ್ಠ। ಇಹ ತ್ವಷ್ಟಾ ಸುಜನಿಮಾ ಸಜೋಷಾ ದೀರ್ಘ-ಮಾಯುಃ ಕರತಿ ಜೀವಸೇ ವಃ ॥** –ಎಂದು ಚಿತೆಯ ಮೇಲೆ ಕೃಷ್ಣಾಜಿನ ಇಟ್ಟು ದರ್ಭೆ ಹರಡಬೇಕು.

**ಓಂ ಯಸ್ಯಾಗ್ನಯೋ ಜುಹ್ವತೋ ಮಾಂಸಕಾಮಾಃ ಸಂಭಕ್ಷಯಂತೋ ಯಜಮಾನ-ಮಾಂಸಮ್ । ಜಾನಂತು ತೇ ಹವಿಷೇ ಸಾದಿತಾಯ ಸ್ವರ್ಗಂ ಲೋಕಮಿಮಂ ಪ್ರೇತಂ ನಯಂತು ಸ್ವಾಹಾ ॥**

ಕ್ರಿಯಾಕರ್ತೃಗಳು 'ಏತೋ ನ್ವಿಂದ್ರ' ಮಂತ್ರದಿಂದ ಎಳ್ಳನ್ನು ಶವದ ಮೇಲೆ ಹಾಕಿ ಕೈ ಮುಗಿದು (ಶವವನ್ನು ಚಿತಿನಿರ್ಮಾಣದ ಮೊದಲು ದಹನಪ್ರದೇಶಕ್ಕೆ ತಂದ ಪಕ್ಷದಲ್ಲಿ ಈಗ ಅಗ್ನಿ ಮತ್ತು ಶವದೊಂದಿಗೆ ಅಪ್ರದಕ್ಷಿಣೆ ಬರಬೇಕು.) ಚಟ್ಟಸಹಿತ ಶವವನ್ನು ಉತ್ತರದಿಂದ ತಂದು ದಕ್ಷಿಣ ಶಿರವಾಗಿರುವಂತೆ ಚಿತೆಯ ಮೇಲೆ ಇಡಬೇಕು. **'ಧನುರ್ಹಸ್ತಾ'** ಮಂತ್ರದಿಂದ ಶವದ ಬಂಧನವನ್ನು ಎರಡು ಮೊನಚಾದ ಕಲ್ಲುಗಳಿಂದ ಗುದ್ದಿ ತುಂಡರಿಸ ಬೇಕು ಇಲ್ಲವೇ ಕತ್ತಿಯಿಂದ ತುಂಡರಿಸಬೇಕು. (ಕೆಲವರಲ್ಲಿ ಕೈಯಲ್ಲಿ ಎರಡು ಕಲ್ಲುಗಳನ್ನು ಹಿಡಿದು ಈ ಎರಡು ಕಲ್ಲುಗಳ ಸಹಾಯದಿಂದ ಶವದ ಬಂಧನ ಬಿಡಿಸಿ ಬಲಕೈಯ ಕಲ್ಲನ್ನು ಪ್ರೇತಶಿಲೆ ಎಂದು ಮಧ್ಯರೇಖೆಯಲ್ಲಿಟ್ಟು ಎಡಕೈಯ ಶಿಲೆಯನ್ನು ಅಸ್ಥಿಸಂಚಯನಕ್ಕೆ ಪ್ರೇತರಾಜಶಿಲೆ ಎಂದು ರಕ್ಷಿಸುವ ನಿಯಮವಿದೆ.)

ಧನುರ್ಹಸ್ತಾದಾದಧಾನ ಇತಿ ಮಂತ್ರಸ್ಯ ಸಂಕುಸುಕಸ್ತ್ರಿಷ್ಟುಪ್ । ರಜ್ಜುಚ್ಛೇದನೇ ವಿನಿಯೋಗಃ ॥

**ಓಂ ಧನುರ್ಹಸ್ತಾದಾದದಾನೋ ಮೃತಸ್ಯಾಽಸ್ಮೇ ಕ್ಷತ್ರಾಯ ವರ್ಚಸೇ ಬಲಾಯ । ಅತ್ರೈವ ತ್ವಮಿಹ ವಯಂ ಸುವೀರಾ ವಿಶ್ವಾಃ ಸ್ಪೃಧೋ ಅಭಿಮಾ-ತೀರ್ಜಯೇಮ ॥**

ಬಿದಿರಿನ ಕೋಲುಗಳನ್ನು ಕೆಳಗೆ ಮಾಡಿ ಒಂದು ಬಿದಿರಿನ ಕೋಲನ್ನು ಪ್ರತ್ಯೇಕವಾಗಿ

ಮರುದಿನದವರೆಗೆ ಶ್ಮಶಾನದಲ್ಲೇ ತೆಗೆದಿಡಬೇಕು. ಕಾರಣ– ಮರುದಿನ ಶವ ಸರಿಯಾಗಿ ದಹನವಾಗದೇ ಅಲ್ಪಸ್ವಲ್ಪ ಉಳಿದಿದ್ದರೆ ಸರಿಮಾಡಲು ಸಹಾಯಕವಾಗುತ್ತದೆ. ವ್ಯವಸ್ಥೆ ಇದ್ದರೆ ಶವದ ಕೌಪೀನ ಕಟಿಸೂತ್ರಾದಿಗಳನ್ನು ಬಿಟ್ಟು ಆಚ್ಛಾದಿತವಸ್ತ್ರವನ್ನು ಶ್ಮಶಾನವಾಸಿಗಳಿಗೆ ಕೊಡಬೇಕು ಅಥವಾ ಪ್ರತ್ಯೇಕವಾಗಿ ಸುಡಬೇಕು. ವ್ಯವಸ್ಥೆ ಇಲ್ಲದೆ ಹೋದರೆ ಬಟ್ಟೆ ಇದ್ದಹಾಗೆಯೇ ಸುಡುವುದು. ಅನಂತರ ಶವದ ಹೆಬ್ಬೆರಳಿನ ಬಂಧನವನ್ನು ಬಿಡಿಸಬೇಕು.

**ಓಂ ನಖಶ್ಚ ಪೃಷ್ಠಶ್ಚ ಕರೌ ಚ ಬಾಹೂ ಜಂಘೇ ಚೋರೂ ಉದರಂ ಶಿರಶ್ಚ । ರೋಮಾಣಿ ಮಾಂಸಂ ರುಧಿರಾಸ್ಥಿಮಜ್ಜಮೇತಚ್ಛರೀರಂ ಜಲಬುದ್ಬುದೋಪಮಮ್ ॥**

(ಕೆಲವರಲ್ಲಿ ಧರ್ಮಕಾಷ್ಠವನ್ನು ಈ ಸಮಯದಲ್ಲಿ '**ಪ್ರೇತಸ್ಯ ಧರ್ಮಕಾಷ್ಠಮುಪಶಿಷ್ಠತು ।**' ಎಂದು ಹಾಕುತ್ತಾರೆ.) ಅನಂತರ ಕ್ರಿಯಾಕರ್ತೃಗಳು ತುಪ್ಪ ಹಿಡಿದು '**ಚಿತ್ತಿಮಾಜ್ಯಮಾಸೀತ್‌ಸ್ವಾಹಾ ।**' ಎಂದು ಚಿತೆಗೆ ಹಾಕಿ **ಚಿತ್ಯಾ ಇದಂ ನ ಮಮ ॥** ಎಂದು ಹೇಳಿ, ಅನಂತರ ಶವದ ನವರಂಧ್ರಗಳಿಗೆ (ಕೆಲವರಲ್ಲಿ ಸಪ್ತರಂಧ್ರಗಳಿಗೆ) ಹಿರಣ್ಯದ ಚೂರು ಅಥವಾ ಆಜ್ಯಬಿಂದುಗಳನ್ನು ಹಾಕಬೇಕು.

**ಚಿತ್ತಮಾಜ್ಯಮಾಸೀಇತ್ ಸ್ವಾಹಾ ।** (ಮುಖ)

**ವಾಗ್ವೇದಿರಾಸೀಇತ್ ಸ್ವಾಹಾ ।** (ಬಲಮೂಗಿಗೆ)

**ಆಧೀತಂ ಬರ್ಹಿರಾಸೀಇತ್ ಸ್ವಾಹಾ ।** (ಎಡಮೂಗಿಗೆ)

**ಕೇತೋರಗ್ನಿರಾಸೀಇತ್ ಸ್ವಾಹಾ ।** (ಬಲಕಣ್ಣು)

**ವಿಜ್ಞಾತಮಗ್ನೀದಾಸೀಇತ್ ಸ್ವಾಹಾ ।** (ಎಡಕಣ್ಣು)

**ಪ್ರಾಣೋ ಹವಿರಾಸೀಇತ್ ಸ್ವಾಹಾ ।** (ಬಲಕಿವಿ)

**ಸಾಮಾಧ್ವರ್ಯುರಾಸೀಇತ್ ಸ್ವಾಹಾ ।** (ಎಡಕಿವಿ)

**ವಾಚಸ್ಪತಿರ್ಹೋತಾಸೀಇತ್ ಸ್ವಾಹಾ ।** (ನಿತಂಬ)

**ಮನ ಉಪವಕ್ತಾಸೀಇತ್ ಸ್ವಾಹಾ ।** (ಗುಹ್ಯ)

**ತೇ ವಾ ಏತಂ ಗ್ರಹಮಗೃಹ್ಣತ ।** ಎಂದು ಹೇಳಬೇಕು.

ಅನಂತರ **'ವಾಚಸ್ಪತೇ ವಿಧೇನಾಮನ್'** ಮಂತ್ರದಿಂದ ಪ್ರೇತ ಬಾಯಿಗೆ ತುಳಸೀದಲ ಇಟ್ಟು ಒಂದು ಮುಷ್ಟಿ ಅಕ್ಕಿ ಹಾಕಬೇಕು.

**ಓಂ ವಾಚಸ್ಪತೇ ವಿಧೇನಾಮನ್ । ವಿಧೇಮತೇ ನಾಮ । ವಿಧೇಸ್ತ್ವಮಸ್ಮಾಕಂ ನಾಮ ದ್ಯಾಂ ಗಚ್ಛ ॥**

**ಸಂಕಲ್ಪ :**

(ಬಲ) **ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ ಪಿತುಃ ..... ಅಕ್ಷಯ್ಯ ಪುಣ್ಯಲೋಕಾವಾಪ್ತ್ಯರ್ಥಂ** (ಬಲ) **ಪಿತೃಮೇಧಿಕಾಖ್ಯ ಕರ್ಮ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

ಬ್ರಹ್ಮದಂಡ ಇಟ್ಟು **'ಪಿತೃಮೇಧಿಕಾರಸಿದ್ಧಿರಸ್ತು'** (ಎಡ) ದಕ್ಷಿಣಕ್ಕೆ ಮುಖ ಮಾಡಿ ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ಅಗ್ನಿಯನ್ನು ಆ ಮಂಡಲದಲ್ಲಿಟ್ಟು **'ಕ್ರವ್ಯಾದಗ್ನಿ'** ಎಂದು ಪ್ರಾರ್ಥಿಸಿ ಅತ್ತಿಸಮಿಧೆಗಳೆರಡನ್ನು ಹಿಡಿದುಕೊಂಡು,

**ಅಸ್ಮಿನ್ನಗ್ನೌ ಚಿತಿಮಿಧ್ಮಂ ಶವಂ ಹವಿಃ ವಿಪರೀತಾಘಾರವತ್ತಂತ್ರೇಣ (ಲೋಮಭ್ಯಃ ಸ್ವಾಹಾ ಇತಿ ದಶಮಂತ್ರೈಃ ಏಕೈಕಮಾರಮಾಜ್ಯೇನ –ಗರುಡಪುರಾಣೇ) ಅಗ್ನಿಂ ಕಾಮಂ ಲೋಕಂ ಅನುಮತಿಂ ಚೈತಾಃ ಪ್ರಧಾನದೇವತಾ ಆಜ್ಯೇನ ಪ್ರೇತಂ ಪ್ರೇತೋರಸಿ ಪೃಷದಾಜ್ಯೇನ** (ದಧಿಸಂಯುಕ್ತ ಆಜ್ಯ) **(ಆಜ್ಯೇನ ವಾ) ಯಕ್ಷ್ಯೇ ॥**

ಎಂದು ಅನ್ವಾಧಾನ ಮಾಡಿ ಸಮಿಧೆಗಳೆರಡನ್ನು ಹೋಮಿಸಬೇಕು. ನಾವು ಕುಳಿತ ದಿಕ್ಕು ಪೂರ್ವ ಎಂದು ತಿಳಿದು, ನೀರನ್ನು ಈಶಾನ್ಯದಿಂದ ಅಪ್ರದಕ್ಷಿಣೆಯಾಗಿ ಮೂರು ಬಾರಿ ಚಿತೆ ಸಹಿತ ಅಗ್ನಿಯ ಸುತ್ತ ಚಿಮುಕಿಸಿ ಒಂದೊಂದು ದರ್ಭೆಯಿಂದ ಅಪ್ರದಕ್ಷಿಣೆಯಾಗಿ ದಕ್ಷಿಣಾಗ್ರವಾಗಿ ಚಿತೆಯಿಂದ ಮೂರು ಅಡಿ ಅಂತರದಲ್ಲಿ ಪರಿಸ್ತರಣ ಹಾಕಿ ಪುನಃ ನೀರಿನಿಂದ ಅಪ್ರದಕ್ಷಿಣೆಯಾಗಿ ಮೂರು ಬಾರಿ ಚಿತೆ ಸಹಿತ ಅಗ್ನಿಗೆ ನೀರನ್ನು ಸುತ್ತು ಚಿಮುಕಿಸಿ ಅಗ್ನಿಯ ಬಲಭಾಗದಲ್ಲಿ ಒಂದು ದರ್ಭೆಯ ಮೇಲೆ ಬಾಳೆಲೆ ದೊಣ್ಣೆಯ ಪ್ರೋಕ್ಷಣಿಪಾತ್ರೆ ಹಾಗೂ ಆಜ್ಯಪಾತ್ರೆಗಳನ್ನು ಇಡಬೇಕು. ಅತ್ತಿ ಎಲೆಯ ಸ್ರುಕ್ ಮತ್ತು ಸ್ರುವ, ಮಣ್ಣಿನ ಚಮಸಗಳನ್ನಿಡುವುದು. ಅನಂತರ ಪ್ರೋಕ್ಷಣಿಪಾತ್ರೆಯ ಮೇಲೆ ದಕ್ಷಿಣಾಗ್ರವಾಗಿ ಒಂದು ದರ್ಭೆ ಇಟ್ಟು ನೀರು ಹಾಕಿ ದರ್ಭೆಯಿಂದ ಮೂರು ಬಾರಿ ಗಾಳಿಸಿ ಪ್ರೋಕ್ಷಣಿಪಾತ್ರೆಯ ಸ್ವಲ್ಪನೀರಿನಿಂದ ಪಾತ್ರೆಗಳನ್ನು ಪ್ರೋಕ್ಷಣೆ ಮಾಡಿ ಆ ದರ್ಭೆಯನ್ನು ಪುನಃ ದಕ್ಷಿಣಾಗ್ರವಾಗಿ ಚಮಸದ ಮೇಲಿಟ್ಟು ಉಳಿದ ಪ್ರೋಕ್ಷಣೆ ನೀರನ್ನು ಹಾಗೂ ಗರ್ತೋದಕ (ಹೊಂಡದ ನೀರು) ಮತ್ತು ಎಳ್ಳು ಹಾಕಿ ಒಂದೆಳೆಯ ಕೂರ್ಚ ಇಟ್ಟು, ಪ್ರಣೀತ ಮಡಕೆಯನ್ನು ಮುಟ್ಟಿ,

ಇಮಮಗ್ನ ಇತಿ ದಮನೋಽಗ್ನಿಸ್ತ್ರಿಷ್ಟುಪ್ । ಚಮಸಾಭಿಮಂತ್ರಣೇ ವಿನಿಯೋಗಃ ॥

**ಓಮ್ ಇಮಮಗ್ನೇ ಚಮಸಂ ಮಾ ವಿ ಜಿಹ್ವರ ಪ್ರಿಯೋ ದೇವಾನಾಮುತ ಸೋಮ್ಯಾನಾಮ್ । ಏಷ ಯಶ್ಚಮಸೋ ದೇವಪಾನಸ್ತಸ್ಮಿನ್ ದೇವಾ ಅಮೃತಾ ಮಾದಯಂತೇ ॥**

ಪರಿಸ್ತರಣೆಯಿಂದ ಹೊರಗೆ ಉತ್ತರದಲ್ಲಿ ದರ್ಭೆಯ ಮೇಲೆ ಇಡಬೇಕು.

ಆ ಪ್ರಣೀತೆಯ ಮೇಲಿರುವ ದರ್ಭೆಯನ್ನು ಬಾಳೆಲೆದೊಣ್ಣೆಯ ಆಜ್ಯಪಾತ್ರದ ಮೇಲಿಟ್ಟು ತುಪ್ಪಹಾಕಿ ಒಂದು ದರ್ಭೆಯನ್ನು ಹೊತ್ತಿಸಿ ಪರಿಸ್ತರಣೆಯ ಹೊರಗಿಟ್ಟು ತುಪ್ಪದ ಪಾತ್ರವನ್ನು ಅದರ ಮೇಲಿಟ್ಟು ತುಪ್ಪದ ಪಾತ್ರೆಗೆ ಒಂದು ದರ್ಭೆಯನ್ನು ಹೊತ್ತಿಸಿ ಹಾಕಿ ಮತ್ತೊಂದು ದರ್ಭೆಯ ತುದಿ ತೆಗೆದು ತುಪ್ಪಕ್ಕೆ ಹಾಕಿ ಆಮೇಲೆ ಮೊದಲು ಹೊತ್ತಿಸಿದ ದರ್ಭೆಯನ್ನು ಪುನಃ ಹೊತ್ತಿಸಿ ಅಗ್ನಿಗೂ ತುಪ್ಪಕ್ಕೂ ಒಟ್ಟಿಗೆ ಮೂರು ಸಲ ಅಪ್ರದಕ್ಷಿಣೆಯಾಗಿ ಸುತ್ತು ತಂದು ಹಿಂದೆ ಬಿಸಾಡಿ ತುಪ್ಪದ ಪಾತ್ರೆಯನ್ನು ಸ್ವಲ್ಪ ಉತ್ತರಕ್ಕೆ ದೂಡಿ ಅಡಿಯಲ್ಲಿರುವ ಸುಟ್ಟ ದರ್ಭೆಯ ಕಿಡಿಯನ್ನು ಅಗ್ನಿಗೆ ಹಾಕಿ ತುಪ್ಪದಲ್ಲಿರುವ ದರ್ಭೆಯಿಂದ ಮೂರು ಸಲ ಗಾಳಿಸಿ ತೊಳೆದು ಅಗ್ನಿಗೆ ಹಾಕಬೇಕು. ಅನಂತರ ತನ್ನೆದುರು ಎರಡು ದರ್ಭೆಯಿಟ್ಟು ಆಜ್ಯಪಾತ್ರವನ್ನು ಆ ಎರಡು ದರ್ಭೆಯ ಮೇಲಿಡಬೇಕು. ಅನಂತರ ಒಂದು ದರ್ಭೆಯ ತುದಿಯಿಂದ ಅತ್ತಿಎಲೆಗಳೆರಡರ ತುದಿ ಮತ್ತು ಹಿಂಭಾಗವನ್ನು ದರ್ಭೆಗಳ ಮೂಲದಿಂದ ಅತ್ತಿಎಲೆಯ ಬುಡವನ್ನು ಸಂಸ್ಕರಿಸಿ ಎಲೆಗಳೆರಡನ್ನು ತುಪ್ಪದ ಪಾತ್ರೆಯ ಮೇಲಿಟ್ಟು ಕೈಯಲ್ಲಿದ್ದ ದರ್ಭೆಯನ್ನು ಅಗ್ನಿಗೆ ಹಾಕಿ, ಅನಂತರ ಎಳ್ಳು ಹಿಡಿದು ಚಿತೆ ಸಹಿತವಾಗಿ ಅಪ್ರದಕ್ಷಿಣೆಯಾಗಿ ಅಗ್ನ್ಯಲಂಕಾರ ಮಾಡಿ ಎಡ ಮಂಡಿಯನ್ನೂರಿ ತುಪ್ಪ ಹಿಡಿದು ಅಗ್ನಿಗೆ ಅಗ್ನೇಯದಿಂದ ವಾಯವ್ಯದ ವರೆಗೆ ತುಪ್ಪದ ಧಾರೆ ನೀಡಿ ಪುನಃ ತುಪ್ಪ ಹಿಡಿದು ಈಶಾನ್ಯದಿಂದ ನೈಋತ್ಯದ ವರೆಗೆ ತುಪ್ಪದ ಧಾರೆ ಬಿಡುವುದು. ಅನಂತರ ತುಪ್ಪದಿಂದ ವ್ಯಸ್ತಸಮಸ್ತವಾಹೃತಿಯಿಂದ ಹೋಮಿಸಿ (**ಓಂ ಲೋಮಭ್ಯಃ ಸ್ವಾಹಾ । ಓಂ ತ್ವಚೇ ಸ್ವಾಹಾ । ಓಂ ಲೋಹಿತಾಯ ಸ್ವಾಹಾ । ಓಂ ಮಾಂಸಾಯ ಸ್ವಾಹಾ । ಓಂ ಸ್ರಾವಭ್ಯಃ ಸ್ವಾಹಾ । ಓಮ್ ಅಸ್ಥಿಭ್ಯಃ ಸ್ವಾಹಾ । ಓಂ ಮಜ್ಜಭ್ಯಃ ಸ್ವಾಹಾ । ಓಮ್ ಅಂಗೇಭ್ಯಃ ಸ್ವಾಹಾ । ಓಮ್ ಆತ್ಮನೇ ಸ್ವಾಹಾ। ಓಂ ಸರ್ವಸ್ಮೈ ಸ್ವಾಹಾ** । –ಎಂದು ಹತ್ತು ಆಹುತಿಗಳನ್ನು ನೀಡಿ ಪುನಃ ವ್ಯಸ್ತಸಮಸ್ತವ್ಯಾಹೃತಿಯಿಂದ ಹೋಮಿಸಬೇಕು.)

**ಅಗ್ನಯೇ ಸ್ವಾಹಾ । ಅಗ್ನಯ ಇದಂ ನ ಮಮ ॥**
**ಕಾಮಾಯ ಸ್ವಾಹಾ । ಕಾಮಾಯ ಇದಂ ನ ಮಮ ॥**
**ಲೋಕಾಯ ಸ್ವಾಹಾ । ಲೋಕಾಯೇದಂ ನ ಮಮ ॥**
**ಅನುಮತಯೇ ಸ್ವಾಹಾ । ಅನುಮತಯ ಇದಂ ನ ಮಮ ॥**

–ಎಂದು ಅಗ್ನಿಗೆ ತುಪ್ಪದಿಂದ ಆಹುತಿ ನೀಡಿ ಪುನಃ ಪೃಷದಾಜ್ಯದಿಂದ (ತುಪ್ಪದಿಂದ)

**ಅಸ್ಮಾದ್ವೈ ತ್ವಮಜಾಯಥಾ ಅಯಂ ತ್ವದಭಿಜಾಯತಾಂ ಪಿತ್ರೇ [ಮಾತ್ರೇ] .........ಗೋತ್ರಾಯ [ಗೋತ್ರಾಯೈ] .....ಶರ್ಮಣೇ [ನಾಮ್ನೈ] ಪ್ರೇತಾಯ [ಪ್ರೇತಾಯೈ] ಸ್ವರ್ಗಾಯ ಲೋಕಾಯ ಸ್ವಾಹಾ ॥**

–ಎಂದು ಶವದ ನಾಭಿಯಿಂದ ಮುಖದವರೆಗೆ (ಕೆಲವರಲ್ಲಿ ಹೃದಯಕ್ಕೆ) ಪೃಷದಾಜ್ಯಾಹುತಿ ಕೊಡಬೇಕು. ಅನಂತರ '**ಸಾಧಕ**' ಎಂಬ ಹೆಸರಿನ ಐದು ಸಕ್ತುಪಿಂಡ ಗಳನ್ನು ಮಂತ್ರಪೂರ್ವಕವಾಗಿ ಐದು ಸ್ಥಾನಗಳಲ್ಲಿ ಇಡಬೇಕು. ಎರಡು ಪಿಂಡ ಹಿಡಿದು ಶವದ ಹಣೆ ಮತ್ತು ಮುಖದ ಭಾಗದಲ್ಲಿ '**ಅಗ್ನೇರ್ವರ್ಮ**' ಮಂತ್ರದಿಂದಿಡಬೇಕು.

ಅಗ್ನೇರ್ವರ್ಮೇತಿ ದಮನೋಽಗ್ನಿಸ್ತ್ರಿಷ್ಟುಪ್ । ಪ್ರೇತಸ್ಯ ಲಲಾಟೇ ಮುಖೇ ಚ ಸಕ್ತುಪಿಂಡದಾನೇ ವಿನಿಯೋಗಃ ॥

**ಓಮ್ ಅಗ್ನೇರ್ವರ್ಮ ಪರಿ ಗೋಭಿರ್ವ್ಯಯಸ್ವ ಸಂ ಪ್ರೋರ್ಣುಷ್ವ ಪೀವಸಾ ಮೇದಸಾ ಚ । ನೇತ್ವಾ ಧೃಷ್ಣುರ್ಹರಸಾ ಜರ್ಹೃಷಾಣೋ ದಧೃಗ್ವಿಧಕ್ಷ್ಯನ್ ಪರ್ಯಂಖಯಾತೇ ॥**

ಪುನಃ ಎರಡು ಪಿಂಡ ಹಿಡಿದು,

ಅತಿದ್ರವೇತಿ ಮಂತ್ರದ್ವಯಸ್ಯ ಯಮಶ್ವಾನೌ ತ್ರಿಷ್ಟುಪ್ । ಬಾಹುದ್ವಯೇ ಹೃದಯೇ ಚ ಸಕ್ತುಪಿಂಡದಾನೇ ವಿನಿಯೋಗಃ ॥

**ಓಮ್ ಅತಿ ದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ । ಅಥಾ ಪಿತೄನ್ ತ್ಸುವಿದತ್ರಾ ಉಪೇಹಿ ಯಮೇನ ಯೇ ಸಧಮಾದಂ ಮದಂತಿ ॥** –ಎಂದು ಎರಡು ಬಾಹುಗಳಲ್ಲಿ ಇಟ್ಟು, ಪುನಃ ಒಂದು ಪಿಂಡ ಹಿಡಿದು,

**ಓಂ ಯೌ ತೇ ಶ್ವಾನೌ ಯಮ ರಕ್ಷಿತಾರೌ ಚತುರಕ್ಷೌ ಪಥಿರಕ್ಷೀ ನೃಚಕ್ಷಸೌ । ತಾಭ್ಯಾಮೇನಂ ಪರಿ ದೇಹಿ ರಾಜನ್ ಸ್ವಸ್ತಿ ಚಾಸ್ಮಾ ಅನಮೀವಂ ಚ ಧೇಹಿ ॥**

ಹೃದಯ ಭಾಗದಲ್ಲಿ ಒಂದು ಪಿಂಡ ಇಟ್ಟು ಐದು ಪಿಂಡಗಳ ಮೇಲೆ ಹಿರಣ್ಯ (ಚಿಲ್ಲರೆ, ಪಂಚರತ್ನ) ಇಟ್ಟು '**ತಿಲೋದಕಮುಪತಿಷ್ಠತು ॥**' ಎಂದು ತಿಲೋದಕ ಕೊಡಬೇಕು. ಮರಣಸಂದರ್ಭದಲ್ಲಿ ಧನಿಷ್ಠಾಪಂಚಕವೇ ಮೊದಲಾದ ದೋಷಗಳಿದ್ದಲ್ಲಿ ಮುಂದೆ

ಹೇಳಿದ ವಿಧಿಯನ್ನು ಮಾಡಿ ಅನಂತರ ದಹನ ಮಾಡಬೇಕು. ಒಂದು ವೇಳೆ ಮುಂದೆ ಹೇಳಿದ ದೋಷಗಳು ಇಲ್ಲದೇ ಇದ್ದಲ್ಲಿ ನೇರವಾಗಿ ದಹನವಿಧಿಯನ್ನು (ಪುಟಸಂಖ್ಯೆ 90) ಮಾಡಬೇಕು.

## ಪಂಚಕಾದಿದಾಹವಿಧಿಃ



(ನಕ್ಷತ್ರಗಳು– ಧನಿಷ್ಠಾನಕ್ಷತ್ರದ ಕೊನೆಯ ಎರಡು ಪಾದ; ಶತಭಿಷಾ, ಪೂರ್ವಾಭಾದ್ರಾ, ಉತ್ತರಾಭಾದ್ರಾ, ರೇವತಿ)

(ಬಲ) **ಪ್ರಾಣಸ್ಥಪ್ರಾಜ್ಞರೂಪಿ ಪರಮಾತ್ಮಾ .... ಪ್ರೀತ್ಯರ್ಥಂ** (ಎಡ) **ಅಸ್ಮತ್ಪಿತುಃ ..........ಗೋತ್ರಸ್ಯ ..........ಶರ್ಮಣಃ ಪ್ರೇತಸ್ಯ ಪಂಚಕನಕ್ಷತ್ರ (ತ್ರಿಪಾದನಕ್ಷತ್ರ, ದ್ವಿಪಾದ, ದ್ವಿಪುಷ್ಕರ, ತ್ರಿಪುಷ್ಕರ) ಮರಣಸೂಚಿತವಂಶಾರಿಷ್ಟನಿವಾರಣಾರ್ಥಂ** (ಬಲ) **ತದ್ವಿಧಿಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ)** ॥ ಬ್ರಹ್ಮದಂಡ ಇಟ್ಟು, (ಎಡ)

ಧನಿಷ್ಠಾಪಂಚಕ ದೋಷನಿವಾರಣೆಗೆ ಹಿಟ್ಟಿನ ಐದು ಗೊಂಬೆ ಮಾಡಿ ಒಂದು ಎಳೆಯ ಐದು ಕೂರ್ಚ ಮಾಡಿ ಹಿಟ್ಟಿನ ಗೊಂಬೆಗಳ ಮೇಲಿಟ್ಟು ಉಣ್ಣೆನೂಲಿನಿಂದ ಪ್ರತ್ಯೇಕವಾಗಿ ಸುತ್ತಬೇಕು. (ಹಿಟ್ಟಿನ ವ್ಯವಸ್ಥೆ ಇಲ್ಲದಿದ್ದರೆ ದರ್ಭೆಯಿಂದಲಾದರೂ ಒಂದು ಎಳೆಯ ಐದು ಕೂರ್ಚಗಳನ್ನು ಮಾಡಬೇಕು.) ಅನಂತರ ಐದು ನಕ್ಷತ್ರದೇವತೆಗಳನ್ನು– **ವಸೂನ್ । ವರುಣಮ್ । ಅಜೈಕಪದಮ್ । ಅಹಿರ್ಬುಧ್ನ್ಯಮ್ । ಪೂಷಣಮ್ ॥** ಪ್ರತ್ಯೇಕವಾಗಿ ಆವಾಹನೆ ಮಾಡಿ ಶವದ ತಲೆ, ಕಣ್ಣು, ಉದರಪಾರ್ಶ್ವ, ನಾಭಿ, ಪಾದ – ಹೀಗೆ ಐದು ಸ್ಥಾನಗಳಲ್ಲಿಟ್ಟು ತುಪ್ಪದಿಂದ ಈ ಐದು ಮಂತ್ರಗಳಿಂದ ಪ್ರತಿಮೆಯ ಮೇಲೆ ಆಹುತಿ ಕೊಡಬೇಕು.

**ಪ್ರೇತವಾಹಾಯ ಯಮಾಯ ಸ್ವಾಹಾ । ಪ್ರೇತಸಖಾಯ ರುದ್ರಾಯ । ಪ್ರೇತಪಾಯ ಅಗ್ನಯೇ । ಪ್ರೇತ ಭೂಮಿಪಾಯ ವಿಷ್ಣವೇ । ಪ್ರೇತಹರ್ತ್ರೇ ಇಂದ್ರಾಯ ಸ್ವಾಹಾ ॥**

–ಎಂದು ತುಪ್ಪದ ಆಹುತಿಕೊಟ್ಟು ಐದು ಸ್ಥಾನಗಳಲ್ಲಿ **'ಪ್ರೇತವಾಹಾಯ ಯಮಾಯ ನಮಃ ।'** –ಎಂದು ಪ್ರತಿಮೆಗಳ ಮೇಲೆ ಆಯಾಯಾ ಮಂತ್ರದಿಂದ ನೀರು ಬಿಡಬೇಕು. **'ಯಮಾಯ ಸೋಮಂ'** ಮತ್ತು **'ತ್ರ್ಯಂಬಕಂ'** –ಎಂಬೆರಡು ಮಂತ್ರಗಳಿಂದ ಪ್ರತ್ಯೇಕವಾಗಿ ಐದು ಪ್ರತಿಮೆಗಳ ಮೇಲೆ ಎರಡೆರಡು ತುಪ್ಪದ ಆಹುತಿ ನೀಡಬೇಕು.

ಯಮಾಯ ಸೋಮಂ ಯಮೋ ಯಮೋಽನುಷ್ಟುಪ್ ।

**ಓಂ ಯಮಾಯ ಸೋಮಂ ಸುನುತ ಯಮಾಯ ಜುಹುತಾ ಹವಿಃ । ಯಮಂ ಹ ಯಜ್ಞೋ ಗಚ್ಛತ್ಯಗ್ನಿದೂತೋ ಅರಂಕೃತಃ ಸ್ವಾಹಾ ॥**

ತ್ರ್ಯಂಬಕಂ ವಸಿಷ್ಠೋ ರುದ್ರೋಽನುಷ್ಟುಪ್ ॥

**ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಮ್ । ಉರ್ವಾ–ರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ಸ್ವಾಹಾ ॥ ಮೃತ್ಯವ ಇದಂ ನ ಮಮ ॥** ಅನಂತರ ಪುನಃ ತುಪ್ಪ ಹಿಡಿದು,

**ಓಮ್ ಅಸ್ಮಾತ್ತ್ವಮಧಿಜಾತೋ ನಿತ್ವದಯಂ ಜಾಯತಾಂ ಪುನಃ । ಅಗ್ನಯೇ ವೈಶ್ವಾನರಾಯ ಸ್ವರ್ಗಾಯ ಲೋಕಾಯ ಸ್ವಾಹಾ ॥ ಅಗ್ನಯೇ ವೈಶ್ವಾನರಾಯ ಸ್ವರ್ಗಾಯ ಲೋಕಾಯೇದಂ ನ ಮಮ ॥** –ಎಂದು ಒಂದು ಆಹುತಿ ಅಗ್ನಿಯಲ್ಲಿ ಹೋಮಿಸಿ **'ವಹ ವಪಾಂ'** ಮಂತ್ರದಿಂದ ಪ್ರೇತದ ಬಾಯಿಗೆ ಪಂಚರತ್ನ ಇಲ್ಲವೇ ಬಂಗಾರದ ತುಂಡು ಇಲ್ಲವೇ ತುಪ್ಪದ ಆಹುತಿ ಹಾಕಬೇಕು.

**ಓಂ ವಹ ವಪಾಂ ಜಾತವೇದಃ ಪಿತೃಭ್ಯೋ ಯತ್ರೈನಾನ್ವೇತ್ಥ ನಿಹಿತಾನ್ ಪರಾಕೇ । ಕುಲ್ಯಾ ಉಗ್ರತಾಃ ಕ್ಷರಂತು ಸತ್ಯಾ ಏತಾ ಆಶಿಷಃ ಸಂತು ಕಾಮ್ಯೈಃ ಸ್ವಾಹಾ ॥ ಅಗ್ನಯೇ ಜಾತವೇದಸ ಇದಂ ನ ಮಮ ॥** ಪುನಃ ತುಪ್ಪ ಹಿಡಿದು,

ಪ್ರೇತಾಜಯತಾ ಇತಿ ಐಂದ್ರೋಽಪ್ರತಿರಥಃ ಮರುತೋಽನುಷ್ಟುಪ್ । ಆಜ್ಯ ಹೋಮೇ ವಿನಿಯೋಗಃ ॥

**ಓಂ ಪ್ರೇತಾ ಜಯತಾ ನರ ಇಂದ್ರೋ ವಃ ಶರ್ಮ ಯಚ್ಛತು । ಉಗ್ರಾ ವಃ ಸಂತು ಬಾಹವೋಽನಾಧೃಷ್ಯಾ ಯಥಾಸಥ ಸ್ವಾಹಾ ॥ ಮರುದ್ಭ್ಯ ಇದಂ ನ ಮಮ ॥** –ಎಂದು ಅಗ್ನಿಯಲ್ಲಿ ಹೋಮಿಸಬೇಕು.

## ತ್ರಿಪಾದಮರಣೇ–

ತ್ರಿಪಾದನಕ್ಷತ್ರಗಳಲ್ಲಿ ಮರಣವಾದರೆ ಮೂರು ಹಿಟ್ಟಿನ ಗೊಂಬೆ ಮಾಡಿ ತಲೆ, ಕಣ್ಣು, ಉದರ ಭಾಗಗಳಲ್ಲಿ ಇಟ್ಟು ದಹನ ಮಾಡಬೇಕು.

| ನಕ್ಷತ್ರ | ಪ್ರಧಾನದೇವತೆ | ಅಧಿದೇವತೆ | ಪ್ರತ್ಯಧಿದೇವತೆ |
|---|---|---|---|
| ೧) **ಕೃತ್ತಿಕಾ** | **ಅಗ್ನಿ** | **ಯಮ** | **ಪ್ರಜಾಪತಿ** |
| ೨) **ಪುನರ್ವಸು** | **ಅದಿತಿ** | **ರುದ್ರ** | **ಬೃಹಸ್ಪತಿ** |
| ೩) **ಉತ್ತರಾ** | **ಅರ್ಯಮ** | **ಭಗ** | **ಸವಿತೃ** |
| ೪) **ವಿಶಾಖ** | **ಇಂದ್ರಾಗ್ನಿ** | **ವಾಯು** | **ಮಿತ್ರ** |
| ೫) **ಉತ್ತರಾಷಾಢ** | **ವಿಶ್ವೇದೇವಾ** | **ಆಪ** | **ವಿಷ್ಣು** |
| ೬) **ಪೂರ್ವಾಭಾದ್ರ** | **ಅಜೈಕಪಾತ್** | **ವರುಣ** | **ಅಹಿರ್ಬುಧ್ನ್ಯ** |

(ಪೂರ್ವಾಭಾದ್ರನಕ್ಷತ್ರದಲ್ಲಿ ಮರಣವಾದರೆ ಧನಿಷ್ಠಾಪಂಚಕಶಾಂತಿ ಮಾತ್ರ ಮಾಡಿದರೆ ಸಾಕು ಎಂಬುದು ಪ್ರಾಜ್ಞರ ಅಭಿಪ್ರಾಯ.)

**ಪ್ರೇತವಾಹ । ಪ್ರೇತಸಖ । ಪ್ರೇತಪಾ ॥** –ಇವರಿಗೆ ತುಪ್ಪದ ಆಹುತಿ.

## ತ್ರಿಪುಷ್ಕರಮರಣೇ–

**೧) ಬಿದಿಗೆ – ತ್ವಷ್ಟಾ ॥ ಸಪ್ತಮಿ – ಸೂರ್ಯ ॥ ದ್ವಾದಶಿ – ವಿಷ್ಣು ॥**

– ಇವು ಭದ್ರಾತಿಥಿಗಳು.

**೨) ಭಾನುವಾಸರ – ಶಿವ ॥ ಭೌಮ – ವಿಷ್ಣು ॥ ಮಂದವಾಸರ – ಷಣ್ಮುಖ । ಶುಕ್ರವಾಸರ – ಇಂದ್ರ ॥** – ದುಷ್ಟವಾರಗಳು.

**೩) ತ್ರಿಪಾದ ನಕ್ಷತ್ರಗಳು.**

ಇಲ್ಲಿ ಪ್ರತಿಮಾಸ್ಥಾನ ಮತ್ತು ಆಹುತಿದೇವತೆ ತ್ರಿಪಾದ ಶಾಂತಿಯ ಹಾಗೆಯೇ.

## ದ್ವಿಪುಷ್ಕರಮರಣೇ–

ತಿಥಿ–ವಾರ, ತಿಥಿ–ನಕ್ಷತ್ರ, ವಾರ–ನಕ್ಷತ್ರ –ಹೀಗೆ ಮೂರರಲ್ಲಿ ಎರಡು ಸೇರಿದರೆ ದ್ವಿಪುಷ್ಕರ. ಇಲ್ಲಿ ಎರಡು ಪ್ರತಿಮೆಗಳನ್ನು ಮಾಡಿ ಒಂದು ತಲೆಯ ಭಾಗ, ಇನ್ನೊಂದು ಕಣ್ಣಿನ ಸ್ಥಾನದಲ್ಲಿ ಇಟ್ಟು '**ಪ್ರೇತವಾಹಾಯ । ಪ್ರೇತಸಖಾಯ** ॥' ಎಂದು ಎರಡು ಆಹುತಿಗಳನ್ನು ಕೊಡಬೇಕು.

**ದ್ವಿಪಾದಮರಣೇ-**

**ಮೃಗಶಿರಾ, ಚಿತ್ರಾ, ಧನಿಷ್ಠಾ** ನಕ್ಷತ್ರಗಳು ದ್ವಿಪಾದನಕ್ಷತ್ರಗಳು. ಎರಡು ಪ್ರತಿಮೆಗಳನ್ನು ಮಾಡಿ ಒಂದು ತಲೆಯ ಭಾಗ ಇನ್ನೊಂದು ಕಣ್ಣಿನ ಸ್ಥಾನದಲ್ಲಿ ಇಟ್ಟು- '**ಪ್ರೇತವಾಹಾಯ । ಪ್ರೇತಸಖಾಯ ॥**' -ಎಂದು ಎರಡು ಆಹುತಿಗಳನ್ನು ಕೊಡಬೇಕು.

**ದಕ್ಷಿಣಾಯನಮರಣೇ-**

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ........ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ದಕ್ಷಿಣಾಯನಮರಣ ಜನಿತ ಸಮಸ್ತದೋಷಪರಿಹಾರಾರ್ಥಮ್ ಉತ್ತರಾಯಣಸಂಪತ್ತಿದ್ವಾರಾ ಉತ್ತಮ ಲೋಕಾವಾಪ್ತ್ಯರ್ಥಂ ಪ್ರಾಯಶ್ಚಿತ್ತಹೋಮಪೂರ್ವಕ ಅದ್ಯಪ್ರಭೃತ್ಯುತ್ತರಾಯಣಾರಂಭ ದಿನಪರ್ಯಂತಂ ಭವಿಷ್ಯದೌಪಾಸನಾಹುತಿಂ ಪರಿಮಿತದ್ರವ್ಯಂ ತನ್ನಿಷ್ಕ್ರಯಹಿರಣ್ಯಂ ವಾ ಅಶೌಚಾಂತೇ ದಾಸ್ಯೇ ॥** -ಎಂದು ಸಂಕಲ್ಪಿಸಿ, ಸ್ರುಕ್ಕಿನಲ್ಲಿ ನಾಲ್ಕು ಸಲ ತುಪ್ಪ ತುಂಬಿಸಿ ದಕ್ಷಿಣಕ್ಕೆ ಮುಖ ಮಾಡಿ ಕುಳಿತು,

**ಓಂ ಮೃತ್ಯೋರಧಿಷ್ಠಾನಾಯ ಸ್ವಾಹಾ । ಮೃತ್ಯೋರಧಿಷ್ಠಾನಾಯ ಇದಂ ನ ಮಮ ॥** -ಎಂದು ಹೇಳಿ ಹೋಮಿಸಿ, ಪುನಃ ಸ್ರುಕ್ಕಿನಲ್ಲಿ ಬೇರೆಬೇರೆಯಾಗಿ ನಾಲ್ಕು ಸಲ ತುಪ್ಪ ತೆಗೆದು ಮುಂದಿನ ಆರು ಮಂತ್ರಗಳಿಂದ ಹೋಮಿಸಬೇಕು.

**ಓಂ ತಾ ಸೂರ್ಯಾಚಂದ್ರಮಸಾ ವಿಶ್ವಭೃತ್ತಮಾ ಮಹತ್ । ತೇಜೋ ವಸುಮದ್ರಾಜತೋ ದಿವಿ ॥ ಸಾಮಾತ್ಮಾನಾ ಚರತಸ್ಸಾಮಚಾರಿಣಾ । ಯಯೋರ್ವ್ರತನ್ನ ಮಮೇ ಜಾತು ದೇವಯೋಃ ಸ್ವಾಹಾ ॥ ಸೂರ್ಯಾ-ಚಂದ್ರಮಸೇಭ್ಯಾಮಿದಂ ನ ಮಮ ॥**

**ಓಮ್ ಉಭಾವಂತೌ ಪರಿಯಾತ ಅರ್ಮ್ಯಾ ದಿವೋ ನ ರಶ್ಮೀಗ್ಂಸ್ತನುತೋ ವ್ಯರ್ಣವೇ । ಉಭಾ ಭುವಂತೀ ಭುವನಾ ಕವಿಕ್ರತೂ ಸೂರ್ಯಾ ನ ಚಂದ್ರಾ ಚರತೋ ಹತಾಮತೀ ಸ್ವಾಹಾ ॥ ಸೂರ್ಯಾಚಂದ್ರಮಸೇಭ್ಯಾಮಿದಂ ನ ಮಮ ॥**

**ಓಂ ಪತೀದ್ಯುಮದ್ವಿಶ್ವವಿದಾ ಉಭಾ ದಿವಃ । ಸೂರ್ಯಾ ಉಭಾ**

ಚಂದ್ರಮಸಾ ವಿಚಕ್ಷಣಾ । ವಿಶ್ವವಾರಾ ವರಿವೋಭಾ ವರೇಣ್ಯಾ । ತಾ ನೋಽವತಂಮತಿಮಂತಾ ಮಹಿವ್ರತಾಃ ಸ್ವಾಹಾ ॥ ಸೂರ್ಯಾಚಂದ್ರಮಸೇಭ್ಯಾಮಿದಂ ನ ಮಮ ॥

ಓಂ ವಿಶ್ವವಪರೀ ಪ್ರತರಣಾ ತರಂತಾ । ಸುವರ್ವಿದಾ ದೃಶಯೇ ಭೂರಿರಶ್ಮೀ । ಸೂರ್ಯಾ ಹಿ ಚಂದ್ರಾ ವಸುತ್ವೇಷ ದರ್ಶತಾ । ಮನಸ್ವಿನೋಭಾಽನು ಚರತೋ ನು ಸಂದಿವಗ್‌ಂ ಸ್ವಾಹಾ ॥ ಸೂರ್ಯಾಚಂದ್ರಮಸೇಭ್ಯಾಮಿದಂ ನ ಮಮ ॥

ಓಮ್ ಅಸ್ಯ ಶ್ರವೋ ನದ್ಯಸ್ಸಪ್ತ ಬಿಭ್ರತಿ । ದ್ಯಾವಾಕ್ಷಾಮಾ ಪೃಥಿವೀ ದರ್ಶತಂ ವಪುಃ ॥ ಅಸ್ಮೇ ಸೂರ್ಯಾಚಂದ್ರಮಸಾಽಭಿಚಕ್ಷೇ । ಶ್ರದ್ಧೇ ಕಮಿಂದ್ರಚರತೋ ವಿಚರ್ತುರಗ್‌ಂ ಸ್ವಾಹಾ ॥ ಸೂರ್ಯಾಚಂದ್ರಮಸೇಭ್ಯಾಮಿದಂ ನ ಮಮ ॥

ಓಂ ಪೂರ್ವಾಪರಂ ಚರತೋ ಮಾಯಯೈತೌ । ಶಿಶೂ ಕ್ರೀಡಂತೌ ಪರಿಯಾತೋ ಅಧ್ವರಮ್ । ವಿಶ್ವಾನ್ಯನ್ಯೋ ಭುವನಾಭಿಚಷ್ಟೇ । ಋತೂನನ್ಯೋ ವಿದಧಜ್ಜಾಯತೇ ಪುನಃ ಸ್ವಾಹಾ ॥ ಸೂರ್ಯಾಚಂದ್ರಮಸೇಭ್ಯಾಮಿದಂ ನ ಮಮ ॥

-ಹೀಗೆ ಆರು ಬಾರಿ ಹೋಮಿಸಬೇಕು.

**ಕೃಷ್ಣಪಕ್ಷಮರಣೇ-**

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ** ..... ಪ್ರೀತ್ಯರ್ಥಮ್ (ಎಡ) ಅಸ್ಮತ್ಪಿತುಃ ........**ಗೋತ್ರಸ್ಯ** ........ಶರ್ಮಣಃ ಪ್ರೇತಸ್ಯ ಕೃಷ್ಣಪಕ್ಷಮರಣಜನಿತ **ಸಮಸ್ತದೋಷಪರಿಹಾರಾರ್ಥಂ ಶುಕ್ಲಪಕ್ಷಸಂಪತ್ತಿದ್ವಾರಾ** ಉತ್ತಮಲೋಕಾವಾಪ್ತ್ಯರ್ಥಂ **ಪ್ರಾಯಶ್ಚಿತ್ತಹೋಮಂ ಕರಿಷ್ಯೇ** ॥ -ಎಂದು ಸಂಕಲ್ಪಿಸಿ ಹಿಂದೆ ಹೇಳಿದ ದಕ್ಷಿಣಾಯನ ಮರಣವಿಧಿಯ ಕ್ರಮದಂತೆ ಸ್ರುಕ್ಕಿನಲ್ಲಿ ನಾಲ್ಕು ಸಲ ತುಪ್ಪ ತುಂಬಿಸಿ ತುಪ್ಪದ ಏಳು ಆಹುತಿಗಳನ್ನು ಅಗ್ನಿಯಲ್ಲಿ ಕೊಡಬೇಕು.

[ಆಹಿತಾಗ್ನಿ ಆಗಿದ್ದಲ್ಲಿ– **ದರ್ಶಸ್ಥಾಲೀಪಾಕ ಸಂಪತ್ತ್ಯರ್ಥಂ ಪೂರ್ಣಾಹುತಿಂ ಚ ಹೋಷ್ಯೇ** ॥ ದರ್ಶಸ್ಥಾಲೀಪಾಕದ ಸ್ಥಾನದಲ್ಲಿ ಸ್ರುಕ್ಕಿನಲ್ಲಿ ನಾಲ್ಕು ಸಲ ತುಪ್ಪ ತುಂಬಿಸಿ,

**ಓಮ್ ಅಗ್ನಿರ್ಮೂರ್ಧಾ......ಜಿನ್ವತೋಂ ೩ ಭುವೋ ಯಜ್ಞಸ್ಯ ರಜಸಶ್ಚ ನೇತಾ ॥ ಯತ್ರಾನಿಯುದ್ಭಿಸ್ಸಚಸೇ ಶಿವಾಭಿಃ । ದಿವಿ ಮೂರ್ಧಾನಂ ದಧಿಷೇ ಸುವರ್ಷಾಂ ಜಿಹ್ವಾಮಗ್ನೇ ಚಕೃಷೇ ಹವ್ಯವಾಹಗ್ಂ ಸ್ವಾಹಾ ॥ ಮೂರ್ಧಾಗ್ನಯ ಇದಂ ನ ಮಮ** ॥ –ಎಂದು ಪೂರ್ಣಾಹುತಿ ಕೊಡಬೇಕು.]

## ರಾತ್ರೌ ಮರಣೇ–

ಶುಕ್ಲಪಕ್ಷದ ಹಾಗೂ ಕೃಷ್ಣಪಕ್ಷದ ರಾತ್ರಿ ಮರಣವಾದಲ್ಲಿ ದಕ್ಷಿಣಾಯನಮರಣವಿಧಿಯಂತೆ ಸ್ರುಕ್ಕಿನಲ್ಲಿ ನಾಲ್ಕು ಬಾರಿ ತುಪ್ಪ ತುಂಬಿಸಿ, ಅಗ್ನಿಯಲ್ಲಿ ಏಳು ಆಹುತಿಗಳನ್ನು ನೀಡಬೇಕು.

## ಜಲೌ ಮರಣೇ–

ಸ್ರುಕ್ಕಿನಲ್ಲಿ ನಾಲ್ಕು ಬಾರಿ ತುಪ್ಪ ತುಂಬಿಸಿ **'ಇಮಂ ಮೇ ವರುಣ....'** ಹಾಗೂ **'ತತ್ತ್ವಾಯಾಮಿ....'** ಮಂತ್ರದಿಂದ **'ವರುಣಾಯ ಇದಂ ನ ಮಮ'** ಎಂದು ಒಂದೊಂದು ಆಹುತಿ ಕೊಡಬೇಕು.

## ಸರ್ಪಹತೇ–

ಸ್ರುಕ್ಕಿನಲ್ಲಿ ನಾಲ್ಕು ಬಾರಿ ತುಪ್ಪ ತುಂಬಿಸಿ **'ನಮೋ ಅಸ್ತು ಸರ್ಪೇಭ್ಯೋ....'** ಎಂಬ ಸರ್ಪತ್ರಯಮಂತ್ರದಿಂದ **'ಸರ್ಪೇಭ್ಯ ಇದಂ ನ ಮಮ'** ಎಂದು ಒಂದೊಂದು ಆಹುತಿ ಕೊಡುವುದು.

## ಪಶ್ವಾದಿಭಿರ್ಮರಣೇ–

ಸ್ರುಕ್ಕಿನಲ್ಲಿ ನಾಲ್ಕು ಬಾರಿ ತುಪ್ಪ ತುಂಬಿಸಿ **'ಆಗಾವೋ ಅಗ್ಮನ್...'** ಮಂತ್ರದಿಂದ ಒಂದು ಆಹುತಿ ಹಾಗೂ,

**ಓಮ್ ಇಂದ್ರೋ ಯಜ್ವನೇ ಪೃಣತೇ ಚ ಶಿಕ್ಷತ್ಯುಪೇದ್ದದಾತಿ ನ ಸ್ವಂ ಮುಷಾಯತಿ । ಭೂಯೋಭೂಯೊ ರಯಿಮಿದಸ್ಯ ವರ್ಧಯನ್ನಭಿನ್ನೇ ಖಿಲ್ಯೇ ನಿ ದಧಾತಿ ದೇವಯುಂ ಸ್ವಾಹಾ ॥ ಗೋಭ್ಯ ಇದಂ ನ ಮಮ** ॥ –ಎಂಬ ಮಂತ್ರದಿಂದ ಒಂದು ಆಹುತಿ ಕೊಡಬೇಕು.

**ದಂಷ್ಟ್ರಿಭಿರ್ಮರಣೇ–**

ಸ್ರುಕ್ಕಿನಲ್ಲಿ ನಾಲ್ಕು ಬಾರಿ ತುಪ್ಪ ತುಂಬಿಸಿ '**ದಗ್ಂಷ್ಟ್ರಾಭ್ಯಾಂ....**' ಮತ್ತು '**ಯೇ ಜನೇಷು....**' ಮಂತ್ರದಿಂದ ಒಂದೊಂದು ಆಹುತಿ ಕೊಡುವುದು.

**ಓಮ್ ದಗ್ಂಷ್ಟ್ರಾಭ್ಯಾಂ ಮಲಿಮ್ಲೂಞ್ಜಂಭೈಸ್ತಸ್ಕರಾಞ್ಜುತ । ಹನೂಭ್ಯಾಗ್ಂ ಸ್ತೇನಾನ್ ಭಗವಸ್ತಾಗ್ಂ ಸ್ತ್ವಂ ಖಾದ್ ಸುಖಾದಿತಾನ್ ಸ್ವಾಹಾ ॥ ದಂಷ್ಟ್ರಿಭ್ಯಾ ಇದಂ ನ ಮಮ ॥**

**ಓಂ ಯೇ ಜನೇಷು ಮಲಿಮ್ಲವಃ ಸ್ತೇನಾಸಸ್ತಸ್ಕರಾ ವನೇ । ಯೇ ಕಕ್ಷೇಷ್ವಘಾಯವಸ್ತಾಗ್ಂ ಸ್ತೇ ದಧಾಮಿ ಜಂಭಯೋಃ ಸ್ವಾಹಾ ॥ ದಂಷ್ಟ್ರಿಭ್ಯಾ ಇದಂ ನ ಮಮ ॥**

**ಸಮುದ್ರೇ ಮರಣೇ–**

ಸ್ರುಕ್ಕಿನಲ್ಲಿ ನಾಲ್ಕು ಬಾರಿ ತುಪ್ಪ ತುಂಬಿಸಿ '**ಸಮುದ್ರಾಯ ವಯುನಾಯ....**' ಮಂತ್ರದಿಂದ '**ಸಮುದ್ರಾಯೇದಂ ನ ಮಮ**' ಎಂದು ಒಂದು ಆಹುತಿ ಕೊಡಬೇಕು.

**ಓಂ ಸಮುದ್ರಾಯ ವಯುನಾಯ ಸಿಂಧೂನಾಂ ಪತಯೇ ನಮಃ । ನದೀನಾಗ್ಂ ಸರ್ವಾಸಾಂ ಪಿತ್ರೇ ಜುಹುತಾ ವಿಶ್ವಕರ್ಮಣೇ ವಿಶ್ವಾಽಹಾಽಮರ್ತ್ಯಗ್ಂ ಹವಿಃ ಸ್ವಾಹಾ ॥ ಸಮುದ್ರಾಯೇದಂ ನ ಮಮ ॥**

**ತಡಿತ್ ಮರಣೇ–**

ಸಿಡಿಲಿನಿಂದಾಗಿ ಮರಣ ಹೊಂದಿದಲ್ಲಿ, ಸ್ರುಕ್ಕಿನಲ್ಲಿ ನಾಲ್ಕು ಬಾರಿ ತುಪ್ಪ ತುಂಬಿಸಿ '**ಮೂರ್ಧಾನಂ ದಿವೋ..........**' ಮಂತ್ರದಿಂದ '**ಮೂರ್ಧಾಗ್ನಯ ಇದಂ ನ ಮಮ**' ಎಂದು ಒಂದು ಆಹುತಿ ಕೊಡಬೇಕು.

**ಗರ್ಭಿಣೀ ಮರಣೇ–**

(ಹೆಚ್ಚಿನ ವಿವರಣೆಗಾಗಿ ಪುಟಸಂಖ್ಯೆ 241 ನೋಡಿ.)

ಸೀಳಿದ ಹೊಟ್ಟೆಯ ಭಾಗಕ್ಕೆ ಆಜ್ಯಾಹುತಿ ಕೊಡುವ ಮಂತ್ರಗಳು–

ಓಂ ಶತಾಯುಧಾಯ ಶತವೀರ್ಯಾಯ ಶತೋತಯೇಽಭಿಮಾತಿ-ಷಾಹೇ। ಶತಂ ಯೋ ನಃ ಶರದೋ ಅಜೀತಾನಿಂದ್ರೋ ನೇಷದತಿ ದುರಿತಾನಿ ವಿಶ್ವಾ ಸ್ವಾಹಾ ॥ ಇಂದ್ರಾಯ ಇದಂ ನ ಮಮ ॥

ಓಂ ಯೇ ಚತ್ವಾರಃ ಪಥಯೋ ದೇವಯಾನಾ ಅಂತರಾದ್ ದ್ಯಾವಾ ಪೃಥಿವೀ ವಿಯಂತಿ । ತೇಷಾಂ ಯೋ ಅಜ್ಯಾನಿಮಜೀತಿಮಾವಹಾತ್ತಸ್ಮೈ ನೋ ದೇವಾಃ ಪರಿ ದತ್ತೇಹ ಸರ್ವೇ ಸ್ವಾಹಾ ॥ ದೇವೇಭ್ಯ ಇದಂ ನ ಮಮ ॥

ಓಂ ಗ್ರೀಷ್ಮೋ ಹೇಮಂತ ಉತನೋ ವಸಂತಃ ಶರದ್ವರ್ಷಾಸ್ಸುವಿ-ತನ್ನೋ ಅಸ್ತು । ತೇಷಾಮೃತೂನಾಗ್‌ಂ ಶತಶಾರದಾನಾಂ ನಿವಾತ ಏಷಾಮಭಯೇ ಸ್ಯಾಮ ಸ್ವಾಹಾ ॥ ಗ್ರೀಷ್ಮಾದಿ ಋತುಭ್ಯ ಇದಂ ನ ಮಮ ॥

ಓಮ್ ಇದುವತ್ಸರಾಯ ಪರಿವತ್ಸರಾಯ ಸಂವತ್ಸರಾಯ ಕೃಣುತಾ ಬೃಹನ್ನಮಃ । ತೇಷಾಂ ವಯಗ್‌ಂ ಸುಮತೌ ಯಜ್ಞಿಯಾನಾಂ ಜ್ಯೋಗಜೀತಾ ಅಹತಾಃ ಸ್ಯಾಮಃ ಸ್ವಾಹಾ ॥ ಇದುವತ್ಸರಾದಿಭ್ಯ ಇದಂ ನ ಮಮ ॥

ಓಂ ಭದ್ರಾನ್ನಃ ಶ್ರೇಯಸ್ಸಮನೈಷ್ಟ ದೇವಾಸ್ತ್ವಯಾಽವಸೇನ ಸಮಶೀಮಹಿ ತ್ವಾ । ಸ ನೋ ಮಯೋಭೂಃ ಪಿತೋ ಆ ವಿಶಸ್ವ ಶಂ ತೋಕಾಯ ತನುವೇ ಸ್ಯೋನಃ ಸ್ವಾಹಾ ॥ ದೇವೇಭ್ಯ ಇದಂ ನ ಮಮ ॥

ಓಂ ಪ್ರಯಾಸಾಯ ಸ್ವಾಹಾ ॥ ಆಯಾಸಾಯ ॥ ವಿಯಾಸಾಯ ॥ ಸಂಯಾಸಾಯ ॥ ಉದ್ಯಾಸಾಯ ॥ ಅವಯಾಸಾಯ ॥ ಶುಚೇ ॥ ಶೋಕಾಯ ॥ ತಪ್ಯತ್ವೈ ॥ ತಪತೇ ॥ ಬ್ರಹ್ಮಹತ್ಯಾಯೈ ॥ ಸರ್ವಸ್ಮೈ ॥ ಪ್ರಾಣಾಯ ॥ ವ್ಯಾನಾಯ ॥ ಅಪಾನಾಯ ॥ ಚಕ್ಷುಷೇ ॥ ಶ್ರೋತ್ರಾಯ ॥ ಮನಸೇ ॥ ವಾಚೇ ॥ ಸರಸ್ವತ್ಯೈ ॥ ಪೂಷ್ಣೇ ॥ ಪೂಷ್ಣೇ ಶಿರಸೇ ॥ ಪೂಷ್ಣೇ ಪ್ರಪಥ್ಯಾಯ ॥ ಪೂಷ್ಣೇ ನರಂಧಿಷಾಯ ॥ ಪೂಷ್ಣೇಽಂಘೃಣಯೇ ॥ ಪೂಷ್ಣೇ-ಽನರುಣಾಯ ॥ ಪೂಷ್ಣೇ ಸಾಕೇತಾಯ ॥

## ಮರಣಕಾಲೇ ಭಾರ್ಯಾಯಾಃ ರಜಸಿ ಪ್ರಸೂತೌ ವಾ ಪ್ರಾಯಶ್ಚಿತ್ತಃ

ಗಂಡನ ಮರಣಕಾಲದಲ್ಲಿ ಹೆಂಡತಿ ರಜಸ್ವಲೆ ಇಲ್ಲವೆ ಬಾಣಂತಿಯಾಗಿದ್ದಲ್ಲಿ ಕೆಳಗಿನ ಮಂತ್ರದಿಂದ ನಾಲ್ಕು ಬಾರಿ ತುಪ್ಪ ಹಿಡಿದು ಪ್ರತಿ ಮಂತ್ರದಿಂದ ಹೋಮಿಸಬೇಕು–

**ಓಮ್ ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ। ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ಸ್ವಾಹಾ ॥ ಅಗ್ನಯೇ ಜಾತವೇದಸ ಇದಂ ನ ಮಮ ॥**

**ಓಂ ಮನೋ ಜ್ಯೋತಿರ್ಜುಷತಾಮಾಜ್ಯಂ ವಿಚ್ಛಿನ್ನಂ ಯಜ್ಞಂ ಸಮಿಮಂ ದಧಾತು। ಯಾ ಇಷ್ಟಾ ಉಷಸೋ ನಿಮ್ರುಚಶ್ಚ ತಾಃ ಸಂ ದಧಾಮಿ ಹವಿಷಾ ಘೃತೇನ ಸ್ವಾಹಾ ॥ ಮನಸೇ ಜ್ಯೋತಿಷ ಇದಂ ನ ಮಮ ॥**

**ಓಂ ತಂತುಂ ತನ್ವನ್ರಜಸೋ ಭಾನುಮನ್ವಿಹಿ ಜ್ಯೋತಿಷ್ಮತಃ ಪಥೋ ರಕ್ಷ ಧಿಯಾ ಕೃತಾನ್। ಅನುಲ್ಬಣಂ ವಯತ ಜೋಗುವಾಮಪೋ ಮನು-ರ್ಭವ ಜನಯಾ ದೈವ್ಯಂ ಜನಂ ಸ್ವಾಹಾ ॥ ಅಗ್ನಯೇ ತಂತುಮತ ಇದಂ ನ ಮಮ ॥**

**ಓಮ್ ಉದ್ಬುಧ್ಯಸ್ವಾಗ್ನೇ ಪ್ರತಿ ಜಾಗೃಹ್ಯೇನಮಿಷ್ಟಾಪೂರ್ತೇ ಸಗ್‌ಂಸೃಜೇಥಾ ಮಯಂ ಚ। ಪುನಃ ಕೃಣ್ವಗ್‌ಗ್ಂಸ್ತ್ವಾ ಪಿತರಂ ಯುವಾನಮನ್ವಾತಾಂ‌ಸೀತ್ ತ್ವಯಿ ತಂತುಮೇತಗ್‌ಂ ಸ್ವಾಹಾ ॥ ಅಗ್ನಯೇ ತಂತುಮತ ಇದಂ ನ ಮಮ ॥**

**ಓಮ್ ತ್ರಯಸ್ತ್ರಿಗ್‌ಂಶತ್ತಂತವೋ ಯೇ ವಿತತ್ನಿರೇ ಯ ಇಮಂ ಯಜ್ಞಗ್‌ಂ ಸ್ವಧಯಾ ದದಂತೇ ತೇಷಾಂ ಛಿನ್ನಂ ಪ್ರತ್ಯೇತದ್ದಧಾಮಿ ಸ್ವಾಹಾ ಘರ್ಮೋ ದೇವಾಗ್‌ಂ ಅಪ್ಯೇತು ಸ್ವಾಹಾ ॥ ಅಗ್ನಯೇ ತಂತುಮತ ಇದಂ ನ ಮಮ ॥**

ಮಹಾವ್ಯಾಹೃತಿಯಿಂದ ಹೋಮಿಸಿ, ಪುನಃ ಹನ್ನೆರಡು ಸಲ ತುಪ್ಪ ಹಿಡಿದು ಹಿಂದಿನ

ಐದು ಮಂತ್ರಗಳನ್ನೆಲ್ಲಾ ಒಟ್ಟಿಗೆ ಹೇಳಿ ಒಂದು ಆಹುತಿ ಕೊಟ್ಟು ಪುನಃ ನಾಲ್ಕು ಬಾರಿ ತುಪ್ಪ ಹಿಡಿದು,

**ಓಮ್ ಅಪಪಾಪ್ಮಾನಂ ಭರಣೀರ್ಭರಂತು । ತದ್ಯಮೋ ರಾಜಾ ಭಗವಾನ್, ವಿಚಷ್ಟಾಮ್ । ಲೋಕಸ್ಯ ರಾಜಾ ಮಹತೋ ಮಹಾನ್, ಹಿ। ಸುಗನ್ನಃ ಪಂಥಾಮಭಯಂ ಕೃಣೋತು ಸ್ವಾಹಾ ॥ ಯಮಾಯ ರಾಜ್ಞ ಇದಂ ನ ಮಮ ॥**

**ಓಂ ಯಸ್ಮಿನ್ನಕ್ಷತ್ರೇ ಯಮ ಏತಿ ರಾಜಾ । ಯಸ್ಮಿನ್ನೇನಮಭ್ಯಷಿಂಚತ ದೇವಾಃ । ತದಸ್ಯ ಚಿತ್ರಗ್‌ಂ ಹವಿಷಾ ಯಜಾಮ । ಅಪಪಾಪ್ಮಾನಂ ಭರಣೀರ್ಭರಂತು ಸ್ವಾಹಾ ॥ ಯಮಾಯ ರಾಜ್ಞ ಇದಂ ನ ಮಮ ॥**

ಅನಂತರ ಸ್ರುವದಿಂದ **ಅನಾಜ್ಞಾತಾದಿ** ಮೂರರಿಂದಲೂ **'ಯನ್ಮ ಆತ್ಮನೋ ಮಿಂದಾಹುತಿ'**ಗಳೆರಡರಿಂದ (ಪುಟಸಂಖ್ಯೆ 136) **ಭೂರಾದಿ ವ್ಯಾಹೃತಿ**ಗಳಿಂದಲೂ ಹೋಮ ಮಾಡಬೇಕು.

### ಕುಷ್ಠಾದಿಮಹಾರೋಗೇ ಮೃತೇ–

ಶವವನ್ನು ಚಿತೆಯಲ್ಲಿಟ್ಟ ಅನಂತರ ಶವದ ಬಾಯಿಗೆ ತುಪ್ಪವನ್ನು ಕೆಳಗಿನ ಮಂತ್ರದಿಂದ ಹಾಕಬೇಕು.

**ವಸುಭ್ಯೋ ರುದ್ರೇಭ್ಯ ಆದಿತ್ಯೇಭ್ಯೋ ವಿಶ್ವೇಭ್ಯೋ ದೇವೇಭ್ಯಃ ಸಾಧ್ಯೇಭ್ಯೋ ಮರುದ್ಭ್ಯ ಋಭುಭ್ಯಃ ಪಿತೃಭ್ಯಃ ಸ್ವಾಹಾ ॥**

[ನಿತ್ಯದಲ್ಲಿ ಅಗ್ನಿಹೋತ್ರ ಮಾಡುವವರು ಮರಣಹೊಂದಿದ್ದಲ್ಲಿ ಸ್ರುಕ್‌ಸ್ರುವ, ಚಮಸ, ಆಜ್ಯಸ್ಥಾಲೀ, ದ್ರವ್ಯಸ್ಥಾಲೀ, ಮುಂತಾದವುಗಳನ್ನು ಆಯಾ ಸ್ಥಳದಲ್ಲಿಟ್ಟು ದಹನ ಮಾಡಬೇಕು. ಅಂದರೆ ಬಲಕೈಯಲ್ಲಿ ಜುಹು ಎಡಕೈಯಲ್ಲಿ ಉಪಭೃತ್, ಬಲಭಾಗದಲ್ಲಿ ಸ್ಫ್ಯ ಎಡಭಾಗದಲ್ಲಿ ಅಗ್ನಿಹೋತ್ರ ಹವಣಿ, ಎದೆಯಲ್ಲಿ ಧ್ರುವ, ಶಿರಸ್ಸಿನಲ್ಲಿ ಕಪಾಲಗಳು, ಹಲ್ಲುಗಳಲ್ಲಿ ಗ್ರಾವಾ, ಮೂಗಿನಲ್ಲಿ ಸ್ರುವಗಳು, ಕಿವಿಯಲ್ಲಿ ಪ್ರಾಶಿತ್ರಹರಣ, ಹೊಟ್ಟೆಯಲ್ಲಿ ಪಾತ್ರೀಚಮಸ, ಲಿಂಗದಲ್ಲಿ ಶಮ್ಯಾ, ಪಾದದಲ್ಲಿ ಶೂರ್ಪ –ಇವುಗಳನ್ನು ಇಟ್ಟು ಅನಂತರ ದಹನ ಮಾಡಬೇಕು.]

* * *

# ದಹನವಿಧಿಃ



ಶವದ ಮೇಲೆ ದರ್ಭೆ ಹರಡಿ ಶ್ರೀಗಂಧ, ಪಚ್ಚೆಕರ್ಪೂರ, ಬೆರಣಿ, ತುಲಸೀಕಾಷ್ಠಗಳನ್ನಿಟ್ಟು ಯಜಮಾನನು ಅಗ್ನಿಯಿಂದ ಸೂಟೆ(ತೆಂಗಿನ ಸೋಗೆಯ ಕಂತೆ)ಯನ್ನು ಹೊತ್ತಿಸಿ ಎಡ ಭುಜದಲ್ಲಿಟ್ಟು, ದಕ್ಷಿಣಕ್ಕೆ ಮುಖಮಾಡಿ ಶವದ ತಲೆಯ ಭಾಗದಲ್ಲಿ (ಸ್ತ್ರೀಯರಿಗಾದರೆ ಉತ್ತರಕ್ಕೆ ಮುಖ ಮಾಡಿ ಪಾದಭಾಗದಲ್ಲಿ) ಚಿತೆಗೆ ಬೆಂಕಿ ಹಚ್ಚಿ ಮೂರು ಅಪ್ರದಕ್ಷಿಣೆಯಾಗಿ ಒಂದೊಂದು ಸುತ್ತಿಗೂ ಮುಂದಿನ ಮಂತ್ರಗಳಿಂದ ಒಂದೊಂದು ದಿಕ್ಕಿಗೆ ಬೆಂಕಿ ಹಚ್ಚಬೇಕು (ಕೆಲವರಲ್ಲಿ ೩ ಸೂಟೆಯನ್ನು ಹೊತ್ತಿಸಿ ಎಡ ಹೆಗಲಲ್ಲಿಟ್ಟು ಅಪ್ರದಕ್ಷಿಣೆಯಾಗಿ ಅಗ್ನಿ ಕೊಟ್ಟು ಸೂಟೆಯ ಬುಡವನ್ನು ಚಿತೆಯ ಒಳಗೆ ತೂರಿಸಿ ಇಡುವ ಪದ್ಧತಿ ಇದೆ.)

**'ಅಸ್ಮತ್ಪಿತ್ರೇ [ಮಾತ್ರೇ] ....ಗೋತ್ರಾಯ [ಗೋತ್ರಾಯೈ] .........ಶರ್ಮಣೇ [ನಾಮ್ನ್ಯೈ] ಪ್ರೇತಾಯ [ಪ್ರೇತಾಯೈ] ಇದಂ ತೇ ಅಗ್ನಿಂ ದತ್ತಮುಪತಿಷ್ಠತು ॥'**

ಕ್ರವ್ಯಾದಮಿತಿ ದಮನೋಽಗ್ನಿಸ್ತ್ರಿಷ್ಟುಪ್ । ಅಗ್ನಿಪ್ರಜ್ವಲನೇ ವಿನಿಯೋಗಃ ॥

**ಓಂ ಕ್ರವ್ಯಾದಮಗ್ನಿಂ ಪ್ರ ಹಿಣೋಮಿ ದೂರಂ ಯಮರಾಜ್ಞೋ ಗಚ್ಛತು ರಿಪ್ರವಾಹಃ । ಇಹೈವಾಯಮಿತರೋ ಜಾತವೇದಾ ದೇವೇಭ್ಯೋ ಹವ್ಯಂ ವಹತು ಪ್ರಜಾನನ್ ॥**

ತ್ವಯಾ ಮನ್ಯೋ ಇತಿ ಮನ್ಯುಸ್ತಾಪಸೋ ಮನ್ಯುರ್ಜಗತೀ । ಅಗ್ನಿಪ್ರಜ್ವಲನೇ ವಿನಿಯೋಗಃ ॥

**ಓಂ ತ್ವಯಾ ಮನ್ಯೋ ಸರಥಮಾರುಜಂತೋ ಹರ್ಷಮಾಣಾಸೋ**

ಧೃಷಿತಾ ಮರುತ್ವಃ । ತಿಗ್ಮೇಷವ ಆಯುಧಾ ಸಂಶಿಶಾನಾ ಅಭಿ ಪ್ರ ಯಂತು ನರೋ ಅಗ್ನಿರೂಪಾಃ ॥

ತ್ವಂ ಭೂತಕೃಜ್ಜಗದ್ಯೋನೇ ತ್ವಂ ಲೋಕಪರಿಪಾಲಕಃ ।
ಉಕ್ತಸ್ಸಂಹಾರಕಸ್ತಸ್ಮಾದೇನಂ(ನಾಂ) ಸ್ವರ್ಗಂ ಮೃತಂ(ತಾಂ) ನಯ ॥

'ವಾತಾಸ್ತೇ' 'ಇಮಾಂ ಆಪೋ' ಮಂತ್ರಗಳೆರಡರಿಂದ, ತನ್ನ ವಸ್ತ್ರದಿಂದ (ತೆಂಗಿನ ಮಡಲಿನಿಂದ, ಗೆರಸೆಯಿಂದ) ನಾರಾಯಣಸ್ಮರಣೆಯೊಂದಿಗೆ ಗಾಳಿ ಹಾಕಿ ಮೃತವ್ಯಕ್ತಿಯ ಗುಣಗಾನ ಮಾಡಬೇಕು.

ಓಂ ವಾತಾಸ್ತೇ ವಾಂತು ಪಥಿ ಪುಣ್ಯಗಂಧಾ ಮನಃಸುಖಾ ಗಾತ್ರಸುಖಾನುಲೋಮಾಃ । ತ್ವಚಃ ಸುಖಾ ಮಾಂಸಸುಖಾ ಅಸ್ಥಿಸೌಖ್ಯಾ ವಹಂತು ತ್ವಾಂ ಮರುತಃ ಸುಕೃತಾಂ ಯತ್ರ ಲೋಕಾಃ ॥

ಓಮ್ ಇಮಾ ಆಪೋ ಮಧುಮತ್ಯೋಽಸ್ಮಿಂಸ್ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥ ಇಮಾ ಆಪೋ ಮಧುಮತ್ಯೋಽಂತರಿಕ್ಷೇ ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥ ಇಮಾ ಆಪೋ ಮಧುಮತ್ಯಃ ಸ್ವರ್ಗೇ ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥

ಅಸ್ಮಾತ್ತ್ವಮಧಿಜಾತೋಽಸಿ ತ್ವದಯಂ ಜಾಯತಾಂ ಪುನಃ ।
ಅಸೌ ಸ್ವರ್ಗಾಯ ಲೋಕಾಯ ಸ್ವಾಹಾ ಜ್ವಲತು ಪಾವಕಃ ॥

'ಪ್ರೇಹಿ ಪ್ರೇಹಿ' ಮಂತ್ರದಿಂದ ನಾರಾಯಣಸ್ಮರಣೆಯೊಂದಿಗೆ ತುಪ್ಪ ಮಿಶ್ರಣ ಮಾಡಿದ ಎಳ್ಳು ಚೆಲ್ಲುತ್ತಿರಬೇಕು.

ಪ್ರೇಹಿ ಪ್ರೇಹೀತಿ ದ್ವಯೋಃ ಯಮಃ ಪಿತರಸ್ತ್ರಿಷ್ಟುಪ್ । ಅತಿದ್ರವೇತಿ ದ್ವಯೋರ್ಯಮಶ್ವಾನೌ ತ್ರಿಷ್ಟುಪ್ । ಮೈನಮಿತಿ ಷಣ್ಣಾಂ ಯಾಮಾಯನೋ ದಮನೋಽಗ್ನಿಸ್ತ್ರಿಷ್ಟುಪ್ । ಪೂಷಾತ್ವೇತಿ ಚತಸೃಣಾಂ ಯಾಮಾಯನೋ ದೇವಶ್ರವಾಃ ಪೂಷಾಸ್ತ್ರಿಷ್ಟುಪ್ । ಉಪಸರ್ಪೇತಿ ಚತಸೃಣಾಂ ಯಾಮಾಯನೋ ದೇವಶ್ರವಾ ಪೂಷಾ–

ಸ್ತ್ರಿಷ್ಟುಪ್ । ಸೋಮ ಏಕೇಭ್ಯ ಇತಿ ಪಂಚಾನಾಂ ವೈವಸ್ವತೀ ಯಮೀ ಭಾವವೃತ್ತಮ-ನುಷ್ಟುಪ್ । ಉರೂಣಸಾವಿತ್ಯಸ್ಯ ವೈವಸ್ವತೋ ಯಮ ಯಮಶ್ವಾನೌ ತ್ರಿಷ್ಟುಪ್ । ದಹ್ಯಮಾನಪ್ರೇತಾನುಮಂತ್ರಣೇ ವಿನಿಯೋಗಃ ॥

ಓಂ ಪ್ರೇಹಿ ಪ್ರೇಹಿ ಪಥಿಭಿಃ ಪೂರ್ವ್ಯೇಭಿರ್ಯತ್ರಾ ನಃ ಪೂರ್ವೇ ಪಿತರಃ ಪರೇಯುಃ । ಉಭಾ ರಾಜಾನಾ ಸ್ವಧಯಾ ಮದಂತಾ ಯಮಂ ಪಶ್ಯಾಸಿ ವರುಣಂ ಚ ದೇವಮ್ ॥ ಸಂ ಗಚ್ಛಸ್ವ ಪಿತೃಭಿಃ ಸಂ ಯಮೇನೇಷ್ಟಾಪೂರ್ತೇನ ಪರಮೇ ವ್ಯೋಮನ್ । ಹಿತ್ವಾಯಾವದ್ಯಂ ಪುನರಸ್ತಮೇಹಿ ಸಂ ಗಚ್ಛಸ್ವ ತನ್ವಾ ಸುವರ್ಚಾಃ ॥

ಓಮ್ ಅತಿ ದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ । ಅಥಾ ಪಿತೄನ್ ತ್ಸುವಿದತ್ರಾ ಉಪೇಹಿ ಯಮೇನ ಯೇ ಸಧಮಾದಂ ಮದಂತಿ ॥ ಯೌ ತೇ ಶ್ವಾನೌ ಯಮರಕ್ಷಿತಾರೌ ಚತುರಕ್ಷೌ ಪಥಿರಕ್ಷೀ ನೃಚಕ್ಷಸೌ । ತಾಭ್ಯಾಮೇನಂ ಪರಿ ದೇಹಿ ರಾಜನ್ ಸ್ವಸ್ತಿ ಚಾಸ್ಮಾ ಅನಮೀವಂ ಚ ಧೇಹಿ ॥

ಓಂ ಮೈನಮಗ್ನೇ ವಿ ದಹೋ ಮಾಭಿ ಶೋಚೋ ಮಾಸ್ಯ ತ್ವಚಂ ಚಿಕ್ಷಿಪೋ ಮಾ ಶರೀರಮ್ । ಯದಾ ಶೃತಂ ಕೃಣವೋ ಜಾತವೇದೋಽಥೇ-ಮೇನಂ ಪ್ರ ಹಿಣುತಾತ್ಪಿತೃಭ್ಯಃ ॥ ಶೃತಂ ಯದಾ ಕರಸಿ ಜಾತವೇದೋಽಥೇ-ಮೇನಂ ಪರಿ ದತ್ತಾತ್ಪಿತೃಭ್ಯಃ । ಯದಾ ಗಚ್ಛಾತ್ಯಸುನೀತಿಮೇತಾಮಥಾ ದೇವಾನಾಂ ವಶನೀರ್ಭವಾತಿ ॥ ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ । ಅಪೋ ವಾ ಗಚ್ಛ ಯದಿ ತತ್ರ ತೇ ಹಿತಮೋಷಧೀಷು ಪ್ರತಿ ತಿಷ್ಠಾ ಶರೀರೈಃ ॥ ಅಜೋ ಭಾಗಸ್ತಪಸಾ ತಂ ತಪಸ್ವ ತಂ ತೇ ಶೋಚಿಸ್ತಪತು ತಂ ತೇ ಅರ್ಚಿಃ । ಯಾಸ್ತೇ ಶಿವಾಸ್ತನ್ವೋ ಜಾತವೇದಸ್ತಾಭಿರ್ವಹೈನಂ ಸುಕೃತಾಮು ಲೋಕಮ್ ॥ ಅವ ಸೃಜ ಪುನರಗ್ನೇ

ಪಿತೃಭ್ಯೋ ಯಸ್ತ ಆಹುತಶ್ಚರತಿ ಸ್ವಧಾಭಿಃ । ಆಯುರ್ವಸಾನ ಉಪ ವೇತು ಶೇಷಃ ಸಂ ಗಚ್ಛತಾಂ ತನ್ವಾ ಜಾತವೇದಃ ॥ ಯತ್ತೇ ಕೃಷ್ಣಃ ಶಕುನ ಆತುತೋದ ಪಿಪೀಲಃ ಸರ್ಪ ಉತ ವಾ ಶ್ವಾಪದಃ । ಅಗ್ನಿಷ್ಟದ್ವಿಶ್ವಾದಗದಂ ಕೃಣೋತು ಸೋಮಶ್ಚ ಯೋ ಬ್ರಾಹ್ಮಣಾ ಆವಿವೇಶ ॥

ಓಂ ಪೂಷಾ ತ್ವೇತಶ್ಚ್ಯಾವಯತು ಪ್ರ ವಿದ್ವಾನನಷ್ಟಪಶುರ್ಭುವನಸ್ಯ ಗೋಪಾಃ । ಸ ತ್ವೈತೇಭ್ಯಃ ಪರಿ ದದತ್ಪಿತೃಭ್ಯೋಽಗ್ನಿರ್ದೇವೇಭ್ಯಃ ಸುವಿದತ್ರಿ- ಯೇಭ್ಯಃ ॥ ಆಯುರ್ವಿಶ್ವಾಯುಃ ಪರಿ ಪಾಸತಿ ತ್ವಾ ಪೂಷಾ ತ್ವಾ ಪಾತು ಪ್ರಪಥೇ ಪುರಸ್ತಾತ್ । ಯತ್ರಾಸತೇ ಸುಕೃತೋ ಯತ್ರ ತೇ ಯಯುಸ್ತತ್ರ ತ್ವಾ ದೇವಃ ಸವಿತಾ ದಧಾತು ॥ ಪೂಷೇಮಾ ಆಶಾ ಅನು ವೇದ ಸರ್ವಾಃ ಸೋ ಅಸ್ಮಾ ಅಭಯತಮೇನ ನೇಷತ್ । ಸ್ವಸ್ತಿದಾ ಆಘೃಣಿಃ ಸರ್ವವೀರೋಽಪ್ರ- ಯುಚ್ಛನ್ ಪುರ ಏತು ಪ್ರಜಾನನ್ ॥ ಪ್ರಪಥೇ ಪಥಾಮಜನಿಷ್ಟ ಪೂಷಾ ಪ್ರಪಥೇ ದಿವಃ ಪ್ರಪಥೇ ಪೃಥಿವ್ಯಾಃ । ಉಭೇ ಅಭಿ ಪ್ರಿಯತಮೇ ಸಧಸ್ಥೇ ಆ ಚ ಪರಾ ಚ ಚರತಿ ಪ್ರಜಾನನ್ ॥

ಓಮ್ ಉಪ ಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಮ್ । ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿರ್ಋತೇರುಪಸ್ಥಾತ್ ॥ ಉಚ್ಛ್ವಂಚಸ್ವ ಪೃಥಿವಿ ಮಾ ನಿ ಬಾಧಥಾಃ ಸೂಪಾಯ- ನಾಸ್ಮೈ ಭವ ಸೂಪವಂಚನಾ । ಮಾತಾ ಪುತ್ರಂ ಯಥಾ ಸಿಚಾಽಭ್ಯೇನಂ ಭೂಮ ಊರ್ಣುಹಿ ॥ ಉಚ್ಛ್ವಂಚಮಾನಾ ಪೃಥಿವೀ ಸು ತಿಷ್ಠತು ಸಹಸ್ರಂ ಮಿತ ಉಪ ಹಿ ಶ್ರಯಂತಾಮ್ । ತೇ ಗೃಹಾಸೋ ಘೃತಶ್ಚುತೋ ಭವಂತು ವಿಶ್ವಾಹಾಸ್ಮೈ ಶರಣಾಃ ಸಂತ್ವತ್ರ ॥ ಉತ್ತೇ ಸ್ತಭ್ನಾಮಿ ಪೃಥಿವೀಂ ತ್ವತ್ಪರೀಮಂ

ಲೋಗಂ ನಿದಧನ್ಮೋ ಅಹಂ ರಿಷಮ್ । ಏತಾಂ ಸ್ಥೂಣಾಂ ಪಿತರೋ ಧಾರಯಂತು ತೇಽತ್ರಾ ಯಮಃ ಸಾದನಾ ತೇ ಮಿನೋತು ॥

ಓಂ ಸೋಮ ಏಕೇಭ್ಯಃ ಪವತೇ ಘೃತಮೇಕ ಉಪಾಸತೇ । ಯೇಭ್ಯೋ ಮಧು ಪ್ರಧಾವತಿ ತಾಂಶ್ಚಿದೇವಾಪಿ ಗಚ್ಛತಾತ್ ॥ ತಪಸಾ ಯೇ ಅನಾಧೃಷ್ಯಾಸ್ತಪಸಾ ಯೇ ಸ್ವರ್ಯಯುಃ । ತಪೋ ಯೇ ಚಕ್ರಿರೇ ಮಹಸ್ತಾಂಶ್ಚಿದೇವಾಪಿ ಗಚ್ಛತಾತ್ ॥ ಯೇ ಯುಧ್ಯಂತೇ ಪ್ರಧನೇಷು ಶೂರಾಸೋ ಯೇ ತನೂತ್ಯಜಃ । ಯೇ ವಾ ಸಹಸ್ರದಕ್ಷಿಣಾಸ್ತಾಂಶ್ಚಿದೇವಾಪಿ ಗಚ್ಛತಾತ್ ॥ ಯೇ ಚಿತ್ಪೂರ್ವ ಋತಸಾಪ ಋತಾವಾನ ಋತಾವೃಧಃ । ಪಿತೄನ್ತಪಸ್ವತೋ ಯಮ ತಾಂಶ್ಚಿದೇವಾಪಿ ಗಚ್ಛತಾತ್ ॥ ಸಹಸ್ರಣೀಥಾಃ ಕವಯೋ ಯೇ ಗೋಪಾಯಂತಿ ಸೂರ್ಯಮ್ । ಋಷೀನ್ತಪಸ್ವತೋ ಯಮ ತಪೋಜಾಂ ಅಪಿ ಗಚ್ಛತಾತ್ ॥

ಓಮ್ ಉರೂಣಸಾವಸುತೃಪಾ ಉದುಂಬಲೌ ಯಮಸ್ಯ ದೂತೌ ಚರತೋ ಜನಾಂ ಅನು । ತಾವಸ್ಮಭ್ಯಂ ದೃಶಯೇ ಸೂರ್ಯಾಯ ಪುನರ್ದಾ-ತಾಮಸುಮದ್ಯೇಹ ಭದ್ರಮ್ ॥

(ಕೆಲವರಲ್ಲಿ ದೇಹವು ಅರ್ಧ ಅಥವಾ ಪೂರ್ಣ ದಹನವಾದ ಮೇಲೆ ಕಟ್ಟಿಗೆಯಿಂದ ತಲೆಯನ್ನು ಒಡೆಯಬೇಕು. ಪಿತೃಲೋಕದ ಪ್ರಾಪ್ತಿಗೋಸ್ಕರ ಬ್ರಹ್ಮರಂಧ್ರವನ್ನು ಭೇದಿಸುವುದು ಎಂಬ ಭಾವನೆ.)

ಶಿರಸ್ಫೋಟವಾಗಲು 'ನಗ್ನಪ್ರಚ್ಛಾದನ ಶ್ರಾದ್ಧ ಪ್ರತ್ಯಾಮ್ನಾಯ (ಬಲ) ತಿಲೋದಕಂ ಕರಿಷ್ಯೇ ॥' (ಎಡ) ಎಳ್ಳುನೀರು ಹಿಡಿದು– 'ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ತಿಲೋದಕಮುಪತಿಷ್ಠತು ॥' ಎಂದು ಎಳ್ಳು ನೀರು ಚಿತೆಗೆ ಕೊಡಬೇಕು.

## ಘಟಸ್ಫೋಟನಮ್

**ಅಸ್ಮತ್ಪಿತುಃ .........ಗೋತ್ರಸ್ಯ .........ಶರ್ಮಣಃ ಪ್ರೇತಸ್ಯ ಅಮೃತಪಾನಸಿದ್ಧ್ಯರ್ಥಂ ಪುಣ್ಯಗಂಧವಾಹಜನಿತ ದಹನಜನಿತ ತಾಪೋಪಶಮನದ್ವಾರಾ ಅಕ್ಷಯ್ಯಪುಣ್ಯಲೋಕಾವಾಪ್ತ್ಯರ್ಥಂ ಕಲಶಭಿದ್ರೋದಕಧಾರಾಭಿಸಹ ತ್ರಿರಪ್ರದಕ್ಷಿಣಂ ಕರಿಷ್ಯೇ ॥ (ಕುರುಷ್ವ) ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು । [ಅಧಿಕಾರ ಸಂಪದಸ್ತು ॥]**




1. 2. 3. ಕಲ್ಲಿನಿಂದ ತೂತು ಮಾಡುವ ಕ್ರಮ

ಹಿರಿಯವನು ಚಮಸವಾಗಿಟ್ಟಿರುವ ಜಲಕುಂಭವನ್ನು ಎಡ ಹೆಗಲಲ್ಲಿ ಹೊತ್ತು ಶವದ ಪಾದದೇಶದ ಚಿತೆಯ ಮೂಲದಲ್ಲಿಟ್ಟಿರುವ ಮಧ್ಯದ ಶಿಲಾಖಂಡವನ್ನು ಹಿಡಿದು ಕಲ್ಲಿನಿಂದ ಮಡಕೆಯ ಮೇಲ್ಭಾಗದಲ್ಲಿ ತೂತು ಮಾಡಿ (ತಮ್ಮಂದಿರಿಂದ ಇಲ್ಲವೇ ಇತರರಿಂದ ತೂತು ಮಾಡಿಸಿ) **'ವಾತಾಸ್ತೇ'** ಮಂತ್ರದಿಂದ ಅಪ್ರದಕ್ಷಿಣೆಯಾಗಿ ಸುತ್ತು ಬರಬೇಕು.

**ಓಂ ವಾತಾಸ್ತೇ ವಾಂತು ಪಥಿ ಪುಣ್ಯಗಂಧಾ ಮನಃಸುಖಾ ಗಾತ್ರಸುಖಾನುಲೋಮಾಃ । ತ್ವಚಃ ಸುಖಾ ಮಾಂಸಸುಖಾ ಅಸ್ಥಿಸೌಖ್ಯಾ ವಹಂತು ತ್ವಾಂ ಮರುತಃ ಸುಕೃತಾಂ ಯತ್ರ ಲೋಕಾಃ ॥ ಇಮಾ ಆಪೋ ಮಧುಮತ್ಯೋಽಸ್ಮಿಂಸ್ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥**

–ಎಂದು ಆ ಕಲ್ಲನ್ನು ಮೊದಲಿದ್ದ ರೇಖೆಯ ಮೇಲಿಟ್ಟು ತಮ್ಮಂದಿರಿಂದ ಇಲ್ಲವೇ ಬಂಧುಗಳಿಂದ ತನ್ನ ಕೈಗೆ ಎಳ್ಳು ನೀರು ಹಾಕಿಸಿಕೊಂಡು, **'ಅಸ್ಮತ್ಪಿತುಃ .........ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ತಿಲೋದಕಮುಪತಿಷ್ಠತು ॥'** –ಎಂದು ಆ ಶಿಲೆಗೆ ಎಳ್ಳುನೀರು ಬಿಟ್ಟು, (ಕೆಲವರಲ್ಲಿ ಒಂದೇ ಕಲ್ಲಿನಿಂದ ತೂತು ಮಾಡುತ್ತಾರೆ) ಹೀಗೆ ಎರಡನೆಯ ಕಲ್ಲಿಂದ ಮಡಕೆಯ ಮಧ್ಯಭಾಗದಲ್ಲಿ ತೂತು ಮಾಡಿ ಅಪ್ರದಕ್ಷಿಣೆಯಾಗಿ ಸುತ್ತು ಬರಬೇಕು.

**ಓಂ ವಾತಾಸ್ತೇ ವಾಂತು ............. ಯತ್ರ ಲೋಕಾಃ ॥ ಇಮಾ ಆಪೋ ಮಧುಮತ್ಯೋಽಂತರಿಕ್ಷೇ ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥**

ಅನಂತರ ಕಲ್ಲನ್ನು ಹಿಂದಿನ ಸ್ಥಾನದಲ್ಲಿಟ್ಟು ತಿಲೋದಕ ಕೊಟ್ಟು, ಮೂರನೇ ಕಲ್ಲಿಂದ ಮಡಕೆಯ ಕೆಳಭಾಗದಲ್ಲಿ ತೂತು ಮಾಡಿ ಮಂತ್ರವ್ಯತ್ಯಾಸದಿಂದ ಅಪ್ರದಕ್ಷಿಣೆಯಾಗಿ ಸುತ್ತುಬರಬೇಕು. (ಕೆಲವರಲ್ಲಿ ಮೂರನೇ ಸಲದ ಸುತ್ತಿಗೆ ಎಲ್ಲಾ ಸಗೋತ್ರದವರು ಸುತ್ತು ಬರುತ್ತಾರೆ.)

**ಓಂ ವಾತಾಸ್ತೇ ವಾಂತು .................. ಯತ್ರ ಲೋಕಾಃ ॥ ಇಮಾ ಆಪೋ ಮಧುಮತ್ಯಃ ಸ್ವರ್ಗೇ ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ।**

–ಎಂದು ಕಲ್ಲನ್ನು ಅದರ ಹಿಂದಿನ ಸ್ಥಾನದಲ್ಲಿಟ್ಟು ತಿಲೋದಕ ಕೊಡಬೇಕು. ಅನಂತರ ಶಿರಃಪ್ರದೇಶದಲ್ಲಿ ದಕ್ಷಿಣಕ್ಕೆ ಮುಖಮಾಡಿ ನಿಂತು ಎಲ್ಲರೂ ಕಣ್ಣು ಮುಚ್ಚಿಕೊಂಡಿರುವಂತೆ ನಾರಾಯಣಸ್ಮರಣೆಯೊಂದಿಗೆ ಕುಂಭವನ್ನು ಹಿಂದಕ್ಕೆ (ಶವದ ಕಾಲಿನ ಕಡೆಯಿಂದಾಚೆ) ಅಂದರೆ ಉತ್ತರಕ್ಕೆ ಬಿಸಾಡುವುದು. (ಸ್ತ್ರೀಯರಿಗೆ ಪಾದದೇಶದಲ್ಲಿ ಉತ್ತರಕ್ಕೆ ಮುಖ ಮಾಡಿ ನಿಂತು ಶವದ ಕಾಲಿನ ಭಾಗದ ಬಳಿ ಮಡಕೆಯನ್ನು ಒಡೆಯುವುದು. ಒಂದು ವೇಳೆ ಕ್ರಿಯಾಕರ್ತೃ ನಿಪುಣನಾಗಿಲ್ಲದಿದ್ದರೆ ಸ್ತ್ರೀಯರ ಕ್ರಮವನ್ನು ಅನುಸರಿಸುವುದು ಉತ್ತಮ.) ಅನಂತರ ಮಡಕೆಯ ತುಂಡಿನ ಮೇಲಿರುವ ನೀರು ಮತ್ತು ಎಳ್ಳನ್ನು ಹಿಡಿದು **ಅಸ್ಮತ್ಪಿತುಃ .......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಕಪಾಲೋದಕಮುಪತಿಷ್ಠತು ॥** ಎಂದು ಕಪಾಲೋದಕವನ್ನು ಚಿತೆಗೆ ಇಲ್ಲವೇ ಪ್ರೇತಶಿಲೆಗೆ ಕೊಡಬೇಕು.

ಅನಂತರ ಶವದ ಮೇಲೆ ಧರ್ಮಕಾಷ್ಠವೆಂದು ಹಿಂದೆ ತುಂಡು ಮಾಡಿಟ್ಟ ಚೆಕ್ಕೆಗಳನ್ನು ಶವದ ಮೇಲೆ ಕ್ರಿಯಾಕರ್ತೃಗಳು– '**ಅಸ್ಮತ್ಪಿತುಃ ......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಧರ್ಮಕಾಷ್ಠಮುಪತಿಷ್ಠತು ।**' –ಎಂದು ಇಟ್ಟು ಅನಂತರ ಬಂಧುಗಳೆಲ್ಲರೂ ಇಡಬೇಕು. (ಕೆಲವರಲ್ಲಿ ಕ್ರಿಯಾಕರ್ತೃವು ಪೂರ್ಣಾಹುತಿಯ ಉದ್ದಿಶ್ಯ ಸಿಪ್ಪೆ ಸುಲಿಯದ ತೆಂಗಿನಕಾಯಿ ಯನ್ನು ಚಿತೆಗೆ ಒಂದು ಸುತ್ತು ಅಪ್ರದಕ್ಷಿಣೆಯಾಗಿ ಬಂದು ಚಿತಾಗ್ನಿಗೆ ಹಾಕುತ್ತಾರೆ.)

ಇಮೇ ಜೀವಾ ಸಂಕುಸುಕೋ ಮೃತ್ಯುಸ್ತ್ರಿಷ್ಟುಪ್ । ಪರಿಸ್ತರಣವಿಸರ್ಜನಾರ್ಥೇ ವಿನಿಯೋಗಃ ॥

**ಓಮ್ ಇಮೇ ಜೀವಾ ವಿ ಮೃತೈರಾವವೃತ್ರನ್ನಭೂದ್ಭದ್ರಾ ದೇವಹೂ– ತಿರ್ನೋ ಅದ್ಯ । ಪ್ರಾಂಚೋ ಅಗಾಮನೃತಯೇ ಹಸಾಯ ದ್ರಾಘೀಯ ಆಯುಃ ಪ್ರತರಂ ದಧಾನಾಃ ॥** –ಎಂದು ಪರಿಸ್ತರಣೆಯನ್ನು ಬೇರ್ಪಡಿಸಿ ಹೋಮದ ಸಾಧನಗಳನ್ನು ಅಗ್ನಿಗೆ ಹಾಕಬೇಕು.

ಇಮೇ ಜೀವೇಭ್ಯ ಇತಿ ಸಂಕುಸುಕೋ ಮೃತ್ಯುಸ್ತ್ರಿಷ್ಟುಪ್ । ಪರ್ವತದರ್ಶನೇ ವಿನಿಯೋಗಃ ॥

**ಓಮ್ ಇಮಂ ಜೀವೇಭ್ಯಃ ಪರಿಧಿಂ ದಧಾಮಿ ಮೈಷಾಂ ನು ಗಾದಪರೋ ಅರ್ಥಮೇತಮ್ । ಶತಂ ಜೀವಂತು ಶರದಃ ಪುರೂಚೀರಂತರ್ಮೃತ್ಯುಂ ದಧತಾಂ ಪರ್ವತೇನ ॥** –ಎಂದು ಪರ್ವತವನ್ನು ನೋಡಿ, ಪೂರ್ವಮುಖವಾಗಿ ಕುಳಿತು, (ಬಲ)

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥**
**ಕಾಯೇನ ವಾಚಾ ಮನಸೇಂದ್ರಿಯೈರ್ವಾ .... ನಾರಾಯಣಾಯೇತಿ ಸಮರ್ಪಯಾಮಿ ॥**

**ಅದ್ಯ ದಿನೇ ಮಮ ಪಿತುರುದ್ದಿಶ್ಯ ಮಯಾಕೃತ ಪಿತುರಂತೇಷ್ಟಿಯಾಗಕರ್ಮಣಾ ಪಿತೃ[ಮಾತೃ] ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥ ತತ್ಸರ್ವಂ ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಗೋವಿಂದಾಯ ನಮಃ ॥**

## ಗೃಹಂ ಪ್ರತಿಗಮನಮ್

(ಎಡ) ಕರ್ಮಿಗಳು ಚಿತೆಯ ಮೂಲದಲ್ಲಿರುವ ಮಧ್ಯದ ಪ್ರೇತಶಿಲೆಯನ್ನು ಹಿಡಿದು,

**ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂ ಗತಿಮ್ ।**
**ಮನಸಾ ವಾಯುರೂಪೇಣ ಕುಶೇ ತ್ವಾಂ ಯೋಜಯಾಮ್ಯಹಮ್ ॥**

–ಎಂದು ಗುರುತಿಗಾಗಿ ಒಂದು ದರ್ಭೆಯಿಂದ ಶಿಲೆಯನ್ನು ಸುತ್ತಿ ಉಳಿದೆರಡು ಶಿಲೆಗಳನ್ನು ಕ್ರಮವಾಗಿ ಎರಡು ಮತ್ತು ಮೂರು ದರ್ಭೆಗಳಿಂದ ಸುತ್ತಿ ಗುರುತು ಮಾಡಿಟ್ಟುಕೊಂಡು, ಜೋಪಾನವಾಗಿ ಮೂರು ಶಿಲೆಗಳನ್ನು ಹಿಡಿದು ಹೆಂಗುಸರಿದ್ದರೆ ಅವರನ್ನು ಮುಂದೆ ಮಾಡಿ, ಕನಿಷ್ಠಪೂರ್ವಕವಾಗಿ ತಲೆಕೂದಲನ್ನು ಕಟ್ಟದೇ ಮನೆಗೆ ಹೊರಡುವವರಾಗಬೇಕು. (ಕೆಲವರಲ್ಲಿ ಮಡಕೆ ತೂತು ಮಾಡಿದ ಮಧ್ಯದ ಪ್ರೇತಶಿಲೆಯನ್ನು ಮಾತ್ರ ತರುವ ಕ್ರಮವಿದೆ. ಉತ್ತರದ ಕಲ್ಲನ್ನು ಪರ್ವತಕ್ಕೆ ಎಂದು ಭಾವಿಸಿ **'ಇಮಾಂ ಜೀವೇಭ್ಯ ಪರಿಧಿಂ'** ಮಂತ್ರದಿಂದ ಎಸೆಯುವುದು ಹಾಗೆ ದಕ್ಷಿಣದ ಕಲ್ಲನ್ನು ಚಿತೆಯ ಕಾಷ್ಠ ದೇವತೆಗಳಿಗೆಂದು ಭಾವಿಸಿ **'ಪಿಪ್ಪಲಾದಿಷು'** ಮಂತ್ರದಿಂದ ಚಿತೆಗೆ ಎಸೆಯುವುದು)

ಸೂರ್ಯಂ ಚಕ್ಷುರಿತ್ಯಸ್ಯ ದಮನೋಽಗ್ನಿಸ್ತ್ರಿಷ್ಟುಪ್ । ಸೂರ್ಯಾವಲೋಕನೇ ವಿನಿಯೋಗಃ ॥

**ಓಂ ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ । ಅಪೋ ವಾ ಗಚ್ಛ ಯದಿ ತತ್ರ ತೇ ಹಿತಮೋಷಧೀಷು ಪ್ರತಿ ತಿಷ್ಠಾ ಶರೀರೈಃ ॥**

–ಎಂದು ಸೂರ್ಯನನ್ನು ನೋಡಬೇಕು ಹಾಗೂ ಪ್ರೇತಶಿಲೆಯನ್ನು ಸೂರ್ಯನಿಗೆ ತೋರಿಸಬೇಕು. ಅನಂತರ ಎಲ್ಲರೂ ಒಂದೊಂದು ಕಲ್ಲು ಹಿಡಿದು ಪರ್ವತಕ್ಕೆ '**ಪಿಪ್ಪಲಾದಿಷು**' ಮಂತ್ರದಿಂದ ಹಿಂದೆ ಬಿಸಾಡಿ ಮನೆಗೆ ಬರಬೇಕು.

**ಪಿಪ್ಪಲಾದಿಷು ಯಾ ಸ್ತ್ರೀಣಾಂ ಸ್ವರ್ಗೇ ಲೋಕೇ ಭಯಂಕರೀ ।**
**ಆಹಾರಾರ್ಥಂ ಮಯಾ ದತ್ತಂ ಪಾಷಾಣಮುಪತಿಷ್ಠತು ॥**

ಅನಂತರ ಸ್ವಲ್ಪ ದೂರ ಬಂದು ದರ್ಭೆಯನ್ನು ಇಬ್ಬರು ಆಚೆ ಈಚೆಗೆ ತೋರಣದಂತೆ ಕೈಯಿಂದ ಹಿಡಿದು ಪ್ರೇತಶಿಲೆ ಹಿಡಿದ ಕರ್ತೃ ದರ್ಭೆ ತೋರಣದಡಿಯಿಂದ ಬಗ್ಗಿ ಬರಬೇಕು. ಅನಂತರ ದರ್ಭೆಯನ್ನು ಕತ್ತರಿಸಿ ಎಸೆದು ಬರುವ ದಾರಿಗೆ ಒಂದು ಮುಳ್ಳನ್ನು ಅಡ್ಡ ಹಾಕಿ ಅದನ್ನು ದಾಟಿ ಜಲಾಶಯದ ಬಳಿ ಬಂದು ಮೂರು ಶಿಲೆಗಳನ್ನು ದಕ್ಷಿಣಾಗ್ರವಾಗಿ ಹರಡಿದ ದರ್ಭೆಯ ಮೇಲಿಡಬೇಕು. (ಕೆಲವರಲ್ಲಿ ಕ್ರಿಯಾಕರ್ತೃಗಳು ತುಪ್ಪದ ಹೊಗೆಯನ್ನು ಮಾತ್ರ ಮೂಸಿ ಅನಂತರ ಸ್ನಾನ ಮಾಡುವ ಕ್ರಮವಿದೆ.) ಎಲ್ಲರೂ ಉಟ್ಟ ಬಟ್ಟೆಯಲ್ಲಿ ದಕ್ಷಿಣಾಭಿಮುಖವಾಗಿ ಅನಾಮಿಕ ಬೆರಳಿನಿಂದ ಜಲಾವಲೋಡನ ಮಾಡಬೇಕು.

ಅಪ ನಃ ಶೋಶುಚದಘಮಿತಿ ಆಂಗಿರಸಃ ಕುತ್ಸೋ ಅಗ್ನಿರ್ಗಾಯತ್ರೀ । ಜಲಾವಲೋಡನೇ ವಿನಿಯೋಗಃ ॥

**ಓಮ್ ಅಪ ನಃ ಶೋಶುಚದಘಮಗ್ನೇ ಶುಶುಗ್ಧ್ಯಾ ರಯಿಮ್ । ಅಪ ನಃ ಶೋಶುಚದಘಮ್ ॥**

(ಪುಟಸಂಖ್ಯೆ 107 ಮೃತ್ತಿಕಾಸ್ನಾನಂ ವಿಧಿಯಂತೆ) (ಬಲ) ಕ್ರಿಯಾಕರ್ತೃಗಳು ಮೂರು ಬಾರಿ ಮುಳುಗಿ ಸ್ನಾನ ಮಾಡಿ, ನೀರಿನಿಂದ ಪುಂಡ್ರಧಾರಣೆ ಮಾಡಿ, ಆಚಾರ್ಯರಿಂದ ಪವಿತ್ರ ಪಡೆದು, ಸಂಕಲ್ಪ ಮಾಡಬೇಕು.

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ .......ಗೋತ್ರಸ್ಯ ..........ಶರ್ಮಣಃ ಪ್ರೇತಸ್ಯ ಅಸ್ಮದ್ದೇಹಶುದ್ಧ್ಯರ್ಥಂ ಚ ಪ್ರೇತಶಿಲಯಾ ಸಹ ಮೃತ್ತಿಕಾಸ್ನಾನಂ ಕರಿಷ್ಯೇ ॥** (ಬಲ) **ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

–ಎಂದು ಬ್ರಹ್ಮದಂಡ ಇಟ್ಟು 'ಮಮ ಪಿತುರಂತ್ಯೇಷ್ಟಿಕರ್ಮಾಂತೇ ಮಮ

**ದೇಹಶುದ್ಧ್ಯರ್ಥಂ ಮೃತ್ತಿಕಾಸ್ನಾನಕರ್ತುಮ್ ಅಧಿಕಾರಸಂಪದಸ್ತು ಇತಿ ಭವಂತೋ ಬ್ರುವಂತು ॥' (ಅಧಿಕಾರಸಂಪದಸ್ತು)** ॥ –ಎಂದು ಬ್ರಾಹ್ಮಣರಿಂದ ಅನುಜ್ಞೆ ಪಡೆದು, ಪೂರ್ವಮುಖವಾಗಿ, ಕ್ರಿಯಾಕರ್ತೃಗಳು ಹಾಗೂ ಹೆಂಗುಸರು ಕನಿಷ್ಠಪೂರ್ವಕರಾಗಿ ಮೂರು ಬಾರಿ ಮುಳುಗಿ ಸ್ನಾನಮಾಡಿ ಕರ್ಮಿಗಳು ಮೈಯನ್ನು ತಿಕ್ಕಿಕೊಂಡು ಪುನಃ ಮೂರು ಬಾರಿ ಮುಳುಗಿ ಸ್ನಾನ ಮಾಡಿ, ಆಚಮನ ಮಾಡಿ, ನೀರಿನಿಂದ ಪುಂಡ್ರಧಾರಣೆ ಮಾಡಿ '**ನಮಃ ಕಮಲನಾಭಾಯ** ..... ।' ಮಂತ್ರಗಳಿಂದ ಅರ್ಘ್ಯ ಕೊಟ್ಟು, ತುಳಸೀಮೃತ್ತಿಕೆ, ಧಾತ್ರೀಮೃತ್ತಿಕೆ, ಗೋಮಯವನ್ನು ಹಚ್ಚಿ ಮೂರು ಬಾರಿ ಮುಳುಗಿ ಸ್ನಾನ ಮಾಡಿ (ಎಡ) ಹಾಗೆಯೇ ಪ್ರೇತಶಿಲೆಗೂ ಮೃತ್ತಿಕೆ ಗೋಮಯವನ್ನು ಹಚ್ಚಿ ಪ್ರೇತಶಿಲೆಯನ್ನು ಹಿಡಿದು ದಕ್ಷಿಣಮುಖವಾಗಿ ಮೂರು ಬಾರಿ ಮುಳುಗಿ ಸ್ನಾನ ಮಾಡಿ ಶಿಲೆಯನ್ನು ದರ್ಭೆಯ ಹಾಸಿನ ಮೇಲಿಟ್ಟು (ಬಲ) ಪುನಃ ಪೂರ್ವಮುಖವಾಗಿ ನಾರಾಯಣಸ್ಮರಣೆ ಯೊಂದಿಗೆ ಮೂರು ಬಾರಿ ಮುಳುಗಿ ಸ್ನಾನಮಾಡಿ, ನೀರಿನಿಂದ ಪುಂಡ್ರಧಾರಣ ಮಾಡಿಕೊಂಡು, (ಎಡ) ದಕ್ಷಿಣಮುಖವಾಗಿ ಎಳ್ಳು ಸಹಿತ ದರ್ಭೆ ಹಿಡಿದು ಅಂಜಲಿ ಮುದ್ರೆಯಿಂದ ನೀರು ಎತ್ತಿ,

**ಅಸ್ಮತ್ಪಿತುಃ ........ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ದಾಹಜನಿತ ತೃಷೋಪಶಮನಾರ್ಥಮ್ ಇದಂ ತೇ ತಿಲತೋಯಾಂಜಲಿರುಪತಿಷ್ಠತು ॥**

–ಎಂದು ಬಲಕೈಯ ಪಿತೃತೀರ್ಥದಿಂದ ನೀರಿಗೆ ಬಿಡುವುದು. ಕರ್ಮವಸ್ತ್ರವನ್ನು ಹಿಂಡಿ ಇಲ್ಲವೇ ಹೆಬ್ಬೆರಳಿಗೆ ಸಿಕ್ಕಿಸಿ, ನೀರು ಹಾಕಿ ಪಿತೃತೀರ್ಥದಿಂದ, '**ವಾಸೋದಕ–ಮುಪತಿಷ್ಠತು** ॥' ತಲೆ ಬಗ್ಗಿಸಿ ಬಲಗೈಯಲ್ಲಿ ಜುಟ್ಟು ಹಿಡಿದು ನೀರು ಹಾಕಿ ಪಿತೃ ತೀರ್ಥದಿಂದ, '**ಶಿಖೋದಕ (ಕೇಶೋದಕ)ಮುಪತಿಷ್ಠತು** ॥' –ಎಂದು ಶಿಲೆಯ ಮೇಲೆ ಬಿಟ್ಟು, ಎಳ್ಳಿಗೆ ಹೆಬ್ಬೆರಳಿನ ತುದಿ ಮುಟ್ಟಿಸಿ ನೀರು ಹಿಡಿದು ಪಿತೃತೀರ್ಥದಿಂದ '**ತಿಲೋದಕಮುಪತಿಷ್ಠತು**' ಎಂದು ಶಿಲೆಯ ಮೇಲೆ ಬಿಡಬೇಕು.

(ಬಲ) ಪೂರ್ವಮುಖವಾಗಿ **ಕೇಶವಾದಿ** ನಾಮಗಳಿಂದ **ಜಲಾಂಜಲಿ** ನೀಡಬೇಕು. ಅನಂತರ ಶವವಾಹಕರು, ಬಂಧುಬಾಂಧವರು ಹದಿಮೂರು ಬಾರಿ ಮುಳುಗಿ ಸ್ನಾನ ಮಾಡಿ ಅಧಿಕಾರವಿರುವವರು (ಎಡ) ಅಂಜಲಿಯಿಂದ ನೀರು ಎತ್ತಿ, '....**ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ತಿಲತೋಯಾಂಜಲಿರುಪತಿಷ್ಠತು** ।' ಎಂದು ನೀರಿಗೆ ಬಿಡಬೇಕು. ಈ ತಿಲತೋಯಾಂಜಲಿಯನ್ನು ಅಧಿಕಾರವಿರುವ ಬ್ರಹ್ಮಚಾರಿಯಾಗಿದ್ದರೂ ಮೃತವ್ಯಕ್ತಿಯು ತಾಯಿಯ ತಂದೆತಾಯಿಯಾಗಿದ್ದರೆ, ಗುರು, ವೇದಪಾಠ ಮಾಡಿದ ಆಚಾರ್ಯ ಆಗಿದ್ದರೆ ಕೊಡಬಹುದು. ಹೊರತು, ಬೇರೆ ಯಾರಿಗೂ ಕೊಡಲು ಇಲ್ಲ ಎಂಬ ಕ್ರಮವಿದೆ.

ಸೂರ್ಯಾಸ್ತಕ್ಕಿಂತ ಮೂರು ಘಂಟೆ ಒಳಗೆ ದಹನಕ್ರಿಯಾದಿಗಳು ಮುಗಿದು ಮನೆಗೆ ಬಂದರೆ ಅಂದೇ ನಿತ್ಯವಿಧಿ ಮಾಡಬಹುದು. ಸೂರ್ಯಾಸ್ತದ ಅನಂತರವಾದರೆ ಮರುದಿನ ಮಾಡಬೇಕು. ಅಂದೇ ನಿತ್ಯವಿಧಿ ಪ್ರಾರಂಭಿಸುವುದಾದರೆ (ಪುಟಸಂಖ್ಯೆ 114ರಲ್ಲಿ ತಿಳಿಸಿದಂತೆ)

**ಶಿಲಾಪ್ರತಿಷ್ಠೆ** ಮಾಡಿ ಪ್ರೇತಘಟಸ್ಥಾಪನೆ ಮಾಡಿ, ನಿತ್ಯವಿಧಿ ಮಾಡಿ ಸ್ನಾನ ಮಾಡಿ ಮನೆಗೆ ಬರಬೇಕು. ಒಂದು ವೇಳೆ ಕ್ರಿಯಾಭಾಗವನ್ನು ಮರುದಿನ ಮಾಡುವ ಸಂದರ್ಭದಲ್ಲಿ ಪ್ರೇತಶಿಲೆಯನ್ನು ಹಿಡಿದು 'ನಿವರ್ತಧ್ವಂ' ಮಂತ್ರದಿಂದ ಕನಿಷ್ಠಪೂರ್ವಕರಾಗಿ ಮನೆಗೆ ಬರಬೇಕು.

ನಿ ವರ್ತಧ್ವಮಿತ್ಯಸ್ಯ ಯಾಮಾಯನ ಆಪೋ ಅನುಷ್ಟುಬಾದಿ ಛಂದಾಂಸಿ । ಜಪೇ ವಿನಿಯೋಗಃ ॥

**ಓಂ ನಿ ವರ್ತಧ್ವಂ ಮಾನು ಗಾತಾಽಸ್ಮಾನ್ತ್ಸಿಷಕ್ತ ರೇವತೀಃ । ಅಗ್ನೀ-ಷೋಮಾ ಪುನರ್ವಸೂ ಅಸ್ಮೇ ಧಾರಯತಂ ರಯಿಮ್ ॥ ೧ ॥ ಪುನರೇನಾ ನಿ ವರ್ತಯ ಪುನರೇನಾ ನ್ಯಾ ಕುರು । ಇಂದ್ರ ಏಣಾ ನಿ ಯಚ್ಛತ್ವಗ್ನಿರೇನಾ ಉಪಾಜತು ॥ ೨ ॥ ಪುನರೇತಾ ನಿ ವರ್ತಂತಾಮಸ್ಮಿನ್ಪುಷ್ಯಂತು ಗೋಪತೌ । ಇಹೈವಾಗ್ನೇ ನಿ ಧಾರಯೇಹ ತಿಷ್ಠತು ಯಾ ರಯಿಃ ॥ ೩ ॥ ಯನ್ನಿಯಾನಂ ನ್ಯಯನಂ ಸಂಜ್ಞಾನಂ ಯತ್ಪರಾಯಣಮ್ । ಆವರ್ತನಂ ನಿವರ್ತನಂ ಯೋ ಗೋಪಾ ಅಪಿ ತಂ ಹುವೇ ॥ ೪ ॥ ಯ ಉದಾನಡ್ವ್ಯಯನಂ ಯ ಉದಾನಟ್ಪರಾಯಣಮ್ । ಆವರ್ತನಂ ನಿವರ್ತನಮಪಿ ಗೋಪಾ ನಿ ವರ್ತತಾಮ್ ॥ ೫ ॥ ಆ ನಿವರ್ತ ನಿ ವರ್ತಯ ಪುನರ್ನ ಇಂದ್ರ ಗಾ ದೇಹಿ । ಜೀವಾಭಿರ್ಭುನಜಾಮಹೈ ॥ ೬ ॥ ಪರಿ ವೋ ವಿಶ್ವತೋ ದಧ ಊರ್ಜಾ ಘೃತೇನ ಪಯಸಾ । ಯೇ ದೇವಾಃ ಕೇ ಚ ಯಜ್ಞಿಯಾಸ್ತೇ ರಯ್ಯಾ ಸಂ ಸೃಜಂತು ನಃ ॥ ೭ ॥ ಆ ನಿವರ್ತನ ವರ್ತಯ ನಿ ನಿವರ್ತನ ವರ್ತಯ । ಭೂಮ್ಯಾಶ್ಚತಸ್ರಃ ಪ್ರದಿಶಸ್ತಾಭ್ಯ ಏನಾ ನಿ ವರ್ತಯ ॥ ೮ ॥ ಭದ್ರಂ ನೋ ಅಪಿ ವಾತಯ ಮನಃ । ಶಾಂತಿಃ ಶಾಂತಿಃ ಶಾಂತಿಃ ॥ ಸರ್ವಾರಿಷ್ಟ ಶಾಂತಿರಸ್ತು ॥**

ಪ್ರೇತಶಿಲೆಗಳನ್ನು ಕ್ಷೀರವೃಕ್ಷಕ್ಕೆ ಕಟ್ಟಿ ಇಲ್ಲವೇ ಮನೆಯ ಹೊರಗೆ ಧಾರೆನೀರು ಬೀಳುವಲ್ಲಿ ಜೋಪಾನವಾಗಿ ಇಡಬೇಕು. ಪವಿತ್ರ ತೆಗೆದು ಆಚಮನ ಮಾಡಿ ಜಲಪಾತ್ರೆಯ ನೀರನ್ನು ಚೆಲ್ಲಿ ಪವಿತ್ರವನ್ನೂ ಕರ್ಮವಸ್ತ್ರವನ್ನೂ (ಕುತ್ತಿಗೆ ಬಟ್ಟೆ) ಜಲಪಾತ್ರೆಯ ಒಳಗಿಟ್ಟು ತಮ್ಮತಮ್ಮ ಜಲಪಾತ್ರೆ ಹಾಗೂ ಆಚಮನಪಾತ್ರೆ ಹಾಗೂ ಸೌಟು ಬದಲಾಗದಂತೆ ಜೋಪಾನ

ಮಾಡಿಡಬೇಕು. ತಲೆ ಒರಸಿಕೊಂಡು, ಅನಂತರ ತಮ್ಮತಮ್ಮ ಉಟ್ಟ ಬಟ್ಟೆಯನ್ನು ಬಟ್ಟೆಯ ಅಂಚು ಉತ್ತರಕ್ಕೆ ಬರುವಂತೆ ಒಣಗಲು ಹಾಕಬೇಕು.

ನಿಂಬಪತ್ರ (ಕಹಿಬೇವಿನ) ಪತ್ರವನ್ನು ತಿನ್ನಬೇಕು. ತುಪ್ಪದ ಹೊಗೆಯನ್ನು ಮೂಗಿನಿಂದ ಮೂಸಿ ಗೋಮಯ, ಅಕ್ಕಿ, ಎಳ್ಳು, ಗರಿಕೆ, ಎತ್ತು, ದನ, ಸಾಸಿವೆ –ಇವುಗಳನ್ನು ಸ್ಪರ್ಶಿಸಬೇಕು. ಅನಂತರ ಮನೆಯೊಳಗಿದ್ದ ಅಡುಗೆ ಪದಾರ್ಥಗಳನ್ನು ಹೊರಗೆ ಚೆಲ್ಲಿ ತೆಂಗಿನಕಾಯಿ ಹಾಲು ಮಿಶ್ರಿತ ಗಂಜಿಯನ್ನು ತಯಾರಿಸಿ ಮನೆಯವರು ಸೇವಿಸಬೇಕು. ಹಗಲು ದಹನ ಮಾಡಿದರೆ ನಕ್ಷತ್ರದರ್ಶನದ ವರೆಗೆ, ರಾತ್ರಿ ದಹನ ಮಾಡಿದರೆ ಸೂರ್ಯೋದಯದ ವರೆಗೆ ದಹನಕ್ರಿಯೆಯಲ್ಲಿ ಭಾಗವಹಿಸಿದವರು ಅಲ್ಲಿಯೇ ವಾಸ ಮಾಡಬೇಕೆಂಬ ಶಾಸ್ತ್ರವಚನವಿದ್ದರೂ ಇಂದಿನ ಪರಿಸ್ಥಿತಿಗನುಗುಣವಾಗಿ ದಹನಕ್ರಿಯೆಯಲ್ಲಿ ಭಾಗವಹಿಸಿದವರಿಗೆ ಎಳನೀರು ಕೊಟ್ಟು ಹನ್ನೊಂದನೆಯ ದಿನ ಹಾಗೂ ಹನ್ನೆರಡನೆಯ ದಿನ ನಡೆಯುವ ಉತ್ತರಕ್ರಿಯಾದಿಗಳಿಗೆ ಆಮಂತ್ರಣಪೂರ್ವಕ ಮಂಗಳಮಂತ್ರಾಕ್ಷತೆ ಮಾಡಿ ಕೊಡಿಸಬೇಕಾಗಿ ಅವರಲ್ಲಿ ಪ್ರಾರ್ಥಿಸಬೇಕು.ಇವರೆಲ್ಲ ತಮ್ಮತಮ್ಮ ಮನೆಗೆ ಹೋಗಿ ಪುನಃ ಸ್ನಾನ ಮಾಡಿ, ತುಪ್ಪದ ಹೊಗೆಯನ್ನು ಮೂಗಿನಿಂದ ಮೂಸಿ, ಮರುದಿನ ಉಪವೀತಧಾರಣೆ ಮಾಡುವುದು ಉತ್ತಮಪಕ್ಷ. ಕ್ರಿಯಾಕರ್ತೃಗಳು ಉಪವೀತಧಾರಣೆ ಮಾಡಲಿಕ್ಕಿಲ್ಲ.

ವಿವಾಹಿತ ಅಕ್ಕತಂಗಿಯರು ದಹನದ ಅನಂತರ ತಾಯಿಯ ಮನೆಯಲ್ಲಿ ಆಹಾರಸೇವನೆ ಮಾಡಿದ್ದಲ್ಲಿ ಹತ್ತು ದಿನದ ಆಶೌಚ ಇದೆ ಹಾಗೂ ಗಂಡನ ಮನೆಗೆ ಹೋದರೂ ಹತ್ತು ದಿನದ ಅಶೌಚ ಆಚರಣೆ ಮಾಡಬೇಕು. ಒಂದು ವೇಳೆ ತಾಯಿಯ ಮನೆಯಲ್ಲಿ ಆಹಾರ ಸೇವನೆ ಮಾಡದೇ ತಮ್ಮ ಗಂಡನ ಮನೆಗೆ ಹೋದರೆ ಅವರಿಗೆ ಮೂರು ದಿನದ ಆಶೌಚ ಮಾತ್ರ. ಅನಂತರ ಅವರು ನಿತ್ಯ ಬಂದು ನಿತ್ಯವಿಧಿಯಲ್ಲಿ ಪಾಲ್ಗೊಳ್ಳಬಹುದು.

ಕ್ರಿಯಾಕರ್ತೃಗಳು ಹನ್ನೊಂದನೆಯ ದಿನದವರೆಗೆ ಹಾಲು ಮಿಶ್ರಿತ ಗಂಜಿಯನ್ನೇ ಊಟಮಾಡಬೇಕು. ಬೆಳಗ್ಗಿನ ಉಪಾಹಾರ ಹಾಗೂ ರಾತ್ರಿಯ ಆಹಾರ ಸೇವನೆ ಇಲ್ಲ. ಅಶಕ್ತನಾದಲ್ಲಿ ಬೇಕಾದರೆ ಉಪಾಹಾರ ಸ್ವೀಕರಿಸಬಹುದು.

ಬ್ರಾಹ್ಮಣರ ಮನೆ ಹತ್ತಿರವಿದ್ದಲ್ಲಿ ಹತ್ತು ದಿನಗಳವರೆಗೆ ನಿತ್ಯವಿಧಿಗೆ ತೀರ್ಥದ ವ್ಯವಸ್ಥೆ ಅವಶ್ಯವಾಗಿ ಮಾಡಬೇಕು. ಹಾಗೆ ಆಗದೆ ಇದ್ದಲ್ಲಿ ಪುರೋಹಿತರಿಂದಲಾದರೂ ತೀರ್ಥವನ್ನು ಅವಶ್ಯವಾಗಿ ತರಿಸಿಕೊಳ್ಳತಕ್ಕದ್ದು.

ಮರುದಿನ ದಹನಪ್ರದೇಶಕ್ಕೆ ಹೋಗಿ ಶವದ ಅವಯವ ಸರಿಯಾಗಿ ದಹನವಾಗಿದೆಯಾ ಎಂದು ಪರೀಕ್ಷಿಸಿ, ಒಂದು ವೇಳೆ ಅಜಾಗ್ರತೆಯಿಂದ ಶವದ ಅವಯವ ಕಾಷ್ಠದಿಂದ ಜಾರಿ ಬಿದ್ದು ದಹನವಾಗದೇ ಇದ್ದರೆ, ದಹನಸಮಯದಲ್ಲಿ ತೆಗೆದಿಟ್ಟ ಬಿದಿರಿನ ಕೋಲಿನಿಂದ ಸರಿಮಾಡಿ ಸೂಟೆ(ತೆಂಗಿನ ಸೋಗೆಯ ಕಂತೆ)ಯನ್ನು ಹೊತ್ತಿಸಿ ಸರಿಯಾಗಿ ದಹನವಾಗುವಂತೆ ಮಾಡಬೇಕು. ಆತ್ಮಹತ್ಯೆ ಮಾಡಿಕೊಂಡವರಿಗೆ ಹಾಗೂ ಚಂಡಾಲರಿಂದ ಪ್ರಾಣಿಗಳು ಹಾಗೂ ಕ್ರೂರಮೃಗಗಳಿಂದ ಕೊಲ್ಲಲ್ಪಟ್ಟರೂ ಮರುದಿನ ಪುನರ್ದಹನ ಮಾಡಬೇಕು.

# ನಿತ್ಯವಿಧಿಷು ಸಮಾನತಂತ್ರಪಕ್ಷೇ ನಿಯಮಾಃ

ದಹನ ಮಾಡಿದ ದಿನದಿಂದಲೇ ಕ್ರಿಯಾರಂಭ ಮಾಡಬೇಕಾದುದು ಕರ್ತವ್ಯವಾಗಿದೆ. ಅನನುಕೂಲವಿದ್ದರೆ ಮಾತ್ರ ೩, ೫, ೭ನೆಯ ದಿನಗಳಲ್ಲಿ ಕ್ರಿಯೆಯನ್ನು ಪ್ರಾರಂಭಿಸಬೇಕು. ೯ನೆಯ ದಿನ ಪ್ರಾರಂಭಿಸುವುದು ತುಂಬಾ ಗೌಣಪಕ್ಷ, ಕನಿಷ್ಠ ೭ನೆಯ ದಿನವಾದರೂ ಆರಂಭಿಸಿದರೆ ಈ ದಿನಗಳಲ್ಲಿಯಾದರೂ ಸ್ನಾನ, ತಿಲಾಂಜಲಿ, ಪಿಂಡಪ್ರದಾನಾದಿಗಳನ್ನು ಮಾಡಿದಂತೆ ಆಗುತ್ತದೆ. ಕೇವಲ ೯ನೆಯ ದಿನ ಪ್ರಾರಂಭ ಮಾಡುವುದು ಕುಟುಂಬವಿಲ್ಲದೆ ಅನಾಥಸ್ಥಿತಿಯಲ್ಲಿ ಮೃತರಾದವರ ಬಗ್ಗೆ ಮಾಡಿದಂತೆ ಆಗುತ್ತದೆ. ಇದು ಯೋಗ್ಯವಲ್ಲ.

ಕರ್ಮಾಂಗವನ್ನು ಏಳು ಇಲ್ಲವೇ ಒಂಬತ್ತನೇ ದಿನ ಮಾಡುವ ಸಂದರ್ಭದಲ್ಲಿ ಮರಣಹೊಂದಿ ಏಳನೇ (ಒಂಬತ್ತನೇ) ದಿನದವರೆಗೆ ಕರ್ಮಿಯು ಬೆಳಗ್ಗೆ ಜಲಾಶಯದ ಬಳಿಗೆ ಹೋಗಿ ಕರ್ಮವಸ್ತ್ರ ಧರಿಸಿ (ಪುಟಸಂಖ್ಯೆ 107) ಸಂಕಲ್ಪಪೂರ್ವಕ ಮೃತ್ತಿಕಾ ಸ್ನಾನಮಾಡಿ ಗೋತ್ರ ನಾಮೋಚ್ಚಾರಣಪೂರ್ವಕವಾಗಿ ತಿಲತೋಯಾಂಜಲಿಯನ್ನು ನೀಡಬೇಕು.

ಬಳಿಕ ಏಳನೇ (ಒಂಬತ್ತನೇ) ದಿನ ಮೃತ್ತಿಕಾಸ್ನಾನಪೂರ್ವಕ ತಿಲತೋಯಾಂಜಲಿ ನೀಡಿದ ಬಳಿಕ (ಪುಟಸಂಖ್ಯೆ 114) ಶಿಲಾಪ್ರತಿಷ್ಠೆ ಮಾಡಿ ಒಂಬತ್ತು ದಿನಗಳ ಅವಯವನಿಷ್ಪತ್ತಿಗಳ ಉಚ್ಚಾರಣೆಯೊಂದಿಗೆ ಸಂಕಲ್ಪ ಮಾಡಿ ವೇದಿಕೆಯಲ್ಲಿ ಮೊದಲ ದಿನದ ವಾಸೋದಕಾದಿಗಳನ್ನು ಮೂರರ ಹಾಗೆ ನೀಡಿ, ಪ್ರೇತಘಟಸ್ಥಾಪನೆ ಮಾಡಿ ಘಟದಲ್ಲೂ ವಾಸೋದಕಾದಿಗಳನ್ನು ಮೂರರ ಹಾಗೆ ನೀಡಿ ಮೃತ್ತಿಕಾಸ್ನಾನ ಮಾಡಿ ಹೀಗೆ ಉಳಿದ ೬ (೮) ದಿನಗಳ ವಾಸೋದಕಾದಿಗಳನ್ನು ಪ್ರತಿ ಬಾರಿ ಮೃತ್ತಿಕಾಸ್ನಾನ ಪೂರ್ವಕವಾಗಿ ನೀಡಿ ಬಳಿಕ ಏಳನೆಯ ದಿನವಾದಲ್ಲಿ ಹದಿಮೂರು (೯ನೆಯ ದಿನವಾದಲ್ಲಿ ಹದಿನಾರು) ತ್ರಿಕೋನಮಂಡಲ ಮಾಡಿ ಒಂದು ಎಸಳಿನ ಕೂರ್ಚಬ್ರಾಹ್ಮಣಾರಾಧನಪೂರ್ವಕ ನಗ್ನಪ್ರಚ್ಛಾದನಶ್ರಾದ್ಧ, ಪಾಥೇಯ ಶ್ರಾದ್ಧ, ೧, ೩, ೫, ೭, ೯ ದಿನಗಳ ವಿಷಮಶ್ರಾದ್ಧ ಹಾಗೂ ಅವಯವನಿಷ್ಪತ್ತಿ ಉಚ್ಚಾರಣಪೂರ್ವಕ ನಿತ್ಯವಿಧಿಗಳ ಪಿಂಡಪ್ರದಾನ ಮಾಡಿ ಕೃಷ್ಣಾರ್ಪಣ ಬಿಟ್ಟು ಮರುದಿನ ಕರ್ಮಾಂಗವನ್ನು ಯಥಾವಿಧಿ ಮುಂದುವರಿಸಬೇಕು.

# ಅಸ್ಥಿದಹನವಿಧಿಃ

ಅಮಂತ್ರಕವಾಗಿ ಪಿತ್ರಾದಿಗಳನ್ನು ದಹಿಸಲ್ಪಟ್ಟಿದ್ದರೆ, ವಿಧಿವತ್ತಾಗಿ ಸಂಸ್ಕಾರ ಮಾಡಿದ್ದರೂ ಹತ್ತು ದಿನಗಳೊಳಗೆ ಅಸ್ಥಿಸಂಚಯನ ಮಾಡದಿದ್ದರೆ, **ಅಸ್ಥಿದಹನವಿಧಿಯನ್ನು** ಮಾಡಬೇಕು. ಕರ್ತೃವು ಶ್ಮಶಾನಕ್ಕೆ ಹೋಗಿ ಬೂದಿಗೆ ಸ್ವಲ್ಪ ನೀರು ಪ್ರೋಕ್ಷಣೆ ಮಾಡಿ ಪ್ರೇತದ ತಲೆಯ ಭಾಗದ ಒಂದು ಎಲುಬನ್ನು, ಎದೆಯ ಭಾಗದ ನಾಲ್ಕು ಎಲುಬು, ಹೊಟ್ಟೆಯ ಭಾಗದ ನಾಲ್ಕು ಎಲುಬು, ಎರಡು ತೊಡೆಗಳ ಎಂಟು ಎಲುಬು, ಎರಡು ಕೈಗಳ ಎಂಟು ಎಲುಬು, ಹಾಗೆಯೇ ಎರಡು ಪಾದಗಳ ಎಂಟು ಎಲುಬು –ಹೀಗೆ ಒಟ್ಟು ಮೂವತ್ತಮೂರು ಎಲುಬುಗಳನ್ನು ಸಂಗ್ರಹಿಸಿ ನೀರಿನಿಂದ ತೊಳೆದು ತುಪ್ಪ ಸವರಿ

ಕೃಷ್ಣಾಜಿನದ ಕಂಠಭಾಗವು ದಕ್ಷಿಣಕ್ಕೆ ಬರುವಂತೆ ಬಿಡಿಸಿ ಅದರಲ್ಲಿ ಎಲುಬುಗಳನ್ನು ಮುಂದಿನ ಮಂತ್ರ ಪಠಿಸುತ್ತಾ ಮನುಷ್ಯಾಕಾರವಾಗಿ ಮಾಡಬೇಕು.

ಓಮ್ ಇಂದ್ರೋ ದಧೀಚೋ ಅಸ್ಥಭಿರ್ವೃತ್ರಾಣ್ಯಪ್ರತಿಷ್ಕುತಃ। ಜಘಾನ ನವತೀರ್ನವ ॥ ೧ ॥ ಇಚ್ಛನ್ನಶ್ವಸ್ಯ ಯಚ್ಛಿರಃ ಪರ್ವತೇಷ್ವಪಶ್ರಿತಮ್। ತದ್ವಿದಚ್ಛರ್ಯಣಾವತಿ ॥ ೨ ॥ ಅತ್ರಾಹ ಗೋರಮನ್ವತ ನಾಮ ತ್ವಷ್ಟುರ-ಪೀಚ್ಯಮ್। ಇತ್ಥಾ ಚಂದ್ರಮಸೋ ಗೃಹೇ ॥ ೩ ॥

ಓಮ್ ಇಂದ್ರಮಿದ್ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ। ಇಂದ್ರಂ ವಾಣೀರನೂಷತ ॥ ಇಂದ್ರ ಇದ್ಧರ್ಯೋಃ ಸಚಾ ಸಂಮಿಶ್ಲ ಆ ವಚೋಯುಜಾ। ಇಂದ್ರೋ ವಜ್ರೀ ಹಿರಣ್ಯಯಃ ॥ ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ದಿವಿ। ವಿ ಗೋಭಿರದ್ರಿಮೈರಯತ್ ॥ ಇಂದ್ರ ವಾಜೇಷು ನೋಽವ ಸಹಸ್ರಪ್ರಧನೇಷು ಚ। ಉಗ್ರ ಉಗ್ರಾಭಿರೂತಿಭಿಃ ॥

ಓಂ ತಮಿಂದ್ರಂ ವಾಜಯಾಮಸಿ ಮಹೇ ವೃತ್ರಾಯ ಹಂತವೇ। ಸ ವೃಷಾ ವೃಷಭೋ ಭುವತ್ ॥ ಇಂದ್ರಃ ಸ ದಾಮನೇ ಕೃತ ಓಜಿಷ್ಠಃ ಸ ಮದೇ ಹಿತಃ। ದ್ಯುಮ್ನೀ ಶ್ಲೋಕೀ ಸ ಸೋಮ್ಯಃ ॥ ಗಿರಾ ವಜ್ರೋ ನ ಸಂಭೃತಃ ಸಬಲೋ ಅನಪಚ್ಯುತಃ। ವವಕ್ಷ ಋಷ್ವೋ ಅಸ್ತೃತಃ ॥

ಓಂ ತಯಾ ದೇವತಯಾಂಗಿರಸ್ವದ್ಧ್ರುವಾಸೀದ ॥ –ಎಂಬ ಮಂತ್ರದಿಂದ ಆಯಾ ದೇವತೆಗಳಿಂದ ಕೂಡಿರುವುದಾಗಿ ತಿಳಿದು ಅನಂತರ ಸೂದ ದೋಹಸ (ಪ್ರಾಣಗಳು) ಸಂಸ್ಕಾರವನ್ನು ಮಾಡಬೇಕು.

ಓಂ ತಾ ಅಸ್ಯ ಸೂದದೋಹಸಃ ಸೋಮಂ ಶ್ರೀಣಂತಿ ಪೃಶ್ನಯಃ। ಜನ್ಮನ್ದೇವಾನಾಂ ವಿಶಸ್ತ್ರಿಷ್ವಾ ರೋಚನೇ ದಿವಃ ॥

–ಎಂದು ಪ್ರಾಣಗಳನ್ನು ಕೂಡಿಸಿ, ಕರ್ತೃವು ಸ್ನಾನಮಾಡಿ ಗೋಪೀಚಂದನ ಧರಿಸಿ ಆಚಮನ ಮಾಡಿ ಸಂಕಲ್ಪ ಮಾಡಬೇಕು.

**ಅದ್ಯ ಪೂರ್ವೋಚ್ಚರಿತೈವಂಗುಣ.... ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ .....ಗೋತ್ರಸ್ಯ ......ಶರ್ಮಣಃ ....ಪ್ರೇತಸ್ಯ ಪ್ರೇತತ್ವ ವಿಮೋಚನದ್ವಾರಾ ಪಿತೃಲೋಕಾವಾಪ್ತ್ಯರ್ಥಮ್ ಅಸ್ಥಿಸಂಸ್ಕಾರವಿಧಿನಾ ಪೈತೃಮೇಧಿಕಂ ಕರ್ಮ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

–ಎಂದು ಸಂಕಲ್ಪಿಸಿ ಬ್ರಹ್ಮದಂಡ ಇಟ್ಟು **ಅಸ್ಥಿಸಂಸ್ಕಾರವಿಧಿಕರ್ತುಮ್ ಅಧಿಕಾರ–ಸಂಪದಸ್ತ್ವಿತಿ ಭವಂತೋ ಬ್ರುವಂತು ॥ (ಅಧಿಕಾರಸಂಪದಸ್ತು)** ಎಂದು ಪ್ರತಿವಚನ ಪಡೆದುಕೊಳ್ಳಬೇಕು. ಮೃತವ್ಯಕ್ತಿಯು ಯಾವ ದಿಕ್ಕಿನಲ್ಲಿ ಸತ್ತಿದ್ದಾನೋ ಆ ದಿಕ್ಕನ್ನು ನೋಡುತ್ತಾ '**ಯಸ್ಯಾಗ್ನಯೋ.... ।**' (ಪುಟಸಂಖ್ಯೆ 66) ಎಂಬ ಮಂತ್ರದಿಂದ ಪ್ರೇತವನ್ನು ಆವಾಹಿಸಿ ಒಂದು ಬಿದಿರನ್ನು ಸಿಗಿದು ಒಂದರಲ್ಲಿ ಮನುಷ್ಯಾಕಾರವಾಗಿ ಮಾಡಿಟ್ಟ ಕೃಷ್ಣಾಜಿನವನ್ನು ಬಿದಿರಿನ ಮೇಲಿಟ್ಟು ಮತ್ತೊಂದು ಬಿದಿರಿನಿಂದ ಮುಚ್ಚಿ ಔಪಾಸನಾಗ್ನಿಯನ್ನು ಪ್ರತಿಷ್ಠಾಪಿಸಿ ಕರ್ಣಸೂಕ್ತಜಪದಿಂದ ಹಿಡಿದು ಮುಂದಿನ ಎಲ್ಲಾ ಪಿತೃಮೇಧಿಕವನ್ನು ಮಾಡಬೇಕು. ಸಂಕಲ್ಪದಲ್ಲಿ '**ಅಸ್ಥಿಮಯ ಶರೀರಂ ಹವಿಃ**' ಸೇರಿಸಿಕೊಂಡು ದಹನಾದಿಗಳನ್ನು ಕ್ರಮಪ್ರಕಾರವಾಗಿ ಮಾಡಬೇಕು.

## ಪಾಲಾಶವಿಧಿಃ

1. ತೆಂಗಿನಕಾಯಿ
2. ಬಾಳೆಲೆ
3. ಬಾಳೆಕಾಯಿ
4. ಕವಡೆ
5. ಬಳೆ
6. ಶಿಲೆ
7. ಮಾಪಿನಹಣ್ಣು
8. ಬದನೆ
9. ಬೆಳ್ಳುಳ್ಳಿ
10. ಲಿಂಬೆ
11. ದಾಳಿಂಬೆ
12. ತಿಲಪುಷ್ಪ




ದ
ಪೂ ಪ
ಉ

ಮೃತವ್ಯಕ್ತಿಯ ಅಸ್ಥಿ ದೊರಕದ ಸಂದರ್ಭದಲ್ಲಿ '**ಪಾಲಾಶವಿಧಿ**'ಯನ್ನು ಮಾಡಿ

ಔರ್ಧ್ವದೇಹಿಕಕರ್ಮ ಮಾಡಬೇಕು. ಇಲ್ಲಿ ದಹನದ ಅನಂತರ ಶೌಚಾಚರಣೆ ಪ್ರಾರಂಭಿಸ ಬೇಕು. ಮೃತನ ಮರಣದಿನ ತಿಳಿಯದಿದ್ದರೆ ಮೃತವಾರ್ತೆಯನ್ನು ಕೇಳಿದ ದಿನವೇ ಮುಂದಿನ ಸಾಂವತ್ಸರಿಕಶ್ರಾದ್ಧದ ದಿನವಾಗುವುದು.

ಪೂರ್ವಮುಖವಾಗಿ ಕುಳಿತು, ಆಚಮನ ಮಾಡಿ, ಪವಿತ್ರ ಧರಿಸಿ,

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ........ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮ ಲೋಕಾವಾಪ್ತ್ಯರ್ಥಮ್ ಅನ್ಯದೇಶಸ್ಥಮರಣೇ ಪ್ರೇತಸ್ಯ ಮಂತ್ರಾಗ್ನಿರಹಿತಸ್ಯ ಅಸ್ಥಿರಹಿತಾಶ್ಮರಹಿತ ಉತ್ತರೀಯರಹಿತನಿಮಿತ್ತಮ್ ಔರ್ಧ್ವದೇಹಿಕಕರ್ಮಾಧಿ-ಕಾರಾರ್ಥಂ** (ಬಲ) **ಪಾಲಾಶವಿಧಿಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

–ಎಂದು ಬ್ರಹ್ಮದಂಡ ಇಟ್ಟು, **ಪಾಲಾಶವಿಧಿಂ ಕರ್ತುಮ್ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ॥ (ಅಧಿಕಾರಸಂಪದಸ್ತು)** ಎಂದು ಪ್ರತಿವಚನವನ್ನು ಪಡೆದು, ಗೋಧಿಹಿಟ್ಟಿನಿಂದ ಮನುಷ್ಯಾಕಾರದ ಗೊಂಬೆಯನ್ನು ಮಾಡಿಟ್ಟುಕೊಂಡು, ನೆಲದ ಮೇಲೆ ಗೆರಸೆ ಇಟ್ಟು ಅದರ ಮೇಲೆ ಕೃಷ್ಣಾಜಿನದ ತಲೆಯ ಭಾಗ ದಕ್ಷಿಣಕ್ಕೆ ಬರುವಂತೆ ಹಾಕಿ ಅದರ ಮೇಲೆ ಉಣ್ಣೆಯ ಹಗ್ಗವನ್ನು ಎರಡು ಅಡಿಯಷ್ಟು ಮೂರು ತುಂಡು ಮಾಡಿ ಕೃಷ್ಣಾಜಿನದ ಮೇಲೆ ಗೊಂಬೆಯ ಶಿರಸ್ಸು ಹೊಟ್ಟೆ ಹಾಗೂ ಕಾಲಿನ ಸ್ಥಾನಗಳು ಬರುವಲ್ಲಿ ಉಣ್ಣೆಯ ನೂಲನ್ನು ಪೂರ್ವಾಗ್ರವಾಗಿ ಹಾಕಿ, ಅದರ ಮೇಲೆ ಬಿಳಿಬಟ್ಟೆಯನ್ನು ಉತ್ತರದಿಂದ ದಕ್ಷಿಣಕ್ಕೆ (ಕಾಲಿನ ಸ್ಥಾನದಿಂದ ತಲೆಯ ಸ್ಥಾನದ ವರೆಗೆ) ಹಾಕಿ ಅದರ ಮೇಲೆ ಗೊಂಬೆಯ ತಲೆ ದಕ್ಷಿಣಕ್ಕೆ ಬರುವಂತೆ ಮಾಡಿ ಇಡಬೇಕು.

ಶಿರಸ್ಸಿನಲ್ಲಿ ನಲುವತ್ತು ಪಾಲಾಶಪತ್ರಗಳು (ಪಾಲಾಶಪತ್ರಗಳು ಸಿಗದ ಸಮಯದಲ್ಲಿ ಪಾಲಾಶಸಮಿಧೆ ಇಲ್ಲವೇ ದರ್ಭೆಯನ್ನು ಇಡಬಹುದು), ಕುತ್ತಿಗೆಯ ಬಳಿ ಹತ್ತು, ಬಾಹುಗಳೆರಡರಲ್ಲಿ ಪ್ರತ್ಯೇಕವಾಗಿ ತಲಾ ಐವತ್ತು, ಕೈಬೆರಳುಗಳಲ್ಲಿ ಹತ್ತು, ಹೊಟ್ಟೆ ಭಾಗದಲ್ಲಿ ಮೂವತ್ತು, ಜಠರದಲ್ಲಿ ಇಪ್ಪತ್ತು, ಶಿಶ್ನದಲ್ಲಿ ನಾಲ್ಕು, ಅಂಡದಲ್ಲಿ ೩–೩ರ ಹಾಗೆ (ಒಟ್ಟು ಆರು), ತೊಡೆಗಳೆರಡರಲ್ಲಿ ಪ್ರತ್ಯೇಕವಾಗಿ ತಲಾ ಐವತ್ತು ಹಾಗೂ ಮೊಣಕಾಲಿನಿಂದ ಪಾದದವರೆಗೆ ತಲಾ ಮೂವತ್ತು (ಒಟ್ಟು ಅರವತ್ತು), ಪಾದದ ಬೆರಳುಗಳಲ್ಲಿ ಹತ್ತು –ಹೀಗೆ ಒಟ್ಟು ಮುನ್ನೂರ ಅರುವತ್ತು ಪಾಲಾಶಪತ್ರಗಳಿಂದ ಶರೀರ ಮಾಡಬೇಕು.

ಅನಂತರ ಗೊಂಬೆಯ ನೆತ್ತಿಯ ಭಾಗದಲ್ಲಿ ಬಾಳೆ ಹಣ್ಣು, ತಲೆಭಾಗದಲ್ಲಿ ತೆಂಗಿನಕಾಯಿ, ಹಣೆಯಲ್ಲಿ ಬಾಳೆಎಲೆ, ಹಲ್ಲಿಗೆ ದಾಳಿಂಬೆಯ ಬೀಜ, ಕಿವಿಗೆ ಬಳೆ, ಕಣ್ಣಿಗೆ ಕವಡೆ, ಮೂಗಿಗೆ ಎಳ್ಳುಗಿಡದ ಹೂ, ಹೊಕ್ಕುಳಿನಲ್ಲಿ ಮಾವಿನಹಣ್ಣು, ಸ್ತನಗಳೆರಡರಲ್ಲಿ ಲಿಂಬೆ, ಮನಸ್ಸಿನ ಸ್ಥಾನದಲ್ಲಿ ಶಿಲೆಯನ್ನು, ಪಿತ್ತಕೋಶದ ಸ್ಥಾನದಲ್ಲಿ ಸ್ವರ್ಣ ಇಲ್ಲವೇ ಹಿತ್ತಾಳೆ, ಕಫದ ಸ್ಥಾನದಲ್ಲಿ ಸಮುದ್ರದ ನೀರಿನ ನೊರೆ, ರಕ್ತಕ್ಕೆ ಜೇನುತುಪ್ಪ, ಮಲಕ್ಕೆ ಗೋಮಯ, ಮೂತ್ರಕ್ಕೆ ಗೋಮೂತ್ರ, ರೇತಸ್ಸಿಗೆ ಪಾದರಸ, ವೃಷಣಕ್ಕೆ ಎರಡು ಬದನೆ, ಶಿಶ್ನಕ್ಕೆ

**ಬೆಳ್ಳುಳ್ಳಿ**, ಕೂದಲಿಗೆ ಹಂದಿರೋಮ, ರೋಮಕ್ಕೆ ಉಣ್ಣೆಬಟ್ಟೆ, ಮಾಂಸಸ್ಥಾನದಲ್ಲಿ ಗೋಧಿಯ ಅಥವಾ ಉದ್ದಿನ ಹಿಟ್ಟು ಇಲ್ಲವೇ ಅಕ್ಕಿಹಿಟ್ಟು, ಇದರಿಂದ ಲೇಪನ ಮಾಡಬೇಕು.

ಅನಂತರ ಪುಣ್ಯಾಹ ಮಾಡಿ, ಅಗ್ನಿಪ್ರತಿಷ್ಠೆ ಮಾಡಿ, ಪುರುಷಸೂಕ್ತದಿಂದ ಹೋಮಿಸಿ, **'ಇಂದ್ರಂ ದಧೀಚಿ..... ರೋಚನೇ ದಿವಃ ।'** (ಪುಟಸಂಖ್ಯೆ 103) ಎಂದು ಪ್ರಾಣಗಳನ್ನು ಕೂಡಿಸಿ, ಪ್ರತಿಕೃತಿಯ ಮೇಲೆ ಯಜ್ಞೋಪವೀತ ತೊಡಿಸಿ, ಹೋಮದ ಸಂಪಾತವನ್ನು ಹಚ್ಚಿ ಮುಟ್ಟಿಕೊಂಡು ಪುರುಷಸೂಕ್ತ ಜಪಿಸಿ, ಪಂಚಗವ್ಯ, ಪಂಚಾಮೃತದಿಂದ ಪ್ರೋಕ್ಷಿಸಿ **'ಅಸುನೀತೇ'**, **'ಶುಕ್ರಮಸಿ'**, **'ಅಕ್ಷೀಭ್ಯಾಂ ತೇ'** ಮಂತ್ರಗಳಿಂದ ಅಭಿಮಂತ್ರಿಸಿ, ಎದೆಯ ಸ್ಥಾನದಲ್ಲಿ ದೀಪ ಹಚ್ಚಿ **'ಜೀವಸೂಕ್ತ'**ದಿಂದ ಪ್ರಾಣಪ್ರತಿಷ್ಠಾಪನೆ ಮಾಡಿ ಸ್ನಾನಾರ್ಥವಾಗಿ ನೀರಿನಿಂದ **'ಆಪೋ ಹಿಷ್ಠಾ'** ಮಂತ್ರದಿಂದ ಪ್ರೋಕ್ಷಿಸಿ, ಚಂದನ ಲೇಪನ ಮಾಡಿ, ತಲೆಯ ಬಳಿ ಇಟ್ಟಿರುವ ವಸ್ತ್ರವನ್ನು ಪ್ರತಿಮೆಯ ಮೇಲಿನಿಂದ ಕಾಲಿನ ವರಗೆ ತಂದು ವಸ್ತ್ರದಿಂದ ಮುಚ್ಚಿ, ಮೂರು ಸ್ಥಾನಗಳಲ್ಲಿಟ್ಟಿರುವ ಉಣ್ಣೆನೂಲುಗಳಿಂದ ಕಟ್ಟಬೇಕು. ಸುಗಂಧಮಾಲಾದಿಗಳಿಂದ ಅಲಂಕಾರ ಮಾಡಿ, **'ಅಯಂ ಸ ದೇವದತ್ತಃ'** (ಮೃತವ್ಯಕ್ತಿಯ ಹೆಸರನ್ನು ಹೇಳಬೇಕು) **'ಇದಂ ಚಾಸ್ಯೋಪಾಸನಮ್ ॥'** ಎಂದು ಅಗ್ನಿಯನ್ನು ಧ್ಯಾನಿಸಿ, ವೈತರಣ್ಯಾದಿ ದಾನಗಳನ್ನು ಕೊಟ್ಟು, ಅಡಿಯಲ್ಲಿರುವ ಕೃಷ್ಣಾಜಿನದಿಂದ ಪೂರ್ಣ ಆಚ್ಛಾದನೆ ಮಾಡಿ, ಅನಂತರ ಚಿತೆಯಲ್ಲಿಟ್ಟು ದಹನ ಮಾಡಬೇಕು. ಅನಂತರ ಅದರ ಭಸ್ಮಸಂಚಯನ ಮಾಡಿ ಆ ಭಸ್ಮವನ್ನು ಗಂಗೆಯಲ್ಲಿ ವಿಸರ್ಜಿಸಬೇಕು. ಮುಂದಿನ ನಿತ್ಯವಿಧ್ಯಾದಿ ಕರ್ಮಾಂಗಗಳನ್ನು ಮಾಡಬೇಕು. (ಕೆಲವರಲ್ಲಿ ಒಂದು ಉದ್ದದ ಪಾಲಾಶದ ಕೋಲಿಗೆ ಕೈಕಾಲುಗಳ ಸ್ಥಾನದಲ್ಲಿ ಎರಡೆರಡು ಕೋಲುಗಳನ್ನು ಅಡ್ಡ ಕಟ್ಟಿ, ಹೀಗೆ ಒಟ್ಟು ಐದು ಕೋಲುಗಳಿಂದ ಮನುಷ್ಯನ ಆಕಾರ ಮಾಡಿ, ಅಕ್ಕಿಹಿಟ್ಟು ಇಲ್ಲವೇ ಗೋಧಿ ಹಿಟ್ಟಿನ ಲೇಪನ ಮಾಡಿ ಅನಂತರ ೩೬೦ ಪಾಲಾಶದ ಎಲೆಗಳಿಂದ ದೇಹರಚನೆ ಮಾಡುವ ಕ್ರಮವೂ ಇದೆ.)

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥**

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ..... ನಾರಾಯಣಾಯೇತಿ ಸಮರ್ಪಯಮಿ ॥**

**ಅದ್ಯದಿನೇ ಮಮಪಿತುರುದ್ದಿಶ್ಯ ಮಯಾಕೃತ ಪಾಲಾಶವಿಧಿಕರ್ಮಣಾ ಪಿತೃ (ಮಾತೃ ) ಪ್ರೇತಾಂತರ್ಗತ ಪ್ರಾಣಸ್ಥ ಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥ ತತ್ಸರ್ವಂ ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಗೋವಿಂದಾಯ ನಮಃ ॥**

* * *

ತೃತೀಯ ಗುಚ್ಛ

# ಪ್ರಥಮದಿನಕೃತ್ಯಮ್

## ನಿತ್ಯವಿಧಿಶ್ರಾದ್ಧಸಾಹಿತ್ಯಗಳು (ಒಬ್ಬರಿಗೆ)

ಜೇಡಿಪುಡಿ (ಅಕ್ಕಿಹಿಟ್ಟು, ರಂಗೋಲಿಪುಡಿ) 10 ಗ್ರಾಂ, ದರ್ಭೆ 10, ಗೋಪಿತುಂಡು 1, ಯಜ್ಞೋಪವೀತ 1, ಕರ್ಪೂರ 5, ಬೆಂಕಿಪೆಟ್ಟಿಗೆ 1, ನಾಣ್ಯಗಳು 18, ಗೋಮಯ, ಮೃತ್ತಿಕೆ ಹಾಗೂ ಗಂಧ ಒಂದು ಚಿಕ್ಕ ನೆಲ್ಲಿಕಾಯಿಯಷ್ಟು, ತುಳಸಿ 20 ತುದಿ, ಭೃಂಗರಾಜ 5 ತುದಿ, ಬಿಳಿ ಹೂ 10, ಕದಿಕೆ 20 ತುದಿ, ಅತ್ತಿ ತುದಿ 1, ಎಳ್ಳು 100 ಗ್ರಾಂ, ಅಕ್ಕಿ 50 ಗ್ರಾಂ, ಜವೆಗೋಧಿ 10 ಗ್ರಾಂ, ಬೆಲ್ಲ 50, ಅಕ್ಕಿ 1 ಪಾವು, ಉದ್ದಿನ ಬೇಳೆ 10 ಗ್ರಾಂ, ಬಾಳೆಲೆದೊಣ್ಣೆ 1, ಬಾಳೆಎಲೆ 2, ಹಾಲು, ಮೊಸರು, ತುಪ್ಪ ಹಾಗೂ ಜೇನುತುಪ್ಪ $^1/_2$ ಲೋಟದಷ್ಟು, ಬಾಳೆಹಣ್ಣು 2, ದೇವರ ತೀರ್ಥ, ವೀಳ್ಯದೆಲೆ 4, ಉದ್ದ ತುಂಡು ಮಾಡಿದ ಅಡಕೆ 4, ಕಟ್ಟಿಗೆ 4 ತುಂಡು, 2 ತೆಂಗಿನಕಾಯಿಗಳ ಸಿಪ್ಪೆ, ತೆಂಗಿನ ಗರಿ 50 ತುಂಡು, ಒಲೆಗೆ 9 ಇಟ್ಟಿಗೆ ಇಲ್ಲವೇ ಕೆಂಪುಕಲ್ಲು 3, ನೀರಿಗೆ ಕೊಡಪಾನ 1, ಜಲಪಾತ್ರೆ, ಕೌಳಿಗೆ, ಸೌಂಟು, ಕರ್ಮವಸ್ತ್ರ, ಹವಿಸ್ಸಿನ ಪಾತ್ರೆ, ಸಟ್ಟುಗ, ಗೋಪಿ ಹಾಗೂ ಮುದ್ರೆಯ ತಟ್ಟೆ.

ಮೃತದಿನದಂದೇ ಕರ್ಮಪ್ರಾರಂಭ ಮಾಡುವುದಾದರೆ ಕ್ರಿಯಾಕರ್ತೃವು ಶ್ಮಶಾನದಿಂದ ಬಂದು ಸ್ನಾನ ಮಾಡಿದ ಅನಂತರ ಜಲಪಾತ್ರೆಯುಳ್ಳವನಾಗಿ ಕನಿಷ್ಠಪೂರ್ವಕರಾಗಿ (ಕನಿಷ್ಠಪೂರ್ವಕರಾಗಿ ಹೆಣ್ಣುಮಕ್ಕಳು) ಮೃತ್ತಿಕಾಸ್ನಾನವನ್ನು ಮಾಡಿ ಮುಂದಿನ ಕರ್ಮಾಂಗವನ್ನು ಮಾಡುವವನಾಗಬೇಕು. ಕಾರಣಾಂತರಗಳಿಂದ ಮರುದಿನ ಮಾಡುವುದಾದರೆ ಯಜಮಾನನು ಬೆಳಗ್ಗೆ ಸ್ನಾನ ಮಾಡಿ ಅರ್ಘ್ಯಪ್ರದಾನಾಂತ ಮಾನಸಿಕ ಹತ್ತು ಗಾಯತ್ರಿ ಹಾಗೂ ಅಷ್ಟಾಕ್ಷರಮಂತ್ರ ಜಪಿಸಬೇಕು. ಹಿಂದಿನ ದಿನ ಕ್ಷೌರ ಮಾಡದೆ ಇದ್ದಲ್ಲಿ ಮರುದಿನ ಮಾಡಿ, ಸ್ನಾನಮಾಡಿ ತಮ್ಮ ಉಡುವ ಬಟ್ಟೆ, ಕುತ್ತಿಗೆಬಟ್ಟೆ, ಜಲಪಾತ್ರೆ, ಕೌಳಿಗೆ, ಉದ್ಧರಣೆ, ಎಳ್ಳು, ದರ್ಭೆ, ಗೋಮಯ, ತುಳಸೀ–ಧಾತ್ರಿಮೃತ್ತಿಕೆಗಳ ಸಹಿತ ಪ್ರೇತಶಿಲೆಯೊಂದಿಗೆ ಕೆರೆ(ಬಾವಿ)ಯ ಬಳಿಗೆ ಹೋಗಿ, ಪ್ರೇತಶಿಲೆಯುಳ್ಳ ತಟ್ಟೆಯನ್ನು ದಡದಲ್ಲಿಟ್ಟು ಮೃತ್ತಿಕಾ ಸ್ನಾನ ಮಾಡಿ ಮುಂದಿನ ಕರ್ಮಾಂಗವನ್ನು ಮಾಡಬೇಕು.

## ಮೃತ್ತಿಕಾಸ್ನಾನಮ್

ಬ್ರಾಹ್ಮಣರಿಗೆ ಕೈಮುಗಿದು '**ಸ್ನಾತುಮನುಜ್ಞಾ ದೀಯತಾಮ್** ।' ಎಂದು ಹೇಳಿ **[ಅಸ್ತ್ವನುಜ್ಞಾ]** ಎಂದು ಪ್ರತಿವಚನ ಪಡೆದು ನದಿಗೆ ಕೈಮುಗಿದು–

**ತ್ವಂ ರಾಜಾ ಸರ್ವತೀರ್ಥಾನಾಂ ತ್ವಮೇವ ಜಗತಃ ಪಿತಾ ।**
**ಯಾಚಿತಂ ದೇಹಿ ಮೇ ತೀರ್ಥ ಸರ್ವಪಾಪಾಪನುತ್ತಯೇ ॥**

**ಅತಿತೀಕ್ಷ್ಣಮಹಾಕಾಯ ಕಲ್ಪಾಂತದಹನೋಪಮ ।**
**ಭೈರವಾಯ ನಮಸ್ತುಭ್ಯಮನುಜ್ಞಾಂ ಸ್ನಾತುಮರ್ಹಸಿ ॥**

–ಎಂದು ಪ್ರಾರ್ಥಿಸಿ (ಶಿಖೆ ಕಟ್ಟಿದ್ದರೆ ಬಿಚ್ಚಿ) ಪೂರ್ವಮುಖವಾಗಿ ಮೂರು ಬಾರಿ ಮುಳುಗಿ ಸ್ನಾನ ಮಾಡಿ ಶಿಖಾಬಂಧನ ಮಾಡದೆ ಮೊಣಕಾಲುಗಂಟಿನವರೆಗೆ ನೀರಿರುವ ಸ್ಥಳದಲ್ಲಿ ನಿಂತು ಸಂಕಲ್ಪ ಮಾಡಬೇಕು. ಆಚಮನ ಮಾಡಿ ಆಚಾರ್ಯರಿಂದ ಒಂದು ಎಳೆಯ ಪವಿತ್ರ ಪಡೆದು ಧರಿಸಬೇಕು. (ನಿತ್ಯಕ್ರಿಯಾಸಮಯದಲ್ಲಿ ಹತ್ತು ದಿನಗಳ ಕಾಲ ಈ ಪವಿತ್ರವನ್ನು ಬಿಚ್ಚುವ ಹಾಗಿಲ್ಲ. ಪವಿತ್ರ ಹಾಳಾದರೆ ಮಾತ್ರ ಬೇರೆ ಪವಿತ್ರ ಧರಿಸಬೇಕು)

**ಸಂಕಲ್ಪ:**

**ಗಂಗೇ ಚ ಯಮುನೇ .... ಸನ್ನಿಧಿಂ ಕುರು ॥ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ .... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ......ಪ್ರೇತತ್ವ ನಿವೃತ್ತ್ಯೋತ್ತಮಲೋಕಾವಾಪ್ತ್ಯರ್ಥಂ ಕ್ಷುತ್ತೃಷಾದಾಹೋಪಶಮನಾರ್ಥಂ ಪ್ರೇತಾಪ್ಯಾಯನಾರ್ಥಂ** (ಬಲ) **ಮಮ ಅಂತಃಕರಣಶುದ್ಧ್ಯರ್ಥಂ ಶರೀರಶುದ್ಧ್ಯರ್ಥಂ ಭಾಗೀರಥ್ಯಾದಿಸಾರ್ಧತ್ರಿಕೋಟಿತೀರ್ಥಾ–ಭಿಮಾನಿದೇವತಾಸನ್ನಿಹಿತೇಽಸ್ಮಿನ್ ಜಲಾಶಯೇ (ಮಹಾನದ್ಯಾಂ, ನದ್ಯಾಂ, ಧಾರೇ, ಕೂಪೇ ವಾ) ಪ್ರೇತಶಿಲಯಾ ಸಹ ಮೃತ್ತಿಕಾ, ಗೋಮಯ ಸ್ನಾನಮಹಂ ಕರಿಷ್ಯೇ ॥ (ಕುರುಷ್ವ) ॥**

ಮೂರು ಬಾರಿ ಮುಳುಗಿ ಮೈಯನ್ನು ತಿಕ್ಕಿಕೊಂಡು ಪುನಃ ಮೂರು ಬಾರಿ ಮುಳುಗಿ ಆಚಮನ ಮಾಡಿ ನೀರಿನಿಂದ ಪುಂಡ್ರಧಾರಣೆ ಮಾಡಿ, ಅರ್ಘ್ಯ ಕೊಡಬೇಕು.

**ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ ।**
**ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**

–ಎಂದು ಅರ್ಘ್ಯ ಕೊಟ್ಟು ಪುನಃ ನೀರು ಹಿಡಿದು,

**ನಾಗಾಸನಾಜ್ಞಯಾ ಪ್ರಾಪ್ತ ಗಂಗಾಜಲಸಮಾಶ್ರಿತ ।**
**ಶ್ರೀಮನ್ಮಧ್ವತಟಾಕೇದಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**

–ಎಂದು ಅರ್ಘ್ಯ ಕೊಟ್ಟು ಪುನಃ ನೀರು ಹಿಡಿದು,

**ಬ್ರಹ್ಮಕಮಂಡಲು ಸಂಭೂತೇ ಪೂರ್ಣಚಂದ್ರನಿಭಾನನೇ ।**
**ತ್ರೈಲೋಕ್ಯವಂದಿತೇ ಗಂಗೇ ಗೃಹಣಾರ್ಘ್ಯಂ ನಮೋಽಸ್ತು ತೇ ॥**

–ಎಂದು ಅರ್ಘ್ಯ ಕೊಟ್ಟು ಕೈಮುಗಿದು '**ಭಾಗೀರಥೀಸ್ನಾನಫಲಮಸ್ತ್ವಿತಿ ಭವಂತೋ ಬ್ರುವಂತು** ॥'

– ಎಂದು ಹೇಳಿದಾಗ ವಿಪ್ರರು 'ಭಾಗೀರಥೀಸ್ನಾನಫಲಮಸ್ತು ॥' ಎಂದು ಹೇಳಬೇಕು.

ಕೈಮುಗಿದು ಭೂದೇವಿಯನ್ನು ಪ್ರಾರ್ಥಿಸಬೇಕು.

**ಓಂ ಬಳಿತ್ಥಾ ಪರ್ವತಾನಾಂ ಖಿದ್ರಂ ಬಿಭರ್ಷಿ ಪೃಥಿವಿ । ಪ್ರ ಯಾ ಭೂಮಿಂ ಪ್ರವತ್ವತಿ ಮಹ್ನಾ ಜಿನೋಷಿ ಮಹಿನಿ ॥**

ಅನಂತರ ಶುದ್ಧಸ್ಥಳದಲ್ಲಿ ಭೂಮಿಯನ್ನು ಅಗೆಯಬೇಕು.

**ಓಂ ಮಾ ವೋ ರಿಷತ್ಖನಿತಾ ಯಸ್ಮೈ ಚಾಹಂ ಖನಾಮಿ ವಃ । ದ್ವಿಪಚ್ಚತುಷ್ಪದಸ್ಮಾಕಂ ಸರ್ವಮಸ್ತ್ವನಾತುರಮ್ ॥** –ಎಂದು ಅಗೆದು, ಮೃತ್ತಿಕೆಯನ್ನು ಬಲಕೈಯಲ್ಲಿ ಹಿಡಿದು– '**ಓಂ ಸ್ಯೋನಾ..........ಸಪ್ರಥಃ** ।' ಎಂದು ಪ್ರಾರ್ಥಿಸಿ,

**ಓಮ್ ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಮ್ ॥**

**ಓಮ್ ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ । ಹಿರಣ್ಯಯೇನ ಸವಿತಾ ರಥೇನಾಽಽದೇವೋ ಯಾತಿ ಭುವನಾನಿ ಪಶ್ಯನ್ ॥** –ಎಂದು ಸೂರ್ಯನಿಗೆ ತೋರಿಸಿ, ನೀರಿನಿಂದ ಚೌಕಾಕಾರದ ಮಂಡಲ ಮಾಡಿ ಮೃತ್ತಿಕೆಯನ್ನು ಮಂಡಲದಲ್ಲಿಟ್ಟು ಮೂರು ಪಾಲು ಮಾಡಿ ಅಷ್ಟಾಕ್ಷರಮಂತ್ರದಿಂದ ಕುಶೋದಕದಿಂದ ಮೃತ್ತಿಕೆಗೆ ಪ್ರೋಕ್ಷಣೆ ಮಾಡಿ, ಗಾಯತ್ರೀಮಂತ್ರದಿಂದ ಮೃತ್ತಿಕೆಯನ್ನು ಅಭಿಮಂತ್ರಿಸಿ, ಮೊದಲ ಪಾಲಿನ ಮೃತ್ತಿಕೆಯನ್ನು ಆರು ದಿಕ್ಕುಗಳಿಗೆ ಎಸೆಯಬೇಕು.

**ಓಂ ತ್ರಾತಾರಮಿಂದ್ರಮವಿತಾರಮಿಂದ್ರಂ ಹವೇಹವೇ ಸುಹವಂ ಶೂರ–ಮಿಂದ್ರಮ್ । ಹ್ವಯಾಮಿ ಶಕ್ರಂ ಪುರಹೂತಮಿಂದ್ರಂ ಸ್ವಸ್ತಿ ನೋ ಮಘವಾ ಧಾತ್ವಿಂದ್ರಃ ॥** –ಎಂದು ಪೂರ್ವಕ್ಕೆ,

**ಓಂ ಯಮಾಯ ಸೋಮಂ ಸುನುತ ಯಮಾಯ ಜುಹುತಾ ಹವಿಃ । ಯಮಂ ಹ ಯಜ್ಞೋ ಗಚ್ಛತ್ಯಗ್ನಿದೂತೋ ಅರಂಕೃತಃ ॥** –ಎಂದು ದಕ್ಷಿಣಕ್ಕೆ,

ಓಂ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ॥ –ಎಂದು ಪಶ್ಚಿಮಕ್ಕೆ,

ಓಂ ವಯಂ ಸೋಮ ವ್ರತೇ ತವ ಮನಸ್ತನೂಷು ಬಿಭ್ರತಃ । ಪ್ರಜಾವಂತಃ ಸಚೇಮಹಿ ॥ –ಎಂದು ಉತ್ತರಕ್ಕೆ,

ಓಂ ತತ್ಸೂರ್ಯಂ ರೋದಸೀ ಉಭೇ ದೋಷಾ ವಸ್ತೋರುಪ ಬ್ರುವೇ । ಭೋಜೇಷ್ವಸ್ಮಾ ಅಭ್ಯುಚ್ಚರಾ ಸದಾ ॥ –ಎಂದು ಮೇಲಕ್ಕೆ,

ಓಮ್ ಅಧಃ ಪಶ್ಯಸ್ವ ಮೋಪರಿ ಸಂತರಾಂ ಪಾದಕೌ ಹರ । ಮಾ ತೇ ಕಶಪ್ಲಕೌ ದೃಶನ್ ಸ್ತ್ರೀ ಹಿ ಬ್ರಹ್ಮಾ ಬಭೂವಿಥ ॥

–ಎಂದು ಕೆಳಕ್ಕೆ ಎಸೆದು, ಎರಡನೆಯ ಪಾಲಿನ ಮೃತ್ತಿಕೆ ಹಿಡಿದು,

ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್ ॥ –ಎಂದು ಶಿರಸ್ಸಿಗೆ,

ಓಮ್ ಅಕ್ಷೀಭ್ಯಾಂ ತೇ ನಾಸಿಕಾಭ್ಯಾಂ ಕರ್ಣಾಭ್ಯಾಂ ಛುಬುಕಾದಧಿ । ಯಕ್ಷ್ಮಂ ಶೀರ್ಷಣ್ಯಂ ಮಸ್ತಿಷ್ಕಾಜ್ಜಿಹ್ವಾಯಾ ವಿ ವೃಹಾಮಿ ತೇ ॥ –ಮುಖಕ್ಕೆ,

ಓಂ ಗ್ರೀವಾಭ್ಯಸ್ತ ಉಷ್ಣಿಹಾಭ್ಯಃ ಕೀಕಸಾಭ್ಯೋ ಅನೂಕ್ಯಾತ್ । ಯಕ್ಷ್ಮಂ ದೋಷಣ್ಯ೧ಮಂಸಾಭ್ಯಾಂ ಬಾಹುಭ್ಯಾಂ ವಿ ವೃಹಾಮಿ ತೇ ॥ –ಕುತ್ತಿಗೆಗೆ,

ಓಮ್ ಆಂತ್ರೇಭ್ಯಸ್ತೇ ಗುದಾಭ್ಯೋ ವನಿಷ್ಠೋರ್ಹೃದಯಾದಧಿ । ಯಕ್ಷ್ಮಂ ಮತಸ್ನಾಭ್ಯಾಂ ಯಕ್ನಃ ಪ್ಲಾಶಿಭ್ಯೋ ವಿ ವೃಹಾಮಿ ತೇ ॥ –ಹೃದಯಕ್ಕೆ,

ಓಂ ನಾಭಾ ನಾಭಿಂ ನ ಆ ದದೇ ಚಕ್ಷುಶ್ಚಿತ್ಸೂರ್ಯೇ ಸಚಾ । ಕವೇರಪತ್ಯಮಾ ದುಹೇ ॥ –ನಾಭಿಗೆ,

ಓಂ ತ್ವಮಿಂದ್ರ ಸಜೋಷಸಮರ್ಕಂ ಬಿಭರ್ಷಿ ಬಾಹ್ವೋಃ । ವಜ್ರಂ ಶಿಶಾನ ಓಜಸಾ ॥ –ಬಾಹುಗಳೆರಡಕ್ಕೆ,

ಓಂ ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ । ಕಕ್ಷೀವಂತಂ ಯ ಔಶಿಜಃ ॥ –ಕಟಿಗಳಿಗೆ,

ಓಂ ಯಃ ಕುಕ್ಷಿಃ ಸೋಮಪಾತಮಃ ಸಮುದ್ರ ಇವ ಪಿನ್ವತೇ । ಉರ್ವೀರಾಪೋ ನ ಕಾಕುದಃ ॥ –ಹೊಟ್ಟೆಗೆ,

ಓಂ ಬಹ್ವೀನಾಂ ಪಿತಾ ಬಹುರಸ್ಯ ಪುತ್ರಶ್ಚಿಶ್ಚಾ ಕೃಣೋತಿ ಸಮನಾವಗತ್ಯ । ಇಷುಧಿಃ ಸಂಕಾಃ ಪೃತನಾಶ್ಚ ಸರ್ವಾಃ ಪೃಷ್ಠೇ ನಿನದ್ಧೋ ಜಯತಿ ಪ್ರಸೂತಃ ॥ –ಬೆನ್ನಿಗೆ,

ಓಮ್ ಊರುಭ್ಯಾಂ ತೇ ಅಷ್ಠೀವದ್ಭ್ಯಾಂ ಪಾರ್ಷ್ಣಿಭ್ಯಾಂ ಪ್ರಪದಾಭ್ಯಾಮ್ । ಯಕ್ಷ್ಮಂ ಶ್ರೋಣಿಭ್ಯಾಂ ಭಾಸದಾದ್ಭಂಸಸೋ ವಿ ವೃಹಾಮಿ ತೇ ॥ –ತೊಡೆಗಳೆರಡರಲ್ಲಿ,

ಓಂ ಮೇಹನಾದ್ವನಂಕರಣಾಲ್ಲೋಮಭ್ಯಸ್ತೇ ನಖೇಭ್ಯಃ । ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿದಂ ವಿ ವೃಹಾಮಿ ತೇ ॥ –ಮೊಣಕಾಲಿನಲ್ಲಿ,

ಓಮ್ ಏತಾವಾನಸ್ಯ ಮಹಿಮಾಽತೋ ಜ್ಯಾಯಾँಶ್ಚ ಪೂರುಷಃ । ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ –ಪಾದಗಳೆರಡರಲ್ಲಿ,

ಓಂ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜ-ಮಾನೋ ಹವಿರ್ಭಿಃ । ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ॥ -ಎಂದು ಪಶ್ಚಿಮಕ್ಕೆ,

ಓಂ ವಯಂ ಸೋಮ ವ್ರತೇ ತವ ಮನಸ್ತನೂಷು ಬಿಭ್ರತಃ । ಪ್ರಜಾವಂತಃ ಸಚೇಮಹಿ ॥ -ಎಂದು ಉತ್ತರಕ್ಕೆ,

ಓಂ ತತ್ಸೂರ್ಯಂ ರೋದಸೀ ಉಭೇ ದೋಷಾ ವಸ್ತೋರುಪ ಬ್ರುವೇ । ಭೋಜೇಷ್ವಸ್ಮಾँ ಅಭ್ಯುಚ್ಚರಾ ಸದಾ ॥ -ಎಂದು ಮೇಲಕ್ಕೆ,

ಓಮ್ ಅಧಃ ಪಶ್ಯಸ್ವ ಮೋಪರಿ ಸಂತರಾಂ ಪಾದಕೌ ಹರ । ಮಾ ತೇ ಕಶಪ್ಲಕೌ ದೃಶನ್ ಸ್ತ್ರೀ ಹಿ ಬ್ರಹ್ಮಾ ಬಭೂವಿಥ ॥

-ಎಂದು ಕೆಳಕ್ಕೆ ಎಸೆದು, ಎರಡನೆಯ ಪಾಲಿನ ಮೃತ್ತಿಕೆ ಹಿಡಿದು,

ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್ ॥ -ಎಂದು ಶಿರಸ್ಸಿಗೆ,

ಓಮ್ ಅಕ್ಷೀಭ್ಯಾಂ ತೇ ನಾಸಿಕಾಭ್ಯಾಂ ಕರ್ಣಾಭ್ಯಾಂ ಛುಬುಕಾದಧಿ । ಯಕ್ಷ್ಮಂ ಶೀರ್ಷಣ್ಯಂ ಮಸ್ತಿಷ್ಕಾಜ್ಜಿಹ್ವಾಯಾ ವಿ ವೃಹಾಮಿ ತೇ ॥ -ಮುಖಕ್ಕೆ,

ಓಂ ಗ್ರೀವಾಭ್ಯಸ್ತ ಉಷ್ಣಿಹಾಭ್ಯಃ ಕೀಕಸಾಭ್ಯೋ ಅನೂಕ್ಯಾತ್ । ಯಕ್ಷ್ಮಂ ದೋಷಣ್ಯ೧ಮಂಸಾಭ್ಯಾಂ ಬಾಹುಭ್ಯಾಂ ವಿ ವೃಹಾಮಿ ತೇ ॥ -ಕುತ್ತಿಗೆಗೆ,

ಓಮ್ ಆಂತ್ರೇಭ್ಯಸ್ತೇ ಗುದಾಭ್ಯೋ ವನಿಷ್ಠೋರ್ಹೃದಯಾದಧಿ । ಯಕ್ಷ್ಮಂ ಮತಸ್ನಾಭ್ಯಾಂ ಯಕ್ನಃ ಪ್ಲಾಶಿಭ್ಯೋ ವಿ ವೃಹಾಮಿ ತೇ ॥ -ಹೃದಯಕ್ಕೆ,

ಓಂ ನಾಭಾ ನಾಭಿಂ ನ ಆ ದದೇ ಚಕ್ಷುಶ್ಚಿತ್ಸೂರ್ಯೇ ಸಚಾ । ಕವೇರಪತ್ಯಮಾ ದುಹೇ ॥ –ನಾಭಿಗೆ,

ಓಂ ತ್ವಮಿಂದ್ರ ಸಜೋಷಸಮರ್ಕಂ ಬಿಭರ್ಷಿ ಬಾಹ್ವೋಃ । ವಜ್ರಂ ಶಿಶಾನ ಓಜಸಾ ॥ –ಬಾಹುಗಳೆರಡಕ್ಕೆ,

ಓಂ ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ । ಕಕ್ಷೀವಂತಂ ಯ ಔಶಿಜಃ ॥ –ಕಟಿಗಳಿಗೆ,

ಓಂ ಯಃ ಕುಕ್ಷಿಃ ಸೋಮಪಾತಮಃ ಸಮುದ್ರ ಇವ ಪಿನ್ವತೇ । ಉರ್ವೀರಾಪೋ ನ ಕಾಕುದಃ ॥ –ಹೊಟ್ಟೆಗೆ,

ಓಂ ಬಹ್ವೀನಾಂ ಪಿತಾ ಬಹುರಸ್ಯ ಪುತ್ರಶ್ಚಿಶ್ಚಾ ಕೃಣೋತಿ ಸಮನಾವಗತ್ಯ । ಇಷುಧಿಃ ಸಂಕಾಃ ಪೃತನಾಶ್ಚ ಸರ್ವಾಃ ಪೃಷ್ಠೇ ನಿನದ್ಧೋ ಜಯತಿ ಪ್ರಸೂತಃ ॥ –ಬೆನ್ನಿಗೆ,

ಓಮ್ ಊರುಭ್ಯಾಂ ತೇ ಅಷ್ಠೀವದ್ಭ್ಯಾಂ ಪಾರ್ಷ್ಣಿಭ್ಯಾಂ ಪ್ರಪದಾಭ್ಯಾಮ್ । ಯಕ್ಷ್ಮಂ ಶ್ರೋಣಿಭ್ಯಾಂ ಭಾಸದಾದ್ಭಂಸಸೋ ವಿ ವೃಹಾಮಿ ತೇ ॥ –ತೊಡೆಗಳೆರಡರಲ್ಲಿ,

ಓಂ ಮೇಹನಾದ್ವನಂಕರಣಾಲ್ಲೋಮಭ್ಯಸ್ತೇ ನಖೇಭ್ಯಃ । ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿದಂ ವಿ ವೃಹಾಮಿ ತೇ ॥ –ಮೊಣಕಾಲಿನಲ್ಲಿ,

ಓಮ್ ಏತಾವಾನಸ್ಯ ಮಹಿಮಾಽತೋ ಜ್ಯಾಯಾಁಶ್ಚ ಪೂರುಷಃ । ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ –ಪಾದಗಳೆರಡರಲ್ಲಿ,

**ಓಂ ಯಸ್ಯ ವಿಶ್ವಾನಿ ಹಸ್ತಯೋಃ ಪಂಚ ಕ್ಷಿತೀನಾಂ ವಸು । ಸ್ಪಾಶಯಸ್ವ ಯೋ ಅಸ್ಮಧ್ರುಗ್ದಿವ್ಯೇವಾಶನಿರ್ಜಹಿ ॥** –ಹಸ್ತಗಳೆರಡಕ್ಕೆ,

ಅನಂತರ ಸರ್ವಾಂಗಕ್ಕೆ–

**ಓಮ್ ಅಂಗಾದಂಗಾಲ್ಲೋಮ್ನೋಲೋಮ್ನೋ ಜಾತಂ ಪರ್ವಣಿಪರ್ವಣಿ । ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿದಂ ವಿ ವೃಹಾಮಿ ತೇ ॥** ಎಂದು ಹಚ್ಚಿಕೊಳ್ಳಬೇಕು.

**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।**
**ಶಿರಸಾ ಧಾರಯಿಷ್ಯಾಮಿ ರಕ್ಷಸ್ವ ಮಾಂ ಪದೇ ಪದೇ ॥**

**ಉದ್ಧೃತಾಽಸಿ ವರಾಹೇಣ ಕೃಷ್ಣೇನ ಶತಬಾಹುನಾ ।**
**ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಮ್ ॥**

– ಎಂದು ಸರ್ವಾಂಗಕ್ಕೆ ಹಚ್ಚಿ ಅನಂತರ ಧಾತ್ರೀಮೃತ್ತಿಕೆಯನ್ನು ಹಚ್ಚಿಕೊಂಡು, ಗೋಮಯ ಹಿಡಿದು,

**ಓಮ್ ಆ ಗಾವೋ ಅಗ್ಮನ್ನುತ ಭದ್ರಮಕ್ರನ್ ತ್ಸೀದಂತು ಗೋಷ್ಠೇ ರಣಯಂತ್ವಸ್ಮೇ । ಪ್ರಜಾವತೀಃ ಪುರುರೂಪಾ ಇಹ ಸ್ಯುರಿಂದ್ರಾಯ ಪೂರ್ವೀ–ರುಷಸೋ ದುಹಾನಾಃ ॥** –ಎಂದು ಗೋಮಾತೆಯನ್ನು ಸ್ಮರಿಸಿ ಸರ್ವಾಂಗಕ್ಕೆ ಹಚ್ಚಿಕೊಳ್ಳಬೇಕು.

**ಲಕ್ಷ್ಮೀನಿವಾಸಭೂತಾಯ ಗೋಮಯಾಯ ನಮೋ ನಮಃ ।**
**ಅಗ್ರಮಗ್ರ ಚರಂತೀನಾಮೌಷಧೀನಾಂ ದಿನೇದಿನೇ ।**

**ತಾಸಾಮೃಷಭಪತ್ನೀನಾಂ ಪವಿತ್ರಂ ಕಾಯಶೋಧನಮ್ ।**
**ಯನ್ಮೇ ರೋಗಾಂಶ್ಚ ಶೋಕಾಂಶ್ಚ ನುದ ಗೋಮಯ ಸರ್ವದಾ ॥**

ಮೂರು ಬಾರಿ ಮುಳುಗಿ (ಎಡ) ದಕ್ಷಿಣಕ್ಕೆ ಮುಖಮಾಡಿ, ಹರಿವಾಣದಲ್ಲಿ ಇರುವ ಮೂರು ಕಲ್ಲುಗಳನ್ನು ಕ್ರಮವಾಗಿ ತೊಳೆದು ಅದೇ ಕ್ರಮದಿಂದ ಹರಿವಾಣದಲ್ಲಿಟ್ಟು ಎಡಕೈಯಲ್ಲಿ ತಟ್ಟೆ ಹಿಡಿದು ಬಲಕೈಯಿಂದ ಮುಚ್ಚಿ ಜಾಗ್ರತೆಯಿಂದ ಮೂರು ಬಾರಿ ಮುಳುಗಿ ತಟ್ಟೆಯನ್ನು ದಂಡೆಯ ಮೇಲೆ ಇಟ್ಟು ಶಿಲೆಗೆ ಮೂರನೆಯ ಪಾಲಿನ ಮೃತ್ತಿಕಾಲೇಪನ ಮಾಡುವುದು–

**ಅಸ್ಮತ್ಪಿತು ......... ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಮೃತ್ತಿಕಾಲೇಪನಮುಪತಿಷ್ಠತು ॥**
–ಎಂದು ಹೇಳಿ ಬೊಗಸೆನೀರು ಹಿಡಿದು,

**ಮೃತ್ತಿಕಾಸ್ನಾನಾರ್ಥೇ ಜಲಾಂಜಲಿಮುಪತಿಷ್ಠತು ॥**
–ಎಂದು ಶಿಲೆಯ ಮೇಲೆನೀರು ಬಿಟ್ಟು ಪುನಃ ಗೋಮಯ ಲೇಪನ ಮಾಡಿ,

**ಅಸ್ಮತ್ಪಿತುಃ ............ಗೋಮಯಲೇಪನಮುಪತಿಷ್ಠತು ॥**
–ಎಂದು ಹೇಳಿ ಬೊಗಸೆ ನೀರು ಹಿಡಿದು,

**ಗೋಮಯಸ್ನಾನಾರ್ಥೇ ಜಲಾಂಜಲಿಮುಪತಿಷ್ಠತು ॥**
–ಎಂದು ಶಿಲೆಯ ಮೇಲೆ ನೀರು ಕೊಟ್ಟು ತಟ್ಟೆಯ ಒಳಗಿನ ನೀರನ್ನೆಲ್ಲಾ ತೆಗೆದು ಹರಡಿದ ದರ್ಭೆಯ ಮೇಲಿಟ್ಟು, (ಬಲ) ಪೂರ್ವಮುಖವಾಗಿ ನಿಂತು ನೀರಿನಿಂದ ದ್ವಾದಶನಾಮಗಳನ್ನು ಧಾರಣೆ ಮಾಡಿಕೊಳ್ಳಬೇಕು.

## ತಿಲತೋಯಾಂಜಲಿವಿಧಿಃ

ಪ್ರತಿಯೊಬ್ಬ ಕ್ರಿಯಾಕರ್ತೃವು ಹತ್ತು ದಿನಗಳವರೆಗೆ ಬೆಳಗ್ಗೆ ಮೃತ್ತಿಕಾಸ್ನಾನವನ್ನು ಮಾಡಿದ ಬಳಿಕ ದರ್ಭೆ ಸಹಿತ ಎಳ್ಳು ಹಿಡಿದು ಈ ತಿಲತೋಯಾಂಜಲಿಯನ್ನು ನೀರಿಗೆ ಕೊಡಬೇಕು. ಒಂದು ವೇಳೆ ಸ್ನಾನವನ್ನು ಬಾವಿಯಲ್ಲಿ ಮಾಡುವುದಾದರೆ ವೇದಿಕೆಯಲ್ಲಿ ತಿಲತೋಯಾಂಜಲಿಯನ್ನು ಕೊಡಬೇಕು. ತಿಲತೋಯಾಂಜಲಿಯನ್ನು ಪ್ರತಿದಿನ ಒಂದು, ಮೂರು ಇಲ್ಲವೇ ಹತ್ತರ ಹಾಗೆ ಕೊಡಬೇಕು. ಇಲ್ಲವೆ ದಿನದಿಂದ ದಿನಕ್ಕೆ ಹತ್ತುಹತ್ತು ಹೆಚ್ಚು ಮಾಡುತ್ತಾ ಕೊಡಬೇಕು. ಇಲ್ಲವೇ ಆಯಾ ದಿನಗಳ ಸಂಖ್ಯೆಯಂತೆ ಹೆಚ್ಚು ಮಾಡುತ್ತಾ ಕೊಡಬೇಕು. ಉದಾ: 1+2+3+4+5+6+7+8+9+10+=55. ದಿನಕ್ಕೊಂದು ಪದ್ಧತಿ ಮಾಡಬಾರದು. ಒಂದು ವೇಳೆ ಕ್ರಿಯಾರಂಭವನ್ನು ಏಳು ಇಲ್ಲವೇ ಒಂಬತ್ತನೆಯ ದಿನದ ಅನಂತರ ಮಾಡುವುದಾದರೂ ಮೃತ್ತಿಕಾಸ್ನಾನ ಮಾಡಿ ಈ ತಿಲತೋಯಾಂಜಲಿ ಯನ್ನು ಪ್ರತಿಯೊಬ್ಬ ಕ್ರಿಯಾಕರ್ತೃವು ಅವಶ್ಯವಾಗಿ ಕೊಡಬೇಕು.

ಮೊಣಕಾಲಿನ ಗಂಟಿನ ವರೆಗಿನ ನೀರಿನಲ್ಲಿ ನಿಂತು, ಕರ್ಮಿಗಳು ಎಳ್ಳು ದರ್ಭೆ ಹಿಡಿದು, ಅಂಜಲಿಮುದ್ರೆಯಿಂದ ನೀರು ಎತ್ತಿ

**ಅಸ್ಮತ್ಪಿತುಃ ..........ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಮೃತಾಹಾತ್ ಪ್ರಥಮೇ (ದ್ವಿತೀಯೇ, ತೃತೀಯೇ.....)ऽಹನಿ ದಾಹಜನಿತತಾಪೋಪಶಮನಾರ್ಥಮ್ ಅಯಂ ತಿಲತೋಯಾಂಜಲಿರುಪತಿಷ್ಠತು** ॥ –ಎಂದು ನೀರಿಗೆ ಬಿಡಬೇಕು.

ತಲೆ ಒರಸಿಕೊಳ್ಳದೆ, ಜುಟ್ಟು ಕಟ್ಟಿಕೊಳ್ಳದೆ ಗೋಪೀಚಂದನ ಹಾಗೂ ಮುದ್ರಾಧಾರಣೆ ಮಾಡಿ ಜಲಪಾತ್ರದಲ್ಲಿ ನೀರನ್ನು ಹಾಗೂ ಪ್ರೇತಶಿಲೆಯುಳ್ಳ ತಟ್ಟೆಯನ್ನು ಹಿಡಿದು ವೇದಿಕೆ ನಿರ್ಮಾಣ ಸ್ಥಳಕ್ಕೆ ಹೋಗಬೇಕು.

# ಪ್ರೇತಶಿಲಾಸ್ಥಾಪನಮ್

ವೇದಿಕೆ ನಿರ್ಮಾಣದ ಸ್ಥಳಕ್ಕೆ ಬಂದು ನೆಲದಲ್ಲಿ ದರ್ಭೆ ಹರಡಿ, ಪ್ರೇತಶಿಲೆಯುಳ್ಳ ತಟ್ಟೆಯನ್ನು ಕೆಳಗಿಟ್ಟು ಗೋಮಯ ಹಿಡಿದು,

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸಃ ಬಾಹ್ಯಾಭ್ಯಂತರಃ ಶುಚಿಃ ॥**

–ಎಂದು ಕ್ರಿಯಾಸ್ಥಳವನ್ನು ಶುದ್ಧಿ ಮಾಡಿ, ಹತ್ತು ದಿನಗಳ ವರೆಗೆ ಹವಿಸ್ಸು ಮಾಡಲು ಒಲೆ ನಿರ್ಮಾಣದ ಸ್ಥಳಕ್ಕೆ ಬಂದು ಕರ್ಮಿಯು ದಕ್ಷಿಣಕ್ಕೆ ಮುಖಮಾಡಿ ಕುಳಿತು ಬೆಂಕಿ ಹಾಕಲಾಗುವಂತೆ ಒಂಬತ್ತು ಇಟ್ಟಿಗೆಗಳಿಂದ ಒಲೆ ಮಾಡಿ (ಎಡ) ಹವಿಸ್ಸಿನ ಪಾತ್ರ ಹಿಡಿದು,

**ಅಸ್ಮತ್ಪಿತು ........ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಪ್ರೇತತ್ವವಿಮೋಚನಾರ್ಥಂ ಕ್ಷುತ್ತೃಷಾದಾಹೋಪಶಮನಾರ್ಥಂ ಪ್ರಥಮೇಽಹನಿ ನಿತ್ಯಾದಿಶ್ರಾದ್ಧೇಷು ಅವಯವ ಪಿಂಡಪ್ರದಾನಕರ್ತುಮ್ ಅಗ್ನಿಮುಖೇನ ನಾರಾಯಣಸ್ಮರಣಪೂರ್ವಕ ಚರುಸ್ಥಾಲಿಂ ದತ್ತಮುಪತಿಷ್ಠತು ॥** ಎಂದು ಒಲೆಯ ಮೇಲೆ ಇಡಬೇಕು. ಅನಂತರ ಹೆಣ್ಣುಮಕ್ಕಳಿದ್ದರೆ (ಇಲ್ಲದಿದ್ದರೆ ಕರ್ತೃವೇ) ಒಲೆಗೆ ಬೆಂಕಿ ಹಚ್ಚಿ ಒಬ್ಬೊಬ್ಬರಿಗೆ (ಹೆಂಗುಸರನ್ನು ಬಿಟ್ಟು) ನಾಲ್ಕು ಪಾವಿನಂತೆ ಅಕ್ಕಿಯನ್ನು ಸ್ವಲ್ಪ ಉದ್ದಿನಬೇಳೆ ಹಾಕಿ ಒಮ್ಮೆ ತೊಳೆದು ಹವಿಸ್ಸು ಮಾಡಲು ಇಡಬೇಕು. ಅನಂತರ ಅದಕ್ಕೆ ಹಾಲು, ತುಪ್ಪ, ಬೆಲ್ಲ, ಬಾಳೆಹಣ್ಣು ಹಾಕಬೇಕು. ಹನ್ನೊಂದನೆಯ ದಿನದವರೆಗೆ ಜೇನುತುಪ್ಪ ಹಾಕುವ ಪದ್ಧತಿ ಇಲ್ಲ.

ಅನಂತರ ಕ್ರಿಯಾಕರ್ತೃಗಳು ವೇದಿಕೆ ನಿರ್ಮಾಣದ ಸ್ಥಳದ ಬಳಿಗೆ ಹೋಗಿ ಕಿರಿಯರು ಹಿರಿಯನ ಎಡಭಾಗದಲ್ಲಿ (ತಮ್ಮನ ಹಿಂಭಾಗದಲ್ಲಿ ಅಣ್ಣ ಇರುವಂತೆ) ಪೂರ್ವಮುಖವಾಗಿ ಕುಳಿತುಕೊಳ್ಳಬೇಕು. ಇದೇ ಕ್ರಮದಿಂದ ಮುಂದಿನ ಎಲ್ಲ ಶ್ರಾದ್ಧ ಸಂಕಲ್ಪಗಳಿಗೂ ಕುಳಿತುಕೊಳ್ಳಬೇಕು. (ಬಲ) ಪವಿತ್ರ ಹೊರತೆಗೆದು, ಆಚಮನ (ಜಲಪಾತ್ರೆಯ ನೀರನ್ನು ಆಚಮನಕ್ಕೆ ಬಳಸಬಾರದು, ಹಾಗಾಗಿ ಆಚಮನಕ್ಕೆ ಪ್ರತ್ಯೇಕವಾಗಿ ಕೌಳಿಗೆಸೌಟನ್ನು ಬಳಸಬೇಕು.) ಪ್ರಾಣಾಯಾಮ ಮಾಡಿ ಪವಿತ್ರ ಧರಿಸಿ,

**ಸಂಕಲ್ಪಃ**

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ .....ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಪ್ರೇತತ್ವವಿಮೋಕ್ಷಾರ್ಥಂ ಮೃತಾಹಾತ್–**

**೧. ಪ್ರಥಮೇಽಹನಿ ಶಿರೋಮೂರ್ಧಾದ್ಯವಯವನಿಷ್ಪತ್ತ್ಯರ್ಥಂ,**

**[೨. ದ್ವಿತೀಯೇಽಹನಿ ಚಕ್ಷುಃಶ್ರೋತ್ರನಾಸಾವಯವನಿಷ್ಪತ್ತಿಃ,**

**೩. ತೃತೀಯೇಽಹನಿ ಭುಜವಕ್ಷೋಗ್ರೀವಾಮುಖಾವಯವ,**

೪. ಚತುರ್ಥೇऽಹನಿ ಪಾರ್ಷ್ಣಿಕುಕ್ಷಿಕಟಿನಾಭಿಗುದಲಿಂಗಾವಯವ,
೫. ಪಂಚಮೇऽಹನಿ ಊರುಜಾನುಜಂಘಾವಯವ,
೬. ಷಷ್ಠೇऽಹನಿ ಗುಲ್ಫಪಾದಾಂಗುಲಿಮರ್ಮಾದ್ಯವಯವ,
೭. ಸಪ್ತಮೇऽಹನಿ ಅಸ್ಥಿಮಜ್ಜಾಶಿರೋऽವಯವ,
೮. ಅಷ್ಟಮೇऽಹನಿ ನಖದಂತರೋಮಾದ್ಯವಯವ,
೯. ನವಮೇऽಹನಿ ಮರ್ಮವೀರ್ಯಾದಿಸರ್ವಾವಯವ,
೧೦. ದಶಮೇऽಹನಿ ಕ್ಷುತ್ಪಿಪಾಸಾನಿವೃತ್ತಿಃ]

ಅಂಧತ್ವ ಮೂಕತ್ವ ಬಧಿರತ್ವ ಪಂಗುತ್ವ ಕುಬ್ಜತ್ವ ನಗ್ನತ್ವ ಪೈಶಾಚತ್ವನಿವೃತ್ತಿಮುದ್ದಿಶ್ಯ ಕ್ಷುತ್ತೃಷಾದಾಹೋಪಶಮನಾರ್ಥಂ ಪ್ರೇತಾಪ್ಯಾಯನಾರ್ಥಂ ಮೃತಾಹಾತ್ ದಶಾಹಪರ್ಯಂತಂ ಸರ್ವಾಯವನಿಷ್ಪತ್ತ್ಯರ್ಥಂ ಪೂರ್ವಸ್ಥೂಲಶರೀರತ್ಯಾಗಮಾರಭ್ಯ ಆಗಾಮಿ ದಿವ್ಯಸ್ಥೂಲಶರೀರಧಾರಣಪರ್ಯಂತಂ ಮಧ್ಯೇ ಸ್ವಕರ್ಮಪರಿಕಲ್ಪಿತ ಯಾತನಾ ಶರೀರೇ ಭೋಗಶರೀರಾವಾಪ್ತ್ಯರ್ಥಂ ವಾಸೋದಕ ಕೇಶೋದಕ ತಿಲೋದಕ ಸ್ವೀಕಾರಾರ್ಥಂ (ಬಲ) ಪ್ರೇತಶಿಲಾಸ್ಥಾಪನಂ ಮೃತಸ್ಥಾನೇ ಪ್ರೇತಘಟಸ್ಥಾಪನಂ ಪ್ರೇತ ತಂತುಸ್ಥಾಪನಂ ಚ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥




1. ಒಲೆ.
2. ಪ್ರೇತಕೂರ್ಚದ ಸ್ಥಾನ
3. ನಿತ್ಯಾದಿಪಿಂಡಸ್ಥಳ
4. ಜಲಪಾತ್ರೆ
5. ಗೋಗ್ರಾಸ
6. ವರುಣಶಿಲೆ
7. ಪ್ರೇತಶಿಲೆ
8. ಯಮಶಿಲೆ
9. ಬಾಲಾರಿಷ್ಟ ಗಿಡ
10. ಹವಿಸ್ಸಿನ ಎಲೆ.

ಬ್ರಹ್ಮದಂಡ ಇಟ್ಟು (ಎಡ) ಭೂಮಿಯನ್ನು ಗೋಮಯದಿಂದ ಶುದ್ಧಗೊಳಿಸಿ ಮಣ್ಣಿನಿಂದ ಒಂದು ಅಥವಾ ಒಂದೂವರೆ ಅಡಿ ಉದ್ದದ ತ್ರಿಕೋನಾಕಾರದ ವೇದಿಕೆಯ ತುದಿ ದಕ್ಷಿಣಕ್ಕೆ ಇರುವಂತೆ ಮಾಡಿ ಅನಂತರ ವೇದಿಕೆಯಲ್ಲಿ ಪ್ರತ್ಯೇಕವಾಗಿ ಪೂರ್ವದಿಂದ ಪಶ್ಚಿಮಕ್ಕೆ ಮೂರು ಹೊಂಡ ಮಾಡಿ (ಕೆಲವರಲ್ಲಿ ಒಂದು ಕಲ್ಲು ತಂದ ಪಕ್ಷದಲ್ಲಿ ಮಧ್ಯದಲ್ಲಿ ಒಂದು ಹೊಂಡ ಮಾತ್ರ. ಇನ್ನು ಕೆಲವರು ಪ್ರೇತಶಿಲೆಯನ್ನು ವೇದಿಕೆಯಲ್ಲಿ, ಎರಡನೇ ಕಲ್ಲನ್ನು ಪ್ರೇತಘಟದಲ್ಲಿ, ಮೂರನೇ ಕಲ್ಲನ್ನು ಜಲಪಾತ್ರೆಯಲ್ಲಿ ಇಡುವ ಕ್ರಮವಿದೆ) ಕ್ರಮವಾಗಿ ನಡುವಿನ ಹೊಂಡದಲ್ಲಿ ಒಂದು ಎಳೆಯ ಕೂರ್ಚ ಸಹಿತ ಹರಿವಾಣದಲ್ಲಿರುವ ಮಧ್ಯದ ಕಲ್ಲು, ಎಳ್ಳು ಹಿಡಿದು,

**ಓಂ ಪ್ರೇತಾಂ ಯಜ್ಞಸ್ಯ ಶಂಭುವಾ ಯುವಾಮಿದಾ ವೃಣೀಮಹೇ । ಅಗ್ನಿಂ ಚ ಹವ್ಯವಾಹನಮ್ ॥**

**ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂ ಗತಿಮ್ ।**
**ಮನಸಾ ವಾಯುರೂಪೇಣ ಕುಶೇ ತ್ವಾಂ ಯೋಜಯಾಮ್ಯಹಮ್ ॥**

**ಅಸ್ಮತ್ಪಿತುಃ .........ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಶಿಲಾಯಾಂ ಆವಾಹನಮುಪ–ತಿಷ್ಠತು ॥** ಎಂದು ಹೊಂಡದಲ್ಲಿಟ್ಟು **ಓಮ್ ಅಸುನೀತೇ........ಮುಖರತ್ನಕೋಶಮ್ ॥** ಎಂದು ಜೀವಸೂಕ್ತವನ್ನು ಪಠಿಸಬೇಕು. ಅನಂತರ ಶಿಲೆಯನ್ನು ಕಾಣದ ಹಾಗೆ ಮುಚ್ಚಬೇಕು. ಪುನಃ ಪ್ರೇತಶಿಲೆಯ ಎಡಭಾಗದಲ್ಲಿ (ಕರ್ಮಿಯ ಬಲಭಾಗದಲ್ಲಿ) ಒಂದು ಎಳೆಯ ಕೂರ್ಚ ಸಹಿತ ಹರಿವಾಣದಲ್ಲಿರುವ ತನ್ನ ಬಲಬಾಗದ ಕಲ್ಲು, ಎಳ್ಳು ಹಿಡಿದು, ಉತ್ತರ ಹೊಂಡದಲ್ಲಿ,

**ಪ್ರೇತಸಖ್ಯುಃ ಜಲಾಧಿಪತಿ ವರುಣಸ್ಯ ಶಿಲಾಯಾಮಾವಾಹನಮುಪತಿಷ್ಠತು ॥**

–ಎಂದು ಹೊಂಡದಲ್ಲಿಟ್ಟು ಮುಚ್ಚಿ, ಪುನಃ ಪ್ರೇತಶಿಲೆಯ ಬಲಭಾಗದಲ್ಲಿ (ಕರ್ಮಿಯ ಎಡಭಾಗದಲ್ಲಿ) ದಕ್ಷಿಣದ ಹೊಂಡದಲ್ಲಿ ಒಂದು ಎಳೆಯ ಕೂರ್ಚ ಸಹಿತ ಹರಿವಾಣದಲ್ಲಿರುವ ಕಲ್ಲು ಎಳ್ಳು ಹಿಡಿದು,

**'ಪ್ರೇತಸಖ್ಯುಃ ಯಮಸ್ಯ ಶಿಲಾಯಾಮಾವಾಹನಮುಪತಿಷ್ಠತು ॥**

–ಎಂದು ಹೊಂಡದಲ್ಲಿಟ್ಟು ಮುಚ್ಚಿ ಅನಂತರ ನಡು ಹೊಂಡದ ಸ್ವಲ್ಪ ಮೇಲ್ಭಾಗದಲ್ಲಿ ಬಲಾರಿಷ್ಟ ಗಿಡ ಇಲ್ಲವೇ 'ಕಡೀರ್'ಗಿಡ ನೆಡಬೇಕು.

(೧) ಸ್ನಾನದ ಸಮಯದಲ್ಲಿ ತಿಲತೋಯಾಂಜಲಿ ಬಿಟ್ಟಿದ್ದರೆ, ಈಗ ಇಲ್ಲಿ ಬೇಡ. ವಾಸೋದಕಾದಿಗಳನ್ನು ಬಿಟ್ಟರೆ ಸಾಕು. ಹಾಗೂ, (೨) ಹಿಂದಿನ ದಿನ ಸಾಯಂಕಾಲ ಮರಣಹೊಂದಿದ ಸಂದರ್ಭದಲ್ಲಿ ಕ್ರಿಯಾಭಾಗವನ್ನು ಮರುದಿನ ಮಾಡುವುದಾದರೆ ಮೊದಲ ದಿನದ ವಾಸೋದಕಾದಿಗಳನ್ನು ನೀಡಿ ಬಳಿಕ ಪ್ರೇತಘಟದಲ್ಲಿಯೂ ವಾಸೋದಕಾದಿಗಳನ್ನು ಕೊಟ್ಟು, ಪುನಃ ಮೃತ್ತಿಕಾಸ್ನಾನ ಮಾಡಿ ಎರಡನೆಯ ದಿನದ ವಾಸೋದಕಾದಿಗಳನ್ನು ವೇದಿಕೆ ಹಾಗೂ ಪ್ರೇತಘಟದಲ್ಲಿ ನೀಡಬೇಕು.

ಅನಂತರ ಕನಿಷ್ಠಪೂರ್ವಕರಾಗಿ,

**ಅಸ್ಮತ್ಪಿತುಃ ..........ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಮೃತಾಹಾತ್ ಪ್ರಥಮೇ (ದ್ವಿತೀಯೇ, ತೃತೀಯೇ.....)ಽಹನಿ ದಾಹಜನಿತತಾಪೋಪಶಮನಾರ್ಥಂ ಲಜ್ಜಾನಿವಾರಣಾರ್ಥಂ ಚ ವಾಸೋದಕಮುಪತಿಷ್ಠತು ॥** –ಎಂದು ಕರ್ಮವಸ್ತ್ರವನ್ನು ಹಿಂಡಿ ಇಲ್ಲವೇ ಹೆಬ್ಬೆರಳಿಗೆ ಸಿಕ್ಕಿಸಿ, ನೀರು ಹಾಕಿ ಪಿತೃತೀರ್ಥದಿಂದ ವೇದಿಕೆಯ ಮೇಲೆ

ಬಿಡಬೇಕು, ಹೀಗೆ ತಲೆ ಬಗ್ಗಿಸಿ ಬಲಕೈಯಲ್ಲಿ ಜುಟ್ಟು ಹಿಡಿದು, ನೀರು ಹಾಕಿ ಪಿತೃತೀರ್ಥ ದಿಂದ, '**ಪ್ರೇತಾಪ್ಯಯನಾರ್ಥಂ ಕೇಶೋದಕಮುಪತಿಷ್ಠತು** ॥' ಎಳ್ಳಿಗೆ ಹೆಬ್ಬೆರಳಿನ ತುದಿ ಮುಟ್ಟಿಸಿ ನೀರು ಹಾಕಿ ಪಿತೃತೀರ್ಥದಿಂದ '**ತಿಲೋದಕಮುಪತಿಷ್ಠತು**' ಎಂದು ವೇದಿಕೆಯ ಮೇಲೆ ಕೊಡಬೇಕು. (ಹೀಗೆಯೇ ಮುಂದಿನ ವಾಸೋದಕ, ಕೇಶೋದಕ, ತಿಲೋದಕಗಳನ್ನು ಕೊಡುವಾಗ ಇದೇ ಕ್ರಮವನ್ನು ಅನುಸರಿಸಬೇಕು.) ಎಳ್ಳುನೀರು ಹಿಡಿದು, ಮುಂದಿನ ಉದಕಾದಿಗಳನ್ನು ಕೊಡಬೇಕು.

**ಭಯನಿವಾರಣಾರ್ಥಂ ಖಡ್ಗೋದಕಮುಪತಿಷ್ಠತು ॥ ಬ್ರಹ್ಮಕರ್ಮಸಿದ್ಧ್ಯರ್ಥಂ ಯಜ್ಞೋಪವೀತ ಗೋಪೀಚಂದನಪಂಚಾಯುಧೋದಕ ದತ್ತಮುಪತಿಷ್ಠತು ॥ ವಿಷ್ಣುಲೋಕಾವಾಪ್ತ್ಯರ್ಥಂ ತೀರ್ಥೋದಕಮುಪತಿಷ್ಠತು ॥ ಧ್ಯಾನಾವಾಹನಾದ್ಯಷ್ಟೋಪ-ಚಾರಾರ್ಥೇ ಉದಕಮುಪತಿಷ್ಠತು ॥**

(ಬಲ) ಪೂರ್ವಾಭಿಮುಖವಾಗಿ **ಕೇಶವಾದಿ** ದ್ವಾದಶಮಂತ್ರಗಳಿಂದ ವೇದಿಕೆಯಲ್ಲಿ **ಜಲಾಂಜಲಿ** ಕೊಡಬೇಕು. ಕೃಷ್ಣಪಕ್ಷದಲ್ಲಿ ಮರಣವಾದರೆ ಸಂಕರ್ಷಣಾದಿ ದ್ವಾದಶ ಮಂತ್ರಗಳಿಂದ ಜಲಾಂಜಲಿ ಕೊಡಬೇಕು.

ಯಜಮಾನನ ತಾಯಿಯು ವಾಸೋದಕ, ಕೇಶೋದಕ, ತಿಲೋದಕ ಕೊಟ್ಟು, ಹೆಣ್ಣುಮಕ್ಕಳು ಕನಿಷ್ಠಪೂರ್ವಕರಾಗಿ ವಾಸೋದಕ ಕೇಶೋದಕ ಅಕ್ಷತೋದಕ (ವಿಧವೆಯಾದಲ್ಲಿ ತಿಲೋದಕ) ಕೊಡಬೇಕು. ಮದುವೆಯಾಗದ ಮಗಳಿದ್ದರೆ ಯಾವುದೇ ಅಧಿಕಾರ ಇಲ್ಲ (ಕೆಲವರಲ್ಲಿ ಅಕ್ಷತೋದಕ ಕೊಡುವ ಕ್ರಮ ಇದೆ). ಅನಂತರ ಅಕ್ಕಿ ಹಿಡಿದು,

**ಅನಾದಿ ನಿಧನೋ ದೇವಃ ಚಕ್ರಶಂಖಗದಾಧರಃ ।**
**ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದೋ ಭವ ॥**

**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯಂತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥**

–ಎಂಬ ಎರಡು ಮಂತ್ರಗಳಿಂದ ವೇದಿಕೆಗೆ ಅಪ್ರದಕ್ಷಿಣೆ ಬಂದು ಶಿಲೆ ಮೇಲೆ ಹಾಕಿ ದಕ್ಷಿಣಕ್ಕೆ ಮುಖ ಮಾಡಿ ನಮಸ್ಕಾರ ಮಾಡಿ '**ಪ್ರೇತಾಂತರ್ಯಾಮಿ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್** ॥' ಎಂದು ಕೃಷ್ಣಾರ್ಪಣ ಬಿಡಬೇಕು.

## ಪ್ರೇತಘಟಸ್ಥಾಪನಮ್

(ಎಡ) ಕ್ರಿಯಾಕರ್ತೃ ನೀರನ್ನು ಹಿಡಿದುಕೊಂಡು ನೇರವಾಗಿ ಕನಿಷ್ಠಪೂರ್ವಕನಾಗಿ ಮನೆಗೆ ಬಂದು ಶವವನ್ನು ಮಲಗಿಸಿದ ಚಾವಡಿಯ ಮೂಲೆಯಲ್ಲಿ ದಕ್ಷಿಣಕ್ಕೆ ಮುಖ ಮಾಡಿ, ಜಂತಿಗೆ ಜನಿವಾರದ ನೂಲು ಕಟ್ಟಿ ಅದರ ತುದಿಗೆ ಅರಸಿನದ ಕೋಡನ್ನು ಕಟ್ಟಿ

(ಕೆಲವರಲ್ಲಿ ಒಂದು ಎಳೆಯ ಕೂರ್ಚ ಇಲ್ಲವೇ ಬೆಳ್ಳಿ ಉಂಗುರವನ್ನು ಕಟ್ಟಿ ಇಡುತ್ತಾರೆ.) ಅದರ ನೇರ ಕೆಳಗೆ ಗೋಮಯದಿಂದ ಭೂಮಿಯನ್ನು ಪ್ರೋಕ್ಷಿಸಿ ದಕ್ಷಿಣಾಗ್ರವಾಗಿ ನೀರಿನಿಂದ ತ್ರಿಕೋನ ಮಂಡಲವನ್ನು ಮಾಡಿ ಅದರ ಮೇಲೆ ಒಂದು ಮುಷ್ಟಿ ಭತ್ತ ಹರಡಿ, ದರ್ಭೆ ಇಟ್ಟು ಮಡಕೆಯನ್ನು ಇಟ್ಟು ಅದರೊಳಗೆ ಅರಸಿನ ಕೋಡಿನಿಂದ ಕೂಡಿದ ಹಗ್ಗವನ್ನು ಇಳಿಬಿಡಬೇಕು. (ಕೆಲವರಲ್ಲಿ ಮಡಕೆಯ ಮುಚ್ಚಳದ ನಡುವೆ ಒಂದು ರಂಧ್ರವನ್ನು ಮಾಡಿ ಅದರೊಳಗೆ ಆ ದಾರದಿಂದ ಕೂಡಿದ ಅರಸಿನ ಕೊಂಬನ್ನು ಇಳಿಯಬಿಟ್ಟು ಮುಚ್ಚಳವನ್ನು ತಿರುಗಿಸಿ ಮಡಕೆಗೆ ಮುಚ್ಚಿಟ್ಟು ಮುಂದೆ ವಾಸೋದಕಾದಿಗಳನ್ನು ಮುಚ್ಚಳದ ಮೇಲೆಯೇ ಬಿಡುವ ಕ್ರಮವಿದೆ. ಇದು ಉತ್ತಮ ಪಕ್ಷ.)

1. ಜಂತಿ
2. ಯಜ್ಞೋಪವೀತ
3. ಹಾಲು–ನೀರು
4 ಅರಸಿನ ಕೋಡು
5. ದೀಪ.




ಅನಂತರ ದೀಪವನ್ನು ದಕ್ಷಿಣಕ್ಕೆ ಮುಖಮಾಡಿ ಇಟ್ಟು ಹತ್ತು ದಿನಗಳವರೆಗೂ ದೀಪ ಆರದಂತೆ ರಕ್ಷಿಸಬೇಕು. ಹಿರಿಯ ಮಗ ದಕ್ಷಿಣಕ್ಕೆ ಮುಖಮಾಡಿ ಎಳ್ಳು ಹಿಡಿದು,

**ಅಸ್ಮತ್ಪಿತುಃ ............ಗೋತ್ರಸ್ಯ ............ಶರ್ಮಣಃ ಪ್ರೇತಸ್ಯ ಮೃತದಿನಾದಾರಭ್ಯ ದಶಾಹಪರ್ಯಂತಂ ವಾಸೋದಕಕೇಶೋದಕತಿಲೋದಕಸ್ವೀಕಾರಪೂರ್ವಕಂ ಪ್ರೇತಾಪ್ಯಾಯನಾರ್ಥಂ ಪ್ರೇತಘಟಂ ಪ್ರತಿಷ್ಠಾಪಯಾಮಿ ॥** –ಎಂದು ಘಟಕ್ಕೆ ಹಾಕಿ, ಪುನಃ ಎಳ್ಳು ಹಿಡಿದು,

**ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂ ಗತಿಮ್ ।**
**ಮನಸಾ ವಾಯುರೂಪೇಣ ಕುಶೇ ತ್ವಾಂ ಯೋಜಯಾಮ್ಯಹಮ್ ॥**

**ಪ್ರೇತಮ್ ಆವಾಹಯಾಮಿ** ॥ ಎಂದು ಮಡಕೆಯೊಳಗೆ ಹಾಕಿ ಕನಿಷ್ಠಪೂರ್ವಕರಾಗಿ ಹಿಂದಿನ ಕ್ರಮದಂತೆ ನಾಮಗೋತ್ರೋಚ್ಚಾರಣಪೂರ್ವಕ ಎಳ್ಳು ಹಿಡಿದು ಜಲಪಾತ್ರೆಯ ನೀರಿನಿಂದ ವಾಸೋದಕಕೇಶೋದಕತಿಲೋದಕಗಳನ್ನು ಮಡಕೆಯೊಳಗೆ ಬಿಡಬೇಕು. (ಕೆಲವರಲ್ಲಿ ಇಲ್ಲಿಯೂ ತಿಲತೋಯಾಂಜಲಿಯನ್ನು ಕೊಡುವ ಕ್ರಮವಿದೆ.) ಅನಂತರ (ಬಲ) ಹಿರಿಯ ಮಗ '**ಕ್ಷೀರನೀರಪ್ರದಾನಂ ಕರಿಷ್ಯೇ ॥**' ಎಂದು ನೀರು ಬಿಟ್ಟು (ಎಡ) ಒಂದು ಲೋಟ ನೀರು, ಒಂದು ಲೋಟ ಬಿಸಿ ಹಾಲು ಹಿಡಿದು,

**ಶ್ಮಶಾನಾನಲದಗ್ಧೋಽಸಿ ಪರಿತ್ಯಕ್ತೋಽಸಿ ಬಾಂಧವೈಃ ।**
**ಇದಂ ಕ್ಷೀರಂ ಚ ನೀರಂ ಚ ಅತ್ರ ಸ್ನಾಹಿ ಇದಂ ಪಿಬ ॥**

–ಎಂಬ ಮಂತ್ರದಿಂದ ಮಡಕೆಯ ಎದುರು ಹಾಲು ನೀರು ಇಟ್ಟು, (ಬಲ)

**ಅನಾದಿ ನಿಧನೋ ದೇವಃ ಚಕ್ರಶಂಖಗದಾಧರಃ ।**
**ಅಕ್ಷಯ್ಯ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದೋ ಭವ ॥**
**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯಂತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥**

–ಎಂದು ಮಂತ್ರಗಳೆರಡರಿಂದ ಎಲ್ಲರೂ ಅಕ್ಷತೆಹಿಡಿದು ಮಡಕೆಗೆ ಅಪ್ರದಕ್ಷಿಣೆ ಬಂದು ಮಡಕೆ ಮೇಲೆ ಹಾಕಿ ದಕ್ಷಿಣಕ್ಕೆ ಮುಖಮಾಡಿ ನಮಸ್ಕಾರ ಮಾಡಬೇಕು. ಮನೆಯಿಂದ ಹೊರಹೋಗುವಾಗ ಜ್ಯೇಷ್ಠಪೂರ್ವಕವಾಗಿ ಹೋಗಬೇಕು. ನಿತ್ಯಕ್ರಿಯಾಸ್ಥಾನ, ಕರ್ತೃಗಳ ಸ್ಥಾನಗಳನ್ನು ದ್ರವ್ಯ, ಪಾತ್ರಗಳನ್ನು ಯಾವ ಕಾರಣಕ್ಕೂ ವ್ಯತ್ಯಾಸ ಮಾಡಬಾರದು.

## ನಿತ್ಯಾದಿಶ್ರಾದ್ಧವಿಧಿಃ

ಕ್ರಿಯಾಕರ್ತೃವು ವೇದಿಕೆಯ ಬಳಿ ಬಂದು (ಬಲ) ಪೂರ್ವಮುಖವಾಗಿ ಕುಳಿತು ಪವಿತ್ರ ಹೊರ ತೆಗೆದು ಶಿಖಾಬಂಧನ ಮಾಡದೆ, ಆಚಮನ ಮಾಡಿ, ಪುನಃ ಪವಿತ್ರ ಧರಿಸಿಕೊಳ್ಳಬೇಕು. (ಕೆಲವರಲ್ಲಿ ತಲೆ ಒರಸಿಕೊಳ್ಳುವ ಕ್ರಮವಿದ್ದು, ಒಂದು ವೇಳೆ ಕರ್ತೃವು ಅಶಕ್ತನಾಗಿದ್ದಲ್ಲಿ ತಲೆ ಒರಸಿಕೊಳ್ಳಬಹುದು.)

**ಸಂಕಲ್ಪಃ**

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ .......ಗೋತ್ರಸ್ಯ .........ಶರ್ಮಣಃ ಪ್ರೇತಸ್ಯ ಪ್ರಥಮದಿವಸೇ ಶಿರೋಽವಯವನಿಷ್ಪತ್ತ್ಯರ್ಥಂ (ದ್ವಿತೀಯ ದಿವಸೇ .........ಅವಯವನಿಷ್ಪತ್ತ್ಯರ್ಥಂ) ಭೂಲೋಕಾತ್ ಪ್ರೇತಲೋಕ ಗಮನಕಾಲೇ ಸುಖಪಾಥೇಯುಸಿದ್ಧ್ಯರ್ಥಂ** (ಬಲ) **ಪ್ರಥಮೇಽಹನಿ (ದ್ವಿತೀಯೇಽಹನಿ.......** –ಇತ್ಯಾದಿ) **ವಿಷಮಶ್ರಾದ್ಧ ನಗ್ನಪ್ರಚ್ಛಾದನಶ್ರಾದ್ಧ ಪಾಥೇಯಶ್ರಾದ್ಧ ಪುರಸ್ಸರ ನೈಮಿತ್ತಿಕ ಪಿಂಡಪ್ರದಾನಾನಿ ಏಕೋದ್ದಿಷ್ಟವಿಧಿನಾ ಸಮಾನತಂತ್ರೇಣ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥** (ಕೆಲವರಲ್ಲಿ ಅಸ್ಥಿಸಂಚಯನದ ಅನಂತರ ಪಾಥೇಯಶ್ರಾದ್ಧ ಮಾಡುವ ಕ್ರಮವಿದೆ. ಅಲ್ಲದೇ ಮೊದಲ ದಿನವೇ ಆಮಾನ್ನದಾನ ಕೊಡುವ ಮೂಲಕ ಪಾಥೇಯಶ್ರಾದ್ಧ ಮಾಡಬಹುದು ಹಾಗೂ ನಾಲ್ಕು ಶ್ರಾದ್ಧಗಳನ್ನು ಬೇರೆಬೇರೆಯಾಗಿಯೇ ಮಾಡುವ ಕ್ರಮವಿದೆ.) ಕರ್ಮಿಗಳು ಎಳ್ಳು, ಚಿಲ್ಲರೆ, ದರ್ಭೆ, ತುಲಸಿ ಹಿಡಿದು ನಿಂತಲ್ಲೇ ಮೂರು ಪ್ರದಕ್ಷಿಣೆ ಬಂದು,

**ವಿಪ್ರೌಘದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।**
**ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಮ್ ॥**

ನೀರಿನಿಂದ ತ್ರಿಕೋನಾಕಾರದ ಮಂಡಲಮಾಡಿ ಮಂಡಲದಲ್ಲಿಟ್ಟು (ಎಡ) **'ಅಸ್ಮತ್ಪಿತು-ರುದ್ದಿಶ್ಯ ನಿತ್ಯಾದಿಶ್ರಾದ್ಧಕರ್ತುಂ ಮಮ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ॥' (ಸಂಪದಸ್ತು ।)** –ಎಂದು ಪ್ರತಿವಚನ ಪಡೆದುಕೊಳ್ಳಬೇಕು.

(ಬಲ) **ಜಲಪಾತ್ರಸ್ಥಾಪನಂ ಕರಿಷ್ಯೇ ॥** –ಎಂದು ಸಂಕಲ್ಪಿಸಿ, ಕರ್ಮಿಗಳು ತಮ್ಮ ಎಡಭಾಗದಲ್ಲಿ ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ ಒಂದು ದರ್ಭೆಯನ್ನು ದಕ್ಷಿಣಾಗ್ರವಾಗಿ ಇಟ್ಟು ಅದರ ಮೇಲೆ ತನ್ನ ಜಲಪಾತ್ರೆಯನ್ನು ಇಟ್ಟು ನಾರಾಯಣಸ್ಮರಣೆಯೊಂದಿಗೆ ಜಲಪಾತ್ರಕ್ಕೆ ನೀರು ಹಾಕಿ,

**ಗಂಗಾ ಗೋದಾವರೀ ಕೃಷ್ಣಾ ಪ್ರಯಾಗಾ ದ್ವಾರಕಾ ತಥಾ ।**
**ಆವಾಹ್ಯ ಪಂಚಗಂಗಾಶ್ಚ ಸರ್ವಪಾಪಹರಾಃ ಶುಭಾಃ ॥**

ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು **'ತಿಲ-ಮುಪತಿಷ್ಠತು ॥'** ಹೀಗೆ ಎಳ್ಳು, ಹಿರಣ್ಯ, ಗಂಧ, ಪುಷ್ಪ ಹಾಕಿ ಹತ್ತು ಬಾರಿ ಅಷ್ಟಾಕ್ಷರಜಪ ಮಾಡಿ, ಜಲಕೂರ್ಚದಿಂದ ನೀರು ಹಿಡಿದು,

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥**

ಸುತ್ತಲೂ ಪ್ರೋಕ್ಷಣೆ ಮಾಡಿ, ತಮ್ಮಂದಿರು ಅಣ್ಣನನ್ನು ಮುಟ್ಟಿಕೊಂಡಿರುವಂತೆಯೇ ಹಿರಿಯವನು **'ಪ್ರೇತಾರಾಧನಂ ಕರಿಷ್ಯೇ ॥'** ಎಂದು ಸಂಕಲ್ಪ ಮಾಡಿ, ವೇದಿಕೆಯ ಕೆಳಭಾಗದಲ್ಲಿ (ಕರ್ಮಿಯ ಬಲಭಾಗದಲ್ಲಿ) ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ ಒಂದು ಚಿಕ್ಕ ಬಾಳೆಎಲೆಯ ತುಂಡನ್ನು ಇಟ್ಟು ಅದರ ಮೇಲೆ ಒಂದು ಎಳೆಯ ಕೂರ್ಚವನ್ನು ದಕ್ಷಿಣಕ್ಕೆ ತುದಿ ಮಾಡಿ ಇಡಬೇಕು. (ಕೆಲವರಲ್ಲಿ ಪ್ರತ್ಯೇಕವಾಗಿ ನಾಲ್ಕು ಎಲೆಯಲ್ಲಿ ನಾಲ್ಕು ಕೂರ್ಚ ಇಟ್ಟು ಪ್ರತ್ಯೇಕವಾಗಿ ಆರಾಧನೆ ಮಾಡುತ್ತಾರೆ.) ಕೈಮುಗಿದು–

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಸ್ತು ದಕ್ಷಿಣೇ ।**
**ಪ್ರದ್ಯುಮ್ನೋ ದಕ್ಷಿಣೇ ಪಾತು ವಾಸುದೇವಸ್ತಥೋತ್ತರೇ ।**
**ಊರ್ಧ್ವಂ ಗೋವರ್ಧನೋ ರಕ್ಷೇದಧಸ್ತಾಚ್ಚ ತ್ರಿವಿಕ್ರಮಃ ॥**

–ಎಂದು ಪ್ರಾರ್ಥಿಸಿ, ಒಂದು ತುದಿ ದರ್ಭೆಯನ್ನು ಮೇಲ್ತುದಿಯಾಗಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ಪ್ರಥಮೇಽಹನಿ ನಿತ್ಯವಿಧಿಶ್ರಾದ್ಧಪೂರ್ವಕ ನಗ್ನಪ್ರಚ್ಛಾದನ ಶ್ರಾದ್ಧಪೂರ್ವಕ ವಿಷಮಶ್ರಾದ್ಧಪೂರ್ವಕ ಪಾಥೇಯಶ್ರಾದ್ಧೇ ......ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಕೂರ್ಚಸ್ಥಾನೇ ಆವಹನೀಯಾರ್ಥೇ ಕ್ಷಣಮುಪತಿಷ್ಠತು ॥**

–ಎಂದು ಬ್ರಾಹ್ಮಣಕೂರ್ಚದ ಬಲಬದಿಯಲ್ಲಿ ದರ್ಭೆಯನ್ನಿಡುವುದು. ಅನಂತರ ಬ್ರಾಹ್ಮಣ ಕೂರ್ಚದ ಎದುರು ದಕ್ಷಿಣಾಗ್ರವಾಗಿ ತ್ರಿಕೋನ ಮಂಡಲವನ್ನು ಅಪ್ರದಕ್ಷಿಣೆಯಾಗಿ

ನೀರಿನಿಂದ ಮಾಡಿ ಒಂದು ತುದಿ ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು, **'ಪಾದ್ಯಸ್ಥಾನೇ ದರ್ಭಪತ್ರಮುಪತಿಷ್ಠತು ॥'** ಎಂದು ಮಂಡಲದಲ್ಲಿ ಇಟ್ಟು ಎಳ್ಳು ನೀರು ಹಿಡಿದು, **'ತಿಲೋದಕಮುಪತಿಷ್ಠತು ॥'** ಎಂದು ಮಂಡಲದಲ್ಲಿ ತಿಲೋದಕ ಕೊಟ್ಟು, ಅಂಜಲಿಮುದ್ರೆ ಮಾಡಿ, **'ಸ್ವಾಗತಮುಪತಿಷ್ಠತು ॥'** ತಿಲೋದಕ ಹಿಡಿದು, **'ಪಾದ್ಯಮುಪತಿಷ್ಠತು ॥'** ಎಂದು ಮಂಡಲದಲ್ಲಿ ಬಿಟ್ಟು, ಒಂದು ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು **'ಆಸನ-ಮುಪತಿಷ್ಠತು ॥'** ಎಂದು ಕೂರ್ಚದ ಅಡಿಯಲ್ಲಿಟ್ಟು ಜಲಕೂರ್ಚದಿಂದ ನೀರು ಹಿಡಿದು, **'ಆಸನಾಂತೇ ಜಲಮುಪತಿಷ್ಠತು ॥'** ಎಂದು ಕೂರ್ಚಸ್ಥಾನದಲ್ಲಿ ಕೊಟ್ಟು ಗರಿಕೆ ಮತ್ತು ಎಳ್ಳು ಹಿಡಿದು,

**ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂ ಗತಿಮ್ ।**
**ಮನಸಾ ವಾಯುರೂಪೇಣ ಕುಶೇ ತ್ವಾಂ ಯೋಜಯಾಮ್ಯಹಮ್ ॥**

**ಪ್ರೇತಸ್ಯ ಆವಾಹನಮುಪತಿಷ್ಠತು ॥** –ಎಂದು ಕೂರ್ಚದ ಮೇಲೆ ಇಟ್ಟು,

## ಅರ್ಘ್ಯಮ್

(ಬಲ) ಒಂದು ಬಾಳೆಲೆದೊಣ್ಣೆಗೆ ನೀರು ಹಾಕಿ ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು ತಿಲಾದಿ ದ್ರವ್ಯ ಪೂರಣೆ ಮಾಡಿ,

**ತಿಲೋಽಸಿ ಸೋಮದೇವತ್ಯೋ ಗೋಸವೇ ದೇವನಿರ್ಮಿತಃ ।**
**ಪ್ರತ್ನವದ್ಭಿಃ ಪ್ರತ್ತ ಸ್ವಧಯೇಹಿ ಪ್ರೇತ ಇಮಾನ್ ಲೋಕಾನ್ ಪ್ರೀಣಯಾಹಿ ನಃ ॥**

ಅಷ್ಟಾಕ್ಷರದಿಂದ ಅಭಿಮಂತ್ರಿಸಿ, (ಎಡ) ತಿಲಸಹಿತ ಅರ್ಘ್ಯಪಾತ್ರದ ನೀರು ಹಿಡಿದು,

(ಬಲ) **ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಅರ್ಘ್ಯಮುಪತಿಷ್ಠತು ॥**
–ಎಂದು ಬ್ರಾಹ್ಮಣಕೂರ್ಚದ ಮೇಲೆ ತಿಲೋದಕ ನೀಡಿ, **ಗಂಧಮುಪತಿಷ್ಠತು ॥** ಎಂದು ಗಂಧವನ್ನು ಅರ್ಪಿಸಿ (ಎಡ) **ಅಲಂಕಾರಾರ್ಥೇ ಪುಷ್ಪಮುಪತಿಷ್ಠತು ॥** ಎಂದು ಕೂರ್ಚದ ಮೇಲೆ ಪುಷ್ಪವಿಟ್ಟು (ಬಲ) ಅಕ್ಷತೆ ಹಿಡಿದುಕೊಂಡು,

**ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।**
**ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ ॥**

ಮಂತ್ರ ಪಠಿಸಿ ಅಕ್ಷತೆಯನ್ನು ಕೂರ್ಚಕ್ಕೆ ಹಾಕಿ ಕೈಮುಗಿದುಕೊಂಡು,

(ಎಡ) **ಅಸ್ಮತ್ಪಿತುಃ ನಿತ್ಯವಿಧಿಶ್ರಾದ್ಧಪೂರ್ವಕ ನಗ್ನಪ್ರಚ್ಛಾದನ ಶ್ರಾದ್ಧಪೂರ್ವಕ ವಿಷಮಶ್ರಾದ್ಧಪೂರ್ವಕ ಪಾಥೇಯಶ್ರಾದ್ಧೇಷು ಕೂರ್ಚಮುಖೇನ ಆಸನಾದಿ ತಿಲೋದಕ ಪರ್ಯಂತಂ ಮಯಾಕೃತಮಾರಾಧನಂ ಯಥಾಶಾಸ್ತ್ರಿಯಮಸ್ತ್ವಿತಿ ಭವಂತೋ ಬ್ರುವಂತು ॥ (ಯಥಾಶಾಸ್ತ್ರಿಯಮಸ್ತು) ॥**

## ಬ್ರಾಹ್ಮಣಭೋಜನವಿಧಿಃ

(ಬಲ) ಕೂರ್ಚಬ್ರಾಹ್ಮಣರಿಗೆ ಮೂರು ಬಾರಿ ತೀರ್ಥವನ್ನು ಕೊಟ್ಟು ಬ್ರಾಹ್ಮಣಕೂರ್ಚದ ಎದುರು ಪಶ್ಚಿಮಾಗ್ರವಾಗಿ ಎಲೆ ಹಾಕಿ ಹಾಗೆಯೇ, ಗೋಗ್ರಾಸಕ್ಕೆ ಪುರ್ವಾಗ್ರವಗಿ ಹಾಗೂ ತಮ್ಮತಮ್ಮ ಎಡಭಾಗದಲ್ಲಿ ಪಿಂಡಕ್ಕೋಸ್ಕರ ದಕ್ಷಿಣಾಗ್ರವಾಗಿ ಎಲೆ ಹಾಕಿ, ಜಲಕೂರ್ಚದಿಂದ ಹವಿಸ್ಸಿಗೆ ಹಾಗೂ ಎಲೆಗೆ ನೀರು ಪ್ರೋಕ್ಷಣೆ ಮಾಡಿ, ಬೇಯಿಸಿದ ಅನ್ನಕ್ಕೆ ಎರಡು ಬಾರಿ ಹಾಗೂ ಎಲೆಗೆ ಒಂದು ಬಾರಿ ಅಭಿಘಾರ ಮಾಡಿ ಹವಿಸ್ಸನ್ನು ಸೂರ್ಯನಾರಾಯಣನಿಗೆ ಸಮರ್ಪಿಸಿ ಅನಂತರ ಹವಿಸ್ಸನ್ನು (ಹೆಣ್ಣುಮಕ್ಕಳು ಬಳಸಬಹುದು) ಗೋಗ್ರಾಸದ ಎಲೆಗೆ, ಬ್ರಾಹ್ಮಣಕೂರ್ಚದ ಎಲೆಗೆ ಹಾಗೂ ತಮ್ಮೆಲ್ಲರ ಎಲೆಗೂ ಹಾಕಿ ಅನ್ನದ ಮೇಲೆ ಎರಡು ಬಾರಿ ಅಭಿಘಾರ ಮಾಡಿ, **'ನಗ್ನಪ್ರಚ್ಛಾದನಶ್ರಾದ್ಧ, ವಿಷಮಶ್ರಾದ್ಧಾಂಗ ಪ್ರೇತಾಹುತಿಂ ಹೋಷ್ಯೇ'** (ಎಡ) ಎಂದು ಕೂರ್ಚಬ್ರಾಹ್ಮಣನ ಬಲಭಾಗದಲ್ಲಿ ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ಒಂದು ದರ್ಭೆ ಇಟ್ಟು, ಸ್ವಲ್ಪ ಘೃತಮಿಶ್ರಾನ್ನವನ್ನು ಹಿಡಿದು, **'ಅಸ್ಮತ್ಪಿತ್ರೇ [ಮಾತ್ರೇ] ......ಗೋತ್ರಾಯ [ಗೋತ್ರಾಯೈ] ... ...ಶರ್ಮಣೇ[ನಾಮ್ನ್ಯೈ] ಪ್ರೇತಾಯ [ಪ್ರೇತಾಯೈ] ಸ್ವಾಹಾ ॥'** ಎಂದು ದರ್ಭೆಯ ಮೇಲಿಡಬೇಕು.

**'ಪೃಥಿವೀ ತೇ ಪಾತ್ರಂ ವಿಷ್ಣೋಃ ಕವ್ಯಂ ರಕ್ಷಸ್ವ ॥'** ಜಲಕೂರ್ಚದಿಂದ ನೀರು ಹಿಡಿದು, **'ಭೂರ್ಭುವಃಸ್ವಃ । ಸತ್ಯಂ ತ್ವರ್ತೇನ ಪರಿಷಿಂಚಾಮಿ ॥'** ಎಂದು ಬ್ರಾಹ್ಮಣರ ಎಲೆಗೆ ಅಪ್ರದಕ್ಷಿಣೆಯಾಗಿ ಸುತ್ತು ಕಟ್ಟಿ,

**ಓಮ್ ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಮ್ । ಸಮೂಢಮಸ್ಯ ಪಾಂಸುರೇ ॥** –ಎಂಬ ಮಂತ್ರ ಪಠಿಸಿ, ಎಳ್ಳು ತುಳಸಿ ಗರಿಕೆ ಹಿಡಿದು–

**ಅಸ್ಮತ್ಪಿತುಃ ....ಶ್ರಾದ್ಧೇ ...ಗೋತ್ರಾಯ ....ಶರ್ಮಣೇ ಪ್ರೇತಾಯ ಕ್ಷುತ್ಪಿಪಾಸಾನಿವಾರಣಾರ್ಥಮ್ ಇದಂ ಸೋಪಸ್ಕರಾನ್ನಮುಪತಿಷ್ಠತು ॥** –ಎಂದು ಕೂರ್ಚಬ್ರಾಹ್ಮಣನ ಎಲೆಯ ಅನ್ನದ ಮೇಲೆ ಬಿಡಬೇಕು. (ಬಲ) ತುಳಸಿ ನೀರು ಹಿಡಿದು ಪೂರ್ವಮುಖವಾಗಿ–

**ಸುರಭಿರ್ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದಾಶ್ರಿತಾ ।**
**ಗೋಗ್ರಾಸಸ್ತು ಮಯಾ ದತ್ತಃ ಸುರಭಿಃ ಪ್ರತಿಗೃಹ್ಯತಾಮ್ ॥**

ಗೋಗ್ರಾಸ ಬಿಟ್ಟು–

**ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।**
**ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥**

**ಅಸ್ಮತ್ಪಿತುಃ ಮೃತಾಹಾತ್ (ಪ್ರಥಮೇಽಹನಿ) .....ಗೋತ್ರಸ್ಯ .....ಶರ್ಮಣಃ .....ಪ್ರೇತಸ್ಯ ನಿತ್ಯವಿಧಿಶ್ರಾದ್ಧಪೂರ್ವಕ ವಿಷಮಶ್ರಾದ್ಧಪೂರ್ವಕ ನಗ್ನಪ್ರಚ್ಛಾದನಶ್ರಾದ್ಧಪೂರ್ವಕ**

**ಪಾಥೇಯಶ್ರಾದ್ಧಾಂಗ ಕೂರ್ಚಮುಖಬ್ರಾಹ್ಮಣಾರಾಧನಾಖ್ಯೇನ ಕರ್ಮಣಾ** (ಬಲ) **ಪಿತೃ[ಮಾತೃ]ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ ॥**

**ಶ್ರೀಕೃಷ್ಣಾರ್ಪಣಮಸ್ತು** ॥ ಒಂದು ಸೌಟು ತೀರ್ಥ ಹಿಡಿದು,

**ಅಸ್ಮತ್ಪಿತುಃ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಆಪೋಶನಮುಪತಿಷ್ಠತು ॥** –ಎಂದು ಕೂರ್ಚದ ಮೇಲೆ ನೀರು ಬಿಟ್ಟು,

**ಶ್ರೀಕೃಷ್ಣಾರ್ಪಣಮಸ್ತು ॥ ಪ್ರಾಣಾಯ ನಮಃ । ಅಪಾನಾಯ ನಮಃ । ವ್ಯಾನಾಯ ನಮಃ । ಉದಾನಾಯ ನಮಃ । ಸಮಾನಾಯ ನಮಃ । ನಮೋ ನಾರಾಯಣಾಯ ನಮಃ ॥**

ಅನಂತರ ದಕ್ಷಿಣಕ್ಕೆ ಮುಖಮಾಡಿ ಕುಳಿತು, ಹವಿಸ್ಸಿಗೆ ಎಳ್ಳು ಗರಿಕೆ ತುಳಸೀತೀರ್ಥ ಹಾಕಿ ನಾರಾಯಣಸ್ಮರಣೆಯೊಂದಿಗೆ ಉದ್ದದ ನಾಲ್ಕು ಪಿಂಡಗಳನ್ನು ಮಾಡಿ ಕೈತೊಳೆದು (ಎಡ) ಒಂದು ಸೌಟು ನೀರನ್ನು ಹಿಡಿದು, ಕೂರ್ಚದ ಎಡಭಾಗದಲ್ಲಿ ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ಒಂದು ದರ್ಭೆಯನ್ನು ದಕ್ಷಿಣಾಗ್ರವಾಗಿಟ್ಟು ಅದರ ಮೇಲೆ ಎಳ್ಳು ನೀರು ಬಿಟ್ಟು ಸ್ವಲ್ಪ ಅನ್ನವನ್ನು ಹಿಡಿದು '**.........ಗೋತ್ರಾಯ .........ಶರ್ಮಣೇ ಪ್ರೇತಾಯ ನಗ್ನಪ್ರಚ್ಛಾದನಶ್ರಾದ್ಧ, ವಿಷಮಶ್ರಾದ್ಧಾಂಗ ವಿಕಿರಬಲಿಮುಪತಿಷ್ಠತು ॥**' ದರ್ಭೆಯ ಮೇಲಿಟ್ಟು ಆ ಅನ್ನದ ಮೇಲೆ ಎಳ್ಳು ನೀರು ಬಿಡಬೇಕು.

(ಬಲ) **ಅಸ್ಮತ್ಪಿತುಃ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಉತ್ತರಾಪೋಶನ–ಮುಪತಿಷ್ಠತು ॥** –ಎಂದು ಕೂರ್ಚದ ಮೇಲೆ ನೀರು ಬಿಟ್ಟು, ಪುನಃ (ಎಡ) '**ಹಸ್ತ ಪ್ರಕ್ಷಾಲನಾದ್ಯುಪತಿಷ್ಠಂತು ॥** ಎಂದು ನೀರು ಬಿಡಬೇಕು.

## ಬರ್ಹಿಷ್ಯಾಸನಾಽವಾಹನಮ್

ಹಿರಿಯವನು ವೇದಿಕೆಯ ಎದುರು ಉಳಿದ ಕರ್ತೃಗಳು ತಮ್ಮತಮ್ಮ ಎದುರು ದಕ್ಷಿಣಾಗ್ರವಾಗಿ ಜೇಡಿಯಿಂದ ನಾಲ್ಕು ತ್ರಿಕೋನ ಮಂಡಲ ಮಾಡಿ (ಎರಡನೇ ದಿನದ ನಿತ್ಯವಿಧಿ ಇದ್ದರೆ ಮತ್ತೊಂದು ಮಂಡಲ ಮಾಡಬೇಕು. ಹೀಗೆ ದಿನ ಹೆಚ್ಚಿದಂತೆ ಆಯಾ ಶ್ರಾದ್ಧದ ಮಂಡಲ ಮಾಡಬೇಕು.) (ಎಡ) ಒಂದು ಎಳೆಯ ಮುಷ್ಟಿ ದರ್ಭೆ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ಪ್ರಥಮೇಽಹನಿ ನಿತ್ಯವಿಧಿಶ್ರಾದ್ಧೇ ಪಿಂಡಸ್ಥಾನೇ ಉಲ್ಲೇಖನಮುಪತಿಷ್ಠತು ॥**

–ಎಂದು ತ್ರಿಕೋನ ಮಂಡಲದ ಒಳಗೆ ಉತ್ತರದಿಂದ ದಕ್ಷಿಣಕ್ಕೆ ಉಲ್ಲೇಖನ ಮಾಡಿ ದರ್ಭೆಯನ್ನು ಮಂಡಲದಲ್ಲಿಟ್ಟು ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ ದರ್ಭೆಯನ್ನು ಹಿಂದೆ ಬಿಸಾಡಿ ಕೈತೊಳೆದು, ಹೀಗೆ ಮೂರು ಶ್ರಾದ್ಧಗಳ ಪಿಂಡಸ್ಥಾನದಲ್ಲಿಯೂ ಆಯಾ ಶ್ರಾದ್ಧಗಳ ನಾಮೋಚ್ಚಾರಣೆ ಮಾಡಿ ಉಲ್ಲೇಖನ ಮಾಡುವುದು.

**ವಿಷಮಶ್ರಾದ್ಧೇ ಪಿಂಡಸ್ಥಾನೇ ಉಲ್ಲೇಖನಮುಪತಿಷ್ಠತು । ನಗ್ನಪ್ರಚ್ಛಾದನ ಶ್ರಾದ್ಧೇ ಪಿಂಡಸ್ಥಾನೇ ಉಲ್ಲೇಖನಮುಪತಿಷ್ಠತು । ಪಾಥೇಯಶ್ರಾದ್ಧೇ ಪಿಂಡಸ್ಥಾನೇ ಉಲ್ಲೇಖನಮುಪತಿಷ್ಠತು ॥**

(ಬಾಕಿ ಉಳಿದಿದ್ದರೆ **ದ್ವಿತೀಯೇಽಹನಿ**......... ಇತ್ಯಾದಿ). ಎಳ್ಳನ್ನು ಹಿಡಿದುಕೊಂಡು,

**ಅಸ್ಮತ್ಪಿತುಃ ಮತಾಹಾತ್ ಪ್ರಥಮೇಽಹನಿ ನಿತ್ಯವಿಧಿಶ್ರಾದ್ಧೇ ಪಿಂಡಸ್ಥಾನೇ ತಿಲಮುಪತಿಷ್ಠತು ॥** –ಎಂದು ತ್ರಿಕೋನ ಮಂಡಲದ ಒಳಗೆ ಉತ್ತರದಿಂದ ದಕ್ಷಿಣಕ್ಕೆ ಎಳ್ಳು ಹರಡಿ, ಉಳಿದ ಮೂರು ಶ್ರಾದ್ಧಗಳ ಪಿಂಡಸ್ಥಾನದಲ್ಲಿಯೂ ಮಾಡಿ, ನಾಲ್ಕು ತುದಿ ದರ್ಭೆಯನ್ನು ದಕ್ಷಿಣಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ಮಂಡಲಮಧ್ಯೇ ಬರ್ಹಿರುಪತಿಷ್ಠತು ॥** –ಎಂದು ಮಂಡಲದ ನಡುವೆ ಇಟ್ಟು ಹೀಗೆ ಉಳಿದ ಮೂರು ಶ್ರಾದ್ಧಗಳ ಪಿಂಡ ಸ್ಥಾನದಲ್ಲಿಯೂ ಮಾಡಿ ಎಳ್ಳು ನೀರು ಹಿಡಿದು, '**ಬರ್ಹಿಷ್ಯುಪರಿ ತಿಲೋದಕಮುಪ–ತಿಷ್ಠತು ॥**' –ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಕೊಟ್ಟು ಹೀಗೆ ಉಳಿದ ಮೂರು ಸ್ಥಾನಗಳಲ್ಲಿಯೂ ಮಾಡಿ ಪುನಃ ಒಂದು ತುದಿ ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್.......ಶ್ರಾದ್ಧೇ ಬರ್ಹಿಷ್ಯಾಸನಮುಪತಿಷ್ಠತು ॥** –ಎಂದು ಬರ್ಹಿಸ್ಸಿನ ಮೇಲೆ ಅಡ್ಡ ಇಟ್ಟು ಹೀಗೆ ಉಳಿದ ಮೂರು ಸ್ಥಾನಗಳಲ್ಲಿಯೂ ಮಾಡಿ ಪುನಃ ಜಲಕೂರ್ಚದಿಂದ ನೀರು ಹಿಡಿದು, '**ಆಸನಾಂತೇ ಉದಕಮುಪತಿಷ್ಠತು ॥**' –ಎಂದು ಆಸನದಲ್ಲಿ ನೀರು ಬಿಟ್ಟು ಹೀಗೆ ಉಳಿದ ಮೂರು ಸ್ಥಾನಗಳಲ್ಲಿಯೂ ಕೊಟ್ಟು ಗರಿಕೆ ಮತ್ತು ಎಳ್ಳು ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ .....ಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಆವಾಹನಮುಪತಿಷ್ಠತು ॥** –ಎಂದು ಮಂಡಲದ ಆಸನದಲ್ಲಿಟ್ಟು, ಹೀಗೆ ಉಳಿದ ಮೂರು ಸ್ಥಾನಗಳಲ್ಲಿಯೂ ಇಟ್ಟು ಜಲಕೂರ್ಚದಿಂದ ನೀರನ್ನು ಹಿಡಿದು, '**ಆವಾಹನಾಂತೇ ಉದಕಮುಪತಿಷ್ಠತು ॥**' –ಎಂದು ನೀರು ಬಿಟ್ಟು ಹೀಗೆ ಉಳಿದ ಮೂರು ಸ್ಥಾನಗಳಲ್ಲಿಯೂ ಕೊಟ್ಟು (ಎಡ) ಪಿತೃತೀರ್ಥದಿಂದ ಅರ್ಘ್ಯಪಾತ್ರದ ಕೂರ್ಚ, ನೀರು ಮತ್ತು ಎಳ್ಳು ಹಿಡಿದು,

(ಬಲ) **ಅಸ್ಮತ್ಪಿತುಃ ......ಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಅರ್ಘ್ಯಮುಪತಿಷ್ಠತು ॥** –ಎಂದು ಎಳ್ಳುನೀರು ಬಿಟ್ಟು, ಉಳಿದ ಮೂರು ಸ್ಥಾನಗಳಲ್ಲಿಯೂ ಅರ್ಘ್ಯ ಕೊಟ್ಟು (ಎಡ) ಎಡಕಾಲೂರಿ ಕೂರ್ಚದ ಗಂಟು ಬಿಚ್ಚಿ, ಅರ್ಘ್ಯಪಾತ್ರವನ್ನು ನಾರಾಯಣಸ್ಮರಣೆಯೊಂದಿಗೆ ಕಣ್ಣು ಮುಚ್ಚಿಕೊಂಡು ಎಡಕಾಲಿನ ಹೆಬ್ಬೆರಳಿನಿಂದ ತುಂಡು ಮಾಡಿ ಹಿಂದೆ ಬಿಸಾಡಿ ನಾಲ್ಕು ಪಿಂಡಸ್ಥಾನಗಳಲ್ಲಿ, **ವಾಸೋದಕ ಕೇಶೋದಕ ತಿಲೋದಕಮುಪತಿಷ್ಠತು ॥** –ಎಂದು ಪ್ರತ್ಯೇಕವಾಗಿ ಪ್ರತಿಸ್ಥಾನಗಳಲ್ಲಿಯೂ ಕೊಟ್ಟು (ಬಲ) ಕೈಮುಗಿದು,

**ಕೃಷ್ಣ ಕೃಷ್ಣ ಕೃಪಾಲೋ ತ್ವಮಗತೀನಾಂ ಗತಿರ್ಭವ ।**
**ಸಂಸಾರಾರ್ಣವಮಗ್ನಾನಾಂ ಪ್ರಸೀದ ಪುರುಷೋತ್ತಮ ॥**

-ಎಂದು ಪ್ರಾರ್ಥಿಸಬೇಕು.

**ಪಿಂಡಪ್ರದಾನಮ್**

ಪೂರ್ವಮುಖವಾಗಿ ಕುಳಿತು,

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್ (ಎಡ) ಅಸ್ಮತ್ಪಿತುಃ ಮೃತಾಹಾತ್ (ಪ್ರಥಮೇಽಹನಿ) ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ನಿತ್ಯವಿಧಿಶ್ರಾದ್ಧ ಪೂರ್ವಕ ವಿಷಮಶ್ರಾದ್ಧಪೂರ್ವಕ ನಗ್ನಪ್ರಚ್ಛಾದನಶ್ರಾದ್ಧಪೂರ್ವಕ ಪಾಥೇಯಶ್ರಾದ್ಧಾಂಗ ಕೂರ್ಚಮುಖಬ್ರಾಹ್ಮಣಭೋಜನಾಂತೇ (ಬಲ) ಬರ್ಹಿಷಿ ತಿಲೋದಕ ಪಿಂಡ ಪ್ರದಾನಾಖ್ಯಂ ಚ ಕರ್ಮಕರಿಷ್ಯೇ ॥ (ಕುರುಷ್ವ) ॥**

**ವಿಶ್ವೇಶಂ ಮಾಧವಂ ಢುಂಢಿಂ ದಂಡಪಾಣಿಂ ಚ ಭೈರವಮ್ ।**
**ವಂದೇ ಕಾಶೀಂ ಗುಹಾಂ ಗಂಗಾಂ ಭವಾನೀಂ ಮಣಿಕರ್ಣಿಕಾಮ್ ॥**

**ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।**
**ತಂ ದೃಷ್ಟ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ ॥**

ಮಂತ್ರ ಪಠಿಸಿ **ಪಿಂಡದಾನಸ್ಯ ಅನುಜ್ಞಾ॥** ಎಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಿ [**ಅಸ್ತು ಪಿಂಡದಾನಂ**]ಎಂದು ಪ್ರತಿವಚನ ಪಡೆದು, (ಎಡ) ಪಿತೃತೀರ್ಥದಿಂದ ತಿಲೋದಕ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ಪ್ರಥಮೇಽಹನಿ ನಿತ್ಯವಿಧಿಶ್ರಾದ್ಧೇ .......ಗೋತ್ರಸ್ಯ ......ಶರ್ಮಣಃ ......ಪ್ರೇತಸ್ಯ ಪಿಂಡಸ್ಥಾನೇ ಮಾರ್ಜನಮುಪತಿಷ್ಠತು ॥**

-ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಬಿಟ್ಟು, ಹೀಗೆಯೇ ಉಳಿದ ಮೂರು ಶ್ರಾದ್ಧಗಳ ಪಿಂಡಸ್ಥಾನಗಳಲ್ಲಿಯೂ ಆಯಾ ಶ್ರಾದ್ಧಗಳ ನಾಮೋಚ್ಚಾರಣೆ ಮಾಡಿ ತಿಲೋದಕ ಬಿಡುವುದು. ಪಿಂಡವನ್ನು ದಕ್ಷಿಣಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ಪ್ರಥಮೇಽಹನಿ ನಿತ್ಯವಿಧಿಶ್ರಾದ್ಧೇ .......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಶಿರೋಮೂರ್ಧಾದ್ಯವಯವನಿಷ್ಪತ್ತ್ಯರ್ಥಂ ಕ್ಷುದ್ಬಾಧಾನಿವಾರಣ ದ್ವಾರಾ ಪ್ರೇತತ್ವ ನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಮ್ ಅಯಂ ಪಿಂಡ ಉಪತಿಷ್ಠತು ॥** - ಎಂದು ತ್ರಿಕೋನಾಕಾರದ ಮಂಡಲದ ಮೇಲೆ ಪಿಂಡವನ್ನಿಟ್ಟು ಹೀಗೆಯೇ ಇನ್ನುಳಿದ ಮೂರು ಸ್ಥಾನಗಳಲ್ಲಿಯೂ **'ಶಿರೋಮೂರ್ಧಾದ್ಯವಯವನಿಷ್ಪತ್ತಿ'** ಹೇಳದೇ ಕೇವಲ ಶ್ರಾದ್ಧದ ನಾಮೋಚ್ಚಾರಣೆಯನ್ನು ಹೇಳಿ ಪಿಂಡಪ್ರದಾನ ಮಾಡಬೇಕು. ತಿಲೋದಕ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ಪ್ರಥಮೇऽಹನಿ ನಿತ್ಯವಿಧಿಶ್ರಾದ್ಧೇ .....ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪಿಂಡಸ್ಯೋಪರಿ ತಿಲೋದಕಮುಪತಿಷ್ಠತು ॥**

–ಎಂದು ತಿಲೋದಕ ನೀಡಿ, ಹೀಗೆಯೇ ಉಳಿದ ಮೂರು ಸ್ಥಾನಗಳಲ್ಲಿಯೂ ಪಿಂಡದ ಮೇಲೆ ತಿಲೋದಕ ನೀಡಿ, ಎಳ್ಳುನೀರು ಹಿಡಿದು, '**ಗಾಯತ್ರ್ಯರ್ಚನಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ಹವಿಸ್ಸಿನ ಪಾತ್ರೆಯ ಅಡಿಯ ಮಸಿಯನ್ನು ಅಂಗುಷ್ಠದಿಂದ ಒರಸಿ ತೆಗೆದು, '**ಅಸ್ಮತ್ ಪಿತುಃ .....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಅಂಜನಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಹಚ್ಚಿ, ಎಳ್ಳನ್ನು ತಿಕ್ಕಿ ನೀರು ಹಿಡಿದು, '**ಅಸ್ಮತ್ ಪಿತುಃ .....ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಅಭ್ಯಂಜನಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ಹವಿಸ್ಸಿನ ಪಾತ್ರೆಯ ಒಳಗಿನ ನೀರನ್ನು ಹಿಡಿದು, '**ಇದಂ ತೇ ಪಾತ್ರಪ್ರಕ್ಷಾಲನೋದಕಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ತನ್ನ ಬಟ್ಟೆಯ ಅಂಚಿನ ನೂಲನ್ನು ತೆಗೆದು, ಪ್ರತಿಯೊಂದು ಸ್ಥಾನದ ಪಿಂಡದ ಮೇಲೆ '**ಅಸ್ಮತ್ ಪಿತುಃ .....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಕಶಿಪೂಪಬರ್ಹಣೇ ದಶಾಮುಪತಿಷ್ಠತು ॥**' ಎಂದು ಹಾಕಬೇಕು.

ಎಳ್ಳು ಗರಿಕೆ ತುಳಸಿ ನೀರು ಹಿಡಿದು,

**ಪಿಂಡಾನಾಮುಪರಿ ಅಂಜನಾಭ್ಯಂಜನಪಂಚಾಮೃತವಾಸದಶಾತುಲಸೀಪತ್ರ ದೂರ್ವಾಪತ್ರತೀರ್ಥಪುಷ್ಪಾಣ್ಯುಪತಿಷ್ಠಂತು ॥** ಎಂದು ಪಿಂಡದ ಮೇಲೆ ಹಾಕಬೇಕು

## ಬಲಿಹರಣಮ್

ಮುಷ್ಟಿದರ್ಭೆ ಹಿಡಿದು, ಅಸ್ಮತ್ಪಿತುಃ ಮೃತಾಹಾತ್ ಪ್ರಥಮೇऽಹನಿ ನಿತ್ಯವಿಧಿಶ್ರಾದ್ಧೇ **......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪಿಂಡಸ್ಯ ಪರಿತಃ ಬಲಿಸ್ಥಾನೇ ದರ್ಭಪತ್ರಮುಪತಿಷ್ಠತು ॥** –ಎಂದು ಅಪ್ರದಕ್ಷಿಣೆಯಾಗಿ ಪಿಂಡಕ್ಕೆ ತಾಗದ ಹಾಗೆ ಅದರ ಸುತ್ತಲೂ ತ್ರಿಕೋನಾಕಾರವಾಗಿ ದರ್ಭೆಯನ್ನು ಹಾಕಬೇಕು. ಹೀಗೆ ಉಳಿದ ಮೂರು ಶ್ರಾದ್ಧಗಳ ಸ್ಥಾನದಲ್ಲಿಯೂ ಪಿಂಡದ ಸುತ್ತ ಹಾಕಿ, ತಿಲೋದಕ ಹಿಡಿದು,

**ದರ್ಭಾಣಾಮುಪರಿ ಏತತ್ತಿಲೋದಕಮುಪತಿಷ್ಠತು ॥** ಎಂದು ಪಿಂಡದ ಸುತ್ತ ಹಾಕಿದ ದರ್ಭೆಯ ಮೇಲೆ ತಿಲೋದಕ ಕೊಡಬೇಕು. ಹೀಗೆ ಮೂರು ಸ್ಥಾನಗಳಲ್ಲಿಯೂ ತಿಲೋದಕ ಬಿಟ್ಟು, ಅನಂತರ ಅನ್ನವನ್ನು ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ಪ್ರಥಮೇऽಹನಿ ನಿತ್ಯವಿಧಿಶ್ರಾದ್ಧೇ ....ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪರಿತಃ ಅಯಂ ಬಲಿರುಪತಿಷ್ಠತು ॥** –ಎಂದು ತ್ರಿಕೋನಾಕಾರವಾಗಿ ಹಾಕಿದ ದರ್ಭೆಯ ಮೇಲೆ ಅಪ್ರದಕ್ಷಿಣೆಯಾಗಿ ಬಲಿ ಹಾಕಬೇಕು. ಬಲಿ ಹಾಕುವಾಗ–

**ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।**
**ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥**

**ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।**
**ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ತೇ ನಮಃ ॥**

-ಎಂಬ ಶ್ಲೋಕಮಂತ್ರದಿಂದ ಬಲಿ ಹಾಕಬೇಕು. ಹೀಗೆಯೇ ಉಳಿದ ಮೂರು ಶ್ರಾದ್ಧಗಳಲ್ಲಿಯೂ ಪಿಂಡದ ಸುತ್ತ ಬಲಿ ಹಾಕಿ, ಎಳ್ಳುನೀರು ಹಿಡಿದು,

**ಬಲೇರುಪರಿ ತಿಲೋದಕಮುಪತಿಷ್ಠತು ॥**

-ಎಂದು ಬಲಿಯ ಮೇಲೆ ಎಳ್ಳುನೀರು ಬಿಡಬೇಕು. ಹೀಗೆ ಉಳಿದ ಮೂರು ಶ್ರಾದ್ಧ ಗಳಲ್ಲಿಯೂ ಬಲಿಯ ಮೇಲೆ ತಿಲೋದಕ ಕೊಡಬೇಕು.

## ವಾಯಸಬಲಿ

ಎಳ್ಳು ತುಳಸಿ ತೀರ್ಥ ನೀರು ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ಪ್ರಥಮೇಽಹನಿ ನಿತ್ಯವಿಧಿಶ್ರಾದ್ಧ ...ಶ್ರಾದ್ಧ ......ಶ್ರಾದ್ಧ ......ಪಾಥೇಯಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಕಾಕಬಲಿರುಪತಿಷ್ಠತು ॥**

-ಎಂದು ಹವಿಸ್ಸಿನ ಎಲೆಗೆ ಹಾಕಿ ಎಲೆಯನ್ನು ಹಿಡಿದು **ಕಾಕಬಲಿರುದ್ವಾಸನಮುಪ-ತಿಷ್ಠತು ॥** ಎಂದು ದಕ್ಷಿಣಕ್ಕೆ ಸ್ವಲ್ಪ ಸರಿಸಿ ಪ್ರಾಜ್ಞರೂಪಿಪರಮಾತ್ಮನನ್ನು ಸ್ಮರಿಸಿ ನಮಸ್ಕಾರ ಮಾಡಬೇಕು. ಅನಂತರ ಎಲೆಯನ್ನು ಎತ್ತಿಕೊಂಡು ಕನಿಷ್ಠಪೂರ್ವಕರಾಗಿ ಸ್ವಲ್ಪದೂರ ಹೋಗಿ **'ಯಮೋಽಸಿ....'** ಮಂತ್ರದಿಂದ ದಕ್ಷಿಣಾಗ್ರವಾಗಿ ಹವಿಸ್ಸಿನ ಎಲೆಯನ್ನಿಡಬೇಕು.

**ಯಮೋಽಸಿ ಯಮದೂತೋಽಸಿ ವಾಯಸೋಽಸಿ ಮಹಾಬಲ ।**
**ಸಪ್ತಜನ್ಮಕೃತಂ ಪಾಪಂ ಬಲಿಂ ಭುಂಜಂತು ವಾಯಸಾಃ ॥**

ಅನಂತರ ಕೈತೊಳೆದು ಕೈಚಪ್ಪಾಳೆ ಬಡಿದು ಕಾಗೆಗಳನ್ನು ಆಹ್ವಾನಿಸಿ ಕೈಕಾಲು ತೊಳೆದು ವೇದಿಕೆಯ ಬಳಿ ಕನಿಷ್ಠಪೂರ್ವಕರಾಗಿ ಬರಬೇಕು.

## ತಾಂಬೂಲ ದಕ್ಷಿಣಾ

(ಬಲ) ಪೂರ್ವಾಭಿಮುಖವಾಗಿ ಕುಳಿತು ಪವಿತ್ರ ತೆಗೆದು ಆಚಮನ ಮಾಡಿ ಪುನಃ ಪವಿತ್ರ ಧರಿಸಿ ಕ್ರಮುಕತಾಂಬೂಲ, ಎಳ್ಳು ಚಿಲ್ಲರೆ ನೀರು ಹಿಡಿದು,

**ಅಸ್ಮತ್ಪಿತುಃ ......ಶ್ರಾದ್ಧ .....ಶ್ರಾದ್ಧ ....ಶ್ರಾದ್ಧ ......ಪಾಥೇಯಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಇದಂ ಸತಿಲಕ್ರಮುಕತಾಂಬೂಲಹಿರಣ್ಯಮುಪತಿಷ್ಠತು ॥**

-ಎಂದು ಬ್ರಾಹ್ಮಣ ಕೂರ್ಚದ ಎಡಭಾಗದಲ್ಲಿಟ್ಟು, ಅಕ್ಷತೆಯನ್ನು ಹಿಡಿದು ಕೇಶವಾದಿನಾಮದಿಂದ ಪಿಂಡಗಳ ಮೇಲೆ ಹಾಕಿ **ಷೋಡಶೋಪಚಾರಾ ಉಪತಿಷ್ಠಂತು ॥**

ಎಂದು ಹೇಳಿ, (ಎಡ) ತಿಲೋದಕ ಹಿಡಿದು,

**ಅಸ್ಮತ್ಪಿತುಃ ......ನಿತ್ಯವಿಧಿಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪಿಂಡೋಪರಿ ಏತತ್ತಿಲೋದಕಮುಪತಿಷ್ಠತು ॥** –ಎಂದು ತಿಲೋದಕ ನೀಡಿ, ಹೀಗೆಯೇ ಉಳಿದ ಮೂರು ಸ್ಥಾನಗಳಲ್ಲಿಯೂ ಕೊಟ್ಟು ಪಿಂಡವನ್ನು ಮುಟ್ಟಿ,

**ಅಸ್ಮತ್ಪಿತುಃ ......ನಿತ್ಯವಿಧಿಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪಿಂಡಮುದ್ವಾಸನಮುಪತಿಷ್ಠತು ॥** –ಎಂದು ಪಿಂಡವನ್ನು ಅಲ್ಲಾಡಿಸಿ, ಹೀಗೆಯೇ ಉಳಿದ ಮೂರು ಸ್ಥಾನಗಳಲ್ಲಿಯೂ ಮಾಡಿ ಬಲಿಯನ್ನು ಭೇದನ ಮಾಡುತ್ತಾ,

**ಅಸ್ಮತ್ಪಿತುಃ ......ನಿತ್ಯವಿಧಿಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಬಲಿರು–ದ್ವಾಸನಮುಪತಿಷ್ಠತು ॥** –ಎಂದು ಬಲಿ ಭೇದನ ಮಾಡಿ ಕೈತೊಳೆದು, ಹೀಗೆಯೇ ಉಳಿದ ಮೂರು ಸ್ಥಾನಗಳಲ್ಲಿಯೂ ಮಾಡಿ ಅನಂತರ ಎದ್ದು ನಿಂತು ಪಿಂಡದ ಮೇಲೆ ವಾಸೋದಕಾದಿಗಳನ್ನು ನೀಡಿ ಹೀಗೆಯೇ ಉಳಿದ ಮೂರು ಶ್ರಾದ್ಧಗಳ ಪಿಂಡ ಸ್ಥಾನಗಳಲ್ಲಿಯೂ ಬಿಟ್ಟು, ತಾಯಿ ಹಾಗೂ ಹೆಣ್ಣುಮಕ್ಕಳು ಕನಿಷ್ಠಪೂರ್ವಕವಾಗಿ ಒಬ್ಬ ಕರ್ತೃವಿನ ಪಿಂಡದ ಮೇಲೆ ವಾಸೋದಕಾದಿಗಳನ್ನು ನೀಡಬೇಕು. ಕರ್ತೃವು ಪಿಂಡಗಳ ಮೇಲೆ ದಕ್ಷಿಣಾಗ್ರವಾಗಿ ಒಂದೊಂದು ದರ್ಭೆ ಇಟ್ಟು (ಬಲ) ಅಕ್ಷತೆ ಹಿಡಿದು,

**ಅನಾದಿ ನಿಧನೋ ದೇವಃ ಚಕ್ರಶಂಖಗದಾಧರಃ ।**
**ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದೋ ಭವ ॥**
**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥**

–ಎಂದು ಪಿಂಡಗಳಿಗೆ ಅಕ್ಷತೆ ಹಾಕಿ ನಮಸ್ಕಾರ ಮಾಡಬೇಕು.

## ಕೃಷ್ಣಾರ್ಪಣಮ್

ಚಿಲ್ಲರೆ ತುಳಸಿ ನೀರು ಹಿಡಿದು ಪೂರ್ವಾಭಿಮುಖವಾಗಿ,

**ಅಸ್ಮತ್ಪಿತುಃ ......ಶ್ರಾದ್ಧ ......ಶ್ರಾದ್ಧ ......ಶ್ರಾದ್ಧ ......ಪಾಥೇಯಶ್ರಾದ್ಧಸ್ಯ ಸಂಪೂರ್ಣ ಫಲಪ್ರಾಪ್ತ್ಯರ್ಥಮ್ ಆಚಾರ್ಯಾಯ ಯಥಾಶಕ್ತಿ ದಕ್ಷಿಣಾಂ ಪ್ರತಿಪಾದಯಾಮಿ ॥**

–ಎಂದು ದಕ್ಷಿಣೆಯನ್ನು ಭೂಮಿಯ ಮೇಲೆ ಇಟ್ಟು ಕೈ ಮುಗಿಯಬೇಕು. ಅನಂತರ ದಕ್ಷಿಣೆಯ ಮೇಲಿರುವ ತುಳಸಿ ತೆಗೆದು **'ಯಸ್ಯ ಸ್ಮೃತ್ಯಾ ಚ .....'** ಮಂತ್ರ ಪಠಿಸಿ,

**ಅಸ್ಮತ್ಪಿತುಃ ......ಶ್ರಾದ್ಧ ......ಶ್ರಾದ್ಧ ......ಶ್ರಾದ್ಧ ......ಪಾಥೇಯಶ್ರಾದ್ಧಕರ್ಮಣಾ ಪಿತೃಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ । ಕೃಷ್ಣಾರ್ಪಣಮಸ್ತು ॥**

**ಅಚ್ಯುತಃ ಕಲ್ಪವೃಕ್ಷಶ್ಚ ಅನಂತಃ ಕಾಮಧೇನವಃ ।**
**ಚಿಂತಾಮಣಿಸ್ತು ಗೋವಿಂದೋ ನಾಮತ್ರಯಮುದಾಹೃತಮ್ ॥**

ತುಲಸಿಯನ್ನು ಸ್ವಲ್ಪ ಪಿಂಡಕ್ಕೆ ಹಾಕಿ ಉಳಿದುದನ್ನು ತನ್ನ ಕಿವಿಯಲ್ಲಿಟ್ಟುಕೊಳ್ಳಬೇಕು.

**ಪಿಂಡವಿಸರ್ಜನಮ್**

ತಮ್ಮ ಹರಿವಾಣದಲ್ಲಿ ನೀರು ಮತ್ತು ತೀರ್ಥ ಹಾಕಿ,

**ಓಂ ಯತ್ರ ತದ್ವಿಷ್ಣುರ್ಮಹೀಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥**

**ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

**ವೇಣೀಮಾಧವಾಯ ನಮಃ । ಬಿಂದುಮಾಧವಾಯ ನಮಃ । ಗಯಾಗದಾಧರಾಯ ನಮಃ ॥**

–ಎಂದು ಸ್ಮರಿಸಿ (ಎಡ) **'ಪ್ರೇತಪಿಂಡೋಽಯಂ ಗಯಾರ್ಪಿತೋಽಸ್ತು'** ಎಂದು ಪಿಂಡಗಳನ್ನು, ಬಲಿಯನ್ನು ಹರಿವಾಣದಲ್ಲಿ ಇಟ್ಟು ಅನಂತರ ನಾಲ್ಕು ಪಿಂಡಸ್ಥಾನಗಳಲ್ಲಿ ಎಳ್ಳು ನೀರು ಹಿಡಿದು **'ಇದಂ ಸತಿಲೋದಕ ಪಿಂಡಪ್ರದಾನಂ ಪ್ರೇತಾಪ್ಯಾಯನಮಸ್ತು ॥'** ಎಂದು ತಿಲೋದಕ ಕೊಟ್ಟು ನಾಲ್ಕು ಶ್ರಾದ್ಧಗಳ ಪಿಂಡಸ್ಥಳದ ಎಳ್ಳನ್ನು ಹಿಡಿದು **'ಅಕ್ಷಯ್ಯ ಸ್ಥಾನೇ ಅಭಿರಮ್ಯತಾಂ ಪ್ರೇತಃ ॥'** (**ಅಭಿರಮ್ಯತಾ ಸ್ಮಃ**) ಎಂದು ಎಳ್ಳನ್ನು ಆಕಾಶದ ಕಡೆಗೆ ಎರಚಬೇಕು. ಅನಂತರ ಬ್ರಾಹ್ಮಣಕೂರ್ಚವನ್ನು ಹಿಡಿದು,

**ಅಗತೀನಾಂ ಚ ಸರ್ವೇಷಾಂ ಗತಿರ್ನಾರಾಯಣೋ ಹರಿಃ ।**
**ತತ್ರ ಸಂಪೂಜನಂ ಕಾರ್ಯಂ ಸರ್ವಪಾಪಹರಂ ಶುಭಮ್ ॥**

**ಅಸ್ಮತ್ಪಿತುಃ ......ಶ್ರಾದ್ಧ ......ಶ್ರಾದ್ಧ ......ಶ್ರಾದ್ಧ ......ಪಾಥೇಯಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಕೂರ್ಚಮುದ್ವಾಸನಮುಪತಿಷ್ಠತು ॥**

–ಎಂದು ಕೂರ್ಚವನ್ನು ಬಿಚ್ಚಿ, ಜಲಕೂರ್ಚವನ್ನು ಬಿಚ್ಚಬೇಕು. ಅಲ್ಲಿದ್ದ ಬ್ರಾಹ್ಮಣ ಭೋಜನದ ಅನ್ನವನ್ನು ದೂರ ಎಸೆದು ಗೋಮಯದಿಂದ ವೇದಿಕೆ ಹಾಗೂ ಪಿಂಡ ಹಾಕಿದ ಸ್ಥಳವನ್ನು ಶುದ್ಧ ಮಾಡಬೇಕು. ಯಜಮಾನನಿಗೆ ಸಾಮರ್ಥ್ಯ ಇದ್ದಲ್ಲಿ ಶ್ರಾದ್ಧಗಳ ಸಂಪೂರ್ಣ ಫಲಪ್ರಾಪ್ತಿಗಾಗಿ ಬ್ರಾಹ್ಮಣರಿದ್ದರೆ ತಾಂಬೂಲದಕ್ಷಿಣೆಸಹಿತ ಆಮದಾನ (ಅಕ್ಕಿ ತೆಂಗಿನಕಾಯಿ ಬೆಲ್ಲ ಬೇಳೆ ಇತ್ಯಾದಿ) ಕೊಡಬೇಕು. ಇಲ್ಲದಿದ್ದಲ್ಲಿ ಹನ್ನೊಂದನೆಯ ದಿನ ಕೊಡಬೇಕು.

(ಬಲ) ಪವಿತ್ರ ಹೊರ ತೆಗೆದು ಆಚಮನ ಮಾಡಿ ತಮ್ಮತಮ್ಮ ಉಟ್ಟ ಬಟ್ಟೆ, ಕುತ್ತಿಗೆ ಬಟ್ಟೆ ಜಲಪಾತ್ರೆ ಪವಿತ್ರ ಕೌಳಿಗೆ ಸೌಟು ಕರ್ಮವಸ್ತು ಇವುಗಳನ್ನು ಜೋಪಾನವಾಗಿ ಬೇರೆ ತೆಗೆದಿಡಬೇಕು. ಹೀಗೆಯೇ ನಿತ್ಯದಲ್ಲಿ ಹತ್ತು ದಿನಗಳ ವರೆಗೆ ಮೃತ್ತಿಕಾಸ್ನಾನ ಮಾಡಿ ತಿಲತೋಯಾಂಜಲಿ ನೀಡಿ, ವೇದಿಕೆಯಲ್ಲಿ ಹಾಗೂ ಘಟದಲ್ಲಿ ಉದಕಾದಿಗಳನ್ನು ನೀಡಿ ನಿತ್ಯವಿಧಿಶ್ರಾದ್ಧ ಮುಗಿಸಿ ಪಿಂಡವನ್ನು ನೀರಿಗೆ ಹಾಕಬೇಕು. ಒಂದು ವೇಳೆ ನಿತ್ಯ ವಿಧಿ ಮಾಡಿದ ಬಳಿಕ ಪ್ರೇತಘಟದಲ್ಲಿ ವಾಸೋದಕಾದಿಗಳ್ನು ಕೊಡುವುದಾದರೆ ಪುನಃ ಸ್ನಾನ ಮಾಡಿ ಕೊಡಬೇಕು. ಬಳಿಕ ಹತ್ತು ದಿನಗಳವರೆಗೆ ವೇದಿಕೆಯನ್ನು ಪ್ರಾಣಿಪಕ್ಷಿಗಳಿಂದ ರಕ್ಷಿಸಲು ಒಲೆ ಹಾಗೂ ವೇದಿಕೆಯ ಸುತ್ತ ಚೌಕಾಕಾರದಲ್ಲಿ ಚಪ್ಪರ ಕಟ್ಟಬೇಕು. ಇಲ್ಲವೇ ಪ್ರೇತಶಿಲೆಯನ್ನು ರಕ್ಷಿಸಲು ಸಮಸ್ಯೆ ಇದ್ದಲ್ಲಿ ಮನೆಯ ಹೊರಗೆ ಕರ್ತೃವಿನ ಜಲಪಾತ್ರೆ ಯಲ್ಲಿಟ್ಟು ರಕ್ಷಿಸಬೇಕು. ನಿತ್ಯವಿಧಿಯ ನಡುವೆ ಏಕಾದಶಿ, ಕೃಷ್ಣಾಷ್ಟಮಿ ಬಂದಲ್ಲಿ ಯಾವುದೇ ನಿತ್ಯಕ್ರಿಯಾವಿಧಾನಗಳನ್ನು ಮಾಡದೆ ಮರುದಿನ ಮಾಡಬೇಕು.

## ಮಧ್ಯಾಹ್ನಕ್ರಿಯಾ

ಮಧ್ಯಾಹ್ನ ಮತ್ತು ಸಂಜೆಯ ಸಮಯದಲ್ಲಿ ಮೃತ್ತಿಕಾಸ್ನಾನಮಾಡಿ ಪವಿತ್ರ ಧರಿಸಿ ವೇದಿಕೆಯಲ್ಲಿ ಹಾಗೂ ಪ್ರೇತಘಟಮಧ್ಯದಲ್ಲಿ ವಾಸೋದಕ–ಕೇಶೋದಕ–ತಿಲೋದಕ ಕೊಡಬೇಕು. ನಿತ್ಯದ ಮೂರು ಹೊತ್ತಿನಲ್ಲೂ ಹಾಲು ನೀರು ಇಡಬೇಕು. ಕುಂಭದ ನೀರನ್ನು ಹತ್ತು ದಿನಗಳ ಕಾಲ ಹಾಗೆಯೇ ರಕ್ಷಣೀ ಮಾಡಬೇಕು.

ಮಧ್ಯಾಹ್ನ ಯಜಮಾನ ಊಟದ ವೇಳೆಯಲ್ಲಿ ಪ್ರೇತಘಟದ ಬಳಿ ನೀರಿನಿಂದ ತ್ರಿಕೋನ ಮಂಡಲಮಾಡಿ ಒಂದು ಎಲೆಯ ತುಂಡಿನಲ್ಲಿ ಬೆಲ್ಲ ತುಪ್ಪ ಹಾಕಿದ ಅನ್ನವನ್ನು (ಕರ್ತೃ ಸೇವಿಸುವ ಅನ್ನ) ಮಂಡಲದಲ್ಲಿಟ್ಟು–

**ಪಿತೃ ......ಗೋತ್ರ ......ಶರ್ಮನ್ ಪ್ರೇತ ಇದಂ ತೇ ಭಕ್ಷ್ಯಮನ್ನಮುಪತಿಷ್ಠತು ॥**

–ಎಂದು ಹೇಳಿ, ಕೈಮುಗಿದು ನಾರಾಯಣಸ್ಮರಣೆ ಮಾಡಿ ಅನಂತರ **'ಅನಾದಿ ನಿಧನೋ ದೇವಃ'** ಮತ್ತು **'ಅತಸೀಪುಷ್ಪ'** ಮಂತ್ರಗಳನ್ನು ಪಠಿಸಿ ಅನ್ನವನ್ನು ಹೊರಗೆ ಮಾಡಿನ ಮೇಲೆ ಎಸೆದು ಕೈತೊಳೆದು, ಸ್ಥಳವನ್ನು ಶುದ್ಧ ಮಾಡಬೇಕು. ಅನಂತರ ತಾನು ಭೋಜನ ಮಾಡಬೇಕು. ಹತ್ತು ದಿನಗಳ ವರೆಗೆ ಒಂದೇ ಸ್ಥಳದಲ್ಲಿ ಕುಳಿತು ಊಟ ಮಾಡಬೇಕು. ಸ್ಥಳ ಬದಲಾವಣೆ ಮಾಡಬಾರದು. ರಾತ್ರಿ ಉಪವಾಸ ಇರಬೇಕು. ಅಶಕ್ತನಾದಲ್ಲಿ ಫಲಾಹಾರ ಸೇವನೆ ಮಾಡಬೇಕು. ಉಪ್ಪು ಹುಳಿ ಖಾರ ಪದಾರ್ಥಗಳನ್ನು ಸೇವಿಸಬಾರದು. ಖಾಲಿ ನೆಲದಲ್ಲಿ ಮಲಗಬೇಕು. ಕೆಲವರಲ್ಲಿ ಅಗ್ನಿಸಂಚಯನದ ಅನಂತರ ಚಾಪೆಯಲ್ಲಿ ಮಲಗಬೇಕು. ಅಭ್ಯಂಗ ಮಾಡಬಾರದು. ಹೊಸ ಬಟ್ಟೆ ಧರಿಸುವುದು, ಲೋಕವಾರ್ತೆ, ಹಾಸ್ಯ, ಅತಿಸಂತೋಷ, ಕ್ರೀಡಾದಿಗಳನ್ನು ತ್ಯಜಿಸಿ ಹೆಚ್ಚಿನ ಸಮಯವನ್ನು ಗೀತಾ, ಗರುಡಪುರಾಣಪಾರಾಯಣಾದಿಗಳಿಂದ ಕಳೆಯಬೇಕು.

ಪ್ರತಿನಿತ್ಯ ಬೆಳಗ್ಗೆ ಸ್ನಾನ ಮಾಡಿ ೨–೪–೬–೮–೧೦ನೆಯ ದಿನಗಳಲ್ಲಿ ಒಬ್ಬೊಬ್ಬರಿಗೆ (ಹೆಂಗುಸರನ್ನು ಬಿಟ್ಟು) ಅರ್ಧ ಪಾವಿನಂತೆ ಅಕ್ಕಿಯನ್ನು ಸ್ವಲ್ಪ ಉದ್ದಿನಬೇಳೆ ಹಾಕಿ

ಒಮ್ಮೆ ತೊಳೆದು ಹವಿಸ್ಸು ಮಾಡಲು ಇಡಬೇಕು. ೧–೩–೫–೭–೯ನೆಯ ದಿನಗಳಲ್ಲಿ ವಿಷಮಶ್ರಾದ್ಧ ಮತ್ತು ನಿತ್ಯವಿಧಿಶ್ರಾದ್ಧ ಇರುವುದರಿಂದ ಒಬ್ಬೊಬ್ಬರಿಗೆ ಒಂದೊಂದು ಪಾವಿನಂತೆ ಅಕ್ಕಿ ಹಾಕಿ ಹವಿಸ್ಸನ್ನು ಮಾಡಬೇಕು. ಹೆಂಗುಸರ ಸಂಖ್ಯೆಗೆ ಅನುಗುಣವಾಗಿ ಸ್ವಲ್ಪ ಹೆಚ್ಚು ಅಕ್ಕಿ ಹಾಕಬೇಕು ಹಾಗೂ ಅಸ್ಥಿಸಂಚಯನದ ದಿನ ದಹನದೇಶದಲ್ಲಿ ಹಾಗೂ ನಿತ್ಯವೇದಿಕೆಯಲ್ಲಿ ಅಸ್ಥಿಸಂಚಯನದ ಶ್ರಾದ್ಧ ಇರುವುದರಿಂದ ಎರಡು ಪಾವು ಹೆಚ್ಚು ಹಾಕಬೇಕು ಹಾಗೂ ಧರ್ಮೋದಕದಿನದಂದು ಎರಡು ಪಾವು ಅಕ್ಕಿ ಹೆಚ್ಚು ಹಾಕಬೇಕು. ಪಾತ್ರೆಗಳನ್ನು ಹುಣಸೆಹಣ್ಣಿನಿಂದಲೇ ತೊಳೆಯಬೇಕು. ಹವಿಸ್ಸನ್ನು ಹೆಣ್ಣುಮಕ್ಕಳು ಬೆಳಗ್ಗೆ ಎದ್ದು ನಿತ್ಯದ ಸ್ನಾನಾನಂತರ ಆಚಾರ್ಯರು ಬರುವ ಮುಂಚೆಯೇ ಮಾಡಿಯೂ ಇಡಬಹುದು. ಅನಂತರ ಮೃತ್ತಿಕಾಸ್ನಾನಾದಿ ಕರ್ಮಾಂಗದಲ್ಲಿ ಪಾಲ್ಗೊಳ್ಳಬಹುದು.

### ಗರುಡಪುರಾಣಶ್ರವಣಮ್

ಅಸ್ಥಿಸಂಚಯನದ ಬಳಿಕ ಧರ್ಮೋದಕದ ಒಳಗೆ ವೇದವ್ಯಾಸವಿರಚಿತ ಗರುಡ ಪುರಾಣದ ಪ್ರೇತಖಂಡದ ಶ್ಲೋಕಗಳ ಪಾರಾಯಣಸಹಿತ ಅನುವಾದವನ್ನು ಶ್ರವಣಮಾಡತಕ್ಕದ್ದು. ಆಚಾರ್ಯರನ್ನು ಸ್ವಾಗತಿಸಿ, **'ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಜನನಾತ್ ಮರಣಪರ್ಯಂತಂ ಕೃತ ಸಮಸ್ತಪಾಪಕ್ಷಯಪೂರ್ವಕ ಅಕ್ಷಯ್ಯ ಪುಣ್ಯಲೋಕಾವಾಪ್ತ್ಯರ್ಥಂ ಗರುಡಾಂತರ್ಗತ ಪ್ರಾಣಸ್ಥಶ್ರೀಮಹಾವಿಷ್ಣುಪ್ರೀತ್ಯರ್ಥಮ್ ಆಚಾರ್ಯ ಮುಖೇನ ವೇದವ್ಯಾಸವಿರಚಿತಗರುಡಪುರಾಣಶ್ರವಣಾಖ್ಯಂ ಕರಿಷ್ಯೇ ॥'** ಎಂದು ಸಂಕಲ್ಪಿಸಿ ಕರ್ಮಿಗಳು ಕರ್ಮವಸ್ತ್ರವನ್ನು ಧರಿಸಿ, ಅಕ್ಕತಂಗಿಯರು ಹಾಗೂ ತಾಯಿ(ತಂದೆ)ಯೊಂದಿಗೆ ದಕ್ಷಿಣಕ್ಕೆ ಮುಖಮಾಡಿ ಕುಳಿತು ಹಾಗೂ ಯಜಮಾನನ ಪತ್ನಿ, ಮಕ್ಕಳು, ಬಂಧುಮಿತ್ರರು, ಆಸುಪಾಸಿನವರು ಹಾಗೂ ತಂದೆತಾಯಿ ಇದ್ದವರು ಕೂಡ ಈ ಜ್ಞಾನಯಜ್ಞದಲ್ಲಿ ಅವಶ್ಯವಾಗಿ ಪಾಲ್ಗೊಂಡು ಪುರಾಣಶ್ರವಣಾನಂತರ ಮನನವನ್ನು ಮಾಡಬೇಕು.

## ಅಸ್ಥಿಸಂಚಯನಮ್

೧–೨–೩–೪–೭–೯ನೆಯ ದಿನಗಳಲ್ಲಿ ಅಸ್ಥಿಸಂಚಯನ ಮಾಡಬೇಕು. ನಾಲ್ಕನೆಯ ದಿನ ಮಾಡುವುದಾದರೆ ದಿನ ನೋಡಬೇಕಾಗಿಲ್ಲ. ಬೇರೆ ದಿನವಾದರೆ ತ್ರಿಪಾದನಕ್ಷತ್ರಗಳು, ಧನಿಷ್ಠಾಪಂಚಕ, ಜನ್ಮನಕ್ಷತ್ರಗಳು ಇರಬಾರದು ಹಾಗೂ ಬುಧ ವಾರ, ಶುಕ್ರವಾರ, ಶನಿವಾರ ಅಸ್ಥಿಸಂಚಯನಕ್ಕೆ ಯೋಗ್ಯವಲ್ಲ. ಕ್ರಿಯೆ ಪ್ರಾರಂಭಕ್ಕಿಂತ ಮುಂಚೆ ಅಸ್ಥಿಸಂಚಯನ ಶ್ರಾದ್ಧ ಮಾಡುವುದಾದರೆ ಅಕ್ಕಿಹಿಟ್ಟಿನಿಂದ ಪಿಂಡಪ್ರದಾನ ಮಾಡಬೇಕು.

### ಅಸ್ಥಿಸಂಚಯನ ಸಾಹಿತ್ಯಗಳು :

ನಿತ್ಯವಿಧಿ ಸಾಹಿತ್ಯಗಳೊಂದಿಗೆ (ಪುಟಸಂಖ್ಯೆ 107) ಪ್ರತ್ಯೇಕವಾಗಿ ಜೇಡಿಪುಡಿ 100 ಗ್ರಾಂ, ದರ್ಭೆ 1 ಕಟ್ಟು, ಅರಸಿನ ಪುಡಿ 100 ಗ್ರಾಂ, ಕರ್ಪೂರ 5, ಊದುಬತ್ತಿ 1 ಕಟ್ಟು,

ದೆಂಕಿಪೆಟ್ಟಿಗೆ 1, ಬತ್ತಿ 1 ಕಟ್ಟು, ಗೋಪಿ 3 ತುಂಡು, ಯಜ್ಞೋಪವೀತ 6, ಎಳ್ಳೆಣ್ಣೆ $^1/_4$ ಲೀ, ಎಳ್ಳು 100 ಗ್ರಾಂ, ಅಕ್ಕಿ 50 ಗ್ರಾಂ, ನವಧಾನ್ಯಮಿಶ್ರಣ 1 ಕೆಜಿ, ತುಪ್ಪ 100 ಗ್ರಾಂ, ಬೆಲ್ಲ $^1/_4$ ಕೆಜಿ, ಅಕ್ಕಿ ಹಿಟ್ಟು $^1/_2$ ಕೆಜಿ., ಜೇನುತುಪ್ಪ 50 ಗ್ರಾಂ, ಉದ್ದಿನಬೇಳೆ 10 ಗ್ರಾಂ, ಬಾಳೆಯಹಣ್ಣು 4, ಹಾಲು 1 ಲೋಟ, ಮೊಸರು $^1/_2$ ಲೋಟ, ಶಮಿ ಅಥವಾ ಅತ್ತಿಯ ಸಮಿಧೆ 2, ಗೋಮಯ ಹಾಗೂ ಗಂಧ ಒಂದು ನೆಲ್ಲಿಕಾಯಿಯ ಪ್ರಮಾಣದಷ್ಟು, ಚಿಲ್ಲರೆ 40, ವೀಳ್ಯದೆಲೆ 16, ಉದ್ದಸೀಳು ಮಾಡಿದ ಅಡಕೆ 16, ಹವಿಸ್ಸು 3 ಪಾವು, ತುಳಸಿ 20 ತುದಿ, ಗರಿಕೆ 20 ತುದಿ, ಬಿಳಿಹೂ 20, ಭೃಂಗರಾಜ 10 ತುದಿ, ದೇವರತೀರ್ಥ, ತುಳಸೀಗಿಡ 1, ಅಪ್ಪ, ಹೋಳಿಗೆ ಹಾಗೂ ವಡೆ ಪ್ರತಿಯೊಂದು 9 ರ ಹಾಗೆ, ಹಾಳೆಯ ಛತ್ರ 3, ಪತಾಕೆ 3, (ಕೆಲವರಲ್ಲಿ ಪಕ್ಕೆ 3, ಬೀಸಣಿಗೆ 3), ಪಾದುಕೆ 3, ಚಿತ್ರಾನ್ನ, ಸೀಯಾಳ 3, ಕೋಲುಬತ್ತಿ 6, ಮುಚ್ಚಳವಿರುವ ಮಡಕೆ 1, ಒಂದು ಎಲೆಯ 7 ದೊಣ್ಣೆ, ಬಾಳೆಎಲೆ 3, ಪಾಲಾಶದ ಎಲೆ 2, ತೆಂಗಿನಕಾಯಿಸಿಪ್ಪೆ, ಬಿಳಿಕಲ್ಲುಗಳು 3, ಗೆರಸೆ, ಕತ್ತಿ, ಹೆಡಿಗೆ, ಹಾರೆ, ನೀರು, ಹಳೆಯ ಕೊಡೆ 1, ಮಣ್ಣಿನ ದೀಪ 1, ಕ್ರಿಯಾಕರ್ತೃಗಳ ನಿತ್ಯದ ವಸ್ತುಗಳು.

ಬೆಳಗ್ಗೆ ಎದ್ದು ಸ್ನಾನಮಾಡಿ, ಪ್ರಾತಸ್ಸಂಧ್ಯಾವಂದನೆಯಲ್ಲಿ ಅರ್ಘ್ಯಪ್ರದಾನಾಂತ ಮಾನಸಿಕವಾಗಿ ಹತ್ತು ಗಾಯತ್ರಿ ಹಾಗೂ ಅಷ್ಟಾಕ್ಷರಮಂತ್ರ ಜಪ ಮುಗಿಸಿ, ಅನಂತರ ಮೃತ್ತಿಕಾಸ್ನಾನ ಮಾಡಿ, ತಿಲತೋಯಾಂಜಲಿ ನೀಡಿ, ಮೈಒರೆಸಿಕೊಳ್ಳದೆ ಗೋಪೀಚಂದನ ಮುದ್ರಾಧಾರಣೆ ಮಾಡಿ, ಆಚಮನ ಮಾಡಿ ಪವಿತ್ರ ಧರಿಸಿ ವೇದಿಕೆಯಲ್ಲಿ ಹಾಗೂ ಮೃತಸ್ಥಳದಲ್ಲಿ (ಪ್ರೇತಘಟದಲ್ಲಿ) ವಾಸೋದಕಾದಿಗಳನ್ನು ನೀಡಬೇಕು. ಅನಂತರ ಎರಡು ಪಾವು ಅಕ್ಕಿಯ ಹವಿಸ್ಸನ್ನು ಮಾಡಿ ಹಾಗೆಯೇ ಅಕ್ಕಿಹಿಟ್ಟಿಗೆ ಅರಸಿನ ಹಾಕಿ ನೀರು ಹಾಕಿ ಗಟ್ಟಿಯಾಗಿ ಕಲಸಿ ಸ್ವಲ್ಪ ಹಿಟ್ಟಿಗೆ ಬೆಲ್ಲ ಗುದ್ದಿ ಹಾಕಿ ಕಲಸಿ ಒಲೆಯ ಮೇಲೆ ಸಟ್ಟುಗ ಇಟ್ಟು ಸ್ವಲ್ಪ ತುಪ್ಪ ಹಾಕಿ ಕಾಯಿಸಿ ಬೆಲ್ಲಹಾಕಿ ಕಲಸಿದ ಹಿಟ್ಟಿನಿಂದ ೯ ಅಪೂಪ ಹಾಗೂ ೯ ಹೋಳಿಗೆಗಳನ್ನು ಮಾಡಿ, ಉಳಿದ ಹಿಟ್ಟಿಗೆ ನವಧಾನ್ಯ ಹಾಕಿ ಕಲಸಿ ೯ ವಡೆ ಮಾಡಿ ಕಾಯಿಸಿಡಬೇಕು. ಅನಂತರ ಪುನಃ ಕೆರೆಗೆ ಹೋಗಿ '**ಅಸ್ಥಿಸಂಚಯನಕರ್ತುಂ ಅವಗಾಹನ ಸ್ನಾನಾಖ್ಯಂ ಕರ್ಮ ಕರಿಷ್ಯೇ ॥**' ಎಂದು ಸಂಕಲ್ಪಿಸಿ ಕ್ರಮವಾಗಿ ಸ್ನಾನಮಾಡಿ ಗೋಪೀ ಚಂದನ ಧರಿಸಿ, ಹಿಂದಿನ ಪವಿತ್ರ ಧರಿಸಿ, ಕರ್ಮವಸ್ತ್ರ ಧರಿಸಿ, ಹವಿಸ್ಸನ್ನು ಬೇರೆ ಪಾತ್ರೆ ಯಲ್ಲಿ ಹಾಕಿ, ಅಸ್ಥಿಸಂಚಯನಸಾಹಿತ್ಯದೊಂದಿಗೆ ದಹನದೇಶಕ್ಕೆ ಹೋಗಬೇಕು. ಹೆಂಗುಸರು ಹಾಗೂ ಮಕ್ಕಳು ಶ್ಮಶಾನಕ್ಕೆ ಹೋಗುವ ಸಂಪ್ರದಾಯ ಇಲ್ಲ. ಹಾಗಾಗಿ ಅವರು ಮತ್ತೆ ನಿತ್ಯವಿಧಿಸಹಿತ ಅಸ್ಥಿಸಂಚಯನಕ್ಕೆ ಒಂದು ಪಾವು ಅಕ್ಕಿಯ ಹವಿಸ್ಸನ್ನು ಇಡಬೇಕು.

## ಅಗ್ನ್ಯುದ್ವಾಸ ಪ್ರಾಯಶ್ಚಿತ್ತವಿಧಿಃ

ದಹನ ಮಾಡಿದ ಸ್ಥಳದಲ್ಲಿ ಅಗ್ನಿಸಂಚಯನದ ದಿನದವರೆಗೆ ಅಗ್ನಿಯ ಸಾನ್ನಿಧ್ಯವಿರಬೇಕು. ಒಂದು ವೇಳೆ ಪೂರ್ಣವಾಗಿ ಆರಿಹೋಗಿದ್ದಲ್ಲಿ ಅಗ್ನಿ ಆರಿಹೋದ ದೋಷದ ಪರಿಹಾರಕ್ಕಾಗಿ ಪ್ರಾಯಶ್ಚಿತ್ತ ಆಹುತಿಯನ್ನು ಕೊಟ್ಟು, ಅನಂತರ ಅಗ್ನಿಸಂಚಯನ



ಮಾಡಬೇಕು. 'ಅಪಹತಾ ಅಸುರಾ ...... ಮನಃ ॥' ಗೋಮಯದಿಂದ ಸ್ಥಳ ಶುದ್ಧಮಾಡಿ, ಪೂರ್ವಾಭಿ-ಮುಖವಾಗಿ ಕುಳಿತು, ಆಚಮನ ಮಾಡಿ, ಪವಿತ್ರ ಧರಿಸಿ, ಸಂಕಲ್ಪವನ್ನು ಮಾಡಬೇಕು.

**ಗಂಗೇ ಚ ಯಮುನೇ ಚೈವ..... ಪ್ರಾಣಸ್ಥ ಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತ್ವವಿಮೋಚನಾರ್ಥಂ** (ಬಲ) **ದಹನ ದಿನಾದಾರಭ್ಯ ಅಸ್ಥಿಸಂಚಯನಮಧ್ಯೇ ಅಗ್ನ್ಯುದ್ವಾಸ ಪ್ರಾಯಶ್ಚಿತ್ತಹೋಮಂ ಕರಿಷ್ಯೇ ॥ (ಕುರುಷ್ವ) ॥**

–ಎಂದು ಸಂಕಲ್ಪಿಸಿ ದಕ್ಷಿಣಾಭಿಮುಖವಾಗಿ ಕುಳಿತು, ಒಂದು ತೆಂಗಿನ ಸಿಪ್ಪೆಯಲ್ಲಿ, ಕರ್ಪೂರದಿಂದ ಲೌಕಿಕಾಗ್ನಿ ಮಾಡಿ ಆಚೆ–ಈಚೆ ಅರ್ಧ ಸುಟ್ಟುಬಿದ್ದ ಕಟ್ಟಿಗೆಯನ್ನು ಸೇರಿಸಿ ಸುಡಬೇಕು.

ಪರಿಸಮೂಹನಾದಿಗಳನ್ನು ಮಾಡಿ ಒಂದು ಸಮಿಧೆಗೆ ಶ್ಮಶಾನಭಸ್ಮ ಲೇಪಿಸಿ,

**ಓಮ್ ಆಜುಹ್ವಾನಃ ಸುಪ್ರತೀಕಃ ಪುರಸ್ತಾದಗ್ನೇ ಸ್ವಾಂ ಯೋನಿಮಾಸೀದ್ ಸಾಧ್ಯಾ । ಅಸ್ಮಿನ್ ತ್ಸಧಸ್ಥೇ ಅಧ್ಯುತ್ತರಸ್ಮಿನ್ ವಿಶ್ವೇದೇವಾ ಯಜಮಾನಶ್ಚ ಸೀದತ ॥**

**ಓಮ್ ಉದ್ಬುಧ್ಯಸ್ವಾಗ್ನೇ ಪ್ರತಿಜಾಗೃಹ್ಯೇನಮಿಷ್ಟಾಪೂರ್ತೇ ಸಗ್ಂ ಸೃಜೇಥಾಮಯಂ ಚ । ಪುನಃ ಕೃಣ್ವಗ್ಂಸ್ತ್ವಾ ಪಿತರಂ ಯುವಾನಮನ್ವಾ-ತಾಗ್ಂಸೀ ತ್ವಯಿ ತಂತುಮೇತಮ್ ॥**

**ಓಮ್ ಅಯಂ ತೇ ಯೋನಿರ್ ಋತ್ವಿಯೋ ಯತೋ ಜಾತೋ ಅರೋಚಥಾಃ । ತಂ ಜಾನನ್ನಗ್ನ ಆ ಸೀದಾಥಾ ನೋ ವರ್ಧಯಾ ಗಿರಃ ಸ್ವಾಹಾ ॥** –ಎಂದು ಸಮಿಧೆಯನ್ನು ಹೋಮಿಸಿ ಪ್ರಧಾನಾಜ್ಯಹೋಮವನ್ನು ಮಾಡಬೇಕು.

**ಭೂ ಸ್ವಾಹಾ ॥** ಇತ್ಯಾದಿ ವ್ಯಸ್ತಸಮಸ್ತವ್ಯಾಹೃತಿಯಿಂದ ಆಜ್ಯಹೋಮಿಸಿ,

**ಓಮ್ ಅಯಾಶ್ಚಾಗ್ನೇ ............. ಧೇಹಿ ಭೇಷಜಂ ಸ್ವಾಹಾ ॥ ಅಯಾಸಾಗ್ನಯ ಇದಂ ನ ಮಮ ॥** ಪುನಃ ನಾಲ್ಕು ಬಾರಿ ತುಪ್ಪ ಹಿಡಿದು,

ಓಮ್ ಅಗ್ನಿರ್ಹೋತಾ । ಅಶ್ವಿನಾಧ್ವರ್ಯೂ । ತ್ವಷ್ಟಾಗ್ನೀತ್ ॥ ಮಿತ್ರ ಉಪವಕ್ತಾ ॥ ಸೋಮಃ ಸೋಮಸ್ಯ ಪುರೋಗಾಃ । ಶುಕ್ರಃ ಶುಕ್ರಸ್ಯ ಪುರೋಗಾಃ । ಶ್ರಾತಾಸ್ತ ಇಂದ್ರ ಸೋಮಾಃ । ವಾತಾಪೇರ್ಹವನ್ನಃ ಶ್ರುತಃ ಸ್ವಾಹಾ ॥ ವಾಚಸ್ಪತಯೇ ಬ್ರಹ್ಮಣ ಇದಂ ನ ಮಮ ॥ –ಹೀಗೆ ಪ್ರತಿ ಬಾರಿಯೂ ನಾಲ್ಕು ಬಾರಿ ತುಪ್ಪವನ್ನು ಹಿಡಿದು ಹೋಮಿಸಬೇಕು.

ಓಂ ಬ್ರಾಹ್ಮಣ ಏಕ ಹೋತಾ । ಸ ಯಜ್ಞಃ । ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ಯಜ್ಞಶ್ಚ ಮೇ ಭೂಯಾತ್ ಸ್ವಾಹಾ ॥ ಬ್ರಹ್ಮಣ ಇದಂ ನ ಮಮ ॥

ಓಮ್ ಅಗ್ನಿರ್ದ್ವಿಹೋತಾ । ಸಭರ್ತಾ । ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ಭರ್ತಾ ಚ ಮೇ ಭೂಯಾತ್ ಸ್ವಾಹಾ ॥ ಅಗ್ನಯ ಇದಂ ನ ಮಮ ॥

ಓಂ ಪೃಥಿವೀ ತ್ರಿಹೋತಾ । ಸಪ್ರತಿಷ್ಠಾ । ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ಪ್ರತಿಷ್ಠಾ ಚ ಮೇ ಭೂಯಾತ್ ಸ್ವಾಹಾ ॥ ಪೃಥಿವ್ಯಾ ಇದಂ ನ ಮಮ ॥

ಓಮ್ ಅಂತರಿಕ್ಷಂ ಚತುರ್ಹೋತಾ । ಸವಿಷ್ಠಾಃ । ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ವಿಷ್ಠಾಶ್ಚ ಮೇ ಭೂಯಾತ್ ಸ್ವಾಹಾ ॥ ಅಂತರಿಕ್ಷಾಯೇದಂ ನ ಮಮ ॥

ಓಂ ವಾಯುಃ ಪಂಚಹೋತಾ । ಸ ಪ್ರಾಣಃ । ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ಪ್ರಾಣಶ್ಚ ಮೇ ಭೂಯಾತ್ ಸ್ವಾಹಾ ॥ ವಾಯವ ಇದಂ ನ ಮಮ ॥

ಓಂ ಚಂದ್ರಮಾಃ ಷಡ್ಢೋತಾ । ಸ ಋತೂನ್ ಕಲ್ಪಯತಿ ॥ ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ಋತವಶ್ಚ ಮೇ ಕಲ್ಪಂತಾಗ್ಂ ಸ್ವಾಹಾ ॥ ಚಂದ್ರಮಸ ಇದಂ ನ ಮಮ ॥

ಓಮ್ ಅನ್ನಗ್ಂ ಸಪ್ತಹೋತಾ । ಸಪ್ರಾಣಸ್ಯ ಪ್ರಾಣಃ । ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ಪ್ರಾಣಸ್ಯ ಚ ಮೇ ಪ್ರಾಣೋ ಭೂಯಾತ್ ಸ್ವಾಹಾ ॥ ಅನ್ನಾಯೇದಂ ನ ಮಮ ॥

ಓಂ ದ್ಯೌರಷ್ಟ ಹೋತಾ । ಸ್ಯೋನಾಧೃಷ್ಯಃ । ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ಅನಾದೃಶ್ಯಶ್ಚ ಭೂಯಾಸಗ್ಂ ಸ್ವಾಹಾ ॥ ದಿವ ಇದಂ ನ ಮಮ ॥

ಓಮ್ ಆದಿತ್ಯೋ ನವ ಹೋತಾ । ಸ ತೇಜಸ್ವೀ । ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ತೇಜಸ್ವೀ ಚ ಭೂಯಾಸಗ್ಂ ಸ್ವಾಹಾ ॥ ಆದಿತ್ಯಾಯೇದಂ ನ ಮಮ ॥

ಓಂ ಪ್ರಜಾಪತಿರ್ದಶಹೋತಾ । ಸ ಇದಗ್ಂ ಸರ್ವಮ್ । ಸ ಮೇ ದದಾತು । ಪ್ರಜಾಂ ಪಶೂನ್ ಪುಷ್ಟಿಂ ಯಶಃ ॥ ಸರ್ವಂ ಚ ಮೇ ಭೂಯಾತ್ ಸ್ವಾಹಾ ॥ ಪ್ರಜಾಪತಯ ಇದಂ ನ ಮಮ ॥

ಓಂ ಮನೋಜ್ಯೋತಿರ್ಜುಷತಾಮಾಜ್ಯಂ ವಿಚ್ಛಿನ್ನಂ ಯಜ್ಞಗ್ಂ ಸಮಿಮಂ ದದಾತು । ಯಾ ಇಷ್ಟಾ ಉಷಸೋ ನಿಮೃತಶ್ಚ ತಾಃ ಸಂ ದಧಾಮಿ ॥ ಹವಿಷಾ ಘೃತೇನ ಸ್ವಾಹಾ ॥ ಮನಸೇ ಜ್ಯೋತಿಷ ಉಷೋಭ್ಯೋ ನಿಮೃಭ್ಯಸ್ತಾಭ್ಯ ಇದಂ ನ ಮಮ ॥

ಓಂ ಯನ್ಮ ಆತ್ಮನೋ ಮಿಂದಾಭೂದಗ್ನಿಸ್ತತ್ಪುನರಾಹಾರ್ಜಾತವೇದಾ ವಿಚರ್ಷಣಿಃ ಸ್ವಾಹಾ ॥ ಜಾತವೇದಸೇ ವಿಚರ್ಷಣ ಇದಂ ನ ಮಮ ॥

ಓಂ ಪುನರಗ್ನಿಶ್ಚಕ್ಷುರದಾತ್ಪುನರಿಂದ್ರೋ ಬೃಹಸ್ಪತಿಃ ॥ ಪುನರ್ಮೇ ಅಶ್ವಿನಾಯುವಂ ಚಕ್ಷುರಾಧತ್ತಮಕ್ಷ್ಯೋಃ ಸ್ವಾಹಾ ॥ ಅಗ್ನೀಂದ್ರಾಪ ಬೃಹಸ್ಪತ್ಯಶ್ವಿಭ್ಯ ಇದಂ ನ ಮಮ ॥

ಓಂ ಭೂರಗ್ನಯೇ ಚ ಪೃಥಿವ್ಯೈ ಚ ಮಹತೇ ಚ ಸ್ವಾಹಾ ॥ ಅಗ್ನಯೇ ಪೃಥಿವ್ಯೈ ಮಹತ ಇದಂ ನ ಮಮ ॥

ಓಂ ಭುವೋ ವಾಯವೇ ಚಾಂತರಿಕ್ಷಾಯ ಚ ಮಹತೇ ಚ ಸ್ವಾಹಾ ॥ ವಾಯವೇಽಂತರಿಕ್ಷಾಯ ಮಹತ ಇದಂ ನ ಮಮ ॥

ಓಂ ಸುವರಾದಿತ್ಯಾಯ ಚ ದಿವೇ ಚ ಮಹತೇ ಚ ಸ್ವಾಹಾ ॥ ಆದಿತ್ಯಾಯ ದಿವೇ ಮಹತ ಇದಂ ನ ಮಮ ॥

ಓಂ ಭೂರ್ಭುವಃಸ್ವಶ್ಚಂದ್ರಮಸೇ ಚ ನಕ್ಷತ್ರೇಭ್ಯಶ್ಚ ದಿಗ್ಭ್ಯಶ್ಚ ಮಹತೇ ಚ ಸ್ವಾಹಾ । ಚಂದ್ರಮಸೇ ಚ ನಕ್ಷತ್ರೇಭ್ಯೋ ದಿಗ್ಭ್ಯೋ ಮಹತ ಇದಂ ನ ಮಮ ॥

ಅನಂತರ ವ್ಯಸ್ತ ಸಮಸ್ತ ವ್ಯಾಹೃತಿಯಿಂದ ಹೋಮ ಮಾಡಿ ಹೋಮದ ಉಳಿದ ಭಾಗವನ್ನು ಮಾಡಿ ಕೃಷ್ಣಾರ್ಪಣ ಬಿಡಬೇಕು. ಅನಂತರ ಅಸ್ಥಿಸಂಚಯನ ಮಾಡಬೇಕು.

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥
ಕಾಯೇನ ವಾಚಾ ಮನಸೇಂದ್ರಿಯೈರ್ವಾ ..... ನಾರಾಯಣಾಯೇತಿ ಸಮರ್ಪಯಮಿ ॥

ಅದ್ಯದಿನೇ ಮಮಪಿತುರುದ್ದಿಶ್ಯ ಮಯಾಕೃತ ಅಗ್ನ್ಯುದ್ವಾಸಪ್ರಾಯಶ್ಚತ್ತವಿಧಿ ಕರ್ಮಣಾ ಪಿತೃ[ಮಾತೃ]ಪ್ರೇತಾಂತರ್ಗತಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥ ತತ್ಸರ್ವಂ ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಗೋವಿಂದಾಯ ನಮಃ ॥

# ಅಸ್ಥಿಸಂಚಯನವಿಧಿಃ

ಶ್ಮಶಾನದಲ್ಲಿ ದಹನ ಮಾಡಿದ ಸ್ಥಳದಲ್ಲಿ ಪೂರ್ವಮುಖವಾಗಿ ಕುಳಿತು ಆಚಮನ ಮಾಡಿ, ಪ್ರಾಣಾಯಾಮ ಮಾಡಿ, ಪವಿತ್ರ ಧರಿಸಿ ಸಂಕಲ್ಪ ಮಾಡಬೇಕು–

**ಪ್ರೇತಾಂತರ್ಗತಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ಮೃತಾಹಾತ್ (ಚತುರ್ಥೇಽಹನಿ) ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತ್ವ ನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಮ್** (ಬಲ) **ಅಸ್ಥಿಸಂಚಯನಂ ಕರಿಷ್ಯೇ ॥ ಭಸ್ಮವೇದಿಕಾಮಧ್ಯೇ ವಾಯಸ ಗರ್ದಭ ಶ್ವಾನ ಸೂಕರ ಚಂಡಾಲಾದಿ ಸ್ಪರ್ಶದೋಷ ಪರಿಹಾರಾರ್ಥಮ್ ಅಸ್ಥಿಸಂಚಯನಯೋಗ್ಯತಾಸಿದ್ಧ್ಯರ್ಥಂ ಕೃಚ್ಛ್ರಾಚರಣಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥** –ಎಂದು ಬ್ರಹ್ಮದಂಡ ಇಟ್ಟು, **(ಅಸ್ಥಿಸಂಚಯನಯೋಗ್ಯತಾಸಿದ್ಧಿರಸ್ತು)** ಎಂದು ಪ್ರತಿವಚನ ಪಡೆದು, ದಹನಮಾಡಿದ ಸ್ಥಳವನ್ನು ಗೋಮಯದಿಂದ ಶುದ್ಧಪಡಿಸಿ (ಎಡ) **'ಶೀತಿಕೇ ಶೀತಿಕಾವತಿ...'** ಮಂತ್ರದಿಂದ ಶಮೀ ಅಥವಾ ಅತ್ತಿಸಮಿಧೆ ಹಿಡಿದು ಹಾಲು ಮಿಶ್ರಿತ ನೀರಿನೊಂದಿಗೆ ಅಪ್ರದಕ್ಷಿಣೆಯಾಗಿ ಪಾದದಿಂದ ಶಿರಃಪರ್ಯಂತ ಪ್ರೋಕ್ಷಣೆ ಮಾಡುತ್ತಾ ಮೂರು ಸುತ್ತು ಬರಬೇಕು.

ಶೀತಿಕೇ ಶೀತಿಕೇತಿ ದಮನೋಽಗ್ನಿರನಷ್ಟುಪ್ । ಚಿತಿಪ್ರೋಕ್ಷಣೇ ವಿನಿಯೋಗಃ ॥

**ಓಂ ಶೀತಿಕೇ ಶೀತಿಕಾವತಿ ಹ್ಲಾದಿಕೇ ಹ್ಲಾದಿಕಾವತಿ । ಮಂಡೂಕ್ಯಾ ಸು ಸಂ ಗಮ ಇಮಂ ಸ್ವಗ್ನಿಂ ಹರ್ಷಯ ॥**

ಆನಂತರ ಬಾಳೆಎಲೆಯನ್ನು ತನ್ನ ಎಡಭಾಗದಲ್ಲಿ ದಕ್ಷಿಣಾಗ್ರವಾಗಿಟ್ಟು ಅದರ ಮೇಲೆ ಮಡಕೆ ಇಟ್ಟು ಅದರೊಳಗೆ ಪಾಲಾಶದ ಎಲೆ ಇಟ್ಟು ಅಂಗುಷ್ಠ ಮತ್ತು ಕನಿಷ್ಠ ಬೆರಳುಗಳೆರಡರಿಂದ–

**ಇದಂ ತ ಏಕಮ್** । ಎಂದು ಪಾದಸ್ಥಾನದ ಅಸ್ಥಿಯನ್ನು ತೆಗೆದು ಶಬ್ದವಾಗದ ಹಾಗೆ ಮಡಕೆಯಲ್ಲಿಟ್ಟು, **ಪರ ಊ ತ ಏಕಮ್** । ಎಂದು ಎದೆಯ ಅಸ್ಥಿಯನ್ನು ತೆಗೆದು ಮಡಕೆಯಲ್ಲಿಟ್ಟು, **ತೃತೀಯೇನ ಜ್ಯೋತಿಷಾ ಸಂ ವಿಶಸ್ವ** । ಎಂದು ತಲೆಯ ಅಸ್ಥಿಯನ್ನು ತೆಗೆದು ಮಡಕೆಯಲ್ಲಿಟ್ಟು, **ಸಂವೇಶನೇ ತನ್ವಶ್ಚಾರುರೇಧಿ ಪ್ರಿಯೋ ದೇವಾನಾಂ ಪರಮೇ ಜರಿತ್ರೇ** ॥ ಎಂದು ಎಲ್ಲಾ ಅಸ್ಥಿಗಳನ್ನು ತೆಗೆದು ಗೆರಸೆಯಿಂದ ಶುದ್ಧಗೊಳಿಸಿ ಇಷಿಕ್ಕೆ ಕಡಮೆಯಾಗದಂತೆ ಅಸ್ಥಿಯ ತುಂಡುಗಳನ್ನೆಲ್ಲಾ ಮಡಕೆಯಲ್ಲಿ ಹಾಕಿ ಮುಚ್ಚಳದಿಂದ ಮುಚ್ಚಿ, ಮಡಕೆಯನ್ನು ಎಡ ಹೆಗಲಲ್ಲಿ ಹೊತ್ತುಕೊಂಡು ಮನೆಯ ಸಮೀಪ ನೀರು ನಿಲ್ಲದ ಸ್ಥಳದಲ್ಲಿರುವ ಶಮೀ, ಪಾಲಾಶ ಇಲ್ಲವೇ ಬೇರಾವುದೇ ಕ್ಷೀರವೃಕ್ಷದ ಮೂಲದಲ್ಲಿಟ್ಟು ಅಲ್ಲೇ ಒಂದು ಹೊಂಡ ಮಾಡಿ ಗಾಯತ್ರೀಮಂತ್ರದಿಂದ ಭೂಮಿಯನ್ನು ಪ್ರೋಕ್ಷಿಸಿ

ಹೊಂಡದ ಒಳಗೆ ಎಳ್ಳನ್ನು ಹರಡಿ, **'ಉಪ ಸರ್ಪ'** ಮಂತ್ರದಿಂದ ಮಡಕೆಯನ್ನು ಹೊಂಡದಲ್ಲಿ ಇಡಬೇಕು.

ಉಪಸರ್ಪೇತಿ ಸಂಕುಸುಕಃ ಪಿತೃಮೇಧಸ್ತ್ರಿಷ್ಟುಪ್ । ಗರ್ತೇಽಸ್ಥಿನಿಕ್ಷೇಪಣೇ ವಿನಿಯೋಗಃ ॥

**ಓಮ್ ಉಪ ಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಮ್ । ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿರ್ಋತೇರುಪಸ್ಥಾತ್ ॥** **'ಉಚ್ಛಂ ಚಸ್ವ'** ಮಂತ್ರದಿಂದ ಮಣ್ಣು ಹಾಕಬೇಕು.

ಉಚ್ಛ್ವಂಚಸ್ವೇತಿ ಸಂಕುಸುಕಃ ಪಿತೃಮೇಧಃ ಪ್ರಸ್ತಾರಪಂಕ್ತಿಃ । ಗರ್ತೇ ಪಾಂಸು ಕ್ಷೇಪಣೇ ವಿನಿಯೋಗಃ ॥

**ಓಮ್ ಉಚ್ಛ್ವಂಚಸ್ವ ಪೃಥಿವಿ ಮಾ ನಿ ಬಾಧಥಾಃ ಸೂಪಾಯನಾಸ್ಮೈ ಭವ ಸೂಪವಂಚನಾ । ಮಾತಾ ಪುತ್ರಂ ಯಥಾ ಸಿಚಾಽಭ್ಯೇನಂ ಭೂಮ ಊರ್ಣುಹಿ ॥** ಅನಂತರ **'ಉಚ್ಛ್ವಂಚಮಾನಾ'** ಮಂತ್ರದಿಂದ ಮುಟ್ಟಿ ಜಪಿಸಬೇಕು.

ಉಚ್ಛ್ವಂಚಮಾನೇತಿ ಸಂಕುಸುಕಃ ಪಿತೃಮೇಧಸ್ತ್ರಿಷ್ಟುಪ್ । ಜಪಾರ್ಥೇ ವಿನಿಯೋಗಃ ॥

**ಓಮ್ ಉಚ್ಛ್ವಂಚಮಾನಾ ಪೃಥಿವೀ ಸು ತಿಷ್ಠತು ಸಹಸ್ರಂ ಮಿತ ಉಪ ಹಿ ಶ್ರಯಂತಾಮ್ । ತೇ ಗೃಹಾಸೋ ಘೃತಶ್ಚುತೋ ಭವಂತು ವಿಶ್ವಾಹಾಸ್ಮೈ ಶರಣಾಃ ಸಂತ್ವತ್ರ ॥** **'ಉತ್ತೇ ಸ್ತಭ್ನಾಮೀತಿ'** ಮಂತ್ರದಿಂದ ಘಟ ಕಾಣದಂತೆ ಮುಚ್ಚಬೇಕು.

ಉತ್ತೇ ಸ್ತಭ್ನಾಮೀತಿ ಸಂಕುಸುಕಃ ಪಿತೃಮೇಧೋ ಜಗತೀ । ಘಟಸ್ಯ ಮುಖಾ–ಪಿಧಾನೇ ವಿನಿಯೋಗಃ ॥

**ಓಮ್ ಉತ್ತೇ ಸ್ತಭ್ನಾಮಿ ಪೃಥಿವೀಂ ತ್ವತ್ಪರೀಮಂ ಲೋಗಂ ನಿದಧನ್ಮೋ ಅಹಂ ರಿಷಮ್ । ಏತಾಂ ಸ್ಥೂಣಾಂ ಪಿತರೋ ಧಾರಯಂತು ತೇಽತ್ರಾ ಯಮಃ ಸಾದನಾ ತೇ ಮಿನೋತು ॥**

ಅನಂತರ ತಿಲೋದಕ ಹಿಡಿದು,

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ತಿಲೋದಕಮುಪತಿಷ್ಠತು ॥**

–ಎಂದು ತಿಲೋದಕ ಬಿಡಬೇಕು. ಅನಂತರ ದಹನದೇಶದ ಬೂದಿಯನ್ನು ಗಂಗಾದಿ ನದಿ, ನೀರು ಹೋಗುವ ತೋಡು ಇಲ್ಲವೇ ಪಾಳುಬಿದ್ದ ಬಾವಿಯಲ್ಲಿ ವಿಸರ್ಜಿಸಬೇಕು. ಅರ್ಧ ಸುಟ್ಟ ಕಟ್ಟಿಗೆಗಳಿದ್ದರೆ ಅದನ್ನು ನೀರಿಗೆ ಹಾಕಿ ಸ್ಥಳವನ್ನು ಶುದ್ಧ ಮಾಡಬೇಕು. ಹೂತಿಟ್ಟ ಮಡಕೆಯನ್ನು ವೈಕುಂಠಸಮಾರಾಧನೆಯ ಅನಂತರ ಒಂದು ವರ್ಷದ ಒಳಗೆ ಅಸ್ಥಿಶುದ್ಧಿ ಕ್ರಮವನ್ನು ಮಾಡಿ ಸಂಕಲ್ಪ ಮಾಡಿದ ತೀರ್ಥಕ್ಷೇತ್ರದಲ್ಲಿ ವಿಸರ್ಜಿಸಬೇಕು. ಗಂಗಾದಿ ಮಹಾನದಿಗಳ ಆಸುಪಾಸಿನಲ್ಲಿ ಮರಣವಾದರೆ ನದೀತೀರದಲ್ಲಿ ದಹನ ಮಾಡಿ ಮರುದಿನ ಅಸ್ಥಿಸಂಚಯನ ಮಾಡಿ ವೇದಿಕಾರಾಧನೆ ಮಾಡಿ ಅಸ್ಥಿಶುದ್ಧಿ ಮಾಡಿ ಅಸ್ಥಿಸಂಚಯನಶ್ರಾದ್ಧ ಮಾಡಿ ಅನಂತರ ಮಹಾನದಿಯಲ್ಲಿ ಹತ್ತು ದಿನಗಳೊಳಗೆ ಅಸ್ಥಿಯನ್ನು ವಿಸರ್ಜಿಸುತ್ತಾರೆ.

೧) ಒಂದು ವೇಳೆ ದಹನ ಮಾಡಿದ ಸ್ಥಳದಲ್ಲಿ ಅಸ್ಥಿ ಸಿಕ್ಕದ ಸಂದರ್ಭದಲ್ಲಿ ದಹನಸ್ಥಳದ ಮಣ್ಣಿನಿಂದ ಇಲ್ಲವೇ ಅರಸಿನ ಪುಡಿಯಿಂದ ಮನುಷ್ಯಾಕೃತಿ ರಚಿಸಿ ದಹನ ಮಾಡಿ ಮುಂದಿನ ಕರ್ಮಾಂಗವನ್ನು ಮಾಡಬೇಕು.

೨) ಅಥವಾ ಕಾರಣಾಂತರಗಳಿಂದ ಅಸ್ಥಿಸಂಚಯನವನ್ನು ಮನೆಯಲ್ಲಿ ಮಾಡುವ ಸಂದರ್ಭದಲ್ಲಿ ಶ್ಮಶಾನದಿಂದ ಅಸ್ಥಿಯನ್ನು ತಂದು ತೋಟದ ಒಂದು ಬದಿಯಲ್ಲಿ ಒಂದು ತೆಂಗಿನಕಾಯಿಸಿಪ್ಪೆಯಲ್ಲಿ ಮೃತವ್ಯಕ್ತಿಯ ಕಾಲು ಎದೆ ತಲೆಯ ಅಸ್ಥಿಯನ್ನು ಇಟ್ಟು ಕರ್ಪೂರ ಹಾಕಿ ಬೆಂಕಿಕೊಟ್ಟು ಅಗ್ನ್ಯುದ್ವಾಸಪ್ರಾಯಶ್ಚಿತ್ತಹೋಮ ಮಾಡಿ, ಅನಂತರ ಅದನ್ನು ಹಾಲು ನೀರಿನಿಂದ ಆರಿಸಿ ಹಿಂದೆ ಹೇಳಿದ ಕ್ರಮದಂತೆ ಅಸ್ಥಿಸಂಚಯನ ಮಾಡುವವನಾಗಬೇಕು.

## ಭಸ್ಮ(ಶ್ಮಶಾನ)ವೇದಿಕಾಶ್ರಾದ್ಧಮ್

1. ಸೀಯಾಳ, ದೊಂದಿ
2. ಪತಾಕೆ
3. ಕೊಡೆ
4. ಕೂರ್ಚಸ್ಥಾನ
5. ಅರಸಿನ, ಬೆಲ್ಲದ ನೀರು
6. ಧ್ವಜ
7. ಪಾದುಕೆ
8. ಪಿಂಡಸ್ಥಳ
9. ಜಲಪಾತ್ರೆ






ಭಸ್ಮವೇದಿಕಾರಾಧನೆಯನ್ನು ಜ್ಯೇಷ್ಠನು ಮಾತ್ರ ಮಾಡಬೇಕು. ಉಳಿದ ತಮ್ಮಂದಿರು ಸಹಾಯಕಾರಿಯಾಗಿರಬೇಕು. ದಹನದೇಶವನ್ನು ಗೋಮಯದಿಂದ ಶುದ್ಧ ಮಾಡಿ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಎರಡು ಅಡಿ ಉದ್ದದ ವೇದಿಕೆಯನ್ನು ಮಾಡಿ ಅರಸಿನಪುಡಿ ಹಾಗೂ ನವಧಾನ್ಯಗಳನ್ನು ಸುತ್ತಲೂ ಹರಡಿ ಪೂರ್ವಾಭಿಮುಖವಾಗಿ **ಕುಳಿತು** (ಬಲ) ಆಚಮನ ಮಾಡಿ ಪ್ರಾಣಾಯಾಮ ಮಾಡಬೇಕು. ಒಂದು ಎಳೆಯ ಪವಿತ್ರ ಧರಿಸಿ,

## ಸಂಕಲ್ಪಃ

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ಮೃತಾಹಾತ್** (ಚತುರ್ಥೇಽಹನಿ) **......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತ್ವ ವಿಮೋಚನಾರ್ಥಂ ಪ್ರೇತತೃಪ್ತಯೇ ಅಸ್ಥಿಸಂಚಯನಾಂಗತಯಾ** (ಬಲ) **ಶ್ಮಶಾನೇ ಭಸ್ಮವೇದಿಕಾರಾಧನಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥** ಕರ್ಮಿಗಳು ಎಳ್ಳು, ಚಿಲ್ಲರೆ, ದರ್ಭೆ ತುಲಸಿ ಹಿಡಿದು ನಿಂತಲ್ಲೇ ಮೂರು ಪ್ರದಕ್ಷಿಣೆ ಬಂದು,

**ವಿಪ್ರೌಘದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।**
**ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಮ್ ॥**

ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ಅದರಲ್ಲಿಟ್ಟು (ಎಡ) '**ಅಸ್ಮತ್ಪಿತುರುದ್ದಿಶ್ಯ ಶ್ಮಶಾನೇ ಭಸ್ಮವೇದಿಕಾಶ್ರಾದ್ಧಕರ್ತುಂ ಮಮ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ॥ (ಸಂಪದಸ್ತು)** ಎಂದು ಪ್ರತಿವಚನವನ್ನು ಪಡೆಯಬೇಕು.

**ಜಲಪಾತ್ರಸ್ಥಾಪನಂ ಕರಿಷ್ಯೇ ॥** –ಎಂದು ತನ್ನ ಎಡಭಾಗದಲ್ಲಿ ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ ಒಂದು ದರ್ಭೆಯನ್ನು ದಕ್ಷಿಣಾಗ್ರವಾಗಿ ಇಟ್ಟು ಅದರ ಮೇಲೆ ತನ್ನ ಜಲಪಾತ್ರೆ ಇಟ್ಟು ನಾರಾಯಣಸ್ಮರಣೆಯೊಂದಿಗೆ ಜಲಪಾತ್ರಕ್ಕೆ ನೀರು ಹಾಕಿ,

**ಗಂಗಾ ಗೋದಾವರೀ ಕೃಷ್ಣಾ ಪ್ರಯಾಗಾ ದ್ವಾರಕಾ ತಥಾ ।**
**ಆವಾಹ್ಯ ಪಂಚಗಂಗಾಶ್ಚ ಸರ್ವಪಾಪಹರಾಃ ಶುಭಾಃ ॥**

ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು '**ತಿಲಮುಪತಿಷ್ಠತು ॥**' ಎಂದು ಎಳ್ಳು ಹಾಕಿ, ಹೀಗೆಯೇ ಹಿರಣ್ಯ, ಗಂಧ, ಪುಷ್ಪ ಹಾಕಿ (ಬಲ) ಹತ್ತು ಬಾರಿ ಅಷ್ಟಾಕ್ಷರಜಪ ಮಾಡಿ,

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥**

ಜಲಕೂರ್ಚದಿಂದ ನೀರು ಹಿಡಿದು, ಸುತ್ತ ಪ್ರೋಕ್ಷಣೆ ಮಾಡಬೇಕು. ಕೈಮುಗಿದು,

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಸ್ತು ದಕ್ಷಿಣೇ ।**
**ಪ್ರದ್ಯುಮ್ನೋ ದಕ್ಷಿಣೇ ಪಾತು ವಾಸುದೇವಸ್ತಥೋತ್ತರೇ ।**
**ಊರ್ಧ್ವಂ ಗೋವರ್ಧನೋ ರಕ್ಷೇದಧಸ್ತಾಚ್ಚ ತ್ರಿವಿಕ್ರಮಃ ॥**

–ಎಂದು ಪ್ರಾರ್ಥಿಸಿ (ಎಡ) ವೇದಿಕೆಯಲ್ಲಿ ಮೂರು ಹೊಂಡಗಳನ್ನು ಮಾಡಿ ಒಂದು ಎಳೆಯ ಕೂರ್ಚವನ್ನು ಕಲ್ಲು ಎಳ್ಳು ಸಹಿತವಾಗಿ ಹಿಡಿದು (ಕೆಲವರಲ್ಲಿ ಒಂದು ದರ್ಭೆ ಮಾತ್ರ ಇಡುವ ಕ್ರಮವಿದೆ.)–

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತೃಪ್ತ್ಯರ್ಥಂ ಭಸ್ಮವೇದಿಕಾ–ರಾಧನಶ್ರಾದ್ಧೇ ಶ್ಮಶಾನವಾಸಿನೇ ಪ್ರೇತರಾಜಸ್ಯ ಶಿಲಾಯಾಮಾವಾಹನಮುಪತಿಷ್ಠತು ॥**

–ಎಂದು ಮಧ್ಯದ ಹೊಂಡದಲ್ಲಿಟ್ಟು, ಹೀಗೆಯೇ ಒಂದು ಎಳೆಯ ಕೂರ್ಚವನ್ನು ಕಲ್ಲು, ಎಳ್ಳು ಸಹಿತವಾಗಿ ಹಿಡಿದು ಉತ್ತರದ ಹೊಂಡದಲ್ಲಿ (ತನ್ನ ಬಲಭಾಗದಲ್ಲಿ–) '**ಶ್ಮಶಾನ ವಾಸಿನಂ ರುದ್ರಸ್ಯ ಶಿಲಾಯಾಮಾವಾಹನಮುಪತಿಷ್ಠತು ॥**' ಎಂದು ಹೊಂಡದಲ್ಲಿಟ್ಟು, ಪುನಃ ಒಂದು ಎಳೆಯ ಕೂರ್ಚವನ್ನು ಕಲ್ಲು, ಎಳ್ಳು ಸಹಿತವಾಗಿ ಹಿಡಿದು ದಕ್ಷಿಣದ ಹೊಂಡದಲ್ಲಿ (ತನ್ನ ಎಡಭಾಗದಲ್ಲಿ–) '**ಪ್ರೇತಸಖ್ಯುಃ ಯಮಸ್ಯ ಶಿಲಾಯಾಮಾವಾಹನಮುಪತಿಷ್ಠತು ॥**' ಎಂದು ಗರಿಕೆಗೆ ಎಳ್ಳೆಣ್ಣೆ ಮುಟ್ಟಿಸಿ '**ಪ್ರೇತ ರಾಜಾಯ ಅಭ್ಯಂಜನಮುಪತಿಷ್ಠತು ॥**' ಎಂದು ಮಧ್ಯಶಿಲೆಯ ಮೇಲಿಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿ ಮಾಡಿ, ಅನಂತರ, ತುಲಸಿ ಎಳ್ಳುನೀರನ್ನು ಹಿಡಿದು ಮೂರು ಶಿಲೆಗಳ ಮೇಲೆ '**ಹರಿದ್ರಾಪಿಷ್ಟ ಸ್ನಾನಮುಪತಿಷ್ಠತು । ಪಂಚಾಮೃತಸ್ನಾನಮುಪತಿಷ್ಠತು । ಶುದ್ಧೋದಕಸ್ನಾನಮುಪತಿಷ್ಠತು । ಕೇಶವಾದಿಚತುರ್ವಿಂಶತಿಭಿಶ್ಚ ಮತ್ಸ್ಯಾದಿನಾಮಭಿಶ್ಚ ಸ್ನಾನಮುಪತಿಷ್ಠತು ॥**' –ಎಂದು ಎಳ್ಳುನೀರು ಬಿಡಬೇಕು.

## ಕ್ಷಣಪಾದ್ಯಾದಿ

ಎರಡು ದರ್ಭೆಗಳನ್ನು ಹಿಡಿದು, **ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತೃಪ್ತಯೇ ಭಸ್ಮವೇದಿಕಾಮಧ್ಯೇ ಪ್ರೇತರಾಜಸ್ಯ ಅಯಂ ತೇ ಕ್ಷಣಃ ॥** –ಎಂದು ಮಧ್ಯ ಶಿಲೆಯಲ್ಲಿ ಇಟ್ಟು, ಪುನಃ ಎರಡು ದರ್ಭೆಗಳನ್ನು ಹಿಡಿದು,

**ಶ್ಮಶಾನವಾಸಿನ ರುದ್ರಸ್ಯ ಅಯಂ ತೇ ಕ್ಷಣಃ ।** –ಎಂದು ಉತ್ತರ ಶಿಲೆಯಲ್ಲಿಟ್ಟು,

ಪುನಃ ಎರಡು ದರ್ಭೆಗಳನ್ನು ಹಿಡಿದು, **ಪ್ರೇತಸಖ್ಯುಃ ಯಮಸ್ಯ ಅಯಂ ತೇ ಕ್ಷಣಃ ॥** –ಎಂದು ದಕ್ಷಿಣಶಿಲೆಯಲ್ಲಿಟ್ಟು ಎರಡು ದರ್ಭೆಗಳನ್ನು ಪೂರ್ವಾಗ್ರವಾಗಿ ಹಿಡಿದು,

**ಭಸ್ಮವೇದಿಕಾಮಧ್ಯೇ ಪ್ರೇತರಾಜಸ್ಯ ಇದಮಾಸನಮುಪತಿಷ್ಠತು ॥** –ಎಂದು ಪೂರ್ವಾಗ್ರವಾಗಿ ಶಿಲೆಯ ಮೇಲಿಡಬೇಕು. ಹೀಗೆಯೇ, ಉಳಿದೆರಡು ಸ್ಥಾನಗಳಲ್ಲಿ,

**ಶ್ಮಶಾನವಾಸಿನ ರುದ್ರಸ್ಯ ಆಸನಮುಪತಿಷ್ಠತು ।**
**ಪ್ರೇತಸಖ್ಯುಃ ಯಮಸ್ಯ ಆಸನಮುಪತಿಷ್ಠತು ॥**

ಎಂದು ಆಸನ ಇಡಬೇಕು. ಎಳ್ಳುನೀರು ಹಿಡಿದು, '**ಪ್ರೇತರಾಜಸ್ಯ ಪಾದ್ಯಮುಪತಿಷ್ಠತು ॥**' –ಎಂದು ಶಿಲೆಯ ಮೇಲೆ ಬಿಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಪಾದ್ಯ ಕೊಡಬೇಕು.

## ಅರ್ಘ್ಯಮ್

(ಬಲ) ತನ್ನ ಎದುರು ನೀರಿನಿಂದ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ ಒಂದು ದರ್ಭೆಯನ್ನು ಇಟ್ಟು ಅದರ ಮೇಲೆ ಒಂದು ಬಾಳೆಲೆದೊಣ್ಣೆಪಾತ್ರೆಯನ್ನು ಇಟ್ಟು ಆ ದೊಣ್ಣೆಗೆ ನೀರು ಹಾಕಿ ಒಂದು ಎಳೆಯ ಒಂದು ಕೂರ್ಚದ ಗಂಟು ಕೆಳ ಮುಖವಾಗಿರುವಂತೆ ಇಟ್ಟು ತಿಲಗಂಧಪುಷ್ಪಾಕ್ಷತಾದಿಗಳನ್ನು ಹಾಕಿ ಮುಟ್ಟಿ ನಾರಾಯಣ ಮಂತ್ರ ಪಠಿಸಿ, (ಎಡ) ಎಳ್ಳು ಹಾಗೂ ದೊಣ್ಣೆತಟ್ಟೆಯ ನೀರು ಹಿಡಿದು, (ಬಲ) '**ಅಸ್ಮತ್ಪಿತುಃ ...........ಶ್ರಾದ್ಧೇ ಪ್ರೇತರಾಜಸ್ಯ ಅರ್ಘ್ಯಮುಪತಿಷ್ಠತು ॥**' ಎಂದು ಅರ್ಘ್ಯ ಕೊಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಅರ್ಘ್ಯ ಕೊಡಬೇಕು. ಮುಂದಿನ ವಾಸೋದಕಾದಿ ಉಪಚಾರಗಳನ್ನು ಮೂರು ಸ್ಥಾನಗಳಲ್ಲಿಯೂ ಮಾಡಬೇಕು.

(ಎಡ) **ಪ್ರೇತರಾಜಸ್ಯ ವಾಸೋದಕಮುಪತಿಷ್ಠತು । ಕೇಶೋದಕಮುಪತಿಷ್ಠತು । ತಿಲೋದಕಮುಪತಿಷ್ಠತು । ಭಯನಿವಾರಣಾರ್ಥಂ ಖಡ್ಗೋದಕಮುಪತಿಷ್ಠತು । ಬ್ರಹ್ಮಕರ್ಮಸಿದ್ಧ್ಯರ್ಥಂ ಯಜ್ಞೋಪವೀತ ಗೋಪೀಚಂದನ ಪಂಚಾಯುಧೋದಕ ದತ್ತಮುಪತಿಷ್ಠತು । ವಿಷ್ಣುಲೋಕಾವಾಪ್ತ್ಯರ್ಥಂ ತೀರ್ಥೋದಕಮುಪತಿಷ್ಠತು । ಮುಖಾಲಂಕಾರಾರ್ಥೇ ಗಂಧಮುಪತಿಷ್ಠತು । ಮಾಲ್ಯಾರ್ಥೇ ಪುಷ್ಪಮಾಲಾಮುಪ ತಿಷ್ಠತು । ಅಕ್ಷತಾಮುಪತಿಷ್ಠತು। ಅಲಂಕಾರಾರ್ಥೇ ಹರಿದ್ರಾಚೂರ್ಣಮುಪತಿಷ್ಠತು । ಆಚ್ಛಾದನಾರ್ಥೇ ವಸ್ತ್ರಮುಪತಿಷ್ಠತು । ಆಘ್ರಾಣಾರ್ಥೇ ಉದಕೇನೈವ ಸಂಕಲ್ಪಿತೋಽಯಂ ಧೂಪಮುಪತಿಷ್ಠತು । ಜ್ವಾಲಾಽಲಾಭೇನ ಸೂರ್ಯಸ್ಥಿತೋಽಯಂ ದೀಪಮುಪತಿಷ್ಠತು ॥**

ಅನಂತರ (ಬಲ) ಅಕ್ಕಿಹಿಡಿದು,

**ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।**
**ನಮಸ್ತೇಽಸ್ತು ಹೃಷೀಕೇಶ ಮಹಾಪುರುಷಪೂರ್ವಜ ॥**

–ಎಂದು ಹಾಕಿ ಮೂರು ಸ್ಥಾನಗಳಲ್ಲಿಯೂ ಅಕ್ಕಿ ಹಾಕಿ ಕೈಮುಗಿಯಬೇಕು.

## ಬರ್ಹಿಷ್ಯಾಸನಾಽವಾಹಮ್

(ಎಡ) ಜೇಡಿಪುಡಿಯಿಂದ ಮೂರುಶಿಲೆಗಳ ಎದುರು ದಕ್ಷಿಣಾಗ್ರವಾಗಿ ಮೂರು

ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಬರೆದು ಎರಡು ದರ್ಭೆಗಳನ್ನು ಹಿಡಿದು,

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತೃಪ್ತಯೇ ......ಽಹನಿ ಶ್ರಾದ್ಧೇ ಪ್ರೇತರಾಜಸ್ಯ ಮಂಡಲಮಧ್ಯೇ ಉಲ್ಲೇಖನಮುಪತಿಷ್ಠತು ॥**

ಎಂದು ಉತ್ತರದಿಂದ ದಕ್ಷಿಣಕ್ಕೆ ಉಲ್ಲೇಖನ ಮಾಡಿ ಮಂಡಲದಲ್ಲಿಟ್ಟು ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ ತುಂಡು ಮಾಡಿ ಹಿಂದೆ ಬಿಸಾಡಿ ಕೈತೊಳೆದು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಮಾಡಿ, ಎಳ್ಳು ಹಿಡಿದು, '**ಮಂಡಲಮಧ್ಯೇ ತಿಲಮುಪತಿಷ್ಠತು ॥**' ಎಂದು ಮಂಡಲಮಧ್ಯದಲ್ಲಿ ಎಳ್ಳು ಹರಡಿ, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಮಾಡಿ, ನಾಲ್ಕು ದರ್ಭೆಯನ್ನು ಹಿಡಿದು, '**ಮಂಡಲಮಧ್ಯೇ ಬರ್ಹಿರುಪತಿಷ್ಠತು ॥**' ಎಂದು ಮಂಡಲದ ಮಧ್ಯೆ ಇಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಇಟ್ಟು, ಎಳ್ಳು ನೀರು ಹಿಡಿದು, '**ಬರ್ಹಿಷ್ಯುಪರಿ ತಿಲೋದಕಮುಪತಿಷ್ಠತು ॥**' ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಕೊಟ್ಟು, ಹೀಗೆಯೇ ಉಳಿದ ಎರಡು ಸ್ಥಾನಗಳಲ್ಲಿಯೂ ಕೊಟ್ಟು, ಪುನಃ ಒಂದು ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು, '**ಬರ್ಹಿಷ್ಯಾಸನಮುಪತಿಷ್ಠತು ॥**' ಎಂದು ಬರ್ಹಿಸ್ಸಿನ ಮೇಲೆ ಅಡ್ಡ ಇಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಇಟ್ಟು, ಜಲಕೂರ್ಚದಿಂದ ನೀರನ್ನು ಹಿಡಿದು, '**ಆಸನಾಂತೇ ಉದಕಮುಪತಿಷ್ಠತು ॥**' ಎಂದು ಕೂರ್ಚದಿಂದ ನೀರು ಹಾಕಿ ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ನೀರು ಬಿಟ್ಟು, ಎಳ್ಳು ಗರಿಕೆ ತುಳಸಿ ಹಿಡಿದು,

**ಅಸ್ಮತ್ಪಿತುಃ ......ಶ್ರಾದ್ಧೇ ಪ್ರೇತರಾಜಸ್ಯ ಆವಾಹನಮುಪತಿಷ್ಠತು ॥**

-ಎಂದು ಮಂಡಲದ ಆಸನದಲ್ಲಿಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಮಂತ್ರವ್ಯತ್ಯಾಸದೊಂದಿಗೆ ಆಸನದಲ್ಲಿಟ್ಟು, ಜಲಕೂರ್ಚದಿಂದ ನೀರನ್ನು ಹಿಡಿದು, '**ಆವಾಹನಾಂತೇ ಉದಕಮುಪತಿಷ್ಠತು ॥**' ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ನೀರು ಬಿಟ್ಟು, (ಎಡ) ಅರ್ಘ್ಯಪಾತ್ರದ ಕೂರ್ಚ, ನೀರು ಹಾಗೂ ಎಳ್ಳು ಹಿಡಿದು (ಬಲ) '**ಅಸ್ಮತ್ಪಿತುಃ... ಶ್ರಾದ್ಧೇ ಪ್ರೇತರಾಜಸ್ಯ ಅರ್ಘ್ಯಮುಪತಿಷ್ಠತು ॥**' ಎಂದು ಅರ್ಘ್ಯ ಕೊಟ್ಟು ಇನ್ನುಳಿದೆರಡು ಸ್ಥಾನಗಳಲ್ಲಿ ಅರ್ಘ್ಯ ಕೊಟ್ಟು (ಎಡ) ಎಡಕಾಲೂರಿ, ಕೂರ್ಚದ ಗಂಟು ಬಿಚ್ಚಿ, ಅರ್ಘ್ಯಪಾತ್ರವನ್ನು ನಾರಾಯಣಸ್ಮರಣೆಯೊಂದಿಗೆ ಎಡಕಾಲಿನ ಹೆಬ್ಬೆರಳಿನಿಂದ ತುಂಡು ಮಾಡಿ ಹಿಂದೆ ಬಿಸಾಡಿ '**ವಾಸೋದಕಮುಪತಿಷ್ಠತು । ಕೇಶೋದಕಮುಪತಿಷ್ಠತು । ತಿಲೋದಕಮುಪತಿಷ್ಠತು ॥**' ಹೀಗೆ ಮೂರು ಸ್ಥಾನಗಲ್ಲಿಯೂ ಕೊಟ್ಟು, (ಬಲ) ಅಕ್ಕಿ ಹಿಡಿದು,

**ಕೃಷ್ಣ ಕೃಷ್ಣ ಕೃಪಾಲೋ ತ್ವಮಗತೀನಾಂ ಗತಿರ್ಭವ ।**
**ಸಂಸಾರಾರ್ಣವಮಗ್ನಾನಾಂ ಪ್ರಸೀದ ಪುರುಷೋತ್ತಮ ॥**

-ಎಂಬ ಮಂತ್ರವನ್ನು ಪಠಿಸಬೇಕು.

## ಪಿಂಡಪ್ರದಾನಮ್

ಪೂರ್ವಮುಖವಾಗಿ ಕುಳಿತು,

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತೃಪ್ತಯೇ ......ಶ್ರಾದ್ಧಾಂಗ** (ಬಲ) **ಬರ್ಹಿಷಿ ತಿಲೋದಕ ಪಿಂಡಪ್ರಧಾನಾಖ್ಯಂ ಚ ಕರ್ಮ ಕರಿಷ್ಯೇ ॥ (ಕುರುಷ್ವ) ॥**

**ವಿಶ್ವೇಶಂ ಮಾಧವಂ ಢುಂಢಿಂ ದಂಡಪಾಣಿಂ ಚ ಭೈರವಮ್ ।**
**ವಂದೇ ಕಾಶೀಂ ಗುಹಾಂ ಗಂಗಾಂ ಭವಾನೀಂ ಮಣಿಕರ್ಣಿಕಾಮ್ ॥**

**ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।**
**ತಂ ದೃಷ್ಟ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ ॥**

–ಎಂಬ ಮಂತ್ರಗಳನ್ನು ಪಠಿಸಿ, '**ಪಿಂಡದಾನಸ್ಯ ಅನುಜ್ಞಾ॥**' ಎಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಿ '**ಅಸ್ತು ಪಿಂಡದಾನಮ್**' ಎಂದು ಪ್ರತಿವಚನ ಪಡೆದು,

ದಕ್ಷಿಣಾಭಿಮುಖವಾಗಿ ಕುಳಿತು, ತನ್ನ ಎಡ ಬದಿಯಲ್ಲಿ ದಕ್ಷಿಣಾಗ್ರವಾಗಿ ಎಲೆ ಹಾಕಿ ಜಲಕೂರ್ಚದಿಂದ ಹವಿಸ್ಸಿಗೆ ಹಾಗೂ ಎಲೆಗೆ ಪ್ರೋಕ್ಷಣೆ ಮಾಡಿ, ತುಪ್ಪದಿಂದ ಎಲೆಯನ್ನು ಅಭಿಘಾರ ಮಾಡಿ ಅನ್ನವನ್ನೆಲ್ಲ ಎಲೆಗೆ ಹಾಕಿ ಪುನಃ ಎರಡು ಬಾರಿ ಅಭಿಘಾರ ಮಾಡಿ ಕಣ್ಣುಮುಚ್ಚಿ ಸೂರ್ಯನಾರಾಯಣನಿಗೆ ಕೈಮುಗಿದು ಸಮರ್ಪಣೆ ಮಾಡಿ, ನಿರ್ಮಾಲ್ಯ ತೀರ್ಥ, ತುಳಸಿ ಹಾಕಿ, ಬಲಿಹರಣ ಹಾಗೂ ವಾಯಸಬಲಿಗೆ ಬೇಕಾಗುವಷ್ಟು ಅನ್ನವನ್ನು ಬಿಟ್ಟು ಉಳಿದ ಅನ್ನದಿಂದ ಮೂರು ದೊಡ್ಡ ಉದ್ದವಾದ ಪಿಂಡಗಳನ್ನು ಮಾಡಿಟ್ಟುಕೊಳ್ಳಬೇಕು. ಮೂರು ಶಿಲಾಸ್ಥಾನಗಳಲ್ಲಿಯೂ ಮೂರು ಬಾರಿ ನಿರ್ಮಾಲ್ಯತೀರ್ಥ ಕೊಟ್ಟು (ಎಡ) ಪಿತೃತೀರ್ಥದಿಂದ ತಿಲೋದಕ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ......ಪ್ರೇತತೃಪ್ತಯೇ ......ಶ್ರಾದ್ಧೇ ಪ್ರೇತರಾಜಸ್ಯ ಪಿಂಡ ಸ್ಥಾನೇ ಮಾರ್ಜನಮುಪತಿಷ್ಠತು ॥**

–ಎಂದು ಮಂಡಲದ ಮೇಲಿರುವ ಬರ್ಹಿಸ್ಸಿನ ಮೇಲೆ ತಿಲೋದಕ ಬಿಟ್ಟು, ಹೀಗೆಯೇ, '**ರುದ್ರಸ್ಯ, ಯಮಸ್ಯ ಪಿಂಡಸ್ಥಾನೇ ಮಾರ್ಜನಮುಪತಿಷ್ಠತು ॥**' ಪಿಂಡಸ್ಥಾನದಲ್ಲಿ ಆಯಾ ನಾಮೋಚ್ಚಾರಣೆ ಮಾಡಿ ತಿಲೋದಕ ಬಿಡುವುದು.

ಪಿಂಡವನ್ನು ದಕ್ಷಿಣಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಕ್ಷುದ್ಬಾಧಾನಿವಾರಣದ್ವಾರಾ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಂ ಪ್ರೇತ ತೃಪ್ತಯೇ ಪ್ರೇತರಾಜಾಯ ಭೋಜನಾರ್ಥಮ್ ಅಯಂ ಪಿಂಡ ಉಪತಿಷ್ಠತು ॥**

–ಎಂದು ತ್ರಿಕೋನಾಕಾರದ ಮಂಡಲದ ಬರ್ಹಿಸ್ಸಿನ ಮೇಲೆ ಪಿಂಡವನ್ನಿಟ್ಟು,

**ಶ್ಮಶಾನವಾಸಿನೇ ರುದ್ರಾಯ ಭೋಜನಾರ್ಥಮ್ ಅಯಂ ಪಿಂಡ ಉಪತಿಷ್ಠತು ॥**
**ಪ್ರೇತಸಖೇ ಯಮಾಯ ಭೋಜನಾರ್ಥಮ್ ಅಯಂ ಪಿಂಡ ಉಪತಿಷ್ಠತು ॥**
–ಎಂದು ಪಿಂಡ ಪ್ರದಾನ ಮಾಡುವುದು. ತಿಲೋದಕ ಹಿಡಿದು,

**ಅಸ್ಮತ್ಪಿತುಃ ಪ್ರೇತರಾಜಸ್ಯ ಪಿಂಡಸ್ಯೋಪರಿ ತಿಲೋದಕಮುಪತಿಷ್ಠತು ॥**

ಹೀಗೆಯೇ ಉಳಿದ ಎರಡು ಪಿಂಡಸ್ಥಾನಗಳಲ್ಲಿಯೂ ಆಯಾ ದೇವತಾನಾಮೋಚ್ಚಾರಣೆಯೊಂದಿಗೆ ತಿಲೋದಕ ಬಿಟ್ಟು, ಪುನಃ ತಿಲೋದಕ ಹಿಡಿದು '**ಪ್ರೇತರಾಜಸ್ಯ ಗಾಯತ್ರ್ಯರ್ಚನಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಬಿಟ್ಟು, ಹವಿಸ್ಸಿನ ಪಾತ್ರೆಯ ಅಡಿಯ ಮಸಿಯನ್ನು ಅಂಗುಷ್ಠದಿಂದ ಒರಸಿ ತೆಗೆದು, '**ಅಸ್ಮತ್ ಪಿತುಃ .... ಗೋತ್ರಸ್ಯ ....ಶರ್ಮಣಃ ಪ್ರೇತರಾಜಸ್ಯ ಅಂಜನ–ಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಹಚ್ಚಿ, ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಬಿಟ್ಟು, ಎಳ್ಳನ್ನು ತಿಕ್ಕಿ ನೀರು ಹಿಡಿದು, '**ಪ್ರೇತರಾಜಸ್ಯ ಅಭ್ಯಂಜನಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಬಿಟ್ಟು, ಹವಿಸ್ಸಿನ ಪಾತ್ರೆಯ ಒಳಗಿನ ನೀರನ್ನು ಹಿಡಿದು, '**ಪ್ರೇತರಾಜಸ್ಯ ಪಾತ್ರಪ್ರಕ್ಷಾಲನೋದಕ–ಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಬಿಟ್ಟು, ತನ್ನ ಬಟ್ಟೆಯ ಅಂಚಿನ ನೂಲನ್ನು ತೆಗೆದು, ಪ್ರತಿಯೊಂದು ಸ್ಥಾನದ ಪಿಂಡದ ಮೇಲೆ '**ಪ್ರೇತರಾಜಸ್ಯ ಕಶಿಪೂಪಬರ್ಹಣೇ ದಶಾಮುಪತಿಷ್ಠತು ॥** ಎಂದು ಹಾಕಬೇಕು. (ಬಲ) ಅಕ್ಕಿ ಹಿಡಿದು '**ಧ್ಯಾನಾವಾಹನಾದಿದಶೋಪಚಾರಾನುಪತಿಷ್ಠಂತು ॥**' ಎಂದು ಪಿಂಡದ ಮೇಲೆ ಅಕ್ಕಿ ಹಾಕಿ ತುಲಸಿಪುಷ್ಪದೂರ್ವಾದಿಗಳಿಂದ ಪಿಂಡದ ಮೇಲೆ ಅಲಂಕಾರ ಮಾಡಿ, ಅಪ್ಪ ವಡೆ ಹೋಳಿಗೆಗಳನ್ನು ಮೂರು ಪಿಂಡಗಳ ಸುತ್ತ ಹಾಕಿ ಮೂರು ಸೀಯಾಳ ಕೆತ್ತಿಟ್ಟು, ಕ್ರಮುಕತಾಂಬೂಲ ಇಟ್ಟು ಮೂರು ದೊಣ್ಣೆಗಳಲ್ಲಿ ಅರಸಿನ ನೀರು ಹಾಕಿ, ಉಳಿದ ಮೂರು ದೊಣ್ಣೆಗಳಲ್ಲಿ ಬೆಲ್ಲದ ನೀರನ್ನು ತುಂಬಿಸಿ ಇಡಬೇಕು.

(ಎಡ) **ಉಪಾಹಾರಾರ್ಥೇ ಕದಲೀಫಲಮ್ ಅಪೂಪ ಪೋಲಿಕಾ ಭಕ್ಷ್ಯತ್ರಯಂ, ಸಿದ್ಧಾನ್ನಂ, ಲೇಹ್ಯಂ ಚೋಷ್ಯಂ, ಖಾದ್ಯಮುಪತಿಷ್ಠತು ॥**

ಎಳ್ಳು ನೀರು ಹಿಡಿದು, '**ಕ್ಷುತ್ಪಿಪಾಸಾನಿವಾರಣಾರ್ಥಂ ಮೃದುನಾಲಿಕೇರಫಲಮುಪ–ತಿಷ್ಠತು ॥**' ಎಂದು ಸೀಯಾಳದ ಮೇಲೆ ಬಿಟ್ಟು,

'**ಮುಖಶುದ್ಧ್ಯರ್ಥಂ ಕ್ರಮುಕತಾಂಬೂಲಮುಪತಿಷ್ಠತು ॥ ವೀರ್ಯನಿಷ್ಪತ್ತ್ಯರ್ಥಂ ದಕ್ಷಿಣಾಮುಪತಿಷ್ಠತು ॥**' ಮಂಗಳಾರತಿ ಸಮಯದಲ್ಲಿ ಕೋಲುಬತ್ತಿಯಿಂದ ಆರತಿ ಮಾಡಿ, '**ಅಂಧತ್ವನಿವಾರಣಾರ್ಥಂ ದೀಪಿಕಾಮುಪತಿಷ್ಠತು ॥**' ಮೂರು ಎಲೆಗಳ ಎದುರು ಊರಬೇಕು.

ಅನಂತರ ಛತ್ರವನ್ನು ಹಿಡಿದು '**ವರ್ಷಾತಪನಿವಾರಣಾರ್ಥಂ ಛತ್ರಮುಪತಿಷ್ಠತು ॥**' ಎಂದು ವೇದಿಕೆಯ ಮೂರು ಸ್ಥಾನಗಳಲ್ಲಿಯೂ ಊರಬೇಕು. ಪಾದುಕೆ ಹಿಡಿದು, '**ಅಧ್ವಾನಶೋಕಪರಿಹಾರಾರ್ಥಂ ಪಾದುಕೇ ಉಪತಿಷ್ಠತು ॥**' ಎಂದು ಮೂರು

ಸ್ಥಾನಗಳಲ್ಲಿಯೂ ಇಡಬೇಕು. ಪತಾಕೆ ಹಿಡಿದು, '**ಭೂಷಣಾರ್ಥೇ ಪತಾಕಾ ಉಪತಿಷ್ಠತು ॥**' ಎಂದು ಮೂರು ಸ್ಥಾನಗಳಲ್ಲಿಯೂ ಊರಬೇಕು. '**ಘರ್ಮಬಾಧಾ ನಿವಾರಣಾರ್ಥಂ ವ್ಯಜನತ್ರಯಮುಪತಿಷ್ಠತು ॥**' ಎಂದು ಮೂರು ಸ್ಥಾನಗಳಲ್ಲಿಯೂ ಊರಬೇಕು. ಎಳ್ಳು ಗರಿಕೆ ತುಳಸೀ ನೀರು ಹಿಡಿದು, '**ಪಿಂಡಾನಾಮುಪರಿ ಅಂಜನಾಭ್ಯಂಜನ ಪಂಚಾಮೃತ ವಾಸ ದಶಾತುಲಸೀಪತ್ರ ಭೃಂಗರಾಜ, ದೂರ್ವಾಪತ್ರತೀರ್ಥ ಪುಷ್ಪಾಣ್ಯುಪತಿಷ್ಠಂತು ॥**' ಎಂದು ಪಿಂಡದ ಮೇಲೆ ಹಾಕಬೇಕು.

## ಬಲಿಹರಣಮ್

ಮುಷ್ಟಿದರ್ಭೆ ಹಿಡಿದು, **ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತೃಪ್ತಯೇ ಪ್ರೇತರಾಜಪಿಂಡಸ್ಯ ಪರಿತಃ ಬಲಿಸ್ಥಾನೇ ದರ್ಭಪತ್ರಮುಪತಿಷ್ಠತು ॥**

–ಎಂದು ಅಪ್ರದಕ್ಷಿಣೆಯಾಗಿ ಪಿಂಡಕ್ಕೆ ತಾಗದ ಹಾಗೆ ಅದರ ಸುತ್ತಲೂ ತ್ರಿಕೋನಾಕಾರವಾಗಿ ದರ್ಭೆಯನ್ನು ಹಾಕಬೇಕು. ಹೀಗೆಯೇ ಉಳಿದ ಎರಡು ಪಿಂಡಸ್ಥಾನ ಗಳಲ್ಲಿಯೂ ಹಾಕಿ, ತಿಲೋದಕ ಹಿಡಿದು, '**ಪ್ರೇತರಾಜಸ್ಯ ದರ್ಭಾಣಾಮುಪರಿ ಏತತ್ ತಿಲೋದಕಮುಪತಿಷ್ಠತು ॥**' ಎಂದು ಸುತ್ತಲೂ ಹಾಕಿದ ದರ್ಭೆಯ ಮೇಲೆ ಬಿಟ್ಟು, ಹೀಗೆಯೇ ಉಳಿದ ಎರಡು ಸ್ಥಾನಗಳಲ್ಲಿ ಹಾಕಿ ಅನ್ನಕ್ಕೆ ಅರಸಿನಪುಡಿ ಹಾಕಿ ಕಲಸಿ ಹಿಡಿದುಕೊಂಡು,

**ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ಪ್ರೇತರಾಜಸ್ಯ ಪರಿತಃ ಅಯಂ ಬಲಿರುಪ–ತಿಷ್ಠತು ॥** –ಎಂದು ತ್ರಿಕೋನಾಕಾರವಾಗಿ ಹಾಕಿದ ದರ್ಭೆಯ ಮೇಲೆ ಅಪ್ರದಕ್ಷಿಣೆಯಾಗಿ ಬಲಿ ಹಾಕಬೇಕು.

**ಓಂ ಶೀತಿಕೇ ಶೀತಿಕಾವತಿ ಹ್ಲಾದಿಕೇ ಹ್ಲಾದಿಕಾವತಿ । ಮಂಡೂಕ್ಯಾಷಿ ಸು ಸಂಗಮ ಇಮಂ ಸ್ವಗ್ನಿಂ ಹರ್ಷಯ ॥**

–ಎಂದು ಬಲಿ ಹಾಕಿ ಹೀಗೆ ಉಳಿದ ಎರಡು ಸ್ಥಾನಗಳಲ್ಲಿಯೂ ಹಾಕಿ,

**ಶ್ಮಶಾನವಾಸಿನೋ ದೇವಾಃ ಯಮಸ್ಯೈವ ಚ ಕಿಂಕರಾಃ ।<br>ಬಲಿಂ ಗೃಹೀತ್ವಾ ಕುರ್ವಂತು ಪ್ರೇತಸ್ಯ ಚ ಶುಭಾಂ ಗತಿಮ್ ॥**

–ಎಂದು '**ವಂಶಾಭಿವೃದ್ಧ್ಯರ್ಥಂ ಲಾಜಾ ಉಪತಿಷ್ಠಂತು ॥**' ಎಂದು ಬಲಿಯ ಸುತ್ತು ಲಾಜ ಹರಡಿ, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಅರಳು ಹರಡಿ ಎಳ್ಳು ನೀರು ಹಿಡಿದು, **ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ಪ್ರೇತರಾಜಸ್ಯ ಪರಿತಃ ಬಲೇರುಪರಿ ತಿಲೋದಕಮುಪತಿಷ್ಠತು ॥** ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಹಾಕಿ,

(ಬಲ) **ನಾರಾಯಣ ನಮಸ್ತೇಽಸ್ತು ಶಂಖಚಕ್ರಗದಾಧರ ।**
**ಅಕ್ಷಯ್ಯ ಬಲಿದಾನೇನ ಪ್ರೇತತೃಪ್ತಿಕರೋ ಭವ ॥**

–ಎಂದು ಪ್ರಾರ್ಥಿಸಬೇಕು.

## ವಾಯಸಬಲಿ

ಎಳ್ಳು ತುಳಸಿ ತೀರ್ಥನೀರು ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ......ಽಹನಿ ......ಶ್ರಾದ್ಧೇ ಕಾಕಬಲಿರುಪತಿಷ್ಠತು ॥**

–ಎಂದು ಹವಿಸ್ಸಿನ ಎಲೆಗೆ ಹಾಕಿ ಎಲೆಯನ್ನು ಹಿಡಿದು, '**ಕಾಕಬಲಿರುದ್ವಾಸನಮುಪತಿಷ್ಠತು ॥**' ಎಂದು ದಕ್ಷಿಣಕ್ಕೆ ಸ್ವಲ್ಪ ಎಳೆದು ಪ್ರಾಜ್ಞರೂಪಿ ಪರಮಾತ್ಮನನ್ನು ಸ್ಮರಿಸಿ,

**ಕಾಕೋಽಸಿ ಯಮದೂತೋಽಸಿ ಗೃಹಾಣ ಬಲಿಮುತ್ತಮಮ್ ।**
**ಯಮದ್ವಾರೇ ಗತೇ ಪ್ರೇತೇ ತಮಾಪ್ಯಾಯಿತುಮರ್ಹಸಿ ॥**

–ಎಂದು ನಮಸ್ಕಾರ ಮಾಡಬೇಕು. ಅನಂತರ ಎಲೆಯನ್ನು ಎತ್ತಿಕೊಂಡು ಸ್ವಲ್ಪ ದೂರ ಹೋಗಿ,

**ಯಮೋಽಸಿ ಯಮದೂತೋಽಸಿ ವಾಯಸೋಽಸಿ ಮಹಾಬಲ ।**
**ಸಪ್ತಜನ್ಮಕೃತಂ ಪಾಪಂ ಬಲಿಂ ಭುಂಜಂತು ವಾಯಸಾಃ ॥**

**ಐಂದ್ರವಾರುಣವಾಯವ್ಯಾಯಾಮ್ಯಾನೈರ್ಋತಿಕಾಶ್ಚ ಯೇ ।**
**ತೇ ಕಾಕಾ ಪ್ರತಿಗೃಹ್ಣಂತು ಭೂಮ್ಯಾ ಪಿಂಡಂ ಮಯಾಽರ್ಪಿತಮ್ ॥**

–ಎಂಬ ಮಂತ್ರದಿಂದ ಎಲೆಯನ್ನು ದಕ್ಷಿಣಾಗ್ರವಾಗಿಟ್ಟು ಕೈತೊಳೆದು ಚಪ್ಪಾಳೆ ಹೊಡೆದು ಕಾಗೆಗಳನ್ನು ಆಹ್ವಾನಿಸಿ ಕೈಕಾಲು ತೊಳೆದು ವೇದಿಕೆಯ ಬಳಿ ಬರಬೇಕು. (ಕಾಗೆ ಇಲ್ಲದ ಸಂದರ್ಭದಲ್ಲಿ ದರ್ಭೆಯಿಂದ ಕಾಗೆಯ ಪ್ರತಿರೂಪ ಮಾಡಿ ಎಲೆಯ ಮೇಲೆ ಇಡಬೇಕು. ಪಿಂಡವನ್ನು ಗರುಡ, ಕಾಗೆಗೆ ಕೊಡಬೇಕು ಇಲ್ಲವೇ ನೀರಿಗೆ ಬಿಡಬೇಕು. ನಾಯಿಮುಟ್ಟಿ ಕಾಗೆ ಸೇವಿಸಿದರೆ ಕೃಚ್ಛ್ರತ್ರಯ ಮಾಡಿ ಪುನಃ ಪಿಂಡ ಇಡಬೇಕು. ಕಾಗೆ ತಿಂದು ಅನಂತರ ನಾಯಿ ಮುಟ್ಟಿದರೆ ಷಟ್‌ಕೃಚ್ಛ್ರ ಮಾಡಬೇಕು. ಪುನಃ ಪಿಂಡಪ್ರದಾನ ಇಲ್ಲ).

## ತೃಪ್ತಿಜಲಮ್

(ಬಲ) ಪೂರ್ವಾಭಿಮುಖವಾಗಿ ಕುಳಿತು ಪವಿತ್ರ ತೆಗೆದು, ಆಚಮನ ಮಾಡಿ ಪುನಃ ಪವಿತ್ರ ಧರಿಸಿ, (ಎಡ) ಜಲಪಾತ್ರೆ ಹಾಗೂ ತಿಲ ಹಿಡಿದು,

**ಅಸ್ಮತ್ಪಿತುಃ ......ಗೋತ್ರಸ್ಯ ...... ಶರ್ಮಣಃ ಪ್ರೇತಸ್ಯ ಪ್ರೇತತೃಪ್ತ್ಯರ್ಥಮ್ ಉತ್ತಮ**

**ಲೋಕಾವಾಪ್ತ್ಯರ್ಥಂ ಮರಣದಿನಾದಾರಭ್ಯ ಚತುರ್ಥೇಽಹನಿ (ದ್ವಿತೀಯೇ....) ಸೋಪಸ್ಕರಂ ಸವ್ಯಂಜನಂ ಸಪರಿಕರಂ ಸದಕ್ಷಿಣಾಕಂ ಸತಾಂಬೂಲಂ ಸತಿಲಾಪಿಧಾನ ಉದಕುಂಭನಾಲಿಕೇರಸಲಿಲಸಹಿತಮ್ ಇಮಂ ಬಲಿಂ ಪ್ರೇತತೃಪ್ತ್ಯರ್ಥಮುಪತಿಷ್ಠತು ॥**

–ಎಂದು ಮೂರು ಪಿಂಡಗಳ ಮೇಲೆಯೂ ತಿಲೋದಕ ಕೊಟ್ಟು, ಪಿಂಡಗಳನ್ನು ಮುಟ್ಟಿ, **ಪ್ರೇತರಾಜಸ್ಯ ಪಿಂಡಮುದ್ವಾಸನಮುಪತಿಷ್ಠತು ॥** –ಎಂದು ಪಿಂಡವನ್ನು ಅಲ್ಲಾಡಿಸಬೇಕು. ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಮಾಡಿ, ಬಲಿಯನ್ನು ಛೇದನ ಮಾಡುತ್ತಾ, '**ಪ್ರೇತರಾಜಸ್ಯ ಬಲಿರುದ್ವಾಸನಮುಪತಿಷ್ಠತು ॥**' ಎಂದು ಬಲಿಛೇದನ ಮಾಡಿ ಕೈತೊಳೆದು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಮಾಡಿ ಕೈತೊಳೆದು, ಎದ್ದು ನಿಂತು ಪಿಂಡಗಳ ಮೇಲೆ **ವಾಸೋದಕಾದಿ**ಗಳನ್ನು ನೀಡಿ, ದಕ್ಷಿಣಾಗ್ರವಾಗಿ ಒಂದು ದರ್ಭೆ ಇಟ್ಟು, (ಬಲ) ಅಕ್ಷತೆ ಹಿಡಿದು,

**ಅನಾದಿ ನಿಧನೋ ದೇವಃ ಚಕ್ರಶಂಖಗದಾಧರಃ ।**
**ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದೋ ಭವ ॥**

**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥**

–ಎಂದು ಪಿಂಡಗಳಿಗೆ ಅಕ್ಷತೆ ಹಾಕಿ ನಮಸ್ಕಾರ ಮಾಡಬೇಕು.

## ಕೃಷ್ಣಾರ್ಪಣಮ್

ಚಿಲ್ಲರೆ, ತುಳಸಿ, ನೀರು ಹಿಡಿದು ಪೂರ್ವಾಭಿಮುಖವಾಗಿ,

**ಅಸ್ಮತ್ಪಿತುಃ ......ಶ್ರಾದ್ಧಸ್ಯ ಸಂಪೂರ್ಣಫಲಪ್ರಾಪ್ತ್ಯರ್ಥಮ್. ಆಚಾರ್ಯಾಯ ಯಥಾಶಕ್ತಿ ದಕ್ಷಿಣಾಂ ಪ್ರತಿಪಾದಯಾಮಿ ॥** –ಎಂದು ದಕ್ಷಿಣೆಯನ್ನು ಭೂಮಿಯ ಮೇಲೆ ಇಟ್ಟು ಕೈಮುಗಿಯಬೇಕು. ಅನಂತರ ದಕ್ಷಿಣೆಯ ಮೇಲಿರುವ ತುಳಸಿಯನ್ನು ತೆಗೆದು, '**ಯಸ್ಯ ಸ್ಮೃತ್ಯಾ ಚ .....**' ಮಂತ್ರ ಪಠಿಸಿ,

**ಅಸ್ಮತ್ಪಿತುಃ ......ಶ್ರಾದ್ಧಕರ್ಮಣಾ ಪಿತೃಪ್ರೇತಾಂತರ್ಗತಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥**

**ಅಚ್ಯುತಃ ಕಲ್ಪವೃಕ್ಷಶ್ಚ ಅನಂತಃ ಕಾಮಧೇನವಃ ।**
**ಚಿಂತಾಮಣಿಸ್ತು ಗೋವಿಂದೋ ನಾಮತ್ರಯಮುದಾಹೃತಮ್ ॥**

ತುಲಸಿಯನ್ನು ಸ್ವಲ್ಪ ಪಿಂಡಕ್ಕೆ ಹಾಕಿ ಉಳಿದುದನ್ನು ತನ್ನ ಕಿವಿಯಲ್ಲಿಟ್ಟುಕೊಳ್ಳಬೇಕು.

## ಪಿಂಡವಿಸರ್ಜನಮ್

ತಮ್ಮ ಹರಿವಾಣದಲ್ಲಿ ನೀರು ಮತ್ತು ತೀರ್ಥ ಹಾಕಿ ಕೈ ಮುಗಿದು,

**ಓಂ ಯತ್ರ ತದ್ವಿಷ್ಣುರ್ಮಹೀಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥**

**ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

**ವೇಣೀಮಾಧವಾಯ ನಮಃ । ಬಿಂದುಮಾಧವಾಯ ನಮಃ । ಗಯಾಗದಾಧರಾಯ ನಮಃ ॥**

–ಎಂದು ಸ್ಮರಿಸಿ (ಎಡ) '**ಪ್ರೇತರಾಜಸ್ಯ ಪಿಂಡೋಽಯಂ ಗಯಾರ್ಪಿತೋಽಸ್ತು** ।' –ಎಂದು ಪಿಂಡವನ್ನು ತೆಗೆದು ಹರಿವಾಣದಲ್ಲಿಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳ ಪಿಂಡಗಳನ್ನೂ '**ರುದ್ರಸ್ಯ .... ಯಮಸ್ಯ ... ಗಯಾರ್ಪಿತೋಽಸ್ತು** ॥' ಎಂದು ಪಿಂಡಗಳನ್ನೂ ಬಲಿಯನ್ನೂ ಹರಿವಾಣದಲ್ಲಿ ಇಟ್ಟು, ಅನಂತರ ಪಿಂಡದ ಸ್ಥಳದಲ್ಲಿ ಎಳ್ಳು ನೀರು ಹಿಡಿದು, '**ಇದಂ ಪ್ರೇತತೃಪ್ತಯೇ ಭಸ್ಮವೇದಿಕಾಮಧ್ಯೇ ಸತಿಲೋದಕಪಿಂಡಪ್ರದಾನಂ ಪ್ರೇತಾಪ್ಯಾಯನಮಸ್ತು** ॥' ಎಂದು ತಿಲೋದಕ ಕೊಟ್ಟು, ಪಿಂಡಸ್ಥಳದ ಎಳ್ಳನ್ನು ತೆಗೆದುಕೊಂಡು, '**ಅಕ್ಷಯ್ಯಸ್ಥಾನೇ ಅಭಿರಮ್ಯತಾಮ್** ॥' (**ಅಭಿರಮ್ಯತಾ ಸ್ಮಃ**) ಎಂದು ಎಳ್ಳನ್ನು ಆಕಾಶದ ಕಡೆಗೆ ಎರಚಬೇಕು. ಅನಂತರ ವೇದಿಕೆಯ ಮಧ್ಯದ ಶಿಲಾಸಹಿತ ಕೂರ್ಚವನ್ನು ಹಿಡಿದು,

**ಅಗತೀನಾಂ ಚ ಸರ್ವೇಷಾಂ ಗತಿರ್ನಾರಾಯಣೋ ಹರಿಃ ।**
**ತತ್ರ ಸಂಪೂಜನಂ ಕಾರ್ಯಂ ಸರ್ವಪಾಪಹರಂ ಶುಭಮ್ ॥**

**ಅಸ್ಮತ್ಪಿತುಃ ......ಶ್ರಾದ್ಧೇ ಪ್ರೇತರಾಜಸ್ಯ ಕೂರ್ಚ ಉದ್ವಾಸನಮುಪತಿಷ್ಠತು ॥**

–ಎಂದು ಕೂರ್ಚವನ್ನು ಬಿಚ್ಚಿ ಹರಿವಾಣದಲ್ಲಿ ಹಾಕಿ, ಹೀಗೆಯೇ ಉತ್ತರದ ಶಿಲಾಸಹಿತ ಕೂರ್ಚವನ್ನು ಹಿಡಿದು, '**ರುದ್ರಸ್ಯ ಉದ್ವಾಸನಮುಪತಿಷ್ಠತು** ॥' ಎಂದು ಕೂರ್ಚವನ್ನು ಬಿಚ್ಚಿ ಹರಿವಾಣದಲ್ಲಿ ಹಾಕಿ, ಅನಂತರ ದಕ್ಷಿಣದ ಶಿಲಾಸಹಿತ ಕೂರ್ಚವನ್ನು ಹಿಡಿದು, '**ಯಮಸ್ಯ ಉದ್ವಾಸನಮುಪತಿಷ್ಠತು** ॥' ಎಂದು ಕೂರ್ಚವನ್ನು ಬಿಚ್ಚಿ ಹರಿವಾಣದಲ್ಲಿ ಹಾಕಿ, ಜಲಕೂರ್ಚವನ್ನು ಬಿಚ್ಚಬೇಕು.

(ಬಲ) ಪೂರ್ವಾಭಿಮುಖವಾಗಿ ಕುಳಿತು, ಪವಿತ್ರ ಹೊರ ತೆಗೆದು ಆಚಮನ ಮಾಡಿ, ಜಲಪಾತ್ರದ ನೀರನ್ನು ಚೆಲ್ಲಿ, ಪವಿತ್ರವನ್ನು ಅದರಲ್ಲಿಟ್ಟು, ಅಲ್ಲಿದ್ದ ಚಿತ್ರಾನ್ನಾದಿ ಪದಾರ್ಥಗಳನ್ನು

ದೂರ ಎಸೆದು, ಗೋಮಯದಿಂದ ಸ್ಥಳವನ್ನು ಶುದ್ಧ ಮಾಡಬೇಕು. ಅನಂತರ ನವಧಾನ್ಯವನ್ನು ಚೆಲ್ಲಿ, ವೇದಿಕೆಯಲ್ಲಿ ತುಳಸಿ ಗಿಡವನ್ನು ನೆಟ್ಟು ಹಳೆಯ ಕೊಡೆಯನ್ನು ಊರಬೇಕು. ಅನಂತರ ಮನೆಗೆ ಬಂದು ಉಟ್ಟ ಬಟ್ಟೆಯಲ್ಲೇ ಸ್ನಾನ ಮಾಡಿ ನಿತ್ಯವಿಧಿ ಶ್ರಾದ್ಧಾಂಗದ ಮೃತ್ತಿಕಾಸ್ನಾನವನ್ನು ಮಾಡಿ ವೇದಿಕೆಯಲ್ಲಿ ಹಾಗೂ ಘಟದಲ್ಲಿ ಮಧ್ಯಾಹ್ನದ ನೀರು ಕೊಟ್ಟು ನಿತ್ಯವಿಧಿಶ್ರಾದ್ಧದ ಜೊತೆ ಒಂದು ಮಂಡಲವನ್ನು ಹೆಚ್ಚು ಬರೆದು, ನಿತ್ಯವಿಧಿ ಶ್ರಾದ್ಧಸಂಕಲ್ಪದಲ್ಲಿ,

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಅಸ್ಥಿಸಂಚಯನಾಂಗ ಏಕೋದ್ದಿಷ್ಟವಿಧಾನೇನ ನಿತ್ಯವಿಧಿಶ್ರಾದ್ಧ(ವಿಷಮಶ್ರಾದ್ಧ)ಪೂರ್ವಕ ಸಂಚಯನಶ್ರಾದ್ಧಂ ಕರಿಷ್ಯೇ ॥** –ಎಂದು ಸಂಕಲ್ಪಿಸಿ, ಸಂಚಯನಶ್ರಾದ್ಧವನ್ನು ಮಾಡಬೇಕು (ಕೆಲವರಲ್ಲಿ ಶ್ಮಶಾನವೇದಿಕಾಶ್ರಾದ್ಧದ ಅನಂತರ ಶ್ಮಶಾನದಲ್ಲಿಯೇ ಒಂದು ಪಿಂಡಪ್ರದಾನಮಾಡುವ ಕ್ರಮವಿದೆ.) ಶ್ರಾದ್ಧಗಳ ಸಂಪೂರ್ಣ ಫಲಪ್ರಾಪ್ತಿಗಾಗಿ ಬ್ರಾಹ್ಮಣರಿದ್ದಲ್ಲಿ ತಾಂಬೂಲ ದಕ್ಷಿಣೆಸಹಿತ ಆಮಾನ್ನದಾನ (ಅಕ್ಕಿ ತೆಂಗಿನಕಾಯಿ ಬೆಲ್ಲ ಬೇಳೆ ಇತ್ಯಾದಿ) ಕೊಡಬೇಕು ಇಲ್ಲವೇ ಹನ್ನೊಂದನೆಯ ದಿನ ಕೊಡಬೇಕು. (ಬಲ) ಪವಿತ್ರ ಹೊರ ತೆಗೆದು ಆಚಮನ ಮಾಡಿ, ಜಲಪಾತ್ರದ ನೀರನ್ನು ಚೆಲ್ಲಿ, ಪವಿತ್ರವನ್ನು ಜಲಪಾತ್ರೆಯಲ್ಲಿಟ್ಟು, ತಮ್ಮತಮ್ಮ ಉಟ್ಟ ಬಟ್ಟೆ, ಕುತ್ತಿಗೆಬಟ್ಟೆ, ಜಲಪಾತ್ರೆ, ಕೌಳಿಗೆ, ಸೌಟು ಇತ್ಯಾದಿಗಳನ್ನು ಜೋಪಾನವಾಗಿ ಬೇರೆ ಬೇರೆ ಇಡಬೇಕು.

# ದಶಮದಿನಕೃತ್ಯಮ್

## ದಶಮದಿನದ ಸಾಹಿತ್ಯ

ಅಸ್ಥಿಸಂಚಯನದ ಸಾಹಿತ್ಯ (ಪುಟಸಂಖ್ಯೆ 131), ನಿತ್ಯವಿಧಿಯ ಸಾಹಿತ್ಯ (ಪುಟಸಂಖ್ಯೆ 107), ಧರ್ಮೋದಕಸಾಹಿತ್ಯ– ಎರಡೆರಡು ತಟ್ಟೆಗಳಲ್ಲಿ ಪ್ರತ್ಯೇಕವಾಗಿ ಎಳ್ಳು 50 ಗ್ರಾಂ., ಹಾಗೂ ಅಕ್ಕಿ 50 ಗ್ರಾಂ, ಕಲಶ, ಮಾವಿನ–ಹಲಸಿನ ತುದಿ 1+1, ಕನ್ನಡಿ 1, ಎಳ್ಳೆಣ್ಣೆ ಗ್ರಾಂ, ಗರಿಕೆ, ಜಲಪಾತ್ರೆ, ಅರಳು 100 ಗ್ರಾಂ, ತೆಂಗಿನಕಾಯಿ 1, (ನೆಲ್ಲಿಪುಡಿ, ಎಳ್ಳುಪುಡಿ, ಸಾಸಿವೆ ಪುಡಿ).

(ತಿಲಾದ್ಯಷ್ಟದಾನಸಾಹಿತ್ಯ– ತಿಲ, ಲೋಹ, ಕಾರ್ಪಾಸ, ಹಿರಣ್ಯ, ಲವಣ, ಭೂ, ಗೋದಾನ, ಸಪ್ತಧಾನ್ಯ(=ಎಳ್ಳು, ಕಡಲೆ, ಹೆಸರು, ಉದ್ದು, ಅವರೆ, ಯವ, ವ್ರೀಹಿ)ಗಳನ್ನು ಬೇರೆಬೇರೆ ಕೊಡಬೇಕು.

ಹತ್ತನೆಯ ದಿನ ಮೃತ್ತಿಕಾಸ್ನಾನ ಮಾಡಿ ತಿಲತೋಯಾಂಜಲಿ ನೀಡಿ, ವೇದಿಕೆಯಲ್ಲಿ ವಾಸೋದಕಾದಿಗಳನ್ನು ಕೊಟ್ಟು ಬಳಿಕ ಪ್ರೇತಘಟದಲ್ಲಿ ವಾಸೋದಕಾದಿಗಳನ್ನು ನೀಡಿ ನಿತ್ಯ ವಿಧಿಶ್ರಾದ್ಧ ಮಾಡಿ ಕೃಷ್ಣಾರ್ಪಣ ಬಿಡಬೇಕು. ಅನಂತರ ವೇದಿಕೆಯಿಂದ ಪ್ರೇತಶಿಲಾ ಉದ್ವಾಸನೆಯನ್ನು ಮುಂದಿನ ಕ್ರಮದಂತೆ ಮಾಡಬೇಕು.

## ಸಂಕಲ್ಪಃ

ಪೂರ್ವಾಭಿಮುಖವಾಗಿ ಕುಳಿತು, ಆಚಮನ ಮಾಡಿ, ಪವಿತ್ರ ಧರಿಸಿ,

**ಗಂಗೇ ಚ ಯಮುನೇ ಚೈವ ..... ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥವ್** (ಎಡ) **ಅಸ್ಮತ್ಪಿತುಃ ಮೃತಾಹಾತ್ ದಶಮೇಽಹನಿ** (ಬಲ) **ಪ್ರೇತಶಿಲೋದ್ವಾಸನಪೂರ್ವಕ ಮೃತಸ್ಥಾನೇ ಸ್ಥಿತ ಪ್ರೇತಘಟೋದ್ವಾಸನಂ ಚ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

ಬ್ರಹ್ಮದಂಡ ಇಟ್ಟು ಪ್ರತಿವಚನ ಪಡೆದು (ಎಡ) ಹೊಂಡದಲ್ಲಿರುವ ಶಿಲೆಗಳನ್ನು ಕ್ರಮವಾಗಿ ತೆಗೆದು ಹರಿವಾಣದಲ್ಲಿ ಇಟ್ಟು ವಾಸೋದಕಾದಿಗಳನ್ನು ಕೊಟ್ಟು ಶಿಲಾಸಹಿತ ಹರಿವಾಣವನ್ನು '**ಪ್ರೇತಪಾತ್ರಮುದ್ವಾಸಯಾಮಿ ॥**' ಎಂದು ಜಾಗ್ರತೆಯಿಂದ ಒಂದು ಬದಿಯಲ್ಲಿ ತೆಗೆದಿಡಬೇಕು. ಅನಂತರ ಕತ್ತಿಯಿಂದ ವೇದಿಕೆಯನ್ನು ಛೇದನ ಮಾಡಬೇಕು.

## ಪ್ರೇತಘಟೋದ್ವಾಸನಮ್

ಮನೆಯೊಳಗೆ ಹೋಗಿ ಮೃತಸ್ಥಾನದ ಪ್ರೇತಘಟದಲ್ಲಿ ಎಲ್ಲರೂ ಕಣ್ಣು ಮುಚ್ಚಿಕೊಂಡು ಇರುವಂತೆ ತಾನು ಕಣ್ಣುಮುಚ್ಚಿಕೊಂಡು ನಾರಾಯಣಸ್ಮರಣೆಯೊಂದಿಗೆ ಮಡಕೆಯ ನೂಲನ್ನು ತುಂಡುಮಾಡಿ ಮಡಕೆಯಲ್ಲಿ ಇಡಬೇಕು. ದೀಪವನ್ನು ನಂದಿಸಬೇಕು. ಮಡಕೆಯನ್ನು ಮರುದಿನ ಮಡಿವಾಳನಿಗೆ ಕೊಡಬೇಕು. ಇಲ್ಲವೇ ಮಡಕೆಯನ್ನು ಪ್ರೇತಶಿಲೆ ವಿಸರ್ಜನೆ ಸಮಯದಲ್ಲಿ ಒಡೆದುಹಾಕುವ ಕ್ರಮವಿದೆ. ಅನಂತರ ಪ್ರೇತಘಟವಿದ್ದ ಸ್ಥಳವನ್ನು ಗೋಮಯದಿಂದ ಶುದ್ಧಮಾಡಿ ದೀಪವನ್ನು ತೊಳೆದು ಒಂದು ಬತ್ತಿಯ ದೀಪವನ್ನು ಘಟವಿದ್ದ ಸ್ಥಳದಲ್ಲಿ ದಕ್ಷಿಣಕ್ಕೆ ಮುಖಮಾಡಿ ಇಟ್ಟು,

**ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷೀ ಹ್ಯವಿಘ್ನಕೃತ್ ।**
**ಯಾವತ್ಕರ್ಮ ಸಮಾಪ್ತಿ ಸ್ಯಾತ್ ತಾವತ್ತ್ವಂ ಸುಸ್ಥಿರೋ ಭವ ॥**

–ಎಂದು ಪ್ರಾರ್ಥಿಸಬೇಕು. ಸಪಿಂಡೀಕರಣದ ದಿನ ಬೆಳಗ್ಗೆ ದೇವರ ಕೋಣೆಯ ಬಳಿ ಇಡಬೇಕು. ಈ ದೀಪವನ್ನು ವರ್ಷಾಂತಿಕದವರೆಗೆ ಬೆಳಗ್ಗೆ ಮತ್ತು ಸಂಜೆ ಹಚ್ಚಿಡಬೇಕು.

## ಧರ್ಮವೇದಿಕಾರಾಧನಮ್

ಮೊದಲಿನ ವೇದಿಕೆಯ ಬಳಿಬಂದು ಗೋಮಯದಿಂದ ಶುದ್ಧಗೊಳಿಸಿ ಮಣ್ಣಿನಿಂದ ಮೊದಲಿಗಿಂತ ಸ್ವಲ್ಪ ದೊಡ್ಡದಾದ ಎರಡು ಅಡಿ ಉದ್ದದ, ದಕ್ಷಿಣಾಗ್ರವಾಗಿ ತ್ರಿಕೋಣಾಕಾರದ ವೇದಿಕೆಯನ್ನು ಮಾಡಿ ನವಧಾನ್ಯ ಹಾಗೂ ಅರಸಿನವನ್ನು ಹರಡಿ, ಧರ್ಮವೇದಿಕಾ ರಾಧನೆಯನ್ನು ಜ್ಯೇಷ್ಠನು ಮಾತ್ರ ಮಾಡಬೇಕು. ಉಳಿದವರು ಸಹಾಯಕಾರಿಯಾಗಿರಬೇಕು. (ಬಲ) ಪೂರ್ವಾಭಿಮುಖವಾಗಿ ಕುಳಿತು, ಆಚಮನ ಪ್ರಾಣಾಯಾಮ ಮಾಡಿ ಒಂದು ಎಸಳಿನ ಪವಿತ್ರ ಧರಿಸಿ ಸಂಕಲ್ಪ ಮಾಡಬೇಕು.

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ಮೃತಾಹಾತ್ ದಶಮೇಽಹನಿ ಪ್ರೇತಾಪ್ಯಾಯನಾರ್ಥಂ** (ಬಲ) **ಧರ್ಮವೇದಿಕಾರಾಧನಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

ಕರ್ಮಿಗಳು ಎಳ್ಳು, ಚಿಲ್ಲರೆ, ದರ್ಭೆ, ತುಲಸಿ ಹಿಡಿದು ನಿಂತಲ್ಲೇ ಮೂರು ಪ್ರದಕ್ಷಿಣೆ ಬರುವುದು–

**ವಿಪ್ರೌಘದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।**
**ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಮ್ ॥**

ನೀರಿನಿಂದ ತ್ರಿಕೋನಾಕಾರದ ಮಂಡಲಮಾಡಿ ಅದರಲ್ಲಿಟ್ಟು, (ಎಡ) '**ಅಸ್ಮತ್ಪಿತುರುದ್ದಿಶ್ಯ ಧರ್ಮವೇದಿಕಾರಾಧನಂ ಕರ್ತುಂ ಮಮ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ॥**' **(ಸಂಪದಸ್ತು ॥)** ಎಂದು ಪ್ರತಿವಚನವನ್ನು ಪಡೆದುಕೊಳ್ಳಬೇಕು.

(ಬಲ) **ಜಲಪಾತ್ರಸ್ಥಾಪನಂ ಕರಿಷ್ಯೇ ॥**

ತನ್ನ ಎಡಭಾಗದಲ್ಲಿ ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ ಒಂದು ದರ್ಭೆಯನ್ನು ದಕ್ಷಿಣಾಗ್ರವಾಗಿ ಇಟ್ಟು ಅದರ ಮೇಲೆ ತನ್ನ ಜಲಪಾತ್ರೆ ಇಟ್ಟು, ನಾರಾಯಣಸ್ಮರಣೆಯೊಂದಿಗೆ ಜಲಪಾತ್ರಕ್ಕೆ ನೀರು ಹಾಕಿ,

**ಗಂಗಾ ಗೋದಾವರೀ ಕೃಷ್ಣಾ ಪ್ರಯಾಗಾ ದ್ವಾರಕಾ ತಥಾ ।**
**ಆವಾಹ್ಯ ಪಂಚಗಂಗಾಶ್ಚ ಸರ್ವಪಾಪಹರಾಃ ಶುಭಾಃ ॥**

ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು '**ತಿಲಮುಪ–ತಿಷ್ಠತು**' ಎಂದು ಎಳ್ಳು ಹಾಕಿ, ಹೀಗೆಯೇ ಹಿರಣ್ಯ, ಗಂಧ, ಪುಷ್ಪ, ಹಾಕಿ (ಬಲ) ಹತ್ತು ಬಾರಿ ಅಷ್ಟಾಕ್ಷರಜಪ ಮಾಡಿ,

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥**

ಜಲಕೂರ್ಚದಿಂದ ನೀರು ಹಿಡಿದು, ಸುತ್ತ ಪ್ರೋಕ್ಷಣೆ ಮಾಡಬೇಕು. ಕೈಮುಗಿದು ಕೊಂಡು,

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಸ್ತು ದಕ್ಷಿಣೇ ।**
**ಪ್ರದ್ಯುಮ್ನೋ ದಕ್ಷಿಣೇ ಪಾತು ವಾಸುದೇವಸ್ತಥೋತ್ತರೇ ॥**
**ಊರ್ಧ್ವಂ ಗೋವರ್ಧನೋ ರಕ್ಷೇದಧಸ್ತಾಚ್ಚ ತ್ರಿವಿಕ್ರಮಃ ॥**

–ಎಂದು ಪ್ರಾರ್ಥಿಸಿ, ಹಿಂದೆ ಹರಿವಾಣದಲ್ಲಿ ತೆಗೆದಿಟ್ಟ ಶಿಲೆಗಳನ್ನು ಪ್ರೇತ, ಯಮ, ವರುಣನನ್ನು ಕ್ರಮವಾಗಿ ಪ್ರತಿಷ್ಠಾಪಿಸಿ, ಅಸ್ಥಿಸಂಚಯನ ಕ್ರಮದಂತೆ ವೇದಿಕಾರಾಧನೆಯನ್ನು

ಮಾಡಬೇಕು. (ಮೊದಲಿನಿಂದ ಒಂದೇ ಶಿಲೆಯಲ್ಲಿ ಆರಾಧನೆ ಆಗಿದ್ದರೆ ಈಗ ಬೇರೆ ಎರಡು ಶಿಲೆಗಳನ್ನು ಪ್ರತಿಷ್ಠಾಪಿಸಬೇಕು.) (ಎಡ) ವೇದಿಕೆಯಲ್ಲಿ ಮೂರು ಹೊಂಡಗಳನ್ನು ಮಾಡಿ ಮಧ್ಯದ ಹೊಂಡದಲ್ಲಿ ಒಂದು ಎಳೆಯ ಕೂರ್ಚವನ್ನು ಪ್ರೇತಶಿಲೆ ಎಳ್ಳು ಸಹಿತವಾಗಿ ಹಿಡಿದು,

**ಇಹಲೋಕಂ ಪರಿತ್ಯಜ್ಯ ಗತೋऽಸಿ ಪರಮಾಂ ಗತಿಮ್ ।**
**ಮನಸಾ ವಾಯುರೂಪೇಣ ಕುಶೇ ತ್ವಾಂ ಯೋಜಯಾಮ್ಯಹಮ್ ॥**

**ಅಸ್ಮತ್ಪಿತುಃ ..........ಶ್ರಾದ್ಧೇ ಧರ್ಮವೇದಿಕಾಮಧ್ಯೇ ಪ್ರೇತರಾಜಾಯ ದರ್ಭಾಸನಂ ಪ್ರೇತಶಿಲಾಂ ಚ ದತ್ತಮುಪತಿಷ್ಠತು ॥**

–ಎಂದು ಹೊಂಡದಲ್ಲಿ ಇಟ್ಟು, ಹೀಗೆಯೇ ಒಂದು ಎಳೆಯ ಕೂರ್ಚವನ್ನು ವರುಣಶಿಲೆ ಎಳ್ಳು ಸಹಿತವಾಗಿ ಹಿಡಿದು ಪ್ರೇತರಾಜನ ಎಡಭಾಗದ (ತನ್ನ ಬಲಭಾಗದ) ಹೊಂಡದಲ್ಲಿ **'ಜಲಾಧಿಪತಿ ವರುಣಸ್ಯ ಶಿಲಾಂ ಪ್ರತಿಷ್ಠಾಮುಪತಿಷ್ಠತು ॥'** (ಕೆಲವರಲ್ಲಿ ಜಲಾಧಿಪತಿರುದ್ರನನ್ನು ಆರಾಧಿಸುವ ಸಂಪ್ರದಾಯವಿದೆ.)

ಪ್ರೇತರಾಜನ ಬಲಭಾಗದ (ತನ್ನ ಎಡಭಾಗದ) ಹೊಂಡದಲ್ಲಿ ಒಂದು ಎಳೆಯ ಕೂರ್ಚವನ್ನು ಯಮಶಿಲೆ ಎಳ್ಳು ಸಹಿತವಾಗಿ ಹಿಡಿದು **'ಪ್ರೇತಸಖ್ಯುಃ ಯಮಸ್ಯ ಶಿಲಾಂ ಪ್ರತಿಷ್ಠಾಮುಪತಿಷ್ಠತು ॥'** ಎಂದು ಪ್ರತಿಷ್ಠಾಪಿಸಿ, ಎರಡು ದರ್ಭೆಗಳನ್ನು ಎಳ್ಳೆಣ್ಣೆಯಲ್ಲಿ ಅದ್ದಿ ಹಿಡಿದು,

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತೃಪ್ತಯೇ ಪ್ರೇತರಾಜಾಯ ಅಭ್ಯಂಜನಾರ್ಥೇ ತೈಲಮುಪತಿಷ್ಠತು ॥**

–ಎಂದು ತೈಲ ಮುಟ್ಟಿಸಿ, ಹೀಗೆಯೇ **'ಜಲಾಧಿಪತಿವರುಣಾಯ ತೈಲಮುಪತಿಷ್ಠತು ॥ ಪ್ರೇತಸಖ್ಯೇ ಯಮಾಯ ತೈಲಮುಪತಿಷ್ಠತು ॥'** ಎಂದು ತೈಲ ಮುಟ್ಟಿಸಿ, ತುಲಸಿ, ಎಳ್ಳುನೀರನ್ನು ಹಿಡಿದು, ಮೂರು ಶಿಲೆಗಳ ಮೇಲೆ **'ಹರಿದ್ರಾಪಿಷ್ಟ ಸ್ನಾನಮುಪತಿಷ್ಠತು । ಪಂಚಾಮೃತಸ್ನಾನಮುಪತಿಷ್ಠತು । ಶುದ್ಧೋದಕಸ್ನಾನಮುಪತಿಷ್ಠತು ॥ ಕೇಶವಾದಿ ಚತುರ್ವಿಂಶತಿಭಿಶ್ಚ ಮತ್ಸ್ಯಾದಿನಾಮಭಿಶ್ಚ ಸ್ನಾನಮುಪತಿಷ್ಠತು ॥'** ಎಂದು ಎಳ್ಳುನೀರು ಬಿಡಬೇಕು.

## ಕ್ಷಣಪಾದ್ಯಾದಿ

ಎರಡು ದರ್ಭೆಗಳನ್ನು ದಕ್ಷಿಣಾಗ್ರವಾಗಿ ಹಿಡಿದು, **ಪಿತುಃ ......ಗೋತ್ರ ......ಶರ್ಮಣಃ ಪ್ರೇತಸ್ಯ ವಿಮೋಕ್ಷಾರ್ಥಂ ಪ್ರೇತರಾಜಾಯ ಅಯಂ ತೇ ಕ್ಷಣಃ ॥** –ಎಂದು ಮಧ್ಯಶಿಲೆಯಲ್ಲಿಟ್ಟು, ಪುನಃ ಎರಡು ದರ್ಭೆಗಳನ್ನು ಹಿಡಿದು, **'ಜಲಾಧಿಪತಿವರುಣಸ್ಯ ಅಯಂ ತೇ ಕ್ಷಣಃ ॥'** ಉತ್ತರ ಶಿಲೆಯಲ್ಲಿಟ್ಟು ಪುನಃ ಎರಡು ದರ್ಭೆಗಳನ್ನು ಹಿಡಿದು, **'ಪ್ರೇತಸಖ್ಯುಃ ಯಮಸ್ಯ ಅಯಂ ತೇ ಕ್ಷಣಃ ॥'** ಎಂದು ದಕ್ಷಿಣಶಿಲೆಯಲ್ಲಿಟ್ಟು, ಎರಡು

ದರ್ಭೆಗಳನ್ನು ಪೂರ್ವಾಗ್ರವಾಗಿ ಹಿಡಿದು, '**ಪ್ರೇತರಾಜಸ್ಯ ಇದಮಾಸನಮುಪತಿಷ್ಠತು ॥**' ಎಂದು ಪೂರ್ವಾಗ್ರವಾಗಿ ಶಿಲೆಯ ಮೇಲಿಡಬೇಕು. ಹೀಗೆಯೇ, '**ಜಲಾಧಿಪತಿವರುಣಸ್ಯ ಆಸನಮುಪತಿಷ್ಠತು ॥ ಪ್ರೇತಸಖ್ಯುಃ ಯಮಸ್ಯ ಆಸನಮುಪತಿಷ್ಠತು ॥**' ಎಳ್ಳುನೀರು ಹಿಡಿದು, '**ಪ್ರೇತರಾಜಸ್ಯ ಪಾದ್ಯಮುಪತಿಷ್ಠತು ॥**' ಎಂದು ಶಿಲೆಯ ಮೇಲೆ ಬಿಟ್ಟು, ಹೀಗೆಯೇ, '**ಜಲಾಧಿಪತಿ ವರುಣಸ್ಯ ಪಾದ್ಯಮುಪತಿಷ್ಠತು ॥ ಪ್ರೇತಸಖ್ಯುಃ ಯಮಸ್ಯ ಪಾದ್ಯಮುಪತಿಷ್ಠತು ॥**' ಎಂದು ಪಾದ್ಯ ಕೊಡಬೇಕು.

## ಅರ್ಘ್ಯಮ್

(ಬಲ) ಒಂದು ಬಾಳೆಲೆದೊಣ್ಣೆಗೆ ನೀರು ಹಾಕಿ, ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು, ಗಂಧ ಎಳ್ಳು ಇತ್ಯಾದಿಗಳನ್ನು ಹಾಕಿ ಅಷ್ಟಾಕ್ಷರ ಮಂತ್ರ ಪಠಿಸಿ, ಎಳ್ಳು ನೀರು ಹಿಡಿದು,

**ಅಸ್ಮತ್ಪಿತುಃ ......ಶ್ರಾದ್ಧೇ ಪ್ರೇತರಾಜಸ್ಯ ಅರ್ಘ್ಯಮುಪತಿಷ್ಠತು ॥**

–ಎಂದು ಕೂರ್ಚದ ಮೇಲೆ ಅರ್ಘ್ಯ ಕೊಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಅರ್ಘ್ಯ ಕೊಡಬೇಕು. ಮುಂದಿನ ವಾಸೋದಕಾದಿ ಉಪಚಾರಗಳನ್ನು ಮೂರು ಸ್ಥಾನಗಳಲ್ಲಿಯೂ ಮಾಡಬೇಕು–

**ಪ್ರೇತರಾಜಸ್ಯ ವಾಸೋದಕಮುಪತಿಷ್ಠತು । ಕೇಶೋದಕಮುಪತಿಷ್ಠತು । ತಿಲೋದಕಮುಪತಿಷ್ಠತು । ಭಯನಿವಾರಣಾರ್ಥಂ ಖಡ್ಗೋದಕಮುಪತಿಷ್ಠತು । ಬ್ರಹ್ಮಕರ್ಮಸಿದ್ಧ್ಯರ್ಥಂ ಯಜ್ಞೋಪವೀತ ಗೋಪೀಚಂದನ ಪಂಚಾಯುಧೋದಕ ದತ್ತಮುಪತಿಷ್ಠತು । ವಿಷ್ಣುಲೋಕಾವಾಪ್ತ್ಯರ್ಥಂ ತೀರ್ಥೋದಕಮುಪತಿಷ್ಠತು । ಅಲಂಕಾರಾರ್ಥೇ ಗಂಧಮುಪತಿಷ್ಠತು । ಮಾಲ್ಯಾರ್ಥೇ ಪುಷ್ಪಮಾಲಾಮುಪತಿಷ್ಠತು । ಅಕ್ಷತಾಮುಪತಿಷ್ಠತು । ಅಲಂಕಾರಾರ್ಥೇ ಹರಿದ್ರಾಚೂರ್ಣಮುಪತಿಷ್ಠತು । ಆಚ್ಛಾದನಾರ್ಥೇ ವಸ್ತ್ರಮುಪತಿಷ್ಠತು । ಆಘ್ರಾಣಾರ್ಥೇ ಉದಕೇನೈವ ಸಂಕಲ್ಪಿತೋಽಯಂ ಧೂಪಮುಪತಿಷ್ಠತು । ಜ್ವಾಲಾಽಲಾಭೇನ ಸೂರ್ಯಸ್ಥಿತೋಽಯಂ ದೀಪಮುಪತಿಷ್ಠತು ॥**'

ಅಕ್ಕಿ ಹಿಡಿದು, (ಬಲ)

**ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।**
**ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ ॥**

–ಎಂದು ಹಾಕಿ ಕೈಮುಗಿಯಬೇಕು.

## ಬರ್ಹಿಷ್ಯಾಸನಾಽವಾಹನಮ್

(ಎಡ) ಜೇಡಿಪುಡಿಯಿಂದ ಮೂರು ಶಿಲೆಗಳ ಎದುರು ದಕ್ಷಿಣಾಗ್ರವಾಗಿ ಮೂರು ತ್ರಿಕೋನಾಕಾರದ ಮಂಡಲ ಬರೆದು, ಎರಡು ದರ್ಭೆಗಳನ್ನು ಹಿಡಿದು,

**ಅಸ್ಮತ್ಪಿತುಃ ದಶಮೇಽಹನಿ ......ಶ್ರಾದ್ಧೇ ಪ್ರೇತರಾಜಸ್ಯ ಮಂಡಲಮಧ್ಯೇ ಉಲ್ಲೇಖನಮುಪತಿಷ್ಠತು ॥** –ಎಂದು ಉತ್ತರದಿಂದ ದಕ್ಷಿಣಕ್ಕೆ ಉಲ್ಲೇಖನಮಾಡಿ ಮಂಡಲದಲ್ಲಿಟ್ಟು ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ, ತುಂಡು ಮಾಡಿ, ಹಿಂದೆ ಬಿಸಾಡಿ, ಕೈ ತೊಳೆದು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲೂ ಮಾಡಿ, ಎಳ್ಳು ಹಿಡಿದು,

**ಅಸ್ಮತ್ಪಿತುಃ ......ಶ್ರಾದ್ಧೇ ಮಂಡಲಮಧ್ಯೇ ತಿಲಮುಪತಿಷ್ಠತು ॥** –ಎಂದು ಮಂಡಲಮಧ್ಯದಲ್ಲಿ ಎಳ್ಳು ಹರಡಿ, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಮಾಡಿ ನಾಲ್ಕು ದರ್ಭೆಗಳನ್ನು ದಕ್ಷಿಣಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ......ಶ್ರಾದ್ಧೇ ಮಂಡಲಮಧ್ಯೇ ಬರ್ಹಿರುಪತಿಷ್ಠತು ॥** –ಎಂದು ಮಂಡಲದ ಮಧ್ಯೆ ಇಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಇಟ್ಟು, ಎಳ್ಳು ನೀರು ಹಿಡಿದು, '**ಬರ್ಹಿಷ್ಯುಪರಿ ತಿಲೋದಕಮುಪತಿಷ್ಠತು ॥**' –ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಕೊಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಕೊಟ್ಟು, ಪುನಃ ಒಂದು ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ......ಶ್ರಾದ್ಧೇ ಬರ್ಹಿಷ್ಯಾಸನಮುಪತಿಷ್ಠತು ॥** –ಎಂದು ಬರ್ಹಿಸ್ಸಿನ ಮೇಲೆ ಅಡ್ಡ ಇಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಇಟ್ಟು, ಜಲಕೂರ್ಚದಿಂದ ನೀರನ್ನು ಹಿಡಿದು, '**ಆಸನಾಂತೇ ಉದಕಮುಪತಿಷ್ಠತು ॥**' –ಎಂದು ಕೂರ್ಚದಿಂದ ನೀರು ಹಾಕಿ, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ನೀರು ಬಿಟ್ಟು, ಎಳ್ಳು ಗರಿಕೆ ತುಳಸಿ ಹಿಡಿದು,

**ಅಸ್ಮತ್ಪಿತುಃ ......ಶ್ರಾದ್ಧೇ ಪ್ರೇತರಾಜಸ್ಯ ಆವಾಹನಮುಪತಿಷ್ಠತು ॥** –ಎಂದು ಮಂಡಲದ ಆಸನದಲ್ಲಿಟ್ಟು, ಹೀಗೆಯೇ ಉಳಿದೆರಡು ಸ್ಥಾನದ ಆಸನ ಗಳಲ್ಲಿಯೂ ಇಟ್ಟು, ಜಲಕೂರ್ಚದಿಂದ ನೀರನ್ನು ಹಿಡಿದು, '**ಆವಾಹನಾಂತೇ ಉದಕಮುಪತಿಷ್ಠತು ॥**' –ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ನೀರುಬಿಟ್ಟು, (ಎಡ) ಅರ್ಘ್ಯಪಾತ್ರದ ಕೂರ್ಚ, ನೀರು ಹಾಗೂ ಎಳ್ಳು ಹಿಡಿದು (ಬಲ) '**ಅಸ್ಮತ್ಪಿತುಃ ..........ಶ್ರಾದ್ಧೇ ಪ್ರೇತರಾಜಸ್ಯ ಅರ್ಘ್ಯಮುಪತಿಷ್ಠತು ॥**' ಎಂದು ಅರ್ಘ್ಯ ಕೊಟ್ಟು ಇನ್ನುಳಿದೆರಡು ಸ್ಥಾನಗಳಲ್ಲಿಯೂ ಅರ್ಘ್ಯ ಕೊಟ್ಟು (ಎಡ) ಎಡಕಾಲೂರಿ, ಕೂರ್ಚದ ಗಂಟು ಬಿಚ್ಚಿ, ಅರ್ಘ್ಯಪಾತ್ರವನ್ನು ನಾರಾಯಣಸ್ಮರಣೆಯೊಂದಿಗೆ ಎಡಹೆಬ್ಬೆರಳಿನಿಂದ ತುಂಡುಮಾಡಿ, ಹಿಂದೆ ಬಿಸಾಡಿ '**ವಾಸೋದಕಮುಪತಿಷ್ಠತು । ಕೇಶೋದಕಮುಪತಿಷ್ಠತು । ತಿಲೋದಕಮುಪತಿಷ್ಠತು ॥**' ಎಂದು, ಹೀಗೆಯೇ ಮೂರು ಸ್ಥಾನಗಳಲ್ಲಿಯೂ ಕೊಟ್ಟು, (ಬಲ) ಕೈಮುಗಿದು–

**ಕೃಷ್ಣ ಕೃಷ್ಣ ಕೃಪಾಲೋ ತ್ವಮಗತೀನಾಂ ಗತಿರ್ಭವ ।**
**ಸಂಸಾರಾರ್ಣವಮಗ್ನಾನಾಂ ಪ್ರಸೀದ ಪುರುಷೋತ್ತಮ ॥**

–ಎಂದು ಪ್ರಾರ್ಥಿಸಬೇಕು.

## ಪಿಂಡಪ್ರದಾನಮ್

ಪೂರ್ವಮುಖವಾಗಿ ಕುಳಿತು, **ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮ ..........ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ......ಧರ್ಮವೇದಿಕಾಶ್ರಾದ್ಧೇ ತಿಲೋದಕ ಪಿಂಡಪ್ರದಾನಾಖ್ಯಂ ಚ** (ಬಲ) **ಕರ್ಮ ಕರಿಷ್ಯೇ ॥ (ಕರುಷ್ವ) ॥**

**ವಿಶ್ವೇಶಂ ಮಾಧವಂ ಢುಂಢಿಂ ದಂಡಪಾಣಿಂ ಚ ಭೈರವಮ್ ।**
**ವಂದೇ ಕಾಶೀಂ ಗುಹಾಂ ಗಂಗಾಂ ಭವಾನೀಂ ಮಣಿಕರ್ಣಿಕಾಮ್ ॥**

**ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।**
**ತಂ ದೃಷ್ಟ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ ॥**

–ಎಂದು ಪಠಿಸಿ '**ಪಿಂಡದಾನಸ್ಯ ಅನುಜ್ಞಾ॥**' ಎಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಿ ('**ಅಸ್ತು ಪಿಂಡದಾನಮ್**') ಎಂದು ಪ್ರತಿವಚನ ಪಡೆದುಕೊಳ್ಳಬೇಕು.

ದಕ್ಷಿಣಕ್ಕೆ ಮುಖಮಾಡಿ ಕುಳಿತು ತನ್ನ ಎಡ ಬದಿಯಲ್ಲಿ ದಕ್ಷಿಣಾಗ್ರವಾಗಿ ಎಲೆ ಹಾಕಿ ಜಲಕೂರ್ಚದಿಂದ ಹವಿಸ್ಸಿಗೆ ಹಾಗೂ ಎಲೆಗೆ ಪ್ರೋಕ್ಷಣೆ ಮಾಡಿ, ತುಪ್ಪದಿಂದ ಎಲೆಯನ್ನು ಅಭಿಘಾರ ಮಾಡಿ ಅನ್ನವನ್ನೆಲ್ಲ ಎಲೆಗೆ ಹಾಕಿ ಪುನಃ ಎರಡು ಬಾರಿ ಅಭಿಘಾರ ಮಾಡಿ ಕಣ್ಣುಮುಚ್ಚಿ ಸೂರ್ಯನಾರಾಯಣನಿಗೆ ಕೈಮುಗಿದು ಸಮರ್ಪಣೆ ಮಾಡಿ, ನಿರ್ಮಾಲ್ಯ ತೀರ್ಥ, ತುಳಸಿ ಹಾಕಿ, ಬಲಿಹರಣ ಹಾಗೂ ವಾಯಸಬಲಿಗೆ ಬೇಕಾಗುವಷ್ಟು ಅನ್ನವನ್ನು ಬಿಟ್ಟು ಉಳಿದ ಅನ್ನದಿಂದ ಮೂರು ದೊಡ್ಡ ಉದ್ದದ ಪಿಂಡಗಳನ್ನು ಮಾಡಿಟ್ಟುಕೊಳ್ಳಬೇಕು. ಮೂರು ಸ್ಥಾನಗಳಲ್ಲಿಯೂ ಮೂರು ಬಾರಿ ನಿರ್ಮಾಲ್ಯತೀರ್ಥ ಕೊಟ್ಟು (ಎಡ) ಪಿತೃತೀರ್ಥದಿಂದ ತಿಲೋದಕ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ಪ್ರೇತರಾಜಾಯ ಪಿಂಡಸ್ಥಾನೇ ಮಾರ್ಜನ–ಮುಪತಿಷ್ಠತು ॥** –ಎಂದು ಮಂಡಲದ ಮೇಲಿರುವ ಬರ್ಹಿಸ್ಸಿನ ಮೇಲೆ ತಿಲೋದಕ ಬಿಟ್ಟು, ಹೀಗೆಯೇ '**ಜಲಾಧಿಪತಿ ವರುಣಸ್ಯ ಪಿಂಡಸ್ಥಾನೇ ಮಾರ್ಜನಮುಪತಿಷ್ಠತು ॥ ಯಮಸ್ಯ ಪಿಂಡಸ್ಥಾನೇ ಮಾರ್ಜನಮುಪತಿಷ್ಠತು ॥**' ಎಂದು ಪಿಂಡಸ್ಥಾನದಲ್ಲಿ ಆಯಾ ನಾಮೋಚ್ಚಾರಣೆ ಮಾಡಿ ತಿಲೋದಕ ಬಿಡುವುದು. ಪಿಂಡವನ್ನು ದಕ್ಷಿಣಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಕ್ಷುತ್ಬಾಧಾನಿವಾರಣದ್ವಾರಾ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಂ ಪ್ರೇತತೃಪ್ತಯೇ ಪ್ರೇತರಾಜಾಯ ಭೋಜನಾರ್ಥಮ್ ಅಯಂ ಪಿಂಡ ಉಪತಿಷ್ಠತು ॥** – ಎಂದು ತ್ರಿಕೋಣಾಕಾರದ ಮಂಡಲದ ಬರ್ಹಿಸ್ಸಿನ ಮೇಲೆ ಪಿಂಡವನ್ನಿಟ್ಟು, ಹೀಗೆಯೇ,

**ಜಲಾಧಿಪತಿ ವರುಣಾಯ ಭೋಜನಾರ್ಥಮ್ ಅಯಂ ಪಿಂಡ ಉಪತಿಷ್ಠತು ॥ ಪ್ರೇತಸಖ್ಯುಃ ಯಮಾಯ ಭೋಜನಾರ್ಥಮ್ ಅಯಂ ಪಿಂಡ ಉಪತಿಷ್ಠತು ॥** – ಎಂದು ಪಿಂಡಸ್ಥಾನದಲ್ಲಿ ಪಿಂಡಪ್ರದಾನ ಮಾಡುವುದು. ತಿಲೋದಕ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ಪ್ರೇತರಾಜಾಯ ಪಿಂಡಸ್ಯೋಪರಿ ತಿಲೋದಕ ಮುಪತಿಷ್ಠತು ॥**

–ಎಂದು ತಿಲೋದಕ ನೀಡಿ, ಹೀಗೆಯೇ ಉಳಿದ ಎರಡು ಪಿಂಡಸ್ಥಾನಗಳಲ್ಲಿಯೂ ಆಯಾ ದೇವತಾನಾಮೋಚ್ಚಾರಣೆಯೊಂದಿಗೆ ತಿಲೋದಕ ನೀಡಿ, ಎಳ್ಳುನೀರು ಹಿಡಿದು, '**ಪ್ರೇತರಾಜಸ್ಯ ಗಾಯತ್ರ್ಯರ್ಚನಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಬಿಟ್ಟು, ಹವಿಸ್ಸಿನ ಪಾತ್ರೆಯ ಅಡಿಯ ಮಸಿಯನ್ನು ಅಂಗುಷ್ಠದಿಂದ ಒರಸಿ ತೆಗೆದು, '**ಪ್ರೇತರಾಜಸ್ಯ ಅಂಜನಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಹಚ್ಚಿ, ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಹಚ್ಚಿ, ಎಳ್ಳನ್ನು ತಿಕ್ಕಿ ನೀರು ಹಿಡಿದು, '**ಪ್ರೇತರಾಜಸ್ಯ ಅಭ್ಯಂಜನಮುಪತಿಷ್ಠತು ॥**' –ಎಂದು ಪಿಂಡಗಳ ಮೇಲೆ ಬಿಟ್ಟು, ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಬಿಟ್ಟು, ಹವಿಸ್ಸಿನ ಪಾತ್ರೆಯ ಒಳಗಿನ ನೀರನ್ನು ಹಿಡಿದು, '**ಪ್ರೇತರಾಜಸ್ಯ ಪಾತ್ರಪ್ರಕ್ಷಾಲನೋದಕಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಬಿಟ್ಟು, ತನ್ನ ಬಟ್ಟೆಯ ಅಂಚಿನ ನೂಲನ್ನು ತೆಗೆದು, ಪ್ರತಿಯೊಂದು ಸ್ಥಾನದ ಪಿಂಡದ ಮೇಲೆ '**ಪ್ರೇತರಾಜಸ್ಯ ಕಶಿಪೂಪಬರ್ಹಣೇ ದಶಾಮುಪತಿಷ್ಠತು ॥** ಎಂದು ಹಾಕಿ, ಹೀಗೆ ಉಳಿದೆರಡು ಸ್ಥಾನಗಳಲ್ಲಿಯೂ ಬಿಟ್ಟು, (ಬಲ) ಅಕ್ಕಿ ಹಿಡಿದು, '**ಧ್ಯಾನಾವಾಹನಾದಿ ದಶೋಪಚಾರಾನುಪತಿಷ್ಠಂತು ॥**' ಎಂದು ಪಿಂಡದ ಮೇಲೆ ಅಕ್ಕಿ ಹಾಕಿ ತುಲಸಿಪುಷ್ಪ ದೂರ್ವಾದಿಗಳಿಂದ ಪಿಂಡದ ಮೇಲೆ ಅಲಂಕಾರ ಮಾಡಿ, ಅಪ್ಪ, ವಡೆ, ಹೋಳಿಗೆಯನ್ನು ಮೂರು ಪಿಂಡಗಳ ಸುತ್ತ ಹಾಕಿ ಮೂರು ಸೀಯಾಳ ಕೆತ್ತಿಟ್ಟು, ಕ್ರಮುಕತಾಂಬೂಲ ಇಟ್ಟು ಮೂರು ದೊಣ್ಣೆಗಳಲ್ಲಿ ಅರಸಿನ ನೀರು ಹಾಕಿ, ಉಳಿದ ಮೂರು ದೊಣ್ಣೆಗಳಲ್ಲಿ ಬೆಲ್ಲದ ನೀರನ್ನು ತುಂಬಿಸಿಡಬೇಕು.

(ಎಡ) '**ಉಪಹಾರಾರ್ಥೇ ಕದಲೀಫಲಂ, ಅಪೂಪ, ಪೋಲಿಕಾಭಕ್ಷ್ಯತ್ರಯಂ, ಸಿದ್ಧಾನ್ನಂ, ಲೇಹ್ಯಂ, ಚೋಷ್ಯಂ, ಖಾದ್ಯಮುಪತಿಷ್ಠತು ॥**' ಎಳ್ಳುನೀರು ಹಿಡಿದು, '**ಕ್ಷುತ್ಪಿಪಾಸಾನಿವಾರಣಾರ್ಥಂ ಮೃದುನಾಲಿಕೇರಫಲಮುಪತಿಷ್ಠತು ॥**' –ಎಂದು ಸೀಯಾಳದ ಮೇಲೆ ಬಿಟ್ಟು, '**ಮುಖಶುದ್ಧ್ಯರ್ಥಂ ಕ್ರಮುಕತಾಂಬೂಲಮುಪತಿಷ್ಠತು ॥ ವೀರ್ಯನಿಷ್ಪತ್ತ್ಯರ್ಥಂ ದಕ್ಷಿಣಾಮುಪತಿಷ್ಠತು ॥**' ಮಂಗಳಾರತಿ ಸಮಯದಲ್ಲಿ ಕೋಲುಬತ್ತಿಯಿಂದ ಆರತಿ ಮಾಡಿ, '**ಅಂಧತ್ವನಿವಾರಣಾರ್ಥಂ ದೀಪಿಕಾಮುಪತಿಷ್ಠತು ॥**' ಮೂರು ಎಲೆಗಳ ಎದುರು ಊರಬೇಕು. ಅನಂತರ ಛತ್ರವನ್ನು ಹಿಡಿದು '**ವರ್ಷಾತಪ ನಿವಾರಣಾರ್ಥಂ ಛತ್ರಮುಪತಿಷ್ಠತು ॥**' ಎಂದು ವೇದಿಕೆಯ ಮೂರು ಸ್ಥಾನಗಳಲ್ಲಿ ಊರಬೇಕು. ಪಾದುಕೆ ಹಿಡಿದು '**ಅಧ್ವಾನಶೋಕಪರಿಹಾರಾರ್ಥಂ ಪಾದುಕೇ ಉಪ–ತಿಷ್ಠತು ॥**' –ಎಂದು ಮೂರು ಸ್ಥಾನಗಳಲ್ಲಿ ಇಡಬೇಕು. ಪತಾಕೆ ಹಿಡಿದು '**ಭೂಷಣಾರ್ಥೇ ಪತಾಕಾ ಉಪತಿಷ್ಠತು ॥**' ಎಂದು ಮೂರು ಸ್ಥಾನಗಳಲ್ಲಿಯೂ ಊರಬೇಕು. '**ಘರ್ಮಬಾಧಾನಿವಾರಣಾರ್ಥಂ ವ್ಯಜನತ್ರಯಮುಪತಿಷ್ಠತು ॥**' –ಎಂದು ಮೂರು ಸ್ಥಾನಗಳಲ್ಲಿಯೂ ಊರಬೇಕು. ಎಳ್ಳು ಗರಿಕೆ ತುಳಸೀ ನೀರು ಹಿಡಿದು, '**ಪಿಂಡಾನಾಮುಪರಿ**

**ಅಂಜನಾಭ್ಯಂಜನಪಂಚಾಮೃತವಾಸದಶಾತುಲಸೀಪತ್ರ ಭೃಂಗರಾಜದೂರ್ವಾಪತ್ರ-ತೀರ್ಥಪುಷ್ಪಾಣ್ಯುಪತಿಷ್ಠಂತು ॥**' ಎಂದು ಪಿಂಡಗಳ ಮೇಲೆ ಹಾಕಬೇಕು.

## ಬಲಿಹರಣಮ್

ಮುಷ್ಟಿ ದರ್ಭೆ ಹಿಡಿದು, **ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ಪ್ರೇತರಾಜಸ್ಯ ಪಿಂಡಸ್ಯ ಪರಿತಃ ಬಲಿ ಸ್ಥಾನೇ ದರ್ಭಪತ್ರಮುಪತಿಷ್ಠತು** ॥ –ಎಂದು ಅಪ್ರದಕ್ಷಿಣೆಯಾಗಿ ಪಿಂಡಕ್ಕೆ ತಾಗದ ಹಾಗೆ ಪಿಂಡದ ಸುತ್ತಲೂ ತ್ರಿಕೋನಾಕಾರವಾಗಿ ದರ್ಭೆಯನ್ನು ಹಾಕಬೇಕು. ಹೀಗೆಯೇ ಉಳಿದ ಎರಡು ಪಿಂಡಸ್ಥಾನಗಳಲ್ಲಿಯೂ ಹಾಕಿ, ತಿಲೋದಕ ಹಿಡಿದು, **ದರ್ಭಾಣಾಮುಪರಿ ಏತತ್ ತಿಲೋದಕಮುಪತಿಷ್ಠತು** ॥ ಎಂದು ಪಿಂಡದ ಸುತ್ತಲೂ ಹಾಕಿದ ದರ್ಭೆಯ ಮೇಲೆ ಬಿಟ್ಟು, ಹೀಗೆಯೇ ಉಳಿದ ಎರಡು ಸ್ಥಾನಗಳಲ್ಲಿಯೂ ಹಾಕಿ ಅನ್ನಕ್ಕೆ ಅರಸಿನ ಪುಡಿ ಹಾಕಿ ಕಲಸಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ .......ಶ್ರಾದ್ಧೇ ಪ್ರೇತರಾಜಸ್ಯ ಪರಿತಃ ಅಯಂ ಬಲಿರು ಪತಿಷ್ಠತು ॥** –ಎಂದು ತ್ರಿಕೋನಾಕಾರವಾಗಿ ಹಾಕಿದ ದರ್ಭೆಯ ಮೇಲೆ ಅಪ್ರದಕ್ಷಿಣೆಯಾಗಿ ಬಲಿ ಹಾಕಬೇಕು.

**ಓಂ ಶೀತಿಕೇ ಶೀತಿಕಾವತಿ ಹ್ಲಾದಿಕೇ ಹ್ಲಾದಿಕಾವತಿ । ಮಂಡೂಕ್ಯಾಷಿ ಸು ಸಂಗಮ ಇಮಂ ಸ್ವಗ್ನಿಂ ಹರ್ಷಯ ॥**

–ಎಂದು ಬಲಿ ಹಾಕಿ, ಹೀಗೆಯೇ ಉಳಿದ ಎರಡು ಸ್ಥಾನಗಳಲ್ಲಿಯೂ ಹಾಕಿ,

**ಶ್ಮಶಾನವಾಸಿನೋ ದೇವಾಃ ಯಮಸ್ಯೈವ ಚ ಕಿಂಕರಾಃ ।**
**ಬಲಿಂ ಗೃಹೀತ್ವಾ ಕುರ್ವಂತು ಪ್ರೇತಸ್ಯ ಚ ಶುಭಾಂ ಗತಿಮ್ ॥**

ಅರಳು ಹಿಡಿದು, '**ವಂಶಾಭಿವೃದ್ಧ್ಯರ್ಥಂ ಲಾಜಾ ಉಪತಿಷ್ಠಂತು ॥**'

–ಎಂದು ಬಲಿಯ ಸುತ್ತ ಅರಳನ್ನು ಹರಡಿ, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಹರಡಿ, ಎಳ್ಳು ನೀರು ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ಪ್ರೇತರಾಜಸ್ಯ ಪರಿತಃ ಬಲೇರುಪರಿ ತಿಲೋದಕಮುಪತಿಷ್ಠತು** ॥ ಹೀಗೆಯೇ ಉಳಿದ ಎರಡು ಸ್ಥಾನಗಳಲ್ಲಿಯೂ ಹಾಕಿ, (ಬಲ)

**ನಾರಾಯಣ ನಮಸ್ತೇಽಸ್ತು ಶಂಖಚಕ್ರಗದಾಧರ ।**
**ಅಕ್ಷಯ್ಯಂ ಬಲಿದಾನೇನ ಪ್ರೇತತೃಪ್ತಿಕರೋ ಭವ ॥**

– ಎಂದು ಪ್ರಾರ್ಥಿಸಬೇಕು.

## ವಾಯಸಬಲಿಃ

ಎಳ್ಳು ತುಳಸಿ ತೀರ್ಥ ನೀರು ಹಿಡಿದು, **ಅಸ್ಮತ್ಪಿತುಃ ಮೃತಾಹಾತ್ ಪ್ರಥಮೇಽಹನಿ ......ಶ್ರಾದ್ಧೇ ಕಾಕಬಲಿರುಪತಿಷ್ಠತು ॥** –ಎಂದು ಹವಿಸ್ಸಿನ ಎಲೆಗೆ ಹಾಕಿ, ಎಲೆಯನ್ನು ಹಿಡಿದು, **'ಕಾಕಬಲಿರುದ್ವಾಸನಮುಪತಿಷ್ಠತು ॥'** ಎಂದು ದಕ್ಷಿಣಕ್ಕೆ ಸ್ವಲ್ಪ ಸರಿಸಿ, ಪ್ರಾಜ್ಞರೂಪಿ ಪರಮಾತ್ಮನನ್ನು ಸ್ಮರಿಸಿ,

**ಕಾಕೋಽಸಿ ಯಮದೂತೋಽಸಿ ಗೃಹಾಣಬಲಿಮುತ್ತಮಮ್ ।**
**ಯಮದ್ವಾರೇ ಗತೇ ಪ್ರೇತೇ ತಮಾಪ್ಯಾಯಿತುಮರ್ಹಸಿ ॥**

ನಮಸ್ಕಾರ ಮಾಡಬೇಕು. ಅನಂತರ ಎಲೆಯನ್ನು ಎತ್ತಿಕೊಂಡು, ಸ್ವಲ್ಪ ದೂರ ಹೋಗಿ,

**ಯಮೋಽಸಿ ಯಮದೂತೋಽಸಿ ವಾಯಸೋಽಸಿ ಮಹಾಬಲ ।**
**ಸಪ್ತಜನ್ಮಕೃತಂ ಪಾಪಂ ಬಲಿಂ ಭುಂಜಂತು ವಾಯಸಾಃ ॥**

**ಐಂದ್ರವಾರುಣವಾಯವ್ಯಾಯಾಮ್ಯಾನೈರ್ಋತಿಕಾಶ್ಚ ಯೇ ।**
**ತೇ ಕಾಕಾ ಪ್ರತಿಗೃಹ್ಣಂತು ಭೂಮೌ ಪಿಂಡಂ ಮಯಾರ್ಪಿತಮ್ ॥**

ಮಂತ್ರದಿಂದ ಎಲೆ ದಕ್ಷಿಣಾಗ್ರವಾಗಿಟ್ಟು ಕೈತೊಳೆದು, ಚಪ್ಪಾಳೆ ಬಡಿದು ಕಾಗೆಗಳನ್ನು ಆಹ್ವಾನಿಸಿ (ಕಾಗೆ ಕಾಣದ ಸಂದರ್ಭದಲ್ಲಿ ದರ್ಭೆಯಿಂದ ಕಾಗೆ ಮಾಡಿ ಎಲೆಯ ಮೇಲೆ ಇಡಬೇಕು.) ಕೈಕಾಲು ತೊಳೆದು ವೇದಿಕೆಯ ಬಳಿ ಬರಬೇಕು.

## ತೃಪ್ತಿಜಲಮ್

(ಬಲ) ಪೂರ್ವಾಭಿಮುಖವಾಗಿ ಕುಳಿತು, ಪವಿತ್ರ ತೆಗೆದು, ಆಚಮನ ಮಾಡಿ ಪುನಃ ಪವಿತ್ರ ಧರಿಸಿ, (ಎಡ) ಜಲಪಾತ್ರೆ ಹಾಗೂ ತಿಲಹಿಡಿದು, ನೀರು ಬಿಡುತ್ತಾ,

**ಓಂ ಸಮುದ್ರೇ ಅಂತಃ ಶಯತ ಉದ್ನಾ ವಜ್ರೋ ಅಭೀವೃತಃ । ಭರಂತ್ಯಸ್ಮೈ ಸಂಯತಃ ಪುರಃ ಪ್ರಸ್ರವಣಾ ಬಲಿಮ್ ॥**

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತೃಪ್ತ್ಯರ್ಥಂ ಉತ್ತಮ ಲೋಕಾವಾಪ್ತ್ಯರ್ಥಂ ಮರಣದಿನಾದಾರಭ್ಯ ಚತುರ್ಥೇಽಹನಿ (ದ್ವಿತೀಯೇ...) ಸೋಪಸ್ಕರಂ ಸವ್ಯಂಜನಂ ಸಪರಿಕರಂ ಸದಕ್ಷಿಣಾಕಂ ಸತಾಂಬೂಲಂ ಸತಿಲಾಪಿಧಾನ ಉದಕುಂಭ ನಾಲಿಕೇರಸಲಿಲಸಹಿತಮ್ ಇಮಂ ಬಲಿಂ ಪ್ರೇತತೃಪ್ತ್ಯರ್ಥಮುಪತಿಷ್ಠತು ॥**

–ಎಂದು ಮೂರು ಪಿಂಡಗಳ ಮೇಲೆ ತಿಲೋದಕ ಕೊಟ್ಟು, ಪಿಂಡಗಳನ್ನು ಮುಟ್ಟಿ,

**ಅಸ್ಮತ್ಪಿತುಃ ......ಶ್ರಾದ್ಧೇ ಪ್ರೇತರಾಜಸ್ಯ ಪಿಂಡಮುದ್ವಾಸನಮುಪತಿಷ್ಠತು ॥**

–ಎಂದು ಪಿಂಡವನ್ನು ಅಲ್ಲಾಡಿಸಿ, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಮಾಡಿ, ಬಲಿಯನ್ನು ಭೇದನ ಮಾಡುತ್ತಾ,

**ಅಸ್ಮತ್ಪಿತುಃ ......ಶ್ರಾದ್ಧೇ ಪ್ರೇತರಾಜಸ್ಯ ಬಲಿರುದ್ವಾಸನಮುಪತಿಷ್ಠತು ॥**

–ಎಂದು ಬಲಿಭೇದನ ಮಾಡಿ ಕೈತೊಳೆದು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿಯೂ ಮಾಡಿ ಕೈತೊಳೆದು, ಪಿಂಡಗಳ ಮೇಲೆ **ವಾಸೋದಕಾದಿ**ಗಳನ್ನು ನೀಡಿ ಅನಂತರ ತಾಯಿ ಮತ್ತು ಹೆಣ್ಣುಮಕ್ಕಳು ಕನಿಷ್ಠಪೂರ್ವಕವಾಗಿ ಒಬ್ಬ ಕರ್ತೃವಿನ ಪಿಂಡಗಳ ಮೇಲೆ ವಾಸೋದಕಾದಿಗಳನ್ನು ನೀಡಿ, ಕರ್ಮಿಯು ಪಿಂಡಗಳ ಮೇಲೆ ದಕ್ಷಿಣಾಗ್ರವಾಗಿ ದರ್ಭೆಯಿಟ್ಟು, (ಬಲ) ಅಕ್ಕಿ ಹಿಡಿದು,

**ಅನಾದಿ ನಿಧನೋ ದೇವಃ ಚಕ್ರಶಂಖಗದಾಧರಃ ।**
**ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದೋ ಭವ ॥**

**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥**

–ಎಂದು ಪಿಂಡಗಳಿಗೆ ಅಕ್ಷತೆ ಹಾಕಿ ನಮಸ್ಕಾರ ಮಾಡಬೇಕು.

## ಕೃಷ್ಣಾರ್ಪಣಮ್

(ಬಲ) ನಾಣ್ಯ, ತುಳಸಿ, ನೀರು ಹಿಡಿದು ಪೂರ್ವಾಭಿಮುಖವಾಗಿ, **ಅಸ್ಮತ್ಪಿತುಃ ......ಶ್ರಾದ್ಧಸ್ಯ ಸಂಪೂರ್ಣಫಲಪ್ರಾಪ್ತ್ಯರ್ಥಮ್ ಆಚಾರ್ಯಾಯ ಯಥಾಶಕ್ತಿ ದಕ್ಷಿಣಾಂ ಪ್ರತಿಪಾದಯಾಮಿ** ॥ –ಎಂದು ದಕ್ಷಿಣೆಯನ್ನು ಭೂಮಿಯ ಮೇಲೆ ಇಟ್ಟು ಕೈ ಮುಗಿಯಬೇಕು. ಅನಂತರ ದಕ್ಷಿಣೆಯ ಮೇಲಿರುವ ತುಳಸಿ ತೆಗೆದು '**ಯಸ್ಯ ಸ್ಮೃತ್ಯಾ ಚ** .....' ಮಂತ್ರ ಪಠಿಸಿ,

**ಅಸ್ಮತ್ಪಿತುಃ ......ಶ್ರಾದ್ಧಕರ್ಮಣಾ ಪಿತೃಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥**

**ಅಚ್ಯುತಃ ಕಲ್ಪವೃಕ್ಷಶ್ಚ ಅನಂತಃ ಕಾಮಧೇನವಃ ।**
**ಚಿಂತಾಮಣಿಸ್ತು ಗೋವಿಂದೋ ನಾಮತ್ರಯಮುದಾಹೃತಮ್ ॥**

–ಎಂದು ತುಲಸಿಯನ್ನು ಸ್ವಲ್ಪ ಪಿಂಡಕ್ಕೆ ಹಾಕಿ, ಉಳಿದುದನ್ನು ತನ್ನ ಕಿವಿಯಲ್ಲಿಟ್ಟುಕೊಳ್ಳಬೇಕು.

## ಪಿಂಡವಿಸರ್ಜನಮ್

ತಮ್ಮ ಹರಿವಾಣದಲ್ಲಿ ನೀರು ಮತ್ತು ತೀರ್ಥ ಹಾಕಿ,

**ಓಂ ಯತ್ರ ತದ್ವಿಷ್ಣುರ್ಮಹೀಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥**

**ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

**ವೇಣೀಮಾಧವಾಯ ನಮಃ । ಬಿಂದುಮಾಧವಾಯ ನಮಃ । ಗಯಾಗದಾಧರಾಯ ನಮಃ ॥**

–ಎಂದು ಸ್ಮರಣೆ ಮಾಡಿ, (ಎಡ) **'ಪ್ರೇತರಾಜಪಿಂಡೋಽಯಂ ಗಯಾರ್ಪಿತೋಽಸ್ತು ।'** ಎಂದು ಪಿಂಡವನ್ನು ಹರಿವಾಣದಲ್ಲಿಟ್ಟು, ಹೀಗೆಯೇ ಉಳಿದೆರಡು ಸ್ಥಾನಗಳಲ್ಲಿ **'ವರುಣಸ್ಯ, ಯಮಸ್ಯ, ಗಯಾರ್ಪಿತೋಽಸ್ತು ।'** –ಎಂದು ಪಿಂಡವನ್ನು ಬಲಿಯನ್ನು ಹರಿವಾಣದಲ್ಲಿ ಇಟ್ಟು, ಅನಂತರ **'ಇದಂ ಸತಿಲೋದಕಪಿಂಡಪ್ರದಾನಂ ಪ್ರೇತಾಪ್ಯಾಯಯನಮಸ್ತು ॥'** –ಎಂದು ತಿಲೋದಕ ಕೊಟ್ಟು ಪಿಂಡಸ್ಥಳದ ಎಳ್ಳನ್ನು ಹಿಡಿದು, **'ಅಕ್ಷಯ್ಯಸ್ಥಾನೇ ಅಭಿರಮ್ಯತಾಮ್ ॥' (ಅಭಿರಮ್ಯತಾ ಸ್ಮಃ)** ಎಂದು ಎಳ್ಳನ್ನು ಆಕಾಶದ ಕಡೆಗೆ ಎರಚಬೇಕು.

**ಅಗತೀನಾಂ ಚ ಸರ್ವೇಷಾಂ ಗತಿರ್ನಾರಾಯಣೋ ಹರಿಃ ।**
**ತತ್ರ ಸಂಪೂಜನಂ ಕಾರ್ಯಂ ಸರ್ವಪಾಪಹರಂ ಶುಭಮ್ ॥**

ಎಳ್ಳುನೀರು ಹಿಡಿದು, **'ಪ್ರೇತರಾಜಸ್ಯ ಉದ್ವಾಸನಮುಪತಿಷ್ಠತು ॥'** ಎಂದು ಎಳ್ಳು ನೀರು ಬಿಟ್ಟು, ಹೀಗೆಯೇ ಇನ್ನೆರಡು ಸ್ಥಾನಗಳಲ್ಲಿಯೂ **'ಜಲಾಧಿಪತಿ ವರುಣಸ್ಯ ಉದ್ವಾಸನಮುಪತಿಷ್ಠತು ॥ ಪ್ರೇತಸಖ್ಯುಃ ಯಮಸ್ಯ ಉದ್ವಾಸನಮುಪತಿಷ್ಠತು ॥'** ಎಂದು ಎಳ್ಳುನೀರು ಬಿಟ್ಟು, ಮೂರು ಸ್ಥಾನಗಳ ಕೂರ್ಚಗಳ ಗಂಟು ಬಿಚ್ಚಿ ಹಾಕಿ ಜಲಪಾತ್ರದ ಕೂರ್ಚದ ಗಂಟನ್ನು ಬಿಚ್ಚಿ ಹಾಕಬೇಕು.

ಮೃತನ ಪತ್ನಿ ಕಾರಣಾಂತರಗಳಿಂದ ಮೊದಲ ದಿನ ಕಂಠಾಭರಣಾದಿಗಳನ್ನು ವಿಸರ್ಜಿಸದೇ ಇದ್ದರೆ ಈಗ ವಿಸರ್ಜಿಸುವುದಾದರೆ ಪ್ರೇತಶಿಲೆಯ ಸಮೀಪ ವಿಸರ್ಜಿಸಿ ಶಿರೋವಪನ ಮಾಡಿಕೊಳ್ಳಬೇಕು. ಇಲ್ಲಿ ಮೃತನ ಪತ್ನಿಯನ್ನು ಹತ್ತನೆಯ ದಿನದ ವರೆಗೆ ಸುವಾಸಿನಿಯೆಂದೇ ತಿಳಿಯಬೇಕು. ಅನಂತರ, **'ಶಿಲಾಮುದ್ವಾಸಯಿಷ್ಯೇ ॥' (ಅಸ್ತೂದ್ವಾಸಯ)** ಎಂದು ಪ್ರತಿವಚನ ಪಡೆದು, ಮೂರು ಕಲ್ಲುಗಳನ್ನೂ ತೊಳೆದು ಮೂರು ಕೂರ್ಚಗಳನ್ನು ಬಿಚ್ಚಿ ಪ್ರೇತಶಿಲೆಯನ್ನು ಹರಿವಾಣದಲ್ಲಿ ಇಟ್ಟು ಉಳಿದೆರಡು ಶಿಲೆಯನ್ನು ನೀರಿಗೆ ಬಿಡಬೇಕು. (ಕೆಲವರಲ್ಲಿ ಮೂರು ಶಿಲೆಗಳನ್ನು ಧರ್ಮೋದಕದಲ್ಲಿಗೆ ಕೊಂಡುಹೋಗಲಿಕ್ಕಿದೆ. ಹಾಗೂ ಇನ್ನು ಕೆಲವರಲ್ಲಿ ಬಾಂಧವರು ಮಾತ್ರ ಧರ್ಮೋದಕವನ್ನು ದರ್ಭೆಯ ಮೇಲೆ ಕೊಡಬೇಕು. ಶಿಲೆಯಲ್ಲಿ ಕೊಡಲಿಕ್ಕಿಲ್ಲ. ಕೆಲವರಲ್ಲಿ ಬಂಧುಬಾಂಧವರು

ಶಿಲೆಯ ಮೇಲೆ ಧರ್ಮೋದಕ ಮಾತ್ರ ಕೊಡಬೇಕು; ವಾಸೋದಕಾದಿಗಳನ್ನು ಕೊಡುವ ಕ್ರಮವಿಲ್ಲ.)

## ಧರ್ಮೋದಕಮ್



ಪ್ರೇತಶಿಲೆಯುಳ್ಳ ಹರಿವಾಣವನ್ನು ಹಾಗೂ ಧರ್ಮೋದಕಸಾಹಿತ್ಯವನ್ನು ಹಿಡಿದುಕೊಂಡು ಜಲಾಶಯದ ಬಳಿಗೆ ಹೋಗಿ (ಬಲ) ಪೂರ್ವಾಭಿಮುಖವಾಗಿ ಕುಳಿತು ಪವಿತ್ರ ತೆಗೆದು ಆಚಮನ ಮಾಡಿ ಪುನಃ ಪಪಿತ್ರ ಧರಿಸಿ ಪ್ರಾಣಾಯಾಮ ಮಾಡಿ, ಸಂಕಲ್ಪ-

**ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ .....ಪ್ರೀತ್ಯರ್ಥಂ** (ಎಡ) **......ಪ್ರೇತಸ್ಯ ಪ್ರೇತತ್ವನಿವೃತ್ತ್ಯರ್ಥಂ ಕ್ಷುತ್ಪಿಪಾಸಾನಿವೃತ್ತ್ಯರ್ಥಂ ಮೃತಾಹಾತ್ ದಶಮೇಽಹನಿ ದಹನಜನಿತ ತಾಪೋಪಶಮನದ್ವಾರಾ ಅಕ್ಷಯ್ಯಪುಣ್ಯಲೋಕಾ-ವಾಪ್ತ್ಯರ್ಥಂ ಇಹಲೋಕೇ ಋಣಾನುಬಂಧನಿವೃತ್ತ್ಯರ್ಥಮ್ ಇಷ್ಟೈಃ ಶಿಷ್ಟೈರ್ಜ್ಞಾತಿ-ಬಾಂಧವೈಃ ಸಹ ವಾಸೋದಕ ಕೇಶೋದಕ ತಿಲೋದಕಪ್ರದಾನಪೂರ್ವಕ ಧರ್ಮೋದಕ ಪ್ರದಾನಂ ಕರ್ತುಂ** (ಬಲ) **ಅಭ್ಯಂಗಸ್ನಾನಪೂರ್ವಕ ಅವಗಾಹನಸ್ನಾನಾಖ್ಯಂ ಕರ್ಮ ಕರಿಷ್ಯೇ ॥ (ಕುರುಷ್ವ) ॥**

(ಎಡ) ಎಳ್ಳೆಣ್ಣೆಯನ್ನು, ಸ್ವಲ್ಪ ಪ್ರೇತಶಿಲೆಗೆ ಹಾಕಿ '**ಅಭ್ಯಂಜನಮುಪತಿಷ್ಠತು ॥**' ಎಂದು ಹೇಳಿ ಉಳಿದದ್ದನ್ನು ಶೇಷವೆಂದು ತಿಳಿದು ಕನಿಷ್ಠಪೂರ್ವಕರಾಗಿ ತಲೆಗೆ ಹಾಕಿಕೊಂಡು ಸ್ನಾನ ಮಾಡಿ, ದಕ್ಷಿಣಾಭಿಮುಖವಾಗಿ ಪ್ರೇತಶಿಲೆಯ ಮೇಲೆ **ವಾಸೋದಕ ಕೇಶೋದಕ ತಿಲೋದಕ** ಕೊಟ್ಟು, ಬೊಗಸೆನೀರು ಹಿಡಿದು, '**ದಹನಜನಿತ ತಾಪೋಪಶಮನದ್ವಾರಾ ಅಕ್ಷಯ್ಯಪುಣ್ಯಲೋಕಾವಾಪ್ತ್ಯರ್ಥವ್ ಇಹಲೋಕೇ ಋಣಾನುಬಂಧ-ನಿವೃತ್ತ್ಯರ್ಥಮ್ ಏತದ್ಧರ್ಮೋದಕಮುಪತಿಷ್ಠತು ॥**' ಎಂದು ಪ್ರೇತಶಿಲೆಯ ಮೇಲೆ '**ಇದಂ ತೇ ಧರ್ಮೋದಕಮುಪತಿಷ್ಠತು ॥**' ಎಂದು ಹತ್ತು ಬಾರಿ ಕೊಡಬೇಕು.

ಅನಂತರ ಉಳಿದ ಬಾಂಧವರು ತೈಲಹಚ್ಚಿಕೊಂಡು ಸ್ನಾನಮಾಡಿ ಸಂಬಂಧಪ್ರಕಾರ ಪ್ರೇತಶಿಲೆಯನ್ನು ಮುಟ್ಟದೆ ಅಧಿಕಾರ ಇದ್ದವರು (ಎಡ) ಒಂದು ಬಾರಿ ವಾಸೋದಕ

ಕೇಶೋದಕ ತಿಲೋದಕಗಳನ್ನು ಕೊಟ್ಟು, ಮೂರು ಬಾರಿ ಬೊಗಸೆನೀರಿನಿಂದ ಧರ್ಮೋದಕವನ್ನು ಕೊಡಬೇಕು. ಹೆಂಗುಸರು ಒಂದು ಬಾರಿ ಧರ್ಮೋದಕ ಕೊಡಬೇಕು. ಶ್ರಾದ್ಧಾಧಿಕಾರ ಇಲ್ಲದವರು (ಬಲ) ಒಂದು ಬಾರಿ ಧರ್ಮೋದಕ ಕೊಡಬೇಕು. ಎಲ್ಲರೂ ಕೊಟ್ಟ ಅನಂತರ ಪುನಃ ಕರ್ತೃಗಳು ಮೊದಲಿನಂತೆ ಧರ್ಮೋದಕ ಕೊಟ್ಟು ದಕ್ಷಿಣಕ್ಕೆ ಮುಖಮಾಡಿ (ಬಲ) ಅಕ್ಷತೆ ಹಿಡಿದು, '**ಅನಾದಿನಿಧನೋ....**' ಮತ್ತು '**ಅತಸೀಪುಷ್ಪ....**' ಮಂತ್ರಗಳನ್ನು ಪಠಿಸಿ ಪ್ರೇತಶಿಲೆಯ ಮೇಲೆ ಹಾಕಿ ಹಿರಿಯ ಮಗ (ಎಡ) ದಕ್ಷಿಣಕ್ಕೆ ಮುಖಮಾಡಿ ನೀರಿನಲ್ಲಿ ನಿಂತು, '**ಸೂರ್ಯಂ ಚಕ್ಷುರ್ಗಚ್ಛತು**' ಮಂತ್ರ ಪಠಿಸಬೇಕು.

**ಓಂ ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ । ಅಪೋ ವಾ ಗಚ್ಛ ಯದಿ ತತ್ರ ತೇ ಹಿತಮೋಷಧೀಷು ಪ್ರತಿ ತಿಷ್ಠಾ ಶರೀರೈಃ ॥**

ಪ್ರೇತ ಶಿಲೆಯನ್ನು ಎಲ್ಲರೂ ಕಣ್ಣುಮುಚ್ಚಿಕೊಂಡು ಇರುವಂತೆ ತಾನೂ ಕಣ್ಣು ಮುಚ್ಚಿಕೊಂಡು,

**ದವದಾಹೇ ಸಮುತ್ಪನ್ನೇ ಪ್ರೇತಪ್ರಸ್ತರವಾಸಿನಿ ।**
**ಕ್ಷುತ್ಪಿಪಾಸಾನಿವೃತ್ತ್ಯರ್ಥಂ ತ್ಯಜೇದ್ವೈ ದಶಮೇಽಹನಿ ॥**

**ಶಿಲಾದೇವಿ ನಮಸ್ತುಭ್ಯಂ ಪ್ರೇತರೂಪಂ ವಿಮುಚ್ಯತಾಮ್ ।**
**ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂ ಗತಿಮ್ ॥**

**ಗತೋಽಸಿ ದಿವ್ಯದೇಹೇನ ಕುಶೇ ತ್ವಾಹಂ ನಿಯೋಜಯೇ ।**
**ಪ್ರಸೀದ ಪರಮೇ ದೇವಿ ಪ್ರೇತರೂಪೇ ಶಿಲಾಮಯಿ ॥**

**ಆಹಾರಾರ್ಥಂ ಮಯಾ ದತ್ತಂ ಪಾಷಾಣಮುಪತಿಷ್ಠತು ।**
**ಶಿಲಾದೇವಿ ಮಹಾಪುಣ್ಯೇ ದಶಾಹಂ ಪ್ರೇತರೂಪಿಣಿ ॥**

**ಜಲೇ ವಾಸ ಶಿಲಾದೇವಿ ಸಂತೃಪ್ತಾ ಸ್ಥಿರಜೀವಿನಿ ।**
**ಪ್ರಸಾದಂ ಕುರು ಮೇ ದೇವಿ ಪ್ರೇತರೂಪೇ ಶಿಲಾಮಯಿ ॥**

**ಪಿತ್ರೇ ......ಶರ್ಮಣೇ ......ಗೋತ್ರಾಯ ಪ್ರೇತಾಯ ತ್ವಂ ಪ್ರಯಚ್ಛಾಽಶು ಸದ್ಗತಿಂ ಮುಕ್ತಿಶಾಶ್ವತೀಮ್ ॥**

**ಅಸ್ಮಾತ್ತ್ವಮಧಿಜಾತೋಽಸಿ ತ್ವದಯಂ ಜಾಯತಾಂ ಪುನಃ । ಅಸೌ ಸ್ವರ್ಗಾಯ ಲೋಕಾಯ ಸ್ವಾಹಾ ॥**

–ಎಂದು ಮಂತ್ರವನ್ನು ಜಪಿಸಿ, ನಾರಾಯಣಸ್ಮರಣೆಯೊಂದಿಗೆ ಕಲ್ಲನ್ನು ಹಿಂದೆ

ಬಿಸಾಡುವುದು. (ಕೆಲವರಲ್ಲಿ ಕರ್ಮವಸ್ತ್ರದ ಮೊಳೆ ಹಾಗೂ ಎಳ್ಳನ್ನು ತೆಗೆದು ಹಾಕಿ ಬಟ್ಟೆಯನ್ನು ಮಾತ್ರ ಹನ್ನೆರಡನೆಯ ದಿನದವರೆಗೆ ಧರಿಸುತ್ತಾರೆ. ಇನ್ನು ಕೆಲವು ಕಡೆ, **ತಂತುದೇವಿ ನಮಸ್ತುಭ್ಯಂ ಶ್ರೇಯಃ ಪ್ರೇಯಃ ಸಮನ್ವಿತೇ । ಆದ್ಯಾದ್ದಶಾಹಪರ್ಯಂತಂ ಸರ್ವಾರಿಷ್ಟಂ ನಿವಾರಯ ॥** –ಎಂದು ಕರ್ಮವಸ್ತ್ರವನ್ನೇ ವಿಸರ್ಜನೆ ಮಾಡುತ್ತಾರೆ.)

ಪ್ರೇತಘಟವನ್ನು ತಂದಿದ್ದಲ್ಲಿ ಮುಂದಿನ ಮಂತ್ರದಿಂದ ವಿಸರ್ಜಿಸಬೇಕು–

**ಓಂ ತ್ರಿಂಶಚ್ಛತಂ ವರ್ಮಿಣ ಇಂದ್ರ ಸಾಕಂ ಯವ್ಯಾವತ್ಯಾಂ ಪುರುಹೂತ ಶ್ರವಸ್ಯಾ । ವೃಚೀವಂತಃ ಶರವೇ ಪತ್ಯಮಾನಾಃ ಪಾತ್ರಾ ಭಿಂದಾನಾನ್ಯರ್ಥಾ–ನ್ಯಾಯನ್ ॥**

–ಎಂದು ಹಿಂದೆ ಎಸೆದು ತುಳಸಿ ನೀರು ಹಿಡಿದು, (ಬಲ)

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥**

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ..... ನಾರಾಯಣಾಯೇತಿ ಸಮರ್ಪಯಾಮಿ ॥**

**ಅದ್ಯದಿನೇ ಮಮಪಿತುರುದ್ದಿಶ್ಯ ಮಯಾಕೃತ ಧರ್ಮೋದಕಪ್ರದಾನಕರ್ಮಣಾ ಪಿತೃ[ಮಾತೃ]ಪ್ರೇತಾಂತರ್ಗತಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥ ತತ್ಸರ್ವಂ ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಗೋವಿಂದಾಯ ನಮಃ ॥**

ಜ್ಞಾತಿಬಾಂಧವರು ವಪನ ಮಾಡಿಕೊಳ್ಳುವ ಕ್ರಮವಿದ್ದಲ್ಲಿ ವಪನ ಮಾಡಿಕೊಳ್ಳಬೇಕು. ಇಲ್ಲದೇ ಇದ್ದಲ್ಲಿ ಕರ್ತೃಸಹಿತವಾಗಿ ಎಲ್ಲರೂ ಪೂರ್ವಾಭಿಮುಖವಾಗಿ, **ಪ್ರಾಣಸ್ಥ ಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ......ಪ್ರೇತಸ್ಯ ಪ್ರೇತತ್ವ ನಿವೃತ್ತ್ಯರ್ಥಂ ಮರಣದಿನಾದಾರಭ್ಯ ದಶಮೇऽಹನಿ ಜ್ಞಾತಿಬಾಂಧವೈಃ ಸಹ (ಆಮಲಕಾದಿ) ಸ್ನಾನಂ ಕರಿಷ್ಯೇ ॥ (ಕುರುಷ್ವ)** –ಎಂದು (ನೆಲ್ಲಿಪುಡಿ, ಬಿಳಿ ಸಾಸಿವೆಪುಡಿ, ಎಳ್ಳುಪುಡಿಗಳನ್ನು ಹಚ್ಚಿಕೊಂಡು) ಸ್ನಾನ ಮಾಡಿ ಮೈಒರೆಸಿ, ಗೋಪೀಚಂದನ ಧಾರಣೆ ಮಾಡಿ, ಕಂಠವಸ್ತ್ರವನ್ನು ಹಾಗೂ ಉಟ್ಟ ಬಟ್ಟೆಯನ್ನು ಚೆನ್ನಾಗಿ ಒಗೆದು ಧರಿಸಿಕೊಳ್ಳಬೇಕು. (ಕೆಲವರಲ್ಲಿ ಹೊಸ ಬಟ್ಟೆಯನ್ನು ಧರಿಸುವ ಕ್ರಮವಿದೆ. ಕರ್ಮಾಂಗ ಮುಗಿದ ಬಳಿಕ ರಜಕನಲ್ಲಿ ಮಡಿ ಮಾಡಿ ಮರುದಿನ ಬೆಳಗ್ಗೆ ಬೇಗ ತಂದುಕೊಡುವಂತೆ ಹೇಳಬೇಕು.)

ಬಂಧುಬಾಂಧವರು ಮೃತನ (ಸಂಬಂಧವಾಚಕ) **'ಅಸ್ಮತ್ ಪಿತೃವ್ಯಸ್ಯ ಗೋತ್ರಸ್ಯ ಶರ್ಮಣಃ ಪ್ರೇತಸ್ಯ ದುರ್ಗತಿನಿವಾರಣಪೂರ್ವಕ ಸುಗತಿಪ್ರಾಪ್ತ್ಯರ್ಥೇ ಯಥಾ ಶಕ್ತಿಗಾಯತ್ರೀಮಂತ್ರಜಪಂ ಕರಿಷ್ಯೇ ॥'** –ಎಂದು ಸಂಕಲ್ಪಿಸಿ, ಯಥಾಶಕ್ತಿ ಗಾಯತ್ರೀ ಮಂತ್ರಜಪ ಮಾಡಿ ಅದರ ಪುಣ್ಯಾಂಶವನ್ನು ಮೃತವ್ಯಕ್ತಿಗೆ ದೊರಕುವಂತೆ ಪ್ರಾಣಸ್ಥ ಪ್ರಾಜ್ಞರೂಪಿಪರಮಾತ್ಮನಲ್ಲಿ ಪ್ರಾರ್ಥಿಸಬೇಕು.

ಕ್ರಿಯಾಕರ್ತೃಗಳು ಜಲಾಶಯದ ಬಳಿ ಪೂರ್ವಾಭಿಮುಖವಾಗಿ ಕುಳಿತು,

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ.... ಪ್ರೇತಸ್ಯ ಪ್ರೇತತ್ವನಿವೃತ್ತ್ಯರ್ಥಂ ಮರಣದಿನಾದಾರಭ್ಯ ದಶಮೇಽಹನಿ ಸರ್ವೇಷಾಂ ಜ್ಞಾತಿಬಾಂಧವೈಃ ಮಮ ಚ ಆಶೌಚನಿವೃತ್ತ್ಯರ್ಥಂ ಕರ್ಮಾಧಿಕಾರಯೋಗ್ಯತಾ ಸಿದ್ಧ್ಯರ್ಥಂ ವರುಣಪೂಜಾಂ ಕರಿಷ್ಯೇ ॥ (ಕುರುಷ್ವ) ॥** –ಎಂದು ಗಂಗೆಯನ್ನೂ ವರುಣನನ್ನೂ ಪೂಜಿಸಿ (ಕೆಲವರಲ್ಲಿ ವರುಣಪೂಜೆಯನ್ನು ಪ್ರತ್ಯೇಕವಾಗಿ ಕಲಶಪೂರಣೆ ಮಾಡಿ ಪೂಜಿಸಿ ಅನಂತರ ಕರ್ತೃ ಮಾತ್ರ ಕಡಲೆ ತಿನ್ನುವ ಕ್ರಮವಿದೆ) ಕರಶುದ್ಧಿಗಾಗಿ ಬಂಗಾರ, ಎತ್ತು, ದನವನ್ನು ಮುಟ್ಟಿ, ತಮ್ಮತಮ್ಮ ಜಲಪಾತ್ರೆಯಲ್ಲಿ ನೀರನ್ನು ಹಿಡಿದು ಕನ್ಯಾಸುವಾಸಿನಿಯರಿಂದ ಕಲಶಕನ್ನಡಿ ಹಿಡಿಸಿ ಬಂಧುಬಳಗದವರಿಂದ ಅರಳು ಮತ್ತು ಗರಿಕೆ ಚೆಲ್ಲಿಸುತ್ತಾ ಅವರನ್ನೆಲ್ಲ ಮುಂದೆ ಮಾಡಿ ಕನಿಷ್ಠಪೂರ್ವಕರಾಗಿ '**ನಿವರ್ತಧ್ವಂ...**' (ಪುಟಸಂಖ್ಯೆ 100) ಸೂಕ್ತ ಪಠಿಸುತ್ತಾ ಮನೆಗೆ ಬಂದು ತುಲಸೀಕಟ್ಟೆಯ ಎದುರು ಕ್ರಿಯಾ ಕರ್ತೃಗಳನ್ನು ಪೂರ್ವಮುಖವಾಗಿ ಕುಳ್ಳಿರಿಸಿ ಕಲಶಪ್ರೋಕ್ಷಣೆ ಮಾಡಬೇಕು. ಕಲಶ ತೀರ್ಥಪ್ರಾಶನ ಮಾಡದೆ, ಕಲಶವನ್ನು ಗರಿಕೆ ಹಾಗೂ ಅರಳನ್ನು ಹಿಡಿದು, ಕ್ರಿಯಾಕರ್ತೃಗಳು ಮನೆಯ ಒಳಗೆ ಹೋಗಿ ಮೃತಸ್ಥಾನದಲ್ಲಿ,

**ದೂರ್ವಾವತ್ಕುಲವೃದ್ಧಿಸ್ತೇ ಲಾಜಾ ಇವ ವಿಕಸಿತಾ ।**
**ಏವಮುಕ್ತ್ವಾ ತ್ಯಜೇದ್ಗೇಹೇ ಲಾಜಾನ್ ದೂರ್ವಾಸಮನ್ವಿತಾನ್ ॥**

ಮಂತ್ರದಿಂದ ಅರಳು ಹಾಗೂ ಗರಿಕೆಯನ್ನು ಚೆಲ್ಲಬೇಕು. ಅನಂತರ ಕಲಶದ ನೀರಿನಿಂದ ಮೃತಸ್ಥಾನದಲ್ಲಿ ಮುಂದಿನ ಮಂತ್ರದೊಂದಿಗೆ ಪ್ರೋಕ್ಷಣೆ ಮಾಡಬೇಕು.

ಜನಿಷ್ಠಾ ಉಗ್ರಾ ಇತಿ ಗೌರಿವೀತಿಃ ಶಾಕ್ತ್ಯ ಇಂದ್ರಸ್ತ್ರಿಷ್ಟುಪ್ । ಮೃತಸ್ಥಾನೇ ಮಾರ್ಜನಾರ್ಥೇ ವಿನಿಯೋಗಃ ॥

**ಓಂ ಜನಿಷ್ಠಾ ಉಗ್ರಃ ಸಹಸೇ ತುರಾಯ ಮಂದ್ರ ಓಜಿಷ್ಠೋ ಬಹುಲಾಭಿಮಾನಃ। ಅವರ್ಧನ್ನಿಂದ್ರಂ ಮರುತಶ್ಚಿದತ್ರ ಮಾತಾ ಯದ್ವೀರಂ ದಧನದ್ಧನಿಷ್ಠಾ ॥ ೧ ॥ ದ್ರುಹೋ ನಿಷತ್ತಾ ಪೃಶನೀಚಿದೇವೈಃ ಪುರೂ ಶಂಸೇನ ವಾವೃಧುಷ್ಟ ಇಂದ್ರಮ್ । ಅಭೀವೃತೇವ ತಾ ಮಹಾಪದೇನ ಧ್ವಾಂತಾತ್ಪ್ರಪಿತ್ವಾದುದರಂತ ಗರ್ಭಾಃ ॥ ೨ ॥**

ಅನಂತರ,

**ವೇದಿಕಾರಾಧನಸಂಪೂರ್ಣಫಲಪ್ರಾಪ್ತ್ಯರ್ಥಮ್ ಆಮಾನ್ನದಾನಂ ತಿಲಾದ್ಯಷ್ಟ ದಾನಂ ಚ ಸದ್ಯಃ (ಸೂತಕಾಂತೇ) ಕರಿಷ್ಯೇ ॥ (ಕುರುಷ್ವ) ॥** ನಿತ್ಯವಿಧಿಶ್ರಾದ್ಧದ

ಅಂಗವಾಗಿ ಆಮಾನ್ನದಾನ ಹಾಗೂ ತಿಲಾದ್ಯಷ್ಟದಾನವನ್ನು ಕೊಡಬೇಕು. ಇಲ್ಲವೇ ಮರುದಿನ ಅಥವಾ ಹನ್ನೆರಡನೆಯ ದಿನ ಕೊಡಬೇಕು.

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ..... ನಾರಾಯಣಾಯೇತಿ ಸಮರ್ಪಯಾಮಿ ॥**

**ಅದ್ಯದಿನೇ ಮಮಪಿತುರುದ್ದಿಶ್ಯ ಮಯಾಕೃತ ಧರ್ಮೋದಕಾಂತೇ ಶರೀರ ಶುದ್ಧ್ಯರ್ಥೇ ಗೃಹಶುದ್ಧ್ಯರ್ಥೇ ಕೃತಸ್ನಾನಾದಿಸತ್ಕರ್ಮಣಾ ಪಿತೃ [ಮಾತೃ] ಪ್ರೇತಾಂತ–ರ್ಗತ ಪ್ರಾಣಸ್ಥ ಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥ ತತ್ಸರ್ವಂ ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಗೋವಿಂದಾಯ ನಮಃ ॥** ಅನಂತರ ಆಚಮನ ಮಾಡಿ, ಪವಿತ್ರ ಬಿಚ್ಚಿ ಹಾಕಿ, ಜಲಪಾತ್ರದ ನೀರನ್ನು ಚೆಲ್ಲಿ ತಮ್ಮತಮ್ಮ ಜಲಪಾತ್ರೆ, ಕರ್ಮವಸ್ತ್ರ ಇತ್ಯಾದಿಗಳನ್ನು ಜೋಪಾನ ಮಾಡಿಟ್ಟುಕೊಳ್ಳಬೇಕು.

## ಕಾಕಬಲಿಃ

ಕೆಲವರಲ್ಲಿ ಹತ್ತನೇ ದಿನದ ವೇದಿಕಾರಾಧನೆಯನ್ನು ಈ ರೀತಿಯಿಂದಲೂ ಮಾಡುವ ಕ್ರಮವಿದೆ, ವೇದಿಕೆಯಲ್ಲಿ ಮೂರು ಶಿಲೆ ಪ್ರತಿಷ್ಠಾಪಿಸಿದ ಅನಂತರ,

(ಬಲ) **ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ .....ಗೋತ್ರಸ್ಯ .....ಶರ್ಮಣಃ ಪ್ರೇತತ್ವ ವಿಮೋಕ್ಷಾರ್ಥಮ್ ಅದ್ಯ ದಶಮೇಽಹನಿ ಕಾಕಬಲಿಂ ಕರಿಷ್ಯೇ ॥ (ಕುರುಷ್ವ) ॥**

ವೇದಿಕಾಮಧ್ಯದಲ್ಲಿ ಹಾಗೂ ವೇದಿಕೆಯ ನಾಲ್ಕು ದಿಕ್ಕುಗಳಲ್ಲಿ ದಕ್ಷಿಣಾಗ್ರವಾಗಿ ದರ್ಭೆ ಇಟ್ಟು ದರ್ಭೆಯ ಮೇಲೆ ನೀರು ತುಂಬಿದ ಐದು ಚಿಕ್ಕ ಮಡಕೆ ಇಟ್ಟು (ಕೆಲವರಲ್ಲಿ ಪ್ರೇತಸ್ಥಾನದಲ್ಲಿ ಮಾತ್ರ ಮಣ್ಣಿನ ಕಲಶ ಇಟ್ಟು ಪಿಂಡಪ್ರದಾನ, ಉಳಿದವರಿಗೆ ನೆಲದಲ್ಲಿ ದರ್ಭೆ ಇಟ್ಟು ಪಿಂಡಪ್ರದಾನ.) ಅದರ ಮೇಲೆ ಪೂರ್ಣ ಪಾತ್ರೆ ಇಟ್ಟು ಒಂದು ಪಿಂಡ ಹಿಡಿದು,

**ಕಾಕೋಽಸಿ ಯಮದೂತೋಽಸಿ ಗೃಹಾಣಬಲಿಮುತ್ತಮಮ್ ।**
**ಯಮದ್ವಾರೇ ಗತೇ ಪ್ರೇತೇ ತಮಾಪ್ಯಾಯಿತುಮರ್ಹಸಿ ॥**

**'ಅಸ್ಮತ್ಪಿತುಃ ........ಗೋತ್ರಾಯ ........ಶರ್ಮಣೇ ಪ್ರೇತಾಯ ಕ್ಷುತ್ಪಿಪಾಸಾನಿವೃತ್ತ್ಯರ್ಥಂ ಏಷಪಿಂಡಃ ಸೋದಕುಂಭ ಉಪತಿಷ್ಠತು ॥'** –ಎಂದು ಮಧ್ಯಕುಂಭದ ಮೇಲಿಡಬೇಕು. ಎರಡನೆಯ ಪಿಂಡ ಹಿಡಿದು, ಪೂರ್ವ ಕುಂಭದ ಮೇಲೆ **'ಪ್ರೇತಸಖಿಭ್ಯ ಏಷಃ ಪಿಂಡಃ ಸೋದಕುಂಭ ಉಪತಿಷ್ಠತು ॥'** ಮೂರನೆಯ ಪಿಂಡ ಹಿಡಿದು ದಕ್ಷಿಣದಲ್ಲಿ **'ವೈವಸ್ವತಾಯ ಯಮಾಯ ಏಷಃ ಪಿಂಡಃ ಸೋದಕುಂಭ ಉಪತಿಷ್ಠತು ॥'** ನಾಲ್ಕನೆಯ ಪಿಂಡ ಹಿಡಿದು ಪಶ್ಚಿಮದಲ್ಲಿ **'ವಾಯಸೇಭ್ಯ ಏಷಃ ಪಿಂಡಃ ಸೋದಕುಂಭ ಉಪತಿಷ್ಠತು ॥'** ಐದನೆಯ ಪಿಂಡ ಹಿಡಿದು ಉತ್ತರದಲ್ಲಿ **'ಪ್ರೇತಾಧಿಪತಿ ರುದ್ರಾಯ ಏಷಃ ಪಿಂಡಃ ಸೋದಕುಂಭ ಉಪತಿಷ್ಠತು ॥'** –ಎಂದು ಕೊಟ್ಟು ಐದು ಪಿಂಡಗಳ ಮೇಲೆ ದಕ್ಷಿಣಾಗ್ರವಾಗಿ

ಒಂದೊಂದು ದರ್ಭೆ ಇಟ್ಟು ಐದು ಪಿಂಡದ ಮೇಲೆ ಕ್ರಮವಾಗಿ ತಿಲೋದಕ ಹಿಡಿದು, **'ಪ್ರೇತಾಯ ಪಿಂಡಸ್ಯೋಪರಿ ತಿಲೋದಕಮುಪತಿಷ್ಠತು ॥ ಪ್ರೇತಸಖಿಭ್ಯಃ ಪಿಂಡಸ್ಯೋಪರಿ ತಿಲೋದಕಮುಪತಿಷ್ಠತು ॥ ವೈವಸ್ವತಾಯ ಯಮಾಯ ಪಿಂಡಸ್ಯೋಪರಿ ತಿಲೋದಕ-ಮುಪತಿಷ್ಠತು ॥ ವಾಯಸೇಭ್ಯಃ ಪಿಂಡಸ್ಯೋಪರಿ ತಿಲೋದಕಮುಪತಿಷ್ಠತು ॥ ಪ್ರೇತಾಧಿ-ಪತಿ ರುದ್ರಾಯ ಪಿಂಡಸ್ಯೋಪರಿ ತಿಲೋದಕಮುಪತಿಷ್ಠತು ॥'** –ಎಂದು ತಿಲೋದಕ ಕೊಟ್ಟು **'ಪ್ರೇತಾಯ ಪಾದುಕಾದ್ವಯಂ ಛತ್ರಂ ಪತಾಕಾ ಪೋಲಿಕಾ ಉಪತಿಷ್ಠತು ॥'** –ಎಂದು, ಹೀಗೆಯೇ ಉಳಿದ ನಾಲ್ಕು ಸ್ಥಾನಗಳಲ್ಲಿಯೂ ಇಟ್ಟು, ವಾಸೋದಕಾದಿಗಳನ್ನು ಐದು ಸ್ಥಾನಗಳಲ್ಲೂ ಕೊಟ್ಟು **'ಅನಾದಿ ನಿಧನೋ.....'** ಮಂತ್ರಗಳೆರಡರಿಂದ ಅಕ್ಕಿ ಹಾಕಿ ಕೈಮುಗಿದು ಕೃಷ್ಣಾರ್ಪಣ ಬಿಟ್ಟು, ಪಶ್ಚಿಮದ ಪಿಂಡವನ್ನು ವಾಯಸಕ್ಕೆ ಇಡುವುದು. ಅದು ತಿನ್ನುವ ವರೆಗೆ ಅಲ್ಲೇ ಇದ್ದು ಅನಂತರ ಧರ್ಮೋದಕ ಕೊಡುವುದು.

(ಕೆಲವರಲ್ಲಿ (ಎಡ) ಹವಿಸ್ಸನ್ನು ಮಾಡುತ್ತಿದ್ದ ಒಲೆಯ ಬಳಿಗೆ ಹೋಗಿ ಒಲೆಗೆ ಅಪ್ರದಕ್ಷಿಣೆಯಾಗಿ ನೀರನ್ನು ಹಾಕಿ ದಕ್ಷಿಣಕ್ಕೆ ಮುಖಮಾಡಿ (ಒಲೆ ತನ್ನ ಹಿಂದೆ ಇರುವಂತೆ ನಿಂತು **'ಅಸ್ಮತ್ ಪಿತುಃ ............ ಪ್ರೇತಸ್ಯ ಚುಲ್ಲಿಮುದ್ವಾಸನಮುಪತಿಷ್ಠತು'** –ಎಂದು ಬಲಗಾಲನ್ನು ಹಿಂದೆ ಮಾಡಿ ಒದ್ದು ಒಲೆಯನ್ನು ವಿಸರ್ಜಿಸಬೇಕು.)

* * *



ಚತುರ್ಥ ಗುಚ್ಛ

# ಏಕಾದಶದಿನಕೃತ್ಯಮ್

## ಹನ್ನೊಂದನೇ ದಿನದ ಸಾಹಿತ್ಯ :

ನಿತ್ಯವಿಧಿ ಸಾಹಿತ್ಯ (2 ಪ್ರತಿ) (ಪುಟಸಂಖ್ಯೆ 107)

ಪುಣ್ಯಾಹ (2 ಬಾರಿ) ಪಂಚಗವ್ಯ (3 ಬಾರಿ) ಹೋಮ (2 ಪ್ರತಿ ) ಬತ್ತಿ 4 ಕಟ್ಟು, ಬೆಂಕಿಪೆಟ್ಟಿಗೆ 1, ತಾಮ್ರಕಲಶ 2, ದರ್ಭೆ 2 ಕಟ್ಟು, ಬೈರಾಸು 5, ದಾನಕ್ಕೆ ತಟ್ಟೆಗಳು 4, ಸುವರ್ಣ 1, ತಾಮ್ರದ ಚೆಂಬು 3, ಎಳ್ಳು 1/2 ಕೆಜಿ, ಧೋತಿ 2, ಅಶ್ವತ್ಥ(ಪಾಲಾಶ)ಸಮಿಧೆ 50, ಜೇಡಿಪುಡಿ 1/4 ಕೆಜಿ, ಕರ್ಪೂರ 20, ಬಾಳೆಲೆದೊಣ್ಣೆಗಳು 25, ಗಂಟುಹಾಕಿದ ಯಜ್ಞೋಪವೀತ 25, ಅಕ್ಕಿ 4 ಕೆಜಿ, ತೆಂಗಿನಕಾಯಿ 12, ತುಪ್ಪ 1/2 ಕೆಜಿ, ಎಳ್ಳೆಣ್ಣೆ 1/2 ಲೀಟರ್, ವೀಳ್ಯದೆಲೆ 40, ಅಡಕೆ 12, ಬಾಳೇಹಣ್ಣು 20, ಇಡಿ ಬೂದುಕುಂಬಳ 1/4 ಕೆಜಿ, ಬಾಳೇಕಾಯಿ 1, ರವೆ 100 ಗ್ರಾಂ, ಬೆಲ್ಲ 100 ಗ್ರಾಂ, ಬತ್ತ 1/4 ಕೆಜಿ, ಹಲಸಿನ ಮಾವಿನ ತುದಿಗಳು 8+8, ನಾಣ್ಯ 60, ಬಾಳೆಎಲೆಗಳು 12, ಹೂ 2 ಮೊಳ, ತುಲಸಿ 50 ತುದಿ, ಗೋಮಯ ಮೃತ್ತಿಕೆ ಹಾಗೂ ಗಂಧ 1 ನೆಲ್ಲಿಕಾಯಿಯಷ್ಟು, ಹಾಲು 2 ಲೋಟ, ಮೊಸರು 1 ಲೋಟ, ಗೋಮೂತ್ರ 1 ಲೋಟ, ಕಟ್ಟಿಗೆ 5 ಕೆಜಿ, ತೆಂಗಿನಸಿಪ್ಪೆ 6 ತೆಂಗಿನದ್ದು, ಹಂಚು 2, ಇಟ್ಟಿಗೆ 6, ಮರಳು 2 ಕೆಜಿ, ಜಲಪಾತ್ರೆಗಳು 2, ತಾಮ್ರ ಹರಿವಾಣ ಅಗಲ ಪಾತ್ರೆಗಳು ದೊಣ್ಣೆ ತಟ್ಟೆಗಳು, ಕಾಲುದೀಪ 1.

**ದಾನದ್ರವ್ಯಗಳು** : ತಾಮ್ರದ ತಂಬಿಗೆ, ಎಳ್ಳು 1/4 ಕೆ.ಜಿ., ವೇಷ್ಟಿ 1, ತೆಂಗಿನಕಾಯಿ 1, ಸುವರ್ಣ 1.

**ಆಮಾನ್ನದ್ರವ್ಯಗಳು (೬ ಪ್ರತಿ) :**

ಉತ್ತಮಕಲ್ಪ ಆಮಾನ್ನದಾನಸಾಹಿತ್ಯ (ಒಬ್ಬರಿಗೆ)

ಅಕ್ಕಿ 1/2 ಕೆಜಿ, ತೆಂಗಿನಕಾಯಿ 1, ಹೆಸರು 1/2 ಕೆಜಿ., ಉದ್ದಿನ ಬೇಳೆ 1/4 ಕೆಜಿ., ಕಲ್ಲುಪ್ಪು 1/4 ಕೆಜಿ., ಹುಳಿ 1/4 ಕೆಜಿ., ಕಾಳುಮೆಣಸು 100 ಗ್ರಾಂ, ಜೀರಿಗೆ 100 ಗ್ರಾಂ, ತೆಂಗಿನ ಎಣ್ಣೆ 1/2 ಲೀ., ಬೆಲ್ಲ 1/2 ಕೆಜಿ., ರವೆ 1/2 ಕೆಜಿ., ಸಕ್ಕರೆ 1/2 ಕೆಜಿ., ಬಾಳೆಕಾಯಿ 1, ಸೌತೆಕಾಯಿ 1, ಸುವರ್ಣಗೆಡ್ಡೆ 1/4 ಕೆಜಿ., ತಾಮ್ರದ ಚೆಂಬು 1, ಬೈರಾಸು (ವೇಷ್ಟಿ) 1, ವೀಳ್ಯದೆಲೆ 4, ಅಡಕೆತುಂಡು 4, ಗೋಪಿ 1, ಯಜ್ಞೋಪವೀತ 2.

ಮಧ್ಯಮಕಲ್ಪ ಆಮಾನ್ನದಾನ ಸಾಹಿತ್ಯ (ಒಬ್ಬರಿಗೆ )

ತಾಮ್ರದ ಚೆಂಬು 1, ಬೈರಾಸು (ವೇಷ್ಟಿ) 1, ವೀಳ್ಯದೆಲೆ 4, ಅಡಕೆ 4, ಗೋಪಿ, ಯಜ್ಞೋಪವೀತ 2, ಬಾಳೇಕಾಯಿ 1, ಅಕ್ಕಿ 1/2 ಕೆಜಿ., ತೆಂಗಿನಕಾಯಿ 1, (ಮೊದಲ

ದಿನದಿಂದ ಹತ್ತನೆಯ ದಿನದವರೆಗಿನ ಆಮಾನ್ನದಾನಸಾಹಿತ್ಯಗಳು ಹಾಗೂ ದಾನಗಳು ಪುಟಸಂಖ್ಯೆ 226 ನೋಡಿ.)

**[ನಾರಾಯಣಬಲಿಹೋಮ ಸಾಹಿತ್ಯ**

ದರ್ಭೆ 1 ಕಟ್ಟು, ಕರ್ಪೂರ 10, ಕೆಂಪು, ಕಪ್ಪು, ನೀಲಿ ಹಾಗೂ ಬಿಳಿ ರವಕೆ ಕಣ ಪ್ರತಿ 1ರ ಹಾಗೆ, ತಾಮ್ರಕಲಶ 5, ಅಶ್ವತ್ಥ (ಪಾಲಾಶ) ಸಮಿಧೆ 30, ಜೇಡಿಪುಡಿ 100 ಗ್ರಾಂ, ಅಕ್ಕಿ 1 ಕೆಜಿ., ತೆಂಗಿನಕಾಯಿ 5, ತುಪ್ಪ 100 ಗ್ರಾಂ, ವೀಳ್ಯೆದೆಲೆ 20, ಅಡಕೆ 20, ಬಾಳೇಹಣ್ಣು 7, ಹಲಸಿನ-ಮಾವಿನ ತುದಿಗಳು 5+5, ನಾಣ್ಯಗಳು 20, ಬಾಳೆಎಲೆಗಳು 6, ಕಟ್ಟಿಗೆ 2 ಕೆಜಿ., ತೆಂಗಿನಸಿಪ್ಪೆ 3 ತೆಂಗಿನದ್ದು, ಹಂಚು 2, ಮರಳು 1 ಕೆಜಿ., ಆಮಾನ್ನದಾನ ಸಾಹಿತ್ಯ 1 ಪ್ರತಿ.

**ಧನಿಷ್ಠಾಪಂಚಕಾದಿಹೋಮಸಾಹಿತ್ಯ**

ತಾಮ್ರಕಲಶ 5 (3), ದರ್ಭೆ 1 ಕಟ್ಟು, ಬೈರಾಸು 7 (5), ಅಶ್ವತ್ಥ (ಪಾಲಾಶ) ಸಮಿಧೆ 400, ಜೇಡಿಪುಡಿ $^1/_4$ ಕೆಜಿ., ಕರ್ಪೂರ 10, ದಾನತಟ್ಟೆ 3, ಅಕ್ಕಿ 2 ಕೆಜಿ., ತೆಂಗಿನಕಾಯಿ 7(5), ತುಪ್ಪ 1 ಲೀ., ಅರಳು $^1/_4$ ಕೆಜಿ., ಎಳ್ಳು $^1/_2$ ಕೆಜಿ., ವೀಳ್ಯೆದೆಲೆ 25, ಇಡಿಅಡಕೆ 5, ಬಾಳೇಹಣ್ಣು 10, ಹಲಸಿನ-ಮಾವಿನ ತುದಿಗಳು 2+2, ನಾಣ್ಯ 25, ಬಾಳೆಎಲೆ 6, ಕಟ್ಟಿಗೆ 5 ಕೆಜಿ., ತೆಂಗಿನಸಿಪ್ಪೆ 5 ತೆಂಗಿನದ್ದು, ಹಂಚು 2, ಇಟ್ಟಿಗೆ 16, ಮರಳು 4 ಕೆಜಿ., ಸೀಯಾಳ 1, ಕೋಲುದೀಪ 1, ಹಾಲು $^1/_2$ ಲೋಟ, ಹೀಗೆ ಬೇರೆ ಬೇರೆ ದೋಷಗಳ ನಿವಾರಣೆಗೆ ಆಯಾಯ ಪ್ರಯೋಗದ ಕೊನೆಯಲ್ಲಿ ದಾನಗಳನ್ನು ಹೇಳಿದೆ. ಅದನ್ನು ನೋಡಿಕೊಂಡು ಕೊಡತಕ್ಕದ್ದು.]

ಹನ್ನೊಂದನೆಯ ದಿನ ಮನೆ ಶುಚಿಗೊಳಿಸಿ, ಮಡಿವಾಳ ಬಂದು ಬಟ್ಟೆಗಳನ್ನು ಒಗೆದು ಕೊಡಬೇಕು. ಹಿಂದಿನ ದಿನದ ಪ್ರೇತಘಟವನ್ನು ತೆಗೆದಿಟ್ಟಿದ್ದರೆ ಅದನ್ನು ಮತ್ತು ಪಂಚಗವ್ಯದ ಅಕ್ಕಿ ತೆಂಗಿನಕಾಯಿಗಳನ್ನು ಅವನಿಗೆ ಕೊಡುವ ಕ್ರಮವಿದೆ. ಕ್ರಿಯಾಕರ್ತೃಗಳು ಸ್ನಾನ ಮಾಡಿ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡಬೇಕು. ನಿರ್ಮಾಲ್ಯತೀರ್ಥ, ತುಲಸಿಯ ವ್ಯವಸ್ಥೆ ಮಾಡಬೇಕು. ಕರ್ಮಿಗಳು ಮನೆಯ ಬಾವಿಯನ್ನು ಮುಟ್ಟಿದ್ದಲ್ಲಿ ಬೇರೆಯವರ ಮನೆಯಿಂದ ನೀರನ್ನು ತಂದು **'ಪಂಚಗವ್ಯ'** ಮಾಡಬೇಕು. ತುಲಸಿಕಟ್ಟೆಯ ಬಳಿ ಭತ್ತ ಹರಡಿ, ಒಂದು ಕಲಶವನ್ನು ಪ್ರತಿಷ್ಠಾಪಿಸಿ, ಪಂಚಗವ್ಯಮೇಲನ ಮಾಡಬೇಕು. ಕ್ರಿಯಾ ಕರ್ತೃಗಳು ಸ್ನಾನ ಮಾಡಿ, ಮೈಒರೆಸಿ, ಶಿಖಾಬಂಧನ ಮಾಡಿ, ಗೋಪೀಚಂದನ ಮುದ್ರಾಧಾರಣ ಮಾಡಿ, ಕರ್ಮವಸ್ತ್ರ ಧರಿಸಿ, ಆಚಮನ ಮಾಡಿ, ಆಚಾರ್ಯರಿಂದ ನಾಲ್ಕು ಎಳೆಯ ಪವಿತ್ರ ಪಡೆದು, ಧರಿಸಿ ಸಂಕಲ್ಪ ಮಾಡಬೇಕು.

(ಬಲ) **ಗಂಗೇ ಚ ಯಮುನೇ ಚೈವ......... ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ಮೃತಾಹಾತ್ ಏಕಾದಶೇಽಹನಿ ಗೃಹಭಾಂಡ ಭಾಜನಕೂಪಶುದ್ಧ್ಯರ್ಥಂ ಸಪರಿವಾರಸ್ಯ ಮೃತಾಶೌಚನಿವಾರಣದ್ವಾರಾ ಶರೀರ ಶುದ್ಧ್ಯರ್ಥಂ** (ಬಲ) **ಪಂಚಗವ್ಯಪ್ರಾಶನಾರ್ಥಂ ಪಂಚಗವ್ಯಮೇಲನಮಹಮ್ ಆಚಾರ್ಯಮುಖೇನ ಕಾರಯಿಷ್ಯೇ ॥ (ಕುರುಷ್ವ) ॥**

ಎಂದು ಅಕ್ಕಿನೀರು ಬಿಡಬೇಕು. (ಕೆಲವರ ಪ್ರಕಾರ ಬ್ರಹ್ಮಕೂರ್ಚಹೋಮ ಮಾಡಬೇಕು.) ಅಕ್ಕಿ, ನಾಣ್ಯ ಹಿಡಿದು, **'ಪಂಚಗವ್ಯಮೇಲನಾರ್ಥೇ ಆಚಾರ್ಯಂ ತ್ವಾಮಹಂ ವೃಣೇ'** ಎಂದು ಆಚಾರ್ಯರಿಗೆ ವರಣೆ ಕೊಡಬೇಕು. ಆಚಾರ್ಯರು ಪಂಚಗವ್ಯಮೇಲನ ಮಾಡಿ ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿ ಪಂಚವಾಕ್ಯ, ಪುಣ್ಯಾಹಮಂತ್ರವನ್ನು ಹೇಳಿ, ಕೃಷ್ಣಾರ್ಪಣ ಬಿಡಬೇಕು. ಕ್ರಿಯಾಕರ್ತೃಗಳು ಕರ್ಮವಸ್ತ್ರವನ್ನು ಪ್ರೋಕ್ಷಣೆ, ಯಜ್ಞೋಪವೀತ ಧಾರಣೆ ಹಾಗೂ ತೀರ್ಥಪ್ರಾಶನ ಸಮಯದಲ್ಲಿ ಕುತ್ತಿಗೆಯಿಂದ ತೆಗೆದು ತನ್ನ ಎದುರು ತುಂಡು ಬಾಳೆಎಲೆಯ ಮೇಲಿಡಬೇಕು. ಪಂಚಗವ್ಯಪ್ರಾಶನ ಮಾಡಿ, ಕರ್ಮವಸ್ತ್ರವನ್ನು ಧರಿಸಿ ನೂತನ ಉಪವೀತವನ್ನು ಧಾರಣೆ ಮಾಡಬೇಕು. ಅನಂತರ, **'ಗೃಹಶುದ್ಧ್ಯರ್ಥಂ ಸಪ್ತಶುದ್ಧಿಂ ಕರಿಷ್ಯೇ ॥'** ಎಂದು ಸಪ್ತಶುದ್ಧಿಯನ್ನು ಮಾಡಬೇಕು. ಅನಂತರ ಕ್ರಿಯಾಕರ್ತೃಗಳು ಪುನಃ ಸ್ನಾನ ಮಾಡಿ, ಪಂಚಗವ್ಯ, ಪುಣ್ಯಾಹ ಮಾಡಿ, ದುರ್ಮರಣವಾಗಿದ್ದರೆ ಹನ್ನೊಂದನೆಯ ದಿನ ನಾರಾಯಣಬಲಿ ಮಾಡಿ, ಅನಂತರ ವೃಷೋತ್ಸರ್ಗ ಮಾಡಬೇಕು (ಕೆಲವರಲ್ಲಿ ವೃಷೋತ್ಸರ್ಗದ ಅನಂತರ ನಾರಾಯಣಬಲಿ ಮಾಡುತ್ತಾರೆ). ನಾರಾಯಣಬಲಿ ಇದ್ದಲ್ಲಿ ಎರಡು ಪಾವು ಅಕ್ಕಿ ಹಾಕಿ ಹವಿಸ್ಸನ್ನು ಮಾಡಬೇಕು. ಈ ಶ್ರಾದ್ಧವನ್ನು ಹಿರಿಯವನು ಮಾತ್ರ ಮಾಡಿದರೆ ಸಾಕು. ಉಳಿದವರು ಸಹಾಯಕರಾಗಿರಬೇಕು. ನಾರಾಯಣಬಲಿ ಇಲ್ಲದೇ ಇದ್ದರೆ ಏಕೋದ್ದಿಷ್ಟಕ್ಕೆ ಎರಡು ಪಾವು ಅಕ್ಕಿಯನ್ನು ಹಾಕಿ ಹವಿಸ್ಸನ್ನು ಮಾಡಬೇಕು. ತಮ್ಮಂದಿರು ಇದ್ದಲ್ಲಿ ಒಬ್ಬೊಬ್ಬರಿಗೆ ಅರ್ಧರ್ಧ ಪಾವಿನಂತೆ ಹೆಚ್ಚು ಅಕ್ಕಿ ಹಾಕಿ ಹವಿಸ್ಸನ್ನು ಮಾಡಬೇಕು. ನಾರಾಯಣಬಲಿ ಹಾಗೂ ಏಕೋದ್ದಿಷ್ಟ ಹೋಮವನ್ನು ಪ್ರಧಾನಕರ್ತೃ ಮಾತ್ರ ಮಾಡಬೇಕು. ಏಕೋದ್ದಿಷ್ಟ ಪಿಂಡಪ್ರದಾನವನ್ನುಎಲ್ಲಾ ಕರ್ತೃಗಳು ಮಾಡಬೇಕು. ನಾರಾಯಣಬಲಿ, ಪಂಚಾಕಾದಿದೋಷವಿದ್ದಲ್ಲಿ ಧನಿಷ್ಠಾಪಂಚಕಾದಿ ಹೋಮದ, ಹಾಗೂ ವೃಷೋತ್ಸರ್ಗ ಹೋಮದ ಸಂಕಲ್ಪ ಮಾಡಬೇಕು.

## ಸಂಕಲ್ಪಃ

(ಬಲ) **ಅದ್ಯ ಪೂರ್ವೋಚ್ಚರಿತ ಏವಂಗುಣ..... ಪಿತೃಪ್ರೇತಾಂತರ್ಗತ ಪ್ರಾಣಸ್ಥ ಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ........ಗೋತ್ರಸ್ಯ ........ಶರ್ಮಣ ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಂ ಮೃತಾಹಾದ್ದೇಕಾದಶೇಽಹನಿ** (ಬಲ) **(ನಾರಾಯಣಬಲಿ ಶ್ರಾದ್ಧಪೂರ್ವಕ / ಧನಿಷ್ಠಾ ಪಂಚಕಾದಿ ಶಾಂತಿಪೂರ್ವಕ) ವೃಷೋತ್ಸರ್ಗಹೋಮಾಖ್ಯಂ ಕರ್ಮ ಕರ್ತುಂ ಶುದ್ಧ್ಯರ್ಥಂ ಪುಷ್ಟ್ಯರ್ಥಂ ತುಷ್ಟ್ಯರ್ಥಮ್ ಆಚಾರ್ಯಮುಖೇನ ಪುಣ್ಯಾಹ ವಾಚನಾಖ್ಯಂ ಕರಿಷ್ಯೇ ॥ (ಕುರುಷ್ವ)** –ಎಂದು ಸಂಕಲ್ಪಿಸಿ ಪುಣ್ಯಾಹವನ್ನು ಮಾಡಿಸಿ ತೀರ್ಥಪ್ರಾಶನ ಮಾಡಬೇಕು. ಆಚಾರ್ಯರನ್ನು ಸ್ವಾಗತಿಸಿ ಹೋಮಕ್ಕೆ ಅನುಕ್ರಮಣಿಕೆಗೆ, ಕಲಶಕ್ಕೆ ಹಾಗೂ ರುದ್ರಪಾರಾಯಣಕ್ಕೆ ವರಣೆ ಕೊಡಬೇಕು.

# ಪ್ರಾಯಶ್ಚಿತ್ತನಾರಾಯಣಬಲಿಃ




(ಬಲ) **ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ (ಸಂಬಂಧವಾಚಕ ಶಬ್ದ) .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ದುರ್ಗತಿ ನಿವಾರಣಪೂರ್ವಕ ಸದ್ಗತಿಪ್ರಾಪ್ತ್ಯರ್ಥಂ** (ಬಲ) **ವಿಷ್ಣ್ವಾದಿದೇವತಾಪ್ರೀತ್ಯರ್ಥಂ ಮೃತಾಹಾದ್ ಏಕಾದಶೇಽಹನಿ ಪ್ರಾಯಶ್ಚಿತ್ತ ನಾರಾಯಣಬಲಿಶ್ರಾದ್ಧಾಖ್ಯಂ ಕರ್ಮ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥** ಎಂದು ಕರ್ಮಿಗಳು ಎಳ್ಳು, ಚಿಲ್ಲರೆ, ದರ್ಭೆ, ತುಲಸಿ ಹಿಡಿದು, ನಿಂತಲ್ಲೇ ಮೂರು ಪ್ರದಕ್ಷಿಣೆ ಬಂದು,

**ವಿಪ್ರೌಘದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।**
**ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಮ್ ॥**

ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ಮಂಡಲದಲ್ಲಿಟ್ಟು (ಎಡ) **'ಅಸ್ಮತ್ಪಿತುರುದ್ದಿಶ್ಯ ಪ್ರಾಯಶ್ಚಿತ್ತನಾರಾಯಣಬಲಿಶ್ರಾದ್ಧಕರ್ತುಂ ಮಮ ಅಧಿಕಾರಸಂಪದ-ಸ್ತ್ವಿತಿ ಭವಂತೋ ಬ್ರುವಂತು ॥' (ಅಧಿಕಾರಸಂಪದಸ್ತು) ॥**

(ಬಲ) **ಜಲಪಾತ್ರಸ್ಥಾಪನಂ ಕರಿಷ್ಯೇ ॥**

ತನ್ನ ಎಡಭಾಗದಲ್ಲಿ ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ ಅದರ ಮೇಲೆ ಒಂದು ದರ್ಭೆಯನ್ನು ಇಟ್ಟು ಅದರ ಮೇಲೆ ಜಲಪಾತ್ರೆ ಇಟ್ಟು, ನಾರಾಯಣಸ್ಮರಣೆಯೊಂದಿಗೆ ಜಲಪಾತ್ರಕ್ಕೆ ನೀರು ಹಾಕಿ,

**ಗಂಗಾ ಗೋದಾವರೀ ಕೃಷ್ಣಾ ಪ್ರಯಾಗಾ ದ್ವಾರಕಾ ತಥಾ ।**
**ಆವಾಹ್ಯ ಪಂಚಗಂಗಾಶ್ಚ ಸರ್ವಪಾಪಹರಾ ಶುಭಾಃ ॥**

ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು, ಎಳ್ಳು ಸಹಿತ ಗಂಧ, ಪುಷ್ಪ, ಹಿರಣ್ಯ, ಗರಿಕೆ, ಹಾಕಿ ಹತ್ತು ಬಾರಿ ಅಷ್ಟಾಕ್ಷರದಿಂದ ಜಪಿಸಿ,

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥**

ಜಲಕೂರ್ಚದಿಂದ ನೀರು ಹಿಡಿದು, ಸುತ್ತ ಪ್ರೋಕ್ಷಣೆ ಮಾಡಬೇಕು.

ಈಶಾನ್ಯದಿಕ್ಕಿನಲ್ಲಿ ರಂಗೋಲಿಯಿಂದ ಹೋಮಕ್ಕೆ ಸ್ಥಂಡಿಲ ಬರೆದು ವರದನಾಮ ಅಗ್ನಿಯನ್ನು ಪ್ರತಿಷ್ಠಾಪಿಸಿ, ಅನ್ವಾಧಾನ ಮಾಡಬೇಕು.

## ಅನ್ವಾಧಾನಮ್

**ಅಸ್ಮಿನ್ ಅನ್ವಾಹಿತೇಽಗ್ನೌ ... ಪ್ರಾಣಸ್ಥವಿಷ್ಣುಪ್ರೀತ್ಯರ್ಥಮ್ ಆಶ್ರಾವಯ ಇತಿ ಪಂಚಮಂತ್ರೈಃ ಏಕೈಕವಾರಮ್ ಆಜ್ಯದ್ರವ್ಯೇಣ ಪುರುಷಸೂಕ್ತೇನ ಪ್ರತ್ಯೃಚಮ್ ಏಕೈಕವಾರಮ್ ಆಜ್ಯದ್ರವ್ಯೇಣ ಸದ್ಯೋ ಯಕ್ಷ್ಯೇ ॥**

ಪ್ರಧಾನಾಹುತಿಸಮಯದಲ್ಲಿ ವ್ಯಾಹೃತಿಹೋಮ ಮಾಡಿ,

**ಓಮ್ ಆಶ್ರಾವಯ ಸ್ವಾಹಾ । ಯಜ್ಞಾಯ ಇದಂ ನ ಮಮ ॥**
**ಓಮ್ ಅಸ್ತು ಶ್ರೌಷಟ್ ಸ್ವಾಹಾ । ಯಜ್ಞಪುರುಷಾಯ ಇದಂ ನ ಮಮ ॥**
**ಓಂ ಯಜ ಸ್ವಾಹಾ । ಯಜ್ಞೇಶ್ವರಾಯ ಇದಂ ನ ಮಮ ॥**
**ಓಂ ಯೇ ಯಜಾಮಹೇ ಸ್ವಾಹಾ । ಯಜ್ಞಭೋಕ್ತ್ರೇದಂ ನ ಮಮ ॥**
**ಓಂ ವೌಷಟ್ ಸ್ವಾಹಾ । ಯಜ್ಞಭಾವನಾಯ ಇದಂ ನ ಮಮ ॥**

ಪುನಃ ವ್ಯಾಹೃತಿಹೋಮ ಮಾಡಿ, ಪುರುಷಸೂಕ್ತದಿಂದ ಹದಿನಾರು ಆಜ್ಯಾಹುತಿ ನೀಡಿ, ಸ್ವಿಷ್ಟಕೃದಾದಿ ಆಹುತಿ ನೀಡಿ, ಹೋಮದ ಕೃಷ್ಣಾರ್ಪಣ ಬಿಡಬೇಕು.

ಅನಂತರ ಪಶ್ಚಿಮ, ಪೂರ್ವ, ಉತ್ತರ, ದಕ್ಷಿಣ ಈ ನಾಲ್ಕು ದಿಕ್ಕುಗಳಲ್ಲಿ ಹಾಗೂ ಮಧ್ಯದಲ್ಲಿ –ಹೀಗೆ ಐದು ಕಲಶಗಳನ್ನು ಪ್ರತಿಷ್ಠಾಪಿಸಿ, ನಾಲ್ಕು ದಿಕ್ಕುಗಳ ಕಲಶದಲ್ಲಿ ನಾಲ್ಕು ಎಳೆಯ ಕೂರ್ಚ ಮತ್ತು ಮಧ್ಯ ಕಲಶದಲ್ಲಿ ಒಂದು ಎಳೆಯ ಕೂರ್ಚ ಇಟ್ಟು, ಮಧ್ಯಕಲಶವನ್ನು ಹೊರತುಪಡಿಸಿ ಉಳಿದ ನಾಲ್ಕು ದಿಕ್ಕುಗಳ ಕಲಶಗಳಲ್ಲಿ ಕ್ರಮವಾಗಿ, ಪಶ್ಚಿಮದಲ್ಲಿ ಗಂಗೆಯ ನೀರಿನಿಂದ ತುಂಬಿದ ಕಲಶವನ್ನಿಟ್ಟು, ಅದರ ಮೇಲೆ ಹಳದಿ ವಸ್ತ್ರದಿಂದ ಕೂಡಿದ ವಿಷ್ಣುವಿನ ಚಿನ್ನದ ಪ್ರತಿಮೆಯನ್ನಿಡಬೇಕು. ಪೂರ್ವದಲ್ಲಿ, ಹಾಲುನೀರಿನಿಂದ ತುಂಬಿದ ಕಲಶವನ್ನಿಟ್ಟು ಅದರ ಮೇಲೆ ಬಿಳಿ ವಸ್ತ್ರಸಹಿತ ಬೆಳ್ಳಿಯ ಬ್ರಹ್ಮನ ಪ್ರತಿಮೆಯನ್ನಿಡಬೇಕು. ಉತ್ತರದಲ್ಲಿ ಜೇನು ಮತ್ತು ತುಪ್ಪದಿಂದ ಕೂಡಿದ ಕಲಶದಲ್ಲಿ ಕೆಂಪು ವಸ್ತ್ರಸಹಿತ ತಾಮ್ರದ ರುದ್ರನ ಪ್ರತಿಮೆಯನ್ನಿಡಬೇಕು. ದಕ್ಷಿಣದಲ್ಲಿ, ಇಂದ್ರನೀಲಮಣಿಯಿಂದ ಕೂಡಿದ ನೀರಿನ ಕಲಶದಲ್ಲಿ ಕಪ್ಪು ವಸ್ತ್ರಸಹಿತ ಕಬ್ಬಿಣದ ಯಮನ ಪ್ರತಿಮೆಯನ್ನಿಡಬೇಕು. ಅನಂತರ ಕ್ರಮವಾಗಿ ಪಶ್ಚಿಮ, ಪೂರ್ವ, ಉತ್ತರ, ದಕ್ಷಿಣ ಕಲಶಗಳಲ್ಲಿ ಕ್ರಮವಾಗಿ ಆಯಾ ದೇವತೆಗಳನ್ನು ಆವಾಹನೆ ಮಾಡಬೇಕು.

'ಇದಂ ವಿಷ್ಣುಃ...' ಮಂತ್ರದಿಂದ ವಿಷ್ಣುವನ್ನು, 'ಬ್ರಹ್ಮಜಜ್ಞಾನಂ..' ಮಂತ್ರದಿಂದ ಬ್ರಹ್ಮನನ್ನು 'ಕದ್ರುದ್ರಾಯ...' ಮಂತ್ರದಿಂದ ಶಿವನನ್ನು, 'ಯಮಾಯ ಸೋಮಂ...' ಮಂತ್ರದಿಂದ ಯಮನನ್ನು ಆವಾಹನೆ ಮಾಡಬೇಕು. ಅನಂತರ ಪುರುಷಸೂಕ್ತದಿಂದ ಷೋಡಶೋಪಚಾರಪೂಜೆ ಮಾಡಬೇಕು. ಅನಂತರ (ಎಡ) ದಕ್ಷಿಣಾಭಿಮುಖವಾಗಿ ಕುಳಿತು ಮಧ್ಯ ಕಲಶದಲ್ಲಿ ಪ್ರೇತವನ್ನು ಆವಾಹನೆ ಮಾಡಬೇಕು–

**ಓಂ ಪ್ರೇತಾ ಜಯತಾ ನರ ಇಂದ್ರೋ ವಃ ಶರ್ಮ ಯಚ್ಛತು । ಉಗ್ರಾ ವಃ ಸಂತು ಬಾಹವೋಽನಾಧೃಷ್ಯಾ ಯಥಾಸಥ ॥**

**ಅಸ್ಮತ್ಪಿತುಃ .....ಗೋತ್ರಸ್ಯ .....ಶರ್ಮಣಃ ವಿಷ್ಣುದೈವತಪ್ರೇತಸ್ಯ ಆವಾಹನಮುಪತಿಷ್ಠತು** । ಎಂದು ಆವಾಹನೆ ಮಾಡಿ ಮುಂದಿನ ಉಪಚಾರಗಳನ್ನು ಮಾಡಬೇಕು–

**ಆಸನಮುಪತಿಷ್ಠತು । ಪಾದ್ಯಮುಪತಿಷ್ಠತು । ಅರ್ಘ್ಯಮುಪತಿಷ್ಠತು । ಸ್ನಾನಮುಪತಿಷ್ಠತು । ವಸ್ತ್ರಮುಪತಿಷ್ಠತು । ಗಂಧಮುಪತಿಷ್ಠತು । ಪುಷ್ಪಮುಪತಿಷ್ಠತು । ದೂರ್ವಾಪತ್ರಮುಪತಿಷ್ಠತು । ಧೂಪಮುಪತಿಷ್ಠತು । ದೀಪಮುಪತಿಷ್ಠತು ॥**

ಪ್ರೇತಸ್ಥಾನದಲ್ಲಿ ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ, ಒಂದು ಚಿಕ್ಕ ಬಾಳೆಎಲೆಯ ತುಂಡನ್ನು ಇಟ್ಟು ಅದರ ಮೇಲೆ ಒಂದು ಎಳೆಯ ಕೂರ್ಚವನ್ನು ದಕ್ಷಿಣಕ್ಕೆ ತುದಿ ಮಾಡಿ ಇಟ್ಟು, ಕೈಮುಗಿದುಕೊಂಡು

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಸ್ತು ದಕ್ಷಿಣೇ ।**
**ಪ್ರದ್ಯುಮ್ನೋ ದಕ್ಷಿಣೇ ಪಾತು ವಾಸುದೇವಸ್ತಥೋತ್ತರೇ ।**
**ಊರ್ಧ್ವಂ ಗೋವರ್ಧನೋ ರಕ್ಷೇದಧಸ್ತಾಚ್ಚ ತ್ರಿವಿಕ್ರಮಃ ॥**

–ಎಂದು ಪ್ರಾರ್ಥಿಸಿ ಒಂದು ತುದಿ ದರ್ಭೆಯನ್ನು ಮೇಲ್ತುದಿಯಾಗಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ನಾರಾಯಣಬಲಿಶ್ರಾದ್ಧೇ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಕೂರ್ಚಸ್ಥಾನೇ ಆಹವನೀಯಾರ್ಥೇ ಕ್ಷಣಮುಪತಿಷ್ಠತು ॥**

–ಎಂದು ಬ್ರಾಹ್ಮಣಕೂರ್ಚದ ಬಲಬದಿಯಲ್ಲಿ ದರ್ಭೆಯನ್ನಿಡುವುದು. ಅನಂತರ ಬ್ರಾಹ್ಮಣ ಕೂರ್ಚದ ಎದುರು ದಕ್ಷಿಣಾಗ್ರವಾಗಿ ತ್ರಿಕೋನಮಂಡಲವನ್ನು ನೀರಿನಿಂದ ಅಪ್ರದಕ್ಷಿಣೆಯಾಗಿ ಮಾಡಿ ಒಂದು ತುದಿದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು, **ಪಾದ್ಯಸ್ಥಾನೇ ದರ್ಭಪತ್ರಮುಪತಿಷ್ಠತು ॥** –ಎಂದು ಮಂಡಲದಲ್ಲಿಟ್ಟು ಎಳ್ಳುನೀರು ಹಿಡಿದು **ತಿಲೋದಕಮುಪತಿಷ್ಠತು ॥** ಎಂದು ಮಂಡಲದಲ್ಲಿ ತಿಲೋದಕ ಕೊಟ್ಟು ಅಂಜಲಿಮುದ್ರೆ ಮಾಡಿ, **ಸ್ವಾಗತಮುಪತಿಷ್ಠತು ॥** ತಿಲೋದಕ ಹಿಡಿದು **ಪಾದ್ಯಮುಪತಿಷ್ಠತು ॥** –ಎಂದು ಮಂಡಲದಲ್ಲಿ ಬಿಟ್ಟು, ಒಂದು ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು **ಆಸನಮುಪತಿಷ್ಠತು ॥** ಎಂದು ಕೂರ್ಚದ ಅಡಿಯಲಲ್ಲಿಟ್ಟು ಜಲಕೂರ್ಚದಿಂದ ನೀರು

**ಹಿಡಿದು ಆಸನಾಂತೇ ಜಲಮುಪತಿಷ್ಠತು** ॥ –ಎಂದು ಕೂರ್ಚಸ್ಥಾನದಿಂದ ಕೊಟ್ಟು ಎಳ್ಳು ಹಿಡಿದು,

**ಅಸ್ಮತ್ಪಿತುಃ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಆವಾಹನಮುಪತಿಷ್ಠತು** ॥ –ಎಂದು ಕೂರ್ಚದ ಮೇಲೆ ಹಾಕಬೇಕು.

## ಅರ್ಘ್ಯಮ್

(ಬಲ) ಒಂದು ಬಾಳೆಲೆದೊಣ್ಣೆಗೆ ನೀರು ಹಾಕಿ ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು ತಿಲಾದಿದ್ರವ್ಯಗಳ ಪೂರಣೆ ಮಾಡಿ ಅಷ್ಟಾಕ್ಷರಮಂತ್ರದಿಂದ ಅಭಿಮಂತ್ರಿಸಿ (ಎಡ) ಎಳ್ಳುಸಹಿತ ಅರ್ಘ್ಯಪಾತ್ರದ ನೀರು ಹಾಗೂ ಕೂರ್ಚ ಹಿಡಿದು, (ಬಲ) '**ಅಸ್ಮತ್ಪಿತುಃ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಅರ್ಘ್ಯ–ಮುಪತಿಷ್ಠತು ।**' ಎಂದು ಬ್ರಾಹ್ಮಣಕೂರ್ಚದ ಮೇಲೆ ಅರ್ಘ್ಯ ಕೊಡಬೇಕು. '**ಗಂಧಮುಪ–ತಿಷ್ಠತು ।**' ಎಂದು ಗಂಧವನ್ನು ಅರ್ಪಿಸಿ (ಎಡ) **ಅಲಂಕಾರಾರ್ಥೇ ಪುಷ್ಪಮುಪತಿಷ್ಠತು** ॥ –ಎಂದು ಕೂರ್ಚದ ಮೇಲೆ ಪುಷ್ಪವಿಟ್ಟು (ಬಲ) ಅಕ್ಕಿ ಹಿಡಿದು,

**ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।**
**ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ** ॥

–ಎಂಬ ಮಂತ್ರಗಳನ್ನು ಪಠಿಸಿ ಕೂರ್ಚಕ್ಕೆ ಹಾಕಿ ಕೈಮುಗಿದು,

**ಅಸ್ಮತ್ಪಿತುಃ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ನಾರಾಯಣಬಲಿಶ್ರಾದ್ಧೇ ಕೂರ್ಚಮುಖೇನ ಆಸನಾದಿತಿಲೋದಕಪರ್ಯಂತಂ ಮಯಾ ಕೃತಮಾರಾಧನಂ ಯಥಾಶಾಸ್ತ್ರೀಯಮಸ್ತ್ವಿತಿ ಭವಂತೋ ಬ್ರುವಂತು ॥ (ಯಥಾಶಾಸ್ತ್ರೀಯಮಸ್ತು) ।**

## ಬ್ರಾಹ್ಮಣಭೋಜನವಿಧಿಃ

ಕೂರ್ಚಬ್ರಾಹ್ಮಣರಿಗೆ ಮೂರು ಬಾರಿ ತೀರ್ಥವನ್ನು ಕೊಟ್ಟು ಬ್ರಾಹ್ಮಣಕೂರ್ಚದ ಎದುರು ಪಶ್ಚಿಮಾಗ್ರವಾಗಿ ಎಲೆ ಹಾಕಿ, ಹಾಗೆಯೇ ಗೋಗ್ರಾಸಕ್ಕೆ ಪೂರ್ವಾಗ್ರವಾಗಿ ಹಾಗೂ ತನ್ನ ಎಡಭಾಗದಲ್ಲಿ ಪಿಂಡಕ್ಕೋಸ್ಕರ ದಕ್ಷಿಣಾಗ್ರವಾಗಿ ಎಲೆ ಹಾಕಿ ಜಲಕೂರ್ಚದಿಂದ ಹವಿಸ್ಸಿಗೆ ಹಾಗೂ ಎಲೆಗೆ ನೀರು ಪ್ರೋಕ್ಷಣೆ ಮಾಡಿ ಎಲೆ ಒರಸಿ ಅನ್ನಕ್ಕೆ ಎರಡು ಬಾರಿ ಹಾಗೂ ಎಲೆಗೆ ಒಂದು ಬಾರಿ ಅಭಿಘಾರ ಮಾಡಿ ಹವಿಸ್ಸನ್ನು ಸೂರ್ಯನಾರಾಯಣನಿಗೆ ಸಮರ್ಪಿಸಿ ಅನಂತರ ಹವಿಸ್ಸನ್ನು ಗೋಗ್ರಾಸದ ಎಲೆಗೆ, ಬ್ರಾಹ್ಮಣಕೂರ್ಚದ ಎಲೆಗೆ ಹಾಕಿ ಎರಡು ಬಾರಿ ಅಭಿಘಾರ ಮಾಡಿ,

(ಎಡ) **ಪೃಥಿವೀ ತೇ ಪಾತ್ರಂ ವಿಷ್ಣೋಃ ಕವ್ಯಂ ರಕ್ಷಸ್ವ** ॥

ಜಲಕೂರ್ಚದಿಂದ ನೀರು ಹಿಡಿದು,

**ಭೂರ್ಭುವಃಸ್ವಃ । ಸತ್ಯಂ ತ್ವರ್ತೇನ ಪರಿಷಿಂಚಾಮಿ ॥** –ಎಂದು ಬ್ರಾಹ್ಮಣರ ಎಲೆಗೆ ಅಪ್ರದಕ್ಷಿಣೆಯಾಗಿ ಸುತ್ತು ಕಟ್ಟಿ,

**ಓವ್ ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದವ್ । ಸಮೂಢ್ಹಮಸ್ಯ ಪಾಂಸುರೇ ॥** ಮಂತ್ರ ಪಠಿಸಿ,

ಎಳ್ಳು ತುಳಸಿ ಗರಿಕೆ ಹಿಡಿದು, **ಅಸ್ಮತ್ಪಿತುಃ ....ಶ್ರಾದ್ಧೇ .....ಗೋತ್ರಾಯ .....ಶರ್ಮಣೇ ಪ್ರೇತಾಯ ಕ್ಷುತ್ಪಿಪಾಸಾ ನಿವಾರಣಾರ್ಥಮ್ ಇದಂ ಸೋಪಸ್ಕರಾನ್ನಮುಪತಿಷ್ಠಂತು ॥**

–ಎಂದು ಕೂರ್ಚಬ್ರಾಹ್ಮಣರ ಎಲೆಯ ಅನ್ನದ ಮೇಲೆ ಬಿಡಬೇಕು. (ಬಲ) ತುಳಸಿ ಹಿಡಿದು ಪೂರ್ವಮುಖವಾಗಿ,

**ಸುರಭಿರ್ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದಾಶ್ರಿತಾ ।**
**ಗೋಗ್ರಾಸಸ್ತು ಮಯಾ ದತ್ತಃ ಸುರಭಿಃ ಪ್ರತಿಗೃಹ್ಯತಾಮ್ ॥**

–ಎಂದು ಗೋಗ್ರಾಸ ಬಿಟ್ಟು,

**ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।**
**ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥**

**ಅಸ್ಮತ್ಪಿತುಃ ಮೃತಾಹಾದ್ ಏಕಾದಶೇಽಹನಿ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ನಾರಾಯಣಬಲಿಶ್ರಾದ್ಧಾಂಗಕೂರ್ಚಮುಖಬ್ರಾಹ್ಮಣಾರಾಧನಾಖ್ಯೇನ ಕರ್ಮಣಾ ಪಿತೃ**(ಸಂಬಂಧವಾಚಕಶಬ್ದ)**ಪ್ರೇತಾಂತರ್ಗತಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ । ಕೃಷ್ಣಾರ್ಪಣಮಸ್ತು ॥**

(ಬಲ) ಒಂದು ಸೌಟು ತೀರ್ಥ ಹಿಡಿದು,

**ಅಸ್ಮತ್ಪಿತುಃ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಆಪೋಶನಮುಪತಿಷ್ಠತು ॥**
–ಎಂದು ಕೂರ್ಚದ ಮೇಲೆ ನೀರು ಬಿಟ್ಟು,

**ಕೃಷ್ಣಾರ್ಪಣಮಸ್ತು ॥ ಅಮೃತೋಪಸ್ತರಣಮಸಿ ಸ್ವಾಹಾ । ಪ್ರಾಣಾಯ ಸ್ವಾಹಾ। ...........ಸಮಾನಾಯ ಸ್ವಾಹಾ ॥**

ಅನಂತರ ಹವಿಸ್ಸಿಗೆ ಎಳ್ಳು ಗರಿಕೆ ತುಳಸೀತೀರ್ಥ ಹಾಕಿ ನಾರಾಯಣಸ್ಮರಣೆಯೊಂದಿಗೆ ಹತ್ತು ಪಿಂಡಗಳನ್ನು ಮಾಡಿ ಕೈತೊಳೆದು.

(ಎಡ) **ನಾರಾಯಣಬಲಿಶ್ರಾದ್ಧಂ ಸಂಪನ್ನಮ್ । (ಸುಸಂಪನ್ನಮ್) ವಿಷ್ಣುದೈವತ–ಪ್ರೇತಾಃ । ತೃಪ್ತಾಸ್ಥಃ ॥ (ತೃಪ್ತಾ ಸ್ಮಃ ।)** ಒಂದು ಸೌಟು ನೀರನ್ನು ಹಿಡಿದು,

(ಬಲ) **ಅಸ್ಮತ್ಪಿತುಃ ......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಉತ್ತರಾಪೋಶನ–ಮುಪತಿಷ್ಠತು ॥**

–ಎಂದು ಕೂರ್ಚದ ಮೇಲೆ ಬಿಟ್ಟು, ಪುನಃ (ಎಡ) **ಹಸ್ತಪ್ರಕ್ಷಾಲನಾದ್ಯುಪತಿಷ್ಠಂತು ॥** –ಎಂದು ನೀರು ಬಿಡಬೇಕು.

## ಬರ್ಹಿಷ್ಯಾಸನಾಽವಾಹನಮ್

ದಕ್ಷಿಣಾಭಿಮುಖವಾಗಿ ಕುಳಿತು ಪಶ್ಚಿಮದಿಂದಾರಂಭಿಸಿ, ಪೂರ್ವ, ಉತ್ತರ, ದಕ್ಷಿಣ ದಿಕ್ಕುಗಳಲ್ಲಿ ಹಾಗೂ ಮಧ್ಯದಲ್ಲಿ ದಕ್ಷಿಣಾಗ್ರವಾಗಿ ಪ್ರತ್ಯೇಕವಾಗಿ ತ್ರಿಕೋನಾಕಾರದ ಐದು ಮಂಡಲಗಳನ್ನು ಮಾಡಿ ಒಂದು ಎಳೆಯ ಮುಷ್ಟಿದರ್ಭೆ ಹಿಡಿದು,

**ಅಸ್ಮತ್ಪಿತುಃ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ನಾರಾಯಣಬಲಿಶ್ರಾದ್ಧೇ ಉಲ್ಲೇಖನಮುಪತಿಷ್ಠತು ॥** ಎಂದು ಪಶ್ಚಿಮದಿಂದ ಹಿಂದಿನಂತೆ ಕ್ರಮವಾಗಿ ಐದು ಮಂಡಲಗಳ ಒಳಗೆ ಉತ್ತರದಿಂದ ದಕ್ಷಿಣಕ್ಕೆ ಉಲ್ಲೇಖನಮಾಡಿ ದರ್ಭೆಯನ್ನು ಮಂಡಲ ದಲ್ಲಿಟ್ಟು ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ ದರ್ಭೆಯನ್ನು ಹಿಂದೆ ಬಿಸಾಡಿ ಕೈತೊಳೆದು ಹೀಗೆ, ಎಳ್ಳನ್ನು ಹಿಡಿದು,

**ಅಸ್ಮತ್ಪಿತುಃ ನಾರಾಯಣಬಲಿಶ್ರಾದ್ಧೇ ಪಿಂಡಸ್ಥಾನೇ ತಿಲಮುಪತಿಷ್ಠತು ॥**

–ಎಂದು ಹಿಂದಿನ ಕ್ರಮದಂತೆ ಐದು ತ್ರಿಕೋಣಮಂಡಲದ ಒಳಗೆ ಉತ್ತರದಿಂದ ದಕ್ಷಿಣಕ್ಕೆ ಎಳ್ಳು ಹರಡಿ ಒಂದು ತುದಿ ದರ್ಭೆಯನ್ನು ದಕ್ಷಿಣಾಗ್ರವಾಗಿ ಹಿಡಿದು,

**ಮೃತಾಹಾತ್ ......ಶ್ರಾದ್ಧೇ ಮಂಡಲಮಧ್ಯೇ ಬರ್ಹಿರುಪತಿಷ್ಠತು ॥**

**ಅಪಹತಾ ಅಸುರಾ ರಕ್ಷಾಗ್ಂಸಿ ಬರ್ಹಿಷದಃ ॥** ಎಂದು ಐದು ಸ್ಥಾನದಲ್ಲಿ ಬರ್ಹಿಸ್ಸನ್ನು ಹಾಕಿ ಎಳ್ಳುನೀರು ಹಿಡಿದು, '**ಬರ್ಹಿಷ್ಯುಪರಿ ತಿಲೋದಕಮುಪತಿಷ್ಠತು॥**' –ಎಂದು ಐದು ಸ್ಥಾನಗಳ ಬರ್ಹಿಸ್ಸಿನ ಮೇಲೆ ತಿಲೋದಕ ಕೊಟ್ಟು, ಪುನಃ ಒಂದು ತುದಿ ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು,

**ಮೃತಾಹಾತ್ .......ಶ್ರಾದ್ಧೇ ಬರ್ಹಿಷ್ಯಾಸನಮುಪತಿಷ್ಠತು ॥**

–ಎಂದು ಐದು ಸ್ಥಾನಗಳ ಬರ್ಹಿಸ್ಸಿನ ಮಧ್ಯಭಾಗದಲ್ಲಿ ಅಡ್ಡ ಇಟ್ಟು, ಪುನಃ ಜಲಕೂರ್ಚ ದಿಂದ ನೀರು ಹಿಡಿದು '**ಆಸನಾಂತೇ ಉದಕಮುಪತಿಷ್ಠತು ॥**' –ಎಂದು ಐದು ಸ್ಥಾನಗಳಲ್ಲಿಯೂ ಪ್ರತ್ಯೇಕವಾಗಿ ಆಸನದಲ್ಲಿ ನೀರು ಬಿಟ್ಟು, (ಬಲ) ಅಕ್ಕಿಕಾಳು ಹಿಡಿದು ಕ್ರಮವಾಗಿ ನಾಲ್ಕು ದಿಕ್ಕುಗಳ ಮಂಡಲಗಳ ಬರ್ಹಿಸ್ಸಿನ ಮೇಲೆ ಹಾಕುತ್ತಾ,

**ವಿಷ್ಣುಮ್ ಆವಾಹಯಾಮಿ । ಬ್ರಹ್ಮಾಣಮ್ ಆವಾಹಯಾಮಿ । ಶಿವಮ್ ಆವಾಹಯಾಮಿ । ಯಮಮ್ ಆವಾಹಯಾಮಿ ॥** –ಎಂದು ಆವಾಹನೆ ಮಾಡಬೇಕು. ಜಲಕೂರ್ಚದಿಂದ ನೀರನ್ನು ಹಿಡಿದು, '**ಆವಾಹನಾಂತೇ ಉದಕಮುಪತಿಷ್ಠತು ॥**' –ಎಂದು ನಾಲ್ಕು ದಿಕ್ಕುಗಳ ಸ್ಥಾನಗಳಲ್ಲಿ ನೀರು ಕೊಟ್ಟು, ಅನಂತರ ಗರಿಕೆ ಮತ್ತು ಎಳ್ಳು ಹಿಡಿದು, (ಎಡ)

**ಅಸ್ಮತ್ಪಿತುಃ ಮೃತಾಹಾತ್ .....ಶ್ರಾದ್ಧೇ .....ಗೋತ್ರಸ್ಯ ಶರ್ಮಣಃ ಪ್ರೇತಸ್ಯ ಆವಾಹನ ಮುಪತಿಷ್ಠತು ॥** ಎಂದು ಮಧ್ಯ ಮಂಡಲದ ಬರ್ಹಿಸ್ಸಿನಲ್ಲಿಟ್ಟು, ಅನಂತರ ಜಲಕೂರ್ಚದಿಂದ ನೀರು ಹಿಡಿದು, (ಎಡ) **ಆವಾಹನಾಂತೇ ಉದಕಮುಪತಿಷ್ಠತು** ॥ ಎಂದು ಮಧ್ಯಮಂಡಲದಲ್ಲಿ ಕೊಟ್ಟು, ಅರ್ಘ್ಯಪಾತ್ರದ ಕೂರ್ಚ, ನೀರು ಹಾಗೂ ಅಕ್ಕಿ ಹಿಡಿದು, (ಬಲ)

**ಪಿಂಡಸ್ಥಾನೇಷು ವಿಷ್ಣ್ವಾದಿ ದೇವಾನಾಮ್ ಇದಂ ವೋ ಅರ್ಘ್ಯಮ್ ॥**

–ಎಂದು ನಾಲ್ಕು ಸ್ಥಾನಗಳಲ್ಲಿ ಅರ್ಘ್ಯ ಕೊಟ್ಟು (ಎಡ) ಪುನಃ ಎಳ್ಳು ಹಾಗೂ ಅರ್ಘ್ಯಪಾತ್ರದ ಕೂರ್ಚ, ನೀರು ಹಿಡಿದು, (ಬಲ)

**ಅಸ್ಮತ್ಪಿತುಃ .....ಶ್ರಾದ್ಧೇ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಅರ್ಘ್ಯಮುಪತಿಷ್ಠತು ॥**

–ಎಂದು ಬರ್ಹಿಸ್ಸಿನಲ್ಲಿ ಅರ್ಘ್ಯ ಕೊಡಬೇಕು. (ಎಡ) ಎಡಕಾಲೂರಿ ಕೂರ್ಚದ ಗಂಟು ಬಿಚ್ಚಿ, ಅರ್ಘ್ಯಪಾತ್ರವನ್ನು ನಾರಾಯಣಸ್ಮರಣೆಯೊಂದಿಗೆ ಕಣ್ಣು ಮುಚ್ಚಿಕೊಂಡು ಎಡಕಾಲಿನ ಹೆಬ್ಬೆರಳಿನಿಂದ ತುಂಡು ಮಾಡಿ ಹಿಂದೆ ಬಿಸಾಡಿ ಅನಂತರ ಪ್ರೇತಬರ್ಹಿಸ್ಸಿನಲ್ಲಿ **ವಾಸೋದಕ, ಕೇಶೋದಕ, ತಿಲೋದಕ** ಕೊಟ್ಟು (ಬಲ) ಕೈಮುಗಿದು,

**ಅನಾದಿನಿಧನೋ ದೇವಃ ಚಕ್ರಶಂಖಗದಾಧರಃ ।**
**ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷ ಪ್ರದೋ ಭವ ॥**

**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥**

–ಎಂದು ಪ್ರಾರ್ಥಿಸಬೇಕು. (ಬಲ)

**ನಾರಾಯಣಬಲಿಶ್ರಾದ್ಧೇ ಪಿಂಡದಾನಂ ಕರಿಷ್ಯೇ ॥** –ಎಂದು ಹೇಳಿ ದರ್ಭೆಗಳ ಮೇಲೆ ತಿಲತೋಯಾಂಜಲಿ ಮತ್ತು ಪ್ರತಿ ದೇವತೆಗಳಿಗೆ ಎರಡೆರಡು ಪಿಂಡಗಳನ್ನು ಇಟ್ಟು ಪುನಃ ತಿಲತೋಯಾಂಜಲಿ ಕೊಡಬೇಕು.

ಕ್ರಮ :

**ನಾರಾಯಣ ನಮಸ್ತೇಽಸ್ತು ಶಂಖಚಕ್ರಗದಾಧರ ।**
**ಅಕ್ಷಯ್ಯ ಪಿಂಡದಾನೇನ ಪ್ರೇತತೃಪ್ತಿಕರೋ ಭವ ॥**

–ಎಂದು ಪ್ರಾರ್ಥಿಸಿ, ಪಶ್ಚಿಮದ ಬರ್ಹಿಸ್ಸಿನಲ್ಲಿ (ಎಡ) ಎಳ್ಳುನೀರು ಹಿಡಿದು, **ಅಸ್ಮತ್ಪಿತ್ರೇ .......ಶರ್ಮಣೇ ......ಗೋತ್ರಾಯ ಪ್ರೇತಾಯ ಆಪ್ಯಾಯನಾರ್ಥಂ ತಿಲತೋಯಾಂಜಲಿರುಪತಿಷ್ಠತು ॥**

–ಎಂದು ದರ್ಭೆಯ ಮೇಲೆ ತಿಲೋದಕ ಬಿಟ್ಟು, ಒಂದು ಪಿಂಡ ಹಿಡಿದು,

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಆಪ್ಯಾಯನಾರ್ಥಂ** (ಬಲ)

**ನಮೋ ವಿಷ್ಣವೇ ಏಷಃ ಪಿಂಡಃ ॥** –ಎಂದು ಪಿಂಡ ಇಟ್ಟು, ಪುನಃ (ಎಡ) ಪುನಃ ಒಂದು ಪಿಂಡ ಹಿಡಿದು,

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಆಪ್ಯಾಯನಾರ್ಥಂ** (ಬಲ) **ವಿಷ್ಣವೇ ಏಷಃ ಪಿಂಡಃ ॥** –ಎಂದು ಪಿಂಡ ಇಟ್ಟು, (ಎಡ) ಎಳ್ಳುನೀರು ಹಿಡಿದು,

**ಅಸ್ಮತ್ಪಿತ್ರೇ ......ಗೋತ್ರಾಯ ......ಶರ್ಮಣೇ ಪ್ರೇತಾಯ ಆಪ್ಯಾಯನಾರ್ಥಂ ತಿಲತೋಯಾಂಜಲಿರುಪತಿಷ್ಠತು ॥** –ಎಂದು ಪಿಂಡದ ಮೇಲೆ ತಿಲೋದಕ ಬಿಡಬೇಕು. ಹೀಗೆಯೇ ಪೂರ್ವ, ಉತ್ತರ, ದಕ್ಷಿಣ ಬರ್ಹಿಸ್ಸಿನಲ್ಲಿ ಬ್ರಹ್ಮ, ಶಿವ ಹಾಗೂ ಯಮನಿಗೆ ಹಿಂದಿನ ಕ್ರಮದಂತೆ ತಿಲತೋಯಾಂಜಲಿ ನೀಡಿ,

**ನಮೋ ಬ್ರಹ್ಮಣೇ ಏಷಃ ಪಿಂಡಃ । ನಮಃ ಶಿವಾಯ ಏಷಃ ಪಿಂಡಃ । ನಮೋ ಯಮಾಯ ಏಷಃ ಪಿಂಡಃ ॥**

–ಎಂದು ಎರಡೆರಡು ಪಿಂಡಪ್ರದಾನ ಮಾಡಿ ತಿಲತೋಯಾಂಜಲಿ ನೀಡಿ ಕೊನೆಗೆ, ಪ್ರೇತಸ್ಥಾನದಲ್ಲಿ ಮಾತ್ರ ಎಡದಿಂದ ತಿಲತೋಯಾಂಜಲಿ ನೀಡಿ, ಒಂದು ಪಿಂಡ ಹಿಡಿದು,

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಆಪ್ಯಾಯನಾರ್ಥಂ ಪ್ರೇತವಿಷ್ಣು ದೈವತ ಅಯಂ ತೇ ಪಿಂಡಃ ॥**

–ಎಂದು ಪಿಂಡ ಇಟ್ಟು, ಅನಂತರ ಹೀಗೆ ಇನ್ನೊಂದು ಪಿಂಡಪ್ರದಾನ ಮಾಡಿ, ತಿಲತೋಯಾಂಜಲಿ ನೀಡಬೇಕು. ಎಳ್ಳು ನೀರು ಹಿಡಿದು– '**ಗಾಯತ್ರ್ಯರ್ಚನಮುಪ–ತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ಹೋಮದ ಭಸ್ಮವನ್ನು ಅಂಗುಷ್ಠದಿಂದ ಒರಸಿ ತೆಗೆದು, '**ಅಂಜನಮುಪತಿಷ್ಠತು ।**' ಎಂದು ಪಿಂಡಗಳ ಮೇಲೆ ಹಚ್ಚಿ, ಹೋಮದ ಸಂಪಾತ ಹಾಗೂ ಎಳ್ಳು ನೀರು ಹಿಡಿದು, '**ಅಭ್ಯಂಜನಮುಪತಿಷ್ಠತು ॥**' ಎಂದು ಪಿಂಡಗಳ ಮೇಲೆ ಬಿಟ್ಟು, ಹವಿಸ್ಸಿನ ಪಾತ್ರೆಯ ಒಳಗಿನ ನೀರನ್ನು ಹಿಡಿದು, '**ಇದಂ ತೇ ಪಾತ್ರಪ್ರಕ್ಷಾಳನೋದಕಮುಪತಿಷ್ಠತು**' ಎಂದು ಪಿಂಡಗಳ ಮೇಲೆ ಬಿಟ್ಟು, ತನ್ನ ಬಟ್ಟೆಯ ಅಂಚಿನ ನೂಲನ್ನು ತೆಗೆದು, ಪ್ರತಿಯೊಂದು ಸ್ಥಾನದ ಪಿಂಡದ ಮೇಲೆ '**ಕಶಿಪೂಪಬರ್ಹಣೇ ದಶಾಮುಪತಿಷ್ಠತು ॥**' ಎಂದು ಹಾಕಬೇಕು. ವೀಳ್ಯದೆಲೆ ಅಡಕೆ, ನಾಣ್ಯ, ಎಳ್ಳು, ನೀರು ಹಿಂದೆ ಹಿಡಿದು '**ತಾಂಬೂಲದಕ್ಷಿಣಾಮುಪತಿಷ್ಠತು ॥**' ಎಂದು ಬ್ರಾಹ್ಮಣ ಕೂರ್ಚದ ಎಡಭಾಗದಲ್ಲಿಟ್ಟು,

ಅನಂತರ ಪಿಂಡಕ್ಕೆ ಗಂಧಪುಷ್ಪಾದಿಗಳಿಂದ ಅಲಂಕಾರ ಮಾಡಿ, ಎಳ್ಳು ಹಿಡಿದು '**ಷೋಡಶೋಪಚಾರಾ ಉಪತಿಷ್ಠಂತು**' ಎಂದು ಪಿಂಡದ ಮೇಲೆ ಹಾಕಿ, ಎಳ್ಳುನೀರು ಹಿಡಿದು '**ಅಸ್ಮತ್ಪಿತುಃ .....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ನಾರಾಯಣಬಲಿಶ್ರಾದ್ಧೇ ಪಿಂಡಸ್ಯೋಪರಿ ಏತತ್ತಿಲೋದಕಮುಪತಿಷ್ಠತು**' ಎಂದು ಎಳ್ಳುನೀರು ಬಿಟ್ಟು ಪಿಂಡಗಳ ಮೇಲೆ ವಾಸೋದಕ ಕೇಶೋದಕ ತಿಲೋದಕ ಕೊಟ್ಟು, ಒಂದೊಂದು ದರ್ಭೆಯನ್ನು ದಕ್ಷಿಣಾಗ್ರವಾಗಿ ಪಿಂಡಗಳ ಮೇಲಿಟ್ಟು (ಬಲ) ಅಕ್ಕಿ ಹಿಡಿದು,

ಅನಾದಿನಿಧನೋ ದೇವಃ ಚಕ್ರಶಂಖಗದಾಧರಃ ।
ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷ ಪ್ರದೋ ಭವ ॥

ಅತಸೀಪುಷ್ಪ ಸಂಕಾಶಂ ಪೀತವಾಸಸಮಚ್ಯುತಮ್ ।
ಯೇ ನಮಸ್ಯತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥

ಅನೇನ ನಾರಾಯಣಬಲಿಕರ್ಮಣಾ ಭಗವಾನ್ ವಿಷ್ಣು ಅಸ್ಮತ್ಪಿತುಃ ......ಗೋತ್ರಂ ......ಶರ್ಮಾಣಂ ಪ್ರೇತಂ ಶುದ್ಧಮಪಾಪಮರ್ಹಂ ಕರೋತು । ಬಲಿಂ ಗೃಹೀತ್ವಾ ಕುರ್ವಂತು ಪ್ರೇತಸ್ಯ ಶುಭಾಂ ಗತಿಮ್ ॥ –ಎಂದು ಪಿಂಡದ ಮೇಲೆ ಹಾಕಿ ನಮಸ್ಕಾರ ಮಾಡಬೇಕು.

## ಕೃಷ್ಣಾರ್ಪಣಮ್

ನಾಣ್ಯ, ತುಳಸಿ, ನೀರು ಹಿಡಿದು, ಪೂರ್ವಾಭಿಮುಖವಾಗಿ,

'ಅಸ್ಮತ್ಪಿತುಃ ....ಪ್ರಾಯಶ್ಚಿತ್ತನಾರಾಯಣಬಲಿಶ್ರಾದ್ಧಸಂಪೂರ್ಣಫಲಪ್ರಾಪ್ತ್ಯರ್ಥಮ್ ಆಚಾರ್ಯಾಯ ಯಥಾಶಕ್ತಿ ದಕ್ಷಿಣಾಂ ಪ್ರತಿಪಾದಯಾಮಿ ॥' ಎಂದು ದಕ್ಷಿಣೆಯನ್ನು ಭೂಮಿಯ ಮೇಲೆ ಇಟ್ಟು, ಕೈಮುಗಿಯಬೇಕು. ಅನಂತರ ದಕ್ಷಿಣೆಯ ಮೇಲಿರುವ ತುಳಸಿಯನ್ನು ತೆಗೆದು, 'ಯಸ್ಯ ಸ್ಮೃತ್ಯಾ ಚ......'

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥

–ಎಂಬ ಮಂತ್ರ ಪಠಿಸಿ,

'ಅಸ್ಮತ್ಪಿತುಃ .... ಪ್ರಾಯಶ್ಚಿತ್ತನಾರಾಯಣಬಲಿಶ್ರಾದ್ಧಕರ್ಮಣಾ ಪಿತೃಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥

ಅಚ್ಯುತಃ ಕಲ್ಪವೃಕ್ಷಶ್ಚ ಅನಂತಃ ಕಾಮಧೇನವಃ ।
ಚಿಂತಾಮಣಿಸ್ತು ಗೋವಿಂದೋ ನಾಮತ್ರಯಮುದಾಹೃತಮ್ ॥

ತುಲಸಿಯನ್ನು ಸ್ವಲ್ಪ ಪಿಂಡಕ್ಕೆ ಹಾಕಿ ಉಳಿದುದನ್ನು ತನ್ನ ಕಿವಿಯಲ್ಲಿಟ್ಟುಕೊಳ್ಳಬೇಕು.

## ಪಿಂಡವಿಸರ್ಜನಮ್

ತಮ್ಮ ಹರಿವಾಣದಲ್ಲಿ ನೀರು ಹಾಗೂ ತೀರ್ಥ ಹಾಕಿ ಕೈಮುಗಿದು,

ಓಂ ಯತ್ರ ತದ್ವಿಷ್ಣುರ್ಮಹೀಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾ–ಯೇಂದೋ ಪರಿಸ್ರವ ॥

**ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

**ವೇಣೀಮಾಧವಾಯ ನಮಃ । ಬಿಂದುಮಾಧವಾಯ ನಮಃ । ಗಯಾಗದಾಧರಾಯ ನಮಃ ॥**

**'ಪಿಂಡಾನುದ್ವಾಸಯಿಷ್ಯೇ (ಅಸ್ತು ಉದ್ವಾಸಯ) ॥'** –ಎಂದು ಪ್ರತಿವಚನ ಪಡೆದು (ಎಡ) **'ನಾರಾಯಣಬಲಿ ಪಿಂಡೋಽಯಂ ಗಯಾರ್ಪಿತೋಽಸ್ತು ॥'** ಎಂದು ಪಿಂಡಗಳನ್ನು ಹರಿವಾಣದಲ್ಲಿಟ್ಟು, ಅನಂತರ ಪಿಂಡಗಳ ಸ್ಥಳದಲ್ಲಿ ಎಳ್ಳುನೀರು ಹಿಡಿದು, **'ಇದಂ ಸತಿಲೋದಕ ಪಿಂಡಪ್ರದಾನಂ ಪ್ರೇತಾಪ್ಯಾಯನಮಸ್ತು ॥'** –ಎಂದು ಪಿಂಡಸ್ಥಾನದಲ್ಲಿ ತಿಲೋದಕ ಕೊಟ್ಟು ಪಿಂಡದ ಸ್ಥಳದ ಎಳ್ಳನ್ನು ಹಿಡಿದು, **'ಅಕ್ಷಯ್ಯಸ್ಥಾನೇ ಅಭಿರಮ್ಯತಾಂ ಪ್ರೇತಃ ॥ (ಅಭಿರಮ್ಯತಾ ಸ್ಮ)'** –ಎಂದು ಎಳ್ಳನ್ನು ಆಕಾಶದ ಕಡೆಗೆ ಎರಚಬೇಕು. ಅನಂತರ ಬ್ರಾಹ್ಮಣ ಕೂರ್ಚವನ್ನು ಹಿಡಿದು,

**ಅಗತೀನಾಂ ಚ ಸರ್ವೇಷಾಂ ಗತಿರ್ನಾರಾಯಣೋ ಹರಿಃ ।**
**ತತ್ರ ಸಂಪೂಜನಂ ಕಾರ್ಯ ಸರ್ವಪಾಪಹರಂ ಶುಭಮ್ ।**

**'ಅಸ್ಮತ್ಪಿತುಃ ....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಕೂರ್ಚ ಉದ್ವಾಸನಮುಪತಿಷ್ಠತು ॥'** –ಎಂದು ಕೂರ್ಚವನ್ನು ಬಿಚ್ಚಿ, ಹೀಗೆಯೇ ಜಲಕೂರ್ಚವನ್ನು ಸಹ ಬಿಚ್ಚಬೇಕು. ಬ್ರಾಹ್ಮಣಭೋಜನದ ಅನ್ನವನ್ನು ದೂರ ಎಸೆದು ಗೋಮಯದಿಂದ ಪಿಂಡ ಹಾಕಿದ ಸ್ಥಳವನ್ನು ಶುದ್ಧ ಮಾಡಬೇಕು. ಅನಂತರ ಶ್ರಾದ್ಧದ ಸಂಪೂರ್ಣ ಫಲಪ್ರಾಪ್ತಿಗಾಗಿ **'ಕೃತಸ್ಯ ಕರ್ಮಣಃ ಸಾಂಗತಾಫಲಸಿದ್ಧ್ಯರ್ಥಮ್ ಆಮಾನ್ನದಾನಂ ಕರಿಷ್ಯೇ ॥'** –ಎಂದು ಸಂಕಲ್ಪಿಸಿ, ತಾಂಬೂಲ ದಕ್ಷಿಣೆ ಸಹಿತ ಆಮಾನ್ನದಾನ ಕೊಡಬೇಕು. ಆಚಮನ ಮಾಡಿ, ಪವಿತ್ರ ಬಿಚ್ಚಿ ಹಾಕಬೇಕು.

## ಧನಿಷ್ಠಾಪಂಚಕಾದಿ ಶಾಂತಯಃ

(ಬಲ) **ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ......ಶರ್ಮಣಃ ......ಗೋತ್ರಸ್ಯ ಪ್ರೇತಸ್ಯ ಪಂಚಕನಕ್ಷತ್ರಮರಣಾದಧೋಗತಿದೋಷನಿವಾರಣಪೂರ್ವಕ ಮಮಾಶುಭತ್ವಪರಿಹಾರಾರ್ಥಂ ವಂಶಾರಿಷ್ಟ ನಿವಾರಣಾರ್ಥಂ** (ಬಲ) **ಸಗ್ರಹಮಖಪಂಚಕಶಾಂತಿಮ್ ಆಚಾರ್ಯಮುಖೇನ ಕಾರಯಿಷ್ಯೇ ॥ (ಕುರುಷ್ವ) ॥**

ಐದು ಕಲಶಗಳನ್ನು ಪ್ರತಿಷ್ಠಾಪಿಸಿದ ಪಕ್ಷದಲ್ಲಿ,

ಮಧ್ಯಕಲಶೇ **ಯಮಮ್** । ಪೂರ್ವಕಲಶೇ **ರುದ್ರಮ್** । ದಕ್ಷಿಣಕಲಶೇ **ಅಗ್ನಿಮ್** । ಪಶ್ಚಿಮಕಲಶೇ **ವಿಷ್ಣುಮ್** । ಉತ್ತರೇ **ಇಂದ್ರಮ್** । **ನವಗ್ರಹದೇವತಾಃ** ।

**ವಸುಮ್ । ವರುಣಮ್ । ಅಹಿರ್ಬುಧ್ನ್ಯಮ್ । ಅಜೈಕಪಾದಮ್ । ಪೂಷಣಮ್ । ಪ್ರೇತವಾಹಾಯ ಯಮಮ್ । ಪ್ರೇತಸಖಾಯ ರುದ್ರಮ್ । ಪ್ರೇತಪಾಯ ಅಗ್ನಿಮ್ । ಪ್ರೇತಭೂಮಿಪಾಯ ವಿಷ್ಣುವ್ । ಪ್ರೇತಹರ್ತ್ರೇ ಇಂದ್ರವ್ । ಯಮಂ..... ಚತುರ್ದಶನಾಮಮಂತ್ರೇಣ** ಆವಾಹ್ಯ ಪೂಜಯೇತ್ ॥

(ಕೆಲವರ ಪ್ರಕಾರ ಐದು ಕಲಶ ಪ್ರತಿಷ್ಠಾಪಿಸಿದಲ್ಲಿ– ಮಧ್ಯೇ **ಧರ್ಮರಾಜಮ್** । ಪೂರ್ವೇ **ಮೃತ್ಯುಮ್** । ದಕ್ಷಿಣೇ **ಚಿತ್ರಗುಪ್ತಮ್** । ಪಶ್ಚಿಮೇ **ವರುಣಮ್** । ಉತ್ತರೇ **ಕಾಲಮ್** ॥ ನವಗ್ರಹದೇವತಾದಿ........।]

ಏಳು ಕಲಶ ಪ್ರತಿಷ್ಠಾಪಿಸಿದಲ್ಲಿ–

ಮಧ್ಯೇ– **ಮೃತ್ಯುಮ್** । ಪೂರ್ವೇ– **ಪ್ರಜಾಪತಿಂ, ಮಹೇಂದ್ರಮ್** । ದಕ್ಷಿಣೇ– **ಧರ್ಮರಾಜಂ, ಚಿತ್ರಗುಪ್ತಮ್** । ಪಶ್ಚಿಮೇ– **ವರುಣಮ್** । ಉತ್ತರೇ– **ಕುಬೇರಮ್** ।

ಒಂಬತ್ತು ಕಲಶ ಪ್ರತಿಷ್ಠಾಪಿಸಿದಲ್ಲಿ–

ಮಧ್ಯಕಲಶೇ– **ಮೃತ್ಯುಮ್** । ಪೂರ್ವಾದಿ ಅಷ್ಟದಿಕ್ಷು– **ಇಂದ್ರಾದಿ ದಿಕ್ಪಾಲಕಾನ್** ॥

ಕಲಶಪೂಜೆಯವರು ಕಲಶಕ್ಕೆ **ಯತ್ತೇ ಯಮಮ್, ಪರೇ ಇವಾಂಸಮ್, ಇಮಾ ರುದ್ರಾ, ಅಪ ನಃ ಶೋಶುಚದಘಮ್, ವಿಷ್ಣೋರ್ನುಕಮ್, ಆಶುಃ ಶಿಶಾನೋ, ಶ್ರೀಸೂಕ್ತ.....** ।

–ಇತ್ಯಾದಿ ಮಂತ್ರಗಳಿಂದ ಕಲಶವನ್ನು ಅಭಿಮಂತ್ರಿಸಬೇಕು. ಆಚಾರ್ಯರು ಸಂಕಲ್ಪ ಮಾಡಿ, ಹೋಮವನ್ನು ಪ್ರಾರಂಭ ಮಾಡಬೇಕು. ವರದನಾಮಕ ಅಗ್ನಿಯನ್ನು ಪ್ರತಿಷ್ಠಾಪಿಸಿ ಅನ್ವಾಧಾನ ಮಾಡಬೇಕು.

## ಅನ್ವಾಧಾನಮ್

**ಅಧಿಪ್ರತ್ಯಧಿದೇವತಾಸಹಿತ ಆದಿತ್ಯಾದಿನವಗ್ರಹದೇವತಾಃ ಅಷ್ಟಾಷ್ಟವಾರಂ ಸಮಿದಾಜ್ಯತಿಲೈಃ ಪುನಃ ಧನಿಷ್ಠಾದಿಪಂಚಕನಕ್ಷತ್ರದೇವತಾಃ (ತ್ರಿಪಾದನಕ್ಷತ್ರ, ತ್ರಿಪುಷ್ಕರ, ದ್ವಿಪುಷ್ಕರದೇವತಾಃ) ಪ್ರತ್ಯೇಕಂ ಪ್ರತ್ಯೇಕಮ್ ಅಷ್ಟಾವಿಂಶತಿವಾರಂ ಸಮಿದಾಜ್ಯತಿಲೈಃ ಪುನಃ ಪಂಚದಗ್ಧಪ್ರತಿಮಾದೇವತಾಃ ಅಷ್ಟಾಷ್ಟವಾರಂ ಸಮಿದಾಜ್ಯತಿಲೈಃ ಪುನಃ ಯಮಾದಿಚತುರ್ದಶದೇವತಾಶ್ಚ ಅಷ್ಟಾಷ್ಟವಾರಂ ಸಮಿದಾಜ್ಯತಿಲೈಃ ಮಧ್ಯೇ ಗೃಹ್ಯೋಕ್ತ ತಂತ್ರೇಣ ಆಜ್ಯಶೇಷೇಣ ಸ್ವಿಷ್ಟಕೃತಮಿತ್ಯಾದಿ .....ಯಕ್ಷ್ಯೇ ॥**

ನವಗ್ರಹದೇವತೆಗಳಿಗೆ ಆಹುತಿ ನೀಡಿ, ಅನಂತರ,

ಜ್ಮಯಾ ಅತ್ರ ವಸಿಷ್ಠೋ ವಸವಸ್ತ್ರಿಷ್ಟುಪ್ । ತತ್ತ್ವಾಯಾಮಿ ಶುನಶ್ಶೇಪೋ ವರುಣಸ್ತ್ರಿಷ್ಟುಪ್ । ಅಭಿ ಯೇ ಮಿಥ ಇತ್ಯಸ್ಯ ವಸಿಷ್ಠೋಽಹಿರ್ಬುಧ್ನ್ಯಸ್ತ್ರಿಷ್ಟುಪ್ ।

ಉತ ನ ಇತ್ಯಸ್ಯ ವಸಿಷ್ಠೋಽಜೈಕಪಾತ್ತ್ರಿಷ್ಟುಪ್ । ಪೂಷಾ ಗಾ ಇತ್ಯಸ್ಯ ಭಾರದ್ವಾಜಃ ಪೂಷಾ ಗಾಯತ್ರೀ । ಧನಿಷ್ಠಾದಿಪಂಚನಕ್ಷತ್ರದೇವತಾಪ್ರೀತ್ಯರ್ಥೇ ಹೋಮೇ ವಿನಿಯೋಗಃ ॥

ಓಂ ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜ–ಯಂತ ಶುಭ್ರಾಃ । ಅರ್ವಾಕ್ ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ಸ್ವಾಹಾ ॥ ಧನಿಷ್ಠಾನಕ್ಷತ್ರಾಧಿಪತಿ ವಸವೇದಂ ನ ಮಮ ॥

ಓಂ ತತ್ತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ಸ್ವಾಹಾ ॥ ಶತಭಿಷಾನಕ್ಷತ್ರಾಧಿಪತಿ ವರುಣಾಯ ಇದಂ ನ ಮಮ ॥

ಓಮ್ ಅಭಿ ಯೇ ಮಿಥೋ ವನುಷಃ ಸಪಂತೇ ರಾತಿಂ ದಿವೋ ರಾತಿಷಾಚಃ ಪೃಥಿವ್ಯಾಃ । ಅಹಿರ್ಬುಧ್ನ್ಯ ಉತ ನಃ ಶೃಣೋತು ವರೂತ್ರ್ಯೇಕ ಧೇನುಭಿರ್ನಿ ಪಾತು ಸ್ವಾಹಾ ॥ ಪೂರ್ವಾಭಾದ್ರಾನಕ್ಷತ್ರಾಧಿಪತಿ ಅಹಿರ್ಬುಧ್ನ್ಯಾಯ ಇದಂ ನ ಮಮ ॥

ಓಮ್ ಉತ ನೋಽಹಿರ್ಬುಧ್ನ್ಯಃ ಶೃಣೋತ್ವಜ ಏಕಪಾತ್ ಪೃಥಿವೀ ಸಮುದ್ರಃ । ವಿಶ್ವೇ ದೇವಾ ಋತಾವೃಧೋ ಹುವಾನಾಃ ಸ್ತುತಾ ಮಂತ್ರಾಃ ಕವಿಶಸ್ತಾ ಅವಂತು ಸ್ವಾಹಾ ॥ ಉತ್ತರಾಭಾದ್ರಾನಕ್ಷತ್ರಾಧಿಪತಿ ಅಜೈಕಪದೇದಂ ನ ಮಮ ॥

ಓಂ ಪೂಷಾ ಗಾ ಅನ್ವೇತು ನಃ ಪೂಷಾ ರಕ್ಷತ್ವರ್ವತಃ । ಪೂಷಾ ವಾಜಂ ಸನೋತು ನಃ ಸ್ವಾಹಾ ॥ ರೇವತೀನಕ್ಷತ್ರಾಧಿಪತಿ ಪೂಷ್ಣೇ ಇದಂ ನ ಮಮ ॥

ಪ್ರೇತವಾಹಾಯ ಯಮಂ 'ಯಮಾಯ ಸೋಮಂ' ಮಂತ್ರೇಣ, ಯಮಾಯ ಇದಂ ನ ಮಮ ॥ ಪ್ರೇತಸಖಾಯ ರುದ್ರಂ 'ಕದ್ರುದ್ರಾಯ' ಮಂತ್ರೇಣ ರುದ್ರಾಯ ಇದಂ ನ ಮಮ ॥ ಪ್ರೇತಪಾಯ ಅಗ್ನಿಮ್ 'ಅಪ ನಃ ಶೋಶುಚದಘಮ್', ಮಂತ್ರೇಣ ಅಗ್ನಯ

ಇದಂ ನ ಮಮ ॥ ಪ್ರೇತಭೂಮಿಪಾಯ ವಿಷ್ಣುಮ್ 'ಇದಂ ವಿಷ್ಣುಃ' ಮಂತ್ರೇಣ ವಿಷ್ಣವ ಇದಂ ನ ಮಮ ॥ ಪ್ರೇತಹರ್ತ್ರೇ ಇಂದ್ರಮ್ ॥

ಇಂದ್ರತ್ವೇತಿ ಗಾಥಿನೋ ವಿಶ್ವಾಮಿತ್ರ ಇಂದ್ರೋ ಗಾಯತ್ರೀ ॥

**ಓಮ್ ಇಂದ್ರ ತ್ವಾ ವೃಷಭಂ ವಯಂ ಸುತೇ ಸೋಮೇ ಹವಾಮಹೇ। ಸ ಪಾಹಿ ಮಧ್ವೋ ಅಂಧಸಃ ಸ್ವಾಹಾ ॥ ಇಂದ್ರಾಯ ಇದಂ ನ ಮಮ ॥**

**ಯಮಾಯ ಸ್ವಾಹಾ । ಧರ್ಮರಾಜಾಯ ಸ್ವಾಹಾ । ಮೃತ್ಯವೇ ಸ್ವಾಹಾ । ಅಂತಕಾಯ ಸ್ವಾಹಾ । ವೈವಸ್ವತಾಯ ಸ್ವಾಹಾ । ಕಾಲಾಯ ಸ್ವಾಹಾ । ಸರ್ವಭೂತಕ್ಷಯಾಯ ಸ್ವಾಹಾ । ಔದುಂಬರಾಯ ಸ್ವಾಹಾ । ದಧ್ನಾಯ ಸ್ವಾಹಾ । ನೀಲಾಯ ಸ್ವಾಹಾ । ಪರಮೇಷ್ಠಿನೇ ಸ್ವಾಹಾ । ವೃಕೋದರಾಯ ಸ್ವಾಹಾ । ಚಿತ್ರಾಯ ಸ್ವಾಹಾ । ಚಿತ್ರಗುಪ್ತಾಯ ಸ್ವಾಹಾ ॥**

–ಎಂದು ಪ್ರಧಾನ ಹೋಮದ ಬಳಿಕ ಸ್ಥಂಡಿಲದ ನೈಋತ್ಯಭಾಗದಲ್ಲಿ ನೀರಿನಿಂದ ಚೌಕಾಕಾರದ ಮಂಡಲ ಮಾಡಿ ನವಗ್ರಹಾದಿಶಾಂತಿದೇವತೆಗಳಿಗೆ ಅರಳಿನಿಂದ ಬಲಿಕೊಟ್ಟು ಜ್ಯೇಷ್ಠಕ್ರಿಯಾಕರ್ತೃ ಸೀಯಾಳವನ್ನು ಕೆತ್ತಿ ಅದರ ನೀರನ್ನು ಒಂದು ತಟ್ಟೆಯಲ್ಲಿ ತೆಗೆದು ತನ್ನ ಎದುರು ಒಂದು ತುದಿ ಬಾಳೆಎಲೆಯ ಮೇಲೆ ಸೀಯಾಳದ ಒಳಗೆ ಒಂದು ದೊಂದಿ(ದೀವಟಿಗೆ)ಯನ್ನು ಹಚ್ಚಿಟ್ಟು ಬಲಕೈಯಲ್ಲಿ ಅರಳು ಹಿಡಿದು ಎಡಕೈಯಲ್ಲಿ ಸೀಯಾಳದ ನೀರಿನಿಂದ, ಸೀಯಾಳದ ಒಳಗೆ ಅರಳು ಸಹಿತವಾಗಿ ನವಗ್ರಹಾದಿ ಶಾಂತಿದೇವತೆಗಳಿಗೆ ಪ್ರತಿನಾಮಮಂತ್ರದಿಂದ ತರ್ಪಣ ಕೊಡಬೇಕು.

**ಆದಿತ್ಯಂ ತರ್ಪಯಾಮಿ । ಅಗ್ನಿಂ ತರ್ಪಯಾಮಿ । ರುದ್ರಂ ತರ್ಪಯಾಮಿ । ಸೋಮಂ ತರ್ಪಯಾಮಿ । ಅಪಸ್ತರ್ಪಯಾಮಿ । ಗೌರೀಂ ತರ್ಪಯಾಮಿ । ಅಂಗಾರಕಂ ತರ್ಪಯಾಮಿ । ಪೃಥಿವೀಂ ತರ್ಪಯಾಮಿ । ಸ್ಕಂದಂ ತರ್ಪಯಾಮಿ । ಬುಧಂ ತರ್ಪಯಾಮಿ । ವಿಷ್ಣುಂ ತರ್ಪಯಾಮಿ । ಪುರುಷಂ ತರ್ಪಯಾಮಿ । ಬೃಹಸ್ಪತಿಂ ತರ್ಪಯಾಮಿ । ಇಂದ್ರಂ ತರ್ಪಯಾಮಿ । ಬ್ರಹ್ಮಾಣಂ ತರ್ಪಯಾಮಿ । ಶನಿಂ ತರ್ಪಯಾಮಿ । ಪ್ರಜಾಪತಿಂ ತರ್ಪಯಾಮಿ । ಯಮಂ ತರ್ಪಯಾಮಿ । ರಾಹುಂ ತರ್ಪಯಾಮಿ । ಸರ್ಪಂ ತರ್ಪಯಾಮಿ । ಮೃತ್ಯುಂ ತರ್ಪಯಾಮಿ । ಕೇತುಂ ತರ್ಪಯಾಮಿ । ಬ್ರಹ್ಮಾಣಂ ತರ್ಪಯಾಮಿ । ಚಿತ್ರಗುಪ್ತಂ ತರ್ಪಯಾಮಿ । ವಸೂನ್ ತರ್ಪಯಾಮಿ । ವರುಣಂ ತರ್ಪಯಾಮಿ । ಅಹಿರ್ಬುಧ್ನ್ಯಂ ತರ್ಪಯಾಮಿ । ಅಜೈಕಪದಂ ತರ್ಪಯಾಮಿ । ಪೂಷಣಂ ತರ್ಪಯಾಮಿ ॥**

ಅನಂತರ ಸೀಯಾಳದ ನೀರಿಗೆ ಸ್ವಲ್ಪ ಎಳ್ಳು ಹಾಗೂ ಹಾಲನ್ನು ಸೇರಿಸಿ ದಕ್ಷಿಣಕ್ಕೆ ಮುಖಮಾಡಿ ವಸ್ವಾದಿಗಳಿಗೆ ಹಾಗೂ ಯಮಾದಿಗಳಿಗೆ ತರ್ಪಣ ಕೊಡಬೇಕು.

(ಎಡ) **ಪ್ರೇತವಾಹಾಯ ಯಮಂ ತರ್ಪಯಾಮಿ । ಪ್ರೇತಸಖಾಯ ರುದ್ರಂ**

**ತರ್ಪಯಾಮಿ । ಪ್ರೇತಪಾಯ ಅಗ್ನಿಂ ತರ್ಪಯಾಮಿ । ಪ್ರೇತಭೂಮಿಪಾಯ ವಿಷ್ಣುಂ ತರ್ಪಯಾಮಿ । ಪ್ರೇತಹರ್ತ್ರೇ ಇಂದ್ರಂ ತರ್ಪಯಾಮಿ ॥**

**ಯಮಂ ತರ್ಪಯಾಮಿ । ಧರ್ಮರಾಜಂ ತರ್ಪಯಾಮಿ । ಮೃತ್ಯುಂ ತರ್ಪ–ಯಾಮಿ । ಅಂತಕಂ ತರ್ಪಯಾಮಿ । ವೈವಸ್ವತಂ ತರ್ಪಯಾಮಿ । ಕಾಲಂ ತರ್ಪ–ಯಾಮಿ । ಸರ್ವಭೂತಕ್ಷಯಂ ತರ್ಪಯಾಮಿ । ಔದುಂಬರಂ ತರ್ಪಯಾಮಿ । ದಧ್ನಂ ತರ್ಪಯಾಮಿ । ನೀಲಂ ತರ್ಪಯಾಮಿ । ಪರಮೇಷ್ಠಿನಂ ತರ್ಪಯಾಮಿ । ವೃಕೋದರಂ ತರ್ಪಯಾಮಿ । ಚಿತ್ರಂ ತರ್ಪಯಾಮಿ । ಚಿತ್ರಗುಪ್ತಂ ತರ್ಪಯಾಮಿ ॥ ಅಸ್ಮತ್ಪಿತರಂ ......ಶರ್ಮಾಣಂ .......ಗೋತ್ರಂ ಪ್ರೇತಂ ತರ್ಪಯಾಮಿ ॥**

–ಎಂದು ತರ್ಪಣ ಕೊಟ್ಟು ಆ ದೀವಟಿಗೆ ಸಹಿತಸೀಯಾಳವನ್ನು ಶವವನ್ನು ಮಲಗಿಸಿದ ಸ್ಥಳಕ್ಕೆ **'ತ್ರ್ಯಂಬಕಂ ಯಜಾಮಹೇ...'** ಮಂತ್ರದಿಂದ ಮೂರು ಸುತ್ತು ಅಪ್ರದಕ್ಷಿಣೆಯಾಗಿ ತಿರುಗಿಸಿ ಸೀಯಾಳವನ್ನು ಮೂರು ದಾರಿ ಸೇರುವಲ್ಲಿ ಇಡಬೇಕು. ಆಚಾರ್ಯರು ಸ್ವಿಷ್ಟಕೃತ್ ಹೋಮ ಮಾಡಿ ಉಳಿದ ಕರ್ಮಭಾಗವನ್ನು ಮುಗಿಸಬೇಕು. ಯಜಮಾನನು ಆಚಾರ್ಯರಿಂದ ಕಲಶಪ್ರೋಕ್ಷಣೆ ಮಾಡಿಸಿಕೊಂಡು ಕಂಚಿನಪಾತ್ರೆಯಲ್ಲಿ ತುಪ್ಪ ಹಾಕಿ **'ತ್ರ್ಯಂಬಕಂ ಯಜಾಮಹೇ...'** ಮಂತ್ರದಿಂದ ಮುಖ ನೋಡಿ ಆಜ್ಯದಾನ ಕೊಟ್ಟು ಕೃಷ್ಣಾರ್ಪಣ ಬಿಡಬೇಕು.

* * *

## ತ್ರಿಪಾದನಕ್ಷತ್ರಶಾಂತಿಃ

ನವಗ್ರಹದೇವತೆಗಳಿಗೆ ಆಹುತಿ ಕೊಟ್ಟು–

**ಕೃತ್ತಿಕಾ ನಕ್ಷತ್ರೇ–**

ಅಗ್ನಿಂ ದೂತಮಿತಿ ಮೇಧಾತಿಥಿರಗ್ನಿರ್ಗಾಯತ್ರೀ ॥

**ಓಮ್ ಅಗ್ನಿಂ ದೂತಂ ...... ಸುಕ್ರತುಂ ಸ್ವಾಹಾ ॥ ಕೃತ್ತಿಕಾನಕ್ಷತ್ರಾಭಿಮಾನಿ ದೇವತಾ ಅಗ್ನಯ ಇದಂ ನ ಮಮ ॥**

ಯಮಾಯ ಸೋಮಂ ವೈವಸ್ವತೋ ಯಮೋ ಯಮೋಽನುಷ್ಟುಪ್ ।

**ಓಂ ಯಮಾಯ ಸೋಮಂ ...... ಅರಂಕೃತಃ ಸ್ವಾಹಾ ॥ ಅಧಿದೇವತಾ ಯಮಾಯ ಇದಂ ನ ಮಮ ॥**

ಪ್ರಜಾಪತೇ ಹಿರಣ್ಯಗರ್ಭಃ ಪ್ರಾಜಾಪತ್ಯಃ ಪ್ರಜಾಪತಿಸ್ತ್ರಿಷ್ಟುಪ್ ॥

ಓಂ ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ। ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ ಸ್ವಾಹಾ ॥ ಪ್ರತ್ಯಧಿದೇವತಾ ಪ್ರಜಾಪತಯ ಇದಂ ನ ಮಮ ॥

ಪುನರ್ವಸುನಕ್ಷತ್ರೇ–

ಅದಿತಿರ್ದ್ಯೌರಿತ್ಯಸ್ಯ ರಾಹೂಗಣೋऽದಿತಿಸ್ತ್ರಿಷ್ಟುಪ್ ॥

ಓಮ್ ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ। ವಿಶ್ವೇ ದೇವಾ ಅದಿತಿಃ ಪಂಚಜನಾ ಅದಿತಿರ್ಜಾತಮದಿತಿರ್ಜನಿತ್ವಂ ಸ್ವಾಹಾ॥ ಪುನರ್ವಸುನಕ್ಷತ್ರಾಭಿಮಾನಿದೇವತಾ ಅದಿತಯ ಇದಂ ನ ಮಮ ॥

ಕದ್ರುದ್ರಾಯೇತಿ ಘೌರಃ ಕಾಣ್ವೋ ರುದ್ರೋ ಗಾಯತ್ರೀ ॥

ಓಂ ಕದ್ರುದ್ರಾಯ ಪ್ರಚೇತಸೇ ........ ಹೃದೇ ಸ್ವಾಹಾ॥ ಅಧಿದೇವತಾ ರುದ್ರಾಯ ಇದಂ ನ ಮಮ ॥

ಬಹಸ್ಪತೇ ಗೃತ್ಸಮದೋ ಬೃಹಸ್ಪತಿಸ್ತ್ರಿಷ್ಟುಪ್ ॥

ಓಂ ಬೃಹಸ್ಪತೇ ಅತಿ ಯದರ್ಯೋ ಅರ್ಹಾದ್ದ್ಯುಮದ್ವಿಭಾತಿ ಕ್ರತುಮಜ್ಜನೇಷು । ಯದ್ದೀದಯಚ್ಛವಸ ಋತಪ್ರಜಾತ ತದಸ್ಮಾಸು ದ್ರವಿಣಂ ಧೇಹಿ ಚಿತ್ರಂ ಸ್ವಾಹಾ ॥ ಪ್ರತ್ಯಧಿದೇವತಾ ಬೃಹಸ್ಪತಯ ಇದಂ ನ ಮಮ ॥

ಉತ್ತರಾನಕ್ಷತ್ರೇ–

ಅರ್ಯಮಾಣೋ ಅದಿತಿಃ ಪ್ರಜಾಪತಿರ್ವಿಶ್ವಾಮಿತ್ರೋ ಅರ್ಯಮಾ ತ್ರಿಷ್ಟುಪ್॥

ಓಮ್ ಅರ್ಯಮಾ ಣೋ ಅದಿತಿರ್ಯಜ್ಞಿಯಾಸೋऽದಬ್ಧಾನಿ ವರುಣಸ್ಯ ವ್ರತಾನಿ । ಯುಯೋತ ನೋ ಅನಪತ್ಯಾನಿ ಗಂತೋಃ ಪ್ರಜಾವಾನ್ ನಃ ಪಶುಮಾँ ಅಸ್ತು ಗಾತುಃ ಸ್ವಾಹಾ ॥ ಉತ್ತರಾನಕ್ಷತ್ರಾಭಿಮಾನಿದೇವತಾ ಅರ್ಯಮ್ಣೇ ಇದಂ ನ ಮಮ ॥

ಭಗ ಏವೇತಿ ಮೈತ್ರಾವರುಣಿರ್ವಸಿಷ್ಠೋ ಭಗಸ್ತ್ರಿಷ್ಟುಪ್ ॥

ಓಂ ಭಗ ಏವ ಭಗವಾ ಅಸ್ತು ದೇವಾಸ್ತೇನ ವಯಂ ಭಗವಂತಃ ಸ್ಯಾಮ । ತಂ ತ್ವಾ ಭಗ ಸರ್ವ ಇಜ್ಜೋಹವೀತಿ ಸ ನೋ ಭಗ ಪುರಏತಾ ಭವೇಹ ಸ್ವಾಹಾ ॥ ಅಧಿದೇವತಾ ಭಗಾಯ ಇದಂ ನ ಮಮ ॥

ಉದುತ್ಯಂ ಕಾಣ್ವಃ ಪ್ರಸ್ಕಣ್ವಃ ಸೂರ್ಯೋ ಗಾಯತ್ರೀ ॥

ಓಮ್ ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ಸ್ವಾಹಾ ॥ ಪ್ರತ್ಯಧಿದೇವತಾ ಸೂರ್ಯಾಯ ಇದಂ ನ ಮಮ ॥

ವಿಶಾಖಾನಕ್ಷತ್ರೇ–

ಇಂದ್ರಾಗ್ನೀ ಗಾಥಿನೋ ವಿಶ್ವಾಮಿತ್ರ ಇಂದ್ರಾಗ್ನೀ ಗಾಯತ್ರೀ ॥

ಓಮ್ ಇಂದ್ರಾಗ್ನೀ ಆ ಗತಂ ಸುತಂ ಗೀರ್ಭಿರ್ನಭೋ ವರೇಣ್ಯಮ್ । ಅಸ್ಯ ಪಾತಂ ಧಿಯೇಷಿತಾ ಸ್ವಾಹಾ ॥ ವಿಶಾಖಾನಕ್ಷತ್ರಾಭಿಮಾನಿದೇವತಾ ಇಂದ್ರಾಗ್ನಯ ಇದಂ ನ ಮಮ ॥

ತವ ವಾಯೋ ವ್ಯಶ್ವೋ ವಾಯುರ್ಗಾಯತ್ರೀ ॥

ಓಂ ತವ ವಾಯವೃತಸ್ಪತೇ ತ್ವಷ್ಟುರ್ಜಾಮಾತರದ್ಭುತ । ಅವಾಂಸ್ಯಾ ವೃಣೀಮಹೇ ಸ್ವಾಹಾ ॥ ಅಧಿದೇವತಾ ವಾಯವ ಇದಂ ನ ಮಮ ॥

ಮಿತ್ರೋಜನಾನಿತ್ಯಸ್ಯ ಗಾಥಿನೋ ವಿಶ್ವಾಮಿತ್ರೋ ಮಿತ್ರಸ್ತ್ರಿಷ್ಟುಪ್ ॥

ಓಂ ಮಿತ್ರೋ ಜನಾನ್ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀ ಮುತ ದ್ಯಾಮ್ । ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ಸ್ವಾಹಾ ॥ ಪ್ರತ್ಯಧಿದೇವತಾ ಮಿತ್ರಾಯ ಇದಂ ನ ಮಮ ॥

**ಉತ್ತರಾಷಾಢಾನಕ್ಷತ್ರೇ-**

ವಿಶ್ವೇದೇವಾಸ ಇತ್ಯಸ್ಯ ಶೌನಕೋ ಗೃತ್ಸಮದೋ ಭಾರ್ಗವೋ ವಿಶ್ವೇದೇವಾ ಗಾಯತ್ರೀ ॥

**ಓಂ ವಿಶ್ವೇ ದೇವಾಸ ಆ ಗತ ಶೃಣುತಾ ಮ ಇಮಂ ಹವಮ್ । ಏದಂ ಬರ್ಹಿರ್ನಿ ಷೀದತ ಸ್ವಾಹಾ ॥ ಉತ್ತರಾನಕ್ಷತ್ರಾಭಿಮಾನಿದೇವತಾ ವಿಶ್ವೇಭ್ಯೋ ದೇವೇಭ್ಯ ಇದಂ ನ ಮಮ ॥**

ಯತ್ಕಿಂಚೇದಮಿತ್ಯಸ್ಯ ಮೈತ್ರಾವರುಣಿರ್ವಸಿಷ್ಠೋ ವರುಣೋ ಜಗತೀ ॥

**ಓಂ ಯತ್ಕಿಂ ಚೇದಂ ವರುಣ ದೈವ್ಯೇ ಜನೇಽಭಿದ್ರೋಹಂ ಮನುಷ್ಯಾ೩ಶ್ಚ ರಾಮಸಿ । ಅಚಿತ್ತೀ ಯತ್ತವ ಧರ್ಮಾ ಯುಯೋಪಿಮ ಮಾ ನಸ್ತಸ್ಮಾದೇನಸೋ ದೇವ ರೀರಿಷಃ ಸ್ವಾಹಾ ॥ ಅಧಿದೇವತಾ ವರುಣಾಯ ಇದಂ ನ ಮಮ ॥**

ಇದಂ ವಿಷ್ಣುರಿತ್ಯಸ್ಯಾಃ ಮೇಧಾತಿಥಿರ್ವಿಷ್ಣುರ್ಗಾಯತ್ರೀ ॥

**ಓಮ್ ಇದಂ ವಿಷ್ಣುರ್ವಿ ....... ಪಾಂಸುರೇ ಸ್ವಾಹಾ ॥ ಪ್ರತ್ಯಧಿದೇವತಾ ವಿಷ್ಣವ ಇದಂ ನ ಮಮ ॥**

**ಪೂರ್ವಾಭಾದ್ರಾನಕ್ಷತ್ರೇ-**

ಸಮುದ್ರಸಿಂಧುರಿತ್ಯಸ್ಯ ವಾಸಕ್ರೋ ವಸುಕರ್ಣೋಽಜೈಕಪಾಜ್ಜಗತೀ ॥

**ಓಂ ಸಮುದ್ರಃ ಸಿಂಧೂ ರಜೋ ಅಂತರಿಕ್ಷಮಜ ಏಕಪಾತ್ತನಯಿತ್ನು ರರ್ಣವಃ । ಅಹಿರ್ಬುಧ್ನ್ಯಃ ಶೃಣವದ್ವಚಾಂಸಿ ಮೇ ವಿಶ್ವೇ ದೇವಾಸ ಉತ ಸೂರಯೋ ಮಮ ಸ್ವಾಹಾ ॥ ಪೂರ್ವಾಭಾದ್ರನಕ್ಷತ್ರಾಭಿಮಾನಿದೇವತಾ ಅಜೈಕಪದ ಇದಂ ನ ಮಮ ॥**

ಇಮಂ ಮೇ ವರುಣಮಿತಿ ಅಜೀಗರ್ತಿಃ ಶುನಃಶೇಪೋ ವರುಣೋ ಗಾಯತ್ರೀ ॥

**ಓಮ್ ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಳಯ ।**

**ತ್ವಾಮವಸ್ಯುರಾ ಚಕೇ ಸ್ವಾಹಾ ॥ ಅಧಿದೇವತಾ ವರುಣಾಯ ಇದಂ ನ ಮಮ ॥**

ಅಭಿ ಯೇ ಮಿಥ ಇತ್ಯಸ್ಯ ಮೈತ್ರಾವರುಣಿರ್ವಸಿಷ್ಠೋಽಹಿರ್ಬುಧ್ನ್ಯಸ್ತ್ರಿಷ್ಟುಪ್ ॥

**ಓಮ್ ಅಭಿ ಯೇ ಮಿಥೋ .......... ಪಾತು ಸ್ವಾಹಾ ॥ ಪ್ರತ್ಯಧಿದೇವತಾ ಅಹಿರ್ಬುಧ್ನ್ಯಾಯ ಇದಂ ನ ಮಮ ॥**

**ಪ್ರೇತವಾಹಾಯ ಯಮಾಯ ಸ್ವಾಹಾ । ಪ್ರೇತಸಖಾಯ ರುದ್ರಾಯ ಸ್ವಾಹಾ । ಪ್ರೇತಪಾಯ ಅಗ್ನಯೇ ಸ್ವಾಹಾ ॥**

**ಯಮಾದಿ ದ್ವಾದಶ ನಾಮ ಮಂತ್ರೈಃ ॥**

ಪ್ರಧಾನಹೋಮದ ಬಳಿಕ ಹಿಂದೆ ಪಂಚಕಶಾಂತಿಯ ಕ್ರಮದಂತೆ ಅರಳಿನಿಂದ ನವಗ್ರಹರಿಗೆ ಬಲಿ ಕೊಟ್ಟು ನವಗ್ರಹರಿಗೆ, ತ್ರಿಪಾದನಕ್ಷತ್ರದೇವತೆಗಳಿಗೆ ಹಾಗೂ ಯಮನ ಹದಿನಾಲ್ಕು ನಾಮಗಳಿಂದ ಹಾಗೂ ಪ್ರೇತಕ್ಕೆ ತರ್ಪಣ ಕೊಟ್ಟು ಅನಂತರ ದೋಷಪ್ರಾಯಶ್ಚಿತ್ತಕ್ಕಾಗಿ ಹಿರಣ್ಯದಾನ ಕೊಡುವುದು.

## ದ್ವಿಪಾದ ನಕ್ಷತ್ರಶಾಂತಿಃ

ನವಗ್ರಹದೇವತೆಗಳಿಗೆ ಆಹುತಿಕೊಟ್ಟು,

**ಮೃಗಶೀರ್ಷನಕ್ಷತ್ರಮರಣೇ–**

ಆಪ್ಯಾಯಸ್ವೇತಿ ಪವಮಾನಃ ಸೋಮೋ ಗಾಯತ್ರೀ ।

**ಓಮ್ ಆ ಪ್ಯಾಯಸ್ವ ........ ಸಂಗಥೇ ಸ್ವಾಹಾ ॥ ಮೃಗಶೀರ್ಷನಕ್ಷತ್ರದೇವತಾ ಸೋಮಾಯೇದಂ ನ ಮಮ ॥**

**ಚಿತ್ರಾನಕ್ಷತ್ರಮರಣೇ–**

ಚಿತ್ರಂ ದೇವಾನಾಮಿತಿ ಕುತ್ಸಃ ಸೂರ್ಯಸ್ತ್ರಿಷ್ಟುಪ್ ।

**ಓಂ ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ಸ್ವಾಹಾ ॥ ಚಿತ್ರಾನಕ್ಷತ್ರ ದೇವತಾ ಸೂರ್ಯಾಯೇದಂ ನ ಮಮ ॥**

**ಧನಿಷ್ಠಾ ನಕ್ಷತ್ರಮರಣೇ-**

ಜ್ಮಯಾ ಅತ್ರ ವಸಿಷ್ಠೋ ವಸವಸ್ತ್ರಿಷ್ಟುಪ್ ।

**ಓಂ ಜ್ಮಯಾ ಅತ್ರ ವಸವೋ ........ ಅಸ್ಯ ಸ್ವಾಹಾ ॥ ವಸುಭ್ಯ ಇದಂ ನ ಮಮ ॥ ಪ್ರೇತವಾಹಾಯ ಯಮಾಯ ಸ್ವಾಹಾ ॥ ಪ್ರೇತಸಖಾಯ ರುದ್ರಾಯ ಸ್ವಾಹಾ ॥**

**ಯಮಾದಿ ಚತುರ್ದಶಮಂತ್ರೈಃ ಪ್ರಧಾನ ಆಹುತಯಃ ॥**

ಬಳಿಕ ನವಗ್ರಹರಿಗೆ ಅರಳಿನಿಂದ ಬಲಿ ಕೊಟ್ಟು ಹೋಮ. ದೇವತೆಗಳಿಗೆ ಹಾಗೂ ಪ್ರೇತಕ್ಕೆ ತರ್ಪಣ ಕೊಟ್ಟು **ಗೋದಾನ** ಇಲ್ಲವೇ ಪ್ರತ್ಯಾಮ್ನಾಯ ಸುವರ್ಣದಾನ ಕೊಡಬೇಕು.

## ದ್ವಿಪುಷ್ಕರಶಾಂತಿಃ - ತ್ರಿಪುಷ್ಕರಶಾಂತಿಃ

ಬಿದಿಗೆ, ಸಪ್ತಮಿ, ದ್ವಾದಶಿ ಇವು **ಭದ್ರಾತಿಥಿಗಳು** ಭಾನು, ಭೌಮ, ಮಂದವಾಸರ ಇವು **ದುಷ್ಟವಾರಗಳು** ಹಾಗೂ **ತ್ರಿಪಾದನಕ್ಷತ್ರಗಳು** -ಇವುಗಳಲ್ಲಿ ಮೂರು ಸೇರಿದರೆ ತ್ರಿಪುಷ್ಕರ. ಮೂರರಲ್ಲಿ ಎರಡು ಸೇರಿದರೆ ದ್ವಿಪುಷ್ಕರ.

ನವಗ್ರಹದೇವತೆಗಳನ್ನು, ಪ್ರಧಾನ ಶಾಂತಿದೇವತೆಯನ್ನು ಹಾಗೂ **ಯಮ, ರುದ್ರ, ಇಂದ್ರ, ಕುಬೇರ, ಪ್ರೇತವಾಹ, ಪ್ರೇತಸಖ, (ತ್ರಿಪುಷ್ಕರದಲ್ಲಿ ಪ್ರೇತಪನನ್ನು)** ಹಾಗೂ **ಯಮಾದಿ ಚತುರ್ದಶ ದೇವತೆಗಳನ್ನು** ಆವಾಹಿಸಬೇಕು. ಪ್ರಧಾನಹೋಮದ ಬಳಿಕ ನವಗ್ರಹರಿಗೆ, ಅರಳಿನಿಂದ ಬಲಿ ಇಟ್ಟು ಪ್ರಧಾನದೇವತೆಗಳಿಗೆ- **ಪ್ರೇತವಾಹಾಯ । ಪ್ರೇತಸಖಾಯ । (ತ್ರಿಪುಷ್ಕರೇ ಪ್ರೇತಪಃ)** ಹಾಗೂ ಪ್ರೇತಕ್ಕೆ ತರ್ಪಣ ಕೊಟ್ಟು **ಸುವರ್ಣದಾನ** ಕೊಡುವುದು.

**ದ್ವಿತೀಯಾತಿಥಿಮರಣೇ-**

ಇಹ ತ್ವಷ್ಟಾರಮಿತಿ ಮೇಧಾತಿಥಿಃ ಕಾಣ್ವಃ ತ್ವಷ್ಟಾ ಗಾಯತ್ರೀ ॥

**ಓಮ್ ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪಹ್ವಯೇ । ಅಸ್ಮಾಕಮಸ್ತು ಕೇವಲಃ ಸ್ವಾಹಾ ॥ ದ್ವಿತೀಯಾತಿಥಿದೇವತಾ ತ್ವಷ್ಟ್ರ ಇದಂ ನ ಮಮ ॥**

**ಸಪ್ತಮೀತಿಥಿಮರಣೇ-**

ಉದುತ್ಯಂ ಪ್ರಸ್ಕಣ್ವಃ ಸೂರ್ಯೋ ಗಾಯತ್ರೀ ॥

ಓಮ್ ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ಸ್ವಾಹಾ ॥ ಸಪ್ತಮಿತಿಥಿದೇವತಾಸೂರ್ಯಾಯ ಇದಂ ನ ಮಮ ॥

ದ್ವಾದಶೀತಿಥಿಮರಣೇ–

ಓಮ್ ಇದಂ ವಿಷ್ಣುರ್ವಿ........... ಪಾಂಸುರೇ ಸ್ವಾಹಾ ॥ ದ್ವಾದಶೀತಿಥಿದೇವತಾ ವಿಷ್ಣವ ಇದಂ ನ ಮಮ ॥

ಭಾನುವಾಸರಮರಣೇ–

ಓಂ ಕದ್ರುದ್ರಾಯ ............ ಹೃದೇ ಸ್ವಾಹಾ ॥ ಭಾನುವಾಸರದೇವತಾ ರುದ್ರಾಯ ಇದಂ ನ ಮಮ ॥

ಭೌಮವಾಸರಮರಣೇ–

ಕುಮಾರಂ ಮಾತೇತಿ ಕುಮಾರ ಆತ್ರೇಯಃ ಸ್ಕಂದಸ್ತ್ರಿಷ್ಟುಪ್ ॥

ಓಂ ಕುಮಾರಂ ಮಾತಾ ಯುವತಿಃ ಸಮುಬ್ಧಂ ಗುಹಾ ಬಿಭರ್ತಿ ನ ದದಾತಿ ಪಿತ್ರೇ । ಅನೀಕಮಸ್ಯ ನ ಮಿನಜ್ಜನಾಸಃ ಪುರಃ ಪಶ್ಯಂತಿ ನಿಹಿತಮರತೌ ಸ್ವಾಹಾ ॥ ಭೌಮವಾಸರದೇವತಾ ಷಣ್ಮುಖಾಯ ಇದಂ ನ ಮಮ ॥

ಶುಕ್ರವಾಸರಮರಣೇ–

ಇಂದ್ರಶ್ರೇಷ್ಠಾನಿ ಗೃತ್ಸಮದ ಇಂದ್ರಸ್ತ್ರಿಷ್ಟುಪ್ ॥

ಓಮ್ ಇಂದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ ಚಿತ್ತಿಂ ದಕ್ಷಸ್ಯ ಸುಭಗತ್ವಮಸ್ಮೇ । ಪೋಷಂ ರಯೀಣಾಮರಿಷ್ಟಿಂ ತನೂನಾಂ ಸ್ವಾದ್ಮಾನಂ ವಾಚಃ ಸುದಿನತ್ವ ಮಹ್ನಾಂ ಸ್ವಾಹಾ ॥ ಶುಕ್ರವಾಸರಾಧಿಪತಿ ಇಂದ್ರಾಯ ಇದಂ ನ ಮಮ ॥

**ಮಂದವಾಸರಮರಣೇ–**

ಪರೇಯಿವಾಂಸಮಿತಿ ವೈವಸ್ವತೋ ಯಮೋ ಯಮಸ್ತ್ರಿಷ್ಟುಪ್ ॥

**ಓಂ ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನು–ಪಸ್ಪಶಾನಮ್ । ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ಸ್ವಾಹಾ ॥ ಮಂದವಾಸರಾಧಿಪತಿ ಯಮಾಯ ಇದಂ ನ ಮಮ ॥**

ಭದ್ರಾತಿಥಿದೋಷಪರಿಹಾರಕ್ಕೆ **ಭೂದಾನ,** ಇಲ್ಲವೇ ಹಿರಣ್ಯದಾನ ಕೊಡಬೇಕು. ದುಷ್ಟದಿನಮರಣದೋಷಪರಿಹಾರಕ್ಕೆ **ವಸ್ತ್ರದಾನ** ಕೊಡಬೇಕು ಹಾಗೂ ತ್ರಿಪುಷ್ಕರ ದ್ವಿಪುಷ್ಕರದೋಷನಿವಾರಣೆಗೆ **ಹಿರಣ್ಯದಾನ** ಕೊಡಬೇಕು.

**ನಂದಾರಿಕ್ತತಿಥೌ ಮರಣಶಾಂತಿಃ**

**೧–೬–೧೧ ನಂದಃ । ೪–೯–೧೪ ರಿಕ್ತಾಃ ದೋಷಪರಿಹಾರಕ್ಕೆ ಧಾನ್ಯದಾನ ಕೊಡಬೇಕು.**

## ವೃಷೋತ್ಸರ್ಗಃ

ಆಚಾರ್ಯರು **'ಯಜಮಾನಸ್ಯ ಪಿತುಃ .... ಪ್ರೇತಸ್ಯ ಅಂಧತ್ವ ಮೂಕತ್ವ ಬಧಿರತ್ವ ಪೈಶಾಚತ್ವನಿವಾರಣಪೂರ್ವಕ ಅಕ್ಷಯ್ಯಪುಣ್ಯಲೋಕಾವಾಪ್ತ್ಯರ್ಥಂ ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್ ವೃಷೋತ್ಸರ್ಗ ಹೋಮಾಖ್ಯಂ ಕರ್ಮ ಕರಿಷ್ಯೇ ॥ (ಕುರುಷ್ವ) ॥** ಎಂದು ಸಂಕಲ್ಪ ಮಾಡಿ ಇತರ ಪುರೋಹಿತರಿಂದ ಕಲಶಸ್ಥಾನದಲ್ಲಿ ಎರಡು ಕಲಶಪ್ರತಿಷ್ಠೆ ಮಾಡಿಸಬೇಕು. ಹಾಗೂ ರುದ್ರಪಾರಾಯಣ ಮಾಡಿಸಬೇಕು. ಆಚಾರ್ಯರು ಹೋಮ ಪ್ರಾರಂಭ ಮಾಡಬೇಕು. **ಅಧ್ವರ** ಹೆಸರಿನ ಅಗ್ನಿಯನ್ನು ಪ್ರತಿಷ್ಠಾಪಿಸಿ ಅನ್ವಾಧಾನ ಮಾಡಬೇಕು.

ಅಗ್ನೇಯಮಿತಿ ಮಧುಚ್ಛಂದಃ ವೈಶ್ವಾಮಿತ್ರೋ ಅಗ್ನಿರ್ಗಾಯತ್ರೀ । ಆವಾಹನಾರ್ಥೇ ವಿನಿಯೋಗಃ ॥

**ಓಮ್ ಅಗ್ನೇಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಸ ಇದ್ದೇ–ವೇಷು ಗಚ್ಛತಿ ॥ ಭೂರ್ಭುವಃಸ್ವಃ । ಅಧ್ವರನಾಮಾನಮಗ್ನಿಂ ಪ್ರತಿಷ್ಠಾಪಯಾಮಿ ॥**

**ಅನ್ವಾಧಾನಮ್**

**ಅಸ್ಮಿನ್ನನ್ವಾಹಿತೇಽಗ್ನೌ ಪ್ರಧಾನದೇವತಾಂ ರುದ್ರಂ ಚರುಣಾ (ವ್ರೀಹಿಮಿಶ್ರ ಚರುಣಾ), ಸೋಮಂ ಪಾಯಸೇನ, ಇಂದ್ರಂ ಯಾವಕಚೂರ್ಣೈಃ ಏಕೈಕವಾರಂ ಮಧ್ಯೇ ಗೃಹ್ಯೋಕ್ತತಂತ್ರೇಣ, ಚರುತ್ರಯಶೇಷೇಣ ಸ್ವಿಷ್ಟಕೃತಂ ಯಕ್ಷ್ಯೇ ॥**

ಪರಿಸಮೂಹನಾದಿಗಳನ್ನು ಮಾಡಿ ಪ್ರಧಾನ ಹೋಮಮಾಡಬೇಕು.

ಕದ್ರುದ್ರಾಯೇತಿ ಘೌರ ಕಣ್ವೋ ರುದ್ರೋ ಗಾಯತ್ರೀ । (ವ್ರೀಹಿಮಿಶ್ರಚರು) ಚರುಹೋಮೇ ವಿನಿಯೋಗಃ ॥

**ಓಂ ಕದ್ರುದ್ರಾಯ ಪ್ರಚೇತಸೇ ಮೀಹ್ಳುಷ್ಟಮಾಯ ತವ್ಯಸೇ । ವೋಚೇಮ ಶಂತಮಂ ಹೃದೇ ॥ ರುದ್ರಾಯೇದಂ ನ ಮಮ ॥**

ಸೋಮೋ ಧೇನುಮಿತ್ಯಸ್ಯ ಗೌತಮಃ ಸೋಮಸ್ತ್ರಿಷ್ಟುಪ್ । ಪಾಯಸ ಹೋಮೇ ವಿನಿಯೋಗಃ ॥

**ಓಂ ಸೋಮೋ ಧೇನುಂ ಸೋಮೋ ಅರ್ವಂತಮಾಶುಂ ಸೋಮೋ ವೀರಂ ಕರ್ಮಣ್ಯಂ ದದಾತಿ । ಸಾದನ್ಯಂ ವಿದಥ್ಯಂ ಸಭೇಯಂ ಪಿತೃಶ್ರವಣಂ ಯೋ ದದಾಶದಸ್ಮೈ ಸ್ವಾಹಾ ॥ ಸೋಮಾಯೇದಂ ನ ಮಮ ॥**

ಇಂದ್ರಂ ವೋ ಮಧುಚ್ಛಂದಾ ಇಂದ್ರೋ ಗಾಯತ್ರೀ । ಯಾವಕಹೋಮೇ ವಿನಿಯೋಗಃ ॥

**ಓಮ್ ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ । ಅಸ್ಮಾಕಮಸ್ತು ಕೇವಲಃ ಸ್ವಾಹಾ ॥ ಇಂದ್ರಾಯೇದಂ ನ ಮಮ ॥**

ವ್ಯಾಹೃತಿ ಮಾಡಿ ಮೂರು ಹೋಮದ್ರವ್ಯಗಳನ್ನು ಒಟ್ಟು ಮಾಡಿ ಎರಡು ಕರುಗಳಿಗೆ ಬೇರೆ ತೆಗೆದಿಟ್ಟು ಉಳಿದದ್ದಕ್ಕೆ ಅಭಿಘಾರಮಾಡಿ, ಸ್ವಿಷ್ಟಕೃತ್ ಹೋಮ ಮಾಡಬೇಕು.

## ವೃಷಭಪೂಜಾ

ಯಜಮಾನನು ಒಂದು ಗಂಡು ಕರು, ಒಂದು ಹೆಣ್ಣು ಕರುಗಳನ್ನು ಕರೆತಂದು (ವ್ಯವಸ್ಥೆ ಇಲ್ಲದಿದ್ದರೆ ಅಕ್ಕಿಹಿಟ್ಟಿನಿಂದ ಒಂದು ಗಂಡುಕರು ಒಂದು ಹೆಣ್ಣುಕರುವಿನ

ಆಕೃತಿಯನ್ನು ಮಾಡಿ ಇಲ್ಲವೇ ನಾಲ್ಕು ಎಳೆಯ ಕೂರ್ಚದಲ್ಲೂ ಮಾಡಬಹುದು.) ಪಶ್ಚಿಮಕ್ಕೆ ಮುಖಮಾಡಿ ನಿಲ್ಲಿಸಿ, ಕಾಲುಗಳಿಗೆ ನೀರು ಹಾಕಿ, ಕೈಮುಗಿದು-



ಓಂ ಯದ್ಗರ್ಜನಶ್ರವಣತಃ ಕ್ಷಣದಾಚರೀಣಾಂ
ಸದ್ಯಃ ಕ್ಷಯಂತಿ ವಿಗತಾಸವ ಏವ ಗರ್ಭಾಃ ।
ತಂ ಸೌರಭೇಯಮತಿಕೋಮಲವಜ್ರಕಾಯಂ
ಮಧ್ಯೇಶಯಂ ವೃಷಭರಾಜಮನಂತವೀರ್ಯಮ್ ॥

-ಎಂದು ಪ್ರಾರ್ಥಿಸಬೇಕು. ಅನಂತರ ಯಜಮಾನನು ವೃಷವತ್ಸತರೀಪೂಜೆಯನ್ನು ಮಾಡಬೇಕು.

ಅದ್ಯ ಪೂರ್ವೋಚ್ಚರಿತ ........ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್ (ಎಡ) ಅಸ್ಮತ್ಪಿತುಃ ....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಬಾಲ್ಯೇ ಕೌಮಾರೇ ಪೌಗಂಡೇ ಯೌವನೇ ವಾರ್ಧಕ್ಯೇ ಕೃತಂ ಯತ್ಪಾಪಂ ತತ್ಪಾಪಕ್ಷಯಪೂರ್ವಕ ಉತ್ತಮಲೋಕಾವಾಪ್ತ್ಯರ್ಥಂ ವೃಷೋತ್ಸರ್ಗಹೋಮ ಸಂಪೂರ್ಣಫಲಪ್ರಾಪ್ತ್ಯರ್ಥಂ ಚ (ಬಲ) ಉಮಾಮಹೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಪ್ರೀತ್ಯರ್ಥಂ ವೃಷವತ್ಸತರೀಪೂಜಾಂ ಕರಿಷ್ಯೇ ॥ -ಎಂದು ಸಂಕಲ್ಪಿಸಿ, ನವಶಕ್ತಿಪೂಜಾಂ ಕರಿಷ್ಯೇ ॥

ಉಗ್ರಾ ಚ ಕುಲಿಶಾ ಚೈವ ನಕುಲೀ ಭೂತಿರೇವ ಚ ।
ಹುಂಕಾರೀ ಉಗ್ರವೀರ್ಯಾ ಚ ದಂಡೀ ಶಕ್ತಿಸ್ತಥೈವ ಚ ॥

-ಎಂದು ಪ್ರಾರ್ಥಿಸಿ, ವೃಷವತ್ಸತರೀಭ್ಯಾಂ ನಮಃ । ಧ್ಯಾಯಾಮಿ ॥

ಈಶ ಋಷಿಃ । ಗಾಯತ್ರೀ ಛಂದಃ । ವೃಷೋ ದೇವತಾ । ಆವಾಹನಾರ್ಥೇ ವಿನಿಯೋಗಃ ॥

ಹುಂಭಾರವಕ್ಷುಭಿತವೈತ್ಯಕುಲಂ ವೃಷೇಂದ್ರ-
ಮುತ್ತಂಭಿತಶ್ರುತಿಪುಟಂ ನಿಶಿತೋರ್ಧ್ವಶೃಂಗಮ್ ।
ಶ್ವೇತಾದ್ರಿಸನ್ನಿಭವಿಶಾಲಮುದಾರಘೋಣಂ
ಸಂಚಿಂತಯೇತ್ಪೃಥುಲಕೂಬರಹಾರಚಿಹ್ನಮ್ ॥

–ಎಂದು ಪ್ರಾರ್ಥಿಸಿ ಅಕ್ಕಿ ಹಿಡಿದು,

**ತೀಕ್ಷ್ಣಶೃಂಗಾಯ ವಿದ್ಮಹೇ ವೇದಪಾದಾಯ ಧೀಮಹಿ । ತನ್ನೋ ವೃಷಃ ಪ್ರಚೋದಯಾತ್** ॥ ಎಂದು ಆವಾಹಿಸಿ,

**ಅಂಗನ್ಯಾಸಃ**

**ಶೃಂಗಯೋಃ ಬ್ರಹ್ಮವಿಷ್ಣೂ ಆವಾಹಯಾಮಿ । ಅಗ್ರಯೋಃ ಸರ್ವತೀರ್ಥದೇವತಾ ಆವಾಹಯಾಮಿ । ಲಲಾಟೇ ಮಹಾದೇವಮಾವಾಹಯಾಮಿ । ಅಗ್ರೇ ಮಹಾದೇವೀ–ಮಾವಾಹಯಾಮಿ । ನಾಸಿಕಾಯಾಂ ಷಣ್ಮುಖಮಾವಾಹಯಾಮಿ । ಕರ್ಣಯೋಃ ಅಶ್ವಿನೌ ಆವಾಹಯಾಮಿ । ಚಕ್ಷುಷೋಃ ಶಶಿಭಾಸ್ಕರೌ ಆವಾಹಯಾಮಿ । ದಂತೇಷು ವಾಯುಮಾವಾಹಯಾಮಿ । ಜಿಹ್ವಾಯಾಂ ವರುಣಮಾವಾಹಯಾಮಿ । ಹೂಂಕಾರೇ ಸರಸ್ವತೀಮಾವಾಹಯಾಮಿ । ಗಂಡಯೋಃ ಯಮದಕ್ಷೌ ಆವಾಹಯಾಮಿ । ಓಷ್ಠಯೋಃ ಸಂಧ್ಯಾದ್ವಯಮಾವಾಹಯಾಮಿ । ಗ್ರೀವಾಯಾಂ ಇಂದ್ರಮಾವಾಹಯಾಮಿ । ಕುಕ್ಷಿದೇಶೇ ರಕ್ಷಾಂಸಿ ಆವಾಹಯಾಮಿ । ಉರಸಿ ಸಾಧ್ಯಾನ್ ಆವಾಹಯಾಮಿ । ಚತುಃಪಾದೇಷು ಧರ್ಮಜ್ಞಾನವೈರಾಗ್ಯೈಶ್ವರ್ಯಾನ್ ಆವಾಹಯಾಮಿ । ಖುರಮಧ್ಯೇ ಗಂಧರ್ವಮಾ–ವಾಹಯಾಮಿ । ಖುರಾಗ್ರೇ ಪನ್ನಗಾನ್ ಆವಾಹಯಾಮಿ । ಖುರಪಾರ್ಶ್ವೇ ಅಪ್ಸರಸ ಆವಾಹಯಾಮಿ । ಪೃಷ್ಠೇ ಏಕಾದಶರುದ್ರಾನ್ ಆವಾಹಯಾಮಿ । ಸರ್ವ ಸಂಧಿಷು ವಸೂನ್ ಆವಾಹಯಾಮಿ । ಶ್ರೋಣಿತಟೇ ಪಿತೄನ್ ಆವಾಹಯಾಮಿ । ಭಾಲೇ ಆದಿತ್ಯಾನ್ ಆವಾಹಯಾಮಿ । ಗೋಮೂತ್ರೇ ಗಂಗಾಮಾವಾಹಯಾಮಿ । ಉದರೇ ಪೃಥಿವೀಮಾವಾಹಯಾಮಿ । ಲಾಂಗೂಲೇ ಸೋಮಮಾವಾಹಯಾಮಿ । ರೋಮಸು ತ್ರಯಸ್ತ್ರಿಂಶತ್ಕೋಟಿದೇವತಾ ಆವಾಹಯಾಮಿ** ॥ –ಎಂದು ಹೇಳಿ ಆವಾಹನೆ ಮಾಡಿ,

**ಮಂತ್ರಾಂಗನ್ಯಾಸಃ**

ಇಷೇತ್ವೋರ್ಜೇತ್ವಾ ಮೂರ್ಧ್ನೇ ನಮಃ ।
ಇಮಾರುದ್ರಾಯ ಸ್ಥಿರಧನ್ವನೇ ಶಶಾಂಕಾಯ ನಮಃ ।
ನಮಸ್ತೇ ರುದ್ರಮನ್ಯವೇ ಚಕ್ರಾಂಗಾಯ ನಮಃ ।
ಸಹಸ್ರಾಣಿ ಸಹಸ್ರಧಾ ಲಲಾಟಾಯ ನಮಃ ।
ವಿಭ್ರಾಡ್ ಬೃಹತ್ಪಿಬತು ದಕ್ಷಿಣನೇತ್ರಾಯ ನಮಃ ।
ತ್ರ್ಯಂಬಕಂ ಯಜಾಮಹೇ ವಾಮನೇತ್ರಾಯ ನಮಃ ।
ಮಾ ನಸ್ತೋಕೇ ನಾಸಿಕಾಯೈ ನಮಃ ।
ಅವತತ್ಯಧನುಃ ಮುಖಾಯ ನಮಃ ।

ನೀಲಗ್ರೀವದ್ವಯಂ ಕಂಠಾಯ ನಮಃ ।
ಮರ್ಮಾಣಿ ತೇ ಬಾಹುಮೂಲಾಭ್ಯಾಂ ನಮಃ ।
ಸಮಿಧಾಗ್ನಿಂ ಬಾಹುಭ್ಯಾಂ ನಮಃ ।
ನಮೋ ವಃ ಕಿರಿಕೇಭ್ಯೋ ಹೃದಯಾಯ ನಮಃ ।
ಹಿರಣ್ಯಗರ್ಭಃ ಸಮನಾಭ್ಯೈ ನಮಃ ।
ಮೀಢುಷ್ಟಮ ಕಂಠಾಯೈ ನಮ: ।
ಮಾ ನೋ ಮಹಾಂತಮ್ ಊರುಭ್ಯಾಂ ನಮಃ ।
ಉದುತ್ಯಂ ಜಾತ ಜಂಘಾಭ್ಯಾಂ ನಮಃ ।
ಇಮಾ ರುದ್ರಾಯ ಜಾನುಭ್ಯಾಂ ನಮಃ ।
ರಕ್ಷೋಹಣಂ ಗುದಾಯ ನಮಃ ।
ವೃಷ್ಣಸ್ತೇವೃಷ್ಣ್ಯಂ ಲಿಂಗಾಯ ನಮಃ ।
ಋಷಭಂ ಮಾ ಪುಚ್ಛಾಯ ನಮಃ ।
ತ್ರಿಪಾದೂರ್ಧ್ವ ಖುರೇಭ್ಯೋ ನಮಃ ॥ –ಎಂದು ಮಂತ್ರಾಂಗನ್ಯಾಸ ಮಾಡಿ,

ಶಿವಸ್ತ್ವಷ್ಟಾ ಇತಿ ವಸುಶ್ರುತ ಆತ್ರೇಯಃ ತ್ವಷ್ಟಾ ಗಾಯತ್ರೀ ॥ ಸರ್ವೋಪಚಾರಾರ್ಥೇ ವಿನಿಯೋಗಃ ॥

ಓಂ ಶಿವಸ್ತ್ವಷ್ಟರಿಹಾ ಗಹಿ ವಿಭುಃ ಪೋಷ ಉತ ತ್ಮನಾ । ಯಜ್ಞೇಯಜ್ಞೇ ನ ಉದವ ॥

ವೃಷಭೋ ಧುರ್ಯ ಏವ ಸ್ಯಾನ್ಮಹಾದೇವಪ್ರಿಯಃ ಸದಾ ।
ಸಂಪ್ರದಾನೇನ ಚೈವಾಸ್ಯ ಮಮ ಶಾಂತಿಕರೋ ಭವೇತ್ ॥

ಭೂರ್ಭುವಃ ಸ್ವಃ ರುದ್ರದೈವತ್ಯಾಯ ವೃಷಭಾಯೇದಂ ಪಾದ್ಯಮ್ ॥

ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।
ಯಸ್ಮಾತ್ತಸ್ಮಾಚ್ಛಿವಂ ಮೇ ಸ್ಯಾದಿಹಲೋಕೇ ಪರತ್ರ ಚ ॥

ಅರ್ಘ್ಯಮ್ ॥

ಧರ್ಮಸ್ತ್ವಂ ವೃಷರೂಪೇಣ ಜಗದಾನಂದಕಾರಕ ।
ಅಷ್ಟಮೂರ್ತೇರಧಿಷ್ಠಾನಮತಃ ಶಾಂತಿಂ ಪ್ರಯಚ್ಛ ಮೇ ॥

**ಆಚಮನೀಯಮ್ ॥**

ಒಂದು ಇಡಿ ಅಡಕೆ, ಕೂರ್ಚ, ಹಿರಣ್ಯ ಹಿಡಿದು ಹೋಮಕುಂಡದ ಈಶಾನ್ಯ ದಿಕ್ಕಿನಲ್ಲಿ ಉತ್ತರ ಮತ್ತು ಪೂರ್ವ ಪರಿಸ್ತರಣೆಯ ತುದಿ ಅಡಿಯಲ್ಲಿ ಕೈಹಿಡಿದು,

**ಓಂ ತತ್ಸವಿತುರ್ವೃಣೀಮಹೇ ವಯಂ ದೇವಸ್ಯ ಭೋಜನಮ್ । ಶ್ರೇಷ್ಠಂ ಸರ್ವಧಾತಮಂ ತುರಂ ಭಗಸ್ಯ ಧೀಮಹಿ ॥**

–ಎಂಬ ಮಂತ್ರದಿಂದ ಎಡಕೈಯಿಂದ ನೀರನ್ನು ಹಾಕಿ ಆ ನೀರನ್ನು ಪಂಚದಶ ವಾಕ್ಯದಿಂದ ಗಂಡು–ಹೆಣ್ಣು ಕರುಗಳಿಗೆ ಪ್ರೋಕ್ಷಣೆ ಮಾಡಬೇಕು

**ಶಾಂತಿರಸ್ತು । ಪುಷ್ಟಿರಸ್ತು । ತುಷ್ಟಿರಸ್ತು । ವೃದ್ಧಿರಸ್ತು । ಅವಿಘ್ನಮಸ್ತು । ಆಯುಷ್ಯಮಸ್ತು । ಆರೋಗ್ಯಮಸ್ತು । ಶಿವಂ ಕರ್ಮಾಸ್ತು । ಕರ್ಮಸಮೃದ್ಧಿರಸ್ತು । ಧರ್ಮಸಮೃದ್ಧಿರಸ್ತು । ವೇದಸಮೃದ್ಧಿರಸ್ತು । ಶಾಸ್ತ್ರಸಮೃದ್ದಿರಸ್ತು । ಪುತ್ರಸಮೃದ್ಧಿರಸ್ತು । ಧನಧಾನ್ಯಸಮೃದ್ಧಿರಸ್ತು । ಇಷ್ಟಸಂಪದಸ್ತು ॥**

–ಎಂದು ಪ್ರೋಕ್ಷಣೆ ಮಾಡಿ ಕೈಯಲ್ಲಿರುವ ಹಿರಣ್ಯಕೂರ್ಚವನ್ನು ಬದಿಗಿಟ್ಟು, ಗರಿಕೆಯಿಂದ ಎಳ್ಳೆಣ್ಣೆ ಹಿಡಿದು '**ಓಮ್ ಆಪೋ ಹಿ ಷ್ಠಾ..... ಜನಯಥಾ ಚ ನಃ ॥**' ಮಂತ್ರದಿಂದ ಎರಡು ಕರುಗಳಿಗೂ ಹಚ್ಚಿ ಬಿಸಿನೀರಿನಿಂದ '**ಕದ್ರುದ್ರಾಯ.... ಹೃದೇ ॥**' ಮಂತ್ರದಿಂದ ಸ್ನಾನ ಮಾಡಿಸಿ ಹೋಮದ ಒಂದು ಕಲಶದಿಂದ ಸ್ವಲ್ಪ ತೀರ್ಥ ತೆಗೆದು, '**ಕಯಾನಶ್ಚಿತ್ರ**' ಮಂತ್ರದಿಂದ ಅಭಿಷೇಕ ಮಾಡಬೇಕು.

ಕಯಾನಶ್ಚಿತ್ರ ಇತಿ ತಿಸೃಣಾಂ ವಾಮದೇವೋ ಗೌತಮ ಇಂದ್ರೋ ಗಾಯತ್ರೀ । ತೃತೀಯಾ ಪಾದ ನಿಚೃತ್ । ಅಭಿಷೇಕಾರ್ಥೇ ವಿನಿಯೋಗಃ ॥

**ಓಂ ಕಯಾ ನಶ್ಚಿತ್ರ ಆ ಭುವದೂತೀ ಸದಾವೃಧಃ ಸಖಾ । ಕಯಾ ಶಚಿಷ್ಠಯಾ ವೃತಾ ॥ ಕಸ್ತ್ವಾ ಸತ್ಯೋ ಮದಾನಾಂ ಮಂಹಿಷ್ಠೋ ಮತ್ಸದಂಧಸಃ । ದೃಹ್ಖಾ ಚಿದಾರುಜೇ ವಸು ॥ ಅಭೀ ಷು ಣಃ ಸಖೀನಾಮವಿತಾ ಜರಿತ್ರೃಣಾಮ್ । ಶತಂ ಭವಾಸ್ಯೂತಿಭಿಃ ॥**

**ಗಾವಃ ಸುರಭಯೋ ನಿತ್ಯಂ ಗಾವೋ ಗುಗ್ಗುಲುಸಂನಿಭಾಃ ।**
**ಗಾವಃ ಪ್ರತಿಷ್ಠಾ ಭೂತಾನಾಂ ಗಾವಃ ಶರಣಮುತ್ತಮಮ್ ॥**

ಸ್ನಾನಮ್ ॥ ಎಂದು ತೀರ್ಥಸ್ನಾನ ಮಾಡಿಸಿ

**ಆಚ್ಛಾದನಂ ಗವೇ ದದ್ಯಾಂ ಸಮ್ಯಕ್ಶುದ್ಧಂ ಸುಶೋಭನಮ್ ।**
**ವೃಷಭೋ ವಸ್ತ್ರದಾನೇನ ಪ್ರೀಯತಾಂ ಶಂಕರಪ್ರಿಯಃ ॥**

**ಪೃಷ್ಠೇ ವಸ್ತ್ರಂ ಸಮರ್ಪಯಾಮಿ । ಫಾಲೇ ಕುಂಕುಮಂ ಸಮರ್ಪಯಾಮಿ । ಶೃಂಗೇ ಸುವರ್ಣಂ ಸಮರ್ಪಯಾಮಿ । ಖುರೇ ರೌಪ್ಯಂ ಸಮರ್ಪಯಾಮಿ । ಪೃಷ್ಠೇ ತಾಮ್ರಂ ಸಮರ್ಪಯಾಮಿ । ಫಾಲೇ ಆದರ್ಶಂ ಸಮರ್ಪಯಾಮಿ । ನೇತ್ರಯೋಃ ರತ್ನದ್ವಯಂ ಸಮರ್ಪಯಾಮಿ । ಕಂಠೇ ಘಂಟಾಂ ಸಮರ್ಪಯಾಮಿ । ಪುಚ್ಛೇ ಮುಕ್ತಾಫಲಾನಿ ಸಮರ್ಪಯಾಮಿ । ಕಂಠೇ ಪುಷ್ಪಮಾಲಾಂ ಸಮರ್ಪಯಾಮಿ ॥**

**ಮಾತಲೀ ಚಂಪಕಾದೀನಿ ಮಾಲ್ಯಾನಿ ವೃಷಭೇಶ್ವರ ।**
**ಮಯಾ ಹೃತಾನಿ ಪೂಜಾರ್ಥಮಂಗೀಕುರು ನಮೋಽಸ್ತು ತೇ ॥**

ಹೆಣ್ಣುಕರುವಿಗೆ ಅಕ್ಷತೆ ಹಾಕಿ,

**ಓಂ ನಂದಿನ್ಯೈ ನಮಃ ಪಾದಾನ್ ಪೂಜಯಾಮಿ । ಜಗದುತ್ಪತ್ತಿಕಾರಿಣ್ಯೈ ನಮಃ ಜಾನುನಿ ಪೂಜಯಾಮಿ । ಶ್ರೀಮತ್ಯೈ ನಮಃ ಕಂಠಂ ಪೂಜಯಾಮಿ । ಪವಿತ್ರಾಯೈ ನಮಃ ಉದರಂ ಪೂಜಯಾಮಿ । ಯಜ್ಞಸಾಧನಾಯೈ ನಮಃ ಮುಖಂ ಪೂಜಯಾಮಿ । ಅಘನಾಶಿನ್ಯೈ ನಮಃ ಶಿರಃ ಪೂಜಯಾಮಿ । ಸರ್ವೇಶ್ವರ್ಯೈ ನಮಃ ಸರ್ವಾಂಗಂ ಪೂಜಯಾಮಿ ॥**

ಧೂಪ ದೀಪ ತೋರಿಸಿ, ಹೋಮದ ಬಳಿ ತೆಗೆದಿಟ್ಟ ಹವಿಸ್ಸನ್ನು ಕರುಗಳಿಗೆ ಸಮರ್ಪಿಸಿ ನೀರಿನಿಂದ ಆರತಿ ಮಾಡಿ,

**ಪ್ರತ್ಯಕ್ಷೋದಧಿಮಾರಭ್ಯ ಪ್ರಾಗಬ್ಧೇರ್ಗೋಽಧಿಪೋ ಭವ**
**ತಥೈವ ದಕ್ಷಿಣಾಂಭೋಧಿಂ ಸೋಮ್ಯಾಬ್ಧೇರಧಿಪೋ ಭವ ।**
**ಹಿತ್ವಾ ದೇವ ದ್ವಿಜಕ್ಷೇತ್ರಂ ಯಥೇಷ್ಟಂ ಚರಗೋಽಧಿಪ ।**
**ಗವಾಮಧಿಪತಿರ್ಭೂತ್ವಾ ಅಭೀಷ್ಟಫಲದೋ ಭವ ॥**

–ಎಂದು ಪ್ರಾರ್ಥಿಸಿ,

**ವೃಷೋಽಸಿ ಭಗವನ್ ಧರ್ಮಶ್ಚತುಷ್ಪಾದಃ ಪ್ರಕೀರ್ತಿತಃ ।**
**ನಮಾಮಿ ತಮಹಂ ಭಕ್ತ್ಯಾ ಸ ಮಾಂ ರಕ್ಷತು ಸರ್ವತಃ ॥**

–ಎಂದು ನಮಸ್ಕಾರ ಮಾಡಬೇಕು. ಅನಂತರ ಕರುಗಳೆರಡನ್ನು ಹೋಮಕ್ಕೆ ಮೂರು ಪ್ರದಕ್ಷಿಣೆ ತರಬೇಕು.

ಋಷಭಂ ಮಾಮಿತಿ ಪಂಚರ್ಚಸ್ಯ ಸೂಕ್ತಸ್ಯ ಋಷಭೋ ವಿರಾಡನುಷ್ಟುಪ್ । ಅಂತ್ಯಾ ಪಂಕ್ತಿಃ । ವೃಷಭೋಪಸ್ಥಾನೇ ವಿನಿಯೋಗಃ ॥

ಓಮ್ ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾಸಹಿಮ್। ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಮ್ ॥ ೧ ॥ ಅಹಮಸ್ಮಿ ಸಪತ್ನಹೇಂದ್ರ ಇವಾರಿಷ್ಟೋ ಅಕ್ಷತಃ। ಅಧಃ ಸಪತ್ನಾ ಮೇ ಪದೋರಿಮೇ ಸರ್ವೇ ಅಭಿಷ್ಠಿತಾಃ ॥ ೨ ॥ ಅತ್ರೈವ ವೋಽಪಿ ನಹ್ಯಾಮ್ಯುಭೇ ಆರ್ತ್ನೀ ಇವ ಜ್ಯಯಾ। ವಾಚಸ್ಪತೇ ನಿ ಷೇಧೇಮಾನ್ ಯಥಾ ಮದಧರಂ ವದಾನ್ ॥ ೩ ॥ ಅಭಿಭೂರಹಮಾಗಮಂ ವಿಶ್ವಕರ್ಮೇಣ ಧಾಮ್ನಾ। ಆ ವಶ್ಚಿತ್ತಮಾ ವೋ ವ್ರತಮಾ ವೋಽಹಂ ಸಮಿತಿಂ ದದೇ ॥ ೪ ॥ ಯೋಗಕ್ಷೇಮಂ ವ ಆದಾಯಾಽಹಂ ಭೂಯಾಸಮುತ್ತಮ ಆ ವೋ ಮೂರ್ಧಾನಮಕ್ರಮೀಮ್। ಅಧಸ್ಪದಾನ್ಮ ಉದ್ವದತ ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ ॥ ೫ ॥

ಪಶ್ಚಿಮಾಭಿಮುಖವಾಗಿ ನಿಲ್ಲಿಸಿ ಹೋಮದ ದಕ್ಷಿಣ ಭಾಗದ ಕೆಂಡವಿರುವ ಸಮಿಧೆಯಿಂದ (ದರ್ಭೆ ಇಲ್ಲವೇ ಲೋಹದ ತುಂಡಿನಿಂದ) ಗಂಡುಕರುವಿನ ಹಿಂದಿನ ಬಲಕಾಲಿನ ತೊಡೆಭಾಗದಲ್ಲಿ ತ್ರಿಶೂಲಚಿಹ್ನೆ ಇಲ್ಲವೇ ಲಿಂಗಾಕೃತಿ ಮಾಡಿ ಹಿಂದಿನ ಎಡಕಾಲಿನ ತೊಡೆಭಾಗದಲ್ಲಿ ಚಕ್ರಚಿಹ್ನೆಯನ್ನು ಮಾಡಿ(ಕೆಲವರಲ್ಲಿ ಹೆಣ್ಣುಕರುವಿಗೂ ಮಾಡುತ್ತಾರೆ) ಚಿಹ್ನೆಗಳ ಮೇಲೆ ತುಪ್ಪವನ್ನು ಸವರಬೇಕು. ಅನಂತರ ನವಶಕ್ತಿಪೂಜೆ ಮಾಡಬೇಕು.

ಓಂ ವಾಮಾಯೈ ನಮಃ । ಜ್ಯೇಷ್ಠಾಯೈ ನಮಃ । ಶ್ರೇಷ್ಠಾಯೈ ನಮಃ । ಕಾಲಾಯೈ ನಮಃ । ಕಲವಿಕಲಿನ್ಯೈ ನಮಃ । ಬಲಾಯೈ ನಮಃ । ಬಲಪ್ರಮಥಿನ್ಯೈ ನಮಃ । ಮನೋನ್ಮನ್ಯೈ ನಮಃ । ಸರ್ವಭೂತದಮನ್ಯೈ ನಮಃ ॥

ಓಂ ಜಯಾಯೈ ನಮಃ । ವಿಜಯಾಯೈ ನಮಃ । ಅಜಿತಾಯೈ ನಮಃ । ಅಪರಾಜಿತಾಯೈ ನಮಃ । ನಿತ್ಯಾಯೈ ನಮಃ । ದೋಗ್ಧ್ರ್ಯೈ ನಮಃ । ವಿಲಾಸಿನ್ಯೈ ನಮಃ । ಅಘೋರಾಯೈ ನಮಃ । ಮಂಗಲಾಯೈ ನಮಃ ॥

ಅಕ್ಕಿ ತುಲಸಿ ಹಿಡಿದು 'ಓಂ ಕದ್ರುದ್ರಾಯ......ಹೃದೇ ॥' ಮಂತ್ರದಿಂದ ಗಂಡುಕರುವಿನಲ್ಲಿ ರುದ್ರನನ್ನು ಆವಾಹನೆ ಮಾಡಿ ಪುನಃ ಅಕ್ಕಿ ಹಿಡಿದು,

ಓಂ ಗೌರೀರ್ಮಿಮಾಯ ಸಲಿಲಾನಿ ತಕ್ಷತ್ಯೇಕಪದೀ ದ್ವಿಪದೀ ಸಾ ಚತುಷ್ಪದೀ। ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇ

ವ್ಯೋಮನ್ ॥ – ಎಂದು ಹೆಣ್ಣು ಕರುವಿನಲ್ಲಿ ಗೌರಿಯನ್ನು ಆವಾಹನೆ ಮಾಡಿ ಷೋಡಶೋಪಚಾರ ಪೂಜೆ ಮಾಡಿ ಅಕ್ಷತೆ ಹಿಡಿದು,

**ಓಂ ಹರಾಯ ನಮಃ । ತ್ರ್ಯಂಬಕಾಯ ನಮಃ । ರುದ್ರಾಯ ನಮಃ । ಮೃಗಾಯ ನಮಃ । ವ್ಯಾಧಾಯ ನಮಃ । ಕಪಾಲಿನೇ ನಮಃ । ಭೈರವಾಯ ನಮಃ । ಭರ್ಗಾಯ ನಮಃ । ಶಿವಾಯ ನಮಃ । ಶಂಭವೇ ನಮಃ । ಕಪರ್ದಿನೇ ನಮಃ । ಬಹುರೂಪಾಯ ನಮಃ ॥**

–ಎಂದು ನಾಮಪೂಜೆ ಮಾಡಿ, ಧೂಪದೀಪ ಸಮರ್ಪಿಸಿ ನೈವೇದ್ಯಸಮಯದಲ್ಲಿ ಅರಳು ಬೆಲ್ಲ ಇಡಬೇಕು. ಅನಂತರ ಕೃಷ್ಣಾರ್ಪಣ ಬಿಡಬೇಕು. ಐದು ತಾಂಬೂಲ, ಒಂದು ಇಡಿಅಡಕೆ, ಕೂರ್ಚ ಹಿರಣ್ಯದೊಂದಿಗೆ ಕರುಗಳೆರಡರ ಬಾಲ ಹಿಡಿದು, ಎಡಕೈಯಲ್ಲಿ ನೀರನ್ನು ಸ್ವಲ್ಪ ಸ್ವಲ್ಪವಾಗಿ ಬಿಡುತ್ತಾ,

**ಗೋವೃಷಸ್ಯೈಕರೂಪೇಣ ಉಮಯಾ ಸಹ ಶಂಕರ ।**
**ದಾಸ್ಯಾಮಿ ಶಂಭವೇ ತುಭ್ಯಂ ರುದ್ರಲೋಕಜಿಗೀಷಯಾ ॥ ೧ ॥**

**ಅಯಂ ಹಿ ತೇ ಮಯಾ ದತ್ತಃ ಸುಖಾಯ ವೃಷ ಉತ್ತಮಃ ।**
**ತುಭ್ಯಂ ಚೈಷಾ ಮಯಾ ದತ್ತಾ ಪತ್ನೀ ಸರ್ವಮನೋರಮಾ ॥ ೨ ॥**

**ಸೌರಭೇಯ ಸುಪುಷ್ಟಾಂಗ ಗೋಪತೇ ಗತಿಸಾಧನ ।**
**ಹರಸ್ಯ ವಾಹನೋ ಭೂತ್ವಾ ವಿಹರಸ್ವ ಯಥಾಸುಖಮ್ ॥ ೩ ॥**

**ದೇವದೇವ ಮಹಾದೇವ ಸರ್ವದೇವೋತ್ತಮೋತ್ತಮ ।**
**ಪ್ರಸೀದ ಸರ್ವಭಾವೇನ ತ್ವಾಮಹಂ ಶರಣಂ ಗತಃ ॥ ೪ ॥**

**ತ್ವದ್ರೂಪಿಣಂ ವೃಷಮಿಮಂ ತವಾಗ್ರೇಽಪ್ಯುತ್ಸೃಜಾಮ್ಯಹಮ್ ।**
**ತ್ವಲ್ಲಿಂಗಚಿಹ್ನಿತಂ ದೇವ ತನ್ಮೇಽನುಜ್ಞಾತುಮರ್ಹಸಿ ॥ ೫ ॥**

**ಮಾತಃ ಪಾರ್ವತಿ ಕಲ್ಯಾಣಿ ಸರ್ವಲೋಕೈಕಸುಂದರಿ ।**
**ಪ್ರಸಾದಂ ಕುರು ಮೇ ದೇವಿ ಶಾಂತ್ಯೈ ಶಂಕರವಲ್ಲಭೇ ॥ ೬ ॥**

**ತವ ರೂಪಧರಾಂ ಸಾಧ್ವೀಮಿಮಾಂ ವತ್ಸತರೀಂ ಶುಭಾಮ್ ।**
**ತವಾಗ್ರೇ ಹ್ಯುತ್ಸೃಜಾಮ್ಯಂಬ ತನ್ಮೇಽನುಜ್ಞಾತುಮರ್ಹಸಿ ॥ ೭ ॥**

ಈ ರೀತಿಯಾಗಿ ಏಳು ಶ್ಲೋಕಮಂತ್ರಗಳನ್ನು ಪಠಿಸುತ್ತಾ ನೀರನ್ನು ಬಿಟ್ಟು (ಎಡ),

**ಪಿತುಃ .......ಗೋತ್ರಸ್ಯ .......ಶರ್ಮಣ ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮ ಲೋಕಾ–ವಾಪ್ತ್ಯರ್ಥಂ ರುದ್ರಾಂತರ್ಗತ ಶ್ರೀಲಕ್ಷ್ಮೀನರಸಿಂಹಪ್ರೀತ್ಯರ್ಥಂ ಭೋ ವೃಷಭರಾಜ**

**ಇಮಾಂ ವತ್ಸತರೀಂ ತುಭ್ಯಮಹಂ ಸಂಪ್ರದದೇ ॥**

–ಎಂದು ಪುನಃ ಸ್ವಲ್ಪ ನೀರು ಹಾಕಿ ಕೈಯಲ್ಲಿರುವ ದ್ರವ್ಯಗಳನ್ನೂ ಬಾಲವನ್ನೂ ಕೆಳಗೆ ಬಿಡಬೇಕು. ಅನಂತರ ಕರುಗಳೆರಡನ್ನೂ ಪೂರ್ವಕ್ಕೆ ಮುಖಮಾಡಿ ನಿಲ್ಲಿಸಿ, (ಬಲ) ಪೂರ್ವಾಭಿಮುಖವಾಗಿ ಅಕ್ಕಿ ಹಿಡಿದು, ಕೈಮುಗಿದು,

ಕದ್ರುದ್ರಾಯೇತಿ ನವರ್ಚಸ್ಯ ಸೂಕ್ತಸ್ಯ ಘೌರಃ ಕಾಣ್ವೋ ರುದ್ರೋ ಗಾಯತ್ರೀ । ತೃತೀಯಾ ಮೈತ್ರಾವರುಣೀ ಅಂತ್ಯಾಸ್ತ್ರ್ಯೃಚಃ ಸೌಮ್ಯಾ ಅಂತ್ಯಾನುಷ್ಟುಪ್ । ಪೂರ್ವ–ದಿಗುಪಸ್ಥಾನೇ ವಿನಿಯೋಗಃ ॥

**ಓಂ ಕದ್ರುದ್ರಾಯ ಪ್ರಚೇತಸೇ ಮೀಢುಷ್ಟಮಾಯ ತವ್ಯಸೇ । ವೋಚೇಮ ಶಂತಮಂ ಹೃದೇ ॥ ೧ ॥ ಯಥಾ ನೋ ಅದಿತಿಃ ಕರತ್ಪಶ್ವೇ ನೃಭ್ಯೋ ಯಥಾ ಗವೇ । ಯಥಾ ತೋಕಾಯ ರುದ್ರಿಯಮ್ ॥ ೨ ॥ ಯಥಾ ನೋ ಮಿತ್ರೋ ವರುಣೋ ಯಥಾ ರುದ್ರಶ್ಚಿಕೇತತಿ ॥ ಯಥಾ ವಿಶ್ವೇ ಸಜೋಷಸಃ ॥ ೩ ॥ ಗಾಥಪತಿಂ ಮೇಧಪತಿಂ ರುದ್ರಂ ಜಲಾಷಭೇಷಜಮ್ । ತಚ್ಛಂಯೋಃ ಸುಮ್ನಮೀಮಹೇ ॥ ೪ ॥ ಯಃ ಶುಕ್ರ ಇವ ಸೂರ್ಯೋ ಹಿರಣ್ಯಮಿವ ರೋಚತೇ । ಶ್ರೇಷ್ಠೋ ದೇವಾನಾಂ ವಸುಃ ॥ ೫ ॥ ಶಂ ನಃ ಕರತ್ಯರ್ವತೇ ಸುಗಂ ಮೇಷಾಯ ಮೇಷ್ಯೇ । ನೃಭ್ಯೋ ನಾರಿಭ್ಯೋ ಗವೇ ॥ ೬ ॥ ಅಸ್ಮೇ ಸೋಮ ಶ್ರಿಯಮಧಿ ನಿ ಧೇಹಿ ಶತಸ್ಯ ನೃಣಾಮ್ । ಮಹಿ ಶ್ರವಸ್ತುವಿನೃಮ್ಣಮ್ ॥ ೭ ॥ ಮಾ ನಃ ಸೋಮಪರಿಬಾಧೋ ಮಾರಾತಯೋ ಜುಹುರಂತ । ಆ ನ ಇಂದೋ ವಾಜೇ ಭಜ ॥ ೮ ॥ ಯಾಸ್ತೇ ಪ್ರಜಾ ಅಮೃತಸ್ಯ ಪರಸ್ಮಿನ್ ಧಾಮನ್ನೃತಸ್ಯ । ಮೂರ್ಧಾ ನಾಭಾ ಸೋಮ ವೇನ ಆಭೂಷಂತೀಃ ಸೋಮ ವೇದಃ ॥ ೯ ॥**

**ಭೋ! ವೃಷಭರಾಜ, ಅನಯಾ ವತ್ಸತರ್ಯಾ ಸಹ ಪೂರ್ವಸಮುದ್ರಾಂತಂ ಗತ್ವಾ ದೇವಬ್ರಾಹ್ಮಣಕ್ಷೇತ್ರಾಣಿ ವರ್ಜಯಿತ್ವಾ ತತ್ರಸ್ಥ ತೃಣಾನಿ ಖಾದಿತ್ವಾ ಜಲಂ ಪೀತ್ವಾ ಗೋಭಿಃ ಸಹ ಕ್ರೀಡಯ ಕ್ರೀಡಯ ಸುಖೀ ಭವ ಸುಖೀ ಭವ ॥**

ಎರಡೂ ಕರುಗಳ ಬಾಲಹಿಡಿದು,

**ಯಚ್ಚ ಖಾದತಿ ಯಚ್ಚ ಪಿಬತಿ ಭವಾನ್ ತೇನ ದೇವಾಂಶ್ಚ ಪ್ರೀಣಾತು ॥**

–ಎಂದು ಒಂದು ಬಾರಿ ಅಕ್ಷತೋದಕ ಬಿಟ್ಟು, (ಮಾಲಾಕಾರ) ಅಕ್ಕಿ ನೀರು ಹಿಡಿದು,

**ತೇನ ಋಷೀಂಶ್ಚ ಪ್ರೀಣಾತು । ಪ್ರೀಣಾತು ॥** –ಎಂದು ಋಷಿತೀರ್ಥದಿಂದ ಎರಡು ಬಾರಿ ಅಕ್ಷತೋದಕ ಬಿಟ್ಟು, (ಎಡ) ಎಳ್ಳು ನೀರು ಹಿಡಿದು,




**ತೇನ ಪಿತೄಂಶ್ಚ ಪ್ರೀಣಾತು । ಪ್ರೀಣಾತು । ಪ್ರೀಣಾತು ॥** –ಎಂದು ಪಿತೃತೀರ್ಥದಿಂದ ಮೂರುಬಾರಿ ತಿಲೋದಕ ಬಿಟ್ಟು, ಪುನಃ ಎಳ್ಳುನೀರು ಹಿಡಿದು,

**ಪಿತುಃ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮ ಲೋಕಾವಾಪ್ತಿಂ ಕುರು ಕುರು ॥ ಮಯಾ ವಿಷೋ ವೃಷ ಉತ್ಸೃಷ್ಟಃ ॥** –ಎಂದು ಕರುಗಳ ಮೇಲೆ ಎಳ್ಳುನೀರು ಬಿಟ್ಟು, ಕರುಗಳ ಮೇಲಿನ ಎಳ್ಳನ್ನು ಹಿಡಿದು,

**ಪಿತರಂ .......ಗೋತ್ರಂ ........ಶರ್ಮಾಣಂ ಪ್ರೇತಂ ತಾರಯತು ॥** –ಎಂದು ಆಕಾಶದ ಕಡೆಗೆ ಎರಚಬೇಕು. ಅನಂತರ ಕೈಮುಗಿದು,

**ಸೌರಭೇಯ ಸುಪುಷ್ಟಾಂಗ ಗೋಪತೇ ಗತಿಸಾಧನ ।**
**ಹರಸ್ಯ ವಾಹನೋ ಭೂತ್ವಾ ವಿಹರಸ್ವ ಯಥಾ ಸುಖಮ್ ॥**

ಮಂತ್ರ ಪಠಿಸಿ, ಹೀಗೆ ಉಳಿದ ಮೂರು ದಿಕ್ಕುಗಳಲ್ಲಿ ಮಂತ್ರವ್ಯತ್ಯಾಸದೊಂದಿಗೆ ಹಿಂದಿನ ಕ್ರಮದಂತೆ ಮಾಡಬೇಕು. (ಬಲ) ಕರುಗಳೆರಡನ್ನು ದಕ್ಷಿಣಕ್ಕೆ ಮುಖಮಾಡಿ ತಾನು ದಕ್ಷಿಣಕ್ಕೆ ಮುಖಮಾಡಿ ನಿಂತು, ಅಕ್ಕಿ ಹಿಡಿದು ಕೈಮುಗಿದು,

ಇಮಾ ರುದ್ರಾಯೇತ್ಯೇಕಾದಶರ್ಚಸ್ಯ ಸೂಕ್ತಸ್ಯ ಕುತ್ಸೋ ರುದ್ರೋ ಜಗತೀ । ಅಂತ್ಯೇ ತ್ರಿಷ್ಟುಭೌ । ದಕ್ಷಿಣದಿಗುಪಸ್ಥಾನೇ ವಿನಿಯೋಗಃ ॥

**ಓಮ್ ಇಮಾ ರುದ್ರಾಯ ತವಸೇ ಕಪರ್ದಿನೇ ಕ್ಷಯದ್ವೀರಾಯ ಪ್ರ ಭರಾಮಹೇ ಮತೀಃ । ಯಥಾ ಶಮಸದ್ದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ನನಾತುರಮ್ ॥ ಮೃಳಾ ನೋ ರುದ್ರೋತ ನೋ ಮಯಸ್ಕೃಧಿ ಕ್ಷಯದ್ವೀರಾಯ ನಮಸಾ ವಿಧೇಮ ತೇ । ಯಚ್ಛಂ ಚ ಯೋಶ್ಚ ಮನು**

ರಾಯೇಜೇ ಪಿತಾ ತದಶ್ಯಾಮ ತವ ರುದ್ರ ಪ್ರಣೀತಿಷು ॥ ಅಶ್ಯಾಮ ತೇ ಸುಮತಿಂ ದೇವಯಜ್ಯಯಾ ಕ್ಷಯದ್ವೀರಸ್ಯ ತವ ರುದ್ರ ಮೀಢ್ವಃ । ಸುಮ್ನಾಯನ್ನಿದ್ವಿಶೋ ಅಸ್ಮಾಕಮಾ ಚರಾರಿಷ್ಟವೀರಾ ಜುಹವಾಮ ತೇ ಹವಿಃ ॥ ತ್ವೇಷಂ ವಯಂ ರುದ್ರಂ ಯಜ್ಞಸಾಧಂ ವಂಕುಂ ಕವಿಮವಸೇ ನಿ ಹ್ವಯಾ-ಮಹೇ । ಆರೇ ಅಸ್ಮದ್ದೈವ್ಯಂ ಹೇಳೋ ಅಸ್ಯತು ಸುಮತಿಮಿದ್ವಯಮಸ್ಯಾ ವೃಣೀಮಹೇ ॥ ದಿವೋ ವರಾಹಮರುಷಂ ಕಪರ್ದಿನಂ ತ್ವೇಷಂ ರೂಪಂ ನಮಸಾ ನಿ ಹ್ವಯಾಮಹೇ । ಹಸ್ತೇ ಬಿಭ್ರದ್ಭೇಷಜಾ ವಾರ್ಯಾಣಿ ಶರ್ಮ ವರ್ಮ ಚ್ಛರ್ದಿರಸ್ಮಭ್ಯಂ ಯಂಸತ್ ॥ ಇದಂ ಪಿತ್ರೇ ಮರುತಾಮುಚ್ಯತೇ ವಚಃ ಸ್ವಾದೋಃ ಸ್ವಾದೀಯೋ ರುದ್ರಾಯ ವರ್ಧನಮ್ । ರಾಸ್ವಾ ಚ ನೋ ಅಮೃತ ಮರ್ತಭೋಜನಂ ತ್ಮನೇ ತೋಕಾಯ ತನಯಾಯ ಮೃಳ ॥ ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತ ಮಾ ನ ಉಕ್ಷಿತಮ್ । ಮಾ ನೋ ವಧೀಃ ಪಿತರಂ ಮೋತ ಮಾತರಂ ಮಾ ನಃ ಪ್ರಿಯಾಸ್ತನ್ವೋ ರುದ್ರ ರೀರಿಷಃ ॥ ಮಾ ನಸ್ತೋಕೇ ತನಯೇ ಮಾ ನ ಆಯೌ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್ಹವಿಷ್ಮಂತಃ ಸದಮಿತ್ತ್ವಾ ಹವಾಮಹೇ ॥ ಉಪ ತೇ ಸ್ತೋಮಾನ್ ಪಶುಪಾ ಇವಾಕರಂ ರಾಸ್ವಾ ಪಿತರ್ಮರುತಾಂ ಸುಮ್ನಮಸ್ಮೇ । ಭದ್ರಾ ಹಿ ತೇ ಸುಮತಿರ್ಮೃಳಯತ್ತಮಾಥಾ ವಯಮವ ಇತ್ತೇ ವೃಣೀಮಹೇ ॥ ಆರೇ ತೇ ಗೋಘ್ನಮುತ ಪೂರುಷಘ್ನಂ ಕ್ಷಯದ್ವೀರ ಸುಮ್ನಮಸ್ಮೇ ತೇ ಅಸ್ತು । ಮೃಳಾ ಚ ನೋ ಅಧಿ ಚ ಬ್ರೂಹಿ ದೇವಾಧಾ ಚ

ನಃ ಶರ್ಮ ಯಚ್ಛ ದ್ವಿಬರ್ಹಾಃ ॥ ಅವೋಚಾಮ ನಮೋ ಅಸ್ಮಾ ಅವಸ್ಯವಃ ಶೃಣೋತು ನೋ ಹವಂ ರುದ್ರೋ ಮರುತ್ವಾನ್ । ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥

ಭೋ ವೃಷಭರಾಜ ಅನಯಾ ವತ್ಸತರ್ಯಾ ಸಹ ದಕ್ಷಿಣಸಮುದ್ರಾಂತಂ ಗತ್ವಾ ದೇವಬ್ರಾಹ್ಮಣಕ್ಷೇತ್ರಾಣಿ ವರ್ಜಯಿತ್ವಾ ತತ್ರಸ್ಥತೃಣಾನಿ ಖಾದಿತ್ವಾ ಜಲಂ ಪೀತ್ವಾ **ಗೋಭಿಃ ಸಹ ಕ್ರೀಡಯ ಕ್ರೀಡಯ । ಸುಖೀ ಭವ ಸುಖೀ ಭವ ॥** ಇತ್ಯಾದಿ ಹಿಂದಿನ ಕ್ರಮದಂತೆ ಮಾಡಬೇಕು. ಅನಂತರ, (ಬಲ) ಪಶ್ಚಿಮಾಭಿಮುಖವಾಗಿ,

ಆ ತೇ ಪಿತರಿತಿ ಪಂಚದಶರ್ಚಸ್ಯ ಸೂಕ್ತಸ್ಯ ಗೃತ್ಸಮದೋ ರುದ್ರಸ್ತ್ರಿಷ್ಟುಪ್ । ಪಶ್ಚಿಮದಿಗುಪಸ್ಥಾನೇ ವಿನಿಯೋಗಃ ॥

ಓಮ್ ಆ ತೇ ಪಿತರ್ಮರುತಾಂ ಸುಮ್ನಮೇತು ಮಾ ನಃ ಸೂರ್ಯಸ್ಯ ಸಂದೃಶೋ ಯುಯೋಥಾಃ । ಅಭಿ ನೋ ವೀರೋ ಅರ್ವತಿ ಕ್ಷಮೇತ ಪ್ರ ಜಾಯೇಮಹಿ ರುದ್ರ ಪ್ರಜಾಭಿಃ ॥ ತ್ವಾದತ್ತೇಭೀ ರುದ್ರ ಶಂತಮೇಭಿಃ ಶತಂ ಹಿಮಾ ಅಶೀಯ ಭೇಷಜೇಭಿಃ। ವ್ಯಸ್ಮದ್ದ್ವೇಷೋ ವಿತರಂ ವ್ಯಂಹೋ ವ್ಯಮೀವಾಶ್ಚಾತಯಸ್ವಾ ವಿಷೂಚೀಃ ॥ ಶ್ರೇಷ್ಠೋ ಜಾತಸ್ಯ ರುದ್ರ ಶ್ರಿಯಾಸಿ ತವಸ್ತಮಸ್ತವಸಾಂ ವಜ್ರಬಾಹೋ । ಪರ್ಷಿ ಣಃ ಪಾರಮಂಹಸಃ ಸ್ವಸ್ತಿ ವಿಶ್ವಾ ಅಭೀತೀ ರಪಸೋ ಯುಯೋಧಿ ॥ ಮಾ ತ್ವಾ ರುದ್ರ ಚುಕ್ರುಧಾಮಾ ನಮೋಭಿರ್ಮಾ ದುಷ್ಟುತೀ ವೃಷಭ ಮಾ ಸಹೂತೀ । ಉನ್ನೋ ವೀರಾँ ಅರ್ಪಯ ಭೇಷಜೇಭಿರ್ಭಿಷಕ್ತಮಂ ತ್ವಾ ಭಿಷಜಾಂ ಶೃಣೋಮಿ ॥ ಹವೀಮಭಿ–ರ್ಹವತೇ ಯೋ ಹವಿರ್ಭಿರವ ಸ್ತೋಮೇಭೀ ರುದ್ರಂ ದಿಷೀಯ । ಋದೂ–ದರಃ ಸುಹವೋ ಮಾ ನೋ ಅಸ್ಯೈ ಬಭ್ರುಃ ಸುಶಿಪ್ರೋ ರೀರಧನ್ಮನಾಯೈ ॥ ಉನ್ಮಾ ಮಮಂದ ವೃಷಭೋ ಮರುತ್ವಾನ್ ತ್ವಕ್ಷೀಯಸಾ ವಯಸಾ

ನಾಧಮಾನಮ್ । ಘೃಣೀವಚ್ಛಾಯಾಮರಪಾ ಅಶೀಯಾಽಽವಿವಾ ಸೇಯಂ ರುದ್ರಸ್ಯ ಸುಮ್ನಮ್ ॥ ಕ್ವ೧ಸ್ಯ ತೇ ರುದ್ರ ಮೃಳಯಾಕುರ್ಹಸ್ತೋ ಯೋ ಅಸ್ತಿ ಭೇಷಜೋ ಜಲಾಷಃ । ಅಪಭರ್ತಾ ರಪಸೋ ದೈವ್ಯಸ್ಯಾಭೀ ನು ಮಾ ವೃಷಭ ಚಕ್ಷಮೀಥಾಃ ॥ ಪ್ರ ಬಭ್ರವೇ ವೃಷಭಾಯ ಶ್ವಿತೀಚೇ ಮಹೋ ಮಹೀಂ ಸುಷ್ಟುತಿಮೀರಯಾಮಿ । ನಮಸ್ಯಾ ಕಲ್ಮಲೀಕಿನಂ ನಮೋಭಿರ್ಗೃಣೀಮಸಿ ತ್ವೇಷಂ ರುದ್ರಸ್ಯ ನಾಮ ॥ ಸ್ಥಿರೇಭಿರಂಗೈಃ ಪುರುರೂಪ ಉಗ್ರೋ ಬಭ್ರುಃ ಶುಕ್ರೇಭಿಃ ಪಿಪಿಶೇ ಹಿರಣ್ಯೈಃ । ಈಶಾನಾದಸ್ಯ ಭುವನಸ್ಯ ಭೂರೇರ್ನ ವಾ ಉ ಯೋಷದ್ರುದ್ರಾದಸುರ್ಯಮ್ ॥ ಅರ್ಹನ್ ಬಿಭರ್ಷಿ ಸಾಯಕಾನಿ ಧನ್ವಾರ್ಹನ್ನಿಷ್ಕಂ ಯಜತಂ ವಿಶ್ವರೂಪಮ್ । ಅರ್ಹನ್ನಿದಂ ದಯಸೇ ವಿಶ್ವಮಭ್ವಂ ನ ವಾ ಓಜೀಯೋ ರುದ್ರ ತ್ವದಸ್ತಿ ॥ ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹತ್ನುಮುಗ್ರಮ್ । ಮೃಳಾ ಜರಿತ್ರೇ ರುದ್ರ ಸ್ತವಾನೋಽನ್ಯಂ ತೇ ಅಸ್ಮನ್ನಿ ವಪಂತು ಸೇನಾಃ ॥ ಕುಮಾರಶ್ಚಿತ್ಪಿತರಂ ವಂದಮಾನಂ ಪ್ರತಿ ನಾನಾಮ ರುದ್ರೋಪಯಂತಮ್ । ಭೂರೇರ್ದಾತಾರಂ ಸತ್ಪತಿಂ ಗೃಣೀಷೇ ಸ್ತುತಸ್ತ್ವಂ ಭೇಷಜಾ ರಾಸ್ಯಸ್ಮೇ ॥ ಯಾ ವೋ ಭೇಷಜಾ ಮರುತಃ ಶುಚೀನಿ ಯಾ ಶಂತಮಾ ವೃಷಣೋ ಯಾ ಮಯೋಭು । ಯಾನಿ ಮನುರವೃಣೀತಾ ಪಿತಾ ನಸ್ತಾ ಶಂ ಚ ಯೋಶ್ಚ ರುದ್ರಸ್ಯ ವಶ್ಮಿ ॥ ಪರಿ ಣೋ ಹೇತೀ ರುದ್ರಸ್ಯ ವೃಜ್ಯಾಃ ಪರಿ ತ್ವೇಷಸ್ಯ ದುರ್ಮತಿರ್ಮಹೀ ಗಾತ್ । ಅವ ಸ್ಥಿರಾ ಮಘವದ್ಭ್ಯಸ್ತನುಷ್ವ ಮೀಢ್ವಸ್ತೋಕಾಯ ತನಯಾಯ ಮೃಳ ॥ ಏವಾ ಬಭ್ರೋ ವೃಷಭ ಚೇಕಿತಾನ ಯಥಾ ದೇವ ನ ಹೃಣೀಷೇ ನ ಹಂಸಿ ।

**ಹವನಶ್ರುನ್ನೋ ರುದ್ರೇಹ ಬೋಧಿ ಬೃಹದ್ವದೇಮ ವಿದಥೇ ಸುವೀರಾಃ ॥**

**ಭೋ ವೃಷಭರಾಜ ಅನಯಾ ವತ್ಸತರ್ಯಾ ಸಹ ಪಶ್ಚಿಮಸಮುದ್ರಾಂತಂ ಗತ್ವಾ ದೇವಬ್ರಾಹ್ಮಣಕ್ಷೇತ್ರಾಣಿ ವರ್ಜಯಿತ್ವಾ ತತ್ರಸ್ಥತೃಣಾನಿ ಖಾದಿತ್ವಾ ಜಲಂ ಪೀತ್ವಾ ಗೋಭಿಃ ಸಹ ಕ್ರೀಡಯ ಕ್ರೀಡಯ । ಸುಖೀ ಭವ ಸುಖೀ ಭವ ॥** ಇತ್ಯಾದಿ ಹಿಂದಿನ ಕ್ರಮದಂತೆ ಮಾಡಬೇಕು.

(ಬಲ) ಉತ್ತರಾಭಿಮುಖವಾಗಿ,

ಇಮಾ ರುದ್ರಾಯೇತಿ ಚತಸೃಣಾಂ ವಸಿಷ್ಠೋ ರುದ್ರೋ ಜಗತೀ । ಅಂತ್ಯಾ ತ್ರಿಷ್ಟುಪ್ । ಉತ್ತರದಿಗುಪಸ್ಥಾನೇ ವಿನಿಯೋಗಃ ॥

**ಓಮ್ ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ । ಅಷಾಢ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ॥ ಸ ಹಿ ಕ್ಷಯೇಣ ಕ್ಷಮ್ಯಸ್ಯ ಜನ್ಮನಃ ಸಾಮ್ರಾಜ್ಯೇನ ದಿವ್ಯಸ್ಯ ಚೇತತಿ । ಅವನ್ನವಂತೀರುಪ ನೋ ದುರಶ್ಚರಾಽನಮೀವೋ ರುದ್ರ ಜಾಸು ನೋ ಭವ ॥ ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ಕ್ಷ್ಮಯಾ ಚರತಿ ಪರಿ ಸಾ ವೃಣಕ್ತು ನಃ । ಸಹಸ್ರಂ ತೇ ಸ್ವಪಿವಾತ ಭೇಷಜಾ ಮಾ ನಸ್ತೋಕೇಷು ತನಯೇಷು ರೀರಿಷಃ ॥ ಮಾ ನೋ ವಧೀ ರುದ್ರ ಮಾ ಪರಾ ದಾ ಮಾ ತೇ ಭೂಮ ಪ್ರಸಿತೌ ಹೀಳಿತಸ್ಯ । ಆ ನೋ ಭಜ ಬರ್ಹಿಷಿ ಜೀವಶಂಸೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥**

**ಭೋ ವೃಷಭರಾಜ ಅನಯಾ ವತ್ಸತರ್ಯಾ ಸಹ ಉತ್ತರಸಮುದ್ರಾಂತಂ ಗತ್ವಾ ದೇವಬ್ರಾಹ್ಮಣಕ್ಷೇತ್ರಾಣಿ ವರ್ಜಯಿತ್ವಾ ತತ್ರಸ್ಥತೃಣಾನಿ ಖಾದಿತ್ವಾ ಜಲಂ ಪೀತ್ವಾ ಗೋಭಿಃ ಸಹ ಕ್ರೀಡಯ ಕ್ರೀಡಯ । ಸುಖೀ ಭವ ಸುಖೀ ಭವ ॥** ಇತ್ಯಾದಿ ಹಿಂದಿನ ಕ್ರಮದಂತೆ ಮಾಡಬೇಕು.

ಅನಂತರ ಕರುಗಳೆರಡನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿ,

**ಧರ್ಮಸ್ತ್ವಂ ವೃಷರೂಪೇಣ ಜಗದಾನಂದಕಾರಕ ।**
**ತವೋತ್ಸರ್ಗಪ್ರಭಾವೇಣ ತಾರಯಸ್ವ ಭವಾರ್ಣವಾತ್ ॥**

ಏತಂ ಯುವಾನಮಿತಿ ಯಾಜ್ಞವಲ್ಕ್ಯಃ ಋಷಭಸ್ತ್ರಿಷ್ಟುಪ್ । ವೃಷೋತ್ಸರ್ಜನಾರ್ಥೇ ವಿನಿಯೋಗಃ ॥

**ಓಮ್ ಏತಂ ಯುವಾನಂ ಪರಿ ವೋ ದದಾಮಿ ತೇನ ಕ್ರೀಡಂತೀಶ್ಚರತ ಪ್ರಿಯೇಣ । ಮಾ ನಃ ಶಾಪ್ತ ಜನುಷಾ ಸುಭಾಗಾ ರಾಯಸ್ಪೋಷೇಣ ಸಮಿಷಾ ಮದೇಮ ॥**

**ಓಂ ಶಾಂತಾ ಪೃಥಿವೀ ಶಿವಮಂತರಿಕ್ಷಂ ದ್ಯೌಸ್ತೇ ದೇವ್ಯಭಯಂ ಕೃಣೋತು । ಶಿವಾ ದಿಶಃ ಪ್ರದಿಶ ಉದ್ದಿಶಸ್ತ ಆಪೋ ವಿದ್ಯುತಃ ಪರಿಪಾಂತು ಸರ್ವತಃ ॥ ಶಾಂತಿಃ ಶಾಂತಿಃ ಶಾಂತಿಃ ॥**

'**ಸರ್ವತೋ ವ್ರಜಸ್ವ**' ಎಂದು ಹೇಳಿ ಸ್ವಲ್ಪ ದೂರದವರೆಗೆ ಕರೆದುಕೊಂಡು ಹೋಗಿ ಒಂದು ಬದಿಯಲ್ಲಿ ಬಿಟ್ಟು ಬಂದು ಸ್ವಲ್ಪ ನೀರನ್ನು ಹಿಡಿದು ಕರುಗಳು ಹೋದ ದಾರಿಗೆ ಪ್ರೋಕ್ಷಣೆ ಮಾಡಬೇಕು,

(ಬಲ) ಪ್ರಾಯಶ್ಚಿತ್ತಾದಿ ಆಹುತಿ ನೀಡಿ ಹೋಮ ಮುಗಿಸಿ ಕೃಷ್ಣಾರ್ಪಣ ಬಿಡಬೇಕು. ಅನಂತರ ಯಜಮಾನ ಕರ್ಮವಸ್ತ್ರವನ್ನು ಕೆಳಗೆ ಎಲೆಯಲ್ಲಿಟ್ಟು ಆಚಾರ್ಯರಿಂದ ಕಲಶಪ್ರೋಕ್ಷಣೆಯನ್ನು ಮಾಡಿಸಿಕೊಂಡು ಪವಿತ್ರ ಹೊರ ತೆಗೆದು ಹುತಭಸ್ಮವನ್ನು ಕರ್ಮವಸ್ತ್ರಕ್ಕೆ ಮುಟ್ಟಿಸಿ ತಾನೂ ಹಣೆಯಲ್ಲಿ ಧರಿಸಿ, ತೀರ್ಥಪ್ರಾಶನ ಮಾಡಿ, ಆಚಮನ ಮಾಡಿ, ಪವಿತ್ರ ಹಾಕಿಕೊಂಡು, ಕರ್ಮವಸ್ತ್ರವನ್ನು ಧರಿಸಿ ದಾನಸಂಕಲ್ಪ ಮಾಡಬೇಕು.

**ರುದ್ರಸೋಮೇಂದ್ರಾಂತರ್ಗತಪ್ರಾಣಸ್ಥಶ್ರೀಸಂಕರ್ಷಣವಾಸುದೇವಪ್ರದ್ಯುಮ್ನ ಪ್ರೀತ್ಯರ್ಥಮ್ ಆಮಾನ್ನತ್ರಯಂ, ವೃಷಸ್ಯ ತಪ್ತಲೋಹಸ್ಪರ್ಶನ ತ್ವಗಾದಿದಾಹಜನಿತ ದೋಷಪರಿಹಾರಾರ್ಥಂ ತಿಲ, ಉದಕುಂಭ, ಗೋ, ವಸ್ತ್ರ, ಹಿರಣ್ಯದಾನಾನಿ ಕರಿಷ್ಯೇ ॥ (ಕುರುಷ್ವ) ॥** ಮೂವರು ಬ್ರಾಹ್ಮಣರನ್ನು ಸ್ವಾಗತ ಮಾಡಿ ಆಸನದಲ್ಲಿ ಕುಳ್ಳಿರಿಸಿ ಪ್ರತ್ಯೇಕವಾಗಿ ಒಬ್ಬೊಬ್ಬರಲ್ಲಿ ಕ್ರಮವಾಗಿ, ರುದ್ರ ಸೋಮ ಇಂದ್ರರನ್ನು ಆವಾಹಿಸಬೇಕು.

**ಬ್ರಾಹ್ಮಣೇಭ್ಯಃ ಸ್ವಾಗತಮ್ । ಇದಮಾಸನಮ್ ॥**

ಅಕ್ಕಿ ಹಿಡಿದು,

**ರುದ್ರಂ ಸೋಮಂ ಇಂದ್ರಂ ಭವತ್ಸು ಆವಾಹಯಾಮಿ ।** ಎಂದು ಅಕ್ಕಿ ಹಾಕಿ ಆವಾಹಿಸುವುದು. **(ಅಸ್ತು ಆವಾಹಯ)** ॥

ಗಂಧಪುಷ್ಪ ಕೊಟ್ಟು, '**ಗಂಧಾದಿಸಕಲಾರಾಧನೈಃ ಸ್ವರ್ಚಿತಮ್ ।**' **(ಅಸ್ತು)** ತಾಂಬೂಲ ಕೊಟ್ಟು, ಆಮಾನ್ನವನ್ನು ಎತ್ತಿ ಹಿಡಿದು,

**ಅನ್ನಮೇವ ಯತೋ ಲಕ್ಷ್ಮೀ ಅನ್ನಮೇವ ಜನಾರ್ದನಃ ।**
**ಅನ್ನಂ ಬ್ರಹ್ಮಾಖಿಲತ್ರಾಣಮಸ್ತು ಜನ್ಮನಿಜನ್ಮನಿ ॥**

–ಎಂದು ಬ್ರಾಹ್ಮಣರ ಕೈಯಲ್ಲಿ ಕೊಟ್ಟು, ದಕ್ಷಿಣೆಕೊಟ್ಟು, **ಸತಾಂಬೂಲಸದಕ್ಷಿಣಾಕ ಸೋಪಸ್ಕರಾಮಾನ್ನದಾನೇನ ರುದ್ರ ಸೋಮ ಇಂದ್ರಾಂತರ್ಗತ ಪ್ರಾಣಸ್ಥಶ್ರೀಸಂಕರ್ಷಣವಾಸುದೇವಪ್ರದ್ಯುಮ್ನರೂಪಿಪರಮಾತ್ಮಾ ಸುಪ್ರೀತೋಽಸ್ತ್ವಿತಿ ಭವಂತೋ ಬ್ರುವಂತು ॥** ಎಂದು ನಮಸ್ಕರಿಸಿ, **(ಸುಪ್ರೀತೋಽಸ್ತು । ಪ್ರೇತಸ್ಯ ಉತ್ತಮ ಲೋಕಾವಾಪ್ತಿರಸ್ತು)** ಎಂದು ಆಶೀರ್ವಚನ ಪಡೆದು, ಅಕ್ಕಿ ಹಿಡಿದು, '**ಯಥಾಸ್ಥಾನಮುದ್ವಾಸಯಾಮಿ**' **(ಅಸ್ತು ಉದ್ವಾಸಯ)** ಎಂದು ಬ್ರಾಹ್ಮಣರ ತಲೆಗೆ ಹಾಕಿ, ತುಳಸಿನೀರು ಹಿಡಿದು,

**ಅನೇನ ಸತಾಂಬೂಲ ಸದಕ್ಷಿಣಾಕ ಸೋಪಸ್ಕರಾಮಾನ್ನದಾನೇನ ರುದ್ರ ಸೋಮ ಇಂದ್ರಾಂತರ್ಗತ ಪ್ರಾಣಸ್ಥಶ್ರೀಸಂಕರ್ಷಣವಾಸುದೇವಪ್ರದ್ಯುಮ್ನರೂಪಿಪರಮಾತ್ಮಾ ಪ್ರೀಯತಾಮ್ ॥** –ಎಂದು ತುಳಸಿನೀರು ಕೆಳಗೆ ಬಿಡುವುದು.

**ಉದಕುಂಭಮ್** **ವಾರಿಪೂರ್ಣೋ ಘಟಶ್ಚಾಯಂ ದೇವತ್ರಯಮಯೋ ಯತಃ ।**
**ಪ್ರೀಯತಾಂ ಧರ್ಮರಾಜಸ್ತು ದಾನೇನಾನೇನ ಪುಣ್ಯದಃ ॥**

**ತಿಲಾಃ** **ತಿಲಾಃ ಕಶ್ಯಪಸಂಭೂತಾ....ಪ್ರಸೀದತು ॥**

**ಫಲಮ್** **ಫಲಂ ಸ್ವಾದು ಪ್ರಿಯಕರಂ ಸರ್ವಕರ್ಮಸು ಪುಷ್ಟಿದಮ್ ।**
**ದೇವಾನಾಂ ಪಿತೃಣಾಂ ಚ ತೃಪ್ತಿದಂ ಮಂಗಲಪ್ರದಮ್ ॥**

**ವಸ್ತ್ರಮ್** **ಶೀತವಾತೋಷ್ಣಸಂತ್ರಾಣಂ ಲಜ್ಜಯಾ ರಕ್ಷಣಂ ಪರಮ್ ।**
**ದೇಹಾಲಂಕರಣಂ ವಸ್ತ್ರಮತಃ ಶಾಂತಿಂ ಪ್ರಯಚ್ಛ ಮೇ ॥**

**ಹಿರಣ್ಯಮ್** **ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।**
**ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥**

ತುಳಸಿನೀರು ಹಿಡಿದು,

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ..... ನಾರಾಯಣಾಯೇತಿ ಸಮರ್ಪಯಾಮಿ ॥**

**ಅದ್ಯ ದಿನೇ ಕರಿಷ್ಯಮಾಣ ಪಿತುರುದ್ದಿಶ್ಯ ವೃಷೋತ್ಸರ್ಗಹೋಮಪೂರ್ವಕ ಮಯಾಕೃತ ವೃಷವತ್ಸತರೀಪೂಜಾಸಂಪೂರ್ಣಫಲಪ್ರಾಪ್ತ್ಯರ್ಥೇ ಯಥಾಶಕ್ತಿ**

**ದಾನದಕ್ಷಿಣಾದಿ ಕರ್ಮಕರಣೇನ ಪಿತೃಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ । ಕೃಷ್ಣಾರ್ಪಣಮಸ್ತು ॥** –ಎಂದು ಕೃಷ್ಣಾರ್ಪಣ ಬಿಡಬೇಕು. ಅನಂತರ ಆಚಮನ ಮಾಡಿ ಪವಿತ್ರ ಬಿಚ್ಚಿ ಹಾಕಬೇಕು.

ಅನಂತರ ಜಲಪಾತ್ರೆ ಹಿಡಿದು ಬ್ರಾಹ್ಮಣರಿಗೆ ಹಾಗೂ ಬಂಧುಗಳಿಗೆ ನಮಸ್ಕರಿಸಿ, ಏಕೋದ್ದಿಷ್ಟವನ್ನು ಮಾಡುವುದಾಗಿ ಪ್ರಾರ್ಥಿಸಿ ಅನುಜ್ಞೆಯನ್ನು ಪಡೆಯಬೇಕು.

# ಮಹೈಕೋದ್ದಿಷ್ಟ ವಿಧಿಃ

## ಏಕೋದ್ದಿಷ್ಟಸಾಹಿತ್ಯಗಳು

[ಹನ್ನೊಂದನೆಯ ದಿನದ ಸಾಹಿತ್ಯಗಳೊಂದಿಗೆ ಆಯ್ದ ಸಾಮಗ್ರಿಗಳು.]

ಹೋಮಸಾಹಿತ್ಯ : ತುಪ್ಪ 100 ಗ್ರಾಂ, ಅಶ್ವತ್ಥಸಮಿಧೆ 50, ಜೇಡಿಪುಡಿ, ಕಟ್ಟಿಗೆ 6 ತುಂಡು, ತೆಂಗಿನಸಿಪ್ಪೆ (4 ತೆಂಗಿನದ್ದು), ದರ್ಭೆಕಟ್ಟು 1, ಕರ್ಪೂರ 10, ದೊಣ್ಣೆತಟ್ಟೆಗಳು 10, ತಿಲಾಕ್ಷತದ ಹರಿವಾಣ, ಬೂದುಕುಂಬಳವನ್ನು ಸರಿಯಾಗಿ ಅರ್ಧಭಾಗ ಮಾಡಿ ಅದರ ಒಂದು ತುಂಡನ್ನು 32 ಚಿಕ್ಕಚಿಕ್ಕ ತುಂಡುಮಾಡಿ ಇನ್ನೊಂದು ತುಂಡಿನ ಮಧ್ಯದಲ್ಲಿ ಬತ್ತಿ ಸಿಕ್ಕಿಸಿ ಎಳ್ಳೆಣ್ಣೆ ಹಾಕಿ ಹಾಗೆಯೇ ಒಂದು ಬಾಳೇಕಾಯಿಯನ್ನು 32 ತುಂಡುಮಾಡಿ ಹೋಮದ ಸಾಹಿತ್ಯದೊಂದಿಗೆ ಇಟ್ಟುಕೊಳ್ಳಬೇಕು.

(ಏಕೋದ್ದಿಷ್ಟದಲ್ಲಿ ಹೋಮದಿಂದ ಹಿಡಿದು ಬ್ರಾಹ್ಮಣಾರಾಧನೆಯ ವರೆಗಿನ ಕ್ರಿಯೆಯನ್ನು ಹಿರಿಯವನು ಮಾತ್ರ ಮಾಡಿ, ಅನಂತರದ ಪಿಂಡಪ್ರದಾನಾದಿಗಳನ್ನು ಎಲ್ಲರೂ ಮಾಡಬೇಕು.)

ವೃಷೋತ್ಸರ್ಗಾನಂತರ ನಿತ್ಯಕ್ರಿಯೆಗೆ ಹವಿಸ್ಸನ್ನು ಬೇಯಿಸಿದ ಒಲೆಯ ಸ್ಥಳದಲ್ಲಿ, ಇಲ್ಲವೇ ಗ್ರಾಮದ ಹೊರಗೆ, ಇಲ್ಲವೇ ನದೀತೀರಕ್ಕೆ ಹೋಗಿ (ಕೆಲವರಲ್ಲಿ ದಹನಪ್ರದೇಶದಲ್ಲಿ) ಕ್ರಿಯೆ ಮಾಡಬೇಕಾದ ಸ್ಥಳವನ್ನು ಗೋಮಯದಿಂದ ಶುದ್ಧಗೊಳಿಸಬೇಕು. (ಏಕೋದ್ದಿಷ್ಟಕ್ಕೆ ಬ್ರಾಹ್ಮಣರಿದ್ದರೆ ಕ್ಷೌರ ಅಭ್ಯಂಗಸ್ನಾನ ಮಾಡಿಸಿ, ಪ್ರೇತಸ್ಥಾನದಲ್ಲಿ ಕುಳ್ಳಿರಿಸಬೇಕು.) ಪೂರ್ವಾಭಿಮುಖವಾಗಿ ಕುಳಿತು, ಆಚಮನ ಮಾಡಿ ಪ್ರಾಣಾಯಾಮ ಮಾಡಿ, ಒಂದು ಎಸಳಿನ ಪವಿತ್ರವನ್ನು ಆಚಾರ್ಯರಿಂದ ಪಡೆದು ಅದನ್ನು ಧರಿಸಿ, ಸಂಕಲ್ಪ ಮಾಡಬೇಕು.

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ಮೃತಾಹಾತ್ ಏಕಾದಶೇಽಹನಿ ಅಸ್ಮತ್ಪಿತುಃ .....ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಉತ್ತಮ ಲೋಕಾವಾಪ್ತ್ಯರ್ಥಂ** (ಬಲ) **ದ್ವಿಜಾಭಾವೇ ಕೂರ್ಚಮುಖಾರಾಧನಪೂರ್ವಕ ಅಗ್ನೌ ಮಹೈಕೋದ್ದಿಷ್ಟಹೋಮಾಖ್ಯಂ ಕರ್ಮ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

ಕರ್ಮಿಗಳು ಎಳ್ಳು, ಚಿಲ್ಲರೆ, ದರ್ಭೆ, ತುಲಸಿ ಹಿಡಿದು ನಿಂತಲ್ಲೇ ಮೂರು ಪ್ರದಕ್ಷಿಣೆ ಬರುವುದು–

1. ಪ್ರೇತಸ್ಥಾನ
2. ಪಿಂಡಸ್ಥಾನ
3. ಅರ್ಘ್ಯಪಾತ್ರೆ
4. ಜಲಪಾತ್ರೆ
5. ಹೋಮಕುಂಡ.
6. ಗೋಗ್ರಾಸ




**ವಿಪ್ರೌಘದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।**
**ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಮ್ ॥**

ನೀರಿನಿಂದ ತ್ರಿಕೋನಾಕಾರದ ಮಂಡಲಮಾಡಿ ಅವುಗಳನ್ನು ಮಂಡಲದಲ್ಲಿಟ್ಟು,

(ಎಡ) **ಅಸ್ಮತ್ಪಿತುರುದ್ದಿಶ್ಯ ಏಕೋದ್ದಿಷ್ಟಶ್ರಾದ್ಧಕರ್ತುಂ ಮಮ ಅಧಿಕಾರ ಸಂಪದಸ್ತ್ವಿತಿ ಭವಂತೋ ಬ್ರುವಂತು ॥ (ಸಂಪದಸ್ತು)** –ಎಂದು ಪ್ರತಿವಚನ ಪಡೆದು,

(ಬಲ) **ಜಲಪಾತ್ರಸ್ಥಾಪನಂ ಕರಿಷ್ಯೇ ॥**

ತನ್ನ ಎಡಭಾಗದಲ್ಲಿ ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ ಅದರ ಮೇಲೆ ಒಂದು ದರ್ಭೆಯನ್ನು ಇಟ್ಟು ಅದರ ಮೇಲೆ ಜಲಪಾತ್ರೆ ಇಟ್ಟು ನಾರಾಯಣಸ್ಮರಣೆಯೊಂದಿಗೆ ಜಲಪಾತ್ರಕ್ಕೆ ನೀರು ಹಾಕಿ,

**ಗಂಗಾ ಗೋದಾವರೀ ಕೃಷ್ಣಾ ಪ್ರಯಾಗಾ ದ್ವಾರಕಾ ತಥಾ ।**
**ಆವಾಹ್ಯ ಪಂಚಗಂಗಾಶ್ಚ ಸರ್ವಪಾಪಹರಾ ಶುಭಾಃ ॥**

ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು ಎಳ್ಳು ಸಹಿತ ಗಂಧ, ಪುಷ್ಪ, ಹಿರಣ್ಯ, ಗರಿಕೆ ಹಾಕಿ ಹತ್ತು ಬಾರಿ ಅಷ್ಟಾಕ್ಷರದಿಂದ ಜಪಿಸಿ

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥**

ಜಲಕೂರ್ಚದಿಂದ ನೀರು ಹಿಡಿದು, ಸುತ್ತ ಪ್ರೋಕ್ಷಣೆ ಮಾಡಬೇಕು. ಕೈಮುಗಿದು,

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಸ್ತು ದಕ್ಷಿಣೇ ।**
**ಪ್ರದ್ಯುಮ್ನೋ ದಕ್ಷಿಣೇ ಪಾತು ವಾಸುದೇವಸ್ತಥೋತ್ತರೇ ।**
**ಊರ್ಧ್ವಂ ಗೋವರ್ಧನೋ ರಕ್ಷೇದಧಸ್ತಾಚ್ಚ ತ್ರಿವಿಕ್ರಮಃ ॥**

–ಎಂದು ಪ್ರಾರ್ಥಿಸಬೇಕು.

(ಎಡ) ದಕ್ಷಿಣಾಭಿಮುಖವಾಗಿ ಕುಳಿತು ಜೇಡಿ(ಅಕ್ಕಿಹಿಟ್ಟು, ರಂಗೋಲಿ)ಪುಡಿಯಿಂದ ಅಪ್ರದಕ್ಷಿಣೆಯಾಗಿ ಒಂದೊಂದು ರೇಖೆಯ ಸ್ಥಂಡಿಲ ಬರೆದು ವೃಷೋತ್ಸರ್ಗಹೋಮದ ಅಗ್ನಿ ತಂದು,

## ಅಗ್ನಿಮೂರ್ತಿಧ್ಯಾನಮ್

**ಅಗ್ನಿಂ ಪ್ರಜ್ವಲಿತಂ ವಂದೇ ಜಾತವೇದಂ ಹುತಾಶನಮ್ ।**
**ಸುವರ್ಣವರ್ಣಮನಲಂ ಸಮಿದ್ಧಂ ವಿಶ್ವತೋಮುಖಮ್ ॥**

**ಅಗ್ನೇ ವೈಶ್ವಾನರ ಶಾಂಡಿಲ್ಯಗೋತ್ರ ಮೇಷಾರೂಢ ವರಪ್ರದ ಪ್ರಾಙ್ಮುಖೋ ದೇವ ಮಮ ಸಮ್ಮುಖೋ ವರದೋ ಭವ** ॥ ಎಂದು ಪ್ರಾರ್ಥಿಸಿ,

## ಪರಿಷೇಕಃ

ಅಗ್ನಿಯ ಈಶಾನ್ಯದಿಂದಾರಂಭಿಸಿ, ಅಪ್ರದಕ್ಷಿಣೆಯಾಗಿ ನೀರಿನಿಂದ ೩ ಸಲ ಪರಿಷೇಚನ ಮಾಡಬೇಕು– **ಅದಿತೇಽನುಮನ್ಯಸ್ವ । ಅನುಮತೇಽನುಮನ್ಯಸ್ವ । ಸರಸ್ವತೇಽನುಮನ್ಯಸ್ವ । ದೇವ ಸವಿತಃ ಪ್ರಸುವ** ॥

ಅನಂತರ, ಒಂದೊಂದು ದರ್ಭೆಯಿಂದ ಅಪ್ರದಕ್ಷಿಣೆಯಾಗಿ ದಕ್ಷಿಣಾಗ್ರವಾಗಿ ಪರಿಸ್ತರಣ ಹಾಕಿ, ಪುನಃ ನೀರಿನಿಂದ ಅಪ್ರದಕ್ಷಿಣೆಯಾಗಿ ಮೂರು ಬಾರಿ ಅಗ್ನಿಯ ಸುತ್ತ ನೀರನ್ನು ಚಿಮುಕಿಸಿ ಅಗ್ನಿಯ ದಕ್ಷಿಣಭಾಗದಲ್ಲಿ ಒಂದು ದರ್ಭೆಯ ಮೇಲೆ ಬಾಳೆದೊಣ್ಣೆಯ ಪ್ರೋಕ್ಷಣಿಪಾತ್ರೆ, ಅತ್ತಿಎಲೆಯ ಸ್ರುಕ್ ಮತ್ತು ಸ್ರುವ, ಬಾಳೆದೊಣ್ಣೆಯ ಪ್ರಣೀತಪಾತ್ರೆ, ಬಾಳೆದೊಣ್ಣೆಯ ಆಜ್ಯಪಾತ್ರಗಳನ್ನಿಡುವುದು. ಅನಂತರ ೩೨ ಆಹುತಿ ಬೇಕಾದಷ್ಟು ಹವಿಸ್ಸನ್ನು ತನ್ನ ಬಲಭಾಗದಲ್ಲಿ ನೀರಿನಿಂದ ತ್ರಿಕೋಣಾಕಾರದ ಮಂಡಲ ಮಾಡಿ, ಒಂದು ಬಾಳೆಎಲೆ ಇಲ್ಲವೇ ತಟ್ಟೆಯಲ್ಲಿ ಬೇರೆಯೇ ತೆಗೆದಿಟ್ಟು ಅದಕ್ಕೆ ಕೂಷ್ಮಾಂಡದ ಹಾಗೂ ಬಾಳೆಕಾಯಿಯ ೩೨ ಹೋಳುಗಳನ್ನು ಹೋಮದ ಅನ್ನಕ್ಕೆ, ಹಾಕಿ (ಕೆಲವರಲ್ಲಿ ತುಪ್ಪ ಮಿಶ್ರಿತ ಅನ್ನ ಇಲ್ಲವೇ ತಿಲಮಿಶ್ರಿತ ಅನ್ನ ಅಥವಾ ಪಂಚಾಮೃತಮಿಶ್ರಿತಾನ್ನದಿಂದ ಆಹುತಿಯನ್ನು ಕೊಡುತ್ತಾರೆ.) ಅನಂತರ ಪ್ರೋಕ್ಷಣಿಪಾತ್ರೆಯ ಮೇಲೆ ದಕ್ಷಿಣಾಗ್ರವಾಗಿ ಒಂದು ದರ್ಭೆ ಇಟ್ಟು ನೀರು ಹಾಕಿ ದರ್ಭೆಯಿಂದ ಮೂರುಬಾರಿ ಗಾಳಿಸಿ ಪ್ರೋಕ್ಷಣೀಪಾತ್ರೆಯ ಸ್ವಲ್ಪ ನೀರಿನಿಂದ ಪಾತ್ರೆಗಳನ್ನು ಪ್ರೋಕ್ಷಣೆ ಮಾಡಿ ಆ ದರ್ಭೆಯನ್ನು ಪುನಃ ದಕ್ಷಿಣಾಗ್ರವಾಗಿ ಚಮಸದ ಮೇಲಿಟ್ಟು ಉಳಿದ ಪ್ರೋಕ್ಷಣಿನೀರನ್ನು ಪ್ರಣೀತಪಾತ್ರೆಗೆ ತುಂಬಿಸಿ ಗಂಧಪುಷ್ಪಾಕ್ಷತೆ ಹಾಕಿ ಅದನ್ನು ಹೋಮದ ಉತ್ತರದಲ್ಲಿ ದರ್ಭೆಯ ಮೇಲಿಟ್ಟು ಆ ದರ್ಭೆಯನ್ನು ಹವಿಸ್ಸಿನ ಮೇಲಿಟ್ಟು, ಮೂರು ಬಾರಿ ಗಾಳಿಸಿ ದರ್ಭೆಗೆ ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ ಬಾಳೆದೊಣ್ಣೆಯ ಆಜ್ಯಪಾತ್ರದ ಮೇಲಿಟ್ಟು ತುಪ್ಪಹಾಕಿ ಒಂದು ದರ್ಭೆಯನ್ನು ಹೊತ್ತಿಸಿ ಪರಿಸ್ತರಣೆಯ ಹೊರಗಿಟ್ಟು ತುಪ್ಪದ ಪಾತ್ರವನ್ನು ಅದರ ಮೇಲಿಟ್ಟು, ತುಪ್ಪದ ಪಾತ್ರೆಗೆ ಒಂದು ದರ್ಭೆಯನ್ನು ಹೊತ್ತಿಸಿ ಹಾಕಿ ಮತ್ತೊಂದು

ದರ್ಭೆಯ ತುದಿ ತೆಗೆದು ತುಪ್ಪಕ್ಕೆ ಹಾಕಿ ಆಮೇಲೆ ಮೊದಲು ಹೊತ್ತಿಸಿದ ದರ್ಭೆಯನ್ನು ಪುನಃ ಹೊತ್ತಿಸಿ ಅಗ್ನಿಗೂ ತುಪ್ಪಕ್ಕೂ ಒಟ್ಟಿಗೆ ಮೂರುಸಲ ಅಪ್ರದಕ್ಷಿಣೆಯಾಗಿ ಸುತ್ತು ತಂದು ಹಿಂದೆ ಬಿಸಾಡಿ ತುಪ್ಪದ ಪಾತ್ರೆಯನ್ನು ಸ್ವಲ್ಪ ಉತ್ತರಕ್ಕೆ ದೂಡಿ ಅಡಿಯಲ್ಲಿರುವ ಸುಟ್ಟ ದರ್ಭೆಕಿಡಿಯನ್ನು ಅಗ್ನಿಗೆ ಹಾಕಿ ತುಪ್ಪದಲ್ಲಿರುವ ದರ್ಭೆಯಿಂದ ಮೂರು ಸಲ ಗಾಳಿಸಿ ತೊಳೆದು ಅಗ್ನಿಗೆ ಹಾಕಬೇಕು. ಅನಂತರ ತನ್ನೆದುರು ಎರಡು ದರ್ಭೆಯಿಟ್ಟು ಆಜ್ಯಪಾತ್ರವನ್ನು ಆ ಎರಡು ದರ್ಭೆಯ ಮೇಲಿಡಬೇಕು. ಅನಂತರ ಒಂದು ದರ್ಭೆಯ ತುದಿಯಿಂದ ಅತ್ತಿಎಲೆಗಳೆರಡರ ತುದಿ ಮತ್ತು ಹಿಂಭಾಗವನ್ನು, ದರ್ಭೆಗಳ ಮೂಲದಿಂದ ಅತ್ತಿಎಲೆಯ ಬುಡವನ್ನು ಸಂಸ್ಕರಿಸುವುದು. ಅನಂತರ ಎಳ್ಳು ಹಿಡಿದು ಚಿತೆ ಸಹಿತವಾಗಿ ಅಪ್ರದಕ್ಷಿಣೆಯಾಗಿ ಅಗ್ನ್ಯಲಂಕಾರ ಮಾಡುವುದು.

## ಅಗ್ನ್ಯಲಂಕರಣಮ್

**ಅಗ್ನಯೇ ನಮಃ । ಜಾತವೇದಸೇ ನಮಃ । ಸಹೋಜಸೇ ನಮಃ । ಅಜಿರಾಪ್ರಭವೇ ನಮಃ । ವೈಶ್ವಾನರಾಯ ನಮಃ । ನರ್ಯಾಪಸೇ ನಮಃ । ಪಂಕ್ತಿರಾಧಸೇ ನಮಃ । ವಿಸರ್ಪಿಣೇ ನಮಃ ॥** ಎಳ್ಳು ಹಿಡಿದು, **ಓಂ ರಮ್ ಅಗ್ನಯೇ ನಮಃ ।**

**ಓಂ ಕವಿಮಗ್ನಿಮುಪ ಸ್ತುಹಿ ಸತ್ಯಧರ್ಮಾಣಮಧ್ವರೇ । ದೇವಮಮೀವಚಾತನಮ್ ॥ ಓಂ ಭೂರ್ಭುವಃಸ್ವಃ ಕವ್ಯವಾಹನಮಗ್ನಿಂ ಪ್ರತಿಷ್ಠಾಪಯಾಮಿ ॥**

–ಎಂದು ಅಗ್ನಿಗೆ ಹಾಕಿ, ಪುನಃ ಎಳ್ಳು ಹಿಡಿದು,

**ಓಂ ಭಾಂ ಭಾರ್ಗವಾಯ ನಮಃ ॥** –ಎಂದು ಅಗ್ನಿಗೆ ಹಾಕಿ ಆವಾಹನೆ ಮಾಡಿ, ತುಪ್ಪದಿಂದ **ಭೂಃ ಸ್ವಾಹಾ । ಭುವಃ ಸ್ವಾಹಾ । ಸ್ವಃ ಸ್ವಾಹಾ । ಭೂರ್ಭುವಃಸ್ವಃ ಸ್ವಾಹಾ ॥** –ಎಂದು ವ್ಯಸ್ತಸಮಸ್ತವ್ಯಾಹೃತಿಯಿಂದ ಆಜ್ಯ ಹೋಮಿಸಿ, ಯಜಮಾನನು ತನ್ನ ಬಲಭಾಗದಲ್ಲಿ ನೀರಿನಿಂದ ತ್ರಿಕೋನಾಕಾರದ ಮಂಡಲ ಬರೆದು ಒಂದು ತುಂಡು ಬಾಳೆ ಎಲೆಯಲ್ಲಿ ದಕ್ಷಿಣಾಗ್ರವಾಗಿ ಒಂದು ಎಳೆಯ ಕೂರ್ಚ ಇಟ್ಟು, (ಕೆಲವರಲ್ಲಿ ಕೂರ್ಚ ಇಡುವ ಪದ್ಧತಿ ಇಲ್ಲ; ಪಿಂಡಪ್ರದಾನ ಮಾತ್ರ ಇದೆ.) ಎರಡು ದರ್ಭೆ ಹಿಡಿದು,

**ಅಸ್ಮತ್ಪಿತುಃ .......ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಏಕೋದ್ದಿಷ್ಟಶ್ರಾದ್ಧೇ ಕ್ಷಣ ಉಪತಿಷ್ಠತು ॥** –ಎಂದು ಅಗ್ನಿಗೆ ಹಾಕಿ ಪುನಃ ಎರಡು ದರ್ಭೆಗಳನ್ನು ಕೂರ್ಚದ ಬಲಭಾಗದಲ್ಲಿಡಬೇಕು. ಎರಡು ದರ್ಭೆಗಳನ್ನು ಪೂರ್ವಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ .....ಶ್ರಾದ್ಧೇ ಆಸನಮುಪತಿಷ್ಠತು ॥** –ಎಂದು ಅಗ್ನಿಗೆ ಹಾಕಿ, ಪುನಃ ಎರಡು ದರ್ಭೆಗಳನ್ನು ಪೂರ್ವಾಗ್ರವಾಗಿ ಕೂರ್ಚದ ಅಡಿಯಲ್ಲಿಟ್ಟು, ಎಳ್ಳು ನೀರು ಹಿಡಿದು,

**ಅಸ್ಮತ್ಪಿತುಃ ....ಶ್ರಾದ್ಧೇ ಪಾದ್ಯಮುಪತಿಷ್ಠತು ॥** –ಎಂದು ಅಗ್ನಿಗೆ ಹಾಕಿ, ಪುನಃ ಕೂರ್ಚದ ಮೇಲೆ ಪಾದ್ಯ ಕೊಡಬೇಕು. ಎಳ್ಳು ಹಿಡಿದು,

**ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂ ಗತಿಮ್ ।**
**ಮನಸಾ ವಾಯುರೂಪೇಣ ಕುಶೇ ತ್ವಾಂ ಯೋಜಯಾಮ್ಯಹಮ್ ॥**

**ಅಸ್ಮತ್ಪಿತುಃ .........ಶ್ರಾದ್ಧೇ ಪ್ರೇತಸ್ಯ ಆವಾಹನಮುಪತಿಷ್ಠತು ॥**
–ಎಂದು ಅಗ್ನಿಗೆ ಹಾಗೂ ಕೂರ್ಚಕ್ಕೆ ಹಾಕಬೇಕು.

## ಅರ್ಘ್ಯಮ್

ಏಕಪತ್ರದಿಂದ ಮಾಡಿದ ದೊಣ್ಣೆಯಲ್ಲಿ ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು, ನೀರು ಹಾಕಿ, ಗಂಧ ಪುಷ್ಪತಿಲದೂರ್ವೆಗಳನ್ನು ಹಿಡಿದು **'ಗಂಧಪುಷ್ಪತಿಲದೂರ್ವಾಮುಪತಿಷ್ಠಂತು ॥'** ಎಂದು ದೊಣ್ಣೆಗೆ ಹಾಕಿ (ಬಲ) ಹತ್ತು ಸಲ ನಾರಾಯಣಸ್ಮರಣೆ ಮಾಡಿ (ಎಡ) ಅರ್ಘ್ಯಪಾತ್ರದ ನೀರು ಹಾಗೂ ಎಳ್ಳು ಹಿಡಿದು, (ಬಲ) **'ಅಸ್ಮತ್ಪಿತುಃ .......ಶ್ರಾದ್ಧೇ ಅರ್ಘ್ಯಮುಪತಿಷ್ಠತು ॥'** ಎಂದು ಅಗ್ನಿಗೆ ಹಾಗೂ ಕೂರ್ಚಕ್ಕೆ ಅರ್ಘ್ಯ ಕೊಟ್ಟು, ಅನಂತರ ಹೀಗೆಯೇ ಎರಡು ಸ್ಥಾನಗಳಲ್ಲೂ, **'ಗಂಧಮುಪತಿಷ್ಠತು । (ಎಡ) ಪುಷ್ಪಾಣಿ ಉಪತಿಷ್ಠಂತು । ತಿಲಮುಪತಿಷ್ಠತು । ದೂರ್ವಾಮುಪತಿಷ್ಠತು । ಧೂಪಮುಪತಿಷ್ಠತು । ದೀಪಮುಪತಿಷ್ಠತು ॥'** ಎಂದು ಉಪಚಾರ ಮಾಡಿ (ಬಲ) ಕೈಮುಗಿದು,

**ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।**
**ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ ॥**

**ಅಸ್ಮತ್ಪಿತುಃ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ......ಶ್ರಾದ್ಧೇ ಆಸನಾದ್ಯುಪಚಾರ ಯಥಾ ಶಾಸ್ತ್ರೀಯಮಸ್ತ್ವಿತಿ ಭವಂತೋ ಬ್ರುವಂತು ॥ (ಶಾಸ್ತ್ರೀಯಮಸ್ತು) ॥**

**(ಎಡ) ಪಿತುಃ .......ಗೋತ್ರಸ್ಯ ..........ಶರ್ಮಣಃ ಪ್ರೇತಸ್ಯ ಮಹೈಕೋದ್ದಿಷ್ಟ ಶ್ರಾದ್ಧಾಂಗ ಪ್ರೇತಾಗ್ನೌಕರಣಹೋಮಂ (ಬಲ) ಕರಿಷ್ಯೇ ॥ (ಕುರುಷ್ವ) ॥**

–ಎಂದು ಅಗ್ನಿ ಮತ್ತು ಕೂರ್ಚಸ್ಥಾನದಲ್ಲಿ ಮೂರು ಬಾರಿ ತೀರ್ಥವನ್ನು ಕೊಟ್ಟು, ಬ್ರಾಹ್ಮಣಕೂರ್ಚದ ಎದುರು ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ಪಶ್ಚಿಮಾಗ್ರವಾಗಿ ಎಲೆ ಹಾಕಿ ಹಾಗೆಯೇ ಗೋಗ್ರಾಸಕ್ಕೂ ಪೂರ್ವಾಗ್ರವಾಗಿ ಎಲೆ ಹಾಕಿ ಜಲಕೂರ್ಚದಿಂದ ಹವಿಸ್ಸಿಗೆ ಹಾಗೂ ಎಲೆಗೆ ಪ್ರೋಕ್ಷಣೆ ಮಾಡಿ, ಎಲೆ ಒರಸಿ ಅನ್ನಕ್ಕೆ ಎರಡು ಬಾರಿ ಎಲೆಗೆ ಒಂದು ಬಾರಿ ಅಭಿಘಾರ ಮಾಡಿ ಸೂರ್ಯನಾರಾಯಣನಿಗೆ ಅರ್ಪಿಸಿ ಹವಿಸ್ಸಿಗೆ ನಿರ್ಮಾಲ್ಯತೀರ್ಥ ಹಾಗೂ ತುಳಸಿ ಹಾಕಿ ಎಲೆಗಳಿಗೆ ಅನ್ನವನ್ನು ಬಡಿಸಿ, ಎರಡು ಬಾರಿ ಅಭಿಘಾರ ಮಾಡಿ, ಅಗ್ನಿಯಲ್ಲಿ ವ್ಯಾಹೃತಿಹೋಮ ಮಾಡಿ (ಎಡ) ಸ್ವಲ್ಪ ಅನ್ನವನ್ನು ಹಿಡಿದು,

**ಪಿತ್ರೇ[ಮಾತ್ರೇ] ......ಗೋತ್ರಾಯ [ಗೋತ್ರಾಯೈ] .......ಶರ್ಮಣೇ [ನಾಮ್ನ್ಯೈ] ಪ್ರೇತಾಯ [ಪ್ರೇತಾಯೈ] ಯಮಾಯ ಚ ಸ್ವಾಹಾ ॥**

–ಎಂದು ಅಗ್ನಿಗೆ ಹಾಕಿ, **ಪಿತ್ರೇ ........ಶರ್ಮಣೇ ........ಗೋತ್ರಾಯ ಪ್ರೇತಾಯ ಯಮಾಯ ಚ ಇದಂ ನ ಮಮ** ॥ –ಎಂದು ಹೇಳಿ ಅನಂತರ (ಬಲ) **ವ್ಯಾಹೃತಿಹೋಮ** ಮಾಡಬೇಕು.

ಅಕ್ಕಿ ನೀರು ಹಿಡಿದು, **ಪ್ರೇತಾಗ್ನೌಕರಣಹೋಮಾಖ್ಯೇನ ಕರ್ಮಣಾ ಪ್ರಾಣಸ್ಥ ಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್** ॥ –ಎಂದು ಕೃಷ್ಣಾರ್ಪಣ ಬಿಡಬೇಕು.

## ಬ್ರಾಹ್ಮಣಭೋಜನವಿಧಿಃ

ಕೂರ್ಚಸ್ಥಾನದಲ್ಲಿ (ಎಡ) **ಪೃಥಿವೀ ತೇ ಪಾತ್ರಂ ವಿಷ್ಣೋಃ ಕವ್ಯಂ ರಕ್ಷಸ್ವ ।**

ಜಲಕೂರ್ಚದಿಂದ ನೀರು ಹಿಡಿದು, **ಭೂರ್ಭುವಃಸ್ವಃ । ಸತ್ಯಂ ತ್ವರ್ತೇನ ಪರಿಷಿಂಚಾಮಿ** । ಎಂದು ಅಪ್ರದಕ್ಷಿಣೆಯಾಗಿ ಸುತ್ತುಕಟ್ಟಿ,

**ಓವ್ ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಮ್ ।**

**ಸಮೂಳ್ಹಮಸ್ಯ ಪಾಂಸುರೇ ॥**

–ಎಳ್ಳು, ತುಳಸಿ, ಗರಿಕೆ ಹಿಡಿದು,

**ಅಸ್ಮತ್ಪಿತುಃ .....ಶ್ರಾದ್ಧೇ ......ಗೋತ್ರಾಯ ......ಶರ್ಮಣೇ ......ಪ್ರೇತಾಯ ಕ್ಷುತ್ಪಿಪಾಸಾ ನಿವಾರಣಾರ್ಥಮ್ ಇದಂ ಸೋಪಸ್ಕರಾನ್ನಮುಪತಿಷ್ಠತು ॥**

–ಎಂದು ಕೂರ್ಚಬ್ರಾಹ್ಮಣನ ಎಲೆಯ ಅನ್ನದ ಮೇಲೆ ಬಿಡಬೇಕು. (ಬಲ) ತುಳಸಿ ನೀರು ಹಿಡಿದು ಪೂರ್ವಮುಖವಾಗಿ,

**ಸುರಭಿರ್ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದಾಶ್ರಿತಾ ।**
**ಗೋಗ್ರಾಸಸ್ತು ಮಯಾ ದತ್ತಃ ಸುರಭಿಃ ಪ್ರತಿಗೃಹ್ಯತಾಮ್ ॥**

ಗೋಗ್ರಾಸ ಬಿಟ್ಟು,

**ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।**
**ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥**

**ಅಸ್ಮತ್ಪಿತುಃ ........ಶ್ರಾದ್ಧೇ ಕೂರ್ಚಮುಖಬ್ರಾಹ್ಮಣಾರಾಧನಾಖ್ಯೇನ ಕರ್ಮಣಾ ಪಿತೃ[ಮಾತೃ]ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥**

(ಎಡ) ಎಳ್ಳುನೀರು ಹಿಡಿದು,

**ಪಿತ್ರೇ .....ಗೋತ್ರಾಯ ......ಶರ್ಮಣೇ ಪ್ರೇತಾಂತರ್ಯಾಮಿ ಪ್ರಾಣಸ್ಥಶ್ರೀಪ್ರಾಜ್ಞಾಯ ಇದಂ ಸೋಪಸ್ಕರಾನ್ನಮುಪತಿಷ್ಠತು ॥** ಎಂದು ಹೋಮದ ಅನ್ನದ ಮೇಲೆ ಹಾಕಿ, (ಬಲ) ತೀರ್ಥ ಹಿಡಿದು ಕೂರ್ಚದಲ್ಲಿ '**ಆಪೋಶನಮುಪತಿಷ್ಠತು** ॥' ಎಂದು ಕೊಟ್ಟು ಅಗ್ನಿಯಲ್ಲಿ ತುಪ್ಪದಿಂದ, '**ಅಮೃತೋಪಸ್ತರಣಮಸಿ ಸ್ವಾಹಾ** ॥' ಎಂದು ಆಜ್ಯಾಹುತಿ ನೀಡಿ, ಹೋಮದ ಅನ್ನದ ಮೇಲೆ ಸಟ್ಟುಗದಿಂದ ಕೂಡಿಸು ಚಿಹ್ನೆ ಹಾಕಿ, ಈಶಾನ್ಯದಿಂದ ನಾಲ್ಕು ಭಾಗದ ಅನ್ನವನ್ನು ಪ್ರತ್ಯೇಕವಾಗಿ ತೆಗೆದು ಅಗ್ನಿಯಲ್ಲಿ,

**ಪ್ರಾಣಾಯ ಸ್ವಾಹಾ । ಅಪಾನಾಯ ಸ್ವಾಹಾ । ವ್ಯಾನಾಯ ಸ್ವಾಹಾ । ಉದಾನಾಯ ಸ್ವಾಹಾ ॥**

–ಎಂದು ಕೊಟ್ಟು ಈಶಾನ್ಯದಿಂದ ನಾಲ್ಕು ಭಾಗದ ಸ್ವಲ್ಪ ಸ್ವಲ್ಪ ಅನ್ನ ತೆಗೆದು ಒಟ್ಟಿಗೆ ಮಾಡಿ '**ಸಮಾನಾಯ ಸ್ವಾಹಾ** ॥' ಎಂದು ಅಗ್ನಿಗೆ ಹಾಕಿ ಈಶಾನ್ಯದಿಂದಾರಂಭಿಸಿ ಒಂದೊಂದು ಭಾಗದ ಕೂಷ್ಮಾಂಡಖಂಡಮಿಶ್ರಿತಾನ್ನವನ್ನು '**ಉದೀರತಾಮ್**' ಎಂಬ ಎಂಟು ಮಂತ್ರಗಳನ್ನು ನಾಲ್ಕು ಬಾರಿ ಪುನರಾವರ್ತನೆ ಮಾಡಿ, ಮೂವತ್ತೆರಡು ಆಹುತಿಗಳನ್ನು ಕೊಡಬೇಕು. ಉದ್ದೇಶತ್ಯಾಗ ಹೇಳಲಿಕ್ಕಿಲ್ಲ. (ಹವಿಸ್ಸನ್ನು ಕೊನೆಗೆ ಪಿಂಡದಾನಕ್ಕೆ ಬೇಕಾಗುವಷ್ಟು ಉಳಿಸಬೇಕು.)

(ಎಡ) **ಉದೀರತಾಮಿತಿ ಅಷ್ಟರ್ಚಸ್ಯ ಸೂಕ್ತಸ್ಯ ಶಂಖಃ ಪಿತರಸ್ತ್ರಿಷ್ಟುಪ್ । ಮಹೈಕೋದ್ದಿಷ್ಟಹೋಮೇ ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀತ್ಯರ್ಥೇ ಮಹೈಕೋದ್ದಿಷ್ಟಾನ್ನಹೋಮೇ ವಿನಿಯೋಗಃ ॥**

**ಓಮ್ ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ । ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ಸ್ವಾಹಾ ॥ ೧ ॥ ಇದಂ ಪಿತೃಭ್ಯೋ ನಮೋ ಅಸ್ತ್ವದ್ಯ ಯೇ ಪೂರ್ವಾಸೋ ಯ ಉಪರಾಸ ಈಯುಃ । ಯೇ ಪಾರ್ಥಿವೇ ರಜಸ್ಯಾ ನಿಷತ್ತಾ ಯೇ ವಾ ನೂನಂ ಸುವೃಜನಾಸು ವಿಕ್ಷು ಸ್ವಾಹಾ ॥ ೨ ॥ ಆಹಂ ಪಿತೄನ್ ತ್ಸುವಿದತ್ರಾ ಅವಿತ್ಸಿ ನಪಾತಂ ಚ ವಿಕ್ರಮಣಂ ಚ ವಿಷ್ಣೋಃ । ಬರ್ಹಿಷದೋ ಯೇ ಸ್ವಧಯಾ ಸುತಸ್ಯ ಭಜಂತ ಪಿತ್ವಸ್ತ ಇಹಾಗಮಿಷ್ಠಾಃ ಸ್ವಾಹಾ ॥ ೩ ॥ ಬರ್ಹಿಷದಃ ಪಿತರ ಊತ್ಯರ್ವಾಗಿಮಾ ವೋ ಹವ್ಯಾ ಚಕೃಮಾ ಜುಷಧ್ವಮ್ । ತ ಆ ಗತಾವಸಾ ಶಂತಮೇನಾಽಥಾ ನಃ ಶಂ ಯೋರರಪೋ**

ದಧಾತ ಸ್ವಾಹಾ ॥ ೪ ॥ ಉಪಹೂತಾಃ ಪಿತರಃ ಸೋಮ್ಯಾಸೋ ಬರ್ಹಿಷ್ಯೇಷು ನಿಧಿಷು ಪ್ರಿಯೇಷು । ತ ಆ ಗಮಂತು ತ ಇಹ ಶ್ರುವಂತ್ವಧಿ ಬ್ರುವಂತು ತೇಽವಂತ್ವಸ್ಮಾನ್ ಸ್ವಾಹಾ ॥ ೫ ॥ ಆಚ್ಯಾ ಜಾನು ದಕ್ಷಿಣತೋ ನಿಷದ್ಯೇಮಂ ಯಜ್ಞಮಭಿ ಗೃಣೀತ ವಿಶ್ವೇ । ಮಾ ಹಿಂಸಿಷ್ಟ ಪಿತರಃ ಕೇನ ಚಿನ್ನೋ ಯದ್ವ ಆಗಃ ಪುರುಷತಾ ಕರಾಮ ಸ್ವಾಹಾ ॥ ೬ ॥ ಆಸೀನಾಸೋ ಅರುಣೀನಾಮುಪಸ್ಥೇ ರಯಿಂ ಧತ್ತ ದಾಶುಷೇ ಮರ್ತ್ಯಾಯ । ಪುತ್ರೇಭ್ಯಃ ಪಿತರಸ್ತಸ್ಯ ವಸ್ವಃ ಪ್ರ ಯಚ್ಛತ ತ ಇಹೋರ್ಜಂ ದಧಾತ ಸ್ವಾಹಾ ॥ ೭ ॥ ಯೇ ನಃ ಪೂರ್ವೇ ಪಿತರಃ ಸೋಮ್ಯಾಸೋಽನೂಹಿರೇ ಸೋಮಪೀಥಂ ವಸಿಷ್ಠಾಃ । ತೇಭಿರ್ಯಮಃ ಸಂರರಾಣೋ ಹವೀಂಷ್ಯುಶನ್ನುಶದ್ಭಿಃ ಪ್ರತಿಕಾಮಮತ್ತು ಸ್ವಾಹಾ ॥ ೮ ॥ ತೃಪ್ತೋಽಸಿ । [ತೃಪ್ತೋಽಸ್ಮಿ]

ಕೂರ್ಚಬ್ರಾಹ್ಮಣರ ಎದುರು ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ದಕ್ಷಿಣಾಗ್ರವಾಗಿ ಒಂದು ದರ್ಭೆ ಇಟ್ಟು ದರ್ಭೆಯ ಮೇಲೆ ತಿಲೋದಕ ಕೊಟ್ಟು ಸ್ವಲ್ಪ ಅನ್ನ ಹಿಡಿದು, '**ಅಸ್ಮತ್ಪಿತುಃ ....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ವಿಕಿರಬಲಿಮುಪತಿಷ್ಠತು ॥**' –ಎಂದು ದರ್ಭೆಯ ಮೇಲಿಟ್ಟು ಅನ್ನದ ಮೇಲೆ ತಿಲೋದಕ ಬಿಡಬೇಕು.

(ಬಲ) ನೀರು ಹಿಡಿದು, '**ಅಮೃತಾಪಿಧಾನಮಸಿ ॥**' ಎಂದು ಅಗ್ನಿಗೆ ಹಾಗೂ ಕೂರ್ಚಸ್ಥಾನದಲ್ಲಿ ನೀರು ಕೊಟ್ಟು, '**ಉತ್ತರಾಪೋಶನಮುಪತಿಷ್ಠತು ॥**' ಜಲಕೂರ್ಚದಿಂದ ನೀರು ಹಿಡಿದು (ಎಡ) '**ಹಸ್ತಪ್ರಕ್ಷಾಲನಾದ್ಯುಪಚಾರಾ ಉಪತಿಷ್ಠಂತು ॥**' ಎಂದು ಅಗ್ನಿಗೆ ಹಾಗೂ ಕೂರ್ಚಸ್ಥಾನದಲ್ಲಿ ನೀರು ಕೊಟ್ಟು (ಬಲ) **ವ್ಯಸ್ತಸಮಸ್ತವ್ಯಾಹೃತಿ**ಯಿಂದ ಆಜ್ಯಹೋಮಿಸಿ ಪಿಂಡಪ್ರದಾನ ಮಾಡಬೇಕು.

## ಪಿಂಡಪ್ರದಾನಮ್

ತಮ್ಮಂದಿರಿದ್ದಲ್ಲಿ ಕ್ರಿಯಾಕರ್ತೃಗಳು ಕಿರಿಯರು ಹಿರಿಯನ ಎಡಭಾಗದಲ್ಲಿ (ತಮ್ಮ ಹಿಂಭಾಗದಲ್ಲಿ ಅಣ್ಣ ಇರುವಂತೆ) ಪೂರ್ವಮುಖವಾಗಿ ಕುಳಿತುಕೊಳ್ಳಬೇಕು. ಆಚಮನ ಪ್ರಾಣಾಯಾಮಗಳನ್ನು ಮಾಡಿ, ತಮ್ಮಂದಿರು ಒಂದು ಎಳೆಯ ಪವಿತ್ರವನ್ನು ಆಚಾರ್ಯರಿಂದ ಪಡೆದು, ಧರಿಸಿ, ಹಿರಿಯನಿಂದ ಕೂಡಿಕೊಂಡು ಸಂಕಲ್ಪ ಮಾಡಬೇಕು–

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಂ** (ಎಡ) **ಪಿತುಃ ......ಶರ್ಮಣಃ**

**.....ಗೋತ್ರಸ್ಯ ಪ್ರೇತಸ್ಯ ಮೃತಾಹಾತ್ ಏಕಾದಶೇಽಹನಿ** (ಬಲ) **ಅಗ್ನೌ ಮಹೈಕೋದ್ದಿಷ್ಟ ಹೋಮಾನಂತರೇ ಪಿಂಡದಾನಂ ಕರಿಷ್ಯೇ ॥ (ಕುರುಷ್ವ) ॥**

ದಕ್ಷಿಣಾಭಿಮುಖವಾಗಿ ಕುಳಿತು (ಎಡ) ಹಿರಿಯನು ಕೂರ್ಚದ ಎದುರುಭಾಗದಲ್ಲಿ ಹಾಗೂ ತಮ್ಮಂದಿರು ತಮ್ಮ ತಮ್ಮ ಎದುರು, ಜೇಡಿಯಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲ ಮಾಡಿ, ಹಾಗೆಯೇ ಎಡಭಾಗದಲ್ಲಿ ಹವಿಸ್ಸಿಗೆ ಎಲೆ ಹಾಕಿ, ಹೋಮದ ಉಳಿದ ಹವಿಸ್ಸನ್ನು ತಮ್ಮತಮ್ಮ ಎಲೆಗಳಿಗೆ ಹಾಕಿಕೊಂಡು ಹಾಲು, ಮೊಸರು, ತುಪ್ಪ, ಬೆಲ್ಲ ಹಾಕಿ ಕಲಸಿ ಒಂದೊಂದು ಪಿಂಡವನ್ನು ಮಾಡಿಟ್ಟುಕೊಳ್ಳಬೇಕು.

## ಬರ್ಹಿಷ್ಯಾಸನಾಽವಾಹನಮ್

ಒಂದು ಎಳೆಯ ಮುಷ್ಟಿದರ್ಭೆ ಹಿಡಿದು, '**ಅಸ್ಮತ್ಪಿತುಃ ಮೃತಾಹಾತ್ ಏಕಾದಶೇಽಹನಿ ಏಕೋದ್ದಿಷ್ಟಶ್ರಾದ್ಧೇ ಪಿಂಡಸ್ಥಾನೇ ಉಲ್ಲೇಖನಮುಪತಿಷ್ಠತು ॥**' ಎಂದು ತ್ರಿಕೋನ ಮಂಡಲದ ಒಳಗೆ ಉತ್ತರದಿಂದ ದಕ್ಷಿಣಕ್ಕೆ ಉಲ್ಲೇಖನ ಮಾಡಿ ದರ್ಭೆಯನ್ನು ಮಂಡಲ ದಲ್ಲಿಟ್ಟು ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ ದರ್ಭೆಯನ್ನು ಹಿಂದೆ ಬಿಸಾಡಿ ಕೈತೊಳೆದು, ಎಳ್ಳನ್ನು ಹಿಡಿದು, '**ಅಸ್ಮತ್ಪಿತುಃ ಮೃತಾಹಾತ್ ಏಕಾದಶೇಽಹನಿ ಪಿಂಡಸ್ಥಾನೇ ತಿಲಮುಪತಿಷ್ಠತು ॥**' –ಎಂದು ತ್ರಿಕೋನಮಂಡಲದ ಒಳಗೆ ಉತ್ತರದಿಂದ ದಕ್ಷಿಣಕ್ಕೆ ಎಳ್ಳು ಹರಡಿ, ನಾಲ್ಕು ತುದಿ ದರ್ಭೆಯನ್ನು ದಕ್ಷಿಣಾಗ್ರವಾಗಿ ಹಿಡಿದು '**ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ಮಂಡಲಮಧ್ಯೇ ಬರ್ಹಿರುಪತಿಷ್ಠತು ॥**' ಎಂದು ಮಂಡಲದ ನಡುವೆ ಇಟ್ಟು, ಎಳ್ಳು ನೀರು ಹಿಡಿದು, '**ಬರ್ಹಿಷ್ಯುಪರಿ ತಿಲೋದಕಮುಪತಿಷ್ಠತು ॥**' –ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಕೊಟ್ಟು, ಪುನಃ ಒಂದು ತುದಿ ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು, '**ಅಸ್ಮತ್ಪಿತುಃ ಮೃತಾಹಾತ್ ...ಶ್ರಾದ್ಧೇ ಬರ್ಹಿಷ್ಯಾಸನಮುಪ–ತಿಷ್ಠತು ॥**' ಎಂದು ಬರ್ಹಿಸ್ಸಿನ ಮೇಲೆ ಅಡ್ಡ ಇಟ್ಟು, ಪುನಃ ಜಲಕೂರ್ಚದಿಂದ ನೀರು ಹಿಡಿದು, '**ಆಸನಾಂತೇ ಉದಕಮುಪತಿಷ್ಠತು ॥**' ಎಂದು ಆಸನದಲ್ಲಿ ನೀರು ಬಿಟ್ಟು ಗರಿಕೆ ಮತ್ತು ಎಳ್ಳು ಹಿಡಿದು, '**ಅಸ್ಮತ್ಪಿತುಃ ಮೃತಾಹಾತ್ .....ಶ್ರಾದ್ಧೇ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಆವಾಹನಮುಪತಿಷ್ಠತು ॥**' ಎಂದು ಮಂಡಲದ ಆಸನದಲ್ಲಿಟ್ಟು, ಜಲಕೂರ್ಚದಿಂದ ನೀರನ್ನು ಹಿಡಿದು, '**ಆವಾಹನಾಂತೇ ಉದಕಮುಪತಿಷ್ಠತು ॥**' ಎಂದು ನೀರು ಬಿಟ್ಟು, (ಎಡ) ಅರ್ಘ್ಯಪಾತ್ರದ ಕೂರ್ಚ, ನೀರು ಹಾಗೂ ಎಳ್ಳು ಹಿಡಿದು (ಬಲ) '**ಅಸ್ಮತ್ಪಿತುಃ ...ಶ್ರಾದ್ಧೇ ...ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಅರ್ಘ್ಯಮುಪತಿಷ್ಠತು ॥**' ಎಂದು ಎಳ್ಳುನೀರು ಬಿಟ್ಟು, (ಎಡ) ಎಡಕಾಲೂರಿ ಕೂರ್ಚದ ಗಂಟು ಬಿಚ್ಚಿ ಅರ್ಘ್ಯ ಪಾತ್ರವನ್ನು ನಾರಾಯಣಸ್ಮರಣೆಯೊಂದಿಗೆ ಕಣ್ಣುಮುಚ್ಚಿಕೊಂಡು ಎಡಕಾಲಿನ ಹೆಬ್ಬೆರಳಿನಿಂದ ತುಂಡುಮಾಡಿ ಹಿಂದೆ ಬಿಸಾಡಿ, ಅನಂತರ '**ವಾಸೋದಕಕೇಶೋದಕ ತಿಲೋದಕಮುಪ–ತಿಷ್ಠತು ॥**' ಎಂದು ಕೊಟ್ಟು (ಬಲ) ಕೈಮುಗಿದು,

**ಕೃಷ್ಣ ಕೃಷ್ಣ ಕೃಪಾಲೋ ತ್ವಮಗತೀನಾಂ ಗತಿರ್ಭವ ।**
**ಸಂಸಾರಾರ್ಣವಮಗ್ನಾನಾಂ ಪ್ರಸೀದ ಪುರುಷೋತ್ತಮ ॥**

–ಎಂದು ಪ್ರಾರ್ಥಿಸಬೇಕು. ಪೂರ್ವಮುಖವಾಗಿ ಕುಳಿತು,

## ಪಿಂಡಪ್ರದಾನಮ್

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ .....ಶ್ರಾದ್ಧಾಂಗ ಕೂರ್ಚಮುಖಬ್ರಾಹ್ಮಣ ಭೋಜನಾಂತೇ** (ಬಲ) **ಬರ್ಹಿಷಿ ತಿಲೋದಕ ಪಿಂಡಪ್ರದಾನಾಖ್ಯಂ ಚ ಕರ್ಮ ಕರಿಷ್ಯೇ ॥ (ಕುರುಷ್ವ) ॥**

**ವಿಶ್ವೇಶಂ ಮಾಧವಂ ಢುಂಢಿಂ ದಂಡಪಾಣಿಂ ಚ ಭೈರವಮ್ ।**
**ವಂದೇ ಕಾಶೀಂ ಗುಹಾಂ ಗಂಗಾಂ ಭವಾನೀಂ ಮಣಿಕರ್ಣಿಕಾಮ್ ॥**

**ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।**
**ತಂ ದೃಷ್ಟ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ ॥**

–ಎಂಬ ಮಂತ್ರ ಪಠಿಸಿ, '**ಪಿಂಡದಾನಸ್ಯ ಅನುಜ್ಞಾ ॥**' –ಎಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಿ [**ಅಸ್ತು ಪಿಂಡದಾನಮ್ ।**] ಎಂದು ಪ್ರತಿವಚನ ಪಡೆದು, (ಎಡ) ಪಿತೃತೀರ್ಥ ದಿಂದ ತಿಲೋದಕ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ಏಕಾದಶೇಽಹನಿ ಏಕೋದ್ದಿಷ್ಟಶ್ರಾದ್ಧೇ ಪಿಂಡಸ್ಥಾನೇ ಮಾರ್ಜನಮುಪತಿಷ್ಠತು ॥** –ಎಂದು ಮಂಡಲದ ಮೇಲಿರುವ ಬರ್ಹಿಸ್ಸಿನ ಮೇಲೆ ತಿಲೋದಕ ಬಿಟ್ಟು, ಪಿಂಡವನ್ನು ದಕ್ಷಿಣಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ......ಶ್ರಾದ್ಧೇ ....ಶರ್ಮಣಃ .....ಗೋತ್ರಸ್ಯ ಪ್ರೇತಸ್ಯ ಕ್ಷುದ್ಬಾಧಾನಿವಾರಣದ್ವಾರಾ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಮ್ ಅಯಂ ಪಿಂಡ ಉಪತಿಷ್ಠತು ॥** –ಎಂದು ತ್ರಿಕೋನಾಕಾರದ ಮಂಡಲದ ಮೇಲೆ ಪಿಂಡವನ್ನಿಟ್ಟು, ತಿಲೋದಕ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ .......ಶ್ರಾದ್ಧೇ ....ಶರ್ಮಣಃ .....ಗೋತ್ರಸ್ಯ ಪ್ರೇತಸ್ಯ ಪಿಂಡಸ್ಯೋಪರಿ ತಿಲೋದಕಮುಪತಿಷ್ಠತು ॥** –ಎಂದು ಎಳ್ಳು ನೀರು ಬಿಟ್ಟು, ಅನಂತರ, ಎಳ್ಳು ನೀರು ಹಿಡಿದು '**ಗಾಯತ್ರ್ಯರ್ಚನಮುಪತಿಷ್ಠತು ॥**' ಎಂದು ಪಿಂಡದ ಮೇಲೆ ಬಿಟ್ಟು, ಹವಿಸ್ಸಿನ ಪಾತ್ರೆಯ ಅಡಿಯ ಮಸಿಯನ್ನು ಅಂಗುಷ್ಠದಿಂದ ಒರಸಿ ತೆಗೆದು, '**ಅಸ್ಮತ್ ಪಿತುಃ .....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಅಂಜಮುಪತಿಷ್ಠತು ॥**' ಎಂದು ಪಿಂಡದ ಮೇಲೆ ಹಚ್ಚಿ, ಎಳ್ಳನ್ನು ತಿಕ್ಕಿ ನೀರು ಹಿಡಿದು, '**ಅಸ್ಮತ್ ಪಿತುಃ .....ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಅಭ್ಯಂಜನಮುಪತಿಷ್ಠತು ॥**' ಎಂದು ಪಿಂಡದ ಮೇಲೆ ಬಿಟ್ಟು,

ಹವಿಸ್ಸಿನ ಪಾತ್ರೆಯ ಒಳಗಿನ ನೀರನ್ನು ಹಿಡಿದು, **'ಇದಂ ತೇ ಪಾತ್ರಪ್ರಕ್ಷಾಲನೋದಕ–ಮುಪತಿಷ್ಠತು ॥'** ಎಂದು ಪಿಂಡದ ಮೇಲೆ ಬಿಟ್ಟು, ತನ್ನ ಬಟ್ಟೆಯ ಅಂಚಿನ ನೂಲನ್ನು ತೆಗೆದು, ಪಿಂಡದ ಮೇಲೆ **'ಕಶಿಪೂಪಬರ್ಹಣೀ ದಶಾಮುಪತಿಷ್ಠತು ॥** ಎಂದು ಹಾಕಬೇಕು. ಎಳ್ಳು ಗರಿಕೆ ನೀರು ಹಿಡಿದು,

**ಪಿಂಡಸ್ಯೋಪರಿ ಅಂಜನಾಭ್ಯಂಜನಪಂಚಾಮೃತವಾಸದಶಾತುಲಸೀಪತ್ರ, ದೂರ್ವಾಪತ್ರತೀರ್ಥಪುಷ್ಪಾಣ್ಯುಪತಿಷ್ಠಂತು ॥** –ಎಂದು ಪಿಂಡದ ಮೇಲೆ ಹಾಕಬೇಕು.

## ಬಲಿಹರಣಮ್

ಮುಷ್ಟಿದರ್ಭೆ ಹಿಡಿದು, **ಅಸ್ಮತ್ಪಿತುಃ ಮೃತಾಹಾತ್ .....ಶ್ರಾದ್ಧೇ ......ಶರ್ಮಣಃ .....ಗೋತ್ರಸ್ಯ ಪ್ರೇತಸ್ಯ ಪಿಂಡಸ್ಯ ಪರಿತಃ ಬಲಿಸ್ಥಾನೇ ದರ್ಭಪತ್ರಮುಪತಿಷ್ಠತು ॥** – ಎಂದು ಅಪ್ರದಕ್ಷಿಣೆಯಾಗಿ ಪಿಂಡಕ್ಕೆ ತಾಗದ ಹಾಗೆ ಪಿಂಡದ ಸುತ್ತಲೂ ತ್ರಿಕೋನಾಕಾರವಾಗಿ ದರ್ಭೆಯನ್ನು ಹಾಕಬೇಕು. ತಿಲೋದಕ ಹಿಡಿದು,

**ದರ್ಭಾಣಾಮುಪರಿ ಏತತ್ತಿಲೋದಕಮುಪತಿಷ್ಠತು ॥** –ಎಂದು ಪಿಂಡದ ಸುತ್ತ ಹಾಕಿದ ದರ್ಭೆಯ ಮೇಲೆ ತಿಲೋದಕ ಕೊಟ್ಟು, ಅನ್ನವನ್ನು ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ .....ಶ್ರಾದ್ಧೇ ....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಪಿಂಡಸ್ಯ ಪರಿತಃ ಅಯಂ ಬಲಿರುಪತಿಷ್ಠತು ॥**

ಎಂದು ತ್ರಿಕೋನಾಕಾರವಾಗಿ ಹಾಕಿದ ದರ್ಭೆಯ ಮೇಲೆ ಅಪ್ರದಕ್ಷಿಣೆಯಾಗಿ ಯಮಾದಿ ಚತುರ್ದಶನಾಮಮಂತ್ರದಿಂದ ಬಲಿ ಹಾಕಬೇಕು.

**ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।**
**ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥**
**ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।**
**ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ತೇ ನಮ ॥**

–ಎಂದು ಬಲಿಹಾಕಿ, ಎಳ್ಳುನೀರು ಹಿಡಿದು,

**ಬಲೇರುಪರಿ ತಿಲೋದಕಮುಪತಿಷ್ಠತು ॥** –ಎಂದು ಬಲಿಯ ಮೇಲೆ ತಿಲೋದಕ ಬಿಡಬೇಕು.

## ವಾಯಸಬಲಿಃ

ಎಳ್ಳು, ತುಳಸಿತೀರ್ಥ, ನೀರು ಹಿಡಿದು, **'ಅಸ್ಮತ್ಪಿತುಃ ಮೃತಾಹಾತ್ .......ಶ್ರಾದ್ಧೇ ....ಶರ್ಮಣಃ .....ಗೋತ್ರಸ್ಯ ಪ್ರೇತಸ್ಯ ಕಾಕಬಲಿರುಪತಿಷ್ಠತು ॥** –ಎಂದು ಹವಿಸ್ಸಿನ ಎಲೆಗೆ ಹಾಕಿ ಎಲೆಯನ್ನು ಹಿಡಿದು **'ಕಾಕಬಲಿರುದ್ವಾಸನಮುಪತಿಷ್ಠತು ॥'** –ಎಂದು

ಎಲೆಯನ್ನು ದಕ್ಷಿಣಕ್ಕೆ ಸ್ವಲ್ಪ ಸರಿಸಿ, ಪ್ರಾಜ್ಞರೂಪಿ ಪರಮಾತ್ಮನನ್ನು ಸ್ಮರಿಸಿ ನಮಸ್ಕಾರ ಮಾಡಬೇಕು. ಅನಂತರ ಎಲೆಯನ್ನು ಎತ್ತಿಕೊಂಡು ಕನಿಷ್ಠಪೂರ್ವಕರಾಗಿ ಸ್ವಲ್ಪ ದೂರ ಹೋಗಿ,

**ಯಮೋಽಸಿ ಯಮದೂತೋಽಸಿ ವಾಯಸೋಽಸಿ ಮಹಾಬಲ ।**
**ಸಪ್ತಜನ್ಮಕೃತಂ ಪಾಪಂ ಬಲಿಂ ಭುಂಜಂತು ವಾಯಸಾಃ ॥**

ಎಲೆಯನ್ನು ದಕ್ಷಿಣಾಗ್ರವಾಗಿಟ್ಟು, ಕೈತೊಳೆದು ಕೈಚಪ್ಪಾಳೆ ಬಡಿದು ಕಾಗೆಗಳನ್ನು ಆಹ್ವಾನಿಸಿ, ಕೈಕಾಲು ತೊಳೆದು, ವೇದಿಕೆಯ ಬಳಿ ಕನಿಷ್ಠಪೂರ್ವಕರಾಗಿ ಬರಬೇಕು. (ಬಲ) ಪೂರ್ವಾಭಿಮುಖವಾಗಿ ಕುಳಿತು, ಪವಿತ್ರ ತೆಗೆದು, ಆಚಮನ ಮಾಡಿ ಪುನಃ ಪವಿತ್ರ ಧರಿಸಿಕೊಳ್ಳಬೇಕು.

## ತಾಂಬೂಲದಕ್ಷಿಣಾದಿ

ವೀಳ್ಯದೆಲೆ, ಅಡಕೆ, ಎಳ್ಳು, ಚಿಲ್ಲರೆ, ನೀರು ಹಿಡಿದು,

**ಅಸ್ಮತ್ಪಿತುಃ .....ಶ್ರಾದ್ಧೇ ....ಶರ್ಮಣಃ ......ಗೋತ್ರಸ್ಯ ಪ್ರೇತಸ್ಯ ಇದಂ ಸತಿಲಕ್ರಮುಕ ತಾಂಬೂಲ ಹಿರಣ್ಯಮುಪತಿಷ್ಠತು ॥** ಎಂದು ಬ್ರಾಹ್ಮಣಕೂರ್ಚದ ಎಡ ಭಾಗದಲ್ಲಿಡಬೇಕು.

ಅಕ್ಷತೆಯನ್ನು ಹಿಡಿದು ಕೇಶವಾದಿನಾಮದಿಂದ ಪಿಂಡದ ಮೇಲೆ ಹಾಕಿ **'ಷೋಡಶೋಪಚಾರಾ ಉಪತಿಷ್ಠಂತು ।'** ಎಂದು ಹೇಳಿ, (ಎಡ) ತಿಲೋದಕ ಹಿಡಿದು,

**ಅಸ್ಮತ್ಪಿತುಃ .....ಶ್ರಾದ್ಧೇ ......ಶರ್ಮಣಃ .....ಗೋತ್ರಸ್ಯ ಪ್ರೇತಸ್ಯ ಪಿಂಡಸ್ಯೋಪರಿ ಏತತ್ತಿಲೋದಕಮುಪತಿಷ್ಠತು ॥** –ಎಂದು ತಿಲೋದಕ ನೀಡಿ ಪಿಂಡವನ್ನು ಮುಟ್ಟಿ,

**ಅಸ್ಮತ್ಪಿತುಃ .....ಶ್ರಾದ್ಧೇ .....ಶರ್ಮಣಃ ......ಗೋತ್ರಸ್ಯ ಪ್ರೇತಸ್ಯ ಪಿಂಡಮುದ್ವಾಸನ ಮುಪತಿಷ್ಠತು ॥** –ಎಂದು ಪಿಂಡವನ್ನು ಅಲ್ಲಾಡಿಸಿ, ಬಲಿಯನ್ನು ಛೇದನ ಮಾಡುತ್ತಾ,

**ಅಸ್ಮತ್ಪಿತುಃ .....ಶ್ರಾದ್ಧೇ ....ಶರ್ಮಣಃ .......ಗೋತ್ರಸ್ಯ ಪ್ರೇತಸ್ಯ ಬಲೀನಾಮುದ್ವಾಸನ ಮುಪತಿಷ್ಠತು ॥** –ಎಂದು ಬಲಿಛೇದನ ಮಾಡಿ ಕೈತೊಳೆದು ಪಿಂಡಸ್ಥಾನದಲ್ಲಿ ವಾಸೋದ ಕಾದಿಗಳನ್ನು ನೀಡಿ, ಅನಂತರ ತಾಯಿ ಹಾಗೂ ಹೆಣ್ಣುಮಕ್ಕಳು ಕನಿಷ್ಠಪೂರ್ವಕರಾಗಿ ಒಬ್ಬ ಕರ್ತೃವಿನ ಪಿಂಡದ ಮೇಲೆ ವಾಸೋದಕಾದಿಗಳನ್ನು ನೀಡಿ ಕರ್ಮಿಯು ಪಿಂಡದ ಮೇಲೆ ದಕ್ಷಿಣಾಗ್ರವಾಗಿ ಒಂದು ದರ್ಭೆ ಇಟ್ಟು (ಬಲ) ಅಕ್ಷತೆ ಹಿಡಿದು,

**ಅನಾದಿ ನಿಧನೋ ದೇವಃ ಚಕ್ರಶಂಖಗದಾಧರಃ ।**
**ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದೋ ಭವ ॥**

**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥**

–ಎಂದು ಪಿಂಡಗಳಿಗೆ ಅಕ್ಷತೆ ಹಾಕಿ ನಮಸ್ಕಾರ ಮಾಡಬೇಕು.

## ಕೃಷ್ಣಾರ್ಪಣಮ್

(ಬಲ) ಚಿಲ್ಲರೆ, ತುಳಸೀನೀರು ಹಿಡಿದು ಪೂರ್ವಾಭಿಮುಖವಾಗಿ, **ಅಸ್ಮತ್ಪಿತುಃ .....ಶ್ರಾದ್ಧಸ್ಯ ಸಂಪೂರ್ಣಫಲಪ್ರಾಪ್ತ್ಯರ್ಥಮ್ ಆಚಾರ್ಯಾಯ ಯಥಾಶಕ್ತಿ ದಕ್ಷಿಣಾಂ ಪ್ರತಿಪಾದಯಾಮಿ ॥** ಎಂದು ದಕ್ಷಿಣೆಯನ್ನು ಭೂಮಿಯ ಮೇಲೆ ಇಟ್ಟು ಕೈಮುಗಿಯಬೇಕು. ಅನಂತರ ದಕ್ಷಿಣೆಯ ಮೇಲಿರುವ ತುಳಸಿಯನ್ನು ತೆಗೆದು, '**ಯಸ್ಯ ಸ್ಮೃತ್ಯಾ ಚ .....**' ಮಂತ್ರ ಪಠಿಸಿ,

**ಅಸ್ಮತ್ಪಿತುಃ .....ಶ್ರಾದ್ಧಕರ್ಮಣಾ ಪಿತೃಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥**

**ಅಚ್ಯುತಃ ಕಲ್ಪವೃಕ್ಷಶ್ಚ ಅನಂತಃ ಕಾಮಧೇನವಃ ।**<br>
**ಚಿಂತಾಮಣಿಸ್ತು ಗೋವಿಂದೋ ನಾಮತ್ರಯಮುದಾಹೃತಮ್ ॥**

ತುಲಸಿಯನ್ನು ಸ್ವಲ್ಪ ಪಿಂಡಕ್ಕೆ ಹಾಕಿ ಉಳಿದುದನ್ನು ತನ್ನ ಕಿವಿಯಲ್ಲಿಟ್ಟುಕೊಳ್ಳಬೇಕು. ಅನಂತರ,

## ಪಿಂಡವಿಸರ್ಜನಮ್

ತಮ್ಮ ಹರಿವಾಣದಲ್ಲಿ ನೀರು ಮತ್ತು ತೀರ್ಥ ಹಾಕಿ,

**ಓಂ ಯತ್ರ ತದ್ವಿಷ್ಣುರ್ಮಹೀಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥**

**ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ರಯಮ್ ।**<br>
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

**ವೇಣೀಮಾಧವಾಯ ನಮಃ । ಬಿಂದುಮಾಧವಾಯ ನಮಃ । ಗಯಾಗದಾಧರಾಯ ನಮಃ ॥**

(ಎಡ) '**ಪ್ರೇತಪಿಂಡೋಽಯಂ ಗಯಾರ್ಪಿತೋಽಸ್ತು ।**' –ಎಂದು ಪಿಂಡವನ್ನು, ಬಲಿಯನ್ನು ಹರಿವಾಣದಲ್ಲಿ ಇಟ್ಟು, ಅನಂತರ ಎಳ್ಳುನೀರು ಹಿಡಿದು, '**ಇದಂ ಸತಿಲೋದಕ ಪಿಂಡಪ್ರದಾನಂ ಪ್ರೇತಾಪ್ಯಾಯನಮಸ್ತು ॥**' ಎಂದು ಪಿಂಡದ ಸ್ಥಳದಲ್ಲಿ ತಿಲೋದಕ ಕೊಟ್ಟು, ಪಿಂಡಸ್ಥಳದ ಎಳ್ಳನ್ನು ಹಿಡಿದು, '**ಅಕ್ಷಯ್ಯಸ್ಥಾನೇ ಅಭಿರಮ್ಯತಾಂ ಪ್ರೇತಃ ॥**' (**ಅಭಿರಮ್ಯತಾ ಸ್ಮಃ**) –ಎಂದು ಎಳ್ಳನ್ನು ಆಕಾಶದ ಕಡೆಗೆ ಎರಚಬೇಕು. ಅನಂತರ ಬ್ರಾಹ್ಮಣ ಕೂರ್ಚವನ್ನು ಹಿಡಿದು,

**ಅಗತೀನಾಂ ಚ ಸರ್ವೇಷಾಂ ಗತಿರ್ನಾರಾಯಣೋ ಹರಿಃ ।**
**ತತ್ರ ಸಂಪೂಜನಂ ಕಾರ್ಯಂ ಸರ್ವಪಾಪಹರಂ ಶುಭಮ್ ॥**

**ಅಸ್ಮತ್ಪಿತುಃ .....ಶ್ರಾದ್ಧೇ .....ಶರ್ಮಣಃ ......ಗೋತ್ರಸ್ಯ ಪ್ರೇತಸ್ಯ ಕೂರ್ಚ ಉದ್ವಾಸನ ಮುಪತಿಷ್ಠತು ॥** –ಎಂದು ಕೂರ್ಚವನ್ನು ಬಿಚ್ಚಿ ಜಲಕೂರ್ಚವನ್ನು ಸಹ ಬಿಚ್ಚಬೇಕು. ಅನಂತರ (ಬಲ) ಅಕ್ಕಿ ಹಿಡಿದು,

**ಓಂ ಸ್ವಸ್ತಿ ।**

**ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಮ್ ।**
**ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ ॥**

–ಎಂದು ಅಗ್ನಿಗೆ ಹಾಕಿ, ಪರಿಸ್ತರಣೆ ತೆಗೆದು,

### ಉತ್ತರಪರಿಷೇಕಃ

ಈಶಾನ್ಯದಿಂದ ಅಪ್ರದಕ್ಷಿಣೆಯಾಗಿ ನೀರಿನಿಂದ ಪರಿಷೇಚನ ಮಾಡಬೇಕು–

**ಅದಿತೇಽನ್ವಮಂಸ್ಥಾಃ । ಅನುಮತೇಽನ್ವಮಂಸ್ಥಾಃ । ಸರಸ್ವತೇಽನ್ವಮಂಸ್ಥಾಃ । ದೇವ ಸವಿತಃ ಪ್ರಾಸಾವೀಃ ॥** –ಎಂದು ಹೇಳಿ, ಅಕ್ಕಿ ಹಿಡಿದು,

**ಗಚ್ಛ ಗಚ್ಛ ಸುರಶ್ರೇಷ್ಠ ಸ್ವಸ್ಥಾನಂ ಯಜ್ಞಪೂರುಷ ।**
**ಯತ್ರ ಬ್ರಹ್ಮಾದಯೋ ದೇವಸ್ತತ್ರ ಗಚ್ಛ ಹುತಾಶನ ॥**

–ಎಂದು ಅಗ್ನಿಗೆ ಹಾಕಿ, '**ಯಜ್ಞೇಶ್ವರಾಯ ನಮಃ । ಯಥಾಸ್ಥಾನಮುದ್ವಾಸಯಾಮಿ ॥**' ಎಂದು ಉದ್ವಾಸನೆ ಮಾಡಬೇಕು. ಪೂರ್ವಾಭಿಮುಖವಾಗಿ ಕುಳಿತು ಹೋಮದ ಕೃಷ್ಣಾರ್ಪಣ ಬಿಡಬೇಕು.

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥**
**ಕಾಯೇನ ವಾಚಾ ಮನಸೇಂದ್ರಿಯೈರ್ವಾ ..... ನಾರಾಯಣಾಯೇತಿ ಸಮರ್ಪಯಾಮಿ ॥**

**ಅದ್ಯದಿನೇ ಮಮಪಿತುರುದ್ದಿಶ್ಯ ಮಯಾಕೃತ ಏಕೋದ್ದಿಷ್ಟಹೋಮಕರ್ಮಣಾ ಪಿತೃ (ಮಾತೃ) ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥ ತತ್ಸರ್ವಂ ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಗೋವಿಂದಾಯ ನಮಃ ॥**

ಅನಂತರ ಬ್ರಾಹ್ಮಣಭೋಜನ ಅನ್ನವನ್ನು ದೂರ ಎಸೆದು, ಗೋಮಯದಿಂದ ಪಿಂಡ ಹಾಕಿದ ಸ್ಥಳವನ್ನು ಶುದ್ಧ ಮಾಡಬೇಕು. ಮನೆಗೆ ಬಂದು ಎಳ್ಳುನೀರು ಹಿಡಿದು, '**ಅಸ್ಮತ್ಪಿತುಃ ......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಚುಲ್ಲ್ಯುದ್ವಾಸನಮುಪತಿಷ್ಠತು ॥**'

ಎಂದು ಒಲೆಗೆ ಎಳ್ಳುನೀರು ಬಿಟ್ಟು, ಒಲೆ ತೆಗೆದು ನಿತ್ಯವಿಧಿಗೆ ಸುತ್ತ ಕಟ್ಟಿದ ಚಪ್ಪರವನ್ನು ತೆಗೆದು, ಸ್ನಾನ ಮಾಡಿ, ಪುಂಡ್ರಧಾರಣೆ ಮುದ್ರಾಧಾರಣೆ ಮಾಡಿ, ಪೂರ್ವಾಭಿಮುಖವಾಗಿ ಕುಳಿತು ಆಚಾರ್ಯರಿಂದ ನಾಲ್ಕು ಎಳೆಯ ಪವಿತ್ರ ಪಡೆದು, ಧರಿಸಿ, ದೇಹಶುದ್ಧಿ ಹಾಗೂ ಕುಟುಂಬಶುದ್ಧಿಸಂಕಲ್ಪದೊಂದಿಗೆ ಆಚಾರ್ಯರಿಂದ ಪಂಚಗವ್ಯ, ಪುಣ್ಯಾಹ ಮಾಡಿಸಬೇಕು.

## ಸಂಕಲ್ಪಃ

**ಪಿತೃಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ....ಪ್ರೇತಸ್ಯ ಏಕೋದ್ದಿಷ್ಟಶ್ರಾದ್ಧಾಂತೇ ಮಮ ದೇಹಶುದ್ಧ್ಯರ್ಥಂ ಕುಟುಂಬಶುದ್ಧ್ಯರ್ಥಮ್ ಆಚಾರ್ಯಮುಖೇನ ಪಂಚಗವ್ಯಮೇಲನಪೂರ್ವಕ ಪುಣ್ಯಾಹವಾಚನಂ ಕರಿಷ್ಯೇ ॥ (ಕುರುಷ್ವ) ॥**

–ಎಂದು ಸಂಕಲ್ಪಿಸಿ ಪಂಚಗವ್ಯವನ್ನು ದೇವರ ಕೋಣೆಗೆ, ಮನೆಯ ಒಳಗೆ ಹೊರಗೆ, ಅಡುಗೆ ಪದಾರ್ಥಗಳಿಗೆ ಬಾವಿಗೆ ಪ್ರೋಕ್ಷಣೆ ಮಾಡಿಸಬೇಕು. ಅನಂತರ ಕರ್ಮಿಯು ಕರ್ಮವಸ್ತ್ರವನ್ನು ಕೆಳಗೆ ಎಲೆಯಲ್ಲಿಟ್ಟು, ಪವಿತ್ರ ಹೊರತೆಗೆದು ತೀರ್ಥಪ್ರಾಶನ ಮಾಡಿ, ಆಚಮನ ಮಾಡಿ ಪವಿತ್ರ ಧರಿಸಿ, ನೂತನ ಯಜ್ಞೋಪವೀತಧಾರಣೆ ಮಾಡಬೇಕು. ಹೆಣ್ಣುಮಕ್ಕಳಿದ್ದರೆ ಪಂಚಗವ್ಯಪ್ರಾಶನ ಮಾಡಿ, ಒಂಬತ್ತು ಇಟ್ಟಿಗೆಯಿಂದ ಪೂರ್ವಕ್ಕೆ ಮುಖ ಮಾಡಿ ಕುಳಿತು ಹವಿಸ್ಸನ್ನು ಮಾಡುವಂತೆ ಒಲೆ ಮಾಡಿ ಒಬ್ಬರಿಗೆ ಎರಡು ಪಾವಿನಂತೆ ಹವಿಸ್ಸನ್ನು ಮಾಡಬೇಕು. ಒಲೆಯನ್ನು ಮರುದಿನ ಸಪಿಂಡೀಕರಣದ ಅನಂತರ ಉದ್ವಾಸನೆ ಮಾಡಬೇಕು. ಅಡುಗೆ ಮಾಡುವವರು ಪಂಚಗವ್ಯಪ್ರಾಶನ ಮಾಡಿ ಅಡುಗೆಯನ್ನು ಪ್ರಾರಂಭಿಸಬೇಕು. ಕುಟುಂಬದ ಸದಸ್ಯರು ಇಲ್ಲವೇ ಸಂಬಂಧಿಗಳು ಪಂಚಗವ್ಯ ಪ್ರಾಶನ ಮಾಡಿ, ನೂತನ ಯಜ್ಞೋಪವೀತ ಧಾರಣೆ ಮಾಡಿ, ದೇವರ ನಿರ್ಮಾಲ್ಯ ತೆಗೆದು ದೇವರ ಪೀಠವನ್ನು ಹೊರಗಿಟ್ಟು ತೊಳೆದು ದೇವರ ಕೋಣೆಯನ್ನು ಗೋಮಯದಿಂದ ಶುದ್ಧ ಮಾಡಿ, ಪೀಠವನ್ನಿಟ್ಟು ದೇವರಿಗೆ ಅಭಿಷೇಕ, ಅಲಂಕಾರ, ನೈವೇದ್ಯ ಮಾಡಿ, ಬಿಡಬೇಕು. ಆರತಿ ಮಾಡಲಿಕ್ಕಿಲ್ಲ. ಷೋಡಶಮಾಸಿಕಕ್ಕೆ ಪ್ರತ್ಯೇಕವಾಗಿ ತೀರ್ಥ, ತುಲಸಿ, ಗಂಧ ತೆಗೆದಿಡಬೇಕು.

# ರುದ್ರಗಣಶ್ರಾದ್ಧಮ್

(ವಸು ರುದ್ರ ಗಣ ದೇವತೋದ್ದೇಶದಿಂದ ಕರ್ಮ ಮಾಡುವಾಗ ಸವ್ಯ(ಬಲ)ದಿಂದಲೂ ಪ್ರೇತೋದ್ದೇಶ ಹೇಳಿ ಮಾಡುವಾಗ 'ಪ್ರಾಚೀನಾವೀತೀ'(ಎಡ) ಯಿಂದ ಕರ್ಮ ಮಾಡಬೇಕು. ಉದಾ: '**ಅಜೈಕಪಾದ್ರೂಪಿನ್ ..... ಗೋತ್ರ .....ಶರ್ಮನ್ ಪ್ರೇತ ಅಯಂ ತೇ ಕ್ಷಣಃ ।**' ಎಂದು, '**ಧ್ರುವ ವಸುರೂಪಿನ್..... ಗೋತ್ರ ....ಶರ್ಮನ್ ಪ್ರೇತ ಅಯಂ ತೇ ಕ್ಷಣಃ ।**' ಎಂದು ಕರ್ಮ ಮಾಡಬೇಕು. ಇಲ್ಲಿ ದೇವತಾಸಂಖ್ಯೆಯಷ್ಟು ಬ್ರಾಹ್ಮಣರನ್ನು ಕರೆದು

ಆವಾಹನಾದಿಗಳನ್ನು ಮಾಡಿ ಭೋಜನ ಮಾಡಿಸಬೇಕು. ಇಲ್ಲವೇ ಅಷ್ಟೇ ಸಂಖ್ಯೆಯಲ್ಲಿ ಆಮಾನ್ನದಾನ ಕೊಡಬೇಕು. ಅಶಕ್ತನಾದಲ್ಲಿ ಇಬ್ಬರು ಬ್ರಾಹ್ಮಣರನ್ನು ಕುಳ್ಳಿರಿಸಿ ಪ್ರತ್ಯೇಕವಾಗಿ ವಸುರುದ್ರರನ್ನು ಆವಾಹಿಸಿ ಆಮಾನ್ನದಾನವನ್ನು ಕೊಡಬೇಕು.)

ಕ್ರಿಯಾಕರ್ತೃಗಳು ಕರ್ಮವಸ್ತ್ರವನ್ನು ಧರಿಸಿ ಸಂಕಲ್ಪ ಮಾಡಬೇಕು.

**ಏಕೋದ್ದಿಷ್ಟಶ್ರಾದ್ಧಸಂಪೂರ್ಣಫಲಪ್ರಾಪ್ತ್ಯರ್ಥಮ್ ಅಸ್ಮತ್ಪಿತುಃ ಗೋತ್ರಸ್ಯ ಶರ್ಮಣಃ ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಂ** (ಬಲ) **ರುದ್ರಗಣ ಶ್ರಾದ್ಧಪೂರ್ವಕ ವಸುಗಣಶ್ರಾದ್ಧಂ ತಂತ್ರೇಣ ಕರಿಷ್ಯೇ ॥ (ಕುರುಷ್ವ) ॥**

**ಬ್ರಾಹ್ಮಣೇಭ್ಯಃ ಸ್ವಾಗತಮ್** । ಎಂದು ಬ್ರಾಹ್ಮಣರನ್ನು ಸ್ವಾಗತಿಸಿ, **ಇದಮಾಸನಮ್** ॥

ಎಂದು ಕೈಹಿಡಿದು ಕುಳ್ಳಿರಿಸಿ, ಅಕ್ಕಿ ಹಿಡಿದು,

**ಅಜೈಕಪಾದಹಿರ್ಬುಧ್ನ್ಯಃ ಕಪಾಲೀರುದ್ರ ಏವ ಚ ।**
**ವೃಷಾಕಪಿಶ್ಚ ಶಂಭುಶ್ಚ ಕಪರ್ದೀ ರೈವತಸ್ತಥಾ ॥**
**ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚಾಪರಾಜಿತಃ ॥**

(ಪಾಠಾಂತರೇ–

**ವೀರಭದ್ರಶ್ಚ ಶಂಭುಶ್ಚ ಗಿರೀಶಶ್ಚ ಮಹಾಯಶಾಃ ।**
**ಅಜೈಕಪಾದಹಿರ್ಬುಧ್ನ್ಯಃ ಪಿನಾಕೀ ಚಾಪರಾಜಿತಃ ॥**

**ಭುವನಾಧೀಶ್ವರಶ್ಚೈವ ಕಪಾಲೀ ಚ ವಿಶಾಂಪತಿಃ ।**
**ಸ್ಥಾಣುರ್ಭಗಶ್ಚ ಭಗವಾನ್ ರುದ್ರಾ ಏಕಾದಶಸ್ಮೃತಾಃ ॥**

**ಏಕಾದಶರುದ್ರಾನ್ ಭವತ್ಸು ಆವಾಹಯಾಮಿ ।** –ಎಂದು ಅಕ್ಕಿ ಹಾಕಿ ಆವಾಹಿಸುವುದು. **(ಅಸ್ತು ಆವಾಹಯ)**

ಗಂಧಪುಷ್ಪ ಕೊಟ್ಟು, **'ಗಂಧಾದಿಸಕಲಾರಾಧನೈಃ ಸ್ವರ್ಚಿತಮ್ ।' (ಅಸ್ತು)** ತಾಂಬೂಲ ಕೊಟ್ಟು, ಆಮಾನ್ನವನ್ನು ಎತ್ತಿ ಹಿಡಿದು,

**ಅನ್ನಮೇವ ಯತೋ ಲಕ್ಷ್ಮೀ ಅನ್ನಮೇವ ಜನಾರ್ದನಃ ।**
**ಅನ್ನಂ ಬ್ರಹ್ಮಾಖಿಲತ್ರಾಣಮಸ್ತು ಜನ್ಮನಿಜನ್ಮನಿ ॥**

–ಎಂದು ಬ್ರಾಹ್ಮಣರ ಕೈಯಲ್ಲಿ ಕೊಟ್ಟು, ದಕ್ಷಿಣೆಕೊಟ್ಟು, **ಸತಾಂಬೂಲಸದಕ್ಷಿಣಾಕ ಸೋಪಸ್ಕರಾಮಾನ್ನದಾನೇನ ಏಕಾದಶ ರುದ್ರಾಂತರ್ಗತ ಪ್ರಾಣಸ್ಥ ಸಂಕರ್ಷಣ ರೂಪಿಪರಮಾತ್ಮಾ ಸುಪ್ರೀತೋಽಸ್ತ್ವಿತಿ ಭವಂತೋ ಬ್ರುವಂತು ॥** –ಎಂದು ನಮಸ್ಕರಿಸಿ, **(ಸುಪ್ರೀತೋಽಸ್ತು। ಪ್ರೇತಸ್ಯ ಉತ್ತಮಲೋಕಾವಾಪ್ತಿರಸ್ತು)** –ಎಂದು ಆಶೀರ್ವಚನ ಪಡೆದು, ಅಕ್ಕಿ ಹಿಡಿದು, **'ಯಥಾಸ್ಥಾನಮುದ್ವಾಸಯಾಮಿ' (ಅಸ್ತು ಉದ್ವಾಸಯ)** ಎಂದು ಬ್ರಾಹ್ಮಣರ ತಲೆಗೆ ಹಾಕಿ, ತುಳಸಿನೀರು ಹಿಡಿದು,

**ಅನೇನ ಸತಾಂಬೂಲ ಸದಕ್ಷಿಣಾಕ ಸೋಪಸ್ಕರಾಮಾನ್ನದಾನೇನ ಏಕಾದಶ ರುದ್ರಾಂತರ್ಗತ ಪ್ರಾಣಸ್ಥಸಂಕರ್ಷಣರೂಪಿಪರಮಾತ್ಮಾ ಪ್ರೀಯತಾಮ್ ॥** ಎಂದು ತುಳಸಿನೀರು ಕೆಳಗೆ ಬಿಡುವುದು.

## ವಸುಗಣಶ್ರಾದ್ಧಮ್

ಬ್ರಾಹ್ಮಣರನ್ನು ಕೈಹಿಡಿದು, **ಬ್ರಾಹ್ಮಣೇಭ್ಯಃ ಸ್ವಾಗತಮ್ । ಇದಮಾಸನಮ್ ॥** ಎಂದು ಕುಳ್ಳಿರಿಸಿ, ಅಕ್ಕಿ ಹಿಡಿದು,

**ಧ್ರುವೋಽಧ್ವರಶ್ಚ ಸೋಮಶ್ಚ ಆಪಶ್ಚ ಅನಿಲೋಽನಲಃ ।**
**ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ॥**

**ಅಷ್ಟವಸೂನ್ ಭವತ್ಸು ಆವಾಹಯಾಮಿ ॥** –ಎಂದು ಅಕ್ಕಿ ಹಾಕಿ ಆವಾಹಿಸುವುದು. **(ಅಸ್ತು ಆವಾಹಯ)** –ಎಂದು ಆವಾಹಿಸಿ, ಗಂಧಪುಷ್ಪ ಕೊಟ್ಟು,

**ಗಂಧಾದಿಸಕಲಾರಾಧನೈಃ ಸ್ವರ್ಚಿತಮ್ ॥ (ಅಸ್ತು)**

ತಾಂಬೂಲ ಕೊಟ್ಟು, ಆಮಾನ್ನವನ್ನು ಎತ್ತಿಹಿಡಿದು,

**ಆಮಾನ್ನಂ ವಿಷ್ಣುದೈವತ್ಯಂ ಪಾಕೇನಾನ್ನಂ ಭವಿಷ್ಯತಿ ।**
**ಯಸ್ಮಾದಸ್ಯ ಪ್ರದಾನೇನ ಅತಃ ಶಾಂತಿಂ ಪ್ರಯಚ್ಛ ಮೇ ॥**

–ಎಂದು ಬ್ರಾಹ್ಮಣರ ಕೈಯಲ್ಲಿ ಕೊಟ್ಟು, ದಕ್ಷಿಣೆ ಕೊಟ್ಟು, **'ಅನೇನ ಸತಾಂಬೂಲ ಸದಕ್ಷಿಣಾಕ ಸೋಪಸ್ಕರಾಮಾನ್ನದಾನೇನ ಅಷ್ಟವಸ್ವಂತರ್ಗತ ಪ್ರಾಣಸ್ಥಪ್ರದ್ಯುಮ್ನರೂಪಿ ಪರಮಾತ್ಮಾ ಸುಪ್ರೀತೋಽಸ್ತ್ವಿತಿ ಭವಂತೋ ಬ್ರುವಂತು ॥'** –ಎಂದು ನಮಸ್ಕರಿಸಿ, **(ಸುಪ್ರೀತೋಽಸ್ತು । ಪ್ರೇತಸ್ಯ ಉತ್ತಮಲೋಕಾವಾಪ್ತಿರಸ್ತು)** –ಎಂದು ಆಶೀರ್ವಚನ ಪಡೆದು, ಅಕ್ಕಿಹಿಡಿದು, **'ಯಥಾಸ್ಥಾನಮುದ್ವಾಸಯಾಮಿ' (ಅಸ್ತು ಉದ್ವಾಸಯ)** ಎಂದು ಬ್ರಾಹ್ಮಣರ ತಲೆಗೆ ಹಾಕಿ, ತುಳಸಿನೀರನ್ನು ಹಿಡಿದು,

**ಅನೇನ ಸತಾಂಬೂಲ ಸದಕ್ಷಿಣಾಕ ಸೋಪಸ್ಕರಾಮಾನ್ನದಾನೇನ ಅಷ್ಟವಸ್ವಂತರ್ಗತ ಪ್ರಾಣಸ್ಥಪ್ರದ್ಯುಮ್ನರೂಪಿಪರಮಾತ್ಮಾ ಪ್ರೀಯತಾಮ್ ॥** –ಎಂದು ತುಳಸಿನೀರನ್ನು ಕೆಳಗೆ ಬಿಡುವುದು.

## ಗರುಡಪುರಾಣೋಕ್ತ ಮಧ್ಯಮಷೋಡಶಶ್ರಾದ್ಧಮ್

**ಪ್ರಥಮಂ ವಿಷ್ಣವೇ ದದ್ಯಾದ್‌ದ್ವಿತೀಯಂ ಶ್ರೀಶಿವಾಯ ಚ ।**
**ಯಾಮ್ಯಾಯ ಪರಿವಾರಾಯ ತೃತೀಯಂ ಪಿಂಡಮುತ್ಸೃಜೇತ್ ॥**

**ಚತುರ್ಥಂ ಸೋಮರಾಜಾಯ ಹವ್ಯವಾಹಾಯ ಪಂಚಮಮ್ ।**
**ಕವ್ಯವಾಹಾಯ ಷಷ್ಠಂ ಚ ದದ್ಯಾತ್ಕಾಲಾಯ ಸಪ್ತಮಮ್ ॥**

**ರುದ್ರಾಣಿ ಚಾಷ್ಟಮಂ ದದ್ಯಾನ್ನವಮಂ ಪುರುಷಾಯ ಚ ।**
**ಪ್ರೇತಾಯ ದಶಮಂ ಚೈವೈಕಾದಶಂ ವಿಷ್ಣವೇ ನಮಃ ॥**

**ದ್ವಾದಶಂ ಬ್ರಹ್ಮಣೇ ದದ್ಯಾತ್ ವಿಷ್ಣವೇ ಚ ತ್ರಯೋದಶಮ್ ।**
**ಚತುರ್ದಶಂ ಶಿವಾಯೈವ ಯಮಾಯ ದಶಪಂಚಮಮ್ ॥**

**ದದ್ಯಾತ್ ತತ್ಪುರುಷಾಯೈವ ಪಿಂಡಂ ಷೋಡಶಕಂ ಖಗ ।**
**ಮಧ್ಯಂ ಷೋಡಶಕಂ ಪ್ರಾಹುರೇತತ್ತತ್ತ್ವವಿದೋ ಜನಾಃ ॥**

**ಚತ್ವಾರಿಂಶತ್ತಥೈವಾಷ್ಟೌ ಶ್ರಾದ್ಧಂ ಪ್ರೇತತ್ವನಾಶನಮ್ ।**
**ಯಸ್ಯ ಜಾತಂ ವಿಧಾನೇನ ಸಭವೇತ್ಪಿತೃಪಂಕ್ತಿಭಾಕ್ ॥**

**ಪಿತೃಪಂಕ್ತಿಪ್ರವೇಶಾರ್ಥಂ ಕಾರಯೇಟ್ಷೋಡಶತ್ರಯಮ್ ।**
**ಏತಚ್ಛ್ರಾದ್ಧವಿಹೀನಶ್ಚೇತ್ಪ್ರೇತತ್ವಂ ಸುಸ್ಥಿರಂ ಭವೇತ್ ॥**

(ಸೂಚನೆ: ಇಲ್ಲಿ ಪಿಂಡಪ್ರದಾನ ಮಾಡುವುದಾದರೆ ೧೬ ಕೋಣೆಗಳುಳ್ಳ ಮಂಡಲ ಮಾಡಿ ಆವಾಹನಾದಿಗಳನ್ನು ಮಾಡಿ '**ಅಸ್ಮತ್ಪಿತುಃ ಮೃತಾಹಾತ್ ಏಕಾದಶೇಽಹನಿ ....ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಉತ್ತಮಲೋಕಾವಾಪ್ತ್ಯರ್ಥಂ ವಿಷ್ಣವೇ ಅಯಂ ಪಿಂಡ ಉಪತಿಷ್ಠತು ।**' ಎಂದು ಪ್ರೇತಸಹಿತ ಆಯಾ ದೇವತಾ ಉದ್ದಿಶ್ಯ ಪಿಂಡಪ್ರದಾನ ಮಾಡಬೇಕು.)

## ಸಂಕಲ್ಪಃ

(ಬಲ) **ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮ ಲೋಕಾವಾಪ್ತ್ಯರ್ಥಂ** (ಬಲ) **ಮಧ್ಯಮಷೋಡಶಶ್ರಾದ್ಧಂ ತಂತ್ರೇಣ ಕರಿಷ್ಯೇ ॥ (ಕುರುಷ್ವ) ॥**

ಬ್ರಾಹ್ಮಣರ ಕೈಹಿಡಿದು, **ಬ್ರಾಹ್ಮಣೇಭ್ಯಃ ಸ್ವಾಗತಮ್ । ಇದಮಾಸನಮ್ ॥**
–ಎಂದು ಕುಳ್ಳಿರಿಸಿ, ಅಕ್ಕಿ ಹಿಡಿದು,

**ವಿಷ್ಣ್ವಾದಿ ತತ್ಪುರುಷಾಂತದೇವತಾನ್ ಭವತ್ಸು ಆವಾಹಯಿಷ್ಯೇ ॥** –ಎಂದು ಅಕ್ಕಿ ಹಾಕಿ ಆವಾಹಿಸುವುದು. (**ಅಸ್ತು ಆವಾಹಯ**) ಗಂಧಪುಷ್ಪ ಕೊಟ್ಟು,

**ಗಂಧಾದಿಸಕಲಾರಾಧನೈಃ ಸ್ವರ್ಚಿತಮ್ ॥ (ಅಸ್ತು)**

ತಾಂಬೂಲ ಕೊಟ್ಟು, ಆಮಾನ್ನ ಎತ್ತಿ ಹಿಡಿದು,

**ಆಮಾನ್ನಂ ವಿಷ್ಣುದೈವತ್ಯಂ ಪಾಕೇನಾನ್ನಂ ಭವಿಷ್ಯತಿ ।**
**ಯಸ್ಮಾದಸ್ಯ ಪ್ರದಾನೇನ ಅತಃ ಶಾಂತಿಂ ಪ್ರಯಚ್ಛ ಮೇ ॥**

–ಎಂದು ಬ್ರಾಹ್ಮಣರಿಗೆ ಕೊಟ್ಟು, ದಕ್ಷಿಣೆ ಕೊಟ್ಟು,

**ಸತಾಂಬೂಲ ಸದಕ್ಷಿಣಾಕ ಸೋಪಸ್ಕರಾಮಾನ್ನದಾನೇನ ವಿಷ್ಣ್ವಾದಿ ತತ್ಪುರುಷಾಂತ ಷೋಡಶದೇವತಾಃ ಸುಪ್ರೀತೋಽಸ್ತ್ವಿತಿ ಭವಂತೋ ಬ್ರುವಂತು ॥**

–ಎಂದು ನಮಸ್ಕರಿಸಿ, (**ಸುಪ್ರೀತೋಽಸ್ತು । ಪ್ರೇತಸ್ಯ ಉತ್ತಮಲೋಕಾವಾಪ್ತಿರಸ್ತು**) ಎಂದು ಆಶೀರ್ವಚನ ಪಡೆದು, ಅಕ್ಕಿ ಹಿಡಿದು **'ಯಥಾಸ್ಥಾನಮುದ್ವಾಸಯಾಮಿ' (ಅಸ್ತು ಉದ್ವಾಸಯ)** –ಎಂದು ಬ್ರಾಹ್ಮಣರ ತಲೆಗೆ ಹಾಕಿ, ತುಳಸಿನೀರು ಹಿಡಿದು,

**ಅನೇನ ಮಧ್ಯಮಷೋಡಶಶ್ರಾದ್ಧ ಪ್ರತ್ಯಾಮ್ನಾಯ ಆಮಾನ್ನದಾನೇನ ಪ್ರೇತಾಂತ–ರ್ಗತ ಪ್ರಾಣಸ್ಥಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥** –ಎಂದು ಕೃಷ್ಣಾರ್ಪಣ ಬಿಡಬೇಕು.

## ಮರಣಾತ್ಪೂರ್ವೋತ್ತರೋಕ್ತದಾನಾನಿ

(ಮರಣಕ್ಕಿಂತ ಮೊದಲು ಪಂಚಗೋದಾನಾದಿಗಳನ್ನು ಮಾಡದೇ ಇದ್ದ ಪಕ್ಷದಲ್ಲಿ)

(ಎಡ) **ಮಮ ಪಿತುಃ ಜನನಾತ್ ಮರಣದಿನಪರ್ಯಂತಂ ಕೃತ ಜ್ಞಾತಾಽಜ್ಞಾತ ಕೃತ ಸಮಸ್ತಪಾಪಕ್ಷಯದ್ವಾರಾ ವಸ್ವಾದಿ ಉತ್ತಮಲೋಕಾವಾಪ್ತ್ಯರ್ಥಂ** (ಬಲ) **ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾಪ್ರೀತ್ಯರ್ಥಮ್ ಪ್ರಾಣೋತ್ಕ್ರಮಣ ಕಾಲೇ ಸಂಕಲ್ಪಿತಪ್ರಕಾರೇಣ ಅದ್ಯದಿನೇ ಪಂಚಗೋದಾನ, ದಶದಾನ, ಜಲದಾನ, ದೀಪದಾನ, ತಿಲದಾನಂ ಚ ಕರಿಷ್ಯೇ ॥** –ಎಂದು ಪಂಚಗೋದಾನಾದಿಗಳನ್ನು ಕೊಡಬೇಕು. (ಪುಟಸಂಖ್ಯೆ 22)

### ಮರಣಸಮಯೇ ಉಕ್ತದಾನಾನಿ

(ಮರಣದ ಅನಂತರ ದಾನಾದಿಗಳನ್ನು ಮತ್ತೆ ಕೊಡುವುದಾಗಿ ಸಂಕಲ್ಪಿಸಿದ್ದಲ್ಲಿ–)

(ಎಡ) **ಮಮ ಪಿತುಃ ಜನನಾತ್ ಮರಣದಿನಪರ್ಯಂತಂ ಕೃತ ಜ್ಞಾತಾಽಜ್ಞಾತ ಸಮಸ್ತಪಾಪಕ್ಷಯದ್ವಾರಾ ವಸ್ವಾದಿ ಉತ್ತಮಲೋಕಾವಾಪ್ತ್ಯರ್ಥಂ ಪ್ರಾಣೋತ್ಕ್ರಮಣ ಕಾಲೇ ಸಂಕಲ್ಪಿತ ಪ್ರಕಾರೇಣ ಖಟ್ವಾದಿಮರಣದೋಷನಿವೃತ್ತ್ಯರ್ಥಮ್(ಆದ್ಯನಾರಾಯಣ ಬಲಿಶ್ರಾದ್ಧಾಧಿಕಾರಸಿದ್ಧ್ಯರ್ಥಂ)** (ಬಲ) **ಹಿರಣ್ಯದಾನ, ಗೋದಾನ, ದೀಪದಾನ, ಕ್ಷುರದಾನಪೂರ್ವಕ ದಶಮದಿನೇ ವೇದಿಕಾರಾಧನಸಂಪೂರ್ಣಫಲಾವಾಪ್ತ್ಯರ್ಥಂ ತಿಲಾದ್ಯಷ್ಟದಾನಂ ಚ ಕರಿಷ್ಯೇ ॥** ಎಂದು ದಾನ ಕೊಟ್ಟು,

(ಎಡ) **ಅಸ್ಮತ್ಪಿತುಃ ವಿವಾಹದಿನಾನ್ಮರಣಪರ್ಯಂತಮ್ ಔಪಾಸನ ವಿಚ್ಛೇದನ ದೋಷಪರಿಹಾರಾರ್ಥಮ್** (ಬಲ) **ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾಪ್ರೀತ್ಯರ್ಥಮ್ ಔಪಾಸನದ್ರವ್ಯದಾನಂ ಕರಿಷ್ಯೇ ॥** –ಎಂದು ಅಕ್ಕಿ ದಾನ ಮಾಡಬೇಕು.

(ಎಡ) **ಮಮ ಪಿತುಃ ಮರಣದಿನಾದಾರಭ್ಯ ದಶಮದಿನಪರ್ಯಂತಂ ಪೂರ್ವ ಸಂಕಲ್ಪಿತಪ್ರಕಾರೇಣ, ನಗ್ನಪ್ರಚ್ಛಾದನಶ್ರಾದ್ಧ, ನಿತ್ಯವಿಧಿಶ್ರಾದ್ಧ, ವಿಷಮಶ್ರಾದ್ಧ, ಪಾಥೇಯಶ್ರಾದ್ಧ, ಭಸ್ಮವೇದಿಕಾರಾಧನ, ಅಸ್ಥಿಸಂಚಯನಶ್ರಾದ್ಧ, ವೇದಿಕಾರಾಧನ ಶ್ರಾದ್ಧಾಂಗ ಸಂಪೂರ್ಣಫಲಪ್ರಾಪ್ತಿದ್ವಾರಾ ಪಿತುಃ ಅಕ್ಷಯ್ಯಪುಣ್ಯಲೋಕಾವಾಪ್ತ್ಯರ್ಥಂ** (ಬಲ) **ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾಪ್ರೀತ್ಯರ್ಥಮ್ ಆಮಾನ್ನ ದಾನಂ ಕರಿಷ್ಯೇ ॥**

## ಆಮಾನ್ನದಾನಸಾಹಿತ್ಯ

(ಹತ್ತು ದಿನದ ಆಮಾನ್ನಸಾಹಿತ್ಯವನ್ನು ಒಬ್ಬರಿಗೇ ಕೊಡುವುದಾದರೆ, ಅಕ್ಕಿ 10 ಕೆಜಿ., ತೆಂಗಿನಕಾಯಿ 10, ಬಾಳೆಕಾಯಿ 2, ಸೌತೆಕಾಯಿ 2, ಸುವರ್ಣಗೆಡ್ಡೆ 1 ಕೆಜಿ., ಕೊತ್ತಂಬರಿಬೀಜ 250 ಗ್ರಾಂ, ಹೆಸರು, ಉದ್ದಿನ ಬೇಳೆಗಳು ಪ್ರತ್ಯೇಕವಾಗಿ 1 ಕೆಜಿ., ಕಲ್ಲುಪ್ಪು 1 ಕೆಜಿ., ಹುಳಿ $^1/_2$ ಕೆ.ಜಿ., ಕಾಳುಮೆಣಸು $^1/_2$ ಕೆಜಿ., ಜೀರಿಗೆ $^1/_4$ ಕೆ.ಜಿ. ತೆಂಗಿನ ಎಣ್ಣೆ 1 ಲೀ., ಬೆಲ್ಲ 1 ಕೆ. ಜಿ., ರವೆ 1 ಕೆ.ಜಿ., ಸಕ್ಕರೆ 1 ಕೆ.ಜಿ., ವೇಷ್ಟಿ 1, ತಾಮ್ರದ ತಂಬಿಗೆ 1, ಗೋಪಿ, ಯಜ್ಞೋಪವೀತ, ಸೀಯಾಳ, ವೀಳ್ಯದೆಲೆ, ಅಡಕೆ, ಹಾಗೂ ಹತ್ತು ದಿನಗಳ ದಾನದಕ್ಷಿಣೆಯನ್ನು ಒಟ್ಟು ಮಾಡಿ ಕೊಡಬೇಕು.) ತುಳಸಿ ನೀರು ಹಿಡಿದು,

**ಅದ್ಯ ದಿನೇ ಕರಿಷ್ಯಮಾಣ ಪೂರ್ವಸಂಕಲ್ಪಿತ ಮರಣಾತ್ಪೂರ್ವದಾನ, ಮರಣೋತ್ತರದಾನ, ಔಪಾಸನಲೋಪಾದಿದಾನ ಪ್ರಥಮದಿನಾದಾರಭ್ಯ ದಶಮದಿನ ಪರ್ಯಂತಂ ನಿತ್ಯಾದಿಶ್ರಾದ್ಧಾನಾಮುದ್ದಿಶ್ಯಸಂಪೂರ್ಣಫಲಪ್ರಾಪ್ತ್ಯರ್ಥಮ್ ಆಮಾನ್ನ ದಾನೇನ ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾಪ್ರೀಯತಾಮ್ ॥**

–ಎಂದು ಕೆಳಗೆ ಬಿಟ್ಟು ತುಳಸಿಯನ್ನು ಕಿವಿಯಲ್ಲಿ ಧರಿಸಿ, ಆಚಮನ ಮಾಡಿ ಪವಿತ್ರ ಬಿಚ್ಚಬೇಕು.

# ಷೋಡಶಮಾಸಿಕಶ್ರಾದ್ಧಮ್

ಸ್ನಾನ ಮಾಡಿ, ಮೈಒರೆಸಿ, ಶಿಖಾಬಂಧನ ಮಾಡಿ, ಗೋಪೀಚಂದನ ಹಾಗೂ ಮುದ್ರಾಧಾರಣೆ ಮಾಡಿ ಪೂರ್ವಾಭಿಮುಖವಾಗಿ ಕುಳಿತು, ಆಚಮನ ಮಾಡಿ, ಪ್ರಾಣಾಯಾಮ ಮಾಡಿ, ಮೂರು ಎಳೆಯ ಪವಿತ್ರವನ್ನು ಆಚಾರ್ಯರಿಂದ ಪಡೆದು, ಧರಿಸಿ ಸಂಕಲ್ಪ ಮಾಡಬೇಕು.

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಂ ದೇಶಕಾಲ ದೇಹಧರ್ಮವೈಪರಿತ್ಯಶಂಕಯಾ ಶ್ವಃ ಕರಿಷ್ಯಮಾಣ ಸಪಿಂಡೀಕರಣಾಧಿ-ಕಾರಸಿದ್ಧ್ಯರ್ಥಮ್** (ಬಲ) **ಅಪಕೃಷ್ಯವಿಧಿನಾ ಏಕಾದಶೇಽಹನಿ ಷೋಡಶಮಾಸಿಕ-ಶ್ರಾದ್ಧಪೂರ್ವಕ ಉದಕುಂಭ ಶ್ರಾದ್ಧಾಖ್ಯಂ ಕರ್ಮ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

1. ಉದಕುಂಭಶ್ರಾದ್ಧ ಬ್ರಾಹ್ಮಣಸ್ಥಾನ
2. ಆದ್ಯಾದಿಮಾಸಿಕ ಬ್ರಾಹ್ಮಣಸ್ಥಾನ
3. ಉದಕುಂಭಶ್ರಾದ್ಧ ಪಿಂಡಸ್ಥಾನ
4. ಜಲಪಾತ್ರ
5. ಅರ್ಘ್ಯಪಾತ್ರ
6. ಗೋಗ್ರಾಸ.




ಕರ್ಮಿಗಳು ಎಳ್ಳು, ಚಿಲ್ಲರೆ ನಾಣ್ಯ, ದರ್ಭೆ, ತುಲಸಿ ಹಿಡಿದು ನಿಂತಲ್ಲೇ ಮೂರು ಪ್ರದಕ್ಷಿಣೆ ಬಂದು,

**ವಿಪ್ರೌಘದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।**
**ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಮ್ ॥**

ನೀರಿನಿಂದ ತ್ರಿಕೋನಾಕಾರದ ಮಂಡಲಮಾಡಿ ಮಂಡಲದಲ್ಲಿಟ್ಟು (ಎಡ) **'ಅಸ್ಮತ್ಪಿತು-ರುದ್ದಿಶ್ಯ ಅಪಕೃಷ್ಯವಿಧಿನಾ ಷೋಡಶಮಾಸಿಕಪೂರ್ವಕ ಉದಕುಂಭಶ್ರಾದ್ಧ ಕರ್ತುಂ ಮಮ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ॥ (ಸಂಪದಸ್ತು)**

–ಎಂದು ಪ್ರತಿವಚನ ಪಡೆದು, ಪ್ರಾಯಶ್ಚಿತ್ತ ತಿಲಹೋಮಾದಿಗಳನ್ನು ಮಾಡುವುದಾದರೆ ಸಂಕಲ್ಪ ಮಾಡಿ ಋತ್ವಿಗ್ವರಣೆ ಮಾಡಬೇಕು.

(ಬಲ) **'ಜಲಪಾತ್ರಸ್ಥಾಪನಂ ಕರಿಷ್ಯೇ ॥'** ತನ್ನ ಎಡಭಾಗದಲ್ಲಿ ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ ಅದರ ಮೇಲೆ ಒಂದು ದರ್ಭೆಯನ್ನು ಇಟ್ಟು ಅದರ ಮೇಲೆ ಜಲಪಾತ್ರೆ ಇಟ್ಟು ನಾರಾಯಣ ಸ್ಮರಣೆಯೊಂದಿಗೆ ಜಲಪಾತ್ರಕ್ಕೆ ನೀರು ಹಾಕಿ,

**ಗಂಗಾ ಗೋದಾವರೀ ಕೃಷ್ಣಾ ಪ್ರಯಾಗಾ ದ್ವಾರಕಾ ತಥಾ ।**
**ಆವಾಹ್ಯ ಪಂಚಗಂಗಾಶ್ಚ ಸರ್ವಪಾಪಹರಾ ಶುಭಾಃ ॥**

ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು ಎಳ್ಳು ಸಹಿತ ಗಂಧ, ಪುಷ್ಪ, ಹಿರಣ್ಯ, ಕದಿಕೆ ಹಾಕಿ ಹತ್ತು ಬಾರಿ ಅಷ್ಟಾಕ್ಷರದಿಂದ ಜಪಿಸಿ,

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥**

ಜಲಕೂರ್ಚದಿಂದ ನೀರು ಹಿಡಿದು, ಸುತ್ತ ಪ್ರೋಕ್ಷಣೆ ಮಾಡಬೇಕು. ದಕ್ಷಿಣಕ್ಕೆ ಮುಖ ಮಾಡಿ ಕುಳಿತು, ನೀರಿನಿಂದ ತ್ರಿಕೋನಾಕಾರದ ಎರಡು ಮಂಡಲ ಮಾಡಿ ಎರಡು ಬಾಳೆಎಲೆಯ ತುಂಡಿನ ಮೇಲೆ ಒಂದು ಎಳೆಯ ಕೂರ್ಚವನ್ನು ದಕ್ಷಿಣಕ್ಕೆ ತುದಿ ಮಾಡಿ ಇಟ್ಟು, ಕೈಮುಗಿದು,

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಸ್ತು ದಕ್ಷಿಣೇ ।**
**ಪ್ರದ್ಯುಮ್ನೋ ದಕ್ಷಿಣೇ ಪಾತು ವಾಸುದೇವಸ್ತಥೋತ್ತರೇ ।**
**ಊರ್ಧ್ವಂ ಗೋವರ್ಧನೋ ರಕ್ಷೇದಧಸ್ಥಾಚ್ಚ ತ್ರಿವಿಕ್ರಮಃ ॥**

–ಎಂದು ಪ್ರಾರ್ಥಿಸಬೇಕು.

## ಕ್ಷಣಪಾದ್ಯಾದಿ

ಒಂದು ತುದಿ ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ಷೋಡಶಮಾಸಿಕಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಕೂರ್ಚಸ್ಥಾನೇ ಆವಾಹನೀಯಾರ್ಥೇ ಕ್ಷಣಮುಪತಿಷ್ಠತು ॥**

–ಎಂದು ಬ್ರಾಹ್ಮಣಕೂರ್ಚದ ಬಲಭಾಗದಲ್ಲಿ ದರ್ಭೆಯನ್ನಿಡುವುದು. ಪುನಃ ಒಂದು ತುದಿ ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು, '**ಅಸ್ಮತ್ಪಿತುಃ ... ಉದಕುಂಭಶ್ರಾದ್ಧೇ ....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಕೂರ್ಚಸ್ಥಾನೇ ಆವಾಹನೀಯಾರ್ಥೇ ಕ್ಷಣಮುಪತಿಷ್ಠತು**' –ಎಂದು ಉದಕುಂಭಶ್ರಾದ್ಧದ ಬ್ರಾಹ್ಮಣಕೂರ್ಚದ ಬಲಭಾಗದಲ್ಲಿ ದರ್ಭೆಯನ್ನಿಡುವುದು. ಅನಂತರ,

**ಪಾದ್ಯಸ್ಥಾನಮುಪತಿಷ್ಠತು ॥** –ಎಂದು ಬ್ರಾಹ್ಮಣಕೂರ್ಚದ ಎರಡು ಸ್ಥಾನಗಳ ಎದುರು ದಕ್ಷಿಣಾಗ್ರವಾಗಿ ತ್ರಿಕೋನ ಮಂಡಲವನ್ನು ನೀರಿನಿಂದ ಮಾಡಿ, ಒಂದು ತುದಿ ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು,

**ಮಂಡಲಸ್ಯೋಪರಿ ದರ್ಭಪತ್ರಮುಪತಿಷ್ಠತು ॥** –ಎಂದು ಮಂಡಲದಲ್ಲಿ ಇಟ್ಟು ಹೀಗೆ ಉದಕುಂಭಸ್ಥಾನದಲ್ಲಿ ಮಾಡಿ, ಅಂಜಲಿಮುದ್ರೆ ಮಾಡಿ, **ಸ್ವಾಗತಮುಪತಿಷ್ಠತು ॥** ಹೀಗೆ ಉದಕುಂಭ ಸ್ಥಾನದಲ್ಲಿ ಮಾಡಿ, ತಿಲೋದಕ ಹಿಡಿದು, **ಪಾದ್ಯಮುಪತಿಷ್ಠತು ॥** ಎಂದು ತಿಲೋದಕ ಬಿಟ್ಟು ಹೀಗೆ ಉದಕುಂಭಸ್ಥಾನದಲ್ಲಿ ಮಾಡಿ, ಒಂದು ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು, **ಅಸತ್ಪಿತುಃ ....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಆಸನಮುಪತಿಷ್ಠತು ।** ಎಂದು ಕೂರ್ಚದ ಅಡಿಯಲ್ಲಿಟ್ಟು, ಹೀಗೆಯೇ ಉದಕುಂಭಶ್ರಾದ್ಧದ ಬ್ರಾಹ್ಮಣ ಕೂರ್ಚದ ಅಡಿಯಲಿಟ್ಟು ಜಲಕೂರ್ಚದಿಂದ ನೀರು ಹಿಡಿದು, '**ಆಸನಾಂತೇ**

**ಜಲಮುಪತಿಷ್ಠತು ।**' ಎಂದು ಎರಡೂ ಸ್ಥಾನಗಳಲ್ಲಿಯೂ ನೀರು ಕೊಟ್ಟು, ಗರಿಕೆ ಮತ್ತು ಎಳ್ಳು ಹಿಡಿದು,

**ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂ ಗತಿಮ್ ।**
**ಮನಸಾ ವಾಯುರೂಪೇಣ ಕುಶೇ ತ್ವಾಂ ಯೋಜಯಾಮ್ಯಹಮ್ ॥**

**ಅಸ್ಮತ್ಪಿತುಃ ....ಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಆವಾಹನಮುಪತಿಷ್ಠತು ।** –ಎಂದು ಕೂರ್ಚದ ಮೇಲೆ ಇಟ್ಟು, ಹೀಗೆಯೇ ಉದಕುಂಭಸ್ಥಾನದಲ್ಲಿಯೂ ಮಾಡಿ, ಜಲಕೂರ್ಚದಿಂದ ನೀರನ್ನು ಹಿಡಿದು, **ಆವಾಹನಾಂತೇ ಜಲಮುಪತಿಷ್ಠತು ॥** –ಎಂದು ನೀರು ಬಿಟ್ಟು ಹೀಗೆ ಉದಕುಂಭಸ್ಥಾನದಲ್ಲಿಯೂ ಮಾಡಬೇಕು.

## ಅರ್ಘ್ಯಮ್

(ಬಲ) ಎರಡು ಶ್ರಾದ್ಧಸ್ಥಾನದಲ್ಲಿ ಬಾಳೆಲೆದೊಣ್ಣೆಯ ಎರಡು ಅರ್ಘ್ಯಪಾತ್ರವಿಟ್ಟು ನೀರು ಹಾಕಿ, ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು ಎಳ್ಳು ಸಹಿತ ಗಂದಪುಷ್ಪಾದಿಗಳನ್ನು ಹಾಕಿ ಹತ್ತುಸಲ ನಾರಾಯಣಜಪ ಮಾಡಿ (ಎಡ) ಪಿತೃತೀರ್ಥದಿಂದ ಎಳ್ಳು, ಅರ್ಘ್ಯಪಾತ್ರದ ಕೂರ್ಚ ಹಾಗೂ ನೀರು ಹಿಡಿದು, (ಬಲ) **ಅಸ್ಮತ್ಪಿತುಃ .....ಶ್ರಾದ್ಧೇ .....ಶರ್ಮಣಃ ....ಪ್ರೇತಸ್ಯ ಅರ್ಘ್ಯಮುಪತಿಷ್ಠತು ॥** ಎಂದು ಎರಡು ಕೂರ್ಚಗಳ ಮೇಲೆಯೂ ಪ್ರತ್ಯೇಕವಾಗಿ ಅರ್ಘ್ಯ ಕೊಡಬೇಕು.

**ಗಂಧಮುಪತಿಷ್ಠತು ।** (ಎಡ) **ಅಲಂಕಾರಾರ್ಥೇ ಪುಷ್ಪಮುಪತಿಷ್ಠತು ॥**
–ಎಂದು ಎರಡು ಕೂರ್ಚಗಳ ಮೇಲೆ ಪುಷ್ಪವಿಟ್ಟು, (ಬಲ)

**ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।**
**ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ ॥**

**ಅಸ್ಮತ್ಪಿತುಃ ಆದ್ಯಷೋಡಶಮಾಸಿಕಶ್ರಾದ್ಧಪೂರ್ವಕ ಉದಕುಂಭಶ್ರಾದ್ಧೇ ಕೂರ್ಚಮುಖೇನ ಆಸನಾದಿ ತಿಲೋದಕಪರ್ಯಂತಂ ಮಯಾ ಕೃತಮಾರಾಧನಂ ಯಥಾಶಾಸ್ತ್ರೀಯಮಸ್ತ್ವಿತಿ ಭವಂತೋ ಬ್ರುವಂತು ॥ (ಶಾಸ್ತ್ರೀಯಮಸ್ತು) ॥**

## ಬ್ರಾಹ್ಮಣಭೋಜನವಿಧಿಃ

ಕೂರ್ಚಬ್ರಾಹ್ಮಣರಿಗೆ ಮೂರು ಬಾರಿ ತೀರ್ಥವನ್ನು ಕೊಟ್ಟು ಎರಡು ಬ್ರಾಹ್ಮಣಕೂರ್ಚದ ಎದುರು ಪಶ್ಚಿಮಾಗ್ರವಾಗಿ ಎಲೆ ಹಾಕಿ, ಹಾಗೆಯೇ ಗೋಗ್ರಾಸಕ್ಕೆ ಪೂರ್ವಾಗ್ರವಾಗಿ ಹಾಗೂ ತಮ್ಮತಮ್ಮ ಎಡಭಾಗದಲ್ಲಿ ಪಿಂಡಕ್ಕೋಸ್ಕರ ದಕ್ಷಿಣಾಗ್ರವಾಗಿ ಎಲೆ ಹಾಕಿ ಜಲಕೂರ್ಚದಿಂದ ಹವಿಸ್ಸಿಗೆ ಹಾಗೂ ಎಲೆಗೆ ಪ್ರೋಕ್ಷಣೆ ಮಾಡಿ ಒರಸಿ, ಅನ್ನಕ್ಕೆ ಎರಡು ಬಾರಿ ಹಾಗೂ ಎಲೆಗೆ ಒಂದು ಬಾರಿ ಅಭಿಘಾರಮಾಡಿ ಹವಿಸ್ಸನ್ನು ಸೂರ್ಯನಾರಾಯಣನಿಗೆ ಸಮರ್ಪಿಸಿ, ನಿರ್ಮಾಲ್ಯತೀರ್ಥ ಹಾಗೂ ತುಳಸಿ ಹಾಕಿ, ಅನಂತರ ಹವಿಸ್ಸನ್ನು

ಗೋಗ್ರಾಸದ ಎಲೆಗೆ, ಬ್ರಾಹ್ಮಣಕೂರ್ಚದ ಎಲೆಗೆ ಹಾಗೂ ತಮ್ಮೆಲ್ಲರ ಎಲೆಗೂ ಹಾಕಿ ಎರಡು ಬಾರಿ ಅಭಿಘಾರಮಾಡಿ (ಎಡ) ಕೂರ್ಚಬ್ರಾಹ್ಮಣನ ಬಲಭಾಗದಲ್ಲಿ ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ಒಂದು ದರ್ಭೆ ಇಟ್ಟು, ಸ್ವಲ್ಪ ಘೃತಮಿಶ್ರಾನ್ನವನ್ನು ಹಿಡಿದು, '**ಅಸ್ಮತ್ಪಿತ್ರೇ [ಮಾತ್ರೇ] .....ಗೋತ್ರಾಯ [...ಗೋತ್ರಾಯೈ] .....ಶರ್ಮಣೇ [ನಾಮ್ನ್ಯೈ] ಪ್ರೇತಾಯ [ಪ್ರೇತಾಯೈ] ಯಮಾಯ ಚ ಸ್ವಾಹಾ ॥**' ಎಂದು ದರ್ಭೆಯ ಮೇಲಿಡಬೇಕು.

**ಪೃಥಿವೀ ತೇ ಪಾತ್ರಂ ವಿಷ್ಣೋಃ ಕವ್ಯಂ ರಕ್ಷಸ್ವ ।** ಜಲಕೂರ್ಚದಿಂದ ನೀರು ಹಿಡಿದು, **ಭೂರ್ಭುವಃಸ್ವಃ । ಸತ್ಯಂ ತ್ವರ್ತೇನ ಪರಿಷಿಂಚಾಮಿ ॥** ಎಂದು ಅಪ್ರದಕ್ಷಿಣೆಯಾಗಿ ಸುತ್ತು ಕಟ್ಟಿ,

**ಓವ್ ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದವ್ । ಸಮೂಢ್ಮಮಸ್ಯ ಪಾಂಸುರೇ ॥**

ಎಳ್ಳು, ತುಳಸಿ, ಗರಿಕೆ ಹಿಡಿದು, **ಅಸ್ಮತ್ಪಿತುಃ .......ಮಾಸಿಕಶ್ರಾದ್ಧೇ .......ಗೋತ್ರಾಯ .......ಶರ್ಮಣೇ ಪ್ರೇತಾಯ ಕ್ಷುತ್ಪಿಪಾಸಾನಿವಾರಣಾರ್ಥಮ್ ಇದಂ ಸೋಪಸ್ಕರಾನ್ನ-ಮುಪತಿಷ್ಠಂತು ॥** –ಎಂದು ಕೂರ್ಚಬ್ರಾಹ್ಮಣನ ಎಲೆಯ ಅನ್ನದ ಮೇಲೆ ಬಿಡಬೇಕು. ಹೀಗೆಯೇ ಉದಕುಂಭಕೂರ್ಚಸ್ಥಾನದಲ್ಲಿ ಮಾಡಿ,

(ಬಲ) ತುಳಸಿನೀರು ಹಿಡಿದು ಪೂರ್ವಮುಖವಾಗಿ,

**ಸುರಭಿರ್ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದಾಶ್ರಿತಾ ।**
**ಗೋಗ್ರಾಸಸ್ತು ಮಯಾ ದತ್ತಃ ಸುರಭಿಃ ಪ್ರತಿಗೃಹ್ಯತಾಮ್ ॥** ಗೋಗ್ರಾಸ ಬಿಟ್ಟು,

**ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।**
**ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥**

**ಅಸ್ಮತ್ಪಿತುಃ ......ಆದ್ಯಷೋಡಶಮಾಸಿಕಶ್ರಾದ್ಧಪೂರ್ವಕ ಉದಕುಂಭಶ್ರಾದ್ಧೇ ಕೂರ್ಚಮುಖಬ್ರಾಹ್ಮಣಾರಾಧನಾಖ್ಯೇನ ಕರ್ಮಣಾ ಪಿತೃ(ಮಾತೃ)ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥** ಒಂದು ಸೌಟು ತೀರ್ಥ (ನೀರು) ಹಿಡಿದು,

**ಅಸ್ಮತ್ಪಿತುಃ .......ಮಾಸಿಕಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಆಪೋಶನ ಮುಪತಿಷ್ಠತು ॥** –ಎಂದು ಕೂರ್ಚದ ಮೇಲೆ ನೀರು ಬಿಟ್ಟು, ಹೀಗೆಯೇ ಉದಕುಂಭ ಸ್ಥಾನದಲ್ಲಿಯೂ ಕೊಟ್ಟು, **ಕೃಷ್ಣಾರ್ಪಣಮಸ್ತು ॥ ಅಮೃತೋಪಸ್ತರಣಮಸಿ ಸ್ವಾಹಾ । ಪ್ರಾಣಾಯ ಸ್ವಾಹಾ..... ಸಮಾನಾಯ ಸ್ವಾಹಾ ॥**

ಅನಂತರ ಹವಿಸ್ಸಿಗೆ ಎಳ್ಳು, ಗರಿಕೆ, ತುಳಸೀತೀರ್ಥ ಹಾಕಿ ನಾರಾಯಣಸ್ಮರಣೆಯೊಂದಿಗೆ

ಬಿಲ್ವಪ್ರಮಾಣದ ಹದಿನೇಳು ಪಿಂಡ ಮಾಡಿ ಕೈತೊಳೆದು ಕೂರ್ಚಬ್ರಾಹ್ಮಣರ ಎದುರು ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ದಕ್ಷಿಣಾಗ್ರವಾಗಿ ಒಂದು ದರ್ಭೆ ಇಟ್ಟು, ದರ್ಭೆಯ ಮೇಲೆ ತಿಲೋದಕ ಕೊಟ್ಟು, ಸ್ವಲ್ಪ ಅನ್ನ ಹಿಡಿದು, '**ಅಸ್ಮತ್ಪಿತುಃ .....ಗೋತ್ರಸ್ಯ .....ಶರ್ಮಣಃ .....ಪ್ರೇತಸ್ಯ ವಿಕಿರಬಲಿಮುಪತಿಷ್ಠತು ॥**' -ಎಂದು ದರ್ಭೆಯ ಮೇಲಿಟ್ಟು ಅನ್ನದ ಮೇಲೆ ತಿಲೋದಕ ಬಿಡಬೇಕು. ಒಂದು ಸೌಟು ನೀರನ್ನು ಹಿಡಿದು,

**ಅಸ್ಮತ್ಪಿತುಃ ......ಮಾಸಿಕಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಉತ್ತರಾ-ಪೋಶನಮುಪತಿಷ್ಠತು ॥** -ಎಂದು ಕೂರ್ಚದ ಮೇಲೆ ಬಿಟ್ಟು, ಹೀಗೆಯೇ ಉದಕುಂಭಸ್ಥಾನದಲ್ಲಿಯೂ ಕೊಟ್ಟು (ಎಡ) ಪುನಃ ಜಲಕೂರ್ಚದಿಂದ '**ಹಸ್ತಪ್ರಕ್ಷಾಲನಾದ್ಯುಪತಿಷ್ಠಂತು ॥**' ಎಂದು ಎರಡು ಕೂರ್ಚಸ್ಥಾನದಲ್ಲಿ ನೀರು ಬಿಡಬೇಕು.

## ಬರ್ಹಿಷ್ಯಾಸನಾऽವಾಹನಮ್

ಕ್ರಿಯಾಕರ್ತೃಗಳು ದಕ್ಷಿಣಾಭಿಮುಖವಾಗಿ ಕುಳಿತು ಚಿತ್ರದಲ್ಲಿರುವಂತೆ ಜೇಡಿಯಿಂದ ಮಂಡಲಗಳೆರಡನ್ನು ಬರೆದು, ಎರಡು ದರ್ಭೆಯನ್ನು ಹಿಡಿದು, **ಅಸ್ಮತ್ಪಿತುಃ ....ಏಕಾದಶೇऽಹನಿ ಆದ್ಯಾದಿಷೋಡಶಮಾಸಿಕಶ್ರಾದ್ಧೇ ಪಿಂಡಸ್ಥಾನೇ ಉಲ್ಲೇಖನಮುಪ-ತಿಷ್ಠತು ॥** -ಎಂದು ದಕ್ಷಿಣಾಗ್ರವಾಗಿ ಉಲ್ಲೇಖನ ಮಾಡುತ್ತಾ ಪೂರ್ವದಿಂದ ಪಶ್ಚಿಮಕ್ಕೆ ನಾಲ್ಕು ರೇಖೆ ಎಳೆದು ದರ್ಭೆಯನ್ನು ಮಂಡಲದಲ್ಲಿಟ್ಟು, ಜಲಕೂರ್ಚದಿಂದ ನೀರನ್ನು ಸಿಂಪಡಿಸಿ, ದರ್ಭೆಯನ್ನು ತುಂಡುಮಾಡಿ, ಹಿಂದೆ ಬಿಸಾಡಿ, ಕೈತೊಳೆದು, ಪುನಃ ಎರಡು ದರ್ಭೆಯನ್ನು ಹಿಡಿದು,

**ಅಸ್ಮತ್ಪಿತುಃ .......ऽಹನಿ ಉದಕುಂಭಶ್ರಾದ್ಧೇ ಪಿಂಡಸ್ಥಾನೇ ಉಲ್ಲೇಖನಮುಪತಿಷ್ಠತು ॥** -ಎಂದು ತ್ರಿಕೋನಾಕಾರದ ಮಂಡಲದಲ್ಲಿ ಉತ್ತರದಿಂದ ದಕ್ಷಿಣಕ್ಕೆ ರೇಖೆ ಎಳೆದು ದರ್ಭೆಯನ್ನು ಮಂಡಲದಲ್ಲಿಟ್ಟು ಜಲಕೂರ್ಚದಿಂದ ನೀರನ್ನು ಸಿಂಪಡಿಸಿ ದರ್ಭೆಯನ್ನು ತುಂಡುಮಾಡಿ ಹಿಂದೆ ಬಿಸಾಡಿ ಕೈತೊಳೆದು, ಎಳ್ಳು ಹಿಡಿದು,

**ಅಸ್ಮತ್ಪಿತುಃ .....ऽಹನಿ ....ಆದ್ಯಾದಿಷೋಡಶಮಾಸಿಕಶ್ರಾದ್ಧೇ ಪಿಂಡಸ್ಥಾನೇ ತಿಲಮುಪ ತಿಷ್ಠತು ॥** ಎಂದು ಉತ್ತರದಿಂದ ದಕ್ಷಿಣಕ್ಕೆ ಎಳ್ಳು ಹರಡಿ, ಹೀಗೆಯೇ ಉದಕುಂಭಶ್ರಾದ್ಧಸ್ಥಾನದಲ್ಲಿಯೂ ಮಾಡಬೇಕು. ನಾಲ್ಕು ಉದ್ದದ ತುದಿ ದರ್ಭೆಯನ್ನು ದಕ್ಷಿಣಾಗ್ರವಾಗಿ ಹಿಡಿದು,

**ಮೃತಾಹಾತ್ ...... ಮಾಸಿಕಶ್ರಾದ್ಧೇ ಮಂಡಲಮಧ್ಯೇ ಬರ್ಹಿರುಪತಿಷ್ಠತು ॥** ಎಂದು ಮಂಡಲದ ನಾಲ್ಕು ಕೋಣೆಗಳ ನಡುವೆ ಇಟ್ಟು, ಎಳ್ಳುನೀರು ಹಿಡಿದು, **ಬರ್ಹಿಷ್ಯುಪರಿ ತಿಲೋದಕಮುಪತಿಷ್ಠತು ॥** -ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಕೊಟ್ಟು, ಪುನಃ ಒಂದು ದರ್ಭೆಯನ್ನು ಹಿಡಿದು,

**ಅಸ್ಮತ್ಪಿತುಃ .....ಉದಕುಂಭಶ್ರಾದ್ಧೇ ಮಂಡಲಮಧ್ಯೇ ಬರ್ಹಿರುಪತಿಷ್ಠತು ॥** ಎಂದು ಮಂಡಲಮಧ್ಯದೊಳಗೆ ಇಟ್ಟು, ಎಳ್ಳುನೀರು ಹಿಡಿದು, **ಬರ್ಹಿಷ್ಯುಪರಿ ತಿಲೋದಕಮುಪತಿಷ್ಠತು ॥** ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಕೊಡಬೇಕು.

ಪುನಃ ಹದಿನಾರು ತುದಿ ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು, ಈಶಾನ್ಯದಿಂದ ಆರಂಭಿಸಿ ಒಂದೊಂದು ದರ್ಭೆಯನ್ನು ಪ್ರತ್ಯೇಕಪ್ರತ್ಯೇಕವಾಗಿ ಬರ್ಹಿಸ್ಸಿನ ಮೇಲೆ ೧೬ ಸ್ಥಾನಗಳಲ್ಲಿ, ಚಿತ್ರದಲ್ಲಿರುವಂತೆ, ಮಂತ್ರಪೂರ್ವಕವಾಗಿ ಅಡ್ಡ ಇಡಬೇಕು. **ಅಸ್ಮತ್ಪಿತುಃ ಮೃತಾಹಾತ್ ಏಕಾದಶೇऽಹನಿ–**

**[೧] ......ಆದ್ಯಮಾಸಿಕಶ್ರಾದ್ಧೇ ಬರ್ಹಿಷಿ ಆಸನಮುಪತಿಷ್ಠತು ॥**

| | |
|---|---|
| **[೨] ಊನಮಾಸಿಕ.....** | |
| **[೩] ದ್ವಿತೀಯಮಾಸಿಕ.....** | **[೧೦] ಸಪ್ತಮಮಾಸಿಕ.......** |
| **[೪] ತ್ರೈಪಾಕ್ಷಿಕಮಾಸಿಕ....** | **[೧೧] ಅಷ್ಟಮಮಾಸಿಕ......** |
| **[೫] ತೃತೀಯಮಾಸಿಕ.....** | **[೧೨] ನವಮಮಾಸಿಕ......** |
| **[೬] ಚತುರ್ಥಮಾಸಿಕ.....** | **[೧೩] ದಶಮಮಾಸಿಕ.....** |
| **[೭] ಪಂಚಮಮಾಸಿಕ.....** | **[೧೪] ಏಕಾದಶಮಾಸಿಕ.....** |
| **[೮] ಊನಷಾಣ್ಮಾಸಿಕ.....** | **[೧೫] ದ್ವಾದಶಮಾಸಿಕ.....** |
| **[೯] ಷಾಣ್ಮಾಸಿಕ.......** | **[೧೬] ಊನಾಬ್ದಿಕಮಾಸಿಕ.....** |

ಪುನಃ ಒಂದು ದರ್ಭೆ ಹಿಡಿದು ಉದಕುಂಭಸ್ಥಾನದಲ್ಲಿ **'ಆಸನಮುಪತಿಷ್ಠತು'** ಎಂದು ಬರ್ಹಿಸ್ಸಿನ ಮೇಲೆ ಅಡ್ಡ ಇಟ್ಟು ಅನಂತರ ಜಲಕೂರ್ಚದಿಂದ ನೀರು ಹಿಡಿದು,

**ಮೃತಾಹಾತ್ .....ಮಾಸಿಕಶ್ರಾದ್ಧೇ ಆಸನಾಂತೇ ಉದಕಮುಪತಿಷ್ಠತು ॥** ಎಂದು ಆಸನದಲ್ಲಿ ಹದಿನಾರು ಕಡೆ ನೀರು ಬಿಟ್ಟು, ಹೀಗೆಯೇ ಉದಕುಂಭಸ್ಥಾನದಲ್ಲಿಯೂ ಮಾಡಿ, (ಕೆಲವರಲ್ಲಿ– ಉದಕುಂಭಶ್ರಾದ್ಧದ ಆಸನದಲ್ಲಿ ಮಡಕೆಯನ್ನು ಪ್ರತಿಷ್ಠೆ ಮಾಡಿ ಪೂರ್ಣಪಾತ್ರೆ ಇಟ್ಟು ಮುಂದೆ ಪಿಂಡಪ್ರದಾನವನ್ನು ಕುಂಭದ ಮೇಲೆಯೇ ಇಡುವ ಕ್ರಮವಿದೆ.)

ಗರಿಕೆ ಮತ್ತು ಎಳ್ಳು ಹಿಡಿದು, **ಅಸ್ಮತ್ಪಿತುಃ ಮೃತಾಹಾತ್ .....ಶ್ರಾದ್ಧೇ ...ಶರ್ಮಣಃ .......ಗೋತ್ರಸ್ಯ ಪ್ರೇತಸ್ಯ ಆವಾಹನಮುಪತಿಷ್ಠತು ॥** ಎಂದು ಮಂಡಲದ ಹದಿನಾರು ಕಡೆ ಆಸನದಲ್ಲಿಟ್ಟು. ಹೀಗೆ ಉದಕುಂಭಸ್ಥಾನದಲ್ಲಿ ಮಾಡಿ, ಜಲಕೂರ್ಚದಿಂದ ನೀರನ್ನು ಹಿಡಿದು,

**ಆವಾಹನಾಂತೇ ಉದಕಮುಪತಿಷ್ಠತು ॥** ಎಂದು ಹದಿನಾರು ಕಡೆ ನೀರು ಬಿಟ್ಟು, ಹೀಗೆಯೇ ಉದಕುಂಭ ಸ್ಥಾನದಲ್ಲಿಯೂ ಮಾಡಿ, ಅನಂತರ (ಎಡ) ಅರ್ಘ್ಯಪಾತ್ರದ ಕೂರ್ಚ, ನೀರು ಹಾಗೂ ಎಳ್ಳು ಹಿಡಿದು, (ಬಲ)

**ಅಸ್ಮತ್ಪಿತುಃ ...ಶ್ರಾದ್ಧೇ .....ಶರ್ಮಣಃ ....ಪ್ರೇತಸ್ಯ ಅರ್ಘ್ಯಮುಪತಿಷ್ಠತು ॥**

–ಎಂದು ಹದಿನಾರು ಕಡೆ ಎಳ್ಳುನೀರು ಬಿಟ್ಟು, ಹೀಗೆಯೇ ಉದಕುಂಭಸ್ಥಾನದಲ್ಲಿಯೂ ಅರ್ಘ್ಯ ಕೊಟ್ಟು, (ಎಡ) ಎಡಕಾಲೂರಿ ಕುಳಿತು ಕೂರ್ಚದ ಗಂಟು ಬಿಚ್ಚಿ, ಅರ್ಘ್ಯಪಾತ್ರವನ್ನು

ನಾರಾಯಣಸ್ಮರಣೆಯೊಂದಿಗೆ ಕಣ್ಣು ಮುಚ್ಚಿಕೊಂಡು ಎಡಕಾಲಿನ ಹೆಬ್ಬೆರಳಿನಿಂದ ತುಂಡು ಮಾಡಿ ಹಿಂದೆ ಬಿಸಾಡಬೇಕು. ವಾಸೋದಕ, ಕೇಶೋದಕ ಕೊಟ್ಟು, (ಬಲ)

**ಕೃಷ್ಣ ಕೃಷ್ಣ ಕೃಪಾಲೋ ತ್ವಮಗತೀನಾಂ ಗತಿರ್ಭವ ।**
**ಸಂಸಾರಾರ್ಣವಮಗ್ನಾನಾಂ ಪ್ರಸೀದ ಪುರುಷೋತ್ತಮ ॥**

–ಎಂಬ ಶ್ಲೋಕವನ್ನು ಪಠಿಸುವುದು.

## ಪಿಂಡಪ್ರದಾನಮ್

ಪೂರ್ವಮುಖವಾಗಿ ಕುಳಿತು,

**ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ..... ಆದ್ಯಷೋಡಶಮಾಸಿಕ ಶ್ರಾದ್ಧಪೂರ್ವಕ ಉದಕುಂಭಶ್ರಾದ್ಧಾಂಗ ಕೂರ್ಚಮುಖಬ್ರಾಹ್ಮಣ ಭೋಜನಾಂತೇ ಬರ್ಹಿಷಿ ತಿಲೋದಕಪಿಂಡಪ್ರದಾನಾಖ್ಯಂ ಚ** (ಬಲ) **ಕರ್ಮ ಕರಿಷ್ಯೇ ॥ (ಕುರುಷ್ವ) ॥** ಕೈಮುಗಿದು

**ವಿಶ್ವೇಶಂ ಮಾಧವಂ ಢುಂಢಿಂ ದಂಡಪಾಣಿಂ ಚ ಭೈರವಮ್ ।**
**ವಂದೇ ಕಾಶೀಂ ಗುಹಾಂ ಗಂಗಾಂ ಭವಾನೀಂ ಮಣಿಕರ್ಣಿಕಾಮ್ ॥**

**ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।**
**ತಂ ದೃಷ್ಟ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ ॥**

–ಎಂದು ಮಂತ್ರ ಪಠಿಸಿ, **'ಪಿಂಡದಾನಸ್ಯ ಅನುಜ್ಞಾ ॥'** ಎಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಿ, **'ಅಸ್ತು ಪಿಂಡದಾನಮ್'** ಎಂದು ಪ್ರತಿವಚನ ಪಡೆದು, (ಎಡ) ಪಿತೃತೀರ್ಥದಿಂದ ತಿಲೋದಕ ಹಿಡಿದು,

**'ಅಸ್ಮತ್ಪಿತುಃ ಮೃತಾಹಾತ್ ....... ಮಾಸಿಕಶ್ರಾದ್ಧೇ ಪಿಂಡಸ್ಥಾನೇ ಮಾರ್ಜನಮುಪ–ತಿಷ್ಠತು ॥'** –ಎಂದು ಮಂಡಲದ ಹದಿನಾರು ಸ್ಥಾನಗಳ ಮೇಲಿರುವ ಬರ್ಹಿಸ್ಸಿನ ಮೇಲೆ ತಿಲೋದಕ ಬಿಟ್ಟು ಉದಕುಂಭಸ್ಥಾನದಲ್ಲಿಯೂ ತಿಲೋದಕ ಬಿಡಬೇಕು. ಪಿಂಡವನ್ನು ದಕ್ಷಿಣಾಗ್ರವಾಗಿ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ......ಆದ್ಯಮಾಸಿಕಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಕ್ಷುದ್ಬಾಧಾನಿವಾರಣದ್ವಾರಾ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಮ್ ಅಯಂ ಪಿಂಡ ಉಪತಿಷ್ಠತು ॥** –ಎಂದು ಮಂಡಲದ ಹದಿನಾರು ಸ್ಥಾನಗಳಲ್ಲಿ ಆಯಾ ಶ್ರಾದ್ಧಗಳ ನಾಮೋಚ್ಚಾರಣೆಯೊಂದಿಗೆ ಬರ್ಹಿಸ್ಸಿನ ಮೇಲೆ ಪಿಂಡವನ್ನಿಟ್ಟು ಉದಕುಂಭ ಸ್ಥಾನದಲ್ಲಿಯೂ ಪಿಂಡಪ್ರದಾನ ಮಾಡಬೇಕು. ತಿಲೋದಕ ಹಿಡಿದು,

**ಅಸ್ಮತ್ಪಿತುಃ ಮೃತಾಹಾತ್ ....ಮಾಸಿಕಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಪಿಂಡಸ್ಯೋಪರಿ ತಿಲೋದಕಮುಪತಿಷ್ಠತು ॥** –ಎಂದು ತಿಲೋದಕ ನೀಡಿ, ಹೀಗೆಯೇ ಉದಕುಂಭಸ್ಥಾನದಲ್ಲಿಯೂ ಕೊಡಬೇಕು. ಅನಂತರ, ಎಳ್ಳು ನೀರು ಹಿಡಿದು,

**'ಗಾಯತ್ರ್ಯರ್ಚನಮುಪತಿಷ್ಠತು ॥'** ಎಂದು ಪಿಂಡಗಳ ಮೇಲೆ ಬಿಟ್ಟು, ಹವಿಸ್ಸಿನ ಪಾತ್ರೆಯ ಅಡಿಯ ಮಸಿಯನ್ನು ಅಂಗುಷ್ಠದಿಂದ ಒರಸಿ ತೆಗೆದು, **'ಅಸ್ಮತ್ ಪಿತುಃ ..... ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಅಂಜಮುಪತಿಷ್ಠತು ॥'** ಎಂದು ಪಿಂಡಗಳ ಮೇಲೆ ಹಚ್ಚಿ, ಎಳ್ಳನ್ನು ತಿಕ್ಕಿ ನೀರು ಹಿಡಿದು, **'ಅಸ್ಮತ್ ಪಿತುಃ .....ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಅಭ್ಯಂಜನಮುಪತಿಷ್ಠತು ॥'** ಎಂದು ಪಿಂಡಗಳ ಮೇಲೆ ಬಿಟ್ಟು, ಹವಿಸ್ಸಿನ ಪಾತ್ರೆಯ ಒಳಗಿನ ನೀರನ್ನು ಹಿಡಿದು, **'ಇದಂ ತೇ ಪಾತ್ರಪ್ರಕ್ಷಾಲನೋದಕಮುಪತಿಷ್ಠತು ॥'** ಎಂದು ಪಿಂಡಗಳ ಮೇಲೆ ಬಿಟ್ಟು, ತನ್ನ ಬಟ್ಟೆಯ ಅಂಚಿನ ನೂಲನ್ನು ತೆಗೆದು, ಪ್ರತಿಯೊಂದು ಸ್ಥಾನದ ಪಿಂಡದ ಮೇಲೆ **'ಕಶಿಪೂಪಬರ್ಹಣೇ ದಶಾಮುಪತಿಷ್ಠತು ॥** ಎಂದು ಹಾಕಬೇಕು.

ಎಳ್ಳು ನೀರು, ಗರಿಕೆ ಹಿಡಿದು,

**ಪಿಂಡಾನಾಮುಪರಿ ಅಂಜನಾಭ್ಯಂಜನಪಂಚಾಮೃತವಾಸದಶಾತುಲಸೀಪತ್ರ, ದೂರ್ವಾಪತ್ರತೀರ್ಥಪುಷ್ಪಾಣ್ಯುಪತಿಷ್ಠಂತು ॥** –ಎಂದು ಪಿಂಡದ ಮೇಲೆ ಹಾಕಬೇಕು.

## ಬಲಿಹರಣಮ್

ಮುಷ್ಟಿದರ್ಭೆ ಹಿಡಿದು, **ಅಸ್ಮತ್ಪಿತುಃ ಮೃತಾಹಾತ್ ......ಮಾಸಿಕಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಪಿಂಡಸ್ಯ ಪರಿತಃ ಬಲಿಸ್ಥಾನೇ ದರ್ಭಪತ್ರಮುಪತಿಷ್ಠತು ॥**
–ಎಂದು ಅಪ್ರದಕ್ಷಿಣೆಯಾಗಿ ಪಿಂಡಕ್ಕೆ ತಾಗದ ಹಾಗು ಪಿಂಡದ ಸುತ್ತಲೂ ದರ್ಭೆಯನ್ನು ಹಾಕಬೇಕು, ಹೀಗೆಯೇ ಉದಕುಂಭಸ್ಥಾನದಲ್ಲಿಯೂ ದರ್ಭೆ ಹಾಕಬೇಕು. ಅನಂತರ, ತಿಲೋದಕ ಹಿಡಿದು,

**ದರ್ಭಾಣಾಮುಪರಿ ಏತತ್ತಿಲೋದಕಮುಪತಿಷ್ಠತು ॥** –ಎಂದು ಪಿಂಡದ ಸುತ್ತಲೂ ಹಾಕಿದ ದರ್ಭೆಯ ಮೇಲೆ ಬಿಟ್ಟು, ಹೀಗೆಯೇ ಉದಕುಂಭಸ್ಥಾನದಲ್ಲಿಯೂ ಕೊಟ್ಟು, ಅನ್ನವನ್ನು ಹಿಡಿದು,

**ಪಿಂಡಸ್ಯ ಪರಿತಃ ಅಯಂ ಬಲಿರುಪತಿಷ್ಠತು ॥** –ಎಂದು ಸುತ್ತಲೂ ಹಾಕಿದ, ದರ್ಭೆಯ ಮೇಲೆ ಅಪ್ರದಕ್ಷಿಣೆಯಾಗಿ ಯಮಾದಿ ನಾಮಮಂತ್ರದಿಂದ ಬಲಿ ಹಾಕಬೇಕು,

**ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।**
**ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥**
**ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।**
**ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ತೇ ನಮಃ ॥**

–ಎಂದು ಬಲಿಹಾಕಿ, ಹೀಗೆಯೇ ಉದಕುಂಭಸ್ಥಾನದಲ್ಲಿಯೂ ಬಲಿ ನೀಡಿ, ಎಳ್ಳು ನೀರು ಹಿಡಿದು,

**ಬಲೇರುಪರಿ ತಿಲೋದಕಮುಪತಿಷ್ಠತು ॥** –ಎಂದು ಬಲಿಯ ಮೇಲೆ ತಿಲೋದಕ ಬಿಟ್ಟು, ಹೀಗೆಯೇ ಉದಕುಂಭಸ್ಥಾನದಲ್ಲಿಯೂ ಕೊಡಬೇಕು.

## ವಾಯಸಬಲಿಃ

ದರ್ಭೆ, ಗರಿಕೆ, ಎಳ್ಳು, ತುಳಸಿತೀರ್ಥ ನೀರು ಹಿಡಿದು, **ಅಸ್ಮತ್ಪಿತುಃ ಮೃತಾಹಾತ್ .......ಆದ್ಯಷೋಡಶಮಾಸಿಕಶ್ರಾದ್ಧಪೂರ್ವಕ ಉದಕುಂಭಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಕಾಕಬಲಿರುಪತಿಷ್ಠತು ॥** ಎಂದು ಹವಿಸ್ಸಿನ ಎಲೆಗೆ ಹಾಕಿ **'ಕಾಕಬಲಿರುದ್ವಾಸನಮುಪತಿಷ್ಠತು ॥'** ಎಂದು ದಕ್ಷಿಣಕ್ಕೆ ಸ್ವಲ್ಪ ಸರಿಸಿ, ಪ್ರಾಜ್ಞರೂಪಿ ಪರಮಾತ್ಮನನ್ನು ಸ್ಮರಿಸಿ, ನಮಸ್ಕಾರ ಮಾಡಬೇಕು. ಅನಂತರ ಎಲೆಯನ್ನು ಎತ್ತಿಕೊಂಡು ಕನಿಷ್ಠಪೂರ್ವಕರಾಗಿ ಸ್ವಲ್ಪ ದೂರ ಹೋಗಿ,

**ಯಮೋಽಸಿ ಯಮದೂತೋಽಸಿ ವಾಯಸೋಽಸಿ ಮಹಾಬಲ ।**
**ಸಪ್ತಜನ್ಮಕೃತಂ ಪಾಪಂ ಬಲಿಂ ಭುಂಜಂತು ವಾಯಸಾಃ ॥**

–ಎಂದು ಎಲೆ ದಕ್ಷಿಣಾಗ್ರವಾಗಿಟ್ಟು ಕೈತೊಳೆದು, ಕೈಬಡಿದು ಕಾಗೆಗಳನ್ನು ಆಹ್ವಾನಿಸಿ, ಕೈಕಾಲು ತೊಳೆದು, ವೇದಿಕೆಯ ಬಳಿ ಕನಿಷ್ಠಪೂರ್ವಕರಾಗಿ ಬರಬೇಕು. (ಬಲ) ಪೂರ್ವಾಭಿಮುಖವಾಗಿ ಕುಳಿತು ಪವಿತ್ರ ತೆಗೆದು ಆಚಮನ ಮಾಡಿ ಪುನಃ ಪವಿತ್ರ ಧರಿಸಿ,

## ತಾಂಬೂಲದಕ್ಷಿಣಾದಿ

ವೀಳ್ಯದೆಲೆ ಅಡಕೆ, ಎಳ್ಳು ಚಿಲ್ಲರೆ ನೀರು ಹಿಡಿದು,

**ಅಸ್ಮತ್ಪಿತುಃ .....ಮಾಸಿಕಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಇದಂ ಸತಿಲಕ್ರಮುಕತಾಂಬೂಲ ಹಿರಣ್ಯಮುಪತಿಷ್ಠತು ॥** –ಎಂದು ಬ್ರಾಹ್ಮಣಕೂರ್ಚದ ಎಡಭಾಗದಲ್ಲಿಟ್ಟು, ಹೀಗೆ ಉದಕುಂಭಸ್ಥಾನದಲ್ಲಿ ಇಡಬೇಕು.

ಅಕ್ಷತೆಯನ್ನು ಹಿಡಿದು, ಎರಡು ಪಿಂಡಸ್ಥಾನದಲ್ಲಿ ಕೇಶವಾದಿ ನಾಮದಿಂದ ಪಿಂಡಗಳೆರಡರ ಮೇಲೆ ಹಾಕಿ **'ಷೋಡಶೋಪಚಾರಾ ಉಪತಿಷ್ಠಂತು'** ಎಂದು ಹೇಳಿ (ಎಡ) ತಿಲೋದಕ ಹಿಡಿದು,

**ಅಸ್ಮತ್ಪಿತುಃ .....ಮಾಸಿಕಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಪಿಂಡಾನಾಮುಪರಿ ಏತತ್ತಿಲೋದಕಮುಪತಿಷ್ಠತು ॥** –ಎಂದು ತಿಲೋದಕ ನೀಡಿ, ಹೀಗೆಯೇ ಉದಕುಂಭಸ್ಥಾನದಲ್ಲಿ ಕೊಟ್ಟು, ಪಿಂಡವನ್ನು ಮುಟ್ಟಿಕೊಂಡು,

**ಅಸ್ಮತ್ಪಿತುಃ .....ಶ್ರಾದ್ಧೇ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಪಿಂಡಾನಾಮುದ್ವಾಸನ–ಮುಪತಿಷ್ಠತು ॥** –ಎಂದು ಪಿಂಡವನ್ನು ಅಲ್ಲಾಡಿಸಿ, ಬಲಿಯನ್ನು ಭೇದನ ಮಾಡುತ್ತಾ,

**ಅಸ್ಮತ್ಪಿತುಃ .....ಶ್ರಾದ್ಧೇ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಬಲೀನಾಮುದ್ವಾಸನಮುಪತಿಷ್ಠತು ॥** –ಎಂದು ಬಲಿಭೇದನ ಮಾಡಿ, ಕೈತೊಳೆದು, ಹೀಗೆಯೇ ಉದಕುಂಭಸ್ಥಾನ

ದಲ್ಲಿಯೂ ಮಾಡಬೇಕು. ಅನಂತರ ಪಿಂಡದ ಮೇಲೆ **ವಾಸೋದಕಾದಿಗಳನ್ನು** ನೀಡಿ, ಅನಂತರ ತಾಯಿ ಮತ್ತು ಹೆಣ್ಣುಮಕ್ಕಳು ಕನಿಷ್ಠಪೂರ್ವಕವಾಗಿ ಒಬ್ಬ ಕರ್ತೃವಿನ ಪಿಂಡದ ಮೇಲೆ **ವಾಸೋದಕಾದಿಗಳನ್ನು** ನೀಡಬೇಕು. ಕರ್ಮಿಗಳು ಎರಡು ದರ್ಭೆಯನ್ನು ದಕ್ಷಿಣಾಗ್ರವಾಗಿ ಎರಡೂ ಸ್ಥಾನಗಳ ಪಿಂಡದ ಮೇಲಿಟ್ಟು, (ಬಲ) ಅಕ್ಷತೆ ಹಿಡಿದು,

**ಅನಾದಿ ನಿಧನೋ ದೇವಃ ಚಕ್ರಶಂಖಗದಾಧರಃ ।**
**ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದೋ ಭವ ॥**

**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥**

–ಎಂದು ಪಿಂಡಗಳಿಗೆ ಅಕ್ಷತೆ ಹಾಕಿ ನಮಸ್ಕಾರ ಮಾಡಬೇಕು.

## ಕೃಷ್ಣಾರ್ಪಣಮ್

ನಾಣ್ಯ, ತುಳಸೀನೀರು ಹಿಡಿದು, ಪೂರ್ವಾಭಿಮುಖವಾಗಿ,

**ಅಸ್ಮತ್ಪಿತುಃ ....ಆದ್ಯಷೋಡಶಮಾಸಿಕಶ್ರಾದ್ಧಪೂರ್ವಕ ಉದಕುಂಭಶ್ರಾದ್ಧಸ್ಯ ಸಂಪೂರ್ಣಫಲಪ್ರಾಪ್ತ್ಯರ್ಥಮ್ ಆಚಾರ್ಯಾಯ ಯಥಾಶಕ್ತಿ ದಕ್ಷಿಣಾಂ ಪ್ರತಿಪಾದಯಾಮಿ ॥** ಎಂದು ದಕ್ಷಿಣೆಯನ್ನು ಭೂಮಿಯ ಮೇಲೆ ಇಟ್ಟು, ಕೈಮುಗಿಯಬೇಕು. ಅನಂತರ ದಕ್ಷಿಣೆಯ ಮೇಲಿರುವ ತುಳಸಿಯನ್ನು ತೆಗೆದು, **'ಯಸ್ಯ ಸ್ಮತ್ಯಾ ಚ'** ಎಂಬ ಮಂತ್ರ ಪಠಿಸಿ,

**ಅಸ್ಮತ್ಪಿತುಃ ..... ಆದ್ಯಷೋಡಶಮಾಸಿಕಶ್ರಾದ್ಧಪೂರ್ವಕ ಉದಕುಂಭಶ್ರಾದ್ಧಕರ್ಮಣಾ ಪಿತೃಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥**

**ಅಚ್ಯುತಃ ಕಲ್ಪವೃಕ್ಷಶ್ಚ ಅನಂತಃ ಕಾಮಧೇನವಃ ।**
**ಚಿಂತಾಮಣಿಸ್ತು ಗೋವಿಂದೋ ನಾಮತ್ರಯಮುದಾಹೃತಮ್ ॥**

ತುಲಸಿಯನ್ನು ಸ್ವಲ್ಪ ಪಿಂಡಕ್ಕೆ ಹಾಕಿ ಉಳಿದುದನ್ನು ತನ್ನ ಕಿವಿಯಲ್ಲಿಟ್ಟುಕೊಳ್ಳಬೇಕು.

## ಪಿಂಡವಿಸರ್ಜನಮ್

ತಮ್ಮ ಹರಿವಾಣದಲ್ಲಿ ನೀರು ಮತ್ತು ತೀರ್ಥ ಹಾಕಿ,

**ಓಂ ಯತ್ರ ತದ್ವಿಷ್ಣುರ್ಮಹೀಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥**

**ವಾಸನಾದ್ವಾಸುದೇವೋಽಸಿ ವಾಸಿತಂತೇ ಜಗತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

**ವೇಣೀಮಾಧವಾಯ ನಮಃ । ಬಿಂದುಮಾಧವಾಯ ನಮಃ । ಗಯಾಗದಾಧರಾಯ ನಮಃ ॥**

(ಎಡ) **ಪ್ರೇತಪಿಂಡೋಽಯಂ ಗಯಾರ್ಪಿತೋಽಸ್ತು** ॥ ಎಂದು ಪಿಂಡವನ್ನು ಬಲಿಯನ್ನು ಹರಿವಾಣದಲ್ಲಿ ಇಟ್ಟು, ಅನಂತರ ಪಿಂಡದ ಸ್ಥಳದಲ್ಲಿ ಎಳ್ಳುನೀರು ಹಿಡಿದು, **'ಇದಂ ಸತಿಲೋದಕ ಪಿಂಡಪ್ರದಾನಂ ಪ್ರೇತಾಪ್ಯಾಯನ ಮಸ್ತು॥'** –ಎಂದು ಎರಡು ಪಿಂಡಸ್ಥಾನದಲ್ಲಿ ತಿಲೋದಕ ಕೊಟ್ಟು ಷೋಡಶಮಾಸಿಕ ಪಿಂಡಸ್ಥಳದ ಎಳ್ಳನ್ನು ಹಿಡಿದು, **'ಅಕ್ಷಯ್ಯಸ್ಥಾನೇ ಅಭಿರಮ್ಯತಾಂ ಪ್ರೇತಃ ॥'** (ಅಭಿರಮ್ಯತಾ ಸ್ಮಃ)' ಎಂದು ಎಳ್ಳನ್ನು ಆಕಾಶದ ಕಡೆಗೆ ಎರಚಬೇಕು. ಹೀಗೆ ಉದಕುಂಭಸ್ಥಾನದಲ್ಲಿ ಮಾಡಿ, ಅನಂತರ ಬ್ರಾಹ್ಮಣಕೂರ್ಚವನ್ನು ಹಿಡಿದು,

**ಅಗತೀನಾಂ ಚ ಸರ್ವೇಷಾಂ ಗತಿರ್ನಾರಾಯಣೋ ಹರಿಃ ।**
**ತತ್ರ ಸಂಪೂಜನಂ ಕಾರ್ಯ ಸರ್ವಪಾಪಹರಂ ಶುಭಮ್ ॥**

**ಅಸ್ಮತ್ಪಿತುಃ .....ಮಾಸಿಕಶ್ರಾದ್ಧೇ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಕೂರ್ಚ ಉದ್ವಾಸನಮುಪತಿಷ್ಠತು ॥** –ಎಂದು ಕೂರ್ಚವನ್ನು ಬಿಚ್ಚಿ ಹೀಗೆ ಉದಕುಂಭಸ್ಥಾನದ ಕೂರ್ಚವನ್ನು ಬಿಚ್ಚಿ ಜಲಕೂರ್ಚವನ್ನು ಸಹ ಬಿಚ್ಚಬೇಕು. ಬ್ರಾಹ್ಮಣಭೋಜನ ಅನ್ನವನ್ನು ದೂರ ಎಸೆದು ಗೋಮಯದಿಂದ ಪಿಂಡ ಹಾಕಿದ ಸ್ಥಳವನ್ನು ಶುದ್ಧ ಮಾಡಬೇಕು. ಅನಂತರ ಶ್ರಾದ್ಧಗಳ ಸಂಪೂರ್ಣ ಫಲಪ್ರಾಪ್ತಿಗಾಗಿ **'ಕೃತಸ್ಯ ಕರ್ಮಣಾ ಸಾಂಗತಾಫಲ ಸಿದ್ಧ್ಯರ್ಥೇ ಆಮಾನ್ನದಾನಂ ಕರಿಷ್ಯೇ'** ಎಂದು ಸಂಕಲ್ಪಿಸಿ, ೧೬–೮–೪ ಇಲ್ಲವೇ ೨ ಆದರೂ ತಾಂಬೂಲ ದಕ್ಷಿಣೆ ಸಹಿತ ಆಮಾನ್ನದಾನ (ಪುಟಸಂಖ್ಯೆ 226). ಕೊಡಬೇಕು. ೧ ಆದ್ಯಷೋಡಶಮಾಸಿಕಶ್ರಾದ್ಧದ ಆಮಾನ್ನದಾನ, ೨ ಉದಕುಂಭಶ್ರಾದ್ಧದ ಆಮಾನ್ನದಾನ (ಬಲ) ಆಮದಾನ ಕೊಟ್ಟು ಆಚಮನ ಮಾಡಿ, ಪವಿತ್ರ ಬಿಚ್ಚಿ ಹಾಕಬೇಕು.

* * *



# ಮರಣವಿಷಯೇ ಸಾಮಾನ್ಯಜ್ಞಾನಾನಿ

ಗಂಗೆಯ ಸಮೀಪ ಮಗು ಮೃತವಾದರೆ ಗಂಗೆಗೆ ಹಾಕಬೇಕು. ಇಪ್ಪತ್ತೇಳು ತಿಂಗಳ ವರೆಗಿನ ಮಗು ಮೃತವಾದರೆ ಹೂಳಬೇಕು. ಆರು ತಿಂಗಳೊಳಗಿನ ಮಗು ಮೃತವಾದರೆ ಹಾಲನ್ನು ದಾನ ಮಾಡಬೇಕು. ಮಟೂರು ವರ್ಷದೊಳಗಿನ ಮಗು ಮೃತವಾದರೆ ಪಾಯಸವನ್ನು ದಾನ ಮಾಡಬೇಕು. ಮೂರು ತಿಂಗಳ ಅನಂತರದ ಮಕ್ಕಳು ಮರಣವಾದರೆ ಅನ್ನದಾನ ಮಾಡಬೇಕು. ಹನ್ನೆರಡು ಅಥವಾ ಹದಿಮೂರನೆಯ ದಿನ ಅದೇ ವಯಸ್ಸಿನ ಮಕ್ಕಳಿಗೆ ಭೋಜನ ಮಾಡಿಸಿ ಯಥೋಚಿತವಸ್ತ್ರಗಳನ್ನು ಕೊಟ್ಟು ತೃಪ್ತಿಪಡಿಸಬೇಕು.

ಚೂಡಾಕರ್ಮವಾಗಿ ಐದು ವರ್ಷದ ಬಳಿಕ ಉಪನಯನವಾಗಲಿ ಆಗದೇ ಇರಲಿ ಮರಣವಾದರೆ ಹತ್ತು ದಿನಗಳ ವರೆಗೆ ಬೆಲ್ಲ ಮಿಶ್ರಿತ ಪಾಯಸದಿಂದ ಪಿಂಡಪ್ರದಾನ ಮಾಡಿ ಏಕೋದ್ದಿಷ್ಟ ಮಾಡಿ ಹನ್ನೆರಡನೆಯ ದಿನ ಏಕೋದ್ದಿಷ್ಟವಿಧಿಯಂತೆ ಸಪಿಂಡೀಕರಣ ಶ್ರಾದ್ಧ ಮಾಡಬೇಕು. ವೃಷೋತ್ಸರ್ಗ ಮಾಡಬೇಕಾಗಿಲ್ಲ. ಹದಿನೆಂಟು ವರ್ಷ ಕಳೆದ ಬ್ರಹ್ಮಚಾರಿಗೆ ಸಪಿಂಡೀಕರಣ ಮಾಡಬೇಕು.

ಹನ್ನೆರಡು ವರ್ಷದೊಳಗಿನ ಮಕ್ಕಳು ಮೃತರಾದರೆ ವೃಷೋಸರ್ಗವಿಧಿ ಮಾಡಿ ದಹನಮಾಡಿ ಹತ್ತು ದಿನದ ವರೆಗೆ ಗಾತ್ರವಿಧಿ ಮಾಡಿ ಏಕೋದ್ದಿಷ್ಟ, ಷೋಡಶಮಾಸಿಕಶ್ರಾದ್ಧ ಮಾಡಿ ಹನ್ನೆರಡನೆಯ ದಿನ ಸಪಿಂಡೀಕರಣದ ಬದಲಿಗೆ ನಾರಾಯಣಬಲಿ ಮಾಡಿ ಎಂಟು ವಿಪ್ರರ ಆರಾಧನೆ ಮಾಡಿ, ಏಕೋದ್ದಿಷ್ಟವಿಧಿಯಿಂದ ಶ್ರಾದ್ಧ ಮಾಡಬೇಕು. ಹನ್ನೆರಡು ವರ್ಷಕ್ಕಿಂತ ಮೇಲಿನವರಿಗೆ ಸಪಿಂಡೀಕರಣಶ್ರಾದ್ಧ ಮಾಡಬೇಕು.

ಆತ್ಮಹತ್ಯೆ, ವಿಷಜಂತುಗಳಿಂದ, ಆಯುಧಗಳಿಂದ, ಅಪಘಾತದಿಂದ ಅಕಾಲದಲ್ಲಿ ಮೃತಪಟ್ಟರೆ ಗರ್ಭಿಣಿ, ಬಾಣಂತಿ, ಬ್ರಹ್ಮಚಾರಿಗಳಿಗೆ ನಾರಾಯಣಬಲಿ ಮಾಡಿ ದಹನ ಮಾಡಿ ಹನ್ನೊಂದನೆಯ ದಿನ ಪ್ರಾಯಶ್ಚಿತ್ತ ನಾರಾಯಣಬಲಿ ಮಾಡಿ, ಹನ್ನೆರಡನೆಯ ದಿನ ಸಪಿಂಡೀಕರಣ ಮಾಡಬೇಕು.

ಅವಿವಾಹಿತ ಸ್ತ್ರೀಯರು, ಬ್ರಹ್ಮಚಾರಿಗಳು ಮರಣವಾದರೆ ನಾರಾಯಣಬಲಿ ಮಾಡಿ ದಹನ. ಹನ್ನೊಂದನೆಯ ದಿನ ಪ್ರಾಯಶ್ಚಿತ್ತನಾರಾಯಣಬಲಿ ಮಾಡಿ, ಹನ್ನೆರಡನೆಯ ದಿನ ಸಪಿಂಡೀಕರಣ ಮಾಡಬೇಕು. ಪ್ರತಿವರ್ಷವೂ ಸಾಂವತ್ಸರಿಕಶ್ರಾದ್ಧ ಮಾಡುವುದಾದರೆ ಸಪಿಂಡಿ ಮಾಡಬಹುದು. ಶ್ರಾದ್ಧಮಾಡುವವರಿಲ್ಲದಿದ್ದರೆ ಹನ್ನೆರಡನೆಯ ದಿನ ಸಾಯುಜ್ಯ ನಾರಾಯಣಬಲಿ ಮಾಡಬೇಕು. ಅನಂತರ ಯಥಾಶಕ್ತಿ ಬ್ರಹ್ಮಚಾರೀಆರಾಧನೆ ಮಾಡಬೇಕು, ಮೋಕ್ಷನಾರಾಯಣಬಲಿ ಮಾಡಬೇಕು. ಉಪನಯನಸ್ಥಾನದಲ್ಲಿ ಸ್ತ್ರೀಯರಿಗೆ ವಿವಾಹ ಎಂದು ತಿಳಿಯಬೇಕು.

ರಾತ್ರಿಯ ಮೊದಲಿನ ಪ್ರಹರ ಅಂತ್ಯವಾಗುವವರೆಗೆ ದಿವಸದಲ್ಲಿ ಮಾಡಬಹುದಾದ ಧರ್ಮಕಾರ್ಯಗಳನ್ನು ಆಚರಿಸುವಾಗ ಮುಳುಗಿ ಸ್ನಾನ ಮಾಡುವುದು, ಕ್ಷೌರವನ್ನು ಮತ್ತು ಬ್ರಹ್ಮಯಜ್ಞವನ್ನೂ ಸಹ ಮಾಡಬಾರದು.

ತಂದೆತಾಯಿ ಮೃತರಾದಲ್ಲಿ ಹಿರಿಯ ಮಗನು ಕ್ರಿಯೆ ಮಾಡಬೇಕು. ಹಿರಿಯವನು ಇಲ್ಲದಿದ್ದರೆ ಕಿರಿಯವನು ಮಾಡಬೇಕು. ಅವನೂ ಇಲ್ಲದಿದ್ದರೆ ಮಧ್ಯದವನು ಮಾಡಬೇಕು. ಗಂಡುಮಕ್ಕಳಿಲ್ಲದಿದ್ದರೆ ಮೃತನ ಅಣ್ಣ, ತಮ್ಮ, ಚಿಕ್ಕಪ್ಪ, ದೊಡ್ಡಪ್ಪ, ಅಳಿಯ, ಮಿತ್ರರು – ಹೀಗೆ ಯಾರೂ ಸಂಸ್ಕಾರ ಮಾಡಬಹುದು. ಮಿತ್ರನ ಹಾಗೂ ಅನಾಥರು ಕ್ರಿಯೆ ಮಾಡಿದರೆ ಕೋಟಿ ಯಜ್ಞದ ಫಲ ಬರುವುದು. ಮೊದಲ ದಿನದಿಂದ ಹನ್ನೊಂದನೆಯ ದಿನದವರೆಗಿನ ಕ್ರಿಯೆಗಳನ್ನು ಮಾಡಿ ಹನ್ನೆರಡನೆಯ ದಿನ ಸಾಯುಜ್ಯನಾರಾಯಣಬಲಿ ಮಾಡಬೇಕು.

ಮಗ ಮುಂದಿನ ದಿನಗಳಲ್ಲಿ ಬರುವ ನಿರೀಕ್ಷೆ ಇದ್ದರೆ, ಅನ್ಯರು ದಹನ ಮಾಡಿ ಏಕೋದ್ದಿಷ್ಟದ ವರೆಗಿನ ಕರ್ಮಾಂಗಗಳನ್ನು ಮಾಡಿ ನಿಲ್ಲಿಸಬೇಕು. ಅನಂತರ ಮಗ ಬಂದ ಬಳಿಕ ಮಗನೇ ವೃಷೋತ್ಸರ್ಗಾದಿಗಳನ್ನು ಮುಂದುವರಿಸಬೇಕು.

ಮರಣವಾಗಿ ಹತ್ತು ದಿನದ ನಿತ್ಯಕ್ರಿಯೆಯ ನಡುವೆ ಗ್ರಹಣ ಬಂದಲ್ಲಿ ಗ್ರಹಣದ ಹಿಂದಿನ ದಿನ ಹತ್ತನೆಯ ದಿನದ ಧರ್ಮೋದಕದ ವರೆಗಿನ ಎಲ್ಲಾ ಕರ್ಮಾಂಗಗಳನ್ನು ಮಾಡಿ ಮುಗಿಸಬೇಕು. ಇಲ್ಲವೇ ಶಿಲೆಯನ್ನು ಭೂಗತ ಮಾಡಿ (ಕರ್ಮವಸ್ತ್ರವನ್ನು ಗ್ರಹಣಸಮಯದಲ್ಲಿ ಯಾರೂ ಮುಟ್ಟದ ಹಾಗೆ ದೂರ ಇಟ್ಟು ರಕ್ಷಿಸಬೇಕು.) ಗ್ರಹಣದ ಮರುದಿನ ಭೂಗತ ಮಾಡಿದ ಕಲ್ಲನ್ನು ತೆಗೆದು ಮೊದಲ ದಿನದಿಂದಾರಂಭಿಸಿ ಕರ್ಮಾಂಗ ಪ್ರಾರಂಭ ಮಾಡಬೇಕು.

ಆಪತ್ಕಾಲದಲ್ಲಿ– ಬದುಕಿರುವ ಅಪ್ಪಅಮ್ಮ ಇರುವವರು, ಋತುಮತಿಯಾದ ಹೆಂಡತಿ ಇರುವವರು, ಗರ್ಭಿಣಿ ಹೆಂಡತಿ ಇರುವವರು, ಮುಂದಿನ ತಿಂಗಳು ಮದುವೆಯಾಗಲಿಕ್ಕಿರುವವರು –ಹೀಗೆ ಯಾರೂ ಕೂಡ ಹೆಣ ಹೊರಬಹುದು ಎಂದು ಗರುಡಪುರಾಣದಲ್ಲಿದೆ.

**ಸರ್ಪದಿಂದ ಹತನಾದರೆ** ನಾರಾಯಣಬಲಿ ಮಾಡಿ ಶವದಹನ ಮಾಡಬೇಕು. ಅನಂತರ ಪ್ರತಿ ತಿಂಗಳು ಶುಕ್ಲಪಂಚಮಿಯಲ್ಲಿ ನಾಗಾರಾಧನೆ ಮಾಡಬೇಕು.

**ಏಕಾದಶಿಯಂದು ಮರಣವಾದರೆ** ವಪನ ಇಲ್ಲ; ತೈಲಾಭ್ಯಂಗ ಇಲ್ಲ; ಬಿಸಿನೀರಿನ ಬದಲಿಗೆ ತಣ್ಣೀರುಸ್ನಾನ; ಅಮಂತ್ರಕವಾಗಿ ಕರ್ಮಾಚರಣೆ; ಲೌಕಿಕಾಗ್ನಿಯಲ್ಲಿ ದಹನ; ತಿಲಾಂಜಲ್ಯಾದಿಗಳಿಲ್ಲ; ಪಿಂಡಪ್ರದಾನ ಇಲ್ಲ; ಶವಸಂಸ್ಕಾರಕ್ಕೆ ಬಂದವರು ತಾತ್ಕಾಲಿಕ ಉಪವೀತ ಬದಲಾವಣೆ, ಮರುದಿನ ಪುನಃ ಕ್ರಮದಂತೆ ಉಪವೀತ ಧರಿಸಬೇಕು; ಮರುದಿನ ಅಸ್ಥಿ ಸಂಗ್ರಹಿಸಿ ವಪನ; ಅಸ್ಥಿಗೆ ತೈಲಾಭ್ಯಂಗ, ಬಿಸಿನೀರುಸ್ನಾನ ಮಂತ್ರಪೂರ್ವಕವಾಗಿ ದಹನ ಸಂಸ್ಕಾರ ಮಾಡಬೇಕು.

**ರಜಸ್ವಲೆಯಾದ ಸ್ತ್ರೀ ಮರಣ ಹೊಂದಿದ ಸಮಯದಲ್ಲಿ** ನಾಲ್ಕು ದಿನವಾದರೆ ಪಂಚಗವ್ಯದಿಂದ ಪ್ರೋಕ್ಷಿಸಿ ಮಾಡಿ ದಹನ ಮಾಡಿ, ಐದನೆಯ ದಿನದಿಂದ ಕ್ರಿಯೆ ಪ್ರಾರಂಭಿಸಬೇಕು. ರಜಸ್ವಲೆಯಾಗಿ ನಾಲ್ಕು ದಿನಗಳೊಳಗಾದರೆ ಗೋಧಿಹಿಟ್ಟಿನಿಂದ ದೇಹವನ್ನು ಲೇಪನ ಮಾಡಿ (ಬಾಣಂತಿ ಮೃತಳಾದರೆ ಔಷಧಿ ಲೇಪನ), ಗೆರಸೆಯಲ್ಲಿ ಗೋಮಯ ಗೋಮೂತ್ರ, ಅರಸಿನ ನೀರಿನಿಂದ ಸ್ನಾನ ಮಾಡಿಸಿ, '**ದಧಿಕ್ರಾವ್ಣೋ, ಆಪೋ ಹಿಷ್ಠಾ, ಯಚ್ಚಿದ್ಧಿ ತೇ, ಹಿರಣ್ಯವರ್ಣಾಃ ಶುಚಯಃ**' ಮುಂತಾದ ಮಂತ್ರಗಳಿಂದ

ಸ್ನಾನ ಮಾಡಿಸಿ, ಶವದಹನ ಮಾಡಬೇಕು. ಐದನೆಯ ದಿನ ಕರ್ಮ ಪ್ರಾರಂಭಿಸಬೇಕು. ದೋಷನಿವಾರಣೆಗೆ ಹನ್ನೊಂದನೆಯ ದಿನ ಪ್ರಾಯಶ್ಚಿತ್ತ ನಾರಾಯಣಬಲಿ ಮಾಡಬೇಕು.

**ಆರು ತಿಂಗಳ ಗರ್ಭಿಣಿ ಮೃತಳಾದರೆ** ನಾರಾಯಣಬಲಿ ಮಾಡಿ ದಹನ ಇತ್ಯಾದಿ. ಏಳು ತಿಂಗಳ ಅನಂತರ ಮರಣಹೊಂದಿದ ಸಮಯದಲ್ಲಿ ಕರ್ಣಸೂಕ್ತಜಪ ಮಾಡಿ, ನಾರಾಯಣಬಲಿ ಮಾಡಿ, ಶವವನ್ನು ಶ್ಮಶಾನಕ್ಕೆ ತಂದು ಚಿತೆಯ ಪಶ್ಚಿಮಭಾಗದಲ್ಲಿಟ್ಟು ಗೋಮೂತ್ರದಿಂದ ಪ್ರೋಕ್ಷಣೆ ಮಾಡಿ ಶವದ ನಾಭಿಯ ಮೇಲ್ಭಾಗದ ಎರಡೂ ಬದಿಗಳಲ್ಲಿ ನೀರಿನಿಂದ '**ಹಿರಣ್ಯಗರ್ಭಃ ಸಮವರ್ತತಾಗ್ರೇ**' ಮಂತ್ರದಿಂದ ಗೆರೆ ಎಳೆದು, ಚೂರಿಯಿಂದ ನಾಲ್ಕು ಅಂಗುಲ ಸೀಳಿ ಮಗುವನ್ನು ಹೊರ ತೆಗೆದು ಜೀವವಿದ್ದರೆ ತಾಯಿಯ ಸ್ತನಕ್ಕೆ '**ಯಸ್ತೇ ಸ್ತನ....**' ಮಂತ್ರದಿಂದ ಮಗುವಿನ ಬಾಯಿಗೆ ಸ್ಪರ್ಶ ಮಾಡಿಸಿ ಮನೆಗೆ ಕೊಂಡೊಯ್ಯುವುದು. ಮಗು ಸತ್ತಿದ್ದರೆ ಭೂಗತ ಮಾಡುವುದು. ಸೀಳಿದ ಚರ್ಮಕ್ಕೆ ಪೃಷದಾಜ್ಯ(ಮೊಸರು ಮಿಶ್ರಿತ ತುಪ್ಪ)ವನ್ನು ತುಂಬಿಸಿ ಹೊಲಿದು ಅನಂತರ ಸ್ನಾನಾದಿಗಳನ್ನು ಮಾಡಿ ದಹನ ಮಾಡುವುದು. ಸೂತಕಾಂತ್ಯದಲ್ಲಿ ಪ್ರೇತೋದರವಿದಾರಣದೋಷನಿವಾರಣೆಗೆ ಗೋದಾನ, ಸ್ವರ್ಣದಾನಗಳನ್ನು ನೀಡಬೇಕು. ಆದರೆ ಇಂದಿನ ದಿನ ಇವೆಲ್ಲವೂ ಆರೋಗ್ಯ ಕೇಂದ್ರಗಳಲ್ಲಿ ನಡೆಯುವುದರಿಂದ ಸೀಳಿದ ಹೊಟ್ಟೆಯ ಭಾಗಕ್ಕೆ ತುಪ್ಪ ಕೊಡಬೇಕು. (ಪುಟಸಂಖ್ಯೆ ...)

**ಸಕೇಶಿ ಮೃತಳಾದರೆ** ನಿಯಮದ ಪ್ರಕಾರ ಮೊದಲು ಶವವನ್ನು ಸ್ನಾನ ಮಾಡಿಸಿ ಉತ್ತರಾಧಿಕಾರಿಯು ವಿಧವಾಧರ್ಮನಿಯಮ ವಿಚ್ಛೇದನದೋಷ ಪರಿಹಾರದ ಬಗ್ಗೆ ಇದುವರೆಗೆ ಕಳೆದ ವರ್ಷಕ್ಕೊಂದರಂತೆ ಸೂತಕನಿವೃತ್ತಿಯ ಅನಂತರ ಹಿರಣ್ಯದಾನ, ಗೋದಾನ, ಕೃಚ್ಛ್ರಪವಮಾನದಿಂದ ತಿಲಹವನಾದಿ ಪ್ರಾಯಶ್ಚಿತ್ತಗಳನ್ನು ಮಾಡುವೆನೆಂದು ಸಂಕಲ್ಪ ಮಾಡಿ, ವಪನಪ್ರತ್ಯಾಮ್ನಾಯವಾಗಿ ಮೃತ್ತಿಕಾ, ವಿಭೂತಿ, ಪಂಚಗವ್ಯ, ಗೋಮಯ ಹಾಕಿದ ನೀರನ್ನು ೧೦೮ ಸಲ ಸಾರಣಿಗೆಯಲ್ಲಿ ಹಾಕಿ ಸ್ನಾನ ಮಾಡಿಸಿ ವಸ್ತ್ರಾದಿಗಳಿಂದ ಅಲಂಕರಿಸಿ ನಿಯಮಪ್ರಕಾರ ದಹನಾದಿ ಕಾರ್ಯಗಳನ್ನು ಮಾಡಬೇಕು.

**ಮಕ್ಕಳಿಲ್ಲದ ದಂಪತಿಗಳಲ್ಲಿ ಪತಿ ಮೃತನಾದರೆ** ಪತ್ನಿಯೇ ಕರ್ತೃವಾಗಿದ್ದು ಆಕೆಯ ಹೆಸರಿನಲ್ಲಿ ಕ್ರಿಯೆಯನ್ನು ಬೇರೆಯವರು ನಡೆಸಬೇಕು. ಪತ್ನಿ ಮೃತಳಾದಲ್ಲಿ ಪತಿಯೇ ಕರ್ತೃ, ಇಲ್ಲವಾದರೆ ದಾಯಾದಿಗಳು (ಸಪಿಂಡರು), ಹೆಣ್ಣುಮಕ್ಕಳಿದ್ದರೆ ಮಗಳ ಗಂಡ, ಮಗಳ ಮಗ ಮುಂತಾದವರು ಕ್ರಮವಾಗಿ ಅರ್ಹರಾಗಿರುತ್ತಾರೆ. ಯಾರೂ ಇಲ್ಲವಾದರೆ ಮೃತರ ಹಣ, ಆಸ್ತಿಯನ್ನು ಯಾರು ಉಪಯೋಗಿಸು ತ್ತಾರೆಯೋ ಅವರೇ ಮುಂದಿನ ಕಾರ್ಯಗಳಿಗೆ ಕರ್ತೃವಾಗಿರುತ್ತಾರೆ. ಇಷ್ಟು ಮಂದಿಯನ್ನು ಬಿಟ್ಟು ಬೇರೆಯವರು ಮಾಡಬಾರದು.

**ಮಕ್ಕಳಿಲ್ಲದ ವಿಧವೆ ಮೃತರಾದಾಗ** ಅವರ ಕರ್ಮಗಳನ್ನು ಹನ್ನೊಂದನೆಯ ದಿನದವರೆಗೆ ಕಾರ್ಯವನ್ನು ನಡೆಸಿ ಹನ್ನೆರಡನೆಯ ದಿನ ಸಪಿಂಡೀಕರಣವನ್ನು

ಮಾಡಿ ಭರ್ತೃವಿನೊಂದಿಗೆ ಪಿಂಡಸಂಯೋಜನೆ ಮಾಡಬೇಕು. ಹೀಗೆ ಮಾಡಿದಲ್ಲಿ ಮುಂದೆ ಅವರಿಗೆ ಪ್ರತಿವಾರ್ಷಿಕ ಶ್ರಾದ್ಧವನ್ನು ಮಾಡುವ ಅವಶ್ಯವಿರುವುದಿಲ್ಲ. ಈ ಭರ್ತೃಸಪಿಂಡಿಕರಣವನ್ನು ಯಾರೂ ಇಲ್ಲದವರು ಮಾತ್ರ ಮಾಡಬೇಕೇ ವಿನಾ ಅವರ ಆಸ್ತಿಯನ್ನು ಸ್ವಾಧೀನಪಡಿಸಿಕೊಂಡು ಅವರಿಗೆ ಪಿತೃಕಾರ್ಯ ಮಾಡದಿದ್ದಲ್ಲಿ ಅವರ ಮುಂದಿನ ಪೀಳಿಗೆಗೆ ಪಿತೃಶಾಪಗಳಿಂದ ತೊಂದರೆಯುಂಟಾಗುತ್ತದೆ.

**ಯುದ್ಧದಲ್ಲಿ ಮರಣವಾದಲ್ಲಿ** 'ಸಪ್ತಪ್ರಾಣಾಃ ಸದಾಶ್ರಯಾಃ' ಎಂದು ದೇಹಕ್ಕೆ ತುಪ್ಪವೇ ಇಲ್ಲವೇ ಜೇನುತುಪ್ಪ ಹಚ್ಚಿ ಕರ್ಣಸೂಕ್ತಾದಿ ಜಪ ಮಾಡಿ, ಮುಂದಿನ ಕ್ರಿಯೆಗಳನ್ನು ಮಾಡಬೇಕು.

**ಕುಷ್ಠ, ಮಸೂರಿಕಾ, ಅಮ್ಮ (ಸಿಡುಬು), ಮಾರಿ** –ಇಂತಹ ಮಹಾರೋಗಗಳಿಂದ ಮರಣವಾದಲ್ಲಿ ನೆಕ್ಕಿಸೊಪ್ಪು, ಬಿಲ್ವಪತ್ರೆ, ಉಪ್ಪು, ಕಾಳುಮೆಣಸು ಹಾಕಿ ಭೂಗತ ಮಾಡುವುದು. ಮುತ್ತೈದೆ ಮರಣವಾದರೆ ಸೌಭಾಗ್ಯದ್ರವ್ಯಗಳನ್ನು ಹಾಕಿ ಭೂಗತ ಮಾಡುವುದು. ಅನಂತರದ ಕ್ರಿಯಾಭಾಗದ ವಿಚಾರದಲ್ಲಿ ಎರಡು ಅಭಿಪ್ರಾಯಗಳಿವೆ–

೧) ೪೫ ದಿನ ಆಶೌಚ. ೪೬ನೆಯ ದಿನ ಪಾಲಾಶವಿಧಿಯಿಂದ ದಹನ ಮಾಡಿ ಪ್ರಥಮ, ದ್ವಿತೀಯ, ತೃತೀಯ –ಹೀಗೆ ಮೂರು ದಿನಗಳ ನಿತ್ಯವಿಧಿ ಮಾಡಿ, ಪುನಃ ೪೭ನೆಯ ದಿನ ಚತುರ್ಥ, ಪಂಚಮ, ಷಷ್ಠ, ೪೮ರಂದು ಸಪ್ತಮ, ಅಷ್ಟಮ, ನವಮ, ದಶಮ ದಿನಗಳ ವಿಧಿ ಪೂರೈಸಿ, ೪೯ನೆಯ ದಿನ ಏಕೋದ್ದಿಷ್ಟ, ರಾತ್ರಿ ನಾರಾಯಣಬಲಿ, ೫೦ನೆಯ ದಿನ ತಿಲಹೋಮ, ಸಪಿಂಡೀಕರಣ – ಇದು ಉತ್ತಮ ಪಕ್ಷ.

೨) ಇಪ್ಪತ್ನಾಲ್ಕು ದಿನಗಳ ಕಾಲ ಆಶೌಚ ಮಾಡಿ (ಶಾಖಾಪಾಲಾಶ)ಸಂಸ್ಕಾರ ಮಾಡಿ ಕ್ರಿಯಾದಿ ನಡೆಸುವುದು.

**ಹೊರದೇಶದಲ್ಲಿ ಮರಣವಾಗಿ** ಅಸ್ಥಿ ಸಿಕ್ಕಿದರೆ ಅದನ್ನು ತುಪ್ಪದಲ್ಲಿ ಅದ್ದಿ ದಹನ ಮಾಡಿ, ಕ್ರಿಯೆ ಮಾಡಬೇಕು; ಅಸ್ಥಿ, ಉತ್ತರೀಯ, ಶಿಲೆ ಯಾವುದೂ ಸಿಗದಿದ್ದರೆ ೩೬೦ ಪಾಲಾಶ ಎಲೆ ಇಲ್ಲವೇ ದರ್ಭೆಯಿಂದ ಶರೀರದ ರೂಪವನ್ನು ಮಾಡಿ ದಹನ ಮಾಡಬೇಕು.

**ದಂಪತಿಗಳು ಏಕಕಾಲಕ್ಕೆ** (ಸಹಗಮನ ಪದ್ಧತಿಯಿಂದ) ಮರಣಹೊಂದಿದ ಸಂದರ್ಭ ದ್ವಿವಚನಾಂತವಾಗಿ ಪ್ರಯೋಗವಾಕ್ಯ ಹೇಳಿ ದಹನ ಮಾಡಬೇಕು. ಕ್ರಿಯೆಗಳನ್ನು ಬೇರೆಬೇರೆ ಮಾಡಬೇಕು.

ಹೆಂಡತಿ ಗರ್ಭಧರಿಸಿದ್ದಲ್ಲಿ ಗಂಡನು ತಿಲ ಹೋಮ, ಶ್ರಾದ್ಧಾನ್ನ, ಭೋಜನ, ಹೋಮ, ದೂರಯಾತ್ರಾ, ಗಯಾಶ್ರಾದ್ಧ, ವಪನ, ಶವಧಾರಣ, ಪರ್ವತಾರೋಹಣ, ಮಾಡಬಾರದು. ತಂದೆ ತಾಯಿ ಮೃತವಾದಲ್ಲಿ ಅವಶ್ಯವಾಗಿ ವಪನ ಮಾಡಬೇಕು.

ಕ್ರಿಯೆ ಪ್ರಾರಂಭದ ಮೊದಲು ಗ್ರಹಣ ಬಂದಾಗ ಗ್ರಹಣ ಮುಗಿದ ಮೇಲೆ ಕ್ರಿಯೆ ಪ್ರಾರಂಭ ಮಾಡಬೇಕು ದಹನದ ಮಧ್ಯೆ ಗ್ರಹಣಬಂದರೆ ದೋಷವಿಲ್ಲ.

ಸಪಿಂಡೀಕರಣದ ದಿನ ಜ್ಯೇಷ್ಠಕರ್ತೃವಿನ ಹೆಂಡತಿ ರಜಸ್ವಲೆಯಾದಲ್ಲಿ ಕರ್ಮಾಂಗವನ್ನು ನಿಲ್ಲಿಸಿ ಐದನೆಯ ದಿನ ಸಪಿಂಡೀಕರಣ ಮಾಡಬೇಕು.

ಮೃತರ ಸಂಬಂಧಿಗಳನ್ನು ಮಾತನಾಡಿಸಲು ಸಾಮಾನ್ಯವಾಗಿ ೫-೭-೯ನೆಯ ದಿನಗಳಲ್ಲಿ ಹೋಗುವ ಸಂಪ್ರದಾಯ ಕೆಲವರಲ್ಲಿದೆ.

ತಂದೆತಾಯಿಗಳ ಸಪಿಂಡೀಕರಣದ ಮಧ್ಯದಲ್ಲಿ ಇತರರ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಮಾಡಬಾರದು. ಇತರರ ಕ್ರಿಯಾಮಧ್ಯದಲ್ಲಿ ತಂದೆತಾಯಿಯರ ಶ್ರಾದ್ಧಾದಿಗಳು ಬಂದಲ್ಲಿ ಹನ್ನೊಂದನೆಯ ದಿನದ ಕಾರ್ಯಾಂಗ ಮಾಡಿ ಮರುದಿನ ತಂದೆಯ ಶ್ರಾದ್ಧ ಮಾಡಿ ಅದರ ಮರುದಿನ ಪ್ರೇತಕಾರ್ಯವನ್ನು ಪೂರ್ಣಮಾಡಬೇಕು.

ಮಗ, ಮಗನ ಮಗ, ಸೊಸೆ, ಸೊಸೆಯ ಸೊಸೆ ಇವರ ಸಪಿಂಡೀಕರಣ ಪ್ರಸಂಗದಲ್ಲಿ ಹಿರಿಯವನಾದ ಕರ್ತೃವು ಸಪಿಂಡೀಕರಣ ಮಾಡುವಾಗ ತನ್ನ ಮೂರು ತಲೆಯ ಒಳಪಟ್ಟ ಮೃತ ಪಿತೃಗಳನ್ನು ಮಾತ್ರ ಕರೆದು ಸಪಿಂಡೀಕರಣವನ್ನು ಮಾಡಿ ಮೃತರಿಂದ ಮೂರು ತಲೆಯ ಒಳಗಿನ ಮೃತ ಪಿತೃಗಳಿಗೆ ಮಾತ್ರ ಪಿಂಡಪ್ರದಾನದಿಂದ ಶ್ರಾದ್ಧ ಮಾಡುವುದು. ಒಂದು ಪಕ್ಷವಾದರೆ, ಮೃತರಿಂದ ನಾಲ್ಕನೇ ತಲೆಯ ಪರ್ಯಂತ ಮೃತ ಪಿತೃಗಳನ್ನು ಕರೆದು ಪಿಂಡಪ್ರದಾನ ಸಪಿಂಡೀಕರಣ ಮಾಡಿ ಶ್ರಾದ್ಧ ಸಮಯದಲ್ಲಿ ಮೃತರಿಂದ ಮೂರು ತಲೆ ಒಳಗಿನ ಪಿತೃಗಳಿಗೆ ಮಾತ್ರ ಪಿಂಡಪ್ರದಾನದಿಂದ ಶ್ರಾದ್ಧ ಮಾಡುವುದು. ಇನ್ನೊಂದು ಪಕ್ಷ ಹಾಗಾಗಿ, ಅನೇಕ ಸ್ಮೃತಿವಾಕ್ಯಾರ್ಥಗಳಿಂದ ಎರಡು ನಿಯಮಗಳು ಆಚರಣೆ ಇದ್ದರೂ ಈ ಪೈಕಿ ಮೊದಲ ನಿಯಮ ಬಹುಮತದಿಂದ ಪ್ರಶಸ್ತವೆನಿಸುತ್ತದೆ.

ಇತರರ ಕ್ರಿಯಾರಂಭದ ದಶಾಹದೊಳಗೆ ಕರ್ತೃವಿನ ತಾಯಿ ಮೃತಳಾದರೆ ತತ್ಕಾಲದಲ್ಲಿಯೇ ಪ್ರಾರಂಭಮಾಡಿ, ನಿತ್ಯವಿಧಿಯಲ್ಲಿ ತಾಯಿಯ ಕೆಲಸವನ್ನು ಪ್ರಥಮವಾಗಿ ಮಾಡಿ ಅನಂತರ ಇನ್ನೊಂದು ಮಾಡಬೇಕು. ಪ್ರಥಮ ಕಾರ್ಯವನ್ನು ಹನ್ನೊಂದನೆಯ ದಿನ ಏಕೋದ್ದಿಷ್ಟ ಮಾಡಿ ಇಡುವುದು. ಅನಂತರ ತಾಯಿಯ ಸಪಿಂಡೀಕರಣಾದಿ ಎಲ್ಲಾ ಕೆಲಸವನ್ನು ಪೂರ್ಣ ಮಾಡಿಯೇ ಪ್ರಥಮ ಕಾರ್ಯವನ್ನು ಪೂರ್ಣಗೊಳಿಸಬೇಕು.

ತಾಯಿ ಮರಣ ಹೊಂದಿದ ಹತ್ತು ದಿನದ ಒಳಗೆ ತಂದೆಯೂ ಮರಣಹೊಂದಿದರೆ ಮೊದಲು ನಿತ್ಯದ ಕ್ರಿಯೆಗಳನ್ನು ತಂದೆಗೆ ಮಾಡಿ, ಬಳಿಕ ತಾಯಿಯ ಕ್ರಿಯೆಗಳನ್ನು ಮಾಡಬೇಕು. ತಾಯಿಯ ಹನ್ನೊಂದನೆಯ ದಿನದ ಕಾರ್ಯವನ್ನು ಮಾಡಿ ನಿಲ್ಲಿಸಿ ಅನಂತರ ತಂದೆಯ ಕಾರ್ಯಗಳನ್ನು ಮಾಡಿ ಸಪಿಂಡೀಕರಣ ಮಾಡಿ ಮರುದಿನ ತಾಯಿಯ ಸಪಿಂಡೀಕರಣ ಮಾಡಬೇಕು ಒಂದೇ ದಿನ ಎರಡು ಸಪಿಂಡೀಕರಣ ಮಾಡುವಂತಿಲ್ಲ ಮರುದಿನ ತಂದೆಯ ಪಾಥೇಯದಾನ ಕೊಟ್ಟು ತಾಯಿಯ ಉದ್ದಿಶ್ಯ ಪಾಥೇಯದಾನವನ್ನು ಕೊಡಬೇಕು. ವೈಕುಂಠ ಸಮಾರಾಧನೆಯನ್ನು ಒಟ್ಟಿಗೆ ಮಾಡಬೇಕು.

ಹತ್ತನೇ ದಿನದ ಅನಂತರ ಪಿತೃಗಳ (ತಾಯಿ ತಂದೆಗಳ) ಮರಣವಾರ್ತೆ ಕೇಳಿದ್ದಲ್ಲಿ, ಆ ಕ್ಷಣದಲ್ಲಿ ವಪನಾದಿಗಳನ್ನು ಮಾಡಿ ಮಾಡಿ, ಕುಶಕೂರ್ಚವಿಧಿಯಿಂದ, ತಿಲೋದಕ ಕ್ರಿಯಾಕೆಲಸ ಆರಂಭ ಮಾಡಬೇಕು. ಮರಣವಾರ್ತೆಯನ್ನು ಕೇಳಿದ ದಿನ ಪ್ರಥಮ ದಿನ

ಭಾವಿಸಿ ಹತ್ತನೇ ದಿನದ ಪರಿಯಂತರ ದಶಗಾತ್ರಾದಿ ಕೆಲಸಗಳನ್ನು ತಿಲಾಂಜಲಿಯಿಂದಲೇ ಮಾಡಬೇಕು.

ತಂದೆತಾಯಿ ಏಕಕಾಲದಲ್ಲಿ ಮರಣಹೊಂದಿದರೆ ದಹನ, ನಿತ್ಯವಿಧಿ ಸಪಿಂಡೀಕರಣವೆಲ್ಲವನ್ನು ಮೊದಲು ತಂದೆಗೆ ಮಾಡಿ ಬಳಿಕ ತಾಯಿಯ ಕ್ರಿಯೆಗಳನ್ನು ಮಾಡಬೇಕು. ಹತ್ತನೆಯ ದಿನ ಏಕಾದಶಿ ಬಂದರೆ ಒಂಬತ್ತನೆಯ ದಿನವೇ ಕ್ರಿಯೆಗಳನ್ನು ಮುಗಿಸಬೇಕು. ಹತ್ತನೆಯ ದಿನ ದಾಟುವಂತಿಲ್ಲ.

ಕ್ರಿಯಾರಂಭವಾದ ಅನಂತರ ಹತ್ತನೆಯ ದಿನದ ಕೆಲಸದೊಳಗೆ ಬಂದು ಸೇರಿದ ಮಗನಿಂದ ಬ್ರಹ್ಮದಂಡಾದಿಗಳನ್ನು ಮಾಡಿಸಿ ಪ್ರಥಮ ದಿನದಿಂದ ಕಳೆದ ದಿನದ ವರೆಗೆ ಅವನಿಂದ ದಶವಿಧಸ್ನಾನ, ಶಿಲೆಯಲ್ಲಿ ತಿಲಾಂಜಲ್ಯಾದಿಗಳನ್ನು ಮಾಡಿಸಿ, ಅನಂತರ ಅವನನ್ನು ಸೇರಿಸಿಕೊಂಡು ಮುಂದಿನ ಕೆಲಸವನ್ನು ಮಾಡಬೇಕು.

ಒಂಬತ್ತನೆಯ ದಿನದೊಳಗೆ ಏಕಾದಶಿ ಬಂದರೆ ಆ ದಿನದ ಕೆಲಸವನ್ನು ಮರುದಿನ ಮಾಡಬಹುದು.

ಹತ್ತನೆಯ ದಿನ ಏಕಾದಶಿ ಬಂದರೆ ಆ ದಿನದ ಕೆಲವನ್ನು ಒಂಬತ್ತನೆಯ ದಿನದಲ್ಲೇ ಮಾಡಬೇಕು. ಹತ್ತನೆಯ ದಿನ ಕೇವಲ ಸ್ನಾನ ಮಾತ್ರ.

ಹನ್ನೊಂದನೆಯ ದಿನ ಏಕಾದಶಿ ಬಂದರೆ ಆ ದಿನದ ಎಲ್ಲಾ ಕಾರ್ಯಗಳನ್ನು ದ್ವಾದಶಿಯ ದಿನ ಮಾಡಬೇಕು.

ಹನ್ನೆರಡನೆಯ ದಿನ ಏಕಾದಶಿ ಬಂದರೆ ಸಪಿಂಡೀಕರಣವನ್ನು ಹನ್ನೊಂದನೆಯ ದಿನ ಇಲ್ಲವೇ ಹದಿಮೂರನೆಯ (ದ್ವಾದಶೀ) ದಿನ ಮಾಡಬಹುದು.

ಕರ್ತೃವಿನ ಸಹೋದರರಲ್ಲಿ ಯಾರಿಗಾದರೂ ಹತ್ತನೆಯ ದಿನದ ಕೆಲಸದ ಒಳಗೆ ಬರಲಿಕ್ಕಾಗದೇ ಹತ್ತನೆಯ ದಿನ ಕೆಲಸವಾದ ಅನಂತರ ಹನ್ನೊಂದನೆಯ ದಿನ ಬಂದರೆ ಅವರಿಂದ ಮೂರು ದಿನ ಉದಕಕ್ರಿಯೆಯನ್ನಾಚರಿಸಿ ನಾಲ್ಕನೆಯ, ಐದನೆಯ ದಿನ ಮೃತಪಟ್ಟ, ಹದಿನೈದನೆಯ ದಿನ ಬರುವ ಮೃತತಿಥಿಯಲ್ಲಿ ಮೇಲೆ ಹೇಳಿದ ನಕ್ಷತ್ರಗಳಲ್ಲಿ ಎಲ್ಲರೂ ಸೇರಿ ಸಪಿಂಡೀಕರಣ ಮಾಡಬಹುದಾಗಿ ವಿದ್ವಾಂಸರ ಅಭಿಪ್ರಾಯ ಉಂಟು. ಅಥವಾ ಅನಂತರ ಬಂದವನು ಮೂರು ದಿನ ಸೂತಕ ಆಚರಿಸಿ ಕುಶಕೂರ್ಚದಲ್ಲಿ ಕೇವಲ ತಿಲಾಂಜಲ್ಯಾದಿ ಉದಕ ಕ್ರಿಯೆಗಳನ್ನು ಆಚರಿಸಿ ನಾಲ್ಕನೆಯ ದಿನ ಪುಣ್ಯಾಹ, ಪಂಚಗವ್ಯ ತಿಲಹವನ ಮಾಡಿ ಪ್ರೀತಿಶ್ರಾದ್ಧವನ್ನು ಪಾರ್ವಣಕ್ರಮದಂತೆ ಮಾಡಬೇಕು. ಇಲ್ಲಿ ಪ್ರೇತಶಬ್ದೋಚ್ಚಾರಣೆ, ಅರ್ಘ್ಯ, ಪಿಂಡಸಂಯೋಜನಾದಿಗಳಿರುವುದಿಲ್ಲ. ಅನಂತರ ಬ್ರಾಹ್ಮಣಭೋಜನಾದಿಗಳನ್ನು ಸಹ ಮಾಡಿಸಬೇಕು.

ತಾಯಿತಂದೆಗಳ ಉತ್ತರಕ್ರಿಯೆಗಳನ್ನು ಆಚರಿಸದೇ ಇದ್ದವರ ಸೂತಿಕ ನಿವೃತ್ತಿ(ಶುದ್ಧಿ)ಯಾಗುವುದೇ ಇಲ್ಲ. ಆದುದರಿಂದ ಕ್ರಿಯಾಚರಣೆ ಮಾಡದೇ ಇದ್ದ ಮಕ್ಕಳು (ಮಕ್ಕಳೆಲ್ಲರೂ) ಅವಶ್ಯವಾಗಿ ದಶಗಾತ್ರವಿಧಿಯ (ಮೊದಲು ಹೇಳಿದಂತೆ ಕುಶಗ್ರಂಥಿಯಲ್ಲಿ ತಿಲಾಂಜಲಿ ಕೊಟ್ಟು) ಕ್ರಮದಿಂದ ಮಾಡಲೇಬೇಕು.

ಯಾವಾತನು ಒಂದು ಸಲ ಸಪಿಂಡೀಕರಣವನ್ನು ಮಾಡಿ ಪ್ರೇತಕ್ಕೆ ಪಿತೃಶಬ್ದವನ್ನು ಉಚ್ಚರಿಸಿದ ಅನಂತರ ಪುನಃ ಪ್ರೇತಶಬ್ದವನ್ನು ಉಚ್ಚರಿಸುತ್ತಾನೋ ಅವನಿಗೆ ನಿಯಮವನ್ನು ಉಲ್ಲಂಘನೆ ಮಾಡಿದ ದೋಷವೂ, ಪಿತೃಹತ್ಯಾಸಮಾನದೋಷವೂ ಬರುತ್ತದೆ.

ದಶಾಹದ ಒಳಗೆ ಮುಖ್ಯ ಕರ್ತೃವಿನ ಹೆಂಡತಿಯು ಪ್ರಸೂತಳಾದರೆ ಏಕೋದ್ದಿಷ್ಟ ಪರ್ಯಂತ ಮಾಡಿ ನಿಲ್ಲಿಸಿ, ಹೆತ್ತ ಹನ್ನೊಂದನೆಯ ದಿನ ಪುಣ್ಯಾಹ, ಷೋಡಶಮಾಸಿಕ, ಸಪಿಂಡೀಕರಣಾದಿಗಳನ್ನು ಮಾಡಬೇಕು.

ಗೋತ್ರ ಗೊತ್ತಿಲ್ಲದ ಸಂದರ್ಭದಲ್ಲಿ ಕಾಶ್ಯಪಗೋತ್ರವನ್ನು ಹೇಳಿ ಕರ್ಮಾಂಗ ಮಾಡಬೇಕು.

ಮೊದಲ ದಿನದ ಪಾಥೇಯವು ಮನುಷ್ಯಲೋಕದಿಂದ ಪ್ರೇತಲೋಕಕ್ಕೆ ಹೋಗಲು ದಾರಿಬುತ್ತಿ. ಹಾಗೆಯೇ ಹದಿಮೂರನೆಯ ದಿನ ಪ್ರೇತಲೋಕದಿಂದ ಪಿತೃಲೋಕಕ್ಕೆ ಹೋಗಲು ದಾರಿಬುತ್ತಿ.

ವಿಷ್ಣುವಿನ ಬೆವರಿನಿಂದ ಹುಟ್ಟಿದ ಎಳ್ಳು– ಕಪ್ಪು, ಬಿಳಿ, ಕಪಿಲವರ್ಣ –ಹೀಗೆ ಮೂರು ಅಂಶಗಳಾಗಿದ್ದು ಮಾನಸಿಕವಾಗಿ, ದೈಹಿಕವಾಗಿ, ವಾಚಿಕವಾಗಿ, ಮಾಡಿದ ಪಾಪಗಳನ್ನು ನಾಶಮಾಡುತ್ತದೆ.

ವರಾಹದೇವರ ರೋಮದಿಂದ ದರ್ಭೆ ಹುಟ್ಟಿದ್ದು ಸ್ವರ್ಗಲೋಕವನ್ನೆ ಕೊಡುತ್ತದೆ. ಇದರ ಮೂಲದಲ್ಲಿ ಬ್ರಹ್ಮ, ಮಧ್ಯದಲ್ಲಿ ನಾರಾಯಣ, ತುದಿಯಲ್ಲಿ ರುದ್ರನ ಸನ್ನಿಧಾನವಿದೆ.

ಸ್ತ್ರೀಯರಾಗಲಿ ಪುರುಷರಾಗಲಿ ಯಾರೇ ಮೃತರಾದರೂ ಮುತ್ತೈದೆಯಾಗಿ ಮರಣವಾದರೂ ವೃಷೋತ್ಸರ್ಗ ಮಾಡಬೇಕು. ಕೆಲವರಲ್ಲಿ ಮುತ್ತೈದೆಯಾಗಿ ಮರಣವಾದರೆ ವೃಷೋತ್ಸರ್ಗ ಮಾಡಬೇಕಾಗಿಲ್ಲ. ಗೋದಾನವನ್ನು ಮಾಡುತ್ತಾರೆ.

ಅಸ್ಥಿಯನ್ನು ೧೦ ದಿನದೊಳಗೆ ಗಂಗೆಯಲ್ಲಿ ಹಾಕಿದರೆ ಗಂಗೆಯಲ್ಲಿ ಮರಣವಾದಂತೆ. ಯಾರ ಅಸ್ಥಿಯು ಗಂಗೆಯಲ್ಲಿ ಬೀಳುವುದೋ ಅವನಿಗೆ ಸ್ವರ್ಗಲೋಕ ಲಭಿಸುತ್ತದೆ.

ಈ ದಶಾಹವಿಧಿಯಲ್ಲಿ ಯಾವುದೇ ಕಾಲಕ್ಕೂ ನಿಷಿದ್ಧಪದಾರ್ಥಗಳನ್ನು ಪಿಂಡದಲ್ಲಿ ಮಿಶ್ರ ಮಾಡಬಾರದು. ಒಂದುವೇಳೆ ನಿಷಿದ್ಧ ಪದಾರ್ಥಗಳನ್ನು ಉಪಯೋಗಿಸಿದಲ್ಲಿ ಯುಗಪರ್ಯಂತ ಪ್ರೇತಜನ್ಮದಿಂದ ಮುಕ್ತಿ ಹೊಂದದೆ ಪ್ರೇತಜನ್ಮದಲ್ಲೇ ಕೊಳೆಯುತ್ತದೆ. ಅಲ್ಲದೆ ಪ್ರಾಯಶ್ಚಿತ್ತವೇ ಇರುವುದಿಲ್ಲ.

ಪ್ರೇತನು ಪರವಿತ್ತಾಪಹಾರ, ಪರಕಲತ್ರಾಪಹಾರ ಮಾಡಿದ್ದರೆ 'ನವಶ್ರಾದ್ಧ'ದಿಂದ ಪರಿಹೃತವಾಗುತ್ತದೆ.

ಏಕೋದ್ದಿಷ್ಟಶ್ರಾದ್ಧದಿಂದ ಪ್ರೇತನಿಗೆ ಯಮಮಾರ್ಗದಲ್ಲಿ ನಡೆಯುವ ಶಕ್ತಿ ಬರುತ್ತದೆ. ಧರ್ಮಿಷ್ಠರಾಗಿದ್ದರೂ ಸಪಿಂಡೀ ಆಗದೆ ಪ್ರೇತತ್ವ ತೊಲಗದು.

'ಕ್ರವ್ಯಾದ' ಎಂಬ ಅಗ್ನಿಗೆ ಸಮರ್ಪಿಸಬೇಕಾದ ಇಧ್ಮವೇ (ಕಟ್ಟಿಗೆ) ಹೆಣವು. ಹೋಮಕಾಲದಲ್ಲಿ 'ಇಧ್ಮಮಲಂಕೃತ್ಯ' –ಎಂದರೆ ಇದ್ಮವನ್ನು ಅಲಂಕರಿಸಬೇಕು, ಕಾರಣ

ಸಮಿತ್ತು, ಕಟ್ಟಿಗೆಗಳಿಗೆ ಕುಂಕುಮ, ಹೂವು ಇತ್ಯಾದಿ ಹಚ್ಚಿ ಅಲಂಕರಿಸುತ್ತಾರೆ. ಹಾಗೆಯೇ ಶವಕ್ಕೂ ಮಾಡುವುದೆಂದು ತಿಳಿಯತಕ್ಕದ್ದು.

ದಶಗಾತ್ರವಿಧಿಯನ್ನು ಮಾಡುವುದರಿಂದ ಸತ್ಪುತ್ರನು ಪಿತೃಋಣದಿಂದ ಬಿಡುಗಡೆ ಹೊಂದುತ್ತಾನೆ. ಪುತ್ರನು ಶೋಕವನ್ನು ಬಿಟ್ಟು ಧೈರ್ಯದಿಂದ ಸತ್ತ್ವಗುಣಿಯಾಗಿ ತಂದೆಗೆ ಪಿಂಡಾದಿಗಳನ್ನು ಹಾಕಬೇಕು. ಕಣ್ಣೀರು ಸುರಿಸಬಾರದು. ಬಾಂಧವರು ಸುರಿಸಿದ ಕಣ್ಣೀರನ್ನು ಮತ್ತು ಶ್ಲೇಷ್ಮವನ್ನು ಪ್ರೇತವು ಭುಂಜಿಸಬೇಕಾಗುತ್ತದೆ. ಆದ್ದರಿಂದ ಅಳಬಾರದು. ಹುಟ್ಟಿದವನಿಗೆ ಮರಣವು ನಿಶ್ಚಿತವೆಂದು ತಿಳಿದು ಬುದ್ಧಿವಂತನು ದುಃಖಿಸಬಾರದು.

ವೇದವಿಧಿಯಿಂದ ಅಗ್ನ್ಯಾಧಾನಾದಿಗಳನ್ನು ಮಾಡಿ ಅಗ್ನಿಹೋತ್ರ ಯಜ್ಞಗಳನ್ನು ಮಾಡುವ ಅಗ್ನಿ 'ಶ್ರೌತಾಗ್ನಿ'. ಸ್ಮೃತಿಪ್ರಕಾರವಾಗಿ 'ಗೃಹ್ಯಾಗ್ನಿ'ಯನ್ನು ಸಂಪಾದಿಸಿ ಸಂಸ್ಕಾರ ಔಪಾಸನಾದಿಗಳನ್ನು ಮಾಡುವ ಅಗ್ನಿಗೆ 'ಸ್ಮಾರ್ತಾಗ್ನಿ' ಎಂದು ಹೆಸರು. ವ್ಯಾಹೃತಿಯಿಂದ ತಂದ ಅಗ್ನಿಗೆ 'ಪೌರುಷಾಗ್ನಿ', ಮನೆಯಲ್ಲಿದ್ದ ಅಗ್ನಿಗೆ 'ಶಾಲಾಗ್ನಿ' ಎಂದು ಹೆಸರು. ಚೌಲೋಪನಯನ, ಸಮಾವರ್ತನ, ವಿವಾಹಗಳಿಗೆ 'ಲೌಕಿಕಾಗ್ನಿ' ಎಂದು ಹೆಸರು.

ಮೃತಾಶೌಚದ ನಡುವೆ ತಂದೆತಾಯಿಗಳ ಆಶೌಚ ಬಿಟ್ಟು ಉಳಿದ ಹೊಸ ಆಶೌಚಗಳು ಎಷ್ಟೇ ಬಂದರೂ ಎಲ್ಲವೂ ಮೊದಲ ಆಶೌಚದಲ್ಲೇ ಕಳೆದುಹೋಗುತ್ತವೆ.

* * *






ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

ಕೃತಿರಮಣ ಪ್ರದ್ಯುಮ್ನ ವಸುದೇ । ವತೆಗಳಾಹಂಕಾರತ್ರಯದೊಳು ।
ಚತುರವಿಂಶತಿ ರೂಪದಿಂದಲಿ ಭೋಜ್ಯನೆನಿಸುವನು ॥
ಹುತವಹಾಕ್ಷಾಂತರ್ಗತ ಜಯಾ । ಪತಿಯು ತಾನೇ ಮೂರಧಿಕ ತ್ರಿಂ– ।
ಶತಿ ಸುರೂಪದಿ ಭೋಕ್ತೃವೆನಿಸುವ ಭೋಕ್ತೃಗಳೊಳಿದ್ದು ॥ ೧ ॥

ಆರಧಿಕಮೂವತ್ತುರೂಪದಿ । ವಾರಿಜಾಪ್ತನೊಳಿರುತಿಹನು ಮಾ– ।
ಯಾರಮಣ ಶ್ರೀವಾಸುದೇವನು ಕಾಲನಾಮದಲಿ ॥
ಮೂರುವಿಧ ಪಿತೃಗಳೊಳು ವಸು ತ್ರಿಪು । ರಾರಿಯಾದಿತ್ಯಗನಿರುದ್ಧನು ।
ತೋರಿಕೊಳ್ಳದೆ ಕರ್ತೃ ಕರ್ಮ ಕ್ರಿಯನೆನಿಸಿಕೊಂಬ ॥ ೨ ॥

ಸ್ವವಶನಾರಾಯಣನು ತಾ ಷ । ಣ್ಣವತಿ ನಾಮದಿ ಕರೆಸುತಲಿ ವಸು ।
ಶಿವ ದಿವಾಕರ ಕರ್ತೃಕರ್ಮಕ್ರಿಯೆಗಳೊಳಗಿದ್ದು ॥
ನೆವನವಿಲ್ಲದೆ ನಿತ್ಯದಲಿ ತ । ನ್ನವರು ಮಾಡುವ ಸೇವೆ ಕೈಕೊಂ– ।
ಡವರ ಪಿತೃಗಳಿಗೀವನಂತಾನಂತ ಸುಖಗಳನು ॥ ೩ ॥

ತಂತುಪಟದಂದದಲಿ ಲಕುಮೀ । ಕಾಂತ ಪಂಚಾತ್ಮಕನೆನಿಸಿ ವಸು ।
ಕಂತುಹರ ರವಿ ಕರ್ತೃಗಳೊಳಿದ್ದನವರತ ತನ್ನ ॥
ಚಿಂತಿಸುವ ಸಂತರನು ಗುರು ಮ । ಧ್ವಾಂತರಾತ್ಮಕ ಸಂತಯಿಸುವನು ।
ಸಂತತಖಿಲಾರ್ಥಗಳ ಪಾಲಿಸಿ ಇಹಪರಂಗಳಲಿ ॥ ೪ ॥

ತಂದೆತಾಯ್ಗಳ ಪ್ರೀತಿಗೋಸುಗ । ನಿಂದ್ಯಕರ್ಮವ ತೊರೆದು ವಿಹಿತಗ ।
ಳೊಂದುಮೀರದೆ ಸಾಂಗ ಕರ್ಮಗಳಾಚರಿಸುವವರು ॥
ವಂದನೀಯರಾಗಿಳೆಯೊಳಗೆ ದೈ । ನಂದಿನದಿ ದೈಶಿಕ ದೈಹಿಕ ಸುಖ- ।
ದಿಂದ ಬಾಳ್ವರು ಬಹುದಿವಸದಲಿ ಕೀರ್ತಿಯುತರಾಗಿ ॥ ೫ ॥

ಅಂಶಿಯಂಶಾಂತರ್ಗತತ್ರಯ । ಹಂಸವಾಹನ ಮುಖ್ಯ ದಿವಿಜರ ।
ಸಂಶಯದಿ ತಿಳಿದಂತರಾತ್ಮಕ ಶ್ರೀಜನಾರ್ದನನ ॥
ಸಂಸ್ಮರಣಪೂರ್ವಕದಿ ಷಡಧಿಕ । ತ್ರಿಂಶತಿತ್ರಯರೂಪವರಿತು ವಿ- ।
ಪಾಂಸಗನ ಪೂಜಿಸುವರವರೇ ಕೃತಾರ್ಥರೆನಿಸುವರು ॥ ೬ ॥

ಮೂರುವರೆ ಸಾವಿರದ ಮೇಲರೆ । ನೂರೈದು ರೂಪದಿ ಜನಾರ್ದನ ।
ಸೂರಿಗಳು ಮಾಡುವ ಸಮಾರಾಧನೆಗೆ ವಿಘ್ನಗಳು ॥
ಬಾರದಂತೆ ಬಹುಪ್ರಕಾರ ಖ । ರಾರಿ ಕಾಪಾಡುವನು ಸರ್ವಶ- ।
ರೀರಗಳೊಳಿದ್ದವರವರ ಪೆಸರಿಂದ ಕರೆಸುತಲಿ ॥ ೭ ॥

ಜಯ ಜಯ ಜಯಾಕಾಂತ ದತ್ತಾ । ತ್ರೇಯ ಕಪಿಲ ಮಹಿದಾಸ ಭಕ್ತ ।
ಪ್ರಿಯ ಪುರಾತನ ಪುರುಷ ಪೂರ್ಣಾನಂದಜ್ಞಾನಘನ ॥
ಹಯವದನ ಹರಿ ಹಂಸ ಲೋಕ । ತ್ರಯ ವಿಲಕ್ಷಣ ನಿಖಿಳ ಜಗದಾ- ।
ಶ್ರಯ ನಿರಾಮಯ ದಯದಿ ಸಂತೈಸೆಂದು ಪ್ರಾರ್ಥಿಸುವುದು ॥ ೮ ॥

ಷಣ್ಣವತಿಯೆಂಬಕ್ಷರೇಡ್ಯನು । ಷಣ್ಣವತಿ ನಾಮದಲಿ ಕರೆಸುತ ।
ತನ್ನವರ ಸದ್ಭಕ್ತಿಪೂರ್ವಕದಿಂದ ಮಾಡುತಿಹ ॥
ಪುಣ್ಯಕರ್ಮವ ಸ್ವೀಕರಿಸಿ ಕಾ । ರುಣ್ಯ ಸಾಗರ ಸಲಹುವನು ಬ್ರ- ।
ಹ್ಮಣ್ಯದೇವ ಭವಾಬ್ಧಿಪೋತ ಬಹುಪ್ರಕಾರದಲಿ ॥ ೯ ॥

ದೇಹಗಳ ಕೊಡುವವನು ಅವರವ । ರ ಹರವನು ಕೊಡದಿಹನೆ ಸುಮನಸ ।
ಮಹಿತ ಮಂಗಳಚರಿತ ಸದ್ಗುಣಭರಿತನನವರತ ॥
ಅಹಿಕ ಪಾರತ್ರಿಕ ಸುಖಪ್ರದ । ವಹಿಸಿ ಬೆನ್ನಿಲಿ ಬೆಟ್ಟವಮೃತವ ।
ದ್ರುಹಿಣ ಮೊದಲಾದವರಿಗುಣಿಸಿದ ಮುರಿದನಹಿತರನು ॥ ೧೦ ॥

ದ್ರುಹಿಣ ಮೊದಲಾದಮರರಿಗೆ ಸ । ನ್ಮಹಿತ ಮಾಯಾರಮಣ ತಾನೇ ।
ಸ್ವಹನೆನಿಸಿ ಸಂತೃಪ್ತಿಪಡಿಸುವ ಸರ್ವಕಾಲದಲಿ ।
ಪ್ರಹಿತ ಸಂಕರುಷಣನು ಪಿತೃಗಳಿ । ಗಹರನೆನಿಪ ಸ್ವಧಾಖ್ಯರೂಪದಿ ।
ಮಹಿಜ ಫಲ ತೃಣ ಪೆಸರಿನಲಿ ಪ್ರದ್ಯುಮ್ನನನಿರುದ್ಧ ॥ ೧೧ ॥

ಅನ್ನನೆನಿಸುವ ನೃಪಶುಗಳಿಗೆ ಹಿ । ರಣ್ಯ ಗರ್ಭಾಂಡದೊಳು ಸಂತತ ।
ತನ್ನನೀಪರಿಯಿಂದುಪಾಸನೆಗೈವ ಭಕುತರನು ॥
ಬನ್ನಬಡಿಸದೆ ಭವ ಸಮುದ್ರ ಮ । ಹೋನ್ನತಿಯ ದಾಂಟಿಸಿ ಚತುರ್ವಿಧ– ।
ವನ್ನಮಯನಾತ್ಮ ಪ್ರದರ್ಶನ ಸುಖವನೀವ ಸದಾ ॥ ೧೨ ॥

ಮನವಚನ ಕಾಯಗಳ ದೆಶೆಯಿಂ । ದನುದಿನದಿ ಬಿಡದಾಚರಿಸುತಿ– ।
ಪ್ಪನುಚಿತೋಚಿತ ಕರ್ಮಗಳ ಸದ್ಭಕ್ತಿ ಪೂರ್ವಕದಿ ।
ಅನಿಲದೇವನೊಳಿಪ್ಪ ನಾರಾ । ಯಣಗಿದನ್ನವುಯೆಂದು ಕೃಷ್ಣಾ– ।
ರ್ಪಣವೆನುತ ಕೊಡೆ ಸ್ವೀಕರಿಸಿ ಸಂತೃಪ ಕರುಣಾಳು ॥ ೧೩ ॥

ಏಳು ವಿಧದನ್ನ ಪ್ರಕರಣವ । ಕೇಳಿ ಕೋವಿದರಾಸ್ಯದಿಂದಲಿ ।
ಆಲಸವ ಮಾಡದಲೆ ಅನಿರುದ್ಧಾದಿ ರೂಪಗಳ ॥
ಕಾಲಕಾಲದಿ ನೆನೆದು ಪೂಜಿಸು । ಸ್ಥೂಲಮತಿಗಳಿಗಿದನು ಪೇಳದೆ ।
ಶ್ರೀಲಕುಮಿ ವಲ್ಲಭನೆ ಅನ್ನಾದನ್ನವನ್ನದನು ॥ ೧೪ ॥

ಎಂದರಿದು ಸಪ್ತಾನ್ನಗಳ ದೈ । ನಂದಿನದಿ ಮರೆಯದೆ ಸದಾ ಗೋ– ।
ವಿಂದಗರ್ಪಿಸು ನಿರ್ಭಯದಿ ಮಹಾಯಜ್ಞವಿದುಯೆಂದು ॥
ಇಂದಿರೇಶನು ಸ್ವೀಕರಿಸಿ ದಯ । ದಿಂದ ಬೇಡಿಸಿಕೊಳದೆ ತವಕದಿ ।
ತಂದುಕೊಡುವನು ಪರಮಮಂಗಳ ತನ್ನ ದಾಸರಿಗೆ ॥ ೧೫ ॥

ಸೂಜಿ ಕರದಲಿ ಪಿಡಿದು ಸಮರವ । ನಾ ಜಯಿಸುವೆನು ಎಂಬ ನರನಂ ।
ತೀ ಜಗತ್ತಿನೊಳುಳ್ಳ ಅಜ್ಞಾನಿಗಳು ನಿತ್ಯದಲಿ ॥
ಶ್ರೀಜಗತ್ಪತಿ ಚರಣಯುಗಳಸ । ರೋಜ ಭಕ್ತಿ ಜ್ಞಾನಪೂರ್ವಕ ।
ಪೂಜಿಸದೆ ಧರ್ಮಾರ್ಥ ಕಾಮವ ಬಯಸಿ ಬಳಲುವರು ॥ ೧೬ ॥

ಶಕಟ ಭಂಜನ ಸಕಲ ಜೀವರ । ನಿಕಟಗನು ತಾನಾಗಿ ಲೋಕಕೆ ।
ಪ್ರಕಟನಾಗದೆ ಸಕಲ ಕರ್ಮವ ಮಾಡಿ ಮಾಡಿಸುತ ॥
ಅಕುಟಿಲಾತ್ಮಕ ಭಕುತ ಜನರಿಗೆ । ಸುಖದನೆನಿಸುವ ಸರ್ವಕಾಲದ– ।
ಲಕಟಕಟ ಈತನ ಮಹಾ ಮಹಿಮೆಗಳಿಗೇನೆಂಬೆ ॥ ೧೭ ॥

ಶ್ರೀಲಕುಮಿವಲ್ಲಭನು ವೈಕುಂ । ಠಾಲಯದಿ ಪ್ರಣವ ಪ್ರಕೃತಿ ಕೀ– ।
ಲಾಲಜಾಸನ ಮುಖ್ಯ ಚೇತನರೊಳಗೆ ನೆಲೆಸಿದ್ದು ॥
ಮೂಲಕಾರಣನಂಶ ನಾಮದಿ । ಲೀಲೆಗೈಸುತ ತೋರಿಕೊಳ್ಳದೆ ।
ಪಾಲಿನೊಳು ಘೃತವಿದ್ದ ತೆರದಂತಿಪ್ಪ ತ್ರಿಸ್ಥಳದಿ ॥ ೧೮ ॥

ಮೂರು ಯುಗದಲಿ ಮೂಲರೂಪನು । ಸೂರಿಗಳ ಸಂತೈಸಿ ದಿತಿಯ ಕು- ।
ಮಾರಕರ ಸಂಹರಿಸಿ ಧರ್ಮವನುಳುಹಬೇಕೆಂದು ।
ಕಾರುಣಿಕ ಭೂಮಿಯೊಳು ನಿಜಪರಿ । ವಾರ ಸಹಿತವತರಿಸಿ ಬಹುವಿಧ ।
ತೋರಿದನು ನರವತ್ಪ್ರವೃತ್ತಿಯ ಸಕಲ ಚೇತನಕೆ ॥ ೧೯ ॥

ಕಾರಣಾಹ್ವಯ ಪ್ರಕೃತಿಯೊಳಗಿ । ದ್ದಾರಧಿಕ ಹದಿನೆಂಟು ತತ್ತ್ವವ ।
ತಾ ರಚಿಸಿ ತದ್ರೂಪ ತನ್ನಾಮಂಗಳನೆ ಧರಿಸಿ ॥
ನೀರಜಭವಾಂಡವನು ನಿರ್ಮಿಸಿ । ಕಾರುಣಿಕ ಕಾರ್ಯಾಖ್ಯರೂಪದಿ ।
ತೋರುವನು ಸಹಜಾಹಿತಾಚಲಗಳಲಿ ಪ್ರತಿದಿನದಿ ॥ ೨೦ ॥

ಜೀವರಂತರ್ಯಾಮಿಯಂಶಿ ಕ । ಳೇವರಗಳೊಳಗಿಂದ್ರಿಯಗಳಲಿ ।
ತಾ ವಿಹಾರವ ಗೈಯುತನುದಿನ ಅಂಶನಾಮದಲಿ ॥
ಈ ವಿಷಯಗಳನುಂಡು ಸುಖಮಯ । ಈವ ಸುಖ ಸಂಸಾರದುಃಖವ ।
ದೇವ ಮಾನವ ದಾನವರಿಗವಿರತ ಸುಧಾಮಸಖ ॥ ೨೧ ॥

ದೇಶ ದೇಶವ ಸುತ್ತಿ ದೇಹಾ । ಯಾಸಗೊಳಿಸದೆ ಕಾಮ್ಯಕರ್ಮದು- ।
ರಾಶೆಗೊಳಗಾಗದಲೆ ಬ್ರಹ್ಮಾದ್ಯಖಿಲಚೇತನರು ॥
ಭೂಸಲಿಲಪಾವಕಸಮೀರಾ । ಕಾಶ ಮೊದಲಾದಖಿಲತತ್ತ್ವ ಪ- ।
ರೇಶಗಿವಧಿಷ್ಠಾನವೆಂದರಿತರ್ಚಿಸನವರತ ॥ ೨೨ ॥

ಎರಡು ವಿಧದಲಿ ಲೋಕದೊಳು ಜೀ । ವರುಗಳಿಪ್ಪರು ಸಂತತಕ್ಷರಾ- ।
ಕ್ಷರ ವಿಲಿಂಗ ಸಲಿಂಗ ಸೃಜ್ಯಾಸೃಜ್ಯಭೇದದಲಿ ॥
ಕರೆಸುವುದು ಜಡಪ್ರಕೃತಿ ಪ್ರಾಣವಾ । ಕ್ಷರ ಮಹತ್ತಣುಕಾಲನಾಮದಿ ।
ಹರಿಸಹಿತ ಭೇದಗಳ ಪಂಚಕ ಸ್ಮರಿಸು ಸರ್ವತ್ರ ॥ ೨೩ ॥

ಜೀವ ಜೀವರ ಭೇದ ಜಡ ಜಡ । ಜೀವ ಜಡಗಳ ಭೇದ ಪರಮನು ।
ಜೀವ ಜಡ ಸುವಿಲಕ್ಷಣನು ಎಂದರಿದು ನಿತ್ಯದಲಿ ॥
ಈ ವಿರಿಂಚಾಂಡದೊಳು ಎಲ್ಲಾ । ಠಾವಿನಲಿ ತಿಳಿದೈದುಭೇದ ಕ-
ಳೇವರದೊಳರಿತಚ್ಯುತನ ಪದವೈದು ಶೀಘ್ರದಲಿ ॥ ೨೪ ॥

ಆದಿಯಲ್ಲಿ ಕ್ಷರಾಕ್ಷರಾಖ್ಯ । ದ್ವೇಧವಕ್ಷರದೊಳು ರಮಾಮಧು- ।
ಸೂದನರು ಕ್ಷರಗಳೊಳು ಪ್ರಕೃತಿ ಪ್ರಾಣವ ಕಾಲಗಳು ॥
ವೇದ ಮುಖ್ಯ ತೃಣಾಂತ ಜೀವರ । ಭೇದಗಳನರಿತೀ ರಹಸ್ಯವ ।
ಬೋಧಿಸದೆ ಮಂದರಿಗೆ ಸರ್ವತ್ರದಲಿ ಚಿಂತಿಪುದು ॥ ೨೫ ॥

ದೀಪದಿಂ ದೀಪಗಳು ಪೊರಮ । ಟ್ಟಾಪಣಾಲಯಗತ ತಿಮಿರಗಳ ।
ತಾ ಪರಿಹರಗೈಸಿ ತದ್ಗತ ಪದಾರ್ಥ ತೋರ್ಪಂತೆ ॥
ಸೌಪರಣಿ ವರವಹನ ತಾ ಬಹು । ರೂಪನಾಮದಲೆಲ್ಲ ಕಡೆಯಲಿ ।
ವ್ಯಾಪಿಸಿದ್ದು ಯಥೇಷ್ಟ ಮಹಿಮೆಯ ತೋರ್ಪ ತಿಳಿಸದಲೆ ॥ ೨೬ ॥

ನಳಿನಮಿತ್ರಗೆ ಇಂದ್ರಧನು ಪ್ರತಿ । ಫಲಿಸುವಂತೆ ಜಗತ್ರಯವು ಕಂ– ।
ಗೊಳಿಪುದನುಪಾಧಿಯಲಿ ಪ್ರತಿಬಿಂಬಾಹ್ವಯದಿ ಹರಿಗೆ ।
ತಿಳಿಯೆ ತ್ರಿಕಕುದ್ಧಾಮನತಿ ಮಂ । ಗಳ ಸುರೂಪವ ಸರ್ವ ಠಾವಿನಲಿ ।
ಪೊಳೆವ ಹೃದಯಕೆ ಪ್ರತಿದಿವಸ ಪ್ರಹ್ಲಾದ ಪೋಷಕನು ॥ ೨೭ ॥

ರಸವಿಶೇಷದೊಳತಿ ವಿಮಲ ಸಿತ । ವಸನ ತೋಯಿಸಿ ಅಗ್ನಿಯೊಳಗಿಡೆ ।
ಪಸರಿಸುವುದು ಪ್ರಕಾಶ ನಸುಗುಂದದಲೆ ಸರ್ವತ್ರ ॥
ತ್ರಿಶಿರ ದೂಷಣ ವೈರಿ ಭಕ್ತಿ ಸು । ರಸದಿ ತೋಯ್ದ ಮಹಾತ್ಮರನ ಬಾ– ।
ಧಿಸವು ಭವದೊಳಗಿದ್ದರೆಯು ಸರಿ ದುರಿತ ರಾಶಿಗಳು ॥ ೨೮ ॥

ವಾರಿನಿಧಿಯೊಳಗಖಿಲ ನದಿಗಳು । ಬೇರೆ ಬೇರೆ ನಿರಂತರದಿ ಏ– ।
ಹಾರಗೈಯುತ ಪರಮ ಮೋದದಲಿಪ್ಪ ತೆರದಂತೆ ॥
ಮೂರು ಗುಣಗಳ ಮಾನಿನಿಯೆನಿಸುವ । ಶ್ರೀರಮಾರೂಪಗಳು ಹರಿಯೊಳು ।
ತೋರುತಿಪ್ಪುವು ಸರ್ವಕಾಲದಿ ಸಮರಹಿತವೆನಿಸಿ ॥ ೨೯ ॥

ಕೋಕನದ ಸಖನುದಯ ಘೂಕಾ । ಲೋಕನಕೆ ಸೊಗಸದಿರೆ ಭಾಸ್ಕರ ।
ತಾ ಕಳಂಕನೆ? ಈ ಕೃತೀಪತಿ ಜಗನ್ನಾಥನಿರೆ ॥
ಸ್ವೀಕರಿಸಿ ಸುಖಪಡಲರಿಯದವಿ । ವೇಕಿಗಳು ನಿಂದಿಸಿದರೇನಹು– ।
ದೀ ಕವಿತ್ವವ ಕೇಳಿ ಮೋದಿಸದಿಹರೆ ಕೋವಿದರು ॥ ೩೦ ॥

ಚೇತನಾಚೇತನಗಳಲಿ ಗುರು । ಮಾತರಿಶ್ವಾಂತರ್ಗತ ಜಗ– ।
ನ್ನಾಥ ವಿಠಲ ನಿರಂತರದಿ ವ್ಯಾಪಿಸಿ ತಿಳಿಸಿಕೊಳದೆ ॥
ಕಾತರವ ಪುಟ್ಟಿಸಿ ವಿಷಯದಲಿ । ಯಾತುಧಾನರ ಮೋಹಿಸುವ ನಿ–
ರ್ಭೀತ ನಿತ್ಯಾನಂದಮಯ ನಿರ್ದೋಷ ನಿರವದ್ಯ ॥ ೩೧ ॥

** ** ***





## ಭೀಷ್ಮೋಕ್ತ ಪಾಪವಿರಾಪಹರಣಸ್ತೋತ್ರಮ್

**ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ ।**
**ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಸ್ಸದಾ ॥**

ಭಕ್ತಿಯಿಂದ ಪುಂಡರೀಕಾಕ್ಷನನ್ನು ಸ್ತೋತ್ರಗಳಿಂದ ಅರ್ಚಿಸುವುದೇ ಎಲ್ಲ ಧರ್ಮಗಳಿಗಿಂತ ಹೆಚ್ಚಿನ ಧರ್ಮವೆಂದು ಭೀಷ್ಮಾಚಾರ್ಯರು ತಿಳಿಸಿದ್ದಾರೆ.

**ಜ್ಞಾನತೋಽಜ್ಞಾನತೋ ವಾ ವಾಸುದೇವಸ್ಯ ಕೀರ್ತನಾತ್ ।**
**ತತ್ಸರ್ವಂ ವಿಲಯಂ ಯಾತಿ ತೋಯಸ್ಥಂ ಲವಣಂ ಯಥಾ ॥**

ತಿಳಿದೋ ತಿಳಿಯದೆಯೋ ಭಗವಂತನ ಕೀರ್ತನೆ ಮಾಡಿದರೆ ಪಾಪವೆಲ್ಲವೂ ನೀರಿನಲ್ಲಿ ಉಪ್ಪು ಕರಗುವಂತೆ ಕರಗಿಹೋಗುತ್ತದೆ.

**ಶಮಾಯಾಲಂ ಜಲಂ ವಹ್ನೇಸ್ತಮಸೋ ಭಾಸ್ಕರೋದಯಃ ।**
**ಶಾಂತಿಃ ಕಲೌ ಹ್ಯಘೌಘಸ್ಯ ನಾಮಸಂಕೀರ್ತನಂ ಹರೇಃ ॥**

ಬೆಂಕಿಯನ್ನು ಆರಿಸುವುದಕ್ಕೆ ನೀರು ಸಾಕು, ಕತ್ತಲೆಯನ್ನು ಹೋಗಲಾಡಿಸುವುದಕ್ಕೆ ಸೂರ್ಯೋದಯ ಸಾಕು, ಕಲಿಯುಗದಲ್ಲಿ ಪಾಪವನ್ನು ನಾಶಪಡಿಸಲು ಹರಿನಾಮ ಸಂಕೀರ್ತನೆಯೊಂದೇ ಸಾಕು.

**ಹರೇರ್ನಾಮೈವ ನಾಮೈವ ನಾಮೈವ ಮಮ ಜೀವನಮ್ ।**
**ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥**

ಶ್ರೀಹರಿಯ ನಾಮವೇ, ನಾಮವೇ, ನಾಮವೇ ನನ್ನ ಜೀವನವಾಗಿದೆ. ಕಲಿಯುಗದಲ್ಲಿ ಬೇರೊಂದು ಗತಿಯಿಲ್ಲವೇ ಇಲ್ಲ, ಇಲ್ಲವೇ ಇಲ್ಲ, ಇಲ್ಲವೇ ಇಲ್ಲ –ಎಂದು ನಾರದೀಯ ಪುರಾಣ ಹೇಳುತ್ತದೆ.

**ಗಂಗಾಸ್ನಾನಸಹಸ್ರೇಷು ಪುಷ್ಕರಸ್ನಾನಕೋಟಿಷು ।**
**ಯತ್ಪಾಪಂ ವಿಲಯಂ ಯಾತಿ ಸ್ಮೃತೇ ನಶ್ಯತಿ ತದ್ಧರೌ ॥**

ಸಾವಿರಾರು ಗಂಗಾಸ್ನಾನ, ಕೋಟಿಗಟ್ಟಲೆ ಪುಷ್ಕರಸ್ನಾನದಿಂದಲೂ ಎಷ್ಟು ಪಾಪವು ನಾಶವಾಗುತ್ತದೆಯೋ ಅಷ್ಟೂ ಪಾಪಗಳು ಶ್ರೀಹರಿಯ ಸ್ಮರಣೆಯಿಂದ ಹೊರಟುಹೋಗುತದೆ ಎಂಬುದಾಗಿ ಗರುಡಪುರಾಣವು ತಿಳಿಸುತ್ತದೆ.

* * *

# ಶ್ರೀವಿಷ್ಣುಪಾದ ಸನ್ನಿಧಿ

# ಗಯಾಕ್ಷೇತ್ರ



ಎ ॥ ಸೂರ್ಯಪ್ರಕಾಶ ಎನ್ ರಾವ್
ಗ್ರಂಥ ಸಂಪಾದಕರು

# ಪಿತೃಯಜ್ಞವಿಧಿಃ

ಭಾಗ 2



ಪ್ರಕಾಶನ
ತತ್ವಸಂಶೋಧನಸಂಸತ್ (ರಿ)
ಕರ್ನಾಟಕಸಂಸ್ಕೃತವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ
ಶ್ರೀಪಲಿಮಾರು ಮಠ - ಉಡುಪಿ

# ಪಿತೃಯಜ್ಞವಿಧಿಃ

## ಭಾಗ ಎರಡು

ಸಂಗ್ರಾಹಕ

ಸೂರ್ಯಪ್ರಕಾಶ ಎನ್. ರಾವ್

ಪ್ರಕಾಶನ

ತತ್ತ್ವಸಂಶೋಧನ ಸಂಸತ್

[ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ.]

ಶ್ರೀಪಲಿಮಾರು ಮಠ , ಉಡುಪಿ.

ಸಹಕಾರ

ಮಧ್ವ ಪ್ರಕಾಶನ, ಮುಲ್ಕಿ



# ಮಂಗಲಾಚರಣಮ್

ಸಂಚಿಂತಯೇದ್ಭಗವತಶ್ಚರಣಾರವಿಂದಂ
ವಜ್ರಾಂಕುಶಧ್ವಜಸರೋರುಹಲಾಂಛನಾಢ್ಯಮ್ ।
ಉತ್ತುಂಗರಕ್ತವಿಲಸನ್ನಖಚಕ್ರವಾಳ
ಜ್ಯೋತ್ಸ್ನಾಭಿರಾಹತಮಹದ್ಧೃದಯಾಂಧಕಾರಮ್ ॥

ಯಚ್ಛೌಚನಿಃಸೃತಸರಿತ್ಪ್ರವರೋದಕೇನ
ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್ ।
ಧ್ಯಾತುರ್ಮನಃಶಮಲಶೈಲನಿಸೃಷ್ಟವಜ್ರಂ
ಧ್ಯಾಯೇಚ್ಚಿರಂ ಭಗವತಶ್ಚರಣಾರವಿಂದಮ್ ॥

॥ ಭದ್ರಂ ನೋ ಅಪಿ ವಾತಯ ಮನಃ ॥

# ಪಂಚಮ ಗುಚ್ಛ

# ದ್ವಾದಶದಿನಕೃತ್ಯಮ್

## ದ್ವಾದಶದಿನ ಸಾಹಿತ್ಯಗಳ ವಿವರ

ಪಂಚಗವ್ಯ, ಪುಣ್ಯಾಹ (2 ಪ್ರತಿ) ಸಾಹಿತ್ಯಗಳು, ಎಳ್ಳೆಣ್ಣೆ $^1/_2$ ಲೀ., ಬತ್ತಿ 4 ಕಟ್ಟು, ಬೆಂಕಿಪೆಟ್ಟಿಗೆ 1, ಸಮಿಧೆ 1, ಜೇಡಿಪುಡಿ 100 ಗ್ರಾಂ, ದರ್ಭೆ 1 ಕಟ್ಟು, ಅಕ್ಕಿ 2 ಕೆಜಿ., ತೆಂಗಿನಕಾಯಿ 4, ವೀಳ್ಯದೆಲೆ 30, ಇಡಿಅಡಕೆ 6, ಬಾಳೇಹಣ್ಣು 8, ಹಲಸಿನ ಮಾವಿನ ತುದಿಗಳು 4+4, ಹೂ 10, ತುಲಸಿ 10, ನಾಣ್ಯ 30, ಹಾಲು 2 ಲೋಟ, ಗೋಮೂತ್ರ ಹಾಗೂ ಮೊಸರು 1 ಲೋಟ, ತುಪ್ಪ 50 ಗ್ರಾಂ, ಗಂಧ ಹಾಗೂ ಗೋಮಯ ಒಂದು ನೆಲ್ಲಿಕಾಯಿಯಷ್ಟು, ಜಲಪಾತ್ರೆ 2, ಕಾಲುದೀಪ 1.

### ತಿಲಹೋಮಾದಿಗಳ ಸಾಹಿತ್ಯ

ದರ್ಭೆ 1 ಕಟ್ಟು, ಕರ್ಪೂರ 10, ಅಶ್ವತ್ಥ (ಪಾಲಾಶ)ಸಮಿಧೆ 50, ಜೇಡಿಪುಡಿ $^1/_4$ ಕೆಜಿ., ಬೈರಾಸು 4, ತಾಮ್ರಕಲಶ 1, ದರ್ಭೆ 1 ಕಟ್ಟು, ಅಕ್ಕಿ 2 ಕೆಜಿ., ತೆಂಗಿನಕಾಯಿ 6, ತುಪ್ಪ $^1/_2$ ಲೀಟರ್, ಎಳ್ಳು 3 ಕೆಜಿ., ವೀಳ್ಯದೆಲೆ 30, ಅಡಕೆ 7, ಬಾಳೇಹಣ್ಣು 12, ಹಲಸಿನ ಮಾವಿನ ತುದಿಗಳು 1+1, ನಾಣ್ಯ20, ಬಾಳೆಎಲೆ 6, ಕಟ್ಟಿಗೆ 5 ಕೆಜಿ., ತೆಂಗಿನಸಿಪ್ಪೆ 5 ತೆಂಗಿನದ್ದು, ಹಂಚು 3, ಇಟ್ಟಿಗೆ 16, ಮರಳು 4 ಕೆಜಿ., ದಾನತಟ್ಟೆಗಳು.

ಪವಮಾನಹೋಮಕ್ಕೆ ಮೇಲಿನ ಪ್ರತ್ಯೇಕ ಸಾಹಿತ್ಯದೊಂದಿಗೆ–

(ಎಳ್ಳು ಬಿಟ್ಟು,) ತುಪ್ಪ 2 ಲೀಟರ್ ಹಾಗೂ ಕೂಷ್ಮಾಂಡಹೋಮಕ್ಕೆ ಒಂದೂವರೆ ಲೀಟರ್ ತುಪ್ಪ, ದಾನತಟ್ಟೆಗಳು ಹಾಗೂ ದ್ರವ್ಯಗಳು.

## ಸಪಿಂಡೀಕರಣದ ಸಾಹಿತ್ಯಗಳು :

ಜೇಡಿ ಅಥವಾ ರಂಗೋಲಿಪುಡಿ 100 ಗ್ರಾಂ, ಬತ್ತಿ 1 ಕಟ್ಟು, ಬೆಂಕಿಪೆಟ್ಟಿಗೆ 1, ದರ್ಭೆ 3 ಕಟ್ಟು, ಯಜ್ಞೋಪವೀತ 20, ಗೋಪಿ 10, ಅಂಜನಕಲ್ಲು 1, ಬಿಳಿಸಾಸಿವೆ 50 ಗ್ರಾಂ, ಎಳ್ಳೆಣ್ಣೆ $^1/_2$ ಲೀ, ಜವೆಗೋಧಿ (ಬತ್ತ) 100 ಗ್ರಾಂ, ಅಕ್ಕಿ $^1/_2$ ಕೆಜಿ, ಎಳ್ಳು $^1/_4$ ಕೆಜಿ, ಗೋಮಯ ಮತ್ತು ಗಂಧ ಒಂದು ನೆಲ್ಲಿಕಾಯಿಯಷ್ಟು, ಚೂರಿ 1, ಅತ್ತಿತುದಿ 3, ತುಲಸಿ 50 ತುದಿ, ಗರಿಕೆ 100 ತುದಿ, ಭೃಂಗರಾಜ 20 ತುದಿ, ಅಗಸ್ತ್ಯಪತ್ರ ಹಾಗೂ ಬಿಳಿಹೂಗಳು, ಒಂದು ಬಾಳೆಎಲೆಯ 2 ದೊಣ್ಣೆತಟ್ಟೆ, ಎರಡು ಬಾಳೆಎಲೆಯ 2 ದೊಣ್ಣೆತಟ್ಟೆ ಹಾಗೂ ಮೂರು ಬಾಳೆಎಲೆಯ 4 ದೊಣ್ಣೆತಟ್ಟೆ, ಉಚ್ಛಿಷ್ಟಪಿಂಡಕ್ಕೆ 3 ದೊಣ್ಣೆತಟ್ಟೆ ಹಾಗೂ ಊಟಕ್ಕೆ ಒಬ್ಬರಿಗೆ ಮೂರರ ಹಾಗೆ ಒಟು 9 ಬಾಳೆಲೆ ದೊಣ್ಣೆತಟ್ಟೆಗಳು, ದೇವರಿಗೆ, ಬ್ರಾಹ್ಮಣರಿಗೆ, ಗೋಗ್ರಾಸಕ್ಕೆ, ಪಿಂಡಕ್ಕೆ (ಒಬ್ಬರಿಗೆ 2) –ಹೀಗೆ ಒಟ್ಟು ಬೆಂಕಿಯಲ್ಲಿ ಬಾಡಿಸಿದ ಬಾಳೆಎಲೆ 15, ಬಾಳೆಹಣ್ಣು 6, ವೀಳ್ಯದೆಲೆ 50, ಉದ್ದ ಸೀಳಿದ ಅಡಕೆ 50,

ಸಂಸ್ಕರಿಸಿದ ಭಸ್ಮ 50 ಗ್ರಾಂ, (ಚಟಕ ಬ್ರಾಹ್ಮಣಸ್ಥಾನಕ್ಕೆ ಇಡಿಅಡಕೆ 8) ನಾಣ್ಯಗಳು (ಒಬ್ಬರಿಗೆ 50), ಹಾಲು 1 ಲೋಟ, ಮೊಸರು 1/2 ಲೋಟ, ತುಪ್ಪ 100 ಗ್ರಾಂ, ಬೆಲ್ಲ ಒಂದು ತುಂಡು, ಜೇನುತುಪ್ಪ $^1/_4$ ಕೆಜಿ., ದಾನತಟ್ಟೆಗಳು 2, ಬೆಳ್ಳಿಕಟ್ಟಿದ ಮಣಿ 4, ಚಿನ್ನದ ಸರಿಗೆ (ಒಬ್ಬರಿಗೆ) ಒಂದೂವರೆ ಅಡಿಯಷ್ಟು, ಚಿನ್ನದ ಪ್ರೇತಘಟ 1, ಕಬ್ಬಿನ ಕೋಲಿನಿಂದ ಮಾಡಿದ ಹಡಗಿನ ಪ್ರತಿರೂಪ ಹಾಗೂ ದಾನಕ್ಕೆ ದೀಪ 1, ಹೊಸತಂಬಿಗೆ 6, ವೇಷ್ಟಿ 7, ಬೈರಾಸು 2, ಪಿಂಡಕ್ಕೆ ಬಟ್ಟೆ ಒಬ್ಬರಿಗೆ 1ರ ಹಾಗೆ, ಕೊಡೆ 4, ಉಂಗುರ 3, ತುಲಸೀ ಮಾಲೆ 3, ಎಳನೀರು 4, ಗೋದಾನಕ್ಕೆ ಹಾಗೂ ಫಲದಾನಕ್ಕೆ ತೆಂಗಿನಕಾಯಿ 2, ಅಥವಾ ಸಾಕ್ಷಾತ್ ಗೋದಾನ ಇದ್ದರೆ ಅದಕ್ಕೆ ಸಂಬಂಧಪಟ್ಟ ಸಾಮಗ್ರಿಗಳು, ಪಿಂಡಕ್ಕೆ ಪ್ರತ್ಯೇಕವಾಗಿ ಮಾಡಿದ ಹವಿಸ್ಸು ಒಬ್ಬರಿಗೆ 3 ಪಾವು, ಬ್ರಾಹ್ಮಣರ ಭೋಜನಕ್ಕೆ ಅನ್ನ ಇತ್ಯಾದಿ ಹಾಗೂ ಬಳಸುವ ಪರಿಕರಗಳು. ದೇವತಾರ್ಚನದಾನದ ಶಾಲಗ್ರಾಮ, ಸುದರ್ಶನ ಇಲ್ಲವೇ ಮನೆಯ ದೇವರು, ಕಾಲುದೀಪ, ವಿಷ್ಣುಪಾದ, ತೀರ್ಥ, ನಿರ್ಮಾಲ್ಯತುಳಸಿ, ಅಂಗಾರಕ, ಕ್ರಿಯಾಕರ್ತೃಗಳಿಗೆ ಪಂಚಪಾತ್ರೆ, ಜಲಪಾತ್ರೆ, ನೀರಿಗೆ ಒಂದು ಪಾತ್ರೆ ಹಾಗೂ ತಂಬಿಗೆ, ಕೈತೊಳೆಯಲು ಅಗಲವಾದ ಪಾತ್ರೆ, (ಕೆಲವರಲ್ಲಿ ವೀಳ್ಯದೆಲೆಯ ಬೆನ್ನಮೇಲಿರುವಂತೆ ಕಟ್ಟಿಟ್ಟ 10 ವೀಳ್ಯಪಟ್ಟಿ) ಹಾಗೂ ದಾನದ ಸಾಹಿತ್ಯಗಳು–

## ಸಪಿಂಡೀಕರಣಶ್ರಾದ್ಧದಲ್ಲಿ ದರ್ಭೆಯ ಕ್ರಮ



1. ಜಲಕೂರ್ಚ



2. ಏರಕ



3. ಬರ್ಹಿಸ್



4. ಮುಷ್ಟಿದರ್ಭೆ



5. ದರ್ಭೆಯ ಹಗ್ಗ



6. ಉತ್ಪವನದರ್ಭೆ



7. ಪವಿತ್ರ



8. ಕೂರ್ಚ

ಪ್ರೇತಸ್ಥಾನಕ್ಕೆ – 1 ಎಳೆಯ ಪವಿತ್ರ ಮೂರು, 4 ಎಳೆಯ ಪ್ರೇತಬರ್ಹಿಸ್ ಒಂದು ಕಟ್ಟು, 2 ಅಡಿ ಉದ್ದದ 4 ಎಳೆಯ ದರ್ಭೆಯ ಹಗ್ಗ ಒಂದು, ಮುಷ್ಟಿದರ್ಭೆ ಒಂದು ಕಟ್ಟು, ಪ್ರೇತಬ್ರಾಹ್ಮಣಸ್ಥಾನಕ್ಕೆ 1 ಎಳೆಯ ಒಂದು ಕೂರ್ಚ, ಪ್ರೇತ ಕಮಂಡಲು ಹಾಗೂ

ಅರ್ಘ್ಯಪಾತ್ರಕ್ಕೆ 1 ಎಳೆಯ ಎರಡು ಕೂರ್ಚ, ಪ್ರೇತಬ್ರಾಹ್ಮಣರ ಪವಿತ್ರಕ್ಕೆ 1 ಎಳೆಯ ಸಾಗ್ರದರ್ಭೆ. ಪಿತೃಸ್ಥಾನಕ್ಕೆ - 3 ಎಳೆಯ ಪವಿತ್ರ ನಾಲ್ಕು. ಇನ್ನುಳಿದದ್ದು ಸಾಂವತ್ಸರಿಕಶ್ರಾದ್ಧ ಕ್ರಮದಂತೆ (ಪುಟಸಂಖ್ಯೆ 477) ದರ್ಭೆ ಕಟ್ಟಬೇಕು.

## ಸಪಿಂಡೀಕರಣವಿಷಯೇ ಸಾಮಾನ್ಯ ಜ್ಞಾನಾನಿ

ಪಿತಾಮಹ ಬದುಕಿದ್ದು ತಂದೆ ಮರಣಹೊಂದಿದ ಸಮಯದಲ್ಲಿ ಸಪಿಂಡೀಕರಣದ ದಿನ ಪ್ರಪಿತಾಮಹ ವೃದ್ಧಪ್ರಪಿತಾಮಹ ಪ್ರವೃದ್ಧಪ್ರಪಿತಾಮಹರಿಗೆ ಪಿಂಡಪ್ರದಾನ ಮಾಡಿ ಪಿತೃಪಿಂಡವನ್ನು ಸಂಯೋಜನೆ ಮಾಡಬೇಕು. ಅನಂತರದ ಮಾಸಿಕ ಹಾಗೂ ಸಾಂವತ್ಸರಿಕ ಶ್ರಾದ್ಧಾದಿಗಳಲ್ಲಿ 'ಪಿತೃ-ಪಿತೃ-ಪ್ರಪಿತಾಮಹ' ಎಂದು ತಂದೆಗೆ ಎರಡು ಪಿಂಡಗಳನ್ನು ಇಡಬೇಕು.

ಪಿತಾಮಹ ಮರಣ ಹೊಂದಲು ತಾನೇ ಕ್ರಿಯೆ ಮಾಡುವುದಾದರೆ ಸಪಿಂಡೀಕರಣದಲ್ಲಿ ಪ್ರಪಿತಾಮಹ, ವೃದ್ಧಪ್ರಪಿತಾಮಹ, ಪ್ರವೃದ್ಧಪ್ರಪಿತಾಮಹರಿಗೆ ಪಿಂಡ ಪ್ರದಾನ ಮಾಡಿ ಪಿತಾಮಹಪಿಂಡವನ್ನು ಸಂಯೋಜನೆ ಮಾಡಿ ಮಾಸಿಕಶ್ರಾದ್ಧದಲ್ಲಿ 'ಪಿತಾಮಹ-ಪಿತಾಮಹ-ಪ್ರಪಿತಾಮಹ' ಎಂದು ಪಿತಾಮಹನಿಗೆ ಎರಡು ಪಿಂಡಪ್ರದಾನ ಮಾಡಬೇಕು. ಹೀಗೆ ಈ ಕ್ರಮವನ್ನು ತಾಯಿಯ ವಿಷಯದಲ್ಲೂ ಅನುಸರಿಸಬೇಕು. ಅನಂತರ ಅಜ್ಜನ ಪ್ರಥಮಾಬ್ದಿಕ ವೊಂದನ್ನು ಮಾಡಿ ಅನಂತರ ಸಾಂವತ್ಸರಿಕಶ್ರಾದ್ಧ ಮಾಡುವ ನಿಯಮವಿಲ್ಲ.

ಪಿತಾಮಹ ಪ್ರಪಿತಾಮಹ ಬದುಕಿರುವಾಗ ತಂದೆ ಮೃತನಾದರೆ ಊರ್ಧ್ವಪ್ರಪಿತಾಮಹ, ಊರ್ಧ್ವವೃದ್ಧಪ್ರಪಿತಾಮಹ ಊರ್ಧ್ವಪ್ರವೃದ್ಧಪ್ರಪಿತಾಮಹನಿಗೆ ಪಿಂಡಪ್ರದಾನ ಮಾಡಿ ಸಪಿಂಡೀಕರಣದಲ್ಲಿ ತಂದೆಯ ಪಿಂಡವನ್ನು ಊರ್ಧ್ವಪ್ರಪಿತಾಮಹನ ಪಿಂಡದೊಂದಿಗೆ ಸಂಯೋಜನೆ ಮಾಡಿ ಮಾಸಿಕದಲ್ಲಿ ಹಾಗೂ ಸಾಂವತ್ಸರಿಕದಲ್ಲಿ ತಂದೆಗೇ ಮೂರು ಪಿಂಡಗಳನ್ನೂ ಇಲ್ಲವೇ ಏಕೋದ್ದಿಷ್ಟವಿಧಿಯಂತೆ ಒಂದು ಪಿಂಡವನ್ನು ಇಡುವುದು.

ತಂದೆ(ವರಾಹ)-ತಾಯಿ(ಭೂ)ಯರು ಜೀವಂತವಾಗುಳ್ಳ ಮಗ(ಹರಿ) ಇವನಿಗೆ (ಪ್ರಾಣ) ಎಂಬ ಮಗ ಇದ್ದು ಉಪನಯನವಾಗದೇ ಇದ್ದ ಸಮಯದಲ್ಲಿ ಮಗ (ಹರಿ)ನ ಹೆಂಡತಿ (ಶ್ರೀ) ಮರಣಹೊಂದಿದಾಗ ಮಾವನೇ(ವರಾಹ) ಸೊಸೆಯ(ಶ್ರೀ) ಕ್ರಿಯೆ ಮಾಡುವ ಸಮಯ ಬಂದಾಗ - ಸಪಿಂಡೀಕರಣದಲ್ಲಿ ತಂದೆಯ (ವರಾಹನ) ತಾಯಿ=ಮಾತೃ(ದುರ್ಗಾ) ಅಜ್ಜಿ=ಪಿತಾಮಹಿ(ಸರಸ್ವತಿ). ಮುತ್ತಜ್ಜಿ=ಪ್ರಪಿತಾಮಹಿ. (ಪಾರ್ವತಿ)ಯರಿಗೆ ಪಿಂಡಪ್ರದಾನ ಮಾಡಿ ಸೊಸೆಯನ್ನು ಮಾತೃ(ದುರ್ಗಾ) ನೊಂದಿಗೆ ಸೇರಿಸಿ ಅನಂತರದ ಮಾಸಿಕ ಹಾಗೂ ಸಾಂವತ್ಸರಿಕಶ್ರಾದ್ಧದಲ್ಲಿ ತಂದೆ (ವರಾಹ) ಯು ಸ್ನುಷಾ(ಶ್ರೀ) ಸ್ನುಷಾ(ಶ್ರೀ) ಮಾತೃ(ದುರ್ಗಾ) ಎಂದು ಹೇಳಿ ಸೊಸೆಗೇ ಎರಡು ಪಿಂಡಪ್ರದಾನ ಮಾಡಬೇಕು.

ಒಂದು ವೇಳೆ ತಂದೆ (ವರಾಹ) ಮರಣಹೊಂದಿ ತಾಯಿ(ಭೂ) ಇದ್ದಲ್ಲಿ ಮಗ(ಹರಿ)ಯು ಹೆಂಡತಿ(ಶ್ರೀ)ಗೆ ಪಿಂಡಪ್ರದಾನ ಮಾಡುವುದಾದರೆ. =ಪತ್ನೀ (ಶ್ರೀ) ಪತ್ನಿ(ಶ್ರೀ) ಪಿತಾಮಹಿ(ದುರ್ಗಾ) ಎಂದು ಪಿಂಡಪ್ರದಾನ ಮಾಡಬೇಕು.

ಒಂದು ವೇಳೆ ತಾಯಿ (ಭೂ) ಮರಣಹೊಂದಿ ಮಗ(ಹರಿ)ನು ಹೆಂಡತಿ (ಶ್ರೀ)ಗೆ ಪಿಂಡಪ್ರದಾನ ಮಾಡುವಾಗ = ಪತ್ನಿ(ಶ್ರೀ)ಮಾತೃ (ಭೂ) ಪಿತಾಮಹಿ (ದುರ್ಗಾ) ಎಂದು ಪಿಂಡಪ್ರದಾನ ಮಾಡಬೇಕು.

ಅನಂತರ ಮಗ (ಪ್ರಾಣ)ನಿಗೆ ಉಪನಯನವಾಗಿ ತಾಯಿ(ಶ್ರೀ)ಗೆ ಮಗ(ಪ್ರಾಣ)ನೇ ಪಿಂಡಪ್ರದಾನ ಮಾಡುವಾಗ ತಂದೆ(ಹರಿ)ಯ ತಾಯಿ(ಭೂ) ಇದ್ದಲ್ಲಿ ಮಗ(ಪ್ರಾಣ)ನು =ಮಾತೃ(ಶ್ರೀ) ಮಾತೃ(ಶ್ರೀ) ಪ್ರಪಿತಾಮಹಿ(ದುರ್ಗಾ) ಎಂದು ಪಿಂಡಪ್ರದಾನ ಮಾಡಬೇಕು.

ತಂದೆ(ಹರಿ)ಯ ತಾಯಿ(ಭೂ) ಇಲ್ಲದೇ ಇದ್ದಲ್ಲಿ ಮಗ(ಪ್ರಾಣ)ನು =ಮಾತೃ (ಶ್ರೀ) ಪಿತಾಮಹಿ(ಭೂ) ಪ್ರಪಿತಾಮಹಿ(ದುರ್ಗಾ) ಎಂದು ಪಿಂಡಪ್ರದಾನ ಮಾಡಬೇಕು.

ತಾಯಿ ಹಾಗೂ ಪಿತಾಮಹಿ ಇದ್ದು ಹೆಂಡತಿ ಮೃತಳಾದ ಸಂದರ್ಭದಲ್ಲಿ ಸಪಿಂಡೀಕರಣ ದಲ್ಲಿ ಪ್ರಪಿತಾಮಹಿ ವೃದ್ಧಪಿತಾಮಹಿ ಪ್ರವೃದ್ಧಪ್ರಪಿತಾಮಹಿಗೆ ಪಿಂಡಪ್ರದಾನ ಮಾಡಿ ಪತ್ನೀ ಪಿಂಡಸಂಯೋಜನೆಯ ಅನಂತರ ಮುಂದಿನ ಶ್ರಾದ್ಧಗಳಲ್ಲಿ 'ಪತ್ನಿ–ಪತ್ನಿ–ಪ್ರಪಿತಾಮಹಿ' ಎಂದು ಪತ್ನಿಗೆ ಎರಡು ಪಿಂಡಪ್ರದಾನ ಮಾಡಬೇಕು.

ತಾಯಿ, ಪಿತಾಮಹಿ ಪ್ರಪಿತಾಮಹಿ –ಮೂವರೂ ಜೀವಂತವಾಗಿದ್ದು ಆ ಸಮಯದಲ್ಲಿ ವೃದ್ಧಪ್ರಪಿತಾಮಹಿ ಪ್ರವೃದ್ಧಪ್ರಪಿತಾಮಹಿ ಊರ್ಧ್ವಪ್ರಪಿತಾಮಹಿಗೆ ಪಿಂಡ ಪ್ರದಾನ ಮಾಡಿ ಮುಂದಿನ ಶ್ರಾದ್ಧಗಳಲ್ಲಿ ಹೆಂಡತಿಗೇ ಮೂರು ಪಿಂಡ ಇಲ್ಲವೇ ಏಕೋದ್ದಿಷ್ಟವಿಧಿಯಂತೆ ಒಂದು ಪಿಂಡಪ್ರದಾನ ಮಾಡಬೇಕು.

ತಂದೆ ಬದುಕಿದ್ದು ಮಗ ಮರಣಹೊಂದಿದ ಪಕ್ಷದಲ್ಲಿ ಸಪಿಂಡೀಕರಣದಲ್ಲಿ ಪಿತೃ, ಪಿತಾಮಹ, ಪ್ರಪಿತಾಮಹರಿಗೆ ಪಿಂಡಪ್ರದಾನ ಮಾಡಿ ಮುಂದೆ ಶ್ರಾದ್ಧದಲ್ಲಿ 'ಪುತ್ರ–ಪಿತೃ–ಪಿತಾಮಹ' ಎಂದು ಪಿಂಡಪ್ರದಾನ ಮಾಡಬೇಕು.

ಸಪಿಂಡೀಕರಣವನ್ನು ಒಂದು ವರ್ಷ ಅಂತ್ಯವಾಗುವ ದಿವಸ, ಹನ್ನೊಂದನೆಯ ತಿಂಗಳು, ಆರನೆಯ ತಿಂಗಳು, ಮೂರನೆಯ ತಿಂಗಳು, ಒಂದೂವರೆ ತಿಂಗಳು, ಒಂದನೆಯ ತಿಂಗಳು ಅಂತ್ಯವಾಗುವಾಗ ಮೃತತಿಥಿ ಬರುವ ದಿನ, ಹನ್ನೆರಡನೆಯ ದಿನ ಹನ್ನೊಂದನೆಯ ದಿನ –ಹೀಗೆ, ಈ ಎಂಟು ಕಾಲಗಳಲ್ಲಿ ಒಂದು ದಿನ ಮಾಡಬಹುದು. ಈ ಕಾಲಗಳಲ್ಲಿ ರೋಹಿಣಿ, ಆದ್ರಾ, ಹಸ್ತಾ, ಅನುರಾಧಾ ನಕ್ಷತ್ರ ಮೃತತಿಥಿಯು ಸಹಯೋಗವಾದರೆ ಉತ್ತಮ. ನಕ್ಷತ್ರಕ್ಕಿಂತಲೂ ಮೇಲೆ ಹೇಳಿರುವ ತಿಂಗಳಲ್ಲಿ ಮಾಡುವಾಗ ಮೃತತಿಥಿಯೇ ಪ್ರಾಮುಖ್ಯವಾಗಿರುತ್ತದೆ.

ತಂದೆಯು ಮಗನ ಸಪಿಂಡೀಕರಣವನ್ನು, ತಮ್ಮನು ಅಣ್ಣನ ಸಪಿಂಡೀಕರಣವನ್ನು ಮಾಡಬಾರದು.

ಪ್ರೇತೋದ್ದೇಶ ಕಾರ್ಯದಲ್ಲಿ, ಸಪಿಂಡೀಕರಣದಲ್ಲಿ ಬ್ರಾಹ್ಮಣರನ್ನು ನಿಲ್ಲಿಸಿಯೇ ಕಾಲನ್ನು ತೊಳೆಯಬೇಕು. ಆದರೆ ಶ್ರಾದ್ಧದಲ್ಲಿ ಬ್ರಾಹ್ಮಣರನ್ನು ಕುಳಿತುಕೊಳ್ಳಿಸಿ ಪಾದಪ್ರಕ್ಷಾಲನ ಮಾಡಬೇಕು ಹಾಗೂ ಬ್ರಾಹ್ಮಣರನ್ನು ಆಸನದಲ್ಲಿ ಕೂರಿಸುವಾಗ ಅವರ ಕಾಲು ಭೂಸ್ಪರ್ಶವಾಗಿರುವಂತೆ ಕೂರಿಸಬೇಕು.

ಅಗ್ನೌಕರಣ, ಬ್ರಾಹ್ಮಣಭೋಜನ, ಪಿಂಡಪ್ರದಾನಗಳೆಂಬವು ಶ್ರಾದ್ಧದ ಮೂರು ವಿಭಾಗಗಳು. ಶ್ರೋತ್ರಿಯಾದಿ ಲಕ್ಷಣಗಳುಳ್ಳ ಬ್ರಾಹ್ಮಣರನ್ನು ಕ್ಷಣಿಸಬೇಕೆಂದು ಶಾಸ್ತ್ರ ಹೇಳುತ್ತದೆ. ಇಂಥ ಲಕ್ಷಣಗಳುಳ್ಳ ಬ್ರಾಹ್ಮಣರು ಸಿಗದೇ ಹೋದರೆ ಬ್ರಾಹ್ಮಣರ ಸ್ಥಾನದಲ್ಲಿ ದರ್ಭಬಟುವನ್ನು ಇಟ್ಟು ಆರಾಧನೆಯನ್ನು ಮಾಡಬೇಕು. ಮೊದಲಿನದಕ್ಕೆ '**ಹಸ್ತಶ್ರಾದ್ಧ**'ವೆಂದೂ ಎರಡನೆಯದಕ್ಕೆ '**ಚಟಕಶ್ರಾದ್ಧ**'ವೆಂದೂ ಕರೆಯುತ್ತಾರೆ.

ಭೋಜನಸಮಯದಲ್ಲಿ ಕ್ಷಣಿಸಿದ ಬ್ರಾಹ್ಮಣರ ಹಸ್ತದಲ್ಲಿ ಆಹುತಿರೂಪದಿಂದ ಎರಡು ಬಾರಿ ಅನ್ನವನ್ನು ಸಮರ್ಪಿಸಬೇಕು. ಆ ಅನ್ನವು ಬ್ರಾಹ್ಮಣರ ಜಠರಾಗ್ನಿಯ ದೆಸೆಯಿಂದ ಯಾರನ್ನು ಉದ್ದೇಶಿಸಿ ಕೊಟ್ಟಿದ್ದಾನೋ ಅವರಿಗೆ ತಲುಪುವುದು. ಆ ಆಹುತಿಯ ಒಂದು ಮಂತ್ರವು '**ಸೋಮಾಯ ಪಿತೃಮತೇ ಸ್ವಧಾ ನಮಃ**' ಇಲ್ಲಿ ಸೋಮಪದಕ್ಕೆ ಚಂದ್ರನೆಂಬರ್ಥ ಅಂದರೆ ಪಿತೃಗಳು ಚಂದ್ರನಲ್ಲಿರುತ್ತಾರೆ ಎಂದು ತಿಳಿಯಬೇಕು.

ಬ್ರಹ್ಮಚಾರಿಗಳು ಹಾಗೂ ವಿಧುರರು ಪಾಣಿಹೋಮವನ್ನು ವಿಶ್ವೇದೇವಸ್ಥಾನದ ಬ್ರಾಹ್ಮಣರ ಹಸ್ತದಲ್ಲಿ ಮಾಡಬೇಕೆಂದು ವಿಧಿ ಇದೆ.

ಅಗ್ನೌಕರಣದಿಂದ ದೇವಲೋಕದಲ್ಲಿರುವ ಪಿತೃಗಳು, ಬ್ರಾಹ್ಮಣಭೋಜನದಿಂದ ಸ್ವರ್ಗದಲ್ಲಿರುವ ಪಿತೃಗಳು, ಪಿಂಡದಾನದಿಂದ ಯಮಲೋಕದಲ್ಲಿರುವ ಪಿತೃಗಳು, ವಿಕಿರಬಲಿಯಿಂದ ನರಕದಲ್ಲಿರುವ ಪಿತೃಗಳು, '**ಊರ್ಜಂ ವಹಂತು....**' ಮಂತ್ರದಿಂದ ಕೊಡುವ ಬಲಿಯಿಂದ ಪ್ರಾಣಿಗಳ ರೂಪದಲ್ಲಿರುವ ಪಿತೃಗಳು, ಭೂರಿಭೋಜನದಿಂದ ರಾಕ್ಷಸಸ್ವಭಾವದವರಾಗಿ ಹುಟ್ಟಿದ ಪಿತೃಗಳು, ದಕ್ಷಿಣೆಯನ್ನು ಕೊಡುವುದರಿಂದ ಋಷಿರೂಪದಲ್ಲಿರುವ ಪಿತೃಗಳು –ತೃಪ್ತಿ ಹೊಂದುತ್ತಾರೆ.

ಪ್ರೇತಪಿಂಡವು ಹನ್ನೆರಡು ಅಂಗುಲ ಉದ್ದವಿರಬೇಕು.

ಪಿಂಡಗಳನ್ನು ಗೋವುಗಳಿಗೆ, ಬೇಡುವ ದ್ವಿಜರಿಗೆ, ಔಪಾಸನಾಗ್ನಿಯಲ್ಲಿ, ನದಿಗಳಲ್ಲಿ ಹಾಕಬಹುದು. ಇದರಲ್ಲಿ ಗೋವುಗಳಿಗೆ ಹಾಗೂ ನದಿಗಳಲ್ಲಿ ಹಾಕುವುದು ಉತ್ತಮ.

ಸಪಿಂಡೀಕರಣದ ಅನಂತರ ಒಂದು ವರ್ಷದೊಳಗೆ ಶುಭಕಾರ್ಯ ಮಾಡಲೇ ಬೇಕಾದ ಅನಿವಾರ್ಯತೆ ಎದುರಾದರೆ ಉಳಿದ ಮಾಸಿಕಗಳನ್ನು ಪೂರ್ಣಮಾಡಿ ವೃದ್ಧಿನಾಂದಿಯನ್ನು ಆಚರಿಸಿ ಶುಭಕಾರ್ಯ ಮಾಡಿ, ಅನಂತರ ಪುನಃ ಮುಂದಿನ ಮಾಸಿಕಗಳನ್ನು ಆಚರಿಸಬೇಕು.

ಲೋಹದಂಡ (ಕೊಡಲಿ, ಒನಕೆ, ಕೋಲು, ಕತ್ತಿ) ದಾನ ಮಾಡುವಾಗ ಕೈಯನ್ನು ನೆಲಕ್ಕೆ ಮುಟ್ಟಿಸಿ ದಾನ ಮಾಡಬೇಕು. ಪ್ರೇತೋದ್ಧಾರಕ್ಕಾಗಿ ಸುವರ್ಣದಾನ ಮಾಡಬೇಕು. ಹತ್ತಿಯ ದಾನದಿಂದ ಯಮದೂತರು ಸಂತೃಪ್ತಿ ಹೊಂದುತ್ತಾರೆ. ಉಪ್ಪು, ಸುವರ್ಣ, ಲೋಹದಂಡ, ಹತ್ತಿ ಎಳ್ಳು ದಾನದಿಂದ ಚಿತ್ರಗುಪ್ತನು ಸಂತೃಪ್ತಿ ಹೊಂದುತ್ತಾನೆ. ಸಪ್ತಧಾನ್ಯ ದಾನದಿಂದ ದ್ವಾರಪಾಲಕನಾದ ಧರ್ಮಧ್ವಜ ಸಂತೃಪ್ತಿ ಹೊಂದುತ್ತಾನೆ.

ನೂರು ದನಗಳು ಹಾಗೂ ನೂರು ಎತ್ತುಗಳು ತಿರುಗಲಿಕ್ಕೆ ಎಷ್ಟು ಸ್ಥಳಬೇಕು ಅಷ್ಟು ಸ್ಥಳಕ್ಕೆ ಗೋಚರ್ಮ ಎಂದು ಹೆಸರು ಹಾಗಾಗಿ ಭೂ ದಾನ ಮಾಡುವುದಾದರೆ ಇಷ್ಟು ಸ್ಥಳವನ್ನು ದಾನ ಮಾಡಬೇಕು

ಪಂಚಧೇನು ದಾನ ಮಾಡಲು ಆಗದಿದ್ದರೆ ಕಪಿಲವರ್ಣದ ಧೇನು ದಾನ ಮಾಡಿದರೆ ಪಂಚಧೇನು ದಾನ ಮಾಡಿದ ಫಲವಿದೆ. ಬಂಗಾರದ ಕೊಂಬು, ಬೆಳ್ಳಿಯ ಗೊರಸು, ಆಚ್ಛಾದನೆಗೆ ಕಪ್ಪು ಬಟ್ಟೆ, ಕುತ್ತಿಗೆಗೆ ಘಂಟಾಮಣಿ, ಎರಡು ಕಂಚಿನ ಪಾತ್ರೆ, ಒಂದು ಬಟ್ಟೆಯ ಮೇಲೆ ತಾಮ್ರಪಾತ್ರವಿಟ್ಟು ಅದರಲ್ಲಿ ಲೋಹದಂಡದಿಂದ ಕೂಡಿದ ಬಂಗಾರದ ಯಮಪ್ರತಿಮೆಯನ್ನು ಬಟ್ಟೆಯನ್ನು ಇಟ್ಟು ದಾನಮಾಡಬೇಕು.

ಸುವಾಸಿನಿಯು ಮರಣ ಹೊಂದಿದಲ್ಲಿ ಸಪಿಂಡೀಕರಣದ ದಿನ ಪಿತೃಬ್ರಾಹ್ಮಣರ ಭೋಜನಪಂಕ್ತಿಯಲ್ಲಿ ಸುವಾಸಿನಿಯನ್ನು ಕರೆದು ಕುಳ್ಳಿರಿಸಿ ಆರಾಧಿಸಿ ಅವರಿಗೆ ಮುತ್ತೈದೆ ದ್ರವ್ಯಗಳನ್ನು ಕೊಟ್ಟು ಅಲಂಕರಿಸಿ, ಅವರ ಆಶೀರ್ವಾದ ಪಡೆಯುವ ಕ್ರಮ ಕೆಲವು ಪ್ರಯೋಗಗಳಲ್ಲಿ ಇದೆ. ಅಲ್ಲದೆ, ಸುವಾಸಿನಿಯಾಗಿ ಸತ್ತವರ ಪಿಂಡಕ್ಕೆ ಮಾತ್ರ ಕುಂಕುಮ ಹಚ್ಚುವ ಕ್ರಮವಿದೆ.

ಹೆಂಡತಿ, ತಮ್ಮ, ಮಗ, ತಂಗಿ, ಮುಂತಾದವರಿಗೆ ಸಪಿಂಡೀಕರಣವಾದ ಮೇಲೆ ಏಕೋದ್ದಿಷ್ಟವಿಧಾನದಿಂದ ಮಾಸಿಕಶ್ರಾದ್ಧಗಳನ್ನು ಮಾಡಬೇಕು.

ಪ್ರೇತಶ್ರಾದ್ಧ, ಸಪಿಂಡೀಕರಣ, ತೀರ್ಥಶ್ರಾದ್ಧ, ಗಯಾಶ್ರಾದ್ಧ, ಆಮಶ್ರಾದ್ಧ, ಷೋಡಶಮಾಸಿಕ, ನಿತ್ಯಶ್ರಾದ್ಧ, ಉದಕುಂಭಶ್ರಾದ್ಧಗಳಲ್ಲಿ ಅನ್ನಸೂಕ್ತ, ಅಭಿಶ್ರವಣಸೂಕ್ತಗಳನ್ನು ಹೇಳಬಾರದು.

ಸಪಿಂಡೀಕರಣದ ಅನಂತರ ಪ್ರಥಮಾಬ್ದಿಕದ ಒಳಗೆ ಮನೆಗೆ ಸುಣ್ಣಬಣ್ಣ ಬಳಿದು ವಾಸ್ತುಪೂಜೆ ಮಾಡಬೇಕು.

ಊರು ಬಿಟ್ಟು ಹೋದ ವ್ಯಕ್ತಿ ಯಾವ ಸುಳಿವೂ ನೀಡದೇ ಯಾರ ಕಣ್ಣಿಗೂ ಹನ್ನೆರಡು ವರ್ಷದ ವರೆಗೆ ಕಾಣದೇ ಇದ್ದ ಸಂದರ್ಭದಲ್ಲಿ ಹದಿಮೂರನೇ ವರ್ಷದಲ್ಲಿ ಕೃಷ್ಣಪಕ್ಷದ ಅಷ್ಟಮೀತಿಥಿ, ಅಮಾವಾಸ್ಯಾತಿಥಿಯಲ್ಲಿ, ಪಾಲಾಶವಿಧಿ ಮಾಡಿ ಕ್ರಿಯಾಭಾಗವನ್ನು ಮಾಡಬೇಕು. ಅನಂತರದಲ್ಲಿ ಒಂದು ವೇಳೆ ಜೀವಂತವಾಗಿದ್ದು ಆಗಮಿಸಿದರೆ ಆತನನ್ನು ತುಪ್ಪದ ಪಾತ್ರೆಯಲ್ಲಿ ಮುಳುಗಿಸಿ ಎತ್ತಬೇಕು ಹಾಗೂ ಸ್ನಾನ ಮಾಡಿಸಿ, ಜಾತಕರ್ಮಾದಿ ಸಂಸ್ಕಾರ ಮಾಡಿ ಹನ್ನೆರಡು ದಿನ ಬ್ರಹ್ಮಚರ್ಯವ್ರತಸ್ಥನಾಗಿದ್ದು ಹದಿಮೂರನೇ ದಿನ ಸಮಾವರ್ತನೆ ಮಾಡಬೇಕು. ವಿವಾಹಿತನಾಗಿದ್ದು ಹೆಂಡತಿ ಬದುಕಿದ್ದರೆ ಅವಳೊಡನೆ ಪುನರ್ವಿವಾಹ ಮಾಡಬೇಕು.

ಮರಣದಿಂದ ಹಿಡಿದು ಸಪಿಂಡೀಕರಣದವರೆಗೆ ದಹನಸಮಯದಲ್ಲಿ ಏಳು ಪಿಂಡ, ನಿತ್ಯವಿಧಿ ಹತ್ತು ಪಿಂಡ, ವಿಷಮಶ್ರಾದ್ಧದ ಐದು ಪಿಂಡ, ನಗ್ನಪ್ರಚ್ಛಾದನಶ್ರಾದ್ಧದ ಒಂದು ಪಿಂಡ, ಪಾಥೇಯಶ್ರಾದ್ಧದ ಒಂದು ಪಿಂಡ, ಶ್ಮಶಾನವೇದಿಕಾಶ್ರಾದ್ಧದ ಮೂರು ಪಿಂಡ, ಅಸ್ಥಿಸಂಚಯನದ ಒಂದು ಪಿಂಡ, ಧರ್ಮವೇದಿಕಾಶ್ರಾದ್ಧದ ಮೂರು ಪಿಂಡ, ಏಕೋದ್ದಿಷ್ಟಶ್ರಾದ್ಧದ ಒಂದು ಪಿಂಡ, ಷೋಡಶಮಾಸಿಕಶ್ರಾದ್ಧದ ಹದಿನಾರು ಪಿಂಡ, ಉದಕುಂಭಶ್ರಾದ್ಧದ ಒಂದು ಪಿಂಡ, ಸಪಿಂಡೀಕರಣದ ನಾಲ್ಕು ಪಿಂಡ ಹಾಗೂ ಪ್ರೇತಪಿಂಡ ಒಂದು, ಪಿಂಡಸಂಯೋಜನೆಯ ಮೂರು ಪಿಂಡ –ಹೀಗೆ ಒಟ್ಟು ಐವತ್ತೇಳು ಪಿಂಡಗಳು.

**ಉತ್ತರಷೋಡಶಸಂಸ್ಕಾರಗಳು** : ಒಂದು ಶವದಹನ ಸಂಸ್ಕಾರ. ಪ್ರಥಮ ದಿನದ ನಿತ್ಯವಿಧಿಯಿಂದ ಹತ್ತನೆಯ ದಿನದ ವರೆಗಿನ ಹತ್ತು ಸಂಸ್ಕಾರಗಳು; ಹನ್ನೆರಡನೆಯ

ಸಂಸ್ಕಾರ ಅಸ್ಥಿಸಂಚಯನ; ಹದಿಮೂರನೆಯ ಸಂಸ್ಕಾರ ಏಕೋದ್ದಿಷ್ಟ; ಹದಿನಾಲ್ಕನೆಯ ಸಂಸ್ಕಾರ; ಹನ್ನೊಂದನೆಯ ದಿನದ ಮಧ್ಯಮಷೋಡಶಮಾಸಿಕಶ್ರಾದ್ಧ; ಹದಿನೈದರ ಸಂಸ್ಕಾರ ಸಪಿಂಡೀಕರಣ; ಹದಿನಾರನೆಯ ಸಂಸ್ಕಾರ ಉತ್ತರಷೋಡಶಮಾಸಿಕಶ್ರಾದ್ಧಗಳು.

## ದುಷ್ಟಮರಣೇ ಕರ್ತವ್ಯ ಕರ್ಮಾಣಿ

* ಸರ್ಪದಿಂದ ಮರಣ ಹೊಂದಿದಲ್ಲಿ ಸ್ವರ್ಣ ನಾಗಪ್ರತಿಮೆ ಮಾಡಿ ನಾಗಬಲಿ ಮಾಡಿ ದಾನ ಮಾಡಬೇಕು.
* ಆನೆಯಿಂದ ಮರಣಹೊಂದಿದಲ್ಲಿ ಚಿನ್ನದ ಆನೆ ಪ್ರತಿಮೆ ದಾನ ಮಾಡಬೇಕು.
* ರಾಜನಿಂದ ಹತನಾದಲ್ಲಿ ಚಿನ್ನದ ಪುರುಷ ಪ್ರತಿಮೆ ದಾನ ಮಾಡಬೇಕು.
* ಕಳ್ಳರಿಂದ ಹತನಾದಲ್ಲಿ ಗೋದಾನ ಮಾಡಬೇಕು.
* ಶತ್ರುಗಳಿಂದ ಹಾಗೂ ದನದಿಂದ ಮರಣವಾದರೆ ಎತ್ತನ್ನು ದಾನ ಮಾಡಬೇಕು.
* ಎತ್ತಿನಿಂದ ಮರಣವಾದಲ್ಲಿ ಚಿನ್ನ ದಾನ ಮಾಡಬೇಕು.
* ಹಾಸಿಗೆಯಲ್ಲಿ ಮರಣವಾದಲ್ಲಿ ಚಿನ್ನದ ವಿಷ್ಣುಪ್ರತಿಮೆಯೊಂದಿಗೆ ಶಯ್ಯಾದಾನ ಕೊಡಬೇಕು.
* ಆಶೌಚದಲ್ಲಿ ಮರಣವಾದರೆ ಚಿನ್ನ ದಾನ ಕೊಡಬೇಕು.
* ಸಂಸ್ಕಾರಹೀನವಾಗಿ ಮರಣವಾದರೆ ಬ್ರಾಹ್ಮಣಕುಮಾರನಿಗೆ ಉಪನಯನ ಮಾಡಬೇಕು.
* ಕ್ರೂರಮೃಗಗಳಿಂದ ಮರಣ ಹೊಂದಿದಲ್ಲಿ ಒಬ್ಬ ಬ್ರಾಹ್ಮಣರ ಕನ್ಯೆಯನ್ನು ವಿವಾಹ ಮಾಡಿ ಕೊಡಬೇಕು.
* ಕುದುರೆಯಿಂದ ಮರಣವಾದಲ್ಲಿ ಸ್ವರ್ಣ ದಾನ ಮಾಡಬೇಕು.
* ನಾಯಿಯಿಂದ ಮರಣವಾದಲ್ಲಿ ಕ್ಷೇತ್ರಪಾಲಸ್ಥಾಪನೆಯನ್ನು ಮಾಡಬೇಕು.
* ಹಂದಿಯಿಂದ ಮರಣವಾದಲ್ಲಿ ಕೋಣವನ್ನು ದಾನ ಮಾಡಬೇಕು.
* ಕ್ರಿಮಿಬಾಧೆಯಿಂದ ಮರಣವಾದರೆ ಗೋಧಿದಾನ ಮಾಡಬೇಕು.
* ವೃಕ್ಷದಿಂದ ಮರಣವಾದರೆ ಚಿನ್ನ ಹಾಗೂ ಬಟ್ಟೆಯಿಂದ ಕೂಡಿದ ವೃಕ್ಷ ದಾನ ಮಾಡಬೇಕು.
* ಕೊಂಬುಳ್ಳ ಪ್ರಾಣಿಗಳಿಂದ ಮರಣವಾದಲ್ಲಿ, ವಾಹನದಿಂದ ಮರಣವಾದರೆ ಸೋಪಸ್ಕರ ದಾನ ಮಾಡಬೇಕು.
* ಗುಡ್ಡ ಕುಸಿದು ಮರಣ ಹೊಂದಿದಲ್ಲಿ ಯಥಾಶಕ್ತಿ ಧಾನ್ಯ ದಾನ ಮಾಡಬೇಕು.
* ಅಗ್ನಿಯಿಂದ ಮರಣವಾದಲ್ಲಿ ಬಾವಿಯನ್ನು ಕಟ್ಟಿಸಿ ದಾನ ಕೊಡಬೇಕು.
* ಕಟ್ಟಿಗೆಯಿಂದ ಮರಣವಾದಲ್ಲಿ ಸಭಾಭವನವನ್ನು ಕಟ್ಟಿಸಿ ದಾನ ಮಾಡಬೇಕು.
* ಶಸ್ತ್ರದಿಂದ ಮರಣವಾದಲ್ಲಿ ಎಮ್ಮೆಯನ್ನು ದಾನ ಮಾಡಬೇಕು.

* ಕಲ್ಲಿನಿಂದ ಮರಣವಾದರೆ ಕರು ಸಹಿತ ಗೋದಾನ ಕೊಡಬೇಕು.
* ಬಂಧನದಿಂದ ಮರಣವಾದಲ್ಲಿ ಚಿನ್ನದ ಮಂಗನ ಪ್ರತಿಮೆಯನ್ನು ದಾನ ಮಾಡಬೇಕು.
* ನೀರಿನಿಂದ ಮರಣವಾದಲ್ಲಿ ಸ್ವರ್ಣ ದಾನ ಮಾಡಬೇಕು.
* ವಿಷೂಚಿಕಾ(ಕಾಲರಾ)ದಿಂದ ಮರಣವಾದರೆ ಬ್ರಾಹ್ಮಣರಿಗೆ, ಸಾಧುಗಳಿಗೆ, ಅನ್ನದಾನ ಮಾಡಬೇಕು.
* ಕಂಟಗ್ರಾಹದಿಂದ ಮರಣವಾದಲ್ಲಿ ಘೃತಧೇನುವನ್ನು ದಾನ ಮಾಡಬೇಕು.
* ರೋಗದಿಂದ ಮರಣವಾದಲ್ಲಿ ಅಷ್ಟಕೃಚ್ಛ್ರ ಮಾಡಬೇಕು.
* ಅತಿಸಾರದಿಂದ ಮರಣವಾದಲ್ಲಿ ಲಕ್ಷ ಗಾಯತ್ರೀಜಪ ಮಾಡಬೇಕು.
* ಗ್ರಹಗ್ರಸ್ತದಿಂದ ಮರಣ ಹೊಂದಿದ್ದಲ್ಲಿ ರುದ್ರಜಪವನ್ನು ಮಾಡಿಸಬೇಕು.
* ವಿದ್ಯುತ್ತಿನಿಂದ ಮರಣವಾದರೆ ವಿದ್ಯಾದಾನ ಮಾಡಬೇಕು.
* ಅಂತರಿಕ್ಷದಲ್ಲಿ ಮರಣವಾದರೆ ವೇದಪಾರಾಯಣ ಮಾಡಬೇಕು.
* ಅಸ್ಪೃಶ್ಯರಿಂದ ಮೃತವಾದಲ್ಲಿ ಶಾಸ್ತ್ರಪುಸ್ತಕವನ್ನು ದಾನ ಮಾಡಬೇಕು.
* ಪತಿತರಿಂದ ಮೃತವಾದಲ್ಲಿ ಹದಿನಾರು ಪ್ರಾಜಾಪತ್ಯವನ್ನು ಮಾಡಬೇಕು.
* ಉತ್ತರಾಧಿಕಾರಿಗಳು ದೋಷಪರಿಹಾರ ಮಾಡಿಕೊಳ್ಳದಿದ್ದರೆ ಮೃತನ ಕುಟುಂಬಕ್ಕೆ ಸಪ್ತಧಾತುವಿನ ಸಂಬಂಧವೂ ಆರ್ಥಿಕಸಂಬಂಧವೂ ಸಂಪೂರ್ಣವಿರುವುದರಿಂದ ಪುನಃ ಅದೇ ಬಾಧಕಗಳಿಗೆ ಕಾರಣವಾಗುತ್ತದೆಂದು ಹೇಳಿದೆ. ಅಂತಹ ಬಾಧಕಗಳು ಬಾರದಂತೆ, ದೋಷಗಳಿಗೆ ಅನುಸಾರವಾಗಿ ನಿವೃತ್ತಿಯನ್ನು ಶಾಸ್ತ್ರಪ್ರಕಾರ ಮಾಡಿಕೊಂಡು ಸುಖಭಾಗಿಗಳಾಗುವುದಕ್ಕೋಸ್ಕರ ಪ್ರಾಯಶ್ಚಿತ್ತಗಳನ್ನು ಹೇಳಿದ್ದಾಗಿರುತ್ತದೆ.

**ಪೀಠಿಕೆ :**

ಸಪಿಂಡೀಕರಣವನ್ನು ವರ್ಷದ ಕೊನೆಗೆ ಮಾಡಬೇಕಾಗಿದ್ದು ಆದರೆ ದೇಶ, ಕಾಲ ಮತ್ತು ಮಾನವನ ಆಯುಷ್ಯದ ಅಲ್ಪತೆಯನ್ನು ಗಮನದಲ್ಲಿಟ್ಟು ಹನ್ನೆರಡನೆಯ ದಿನ ಈ ಶ್ರಾದ್ಧವನ್ನು ಆಚರಿಸುವ ಸಂಪ್ರದಾಯ ಬಂದಿದೆ. ಕ್ರಿಯಾಕರ್ತೃವಿಗೆ ಮೃತಾಶೌಚ, ಜಾತಾಶೌಚ, ಪತ್ನೀಪ್ರಸವ, ಜ್ಯೇಷ್ಠನ ಪತ್ನಿಯ ಮಾಸಿಕ, ಪತ್ನಿಯ ರಜೋಽವಧಿ ಮುಂತಾದ ಸಮಯದಲ್ಲಿ ಸಪಿಂಡೀಕರಣವನ್ನು ಮಾಡದೆ, ಸೂತಕಾಂತ್ಯದಲ್ಲಿ ಮಾಡಬೇಕು. ರಜಸ್ವಲೆಯಾಗಿದ್ದರೆ ಐದನೇ ದಿನ ಸಪಿಂಡೀಕರಣ ಮಾಡಬೇಕು. ಸಪಿಂಡೀಕರಣಕ್ಕೆ ವಿಶ್ವೇದೇವಸ್ಥಾನಕ್ಕೆ ಇಬ್ಬರು ಇಲ್ಲವೇ ಒಬ್ಬ ಬ್ರಾಹ್ಮಣರನ್ನು, ಪ್ರೇತಸ್ಥಾನದಲ್ಲಿ ಒಬ್ಬ ಬ್ರಾಹ್ಮಣನನ್ನು, ಹಾಗೂ ಪಿತೃಸ್ಥಾನದಲ್ಲಿ ಮೂರು ಇಲ್ಲವೇ ಒಬ್ಬ ಬ್ರಾಹ್ಮಣರನ್ನು ನಿಮಂತ್ರಿಸಬೇಕು. ಯೋಗ್ಯ ಬ್ರಾಹ್ಮಣರು ಸಿಗದೇ ಇದ್ದಲ್ಲಿ ಕೂರ್ಚಮುಖದಲ್ಲಿ ವಿಶ್ವೇದೇವ ಸ್ಥಾನಕ್ಕೆ ನಾಲ್ಕು ಎಳೆಯ ಕೂರ್ಚವನ್ನು, ಪ್ರೇತಸ್ಥಾನದಲ್ಲಿ ಒಂದು ಎಳೆಯ ಕೂರ್ಚ ಹಾಗೂ ಪಿತೃಸ್ಥಾನದಲ್ಲಿ ಮೂರು ಎಳೆಯ ಕೂರ್ಚವನ್ನು ಇಟ್ಟು ಆರಾಧನೆ ಮಾಡಬೇಕು. ಸಪಿಂಡೀಕರಣದಲ್ಲಿ ಕೆಲವು ಕಡೆ ವಿಷ್ಣುವಿನ ಆರಾಧನೆ ಇರುವುದಿಲ್ಲ. ಪ್ರಾರ್ಥನೆ ನಮಸ್ಕಾರ

ಮಾತ್ರ ಹಾಗೆ ಮಾಡುವುದಾದರೆ ದೇವತಾರ್ಚನೆಯ ಸಾಲಿಗ್ರಾಮ ಇಲ್ಲವೇ ಸುದರ್ಶನವನ್ನು ಪುಣ್ಯಾಹಸಮಯದಲ್ಲಿ ಪುರೋಹಿತರಿಂದ ಷೋಡಶೋಪಚಾರಪೂಜೆ ಮಾಡಿಸಿ ಸಪಿಂಡೀಕರಣಶ್ರಾದ್ಧದ ಸ್ಥಾನದಲ್ಲಿ ಇಡಬೇಕು ಇಲ್ಲವೇ ಕೂರ್ಚ ಇಟ್ಟು ಪೂಜಿಸಬೇಕು.

ಅಡುಗೆಯನ್ನು ಯಜಮಾನನ ಹೆಂಡತಿ ಇಲ್ಲವೇ ಸೊಸೆಯಂದಿರು ಮಾಡಬೇಕು ಹಾಗೂ ಅವರೇ ಬಡಿಸಬೇಕು. ಅವರಿಗೆ ಅನುಭವವಿಲ್ಲದಿದ್ದರೆ ಅಡುಗೆಯವರಿಂದ ಮಾಡಿಸಬಹುದು. ಅಡುಗೆಗೆ ಸಂಬಂಧಿಸಿದ ವಿಹಿತಪದಾರ್ಥಗಳ, ವರ್ಜ್ಯಪದಾರ್ಥಗಳ ಹಾಗೂ ಭೋಜ್ಯಪದಾರ್ಥಗಳ ವಿವರ ಹಾಗೂ ಕರ್ತೃನಿಯಮ, ಬ್ರಾಹ್ಮಣಲಕ್ಷಣ, ನಿಮಂತ್ರಿತ ಬ್ರಾಹ್ಮಣರ ನಿಯಮಗಳನ್ನು, ಪಾಕನಿಯಮಗಳನ್ನು, ಕರ್ತೃವಿನ ಹೆಂಡತಿಯ ನಿಯಮಗಳನ್ನು ಪುಟಸಂಖ್ಯೆ 470ರಲ್ಲಿ ನೋಡಿ ತಿಳಿದುಕೊಳ್ಳತಕ್ಕದ್ದು.

ಸಪಿಂಡೀಕರಣವನ್ನು ನಮ್ಮಲ್ಲಿ ಹೆಚ್ಚಾಗಿ ಮನೆಯ ಪಡುಸಾಲೆಯಲ್ಲೂ ಮಾಡುವ ಸಂಪ್ರದಾಯವಿದೆ ಹಾಗೂ ಸಪಿಂಡೀಕರಣ ಪ್ರಾರಂಭದ ಅನಂತರ ಪಡುಸಾಲೆಗೆ ಹೋದವರು ಸ್ನಾನ ಮಾಡಬೇಕು. ಸಪಿಂಡೀಕರಣವನ್ನು ಮನೆಯ ಹೊರಗಡೆ ಮಾಡುವುದಾದರೆ ಮರೆಮಾಡಿರುವ ಜಾಗದಲ್ಲಿ ಹತ್ತಿರವೇ ಅಡುಗೆ ಶಾಲೆಯನ್ನು ನಿರ್ಮಾಣ ಮಾಡಬೇಕು. ಸಪಿಂಡೀಕರಣ ಮಾಡುವ ಸ್ಥಳವನ್ನು ಗೋಮಯದಿಂದ ಶುದ್ಧಮಾಡಿ ಅದಕ್ಕೆ ಸಂಬಂಧಿಸಿದ ಶ್ರಾದ್ಧಸಾಹಿತ್ಯಗಳನ್ನು ಒಂದು ಬದಿಯಲ್ಲಿ ತೆಗೆದಿಡಬೇಕು. ಯಜಮಾನನು ಸ್ನಾನ ಮಾಡಿ ಗೋಪಿಚಂದನ, ಮುದ್ರಾಧಾರಣೆ ಮಾಡಿ, ನಿತ್ಯಾಹ್ನಿಕವನ್ನು ಮುಗಿಸಬೇಕು. ದೇವರ ಪೂಜಾದಿಗಳನ್ನು ಮಾಡಬಾರದು. ಹವಿಸ್ಸು ಮಾಡಲು ಮನೆಯಲ್ಲಿ ಶ್ರಾದ್ಧಾಧಿಕಾರ ಇರುವ, ಹೆಂಡತಿ ಇಲ್ಲವೇ ಸೊಸೆ ಇದ್ದಲ್ಲಿ ಹವಿಸ್ಸನ್ನು ಇಡಬೇಕು. ಇಲ್ಲದಿದ್ದರೆ ಚಿಕ್ಕಪ್ಪ, ದೊಡ್ಡಪ್ಪ, ಸೋದರಮಾವ, ಭಾವ, ಮಾವ ಯಾರಾದರೂ ಸ್ನಾನಮಾಡಿ ಗೋಪೀಚಂದನಧಾರಣೆ ಮಾಡಿ ಒಬ್ಬರಿಗೆ ಮೂರು ಪಾವಿನಂತೆ ಹವಿಸ್ಸು ಮಾಡಲು ಇಡಬೇಕು. ಅದಕ್ಕೆ ಸ್ವಲ್ಪ ಹೆಸರುಬೇಳೆ ಹಾಕಬೇಕು. ಅನಂತರ ಅವರು ನಿತ್ಯಾಹ್ನಿಕ ಮಾಡಿ ಮನೆಯ ದೇವರ ಪೂಜೆ ಮಾಡಬೇಕು, ಶ್ರಾದ್ಧಕ್ಕೆ ಬೇಕಾಗುವಷ್ಟು ಹೂ, ತುಳಸಿ, ಗರಿಕೆ, ಕಡಲೆಗಾತ್ರದ ಗಂಧದ ಉಂಡೆಗಳನ್ನು ದೇವರಿಗೆ ಸಮರ್ಪಿಸಿ, ಗೋಪಿ, ಯಜ್ಞೋಪವೀತವನ್ನು ದೇವರಿಗೆ ಸಮರ್ಪಿಸಿ ಧೂಪ ದೀಪ ಮಾಡಿ, ನೈವೇದ್ಯಸಮಯದಲ್ಲಿ ದೇವರ ಎದುರು ನೀರಿನಿಂದ ಚೌಕಾಕಾರದ ಮಂಡಲ ಮಾಡಿ ಹವಿಸ್ಸನ್ನು ಮಂಡಲದಲ್ಲಿಟ್ಟು ಶ್ರಾದ್ಧಕ್ಕೆ ಬೇಕಾಗುವಷ್ಟು ಬಾಳೆಹಣ್ಣು, ಪಂಚಾಮೃತದ್ರವ್ಯ, ವೀಳ್ಯದೆಲೆ, ಅಡಕೆಯನ್ನು ಇಟ್ಟು, ಅಕ್ಕಿ, ಎಳ್ಳು, ಜವೆಗೋಧಿ, ಇವುಗಳನ್ನು ತೊಳೆದಿಟ್ಟು ಸಮರ್ಪಣೆ ಮಾಡಿ, ಒಂದು ತುತ್ತಿನಷ್ಟು ಅನ್ನವನ್ನು ಚಿಕ್ಕ ಎಲೆ (ತಟ್ಟೆ)ಯಲ್ಲಿ ಬೇರೆಯೇ ತೆಗೆದಿಟ್ಟು ಅದಕ್ಕೆ ಸ್ವಲ್ಪ ಮೊಸರು ಹಾಕಿ, ತೀರ್ಥ ಹಾಕಿ, **'ವಿಷ್ವಕ್ಸೇನಾಯ ನಮಃ'** ಎಂದು ಸಮರ್ಪಿಸಿ, **'ನೈವೇದ್ಯಂ ವಿಸರ್ಜಯಾಮಿ'** ಎಂದು ನೈವೇದ್ಯವನ್ನು ತೆಗೆದು ಶುದ್ಧಮಾಡಿ, ಜಾಗಂಟೆ ಶಂಖ ಬಾರಿಸದೆ ದೇವರ ಪೂಜೆ ಮಾಡಿ ಶ್ರಾದ್ಧಕ್ಕೆ ಬೇಕಾಗುವಷ್ಟು ದೇವರ ಮೇಲಿನ ಹೂತುಳಸಿ, ಗರಿಕೆ, ಗಂಧವನ್ನು ಹಾಗೂ ಗೋಪಿ, ಯಜ್ಞೋಪವೀತವನ್ನು ತೆಗೆದು, ಹರಿವಾಣದಲ್ಲಿ ಇಟ್ಟು, ದೇವರ ತೀರ್ಥ ಹಾಗೂ ಅಂಗಾರಕದ ತುಂಡನ್ನು ತೆಗೆದಿಡಬೇಕು ಹಾಗೂ ದೇವರಿಗೆ ತುಪ್ಪದ ದೀಪವನ್ನು ಹಚ್ಚಬೇಕು. ಅನಂತರ ಹವಿಸ್ಸಿನಿಂದ ಸ್ವಲ್ಪ ಅನ್ನ

ತೆಗೆದುಕೊಂಡು ವೈಶ್ವದೇವ ಮಾಡಲು ಒಲೆಯ ಬಳಿಗೆ ಬಂದು ಆ ಅನ್ನವನ್ನು ಮೂರು ಪಾಲು ಮಾಡಿ, ಮೊದಲನೆಯ ಪಾಲಿನಿಂದ ಹೋಮವನ್ನು, ಎರಡನೆಯ ಪಾಲಿನಿಂದ ಬಲಿಯನ್ನು ಮಾಡಿ ಪಿತೃಬಲಿವರೆಗೆ ಮಾಡಿ ನಿಲ್ಲಿಸಿ ತೃತೀಯ ಭಾಗದ ಅನ್ನವನ್ನು ಸಪಿಂಡೀಕರಣದ ಬಲಿಹರಣದ ಸಮಯದಲ್ಲಿ ಸೇರಿಸಲು ತೆಗೆದಿಡಬೇಕು. ನಿಮಂತ್ರಿತ ಬ್ರಾಹ್ಮಣರ ನೈವೇದ್ಯವಾಗಿದ್ದಲ್ಲಿ ಅದನ್ನು ಹಿಂದಿನ ಕ್ರಮದಂತೆ, ದೇವರಿಗೆ ಸಮರ್ಪಿಸಿ ಅದಕ್ಕೂ ಬೇರೆ ವೈಶ್ವದೇವ ಮಾಡಬೇಕು. ಒಂದು ವೇಳೆ ಒಳಗೆ ವಿಷ್ಣು ಆರಾಧನೆ ಪ್ರತ್ಯೇಕವಿದ್ದಲ್ಲಿ ಆಗ ಒಳಗಿನ ಸಮರ್ಪಣೆಯ ಸಮಯದಲ್ಲಿ ವೈಶ್ವದೇವ ಮಾಡಬೇಕು.

### ಪುಣ್ಯಾಹವಾಚನಮ್

ಕ್ರಿಯಾಕರ್ತೃಗಳು ಕೈಕಾಲು ತೊಳೆದು ಕರ್ಮವಸ್ತ್ರವನ್ನು ಧರಿಸಿ, ಜಲಪಾತ್ರೆಯಲ್ಲಿ ನೀರು ತಂದು ಪೂರ್ವಾಭಿಮುಖವಾಗಿ ಕುಳಿತು, ಮಂತ್ರಪೂರ್ವಕವಾಗಿ ಆಚಮನ ಮಾಡಿ ಪ್ರಾಣಾಯಾಮ ಮಾಡಿ ನಾಲ್ಕು ಎಳೆಯ ಪವಿತ್ರ ಧರಿಸಿ ಪಂಚಗವ್ಯಪುಣ್ಯಾಹ ಸಂಕಲ್ಪ ಮಾಡಬೇಕು.

**ಗಂಗೇ ಚ ಯಮುನೇ ಚೈವ...... ॥ ಪ್ರಾಣಸ್ಥಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮಾ ..... ಪ್ರೀತ್ಯರ್ಥಮ್** (ಎಡ) **ಅಸ್ಮತ್ಪಿತುಃ ಮೃತಾಹಾತ್ ದ್ವಾದಶೇಽಹನಿ ಸಪಿಂಡೀ ಕರಣಾಂಗ ಮಮ ಪಿತುಃ ಜನನಾತ್ ಮರಣಪರ್ಯಂತಂ ಕೃತ ಜ್ಞಾತಾಜ್ಞಾತಸಮಸ್ತ ಪಾಪಪರಿಹಾರಪೂರ್ವಕ ಮೋಕ್ಷಜ್ಞಾನಪ್ರಾಪ್ತ್ಯರ್ಥಂ** (ಬಲ) **ಸರ್ವಪ್ರಾಯಶ್ಚಿತ್ತ ತಿಲ (ಪವಮಾನ, ಕೂಷ್ಮಾಂಡ) ಹೋಮಕರ್ತುಂ ದೇಹಶುದ್ಧ್ಯರ್ಥಂ ಪಂಚಗವ್ಯಮೇಲನ ಪೂರ್ವಕ ಪುಣ್ಯಾಹವಾಚನಮ್ ಆಚಾರ್ಯಮುಖೇನ ಕಾರಯಿಷ್ಯೇ ॥'** ಆಚಾರ್ಯರಿಂದ ಪುಣ್ಯಾಹ ಮಾಡಿಸಿ, ಪುಣ್ಯಾಹತೀರ್ಥ ಪ್ರಾಶನ ಮಾಡಿ, **'ಋತ್ವಿಗ್ವರಣಂ ಕರಿಷ್ಯೇ ।'** ಎಂದು ಸಂಕಲ್ಪಿಸಿ, ಪ್ರಾಯಶ್ಚಿತ್ತಹೋಮಗಳ ಉದ್ದಿಶ್ಯ ಹಾಗೂ ಅನ್ನಸೂಕ್ತ, ಅಭಿಶ್ರವಣಸೂಕ್ತ ಪಾರಾಯಣಾದಿಗಳ (ಕೆಲವರಲ್ಲಿ ಸಮಪಿಂಡೀಕರಣದಲ್ಲಿ ಅನ್ನಸೂಕ್ತ ಹಾಗೂ ಅಭಿಶ್ರವಣ ಸೂಕ್ತ ಪಠಿಸುವ ನಿಯಮವಿಲ್ಲ) ಉದ್ದೇಶದಿಂದ ಋತ್ವಿಗ್ವರಣೆಯನ್ನು ಕೊಟ್ಟು, ಆಚಮನ ಮಾಡಿ, ಪವಿತ್ರ ಬಿಚ್ಚಿ ಹಾಕಬೇಕು.

## ತೈಲೋದ್ವರ್ತನಮ್

ಕ್ರಿಯಾಕರ್ತೃಗಳು ತುಲಸಿಕಟ್ಟೆಯ ಎದುರು ಪೂರ್ವಾಭಿಮುಖವಾಗಿ ಕುಳಿತು ಆಚಮನ ಪ್ರಾಣಾಯಾಮಗಳನ್ನು ಮಾಡಿ, ಮೂರು ಎಳೆಯ ಹಾಗೂ ಒಂದು ಎಳೆಯ ಪವಿತ್ರ ಪಡೆದು, ಧರಿಸಿ ಸಂಕಲ್ಪ ಮಾಡಬೇಕು.

**ಅದ್ಯ ಪೂರ್ವೋಚ್ಚರಿತ ಪ್ರಾಣಸ್ಥಶ್ರೀಪ್ರಾಜ್ಞರೂಪಿ .....** (ಎಡ) **ಅಸ್ಮತ್ಪಿತುಃ ...ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಪ್ರೇತತ್ವನಿವೃತ್ತ್ಯೋತ್ತಮಲೋಕಾವಾಪ್ತ್ಯರ್ಥಂ ಪಿತಾಮಹ– ಪ್ರಪಿತಾಮಹ–ವೃದ್ಧ–ಪ್ರಪಿತಾಮಹೈಃ ....ಶರ್ಮಭಿಃ ......ಗೋತ್ರೈಃ**

**ವಸುರುದ್ರಾದಿತ್ಯಸ್ವರೂಪೈಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವೈಃ ಸಹ ಸಮಾನೋದಕ ಸಾಪಿಂಡ್ಯ ಸಿದ್ಧಿದ್ವಾರಾ ವಸ್ವಾದಿ ಪುಣ್ಯಲೋಕಾವಾಪ್ತ್ಯರ್ಥಂ ಕರಿಷ್ಯಮಾಣ ಸಪಿಂಡೀಕರಣ ಶ್ರಾದ್ಧಾಂಗತಯಾ ವಿಹಿತಾನಾಂ ಬ್ರಾಹ್ಮಣಾನಾಂ (ಬಲ) ತೈಲೋದ್ವರ್ತನಂ ಕರಿಷ್ಯೇ ॥ (ಕುರುಷ್ವ) ॥**

**(ಅಸ್ಮನ್ಮಾತುಃ .....ಗೋತ್ರಾಯಾಃ .....ನಾಮ್ನ್ಯಾಃ ಪ್ರೇತಾಯಾಃ । .......ಪಿತಾಮಹಿ ಪ್ರಪಿತಾಮಹಿ ವೃದ್ಧಪ್ರಪಿತಾಮಹೀಭಿಃ .....ದಾಭಿಃ .....ಗೋತ್ರಾಭಿಃ .....ರೂಪಾಭಿಃ ಸಹ).** ಇಲ್ಲಿ ಗಂಡುಸರಿಗೆ **'ಶರ್ಮನ್'** ಶಬ್ದ ಬಳಸುವಂತೆ ಹೆಂಗುಸರಿಗೆ **'ದಾ, ಅಭಿಧಾ, ದೇವೀ, ದೇವೀದಾ'** ಶಬ್ದಗಳನ್ನು ಬಳಸಬಹುದು.

ಅಕ್ಕಿ ಹಿಡಿದು,

**ಬ್ರಾಹ್ಮಣೇಭ್ಯೋ ಮಹದ್ಭ್ಯಶ್ಚ ವೇದವಿದ್ಭ್ಯೋ ವಿಶೇಷತಃ ।**
**ಪುರಾಣಶಾಸ್ತ್ರವಿದ್ಭ್ಯಶ್ಚ ಸರ್ವೇಭ್ಯೋ ವೈ ನಮೋ ನಮಃ ॥**

ಬ್ರಾಹ್ಮಣರಿಗೆ ಹಾಕಿ ಕೈಮುಗಿದು, ಪಶ್ಚಿಮಕ್ಕೆ ಮುಖ ಮಾಡಿ ನಿಂತು, ತನ್ನ ಎದುರು ರಂಗೋಲಿಯಿಂದ ಚೌಕಾಕಾರದ ಮಂಡಲ ಮಾಡಿ,

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಶ್ರೀರ್ಹುತಾಶನ ಏವ ಚ ।**
**ಮಂಡಲಾನ್ಯಧಿತಿಷ್ಠಂತಿ ತಸ್ಮಾತ್ ಕುರ್ವೀತ ಮಂಡಲಮ್ ॥**










ನೈಋತ್ಯದಿಂದ ಆರಂಭಿಸಿ ನಾಲ್ಕು ದಿಕ್ಕುಗಳಲ್ಲಿ ಗೆರೆಯು ಪ್ರದಕ್ಷಿಣಾಕಾರವಾಗಿ ಬಂದು ಆ ಗೆರೆ ವಕ್ರವಾಗಿ ಈಶಾನ್ಯಕ್ಕೆ ಮುಗಿಯಬೇಕು. ಮಣೆ ಇಟ್ಟು ಅದರ ಹಿಂದೆ ಪೂರ್ವ ಮುಖವಾಗಿ ವಿಶ್ವೇದೇವ ಸ್ಥಾನದ ಬ್ರಾಹ್ಮಣರನ್ನು ನಿಲ್ಲಿಸಿ, ಎರಡು ದರ್ಭೆ ಹಿಡಿದು,

**ಅಸ್ಮತ್ಪಿತುಃ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ದ್ವಾದಶೇಽಹನಿ ಕರಿಷ್ಯಮಾಣ ಸಪಿಂಡೀಕರಣಶ್ರಾದ್ಧೇ ಕಾಮಕಾಲಸಂಜ್ಞಕ ವಿಶ್ವೇಷಾಂ ದೇವಾನಾಮಂತರ್ಯಾಮಿ ಪ್ರಾಣಸ್ಥನಾರಾಯಣಾನಿರುದ್ಧಯೋರಿದಮಾಸನಮ್ ॥**

–ಎಂದು ಮಣೆಯ ಮೇಲೆ ಪೂರ್ವಾಗ್ರವಾಗಿಡಬೇಕು. ಬ್ರಾಹ್ಮಣರ ಕೈಯ ಹೆಬ್ಬೆರಳು ಹಿಡಿದು, **'ಅಸ್ಮತ್ಪಿತುಃ .....ಪ್ರಾಣಸ್ಥನಾರಾಯಣಾನಿರುದ್ಧಯೋರಭ್ಯಂಜನಾರ್ಥೇ ಅಯಂ ತೇ ಕ್ಷಣಃ ॥'** –ಎಂದು ಮಣೆಯಲ್ಲಿ ಕೂರಿಸಬೇಕು. ಬ್ರಾಹ್ಮಣರು ಮಣೆಯಲ್ಲಿ ಕುಳಿತಾಗ ಅವರ ಕಾಲು ನೆಲಕ್ಕೆ ಮುಟ್ಟಿರಬೇಕು.

ಅನಂತರ ಎರಡು ಬಾಳೆಎಲೆಯ ದೊಣ್ಣೆಯಲ್ಲಿ ಆರು ಚಮಚ ಎಳ್ಳೆಣ್ಣೆಯನ್ನು ಹಾಕಿ, ಗರಿಕೆ ಇಟ್ಟು, ಗರಿಕೆಯಿಂದ ಎಳ್ಳೆಣ್ಣೆಯನ್ನು ನೆಲಕ್ಕೆ ಮತ್ತು ಬ್ರಾಹ್ಮಣರ ಹಣೆಯ ಬಲಭಾಗಕ್ಕೆ ಹಚ್ಚಬೇಕು. ಅನಂತರ ಆ ದೊಣ್ಣೆಗೆ ನಾಣ್ಯ ಹಾಕಿ ದೊಣ್ಣೆಯನ್ನು ಎತ್ತಿಹಿಡಿದು, **'ಅಸ್ಮತ್ಪಿತುಃ .....ಪ್ರಾಣಸ್ಥನಾರಾಯಣಾನಿರುದ್ಧಯೋರಿದಂ ತೇ ತೈಲಮ್ ॥'** ಎಂದು ಬ್ರಾಹ್ಮಣರ ಕೈಯಲ್ಲಿ ಕೊಟ್ಟು ಒಂದು ಜೊತೆ ಬಟ್ಟೆ, ಹರಿವಾಣ, ತಂಬಿಗೆ, ಕೌಳಿಗೆ ಸೌಟು, ಇಡಿಅಡಿಕೆ, ಎರಡು ಉದ್ದದ ದರ್ಭೆ, ಒಂದು ಗೋಪಿ, ಎರಡು ಜನಿವಾರ, ದಕ್ಷಿಣೆ ಕೊಡಬೇಕು. (ಸೂಚನೆ : ವಸ್ತ್ರಾದಿಗಳನ್ನು ಇಲ್ಲಿ ಕೊಟ್ಟಲ್ಲಿ ಒಳಗಿನ ಪಾದಾರಾಧನೆಯ ಸಂದರ್ಭದಲ್ಲಿ ಪುನಃ ಕೊಡಬೇಕಾಗಿಲ್ಲ.)

(ಎಡ) ದಕ್ಷಿಣಕ್ಕೆ ಮುಖಮಾಡಿ, ತುಲಸಿಕಟ್ಟೆಯ ದಕ್ಷಿಣದಿಕ್ಕಿನಲ್ಲಿ ತನ್ನೆದುರು ರಂಗೋಲಿಯಿಂದ ಅಪ್ರದಕ್ಷಿಣಾಕಾರವಾಗಿ, ದಕ್ಷಿಣಾಗ್ರವಾಗಿರುವ ತ್ರಿಕೋನಾಕಾರದ ಮಂಡಲ ಬರೆದು, ಮಣೆಹಾಕಿ, ಪ್ರೇತಬ್ರಾಹ್ಮಣರನ್ನು ಆಹ್ವಾನಿಸಿ, ಉತ್ತರಾಭಿಮುಖವಾಗಿ ನಿಲ್ಲಿಸಿ ಒಂದು ದರ್ಭೆ ಹಿಡಿದು, **'ಪಿತುಃ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಪ್ರಾಣಸ್ಥಪ್ರಾಜ್ಞಸ್ಯ ಇದಮಾಸನಮ್ ॥'** ಎಂದು ದಕ್ಷಿಣಾಗ್ರವಾಗಿ ಮಣೆಯ ಮೇಲೆ ಇಟ್ಟು, ಬ್ರಾಹ್ಮಣರ ಕೈಯ ಹೆಬ್ಬೆರಳು ಹಿಡಿದು, **'ಪಿತುಃ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಅಭ್ಯಂಜನಾರ್ಥೇ ಇದಂ ತೇ ಕ್ಷಣಃ ॥'** ಎಂದು ಮಣೆಯಲ್ಲಿ ಕೂರಿಸಿ (ಕೆಲವರಲ್ಲಿ ನಿಲ್ಲಿಸಿ) ಒಂದು ಬಾಳೆಎಲೆಯ ದೊಣ್ಣೆಗೆ ಆರು ಚಮಚೆ ಎಳ್ಳೆಣ್ಣೆಯನ್ನು ಹಾಕಿ, ಗರಿಕೆ ಇಟ್ಟು, ಗರಿಕೆಯಿಂದ ಎಳ್ಳೆಣ್ಣೆಯನ್ನು ನೆಲಕ್ಕೆ ಮತ್ತು ಬ್ರಾಹ್ಮಣರ ಹಣೆಯ ಎಡಭಾಗಕ್ಕೆ ಹಚ್ಚಿ, ದೊಣ್ಣೆಗೆ ನಾಣ್ಯ ಹಾಕಿ ದೊಣ್ಣೆಯನ್ನು ಎತ್ತಿ ಹಿಡಿದು,

**ಅಸ್ಮತ್ಪಿತುಃ .....ಪ್ರೇತಾಯ ಅಭ್ಯಂಜನಾರ್ಥೇ ಇದಂ ತೇ ತೈಲಮ್ ॥**

–ಎಂದು ಅವರ ಕೈಯಲ್ಲಿ ಕೊಟ್ಟು (ತನ್ನ ಕೈತೊಳೆದುಕೊಂಡು) ವಸ್ತ್ರಾದಿಗಳನ್ನು ಕೊಡಬೇಕು. ಅನಂತರ, ತುಲಸಿಕಟ್ಟೆಯ ದಕ್ಷಿಣದಿಕ್ಕಿನಲ್ಲಿ ಪ್ರೇತಸ್ಥಾನದ ಪೂರ್ವಭಾಗದಲ್ಲಿ ರಂಗೋಲಿಯಿಂದ ಅಪ್ರದಕ್ಷಿಣಾಕಾರವಾಗಿ ವೃತ್ತಾಕಾರದ ಮಂಡಲ ಮಾಡಿ,

**ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾಸ್ಸಪೈತೃಕಾಃ ॥**
**ಮಂಡಲೇ ಚೋಪತಿಷ್ಠಂತಿ ತಸ್ಮಾತ್ ಕುರ್ವೀತ ಮಂಡಲಮ್ ॥**

ವೃತ್ತಾಕಾರಮಂಡಲವು ಈಶಾನ್ಯದಿಂದ ಆರಂಭಿಸಿ ಅಪ್ರದಕ್ಷಿಣೆಯಾಗಿ ಪುನಃ ಈಶಾನ್ಯಕ್ಕೆ ಬಂದು ವಕ್ರವಾಗಿ ನೈಋತ್ಯದಿಕ್ಕಿನಲ್ಲಿ ಮುಗಿಯಬೇಕು. ಉತ್ತರಕ್ಕೆ ಮುಖ ಮಾಡಿ, ಮಣೆ ಹಾಕಿ, ಪಿತೃಸ್ಥಾನದ ಬ್ರಾಹ್ಮಣರನ್ನು ಆಹ್ವಾನಿಸಿ, ಉತ್ತರಾಭಿಮುಖವಾಗಿ ನಿಲ್ಲಿಸಿ, ಮೂರು ದರ್ಭೆಗಳನ್ನು ದಕ್ಷಿಣಾಗ್ರವಾಗಿ ಹಿಡಿದು, **'ಅಸ್ಮತ್ಪಿತುಃ .....ವಾಸುದೇವಾನಾಂ ಇದಮಾ–ಸನಮ್ ॥'** –ಎಂದು ದರ್ಭೆಯನ್ನು ಮಣೆಯ ಮೇಲೆ ಇಟ್ಟು, ಬ್ರಾಹ್ಮಣರ ಕೈಯ ಹೆಬ್ಬೆರಳು ಹಿಡಿದು, **'ಅಸ್ಮತ್ಪಿತುಃ ..... ಪಿತಾಮಹಪ್ರಪಿತಾಮಹವೃದ್ಧಪ್ರಪಿತಾಮಹಾನಾಂ ಪ್ರಾಣಸ್ಥಪ್ರದ್ಯುಮ್ನಸಂಕರ್ಷಣವಾಸುದೇವಾನಾಮಭ್ಯಂಜನಾರ್ಥೇ ಅಯಂ ವಃ ಕ್ಷಣಃ ॥'**

ಎಂದು ಮಣೆಯಲ್ಲಿ ಕುಳ್ಳಿರಿಸಿ, ಅನಂತರ ಮೂರು ಬಾಳೆಎಲೆಯ ದೊಣ್ಣೆಗೆ ಆರು ಚಮಚೆ ಎಳ್ಳೆಣ್ಣೆಯನ್ನು ಹಾಕಿ, ಗರಿಕೆ ಇಟ್ಟು ಗರಿಕೆಯಿಂದ ಎಳ್ಳೆಣ್ಣೆಯನ್ನು ನೆಲಕ್ಕೆ ಮತ್ತು ಬ್ರಾಹ್ಮಣರ ಹಣೆಯ ಎಡಭಾಗಕ್ಕೆ ಹಚ್ಚಿ ದೊಣ್ಣೆಗೆ ನಾಣ್ಯಹಾಕಿ ದೊಣ್ಣೆಯನ್ನು ಎತ್ತಿಹಿಡಿದು, **'ಅಸ್ಮತ್ಪಿತುಃ ......ವಾಸುದೇವೇಭ್ಯಃ ಅಂಜನಾರ್ಥೇ ಇದಂ ವಸ್ತ್ರೈಲಮ್ ॥'** ಎಂದು ಬ್ರಾಹ್ಮಣರ ಕೈಯಲ್ಲಿ ಕೊಟ್ಟು (ತನ್ನ ಕೈತೊಳೆದು) ವಸ್ತ್ರಾದಿಗಳನ್ನು ಕೊಡಬೇಕು. (ಬಲ) ಅಕ್ಕಿಕಾಳು ಹಿಡಿದು, **'ಅನಾದಿ.... ಪ್ರದೋ ಭವ'** ಮಂತ್ರದಿಂದ ಬ್ರಾಹ್ಮಣರಿಗೆ ಅಕ್ಷತೆ ಹಾಕಿ ಪ್ರಾರ್ಥಿಸಬೇಕು. ಅನಂತರ ಪೂರ್ವಾಭಿಮುಖವಾಗಿ ಕುಳಿತು,

**ತೈಲೋದ್ವರ್ತನ ಕರ್ಮಣಾ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥**

ಆಚಮನ ಮಾಡಿ, ಪವಿತ್ರ ಬಿಚ್ಚಿ ಹಾಕಬೇಕು. ಅನಂತರ ಪಿಂಡದ ಮೇಲೆ ಇಡುವ ಬಟ್ಟೆಯನ್ನು ಹಾಗೂ ನೀರಿಗೆ ಪಾತ್ರವನ್ನು, ಜಲಪಾತ್ರೆಯನ್ನು ಹಿಡಿದು ಕನಿಷ್ಠಪೂರ್ವಕರಾಗಿ ಹಾಗೂ ಅವರನ್ನು ಹಿಂಬಾಲಿಸಿ ಮೂರು ಸ್ಥಾನದ ಬ್ರಾಹ್ಮಣರು ದಾನ ಕೊಟ್ಟ ವಸ್ತ್ರಾದಿಗಳೊಂದಿಗೆ ಹೊಳೆ(ಕೆರೆ/ಬಾವಿ)ಗೆ ಹೋಗಿ ಸ್ನಾನಮಾಡಿ, ಪಿಂಡದ ಬಟ್ಟೆಯನ್ನು ಒದ್ದೆ ಮಾಡಿ ಬದಿಗಿಟ್ಟು ಮೈಒರಸಿ, ಶಿಖಾಬಂಧನ ಮಾಡಿ, ಗೋಪಿಚಂದನ ಮುದ್ರಾಧಾರಣೆ ಮಾಡಿ ತಮ್ಮ ಜಲಪಾತ್ರೆಯಲ್ಲಿ ಹಾಗೂ ಪಾತ್ರೆಯಲ್ಲಿ ನೀರು ಹಿಡಿದುಕೊಂಡು, ಒದ್ದೆ ಮಾಡಿದ ಪಿಂಡದ ಬಟ್ಟೆಯೊಂದಿಗೆ ಕನಿಷ್ಠಪೂರ್ವಕರಾಗಿ ಮನೆಗೆ ಬರಬೇಕು. ಅನಂತರ ಬ್ರಾಹ್ಮಣರು ಸ್ನಾನ ಮಾಡಿ ಗೋಪೀಚಂದನ ಮುದ್ರಾಧಾರಣೆ ಮಾಡಿಕೊಂಡು ನೂತನ ವಸ್ತ್ರ ಧರಿಸಿ, ನೀರನ್ನು ಹಿಡಿದುಕೊಂಡು ಮನೆಯನ್ನು ಪ್ರವೇಶಿಸಬೇಕು.

## ಸಪಿಂಡೀಕರಣಶ್ರಾದ್ಧವಿಧಿಃ

ಪೂರ್ವಕ್ಕೆ ಮುಖ ಮಾಡಿ ಕುಳಿತು ಆಚಮನೀಯಪಾತ್ರೆಯ ನೀರಿನಿಂದ ಆಚಮನ, ಮಾಡಿ, ಪ್ರಾಣಾಯಾಮಗಳನ್ನು ಮಾಡಿ, ಆಸನಶುದ್ಧಿ, ಭೂಶುದ್ಧಿ, ಗುರುವಂದನೆ, ಕರಶುದ್ಧಿ, ಪಾಪಪುರುಷನಿರಸನ, ಪುಣ್ಯಪುರುಷ ಪ್ರಾರ್ಥನೆ ಮಾಡಿ, ಆಚಾರ್ಯರಿಂದ–

**ಓಂ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ । ಅತಪ್ತತನೂರ್ನ ತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ ಸಮಾಶತ ॥**–ಎಂದು ಮಂತ್ರಪೂರ್ವಕವಾಗಿ ಮೂರು ಎಳೆಯ ನಾಲ್ಕು ಪವಿತ್ರಗಳನ್ನು ಹಾಗೂ ಒಂದು ಎಳೆಯ ಮೂರು ಪವಿತ್ರಗಳನ್ನು ಪಡೆದು ಮೂರೆಳೆಯ ಹಾಗೂ ಒಂದೆಳೆಯ ಒಂದೊಂದು ಪವಿತ್ರವನ್ನು ಅನಾಮಿಕ(ಉಂಗುರ)ಬೆರಳಿನಲ್ಲಿ ಧರಿಸಿ, ಮೂರು ಎಳೆಯ ಎರಡು ಪವಿತ್ರಗಳನ್ನೂ ಒಂದು ಎಳೆಯ ಎರಡು ಪವಿತ್ರಗಳನ್ನೂ ಬದಿಯಲ್ಲಿಡ ಬೇಕು. (ಕೆಲವರಲ್ಲಿ ಮೂರು ಎಳೆಯ ಐದು ಪವಿತ್ರಗಳನ್ನು ಕೊಡುವ ಕ್ರಮವಿದೆ.)




| | | | |
|---|---|---|---|
| 1. ಜಲಪಾತ್ರ | 5. ಪ್ರೇತಸ್ಥಾನ | 9. ಕಮಂಡಲು | 13. ಪ್ರೇತಪಿಂಡಸ್ಥಾನ |
| 2. ಪಿತ್ರರ್ಘ್ಯಪಾತ್ರೆ | 6. ಸ್ವಸ್ತಿಕೆ | 10. ಪಿಂಡಸ್ಥಳ | 14. ಪ್ರೇತಾರ್ಘ್ಯಪಾತ್ರೆ |
| 3. ಪುರೋಹಿತರು | 7. ವಿಕಿರಬಲಿ | 11. ಏರಕ | |
| 4. ಪಿತೃಸ್ಥಾನ | 8. ವಿಶ್ವೇದೇವಸ್ಥಾನ | 12. ಪ್ರೇತಕಮಂಡಲು | |

**ಸಂಕಲ್ಪಃ**

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಚಂದ್ರಭಾಗೇ ಚ ಕೌಶಿಕಿ ॥

ಸ್ವರ್ಣಲೇಖೇ ಕನಖಲೇ ಪಾರಿಭದ್ರೇ ಚ ಗಂಡಕಿ ।
ಶ್ವೇತಗಂಗೇ ಚಂದ್ರರೇಖೇ ಪಂಪೇ ಚಂಪೇ ಚ ಗೋಮತಿ ॥

ಪದ್ಮಾವತಿ ವಿಪರ್ಣಾಶೇ ವಿಪಾಶೇ ವಿರಜೇ ಪ್ರಭೇ ।
ಶತಹ್ರದೇ ಚೇಲಗಂಗೇ ಜಲೇಽಸ್ಮಿನ್ ಸನ್ನಿಧಿಂ ಕುರು ॥

........ ವಿಷ್ಣುಪುಣ್ಯತಿಥೌ ..... ಪ್ರಾಣಸ್ಥಶ್ರೀಪ್ರಾಜ್ಞರೂಪಿ .... (ಎಡ) ಅಸ್ಮತ್ಪಿತುಃ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಂ ಪಿತಾಮಹಪ್ರಪಿತಾಮಹವೃದ್ಧಪ್ರಪಿತಾಮಹೈಃ .......ಶರ್ಮಭಿಃ .......ಗೋತ್ರೈಃ ವಸುರುದ್ರಾದಿತ್ಯಸ್ವರೂಪೈಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವೈಃ ಸಹ ಸಮಾನೋದಕಸಾಪಿಂಡ್ಯಸಿದ್ಧಿದ್ವಾರಾ ವಸ್ವಾದಿ ಪುಣ್ಯಲೋಕಾ

ವಾಪ್ತ್ಯರ್ಥಂ (ಬಲ) ಕಾಮಕಾಲಸಂಜ್ಞಕವಿಶ್ವೇದವಾಂತರ್ಯಾಮಿ ಪ್ರಾಣಸ್ಥ ನಾರಾಯಣಾನಿರುದ್ಧಪ್ರೀತ್ಯರ್ಥಂ ಸಪಿಂಡೀಕರಣಶ್ರಾದ್ಧಾಖ್ಯಂ ಕರ್ಮ ಕರಿಷ್ಯೇ ॥

## ಜಲಪಾತ್ರಸ್ಥಾಪನಮ್

**ತದಂಗತಯಾ ಜಲಪಾತ್ರಸ್ಥಾಪನಪೂರ್ವಕ ವೈಶ್ವದೇವಾದಿಸೂಕ್ತಪಠನಂ ಕರಿಷ್ಯೇ ॥**

ಕ್ರಿಯಾಕರ್ತೃಗಳು ಜಲಪಾತ್ರಸ್ಥಾಪನೆಗೆ ತಮ್ಮ ಜಲಪಾತ್ರೆಯನ್ನೇ ಬಳಸಬೇಕು. ತಮ್ಮ ಎಡಭಾಗದಲ್ಲಿ ನೀರಿನಿಂದ ಚೌಕಾಕಾರದ ಮಂಡಲ ಮಾಡಿ ಅದರ ಮೇಲೆ ಎರಡು ದರ್ಭೆಗಳನ್ನು ಪೂರ್ವಾಗ್ರವಾಗಿಟ್ಟು ಅದರ ಮೇಲೆ ಸ್ವಲ್ಪ ಅಕ್ಕಿ ಹಾಕಿ ತಮ್ಮ ಜಲಪಾತ್ರೆಯನ್ನು ಅಂಗಾತವಾಗಿ ಮಂಡಲದಲ್ಲಿಟ್ಟು, ೨೧ ಎಳೆಯ ದರ್ಭೆಗಳಿಂದ ಮಾಡಿದ ಜಲಕೂರ್ಚವನ್ನು ಜಲಪಾತ್ರೆಯ ಮೇಲೆ ಇಡಬೇಕು.

**ಓಂ ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ । ಯಚ್ಛಾ ನಃ ಶರ್ಮ ಸಪ್ರಥಾಃ ॥** ಎಂದು ಭೂಮಿಯನ್ನು ಪ್ರಾರ್ಥಿಸಿ,

ಕೈಯಲ್ಲಿ ನೀರು ಹಿಡಿದು '**ಓಂ ಭೂರ್ಭುವಃಸ್ವಃ ॥**' ಎಂದು ಜಲಪಾತ್ರೆಗೆ ಪ್ರೋಕ್ಷಣೆ ಮಾಡಿ, ಜಲಕೂರ್ಚವನ್ನು ಬದಿಗಿಟ್ಟು,

**ಓಮ್ ಇದಂ ತೇ ಪಾತ್ರಂ ಸನವಿತ್ತಮಿಂದ್ರ ಪಿಬಾ ಸೋಮಮೇನಾ ಶತಕ್ರತೋ । ಪೂರ್ಣ ಆಹಾವೋ ಮದಿರಸ್ಯ ಮಧ್ವೋ ಯಂ ವಿಶ್ವ ಇದಭಿಹರ್ಯಂತಿ ದೇವಾಃ ॥** –ಜಲಪಾತ್ರೆಯನ್ನು ಮೇಲ್ಮುಖವಾಗಿಟ್ಟು ಪುನಃ ಪ್ರೋಕ್ಷಣೆ ಮಾಡಿ,

**ಓಮ್ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣಿಯಾ । ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾಽಽರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥** –ಎಂದು ಜಲಪಾತ್ರೆಗೆ ನೀರು ಹಾಕಬೇಕು.

**ಓಂ ಶರಾಸಃ ಕುಶರಾಸೋ ದರ್ಭಾಸಃ ಸೈರ್ಯಾ ಉತ । ಮೌಂಜಾ ಅದೃಷ್ಟಾ ವೈರಿಣಾಃ ಸರ್ವೇ ಸಾಕಂ ನ್ಯಲಿಪ್ಸತ ॥** –ಬದಿಗಿಟ್ಟಿರುವ ಜಲಕೂರ್ಚದ ಗಂಟು ಕೆಳಮುಖವಾಗಿರುವಂತೆ ಜಲಪಾತ್ರೆಯೊಳಗಿಟ್ಟು,

ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ ।
ಈಶ್ವರೀಂ ಸರ್ವಭೂತಾನಾಂ ತಾಮಿ ಹೋಪ ಹ್ವಯೇ ಶ್ರಿಯಮ್ ॥

– ಎಂದು ಗಂಧ ಹಾಕಿ,

ಓಮ್ ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ । ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥ –ಎಂದು ಅಕ್ಷತೆ ಹಾಕಿ,

ಓಮ್ ಆಯನೇ ತೇ ಪರಾಯಣೇ ದೂರ್ವಾ ರೋಹಂತು ಪುಷ್ಪಿಣೀಃ । ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ॥ –ಎಂದು ಪುಷ್ಪ ಹಾಕಿ,

ಓಂ ಕಾಂಡಾತ್ಕಾಂಡಾತ್ ಪ್ರರೋಹಂತೀ ಪರುಷಃ ಪರುಷಃ ಪರಿ । ಏವಾ ನೋ ದೂರ್ವೇ ಪ್ರ ತನು ಸಹಸ್ರೇಣ ಶತೇನ ಚ ॥ –ಎಂದು ಗರಿಕೆ ಹಾಕಿ,

ಓಮ್ ಅರ್ವಾಚೀ ಸುಭಗೇ ಭವ ಸೀತೇ ವಂದಾಮಹೇ ತ್ವಾ । ಯಥಾ ನಃ ಸುಭಗಾಸಸಿ ಯಥಾ ನಃ ಸುಫಲಾಸಸಿ ॥ –ಎಂದು ತುಳಸಿ ಹಾಕಿ,

ಓಷಧೀಃ ಪ್ರತಿ ಮೋದಧ್ವಂ ಪುಷ್ಪವತೀಃ ಪ್ರಸೂವರೀಃ । ಅಶ್ವಾ ಇವ ಸಜಿತ್ವರೀರ್ವೀರುಧಃ ಪಾರಯಿಷ್ಣ್ವಃ ॥

ಯವೋಽಸಿ ಧಾನ್ಯರಾಜೋ ವಾ ವಾರುಣೋ ಮಧುಸಂಯುತಃ ।
ನಿರ್ಣೋದಃ ಸರ್ವಪಾಪಾನಾಂ ಪವಿತ್ರಮೃಷಿಭಿಸ್ಮೃತಮ್ ॥

– ಎಂದು ಯವೆಗೋಧಿ (ಇಲ್ಲವೇ ಭತ್ತ) ಹಾಕಿ,

ಓಂ ಹಿರಣ್ಯರೂಪಃ ಸ ಹಿರಣ್ಯಸಂದೃಗಪಾಂ ನಪಾತ್ಸೇದು ಹಿರಣ್ಯವರ್ಣಃ । ಹಿರಣ್ಯಯಾತ್ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ ॥ –ಎಂದು ಹಿರಣ್ಯ ಹಾಕಿ, ಕಲಶವನ್ನು ಮುಟ್ಟಿಕೊಂಡು,

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥ ೧ ॥

ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥ ೨ ॥

ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬುಸಮಾಶ್ರಿತಾಃ ।
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ ।
ಆಯಾಂತು ಪಿತೃಕಾರ್ಯಾರ್ಥಂ ದುರಿತಕ್ಷಯಕಾರಕಾಃ ॥ ೩ ॥

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥

ಗಂಗಾ ಗೋದಾವರೀ ಕೃಷ್ಣಾ ಪ್ರಯಾಗಾ ದ್ವಾರಕಾ ತಥಾ ।
ಆವಾಹ್ಯ ಪಂಚಗಂಗಾಶ್ಚ ಸರ್ವಪಾಪಹರಾ ಶುಭಾಃ ॥

ಜಲಪಾತ್ರೇ ಗಂಧಪುಷ್ಪಾಕ್ಷತೈಃ ಸ್ವಾಹಾ ನ ಮಮ । ಜಲಪಾತ್ರಂ ಸಂಪನ್ನಮ್ ॥ (ಸುಸಂಪನ್ನಮ್)

ಅನಂತರ ಕಲಶವನ್ನು ಮುಟ್ಟಿಕೊಂಡು ಸೂಕ್ತಗಳ ಜಪಮಾಡಬೇಕು.

ಓಂ ಭೂರ್ಭುವಃಸ್ವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್ ॥

ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್ ॥ ೧ ॥ ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ । ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೨ ॥ ಏತಾವಾನಸ್ಯ ಮಹಿಮಾಽತೋ ಜ್ಯಾಯಾಁಶ್ಚ ಪೂರುಷಃ । ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೩ ॥ ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವತ್ಪುನಃ । ತತೋ ವಿಷ್ವಙ್ ವ್ಯಕ್ರಾಮತ್ ಸಾಶನಾನಶನೇ ಅಭಿ ॥ ೪ ॥ ತಸ್ಮಾದ್ವಿರಾಳಜಾಯತ ವಿರಾಜೋ ಅಧಿ

ಪೂರುಷಃ । ಸ ಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ ॥ ೫ ॥
ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ । ವಸಂತೋ
ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ೬ ॥ ತಂ ಯಜ್ಞಂ ಬರ್ಹಿಷಿ
ಪ್ರೌಕ್ಷನ್ ಪುರುಷಂ ಜಾತಮಗ್ರತಃ । ತೇನ ದೇವಾ ಅಯಜಂತ ಸಾಧ್ಯಾ
ಋಷಯಶ್ಚ ಯೇ ॥ ೭ ॥ ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ ಪೃಷದಾಜ್ಯಮ್ ।
ಪಶೂನ್ ತಾꣳಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚ ಯೇ ॥ ೮ ॥
ತಸ್ಮಾದ್ಯಜ್ಞಾತ್ಸರ್ವಹುತ ಋಚಃ ಸಾಮಾನಿ ಜಜ್ಞಿರೇ । ಛಂದಾಂಸಿ ಜಜ್ಞಿರೇ
ತಸ್ಮಾದ್ಯಜುಸ್ತಸ್ಮಾದಜಾಯತ ॥ ೯ ॥ ತಸ್ಮಾದಶ್ವಾ ಅಜಾಯಂತ ಯೇ ಕೇ
ಚೋಭಯಾದತಃ । ಗಾವೋ ಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ
॥ ೧೦ ॥ ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ । ಮುಖಂ ಕಿಮಸ್ಯ
ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ ॥ ೧೧ ॥ ಬ್ರಾಹ್ಮಣೋಽಸ್ಯ
ಮುಖಮಾಸೀದ್ಬಾಹೂ ರಾಜನ್ಯಃ ಕೃತಃ । ಊರೂ ತದಸ್ಯ ಯದ್ವೈಶ್ಯಃ
ಪದ್ಭ್ಯಾಂ ಶೂದ್ರೋ ಅಜಾಯತ ॥ ೧೨ ॥ ಚಂದ್ರಮಾ ಮನಸೋ
ಜಾತಶ್ಚಕ್ಷೋಃ ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾ-
ಯುರಜಾಯತ ॥ ೧೩ ॥ ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ
ಸಮವರ್ತತ । ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾꣳ ಅಕಲ್ಪಯನ್
॥ ೧೪ ॥ ಸಪ್ತಾಸ್ಯಾಸನ್ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ । ದೇವಾ ಯದ್ಯಜ್ಞಂ
ತನ್ವಾನಾ ಅಬಧ್ನನ್ಪುರುಷಂ ಪಶುಮ್ ॥ ೧೫ ॥ ಯಜ್ಞೇನ ಯಜ್ಞಮಯಜಂತ
ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ
ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ ೧೬ ॥

ಓಮ್ ಅಗ್ನಿಮೀಳೇ ಪುರೋಽಹಿತಂ ಯಜ್ಞಸ್ಯ ದೇವಮೃತ್ವಿಜಮ್। ಹೋತಾರಂ ರತ್ನಧಾತಮಮ್ ॥

ಓಂ ಸಮಾನೀವ ಆಕೂತಿಃ ಸಮಾನಾ ಹೃದಯಾನಿ ವಃ। ಸಮಾನಮಸ್ತು ವೋ ಮನೋ ಯಥಾ ವಸ್ಸುಸಹಾ ಸತಿ ॥

ಓಮ್ ಇಷೇ ತ್ವೋರ್ಜೇ ತ್ವಾ ವಾಯವಃ ಸ್ಥೋಪಾಯವಃ ಸ್ಥ ದೇವೋ ವಃ ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣ ಆ ಪ್ಯಾಯಧ್ವ ಮಘ್ನಿಯಾ ದೇವಭಾಗಮೂರ್ಜಸ್ವತೀಃ ಪಯಸ್ವತೀಃ ಪ್ರಜಾವತೀರನಮೀವಾ ಅಯಕ್ಷ್ಮಾ ಮಾ ವಃ ಸ್ತೇನ ಈಶತ ಮಾಽಘಶಗ್ಂಸೋ ರುದ್ರಸ್ಯ ಹೇತಿಃ ಪರಿ ವೋ ವೃಣಕ್ತು ಧ್ರುವಾ ಅಸ್ಮಿನ್ ಗೋಪತೌ ಸ್ಯಾತ ಬಹ್ವೀರ್ಯಜಮಾನಸ್ಯ ಪಶೂನ್ ಪಾಹಿ ॥

ಓಂ ಯೋ ವಾ ಅಶ್ವಸ್ಯ ಮೇಧ್ಯಸ್ಯ ಶಿರೋ ವೇದ ಶೀರ್ಷಣ್ವಾನ್ಮೇಧ್ಯೋ ಭವತ್ಯುಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃಸೂರ್ಯಶ್ಚಕ್ಷುರ್ವಾತಃ ಪ್ರಾಣ-ಶ್ಚಂದ್ರಮಾಃ ಶ್ರೋತ್ರಂ ದಿಶಃ ಪಾದಾ ಅವಾಂತರದಿಶಾಃ ಪರ್ಶವೋಽಹೋ-ರಾತ್ರೇ ನಿಮೇಷೋಽರ್ಧಮಾಸಾಃ ಪರ್ವಾಣಿ ಮಾಸಾಃ ಸಂಧಾನಾನ್ಯೃತ-ವೋಽಂಗಾನಿ ಸಂವತ್ಸರ ಆತ್ಮಾ ರಶ್ಮಯಃ ಕೇಶಾ ನಕ್ಷತ್ರಾಣಿ ರೂಪಂ ತಾರಕಾ ಅಸ್ಥಾನಿ ನಮೋ ಮಾಗ್ಂ ಸಾನ್ಯೋಷಧಯೋ ಲೋಮಾನಿ ವನಸ್ಪತಯೋ ವಾಲಾ ಅಗ್ನಿರ್ಮುಖಂ ವೈಶ್ವಾನರೋ ವ್ಯಾತ್ತಂ ಸಮುದ್ರ ಉದರಮಂತರಿಕ್ಷಂ ಪಾಯುರ್ದ್ಯಾವಾ ಪೃಥಿವೀ ಆಂಡೌ ಗ್ರಾವಾ ಶೇಪಃ ಸೋಮೋ ರೇತೋ ಯಜ್ಜಂಜಭ್ಯತೇ ತದ್ವಿದ್ಯೋತತೇ ಯದ್ವಿ ಧೂನುತೇ ತತ್ ಸ್ತನಯತಿ ಯನ್ಮೇಹತಿ ತದ್ವರ್ಷತಿ ವಾಗೇವಾಸ್ಯ ವಾಗಹರ್ವಾ ಅಶ್ವಸ್ಯ ಜಾಯಮಾನಸ್ಯ

ಮಹಿಮಾ ಪುರಸ್ತಾಜ್ಜಾಯತೇ ರಾತ್ರಿರೇನಂ ಮಹಿಮಾ ಪಶ್ಚಾದನುಜಾಯತ ಏತೋ ವೈ ಮಹಿಮಾನಾವಶ್ವಮಭಿತಃ ಸಂ ಬಭೂತುರ್ಹಯೋ ದೇವಾನವಹದರ್ವಾಽಸುರಾನ್ ವಾಜೀ ಗಂಧರ್ವಾನಶ್ವೋ ಮನುಷ್ಯಾನ್ತ್ಸಮುದ್ರೋ ವಾ ಅಶ್ವಸ್ಯ ಯೋನಿಃ ಸಮುದ್ರೋ ಬಂಧುಃ ॥

ಓಮ್ ಅಗ್ನ ಆಯಾಹಿ ವೀತಯೇ ಗೃಣಾನೋ ಹವ್ಯದಾತಯೇ । ನಿ ಹೋತಾ ಸತ್ಸಿ ಬರ್ಹಿಷಿ ॥

ಓಂ ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ। ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥

ಓಮ್ ಯೇ ತ್ರಿಷಪ್ತಾಃ ಪರಿಯಂತಿ ವಿಶ್ವಾ ರೂಪಾಣಿ ಬಿಭ್ರತಃ । ವಾಚಸ್ಪತಿರ್ಬಲಾ ತೇಷಾಂ ತನ್ವೋಽ ಅದ್ಯ ದಧಾತು ಮೇ ॥

ಓಂ ಪನಾಯ್ಯಂ ತದಶ್ವಿನಾ ಕೃತಂ ವಾಂ ವೃಷಭೋ ದಿವೋ ರಜಸಃ ಪೃಥಿವ್ಯಾಃ । ಸಹಸ್ರಂ ಶಂಸಾ ಉತ ಯೇ ಗವಿಷ್ಟೌ ಸರ್ವಾ ಇತ್ತಾ ಉಪ ಯಾತಾ ಪಿಬಧ್ಯೈ ॥

ಅನಂತರ ವೈಶ್ವದೇವಸೂಕ್ತಾದಿಗಳನ್ನು ಜಪಿಸಿ ಹತ್ತು ಗಾಯತ್ರೀಮಂತ್ರವನ್ನು ಹಾಗೂ ಮೂವತ್ತು ಅಷ್ಟಾಕ್ಷರಮಂತ್ರ ಜಪಿಸಬೇಕು.

ಮಮಾಗ್ನೇತಿ ದಶರ್ಚಸ್ಯ ವಿಹವ್ಯ ಆಂಗಿರಸ ಋಷಿಃ । ವಿಶ್ವೇದೇವಾಃ ದೇವತಾ । ತ್ರಿಷ್ಟುಪ್ ಛಂದಃ । ಅಂತ್ಯಾ ಜಗತೀ ॥ ನ ತಮಂಹೋನೇತ್ಯಷ್ಟರ್ಚಸ್ಯ ಸೂಕ್ತಸ್ಯ ಶೈಲೂಷಿ ಕುಲ್ಮಲಬರ್ಹಿಷೋ ವಾಮದೇವೋ ವಾ ವಿಶ್ವೇದೇವಾ ಬೃಹತೀ ಅಂತ್ಯಾಸ್ತ್ರಿಷ್ಟುಪ್ ॥ ತತ್ತ್ವಾಯಾಮೀತಿ ಪಂಚರ್ಚಸ್ಯ ಶುನಶ್ಶೇಪೋ ವರುಣಸ್ತ್ರಿಷ್ಟುಪ್ ॥ ಅತೋದೇವಾ ಇತಿ ಷಡೃಚಸ್ಯ ಮೇಧಾತಿಥಿರ್ವಿಷ್ಣುರ್ಗಾಯತ್ರೀ ॥ ವಿಷ್ಣೋರ್ನುಕಮಿತಿ ಷಡೃಚಸ್ಯ ಔಚಥ್ಯೋ ದೀರ್ಘತಮಾ ವಿಷ್ಣುಸ್ತ್ರಿಷ್ಟುಪ್ ॥ ಸ್ವಾದಿಷ್ಠಯೇತಿ ದಶರ್ಚಸ್ಯ ಮಧುಚ್ಛಂದಾ ವೈಶ್ವಾಮಿತ್ರ ಋಷಿಃ ॥ ತರತ್ಸ ಮಂದೀತಿ ಚತುರ್ಋಚಸ್ಯ ಕಾಶ್ಯಪೋ-ಽವತ್ಸಾರ ಋಷಿಃ ॥ ಯದಂತಿ ಯಚ್ಚೇತಿ ವರ್ಗದ್ವಯಸ್ಯ ಆದ್ಯಾಯಾಃ ವಸಿಷ್ಠಋಷಿಃ।

ಅವಶಿಷ್ಟಾನಾಮೇಕಾದಶಾನಾಂ ಪವಿತ್ರವಸಿಷ್ಠಾವೃಷೀ ಗಾಯತ್ರೀಚ್ಛಂದಃ । ಸೋಮಃ ಪವಮಾನೋ ದೇವತಾ ॥ ಯತ್ತೇ ಪವಿತ್ರಮರ್ಚಿಷೀತಿ ದ್ವೇ ಅಗ್ನಿದೈವತೇ । ಉಭಾಭ್ಯಾಂ ದೇವಸವಿತ ಋಷಿಃ ಸವಿತೃದೈವತಾ ॥ ತ್ರಿಭಿಷ್ಟ್ವಮಿತಿ ಋಗಗ್ನಿಸವಿತೃ ದೈವತಾ ॥ ಪುನಂತು ಮಾಮಿತ್ಯೃಕ್ ವೈಶ್ವದೇವೀ ಅಲಾಯಸ್ಯೇತ್ಯೃಕ್ ಪುರ ಉಷ್ಣಿಕ್ ॥ ಪುನಂತು ಮಾಮಿತಿ ಯಃ ಪಾವಮಾನೀರಿತಿ ಪಾವಮಾನೀರ್ಯೋಽಧ್ಯೇತೀತಿ ಚಾನುಷ್ಟುಭಃ ॥ ವೈಶ್ವದೇವಾದಿ ಸೂಕ್ತಾಭಿಮಂತ್ರಣಾರ್ಥೇ ವಿನಿಯೋಗಃ ॥

ಓಂ ಮಮಾಗ್ನೇ ವರ್ಚೋ ವಿಹವೇಷ್ವಸ್ತು ವಯಂ ತ್ವೇಂಧಾನಾಸ್ತನ್ವಂ ಪುಷೇಮ । ಮಹ್ಯಂ ನಮಂತಾಂ ಪ್ರದಿಶಶ್ಚತಸ್ರಸ್ತ್ವಯಾಧ್ಯಕ್ಷೇಣ ಪೃತನಾ ಜಯೇಮ ॥ ೧ ॥ ಮಮ ದೇವಾ ವಿಹವೇ ಸಂತು ಸರ್ವ ಇಂದ್ರವಂತೋ ಮರುತೋ ವಿಷ್ಣುರಗ್ನಿಃ । ಮಮಾಂತರಿಕ್ಷಮುರುಲೋಕಮಸ್ತು ಮಹ್ಯಂ ವಾತಃ ಪವತಾಂ ಕಾಮೇ ಅಸ್ಮಿನ್ ॥ ೨ ॥ ಮಯಿ ದೇವಾ ದ್ರವಿಣಮಾ ಯಜಂತಾಂ ಮಯ್ಯಾಶೀರಸ್ತು ಮಯಿ ದೇವಹೂತಿಃ । ದೈವ್ಯಾ ಹೋತಾರೋ ವನುಷಂತ ಪೂರ್ವೇಽರಿಷ್ಟಾಃ ಸ್ಯಾಮ ತನ್ವಾ ಸುವೀರಾಃ ॥ ೩ ॥ ಮಹ್ಯಂ ಯಜಂತು ಮಮ ಯಾನಿ ಹವ್ಯಾಽಽಕೂತಿಃ ಸತ್ಯಾ ಮನಸೋ ಮೇ ಅಸ್ತು । ಏನೋ ಮಾ ನಿ ಗಾಂ ಕತಮಚ್ಚನಾಹಂ ವಿಶ್ವೇ ದೇವಾಸೋ ಅಧಿ ವೋಚತಾ ನಃ ॥ ೪ ॥ ದೇವೀಃ ಷಳುರ್ವೀರುರು ನಃ ಕೃಣೋತ ವಿಶ್ವೇ ದೇವಾಸ ಇಹ ವೀರಯ- ಧ್ವಮ್ । ಮಾ ಹಾಸ್ಮಹಿ ಪ್ರಜಯಾ ಮಾ ತನೂಭಿರ್ಮಾ ರಧಾಮ ದ್ವಿಷತೇ ಸೋಮ ರಾಜನ್ ॥ ೫ ॥ ಅಗ್ನೇ ಮನ್ಯುಂ ಪ್ರತಿನುದನ್ಪರೇಷಾಮದಬ್ಧೋ ಗೋಪಾಃ ಪರಿ ಪಾಹಿ ನಸ್ತ್ವಮ್ । ಪ್ರತ್ಯಂಚೋ ಯಂತು ನಿಗುತಃ ಪುನಸ್ತೇಽ- ಮೈಷಾಂ ಚಿತ್ತಂ ಪ್ರಬುಧಾಂ ವಿ ನೇಶತ್ ॥ ೬ ॥ ಧಾತಾ ಧಾತೃಣಾಂ ಭುವನಸ್ಯ ಯಸ್ಪತಿರ್ದೇವಂ ತ್ರಾತಾರಮಭಿಮಾತಿಷಾಹಮ್ । ಇಮಂ ಯಜ್ಞಮಶ್ವಿ- ನೋಭಾ ಬೃಹಸ್ಪತಿರ್ದೇವಾಃ ಪಾಂತು ಯಜಮಾನಂ ನ್ಯರ್ಥಾತ್ ॥ ೭ ॥

ಉರುವ್ಯಚಾ ನೋ ಮಹಿಷಃ ಶರ್ಮ ಯಂಸದಸ್ಮಿನ್ ಹವೇ ಪುರುಹೂತಃ ಪುರುಕ್ಷುಃ । ಸ ನಃ ಪ್ರಜಾಯೈ ಹರ್ಯಶ್ವ ಮೃಳಯೇಂದ್ರ ಮಾ ನೋ ರೀರಿಷೋ ಮಾ ಪರಾ ದಾಃ ॥ ೮ ॥ ಯೇ ನಃ ಸಪತ್ನಾ ಅಪ ತೇ ಭವಂತ್ವಿಂದ್ರಾಗ್ನಿಭ್ಯಾಮವ ಬಾಧಾಮಹೇ ತಾನ್ । ವಸವೋ ರುದ್ರಾ ಆದಿತ್ಯಾ ಉಪರಿಸ್ಪೃಶಂ ಮೋಗ್ರಂ ಚೇತ್ತಾರಮಧಿರಾಜಮಕ್ರನ್ ॥ ೯ ॥ ಅರ್ವಾಂಚಮಿಂದ್ರಮಮುತೋ ಹವಾ–ಮಹೇ ಯೋ ಗೋಜಿದ್ಧನಜಿದಶ್ವಜಿದ್ಯಃ । ಇಮಂ ನೋ ಹವ್ಯಂ ವಿಹವೇ ಜುಷಸ್ವಾಽಸ್ಮ ಕುರ್ಮೋ ಹರಿವೋ ಮೇದಿನಂ ತ್ವಾ ॥ ೧೦ ॥

ಓಂ ನ ತಮಂಹೋ ನ ದುರಿತಂ ದೇವಾಸೋ ಅಷ್ಟ ಮರ್ತ್ಯಮ್ । ಸಜೋಷಸೋ ಯಮರ್ಯಮಾ ಮಿತ್ರೋ ನಯಂತಿ ವರುಣೋ ಅತಿ ದ್ವಿಷಃ ॥ ತದ್ಧಿ ವಯಂ ವೃಣೀಮಹೇ ವರುಣ ಮಿತ್ರಾರ್ಯಮನ್ । ಯೇನಾ ನಿರಂಹಸೋ ಯೂಯಂ ಪಾಥ ನೇಥಾ ಚ ಮರ್ತ್ಯಮತಿ ದ್ವಿಷಃ ॥ ತೇ ನೂನಂ ನೋಽಯಮೂತಯೇ ವರುಣೋ ಮಿತ್ರೋ ಅರ್ಯಮಾ । ನಯಿಷ್ಠಾ ಉ ನೋ ನೇಷಣಿ ಪರ್ಷಿಷ್ಠಾ ಉ ನಃ ಪರ್ಷಣ್ಯತಿ ದ್ವಿಷಃ ॥ ಯೂಯಂ ವಿಶ್ವಂ ಪರಿ ಪಾಥ ವರುಣೋ ಮಿತ್ರೋ ಅರ್ಯಮಾ । ಯುಷ್ಮಾಕಂ ಶರ್ಮಣಿ ಪ್ರಿಯೇ ಸ್ಯಾಮ ಸುಪ್ರಣೀತಯೋಽತಿ ದ್ವಿಷಃ ॥ ಆದಿತ್ಯಾಸೋ ಅತಿ ಸ್ರಿಧೋ ವರುಣೋ ಮಿತ್ರೋ ಅರ್ಯಮಾ । ಉಗ್ರಂ ಮರುದ್ಭಿ ರುದ್ರಂ ಹುವೇಮೇಂದ್ರಮಗ್ನಿಂ ಸ್ವಸ್ತಯೇಽತಿ ದ್ವಿಷಃ ॥ ನೇತಾರ ಊ ಷು ಣಸ್ತಿರೋ ವರುಣೋ ಮಿತ್ರೋ ಅರ್ಯಮಾ । ಅತಿ ವಿಶ್ವಾನಿ ದುರಿತಾ ರಾಜಾನಶ್ಚರ್ಷಣೀನಾಮತಿ ದ್ವಿಷಃ ॥ ಶುನಮಸ್ಮಭ್ಯಮೂತಯೇ ವರುಣೋ ಮಿತ್ರೋ ಅರ್ಯಮಾ । ಶರ್ಮ ಯಚ್ಛಂತು ಸಪ್ರಥ ಆದಿತ್ಯಾಸೋ

ಯದೀಮಹೇ ಅತಿ ದ್ವಿಷಃ ॥ ಯಥಾ ಹ ತ್ಯದ್ವಸವೋ ಗೌರ್ಯಂ ಚಿತ್ಪದಿ ಷಿತಾಮಮುಂಚತಾ ಯಜತ್ರಾಃ । ಏವೋ ಷ್ವಗಿಸ್ಮನ್ಮುಂಚತಾ ವ್ಯಂಹಃ ಪ್ರ ತಾರ್ಯಗ್ನೇ ಪ್ರತರಂ ನ ಆಯುಃ ॥

ಓಂ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ॥ ತದಿನ್ನಕ್ತಂ ತದ್ದಿವಾ ಮಹ್ಯಮಾಹುಸ್ತದಯಂ ಕೇತೋ ಹೃದ ಆ ವಿ ಚಷ್ಟೇ । ಶುನಃಶೇಪೋ ಯಮಹ್ವದ್ಗೃಭೀತಃ ಸೋ ಅಸ್ಮಾನ್ರಾಜಾ ವರುಣೋ ಮುಮೋಕ್ತು ॥ ಶುನಃಶೇಪೋ ಹ್ಯಹ್ವದ್ಗೃಭೀತಸ್ತ್ರಿಷ್ವಾದಿತ್ಯಂ ದ್ರುಪದೇಷು ಬದ್ಧಃ । ಅವೈನಂ ರಾಜಾ ವರುಣಃ ಸಸೃಜ್ಯಾದ್ವಿದ್ವಾ ಅದಬ್ಧೋ ವಿ ಮುಮೋಕ್ತು ಪಾಶಾನ್ ॥ ಅವ ತೇ ಹೇಳೋ ವರುಣ ನಮೋಭಿರವ ಯಜ್ಞೇಭಿರೀಮಹೇ ಹವಿರ್ಭಿಃ । ಕ್ಷಯನ್ನಸ್ಮಭ್ಯಮಸುರ ಪ್ರಚೇತಾ ರಾಜನ್ನೇ–ನಾಂಸಿ ಶಿಶ್ರಥಃ ಕೃತಾನಿ ॥ ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿ ಮಧ್ಯಮಂ ಶ್ರಥಾಯ । ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ ॥

ಓಂ ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ । ಇಂದ್ರಾಯ ಪಾತವೇ ಸುತಃ ॥ ರಕ್ಷೋಹಾ ವಿಶ್ವಚರ್ಷಣಿರಭಿ ಯೋನಿಮಯೋಹತಮ್ । ದ್ರುಣಾ ಸಧಸ್ಥಮಾಸದತ್ ॥ ವರಿವೋಧಾತಮೋ ಭವ ಮಂಹಿಷ್ಠೋ ವೃತ್ರಹಂತಮಃ । ಪರ್ಷಿ ರಾಧೋ ಮಘೋನಾಮ್ ॥ ಅಭ್ಯರ್ಷ ಮಹಾನಾಂ ದೇವಾನಾಂ ವೀತಿಮಂಧಸಾ । ಅಭಿ ವಾಜಮುತ ಶ್ರವಃ ॥ ತ್ವಾಮಚ್ಛಾ ಚರಾಮಸಿ ತದಿದರ್ಥಂ ದಿವೇದಿವೇ । ಇಂದೋ ತ್ವೇ ನ ಆಶಸಃ ॥ ಪುನಾತಿ ತೇ

ಪರಿಸ್ರುತಂ ಸೋಮಂ ಸೂರ್ಯಸ್ಯ ದುಹಿತಾ । ವಾರೇಣ ಶಶ್ವತಾ ತನಾ । ತಮೀಮಣ್ವೀಃ ಸಮರ್ಯ ಆ ಗೃಭ್ಣಂತಿ ಯೋಷಣೋ ದಶ । ಸ್ವಸಾರಃ ಪಾರ್ಯೇ ದಿವಿ ॥ ತಮೀಂ ಹಿನ್ವಂತ್ಯಗ್ರುವೋ ಧಮಂತಿ ಬಾಕುರಂ ದೃತಿಮ್ । ತ್ರಿಧಾತು ವಾರಣಂ ಮಧು ॥ ಅಭೀಳಿಮಮಘ್ನ್ಯಾ ಉತ ಶ್ರೀಣಂತಿ ಧೇನವಃ ಶಿಶುಮ್ । ಸೋಮಮಿಂದ್ರಾಯ ಪಾತವೇ ॥ ಅಸ್ಯೇದಿಂದ್ರೋ ಮದೇಷ್ವಾ ವಿಶ್ವಾ ವೃತ್ರಾಣಿ ಜಿಘ್ನತೇ । ಶೂರೋ ಮಘಾ ಚ ಮಂಹತೇ ॥

ಓಂ ತರತ್ಸ ಮಂದೀ ಧಾವತಿ ಧಾರಾ ಸುತಸ್ಯಾಂಧಸಃ । ತರತ್ಸ ಮಂದೀ ಧಾವತಿ ॥ ೧ ॥ ಉಸ್ರಾ ವೇದ ವಸೂನಾಂ ಮರ್ತಸ್ಯ ದೇವ್ಯವಸಃ । ತರತ್ಸ ಮಂದೀ ಧಾವತಿ ॥ ೨ ॥ ಧ್ವಸ್ರಯೋಃ ಪುರುಷಂತ್ಯೋರಾ ಸಹಸ್ರಾಣಿ ದದ್ಮಹೇ । ತರತ್ಸ ಮಂದೀ ಧಾವತಿ ॥ ೩ ॥ ಆ ಯಯೋಸ್ತ್ರಿಂಶತಂ ತನಾ ಸಹಸ್ರಾಣಿ ಚ ದದ್ಮಹೇ । ತರತ್ಸ ಮಂದೀ ಧಾವತಿ ॥ ೪ ॥

ಓಂ ಯದಂತಿ ಯಚ್ಚ ದೂರಕೇ ಭಯಂ ವಿಂದತಿ ಮಾಮಿಹ । ಪವಮಾನ ವಿ ತಜ್ಜಹಿ ॥ ಪವಮಾನಃ ಸೋ ಅದ್ಯ ನಃ ಪವಿತ್ರೇಣ ವಿಚರ್ಷಣಿಃ । ಯಃ ಪೋತಾ ಸ ಪುನಾತು ನಃ ॥ ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ । ಬ್ರಹ್ಮ ತೇನ ಪುನೀಹಿ ನಃ ॥ ಯತ್ತೇ ಪವಿತ್ರಮರ್ಚಿವದಗ್ನೇ ತೇನ ಪುನೀಹಿ ನಃ । ಬ್ರಹ್ಮಸವೈಃ ಪುನೀಹಿ ನಃ ॥ ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ । ಮಾಂ ಪುನೀಹಿ ವಿಶ್ವತಃ ॥ ೧ ॥ ತ್ರಿಭಿಷ್ಟ್ವಂ ದೇವ ಸವಿತರ್ವ-ರ್ಷಿಷ್ಠೈಃ ಸೋಮ ಧಾಮಭಿಃ । ಅಗ್ನೇ ದಕ್ಷೈಃ ಪುನೀಹಿ ನಃ ॥ ಪುನಂತು ಮಾಂ ದೇವಜನಾಃ ಪುನಂತು ವಸವೋ ಧಿಯಾ । ವಿಶ್ವೇ ದೇವಾಃ ಪುನೀತ ಮಾ ಜಾತವೇದಃ ಪುನೀಹಿ ಮಾ ॥ ಪ್ರ ಪ್ಯಾಯಸ್ವ ಪ್ರ ಸ್ಯಂದಸ್ವ ಸೋಮ

ವಿಶ್ವೇಭಿರಂಶುಭಿಃ । ದೇವೇಭ್ಯ ಉತ್ತಮಂ ಹವಿಃ ॥ ಉಪ ಪ್ರಿಯಂ ಪನಿಪ್ನತಂ ಯುವಾನಮಾಹುತೀವೃಧಮ್ । ಅಗನ್ಮ ಬಿಭ್ರತೋ ನಮಃ ॥ ಅಲಾಯ್ಯಸ್ಯ ಪರಶುರ್ನನಾಶ ತಮಾ ಪವಸ್ವ ದೇವ ಸೋಮ । ಆಖುಂ ಚಿದೇವ ದೇವ ಸೋಮ ॥ ಯಃ ಪಾವಮಾನೀರಧ್ಯೇತ್ಯೃಷಿಭಿಃ ಸಂಭೃತಂ ರಸಮ್ । ಸರ್ವಂ ಸ ಪೂತಮಶ್ನಾತಿ ಸ್ವದಿತಂ ಮಾತರಿಶ್ವನಾ ॥ ಪಾವಮಾನೀರ್ಯೋ ಅಧ್ಯೇತ್ಯೃಷಿಭಿಃ ಸಂಭೃತಂ ರಸಮ್ । ತಸ್ಮೈ ಸರಸ್ವತೀ ದುಹೇ ಕ್ಷೀರಂ ಸರ್ಪಿರ್ಮಧೂದಕಮ್ ॥ ಓಮ್ ॥

ಅತೋ ದೇವಾ ............ ಪದಮ್ ॥ ೬ ॥

ವಿಷ್ಣೋರ್ನುಕಂ ........ ಭಾತಿ ಭೂರಿ (ಪುಟಸಂಖ್ಯೆ 559)

ಓಂ ತಚ್ಛಂ ಯೋರಾವೃಣೀಮಹೇ । ಗಾತುಂ ಯಜ್ಞಾಯ । ಗಾತುಂ ಯಜ್ಞಪತಯೇ । ದೈವೀ ಸ್ವಸ್ತಿರಸ್ತು ನಃ । ಸ್ವಸ್ತಿರ್ಮಾನುಷೇಭ್ಯಃ। ಊರ್ಧ್ವಂ ಜಿಗಾತು ಭೇಷಜಮ್ । ಶಂ ನೋ ಅಸ್ತು ದ್ವಿಪದೇ । ಶಂ ಚತುಷ್ಪದೇ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

(ಜಲಪಾತ್ರದ ನೀರನ್ನು ಅರ್ಚನಾದಿಗಳಿಗೆ ಮಾತ್ರ ಉಪಯೋಗಿಸಬೇಕು. ಪಂಚಪಾತ್ರೆ (ಥಾಲಿ)ಯನ್ನು ಆಚಮನಕ್ಕೆ ಮಾತ್ರ ಉಪಯೋಗಿಸಬೇಕು.)

**ಶಾರೀರಸೂಕ್ತಮ್**

ಶಾರೀರಷಟ್ಕಸ್ಯ ಆತ್ಮಾಋಷಿಃ ಪ್ರಕೃತಿ ಪುರುಷಶ್ಛಂದಃ । ಸತ್ಯೋದೇವತಾ । ಮಮಾಂತರ್ಬಹಿಃ ಶರೀರಶುದ್ಧ್ಯರ್ಥೇ ಜಪೇ ವಿನಿಯೋಗಃ ॥

–ಎಂದು ಎದೆಯನ್ನು ಮುಟ್ಟಿಕೊಂಡು,

ಶಾರೀರಮಂತಃಕರಣೋಪಘಾತಂ ವಾಚಶ್ಚ ವಿಷ್ಣುರ್ಭಗವಾನನಂತಃ ।
ಶಮಂ ನಯತ್ವಸ್ತು ಮಮೇಹ ಶರ್ಮ ಪಾಯಾದನಂತೋ ಹೃದಿ ಸನ್ನಿವಿಷ್ಟಃ ॥೧॥

**ಅಂತಃಶುದ್ಧಿಂ ಬಹಿಃಶುದ್ಧಿಂ ಶುದ್ಧೋ ಧರ್ಮಮಯೋಽಚ್ಯುತಃ ।**
**ಸ ಕರೋತು ಮಮೈತಸ್ಮಿಞ್ಛುಚಿರೇವಾಸ್ಮಿ ಸರ್ವದಾ ॥ ೨ ॥**

**ಬಾಹ್ಯೋಪಘಾತಾನನಘೋ ಬೌದ್ಧಾಂಶ್ಚ ಭಗವಾನಜಃ ।**
**ಶಮಂ ನಯತ್ವನಂತಾತ್ಮಾ ವಿಷ್ಣುಶ್ಚೇತಸಿ ಸಂಸ್ಥಿತಃ ॥ ೩ ॥**

**ಶಾರೀರಂ ಮೇ ಹೃಷೀಕೇಶ ಪುಂಡರೀಕಾಕ್ಷ ಮಾನಸಮ್ ।**
**ಪಾಪಂ ಪ್ರಶಮಯಾದ್ಯ ತ್ವಂ ವಾಕ್ಕೃತಂ ಮಮ ಮಾಧವ ॥ ೪ ॥**

**ಯದ್ಯಪ್ಯುಪಹತಃ ಪಾಪೈರ್ಯದಿ ವಾಽತ್ಯಂತದುಷ್ಕೃತೈಃ ।**
**ತಥಾಽಪಿ ಸಂಸ್ಮರೇದ್ವಿಷ್ಣುಂ ಸರ್ವಪಾಪೈಃ ಪ್ರಮುಚ್ಯತೇ ॥ ೫ ॥**

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥ ೬ ॥**

ಶುಚೀವೋ ಹವ್ಯೇತ್ಯಸ್ಯ ಮೈತ್ರಾವರುಣಿರ್ವಸಿಷ್ಠೋ ಮರುತಸ್ತ್ರಿಷ್ಟುಪ್ । ಕರ್ತೃಭೋಕ್ತೃಭಾಂಡಭಾಜನದ್ರವ್ಯಾಣಿ ಶುದ್ಧ್ಯರ್ಥೇ ವಿನಿಯೋಗಃ ॥

**ಓಂ ಶುಚೀ ವೋ ಹವ್ಯಾ ಮರುತಃ ಶುಚೀನಾಂ ಶುಚಿಂ ಹಿನೋಮ್ಯಧ್ವರಂ ಶುಚಿಭ್ಯಃ । ಋತೇನ ಸತ್ಯಮೃತಸಾಪ ಆಯಞ್ಛುಚಿಜನ್ಮಾನಃ ಶುಚಯಃ ಪಾವಕಾಃ ॥ ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ । ತವ ಜ್ಯೋತೀಂಷ್ಯರ್ಚಯಃ ॥ ಅಗ್ನಿಃ ಶುಚಿವ್ರತತಮಃ ಶುಚಿರ್ವಿಪ್ರಃ ಶುಚಿಃ ಕವಿಃ । ಶುಚೀ ರೋಚತ ಆಹುತಃ ॥ ಭದ್ರಂ ನೋ ಅಪಿ ವಾತಯ ಮನಃ ॥**

–ಎಂದು ಜಲಕೂರ್ಚದಿಂದ ಶ್ರಾದ್ಧಸ್ಥಳದ ಸುತ್ತ ಪ್ರೋಕ್ಷಣೆ ಮಾಡಿ ಪಾತ್ರೆಗಳಿಗೆ, ಹವಿಸ್ಸಿಗೆ, ಬ್ರಾಹ್ಮಣರಿಗೆ, ಶ್ರಾದ್ಧದ್ರವ್ಯಗಳಿಗೆ ಪ್ರೋಕ್ಷಣೆ ಮಾಡಿ, ಬಲಕೈಯಲ್ಲಿ ಜಲಕೂರ್ಚ ಹಿಡಿದು, ಎಡಕೈಯಲ್ಲಿ ಉದ್ಧರಣೆಯಿಂದ ಜಲಪಾತ್ರೆಯ ನೀರು ಹಿಡಿದು,

**ಓಂ ಕಿತವಾಸೋ ಯದ್ರಿರಿಪುರ್ನ ದೀವಿ ಯದ್ವಾ ಘಾ ಸತ್ಯಮುತ ಯನ್ನ ವಿದ್ಮ । ಸರ್ವಾ ತಾ ವಿ ಷ್ಯ ಶಿಥಿರೇವ ದೇವಾಽಧಾ ತೇ ಸ್ಯಾಮ ವರುಣ ಪ್ರಿಯಾಸಃ ॥ ಯತ್ಕಿಂ ಚೇದಂ ವರುಣ ದೈವ್ಯೇ ಜನೇಽಭಿದ್ರೋಹಂ**

**ಮನುಷ್ಯಾಶ್ಚರಾಮಸಿ । ಅಚಿತ್ತೀ ಯತ್ತವ ಧರ್ಮಾ ಯುಯೋಪಿಮ ಮಾ ನಸ್ತಸ್ಮಾದೇನಸೋ ದೇವ ರೀರಿಷಃ ॥**

–ಎಂದು ಜಲಕೂರ್ಚದಿಂದ ತನಗೆ ಪ್ರೋಕ್ಷಣೆ ಮಾಡಿಕೊಂಡು ಜಲಕೂರ್ಚಕ್ಕೆ ಶುದ್ಧ ನೀರು ಮುಟ್ಟಿಸಿ ಜಲಪಾತ್ರೆಯಲ್ಲಿಟ್ಟು ಕೈಮುಗಿದು,

**ಅತಿನೀಲಘನಶ್ಯಾಮಂ ನಳಿನಾಯತಲೋಚನಮ್ ।**
**ಸ್ಮರಾಮಿ ಪುಂಡರೀಕಾಕ್ಷಂ ತೇನ ಸ್ನಾತೋ ಭವಾಮ್ಯಹಮ್ ॥**

**ಶಾರದಾಭ್ರಾತಿಶುಭ್ರಾಂಗಂ ಚಂದ್ರಾರ್ಧಮುಕುಟೋಜ್ಜ್ವಲಮ್ ।**
**ಸ್ಮರಾಮಿ ತಂ ಮಹಾದೇವಂ ತೇನ ಸ್ನಾತೋ ಭವಾಮ್ಯಹಮ್ ॥**

–ಎಂದು ಪ್ರಾರ್ಥಿಸಬೇಕು

## ಬ್ರಹ್ಮದಂಡಃ

**ಅದ್ಯ ಪೂರ್ವೋಚ್ಚರಿತ .... (ಎಡ) ಅಸ್ಮತ್ಪಿತುಃ ನೈಮಿತ್ತಿಕ ಸಪಿಂಡೀಕರಣಾಧಿಕಾರ ಸಿದ್ಧ್ಯರ್ಥಂ (ಬಲ) ಯಥಾಂಶಂ ಹಿರಣ್ಯೇನ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

ಎಂದು ಕ್ರಿಯಾಕರ್ತೃಗಳು ಹದಿನಾಲ್ಕು ಚಿಲ್ಲರೆ ಎಳ್ಳು, ದರ್ಭೆ, ತುಳಸಿ ಹಿಡಿದು ಕನಿಷ್ಠ ಪೂರ್ವಕವಾಗಿ ಬ್ರಾಹ್ಮಣರಿಗೆ ಮೂರು ಪ್ರದಕ್ಷಿಣೆ ಬರಬೇಕು.

**ಸಮಸ್ತಸಂಪತ್ಸಮವಾಪ್ತಿಹೇತವಃ**
**ಸಮುತ್ಥಿತಾಪತ್ಕುಲಧೂಮಕೇತವಃ ।**
**ಅಪಾರಸಂಸಾರಸಮುದ್ರಸೇತವಃ**
**ಪುನಂತು ಮಾಂ ಬ್ರಾಹ್ಮಣಪಾದಪಾಂಸವಃ ॥ ೧ ॥**

**ಆಪದ್ಘನಧ್ವಾಂತಸಹಸ್ರಭಾನವಃ**
**ಸಮೀಹಿತಾರ್ಥಾರ್ಪಣಕಾಮಧೇನವಃ ।**
**ಸಮಸ್ತತೀರ್ಥಾಂಬುಪವಿತ್ರಮೂರ್ತಯೋ**
**ರಕ್ಷಂತು ಮಾಂ ಬ್ರಾಹ್ಮಣಪಾದಪಾಂಸವಃ ॥ ೨ ॥**

**ಸರ್ವೇ ಧರ್ಮವಿವ(ವೇ)ಕ್ತಾರೋ ಗೋಪ್ತಾರಃ ಸಕಲಾ ದ್ವಿಜಾಃ ।**
**ಮಮ ದೇಹಸ್ಯ ಸಂಶುದ್ಧಿಂ ಕುರ್ವಂತು ದ್ವಿಜಸತ್ತಮಾಃ ॥ ೩ ॥**

**ಪ್ರಸಾದಃ ಕ್ರಿಯತಾಂ ಮಹ್ಯಂ ಶುಭಾನುಜ್ಞಾಂ ಪ್ರಯಚ್ಛತ ।**
**ಪೂಜ್ಯೈಃ ಕೃತಪವಿತ್ರೋಽಹಂ ಭವೇಯಂ ದ್ವಿಜಸತ್ತಮೈಃ ॥ ೪ ॥**

**ವಿಪ್ರೌಘದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।**
**ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಮ್ ॥ ೫ ॥**

**ಆಧಿವ್ಯಾಧಿಹರಂ ನೃಣಾಂ ಮೃತ್ಯುದಾರಿದ್ರ್ಯನಾಶನಮ್ ।**
**ಶ್ರೀಪುಷ್ಟಿಕೀರ್ತಿದಂ ವಂದೇ ವಿಪ್ರಶ್ರೀಪಾದಪಂಕಜಮ್ ॥ ೬ ॥**

ಓಂ ಯಾವತೀರ್ವೈ ದೇವತಾಸ್ತಾಸ್ಸರ್ವಾ ವೇದವಿದಿ ಬ್ರಾಹ್ಮಣೇ ವಸಂತಿ ತಸ್ಮಾದ್ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದಿವೇ ದಿವೇ ನಮಸ್ಕುರ್ಯಾನ್ನಾಶ್ಲೀಲಂ ಕೀರ್ತಯೇದೇತಾ ಏವ ದೇವತಾಃ ಪ್ರೀಣಾತಿ ॥ (ಪ್ರೀಣಾತು)

ಹೆಬ್ಬೆರಳು ಹಾಗೂ ತೋರುಬೆರಳಿನಿಂದ ಜಲಕೂರ್ಚ ಹಿಡಿದು ಮಂಡಲದ ಆಗ್ನೇಯಭಾಗದಲ್ಲಿ ನೀರು ಪ್ರೋಕ್ಷಣೆ ಮಾಡಿ, ತೋರುಬೆರಳಿನಿಂದ ಚೌಕಾಕಾರದ ಮಂಡಲ ಮಾಡಿ '**ನಮೋ ದೇವೇಭ್ಯಃ**' ಎಂದು ಕೈಯಲ್ಲಿರುವ ದ್ರವ್ಯಗಳನ್ನು ಮಂಡಲದಲ್ಲಿಟ್ಟು ದೇವರಿಗೆ ಹಾಗೂ ವಿಶ್ವೇದೇವ ಬ್ರಾಹ್ಮಣರಿಗೆ ಕೈಮುಗಿದು, (ಎಡ) ಪ್ರೇತಸ್ಥಾನದ ಹಾಗೂ ಪಿತೃಸ್ಥಾನದ ಬ್ರಾಹ್ಮಣರಿಗೆ '**ಸ್ವಧಾ ಪಿತೃಭ್ಯಃ ॥**' ಎಂದು ಕೈಮುಗಿದು,

**ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಸಪಿಂಡೀಕರಣಾಧಿಕಾರಸಿದ್ಧಿರಸ್ತ್ವಿತಿ ಭವಂತೋ ಬ್ರುವಂತು ॥** (ಅಧಿಕಾರ ಸಿದ್ಧಿರಸ್ತು) ಕಾಲಸ್ತು ಮುಖ್ಯಕಾಲೋಽಸ್ತ್ವಿತಿ ಭವಂತೋ **ಬ್ರುವಂತು** ॥ (ಮುಖ್ಯಕಾಲೋಽಸ್ತು) ಇಮೇ ಕುಶಾ ಬ್ರಹ್ಮದಂಡಾಃ ॥ (ಸಂತು ಬ್ರಹ್ಮದಂಡಾಃ) **ಪಾಕಾದೀನಾಂ ಹವಿರ್ಯೋಗ್ಯತಾಸಿದ್ಧಿರಸ್ತು ॥ (ತಥಾಸ್ತು)** ॥ (ಬಲ) ನಮಸ್ಕಾರ ಮಾಡಬೇಕು.

## ಸಂಕಲ್ಪಃ

ಪೂರ್ವಕ್ಕೆ ಮುಖಮಾಡಿ ಕುಳಿತು, '**ಅದ್ಯ ಪೂರ್ವೋಚ್ಚರಿತ...... ಪ್ರಾಣಸ್ಥಪ್ರಾಜ್ಞರೂಪಿ ಪರಮಾತ್ಮಾ ಪ್ರೀತ್ಯರ್ಥಂ.....**' (ಎಡ) ದಕ್ಷಿಣಾಭಿಮುಖ ಮಾಡಿ ಎಡಕಾಲೂರಿ ಬಲಕಾಲಿನ ಗಂಟಿನ ಮೇಲೆ ಎಡಕೈಯನ್ನು ಮೇಲ್ಮುಖ ಮಾಡಿ ಎಳ್ಳಿನ ತಟ್ಟೆ ಹಾಗೂ ಮುಷ್ಟಿದರ್ಭೆ ಹಿಡಿದು ಬಲಕೈಯಿಂದ ಮುಚ್ಚಿ, **ಅಸ್ಮತ್ಪಿತುಃ ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಪ್ರೇತತ್ವ ನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಂ ಪಿತಾಮಹಪ್ರಪಿತಾಮಹವೃದ್ಧ- ಪ್ರಪಿತಾಮಹೈಃ ......ಶರ್ಮಭಿಃ ......ಗೋತ್ರೈಃ ವಸುರುದ್ರಾದಿತ್ಯಸ್ವರೂಪೈಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸಂಕರ್ಷಣವಾಸುದೇವೈಃ ಸಹ ಸಮಾನೋದಕ ಸಾಪಿಂಡ್ಯಸಿದ್ಧಿದ್ವಾರಾ ವಸ್ವಾದಿಪುಣ್ಯಲೋಕಾವಾಪ್ತ್ಯರ್ಥಮ್ ಅಸ್ಮತ್ಪಿತುಃ ಗೋತ್ರಸ್ಯ ಶರ್ಮಣಃ ಪ್ರೇತಸ್ಯ ಏಕೋದ್ದಿಷ್ಟವಿಧಿನಾ ಪಿತಾಮಹ ಪ್ರಪಿತಾಮಹ ವೃದ್ಧಪ್ರಪಿತಾ- ಮಹಾನಾಂ ಪಾರ್ವಣವಿಧಾನೇನ** ಎಳ್ಳಿನ ತಟ್ಟೆಯನ್ನು ಕೆಳಗಿಟ್ಟು (ಬಲ) ಪೂರ್ವಮುಖ ವಾಗಿ ಬಲಕಾಲೂರಿ ಎಡಕಾಲಿನ ಗಂಟಿನ ಮೇಲೆ ಎಡಕೈಯನ್ನು ಮೇಲ್ಮುಖ ಮಾಡಿ

ಅಕ್ಕಿತಟ್ಟೆ ಹಾಗೂ ಮುಷ್ಟಿದರ್ಭೆ ಹಿಡಿದು ಬಲಕೈಯಿಂದ ಮುಚ್ಚಿ, **ಕಾಮಕಾಲಸಂಜ್ಞಕ ವಿಶ್ವೇದೇವಾಂತರ್ಯಾಮಿ ಪ್ರಾಣಸ್ಥನಾರಾಯಣಾನಿರುದ್ಧಯೋರಾಜ್ಞಂಯಾ ಪಾರ್ವಣೈಕೋದ್ದಿಷ್ಟೋಭಯಾತ್ಮಕೇನ ವಿಧಿನಾ ಉಪಕ್ರಾಂತಂ ಸಪಿಂಡೀಕರಣಶ್ರಾದ್ಧಂ ಸದ್ಯಃ ಕರ್ಮ ಕರಿಷ್ಯೇ ॥** –ಎಂದು ಅಕ್ಕಿನೀರು ಬಿಡಬೇಕು.

## ಮಹಾವಿಷ್ಣುಪೂಜಾ

ಪಶ್ಚಿಮಕ್ಕೆ ಮುಖಮಾಡಿ ಕುಳಿತು, ವಿಶ್ವೇದೇವಸ್ಥಾನದ ಬ್ರಾಹ್ಮಣರ ಬಲಭಾಗದಲ್ಲಿ (ತನ್ನ ಎಡಭಾಗದಲ್ಲಿ) ಜೇಡಿಯಿಂದ ಪದ್ಮಾಕಾರದ ಮಂಡಲ ಬರೆದು ಮಣೆ ಇಟ್ಟು ದಾನ ಕೊಡುವ ಶಾಲಗ್ರಾಮ, ಸುದರ್ಶನ ಇದ್ದರೆ ಇಟ್ಟುಕೊಂಡು, ಇಲ್ಲದಿದ್ದರೆ ಮಣೆಯ ಮೇಲೆ ಒಂದು ಬಾಳೆಎಲೆ ತುಂಡಿನಲ್ಲಿ ನಾಲ್ಕು ಎಳೆಯ ಕೂರ್ಚ ಇಟ್ಟು '**ಶ್ರಾದ್ಧಸಂರಕ್ಷಕ ಮಹಾವಿಷ್ಣೋರರ್ಚನಂ ಕರಿಷ್ಯೇ ॥**' ಎಂದು ಸಂಕಲ್ಪ ಮಾಡಿ, ಎರಡು ದರ್ಭೆ ಹಿಡಿದುಕೊಂಡು,

**ಪಿತುಃ ಮೃತಾಹಾತ್ ದ್ವಾದಶೇಽಹನಿ ಸಪಿಂಡೀಕರಣಶ್ರಾದ್ಧೇ ಮಹಾವಿಷ್ಣೋಃ ಅಯಂ ಕ್ಷಣಃ ॥**

–ಎಂದು ಕೂರ್ಚದ ಮೇಲೆ ಪಶ್ಚಿಮಾಗ್ರವಾಗಿಟ್ಟು ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ ನೀರಿನಿಂದ ಚೌಕಾಕಾರದ ಎರಡು ಮಂಡಲಗಳನ್ನು ಮಾಡಿ, '**ಪಾದ್ಯಸ್ಥಾನಂ ಕಲ್ಪಯಾಮಿ ॥**' ನಾಲ್ಕು ದರ್ಭೆಗಳನ್ನು ಹಿಡಿದು '**ಪಾದ್ಯಸ್ಥಾನೇ ಇಮೌ ದರ್ಭೌ । ಆಸನಸ್ಥಾನೇ ಇಮೌ ದರ್ಭೌ ॥**' ಎಂದು ಎರಡೆರಡು ದರ್ಭೆಗಳನ್ನು ಉತ್ತರಾಗ್ರವಾಗಿಟ್ಟು ಅಂಜಲಿಮುದ್ರೆ ಮಾಡಿ, '**ಮಹಾವಿಷ್ಣೋಃ ಸ್ವಾಗತಮ್ ॥**' ಎರಡು ಸ್ಥಾನಗಳಲ್ಲಿ ಅಕ್ಷತೋದಕ ಕೊಟ್ಟು '**ಶಿರಸಿ ಪುಷ್ಪಮ್ ।**' ಹೂಇಟ್ಟು, '**ಪಾದಯೋರ್ಗಂಧಪುಷ್ಪಾದಿ ।**' ಪಾದಕ್ಕೆ ಗಂಧಪುಷ್ಪ ಇಟ್ಟು ಅಕ್ಕಿ, ನೀರು ಹಿಡಿದು, '**ಮಹಾವಿಷ್ಣೋ ಇದಂ ತೇ ಪಾದ್ಯಮ್ ।**' ಎಂದು ಮಂಡಲದ ಮೇಲೆ ಪಾದ್ಯಕೊಟ್ಟು, '**ಓಂ ಶಂ ನೋ ದೇವೀ.... ಸ್ರವಂತು ನಃ ॥**' '**ಅಸ್ಮಿನ್ ರಾಷ್ಟ್ರೇ..... ನಿರ್ದಹಂತು ಮೇ ॥**' ಪಾದೋದಕ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಅನಂತರ ಎದ್ದುನಿಂತು, ಅಕ್ಕಿ ಹಿಡಿದು,

**ಓಂ ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಮ್ ॥ ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ । ವಿಷ್ಣೋರ್ಯತ್ ಪರಮಂ ಪದಮ್ ॥**

**ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।**<br>**ಸುಬ್ರಹ್ಮಣ್ಯ ನಮಸ್ತೇಽಸ್ತು ಮಹಾಪುರುಷ ಪೂರ್ವಜ ॥**

**ಶ್ರಾದ್ಧಕಾಲೇ ಗಯಾಂ ಧ್ಯಾತ್ವಾ ಧ್ಯಾತ್ವಾ ದೇವಂ ಜನಾರ್ದನಮ್ ।**
**ವಸ್ವಾದೀಂಶ್ಚ ಪಿತೄನ್ ಧ್ಯಾತ್ವಾ ತತಃ ಶ್ರಾದ್ಧಂ ಪ್ರವರ್ತಯೇ ॥**

–ಎಂದು ಹಾಕಿ ನಮಸ್ಕಾರ ಮಾಡಿ '**ಪ್ರವರ್ತಯ**' –ಎಂದು ಆಚಾರ್ಯರಿಂದ ಪ್ರತಿವಚನ ಪಡೆಯಬೇಕು.

## ಪ್ರೇತಕಮಂಡಲುಸ್ಥಾಪನಮ್

(ಎಡ) ದಕ್ಷಿಣಕ್ಕೆ ಮುಖಮಾಡಿ ಕುಳಿತು, ಪ್ರೇತಪಿಂಡಸ್ಥಾನದ ತ್ರಿಕೋನಾಗ್ರದಲ್ಲಿ ದಕ್ಷಿಣಾಗ್ರವಾಗಿ ಒಂದು ದರ್ಭೆಯನ್ನು ಇಟ್ಟು ಅದರ ಮೇಲೆ ಎಳ್ಳು ಹಾಕಿ, ಅದರ ಮೇಲೆ ಒಂದು ದೊಣ್ಣೆತಟ್ಟೆಯನ್ನು ಅಂಗಾತ ಇಟ್ಟು ಅದರ ಮೇಲೆ ಒಂದು ಎಳೆಯ ಕೂರ್ಚ ಇಟ್ಟು, ಜಲಕೂರ್ಚದಿಂದ ನೀರನ್ನು ದೊಣ್ಣೆತಟ್ಟೆಗೆ ವ್ಯಾಹೃತಿಯಿಂದ ಪ್ರೋಕ್ಷಣೆ ಮಾಡಿ ಅದರ ಮೇಲಿನ ಕೂರ್ಚವನ್ನು ಬದಿಗಿಟ್ಟು ತನ್ನೆದುರು ಕಮಂಡಲುಪಾತ್ರೆಯನ್ನು ಮೇಲ್ಮುಖವಾಗಿರಿಸಿಟ್ಟು,

**ಅಸ್ಮತ್ಪಿತುಃ ........ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಕಮಂಡಲುಮುಪತಿಷ್ಠತು ॥** ನೀರು ಹಾಕಿ, **ಜಲಮುಪತಿಷ್ಠತು ।**

ಬದಿಗಿಟ್ಟ ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಕಮಂಡಲಿನೊಳಗಿಟ್ಟು '**ಕೂರ್ಚಮುಪತಿಷ್ಠತು ॥**' ಅನಂತರ ಹಿರಣ್ಯಾದಿಗಳನ್ನು ಹಾಕಬೇಕು. '**ಹಿರಣ್ಯಮುಪತಿಷ್ಠತು । ತಿಲಮುಪತಿಷ್ಠತು । ಗಂಧಮುಪತಿಷ್ಠತು । ತುಲಸಿಮುಪತಿಷ್ಠತು । ಪುಷ್ಪಮುಪತಿಷ್ಠತು । ದೂರ್ವಾಮುಪತಿಷ್ಠತು । ಅಕ್ಷತಮುಪತಿಷ್ಠತು ॥**'

(ಬಲ) ಕೈಯನ್ನು ಕಮಂಡಲು ಪಾತ್ರದ ಮೇಲೆ ಬೋರಲು ಹಾಕಿ ಅಷ್ಟಾಕ್ಷರಜಪ ಮಾಡಿ '**ಕಮಂಡಲುಪಾತ್ರೇ ಸಕೂರ್ಚ ಹಿರಣ್ಯ ತಿಲ ಗಂಧ ತುಲಸೀ ಪುಷ್ಪ ದೂರ್ವಾಕ್ಷತಮುಪತಿಷ್ಠತು ॥**' **ಕಮಂಡಲುಪಾತ್ರಂ ಸಂಪನ್ನಮ್ ॥ (ಸುಸಂಪನ್ನಮ್) ॥** –ಎಂದು ಹಿಂದಿನ ಸ್ಥಾನದಲ್ಲಿಡಬೇಕು.

## ಪ್ರೇತಬರ್ಹಿಷಃ ಶುದ್ಧಿಃ

(ಎಡ) ಪ್ರೇತಪಿಂಡಸ್ಥಳವಾದ ತ್ರಿಕೋಣಾಕಾರದ ಮಂಡಲದ ಒಳಗೆ ಔದುಂಬರ ಸಮಿಧೆಯಿಂದ, (ಗಂಡುಸರಿಗೆ–

**ಓಮ್ ಉದೀರತಾಮವರ ಉತ್ಪರ ಉನ್ಮಧ್ಯಮಾಃ ಪ್ರೇತಃ ಸೋಮ್ಯಃ ।**
**ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪ್ರೇತೋ ಹವೇಷು ॥**

(ಹೆಂಗುಸರಿಗೆ-

**ಓಮ್ ಉದೀರತಾಮವರೋತ್ಪರೋನ್ಮಧ್ಯಮಾಃ ಪ್ರೇತಾಃ ಸೋಮ್ಯಾ। ಅಸುಂ ಯೇ ಯಾದವೃಕಾ ಋತಜ್ಞಾಸಾ ನೋ ಹವ ಪ್ರೇತಾ ಹವೇಷು ॥)**

'**ಅಸ್ಮತ್ಪಿತುಃ .....ಶ್ರಾದ್ಧೇ ಪಿಂಡಸ್ಥಾನೇ ಉಲ್ಲೇಖನಮುಪತಿಷ್ಠತು ॥**' -ಎಂದು ಉತ್ತರದಿಂದ ದಕ್ಷಿಣಕ್ಕೆ ರೇಖೆ ಎಳೆದು ಆ ಸಮಿತ್ತನ್ನು ಮಂಡಲದಲ್ಲಿಟ್ಟು ಜಲಕೂರ್ಚದಿಂದ ಪ್ರೋಕ್ಷಣೆ ಮಾಡಿ ಸಮಿಧೆಯನ್ನು ತುಂಡು ಮಾಡಿ ಹಿಂದೆ ಬಿಸಾಡಿ ಕೈತೊಳೆದು ಪುನಃ ಎರಡು ದರ್ಭೆಯಿಂದ-

**ಓಮ್ ಅಪಹತಾ ಅಸುರಾ ರಕ್ಷಾಂಸಿ ಪಿಶಾಚಾ ಯೇ ಕ್ಷಯಂತಿ ಪೃಥಿವೀಮನು। ಅನ್ಯತ್ರೇತೋ ಗಚ್ಛಂತು ಯತ್ರಾಸ್ಯ [ಯತ್ರಾಸ್ಯಾ] ಗತಂ ಮನಃ ॥**

-ಎಂದು ಹಿಂದಿನ ಕ್ರಮದಂತೆ '**ಉಲ್ಲೇಖನಮುಪತಿಷ್ಠತು ॥**' -ಎಂದು ಉಲ್ಲೇಖನ ಮಾಡಿ ಹಿಂದೆ ಬಿಸಾಡಿ ಕೈತೊಳೆದು ಎಳ್ಳು ಹಿಡಿದು, '**ಅಸ್ಮತ್ಪಿತುಃ .......ಶ್ರಾದ್ಧೇ ಮಂಡಲೋಪರಿ ತಿಲಮುಪತಿಷ್ಠತು ॥**' -ಎಂದು ಎಳ್ಳು ಹರಡಿ ನಾಲ್ಕು ದರ್ಭೆ ದಕ್ಷಿಣಾಗ್ರವಾಗಿ ಹಿಡಿದು '**ಅಸ್ಮತ್ಪಿತುಃ .......ಶ್ರಾದ್ಧೇ ಮಂಡಲಮಧ್ಯೇ ಬರ್ಹಿರುಪತಿಷ್ಠತು ॥**' -ಎಂದು ಮಂಡಲಮಧ್ಯದಲ್ಲಿಟ್ಟು, ತಿಲೋದಕ ಹಿಡಿದು, '**ಅಸ್ಮತ್ಪಿತುಃ ......ಶ್ರಾದ್ಧೇ ಬರ್ಹಿಷ್ಯುಪರಿ ತಿಲೋದಕಮುಪತಿಷ್ಠತು ॥**' -ಎಂದು ಬರ್ಹಿಸ್ಸಿನ ಮೇಲೆ ಬಿಟ್ಟು ಒಂದು ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು, '**ಅಸ್ಮತ್ಪಿತುಃ .....ಶ್ರಾದ್ಧೇ ಪ್ರೇತಸ್ಯ ಆಸನಮುಪತಿಷ್ಠತು ॥**' -ಎಂದು ಬರ್ಹಿಸ್ಸಿನ ಮೇಲೆ ಅಡ್ಡ ಇಟ್ಟು ಜಲಕೂರ್ಚದಿಂದ ನೀರು ಹಿಡಿದು, '**ಆಸನಾಂತೇ ಉದಕಮುಪತಿಷ್ಠತು ॥**' -ಎಂದು ಆಸನದ ಮೇಲೆ ಬಿಟ್ಟು ಎಳ್ಳು, ಗರಿಕೆ ಹಿಡಿದು, '**ಅಸ್ಮತ್ಪಿತುಃ ....ಶ್ರಾದ್ಧೇ ಪಿತುಃ .....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಬರ್ಹಿಃಸ್ಥಾನೇ ಆವಾಹನಮುಪತಿಷ್ಠತು ॥**' -ಎಂದು ಆಸನದ ಮೇಲಿಟ್ಟು ಜಲಕೂರ್ಚದಿಂದ ನೀರು ಹಿಡಿದು, '**ಆವಾಹನಾಂತೇ ಜಲಮುಪತಿಷ್ಠತು ॥**' -ಎಂದು ನೀರು ಕೊಡಬೇಕು.

## ಪಿತೃಕಮಂಡಲುಸ್ಥಾಪನಮ್

(ಬಲ) ಪಿತೃಪಿಂಡಸ್ಥಾನದ ಮಂಡಲಾಗ್ರದಲ್ಲಿ ದಕ್ಷಿಣಾಗ್ರವಾಗಿ ಮೂರು ದರ್ಭೆ ಹಾಗು ಎಳ್ಳು ಹಾಕಿ ಅದರ ಮೇಲೆ ಒಂದು ಕಮಂಡಲುಪಾತ್ರವನ್ನು ಬೋರಲು ಹಾಕಿ ಅದರ ಮೇಲೆ ಮೂರು ಎಳೆಯ ಕೂರ್ಚ ಇಟ್ಟು ಜಲಕೂರ್ಚದಿಂದ '**ಭೂರ್ಭುವಃ-ಸ್ವರೋಮ್ ॥**' ಎಂದು ಕಮಂಡಲುವಿಗೆ ನೀರು ಪ್ರೋಕ್ಷಣೆ ಮಾಡಿ, ತಟ್ಟೆಯ ಮೇಲಿರುವ ಜಲಕೂರ್ಚವನ್ನು ಬದಿಗಿಟ್ಟು, ಕಮಂಡಲುವನ್ನು ತನ್ನ ಹತ್ತಿರಲ್ಲಿ ಮೇಲ್ಮುಖವಾಗಿರಿಸಿ

ಪುನಃ ಪ್ರೋಕ್ಷಣೆ ಮಾಡಿ ಮಂತ್ರಪೂರ್ವಕವಾಗಿ ನೀರು ಹಾಕಿ ಬದಿಗಿಟ್ಟ ಮೂರು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು, ಅಕ್ಕಿ, ಎಳ್ಳು, ಹೂ, ತುಲಸಿ, ಗರಿಕೆ, ಭೃಂಗರಾಜ, ಹಿರಣ್ಯ ಹಾಕಿ ಪೂರಣೆ ಮಾಡಬೇಕು.

**ಯವೋಽಸಿ ಧಾನ್ಯರಾಜೋ ವಾ ವಾರುಣೋ ಮಧುಸಂಯುತಃ ।**
**ನಿರ್ಣೋದಃ ಸರ್ವಪಾಪಾನಾಂ ಪವಿತ್ರಮೃಷಿಭಿಃ ಸ್ಮೃತಮ್ ॥**

**ತಿಲೋಽಸಿ ಸೋಮದೈವತ್ಯೋ ಗೋಸವೇ ದೇವನಿರ್ಮಿತಃ ।**
**ಪ್ರತ್ನವದ್ಭಿಃ ಪ್ರತ್ತ ಸ್ವಧಯಾ ಪಿತೄನಿಮಾನ್**
**ಲೋಕಾನ್ ಪ್ರೀಣಯಾಹಿ ನಃ ಸ್ವಧಾ ನಮಃ ॥**

ಕೈಯನ್ನು ಕಮಂಡಲು ಪಾತ್ರದ ಮೇಲೆ ಬೋರಲು ಹಾಕಿ, ಅಷ್ಟಾಕ್ಷರಜಪ ಮಾಡಿ '**ಕಮಂಡಲ್ವರ್ಘ್ಯಪಾತ್ರೇ ಸಕೂರ್ಚಜಲಗಂಧಪುಷ್ಪತಿಲದೂರ್ವಾಕ್ಷತೈಃ ಸ್ವಧಾ ನ ಮಮ ॥ ಕಮಂಡಲ್ವರ್ಘ್ಯಪಾತ್ರಂ ಸಂಪನ್ನಮ್ ॥' (ಸುಸಂಪನ್ನಮ್) ॥**

ಕಮಂಡಲುಪಾತ್ರೆಯ ಒಂದು ಉದ್ಧರಣೆ ನೀರು ತೆಗೆದು ನೆಲಕ್ಕೆ ಹಾಕಿ,

**ಓಂ ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ । ಇಂದ್ರೋ ಮಾಯಾಭಿಃ ಪುರುರೂಪ ಈಯತೇ । ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥**

ಆ ನೀರಿನಲ್ಲಿ ಮುಖದರ್ಶನ ಮಾಡಿ ಆ ನೀರನ್ನು ಎರಡು ಕಣ್ಣಿಗೂ ಮುಟ್ಟಿಸಿ ಕಮಂಡಲುವನ್ನು ಮೊದಲಿನ ಸ್ಥಾನದಲ್ಲಿ ಇಡಬೇಕು.

## ಬರ್ಹಿಷಃ ಶುದ್ಧಿಃ

(ಎಡ) ಜಲಕೂರ್ಚದಿಂದ ಪಿಂಡಸ್ಥಳಕ್ಕೆ ನೀರು ಪ್ರೋಕ್ಷಣೆ ಮಾಡಿ ಅತ್ತಿಸಮಿಧೆ ಹಿಡಿದು,

**ಓವ್ ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ । ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ॥**

–ಎಂದು ಪಿಂಡಸ್ಥಾನದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಸಮಿಧೆಯಿಂದ ಮೂರು ರೇಖೆಗಳನ್ನು ಎಳೆದು ಸಮಿಧೆಯನ್ನು ಮಂಡಲದ ಮೇಲಿಟ್ಟು ಜಲಕೂರ್ಚದಿಂದ ನೀರನ್ನು ಪ್ರೋಕ್ಷಣೆ ಮಾಡಿ ಸಮಿಧೆಯನ್ನು ತುಂಡುಮಾಡಿ,

**ಓಂ ತವ ವಾಯವೃತಸ್ಪತೇ ತ್ವಷ್ಟುರ್ಜಾಮಾತರದ್ಭುತ । ಅವಾಂಸ್ಯಾ ವೃಣೀಮಹೇ ॥** –ಎಂದು ವಾಯವ್ಯಕ್ಕೆ ಹಿಂದೆ ಬಿಸಾಡಿ, ಎರಡು ದರ್ಭೆ ಹಿಡಿದು,

**ಓಮ್ ಅಪಹತಾ ಅಸುರಾ ರಕ್ಷಾꣳಸಿ ಪಿಶಾಚಾ ಯೇ ಕ್ಷಯಂತಿ ಪೃಥಿವೀಮನು । ಅನ್ಯತ್ರೇತೋ ಗಚ್ಛಂತು ಯತ್ರೈಷಾಂ [ಯತ್ರಾಸಾಂ] ಗತಂ ಮನಃ ॥** –ಎಂದು ಹಿಂದಿನ ಕ್ರಮದಂತೆ ಉಲ್ಲೇಖನ ಮಾಡಿ, ಮಂಡಲದ ಮೇಲಿಟ್ಟು, ಜಲಕೂರ್ಚದಿಂದ ನೀರನ್ನು ಪ್ರೋಕ್ಷಣೆ ಮಾಡಿ ದರ್ಭೆಯನ್ನು ತುಂಡು ಮಾಡಿ ಹಿಂದೆ ಬಿಸಾಡಬೇಕು. ಅನಂತರ ಎಳ್ಳು ಹಿಡಿದು,

**ಗೋಕರ್ಣ ಸೇತೋ ಹಿಮವತ್ಪ್ರಯಾಗೌ ಕಾಶ್ಮೀರಸೋಮೇಶ್ವರವಿಷ್ಣುಪಾದಾಃ ।**
**ಶ್ರೀರಂಗ ಕೇದಾರ ಅನಂತ ಕನ್ಯೇ ಸ್ವಾಮಿನ್ ಕುರುಕ್ಷೇತ್ರ ಸದಾ ನಮಸ್ತೇ ॥**

–ಎಂದು ಪಿಂಡ ಸ್ಥಾನದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಹರಡಿ ವಿಷ್ಣುಪಾದವನ್ನು ಉತ್ತರಾಭಿಮುಖವಾಗಿ ಪಿಂಡಸ್ಥಾನದ ಮಧ್ಯದಲ್ಲಿಟ್ಟು,

**ಓಂ ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ । ಅತೋ ಧರ್ಮಾಣಿ ಧಾರಯನ್ ॥**

**ಅತ್ರ ವಿಷ್ಣುಪದಂ ದಿವ್ಯಂ ದರ್ಶನಾತ್ಪಾಪನಾಶನಮ್ ।**
**ಸ್ಪರ್ಶನಾತ್ಪೂಜನಾಚ್ಚೈವ ಪಿತೃಣಾಂ ಮುಕ್ತಿಹೇತವೇ ॥**

**ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।**
**ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಿಕಾಃ ॥** ಎಂದು ಪ್ರಾರ್ಥಿಸಿ,

**ಬರ್ಹಿಷ್ಯಾಸನಾಽವಾಹನಮ್**

ತೊಂಬತ್ತಾರು ಇಲ್ಲವೇ ಅರವತ್ತನಾಲ್ಕು ತುದಿ ದರ್ಭೆಯ ಬರ್ಹಿಸ್ಸಿನ ಗಂಟು ಬಿಚ್ಚಿ

**ಓಮ್ ಅಪಾಂ ಮೇಧ್ಯಂ ಯಜ್ಞಿಯಗ್ಂ ಸದೇವಗ್ಂ ಶಿವಮಸ್ತು ಮೇ । ಆಚ್ಛೇತ್ತಾವೋಮಾರಿಷಂ ಜೀವಾನಿ ಶರದಶ್ಶತಮ್ । ಆಚ್ಛಿನತ್ತಿ ॥** ಎಂದು ತುಂಡು ಮಾಡಿ ಹಿಂದೆ ಬಿಸಾಡಿ ದಕ್ಷಿಣಾಗ್ರವಾಗಿ ವಿಷ್ಣುಪಾದದ ಮೇಲೆ ಬಿಡಿಸಿ,

**ಓಂ ಯೇ ಪಾರ್ಥಿವಾಸಃ ಪಿತರೋ ಯೇ ಅಂತರಿಕ್ಷೇ ಯೇ ದಿವಿ ಯೇ ವಾಮೃತಾ ಬಭೂವುಸ್ತೇऽಸ್ಮಿನ್ಯಜ್ಞೇ ಸಮವಯಂತಾಮ್ ॥**

ಅಂಜಲಿಮುದ್ರೆ ಮಾಡಿ ಬರ್ಹಿಸ್ಸಿನಲ್ಲಿ ಉತ್ತರದಿಂದ ದಕ್ಷಿಣಕ್ಕೆ ಸ್ಥಾನಕಲ್ಪನೆ ಮಾಡಬೇಕು.

**ಓಂ ಸಕೃದಾಚ್ಛಿನ್ನಂ ಬರ್ಹಿರೂರ್ಣಾಮೃದುಸ್ಯೋನಂ ಪಿತೃಭ್ಯಸ್ತ್ವಾ ಭರಾಮ್ಯಹಮ್ । ಅಸ್ಮಿನ್ ತ್ಸೀದಂತು ಮೇ ಪಿತರಸ್ಸೋಮ್ಯಾಃ ॥**

**ಪಿತಾಮಹೇಭ್ಯೋ ವ ಇಮಾನಿ ಸ್ಥಾನಾನಿ । ಪ್ರಪಿತಾಮಹೇಭ್ಯೋ ವ ಇಮಾನಿ ಸ್ಥಾನಾನಿ । ವೃದ್ಧಪಿತಾಮಹೇಭ್ಯೋ ವ ಇಮಾನಿ ಸ್ಥಾನಾನಿ ॥ [ಪಿತಾಮಹೀಭ್ಯೋ ವ ಇಮಾನಿ ಸ್ಥಾನಾನಿ, ಪ್ರಪಿತಾಮಹೀಭ್ಯೋ ವ ಇಮಾನಿ ಸ್ಥಾನಾನಿ, ವೃದ್ಧಪ್ರಪಿತಾ–ಮಹೀಭ್ಯೋ ವ ಇಮಾನಿ ಸ್ಥಾನಾನಿ]**

ಮೂರು ಸ್ಥಾನಗಳಲ್ಲಿ ಅಷ್ಟಾಕ್ಷರದೊಂದಿಗೆ ಜಲಕೂರ್ಚದಿಂದ ನೀರು ಕೊಟ್ಟು ಹಾಗೆಯೇ (ಬಲ) ಏಳು ದರ್ಭೆಗಳಿಂದ ಮಾಡಿದ ಏರಕದಲ್ಲಿ ಅಂಜಲಿಮುದ್ರೆಯಿಂದ ಮೂರು ಸ್ಥಾನಗಳಲ್ಲಿ '**ಪಿತಾಮಹಪ್ರಪಿತಾಮಹವೃದ್ಧಪ್ರಪಿತಾಮಹೇಭ್ಯೋ ವ ಇಮಾನಿ ಸ್ಥಾನಾನಿ ।**' ಎಂದು ಕಲ್ಪನೆ ಮಾಡಿ, ಜಲಕೂರ್ಚದಿಂದ ಏರಕದ ಮೂರು ಸ್ಥಾನಗಳಲ್ಲಿಯೂ ಅಷ್ಟಾಕ್ಷರಮಂತ್ರದಿಂದ ನೀರು ಕೊಟ್ಟು (ಎಡ) ಜಲಗಂಧಪುಷ್ಪಾಕ್ಷತತಿಲಹಿಡಿದು ಬರ್ಹಿಸ್ಸಿನ ಮೂರು ಸ್ಥಾನಗಳಲ್ಲಿ ಉತ್ತರದಿಂದ ದಕ್ಷಿಣಕ್ಕೆ ನಾರಾಯಣಸ್ಮರಣೆಯೊಂದಿಗೆ ತಿಲೋದಕ ಕೊಟ್ಟು, ಹೀಗೆಯೇ (ಬಲ) ಏರಕದಲ್ಲಿಯೂ ಗಂಧಪುಷ್ಪಸಹಿತ ಅಕ್ಷತೋದಕ ಕೊಟ್ಟು (ಎಡ) ಮೂರು ದರ್ಭೆಗಳನ್ನು ಪೂರ್ವಾಗ್ರವಾಗಿ ಹಿಡಿದು,

**ಅಸ್ಮತ್ ಪಿತಾಮಹಸ್ಯ ......ಶರ್ಮಣಃ ......ಗೋತ್ರಸ್ಯ ವಸುರೂಪಸ್ಯ ತದಂತ–ರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸ್ಯ ಇದಮಾಸನಮ್ ॥ [ಪಿತಾಮಹ್ಯಾಃ .....ದಾಯಾಃ .....ಗೋತ್ರಾಯಾಃ .....ರೂಪಾಯಾಃ]**

–ಎಂದು ಬರ್ಹಿಸ್ಸಿನ ಮೂಲದಲ್ಲಿ ಅಡ್ಡ ಇಟ್ಟು, ಹೀಗೆಯೇ ಪುನಃ ಮೂರು ದರ್ಭೆಗಳನ್ನು ಪೂರ್ವಾಗ್ರವಾಗಿ ಹಿಡಿದು,

**ಅಸ್ಮತ್ ಪ್ರಪಿತಾಮಹಸ್ಯ ........ಶರ್ಮಣಃ ........ಗೋತ್ರಸ್ಯ ರುದ್ರರೂಪಸ್ಯ ತದಂತರ್ಯಾಮಿ ಪ್ರಾಣಸ್ಥಸಂಕರ್ಷಣಸ್ಯ ಇದಮಾಸನಮ್ ॥**

–ಎಂದು ಬರ್ಹಿಸ್ಸಿನ ಮಧ್ಯಭಾಗದಲ್ಲಿಟ್ಟು, ಪುನಃ ಮೂರು ದರ್ಭೆಗಳನ್ನು ಪೂರ್ವಾಗ್ರವಾಗಿ ಹಿಡಿದು,

**ಅಸ್ಮತ್ ವೃದ್ಧಪ್ರಪಿತಾಮಹಸ್ಯ ........ಶರ್ಮಣಃ ........ಗೋತ್ರಸ್ಯ ಆದಿತ್ಯರೂಪಸ್ಯ ತದಂತರ್ಯಾಮಿ ಪ್ರಾಣಸ್ಥವಾಸುದೇವಸ್ಯ ಇದಮಾಸನಮ್ ॥**

–ಎಂದು ಬರ್ಹಿಸ್ಸಿನ ಅಗ್ರಭಾಗದಲ್ಲಿಟ್ಟು (ಬಲ) ಏರಕದಲ್ಲಿ ಮೂರು ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು,

**ಅಸ್ಮತ್ಪಿತಾಮಹ ಪ್ರಪಿತಾಮಹ ವೃದ್ಧಪ್ರಪಿತಾಮಹಾನಾಂ ........ಶರ್ಮಣಾಂ ........ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥ ಪ್ರದ್ಯುಮ್ನಸಂಕರ್ಷಣವಾಸುದೇವಾನಾಮಿದಮಿದಮಾಸನಮ್ ॥ [ಅಸ್ಮತ್ಪಿತಾಮಹಿ .......ಮಹೀನಾಂ .....ದಾನಾಂ .....ಗೋತ್ರಾಣಾಂ ಸ್ವರೂಪಾಣಾಮ್]**

–ಎಂದು ಏರಕದ ಮಧ್ಯದಲ್ಲಿಟ್ಟು ಜಲಕೂರ್ಚದಿಂದ ನೀರು ಹಿಡಿದು **'ಆಸನಾಂತೇ ಉದಕಮ್'** –ಎಂದು ಏರಕದಲ್ಲಿ ನೀರನ್ನು ಬಿಟ್ಟು (ಎಡ) ಬರ್ಹಿಸ್ಸಿನ ಮೂರು ಸ್ಥಾನ ಗಳಲ್ಲಿಯೂ **'ಆಸನಾಂತೇ ಉದಕಮ್'** ಎಂದು ನೀರು ಕೊಟ್ಟು, ಎಳ್ಳು, ಗರಿಕೆ ಹಿಡಿದು ಮೂರು ಸ್ಥಾನಗಳಲ್ಲಿಯೂ ಪ್ರತ್ಯೇಕವಾಗಿ ನಾಮಗೋತ್ರೋಚ್ಚಾರಣೆಯೊಂದಿಗೆ ಕ್ರಮವಾಗಿ ಅಡ್ಡ ಇಟ್ಟ ದರ್ಭೆಯ ಮೇಲಿಟ್ಟು ಆವಾಹನೆ ಮಾಡಬೇಕು.

**ಅಸ್ಮತ್ ಪಿತಾಮಹಂ .....ಶರ್ಮಾಣಂ .....ಗೋತ್ರಂ ವಸುರೂಪಂ ಪ್ರಾಣಸ್ಥ ಪ್ರದ್ಯುಮ್ನಮಾವಾಹಯಾಮಿ ॥ [ಅಸ್ಮತ್ಪಿತಾಮಹೀಂ .....ದಾಂ .....ಗೋತ್ರಾಂ .....ರೂಪಾಂ]** –ಎಂದು ಬರ್ಹಿಸ್ಸಿನ ಮೂಲದಲ್ಲಿಟ್ಟು, ಪುನಃ ಎಳ್ಳುಗರಿಕೆ ಹಿಡಿದು,

**ಅಸ್ಮತ್ ಪ್ರಪಿತಾಮಹಂ ........ಶರ್ಮಾಣಂ ........ಗೋತ್ರಂ ರುದ್ರರೂಪಂ ಪ್ರಾಣಸ್ಥಸಂಕರ್ಷಣಮಾವಾಹಯಾಮಿ ॥** ಎಂದು ಬರ್ಹಿಸ್ಸಿನ ಮಧ್ಯದಲ್ಲಿಟ್ಟು, ಪುನಃ ಎಳ್ಳುಗರಿಕೆ ಹಿಡಿದು,

**ಅಸ್ಮತ್ ವೃದ್ಧಪಿತಾಮಹಂ ........ಶರ್ಮಾಣಂ ........ಗೋತ್ರಮ್ ಆದಿತ್ಯರೂಪಂ ಪ್ರಾಣಸ್ಥವಾಸುದೇವಮಾವಾಹಯಾಮಿ ॥** –ಎಂದು ಬರ್ಹಿಸ್ಸಿನ ಅಗ್ರಭಾಗದಲ್ಲಿಡಬೇಕು.

## ಧ್ರುವಾಜ್ಯಸಾದನಮ್

(ಬಲ) ಔದುಂಬರಪತ್ರಕ್ಕೆ ತುಪ್ಪ ಹಾಕಿ, ಎರಡು ದರ್ಭೆಗಳಿಗೆ ನಡುವೆ ಪವಿತ್ರಗ್ರಂಥಿ ಮಾಡಿ ಎರಡು ಕೈಯ ಅಂಗುಷ್ಠ ಅನಾಮಿಕ ಬೆರಳಿನಿಂದ ದರ್ಭೆಯ ಎರಡು ಬದಿಗಳಲ್ಲಿ ಹಿಡಿದು ತುಪ್ಪವನ್ನು ಮೂರು ಬಾರಿ **'ಸವಿತುಷ್ಟ್ವಾ'** ಮಂತ್ರದಿಂದ ಉತ್ಪವನ ಮಾಡಬೇಕು.

**ಓಂ ಸವಿತುಷ್ಟ್ವಾ ಪ್ರಸವ ಉತ್ಪುನಾಮ್ಯಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ ॥ ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋ ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ ॥**

ಅನಂತರ, ಆ ದರ್ಭೆಯಿಂದಲೇ ಉತ್ಪವನದ ತುಪ್ಪವನ್ನು ಏರಕೆಯ ಮೂರು

ಸ್ಥಾನಗಳಿಗೆ ಮುಟ್ಟಿಸಿ (ಎಡ) ಬರ್ಹಿಸ್ಸಿನ ಪಿತಾಮಹಾದಿ ಮೂರು ಸ್ಥಾನಗಳಲ್ಲಿ ಹಚ್ಚಿದ ಅನಂತರ ಪ್ರೇತಸ್ಥಾನದಲ್ಲಿ ಹಚ್ಚಿ ಇನ್ನೊಂದು ಎಲೆಯಿಂದ ತುಪ್ಪವನ್ನು ಮುಚ್ಚಿ ಏರಕದ ಮೂಲದಲ್ಲಿಟ್ಟು ಅದರ ಮೇಲೆ ಗರಿಕೆ ಮತ್ತು ಅಕ್ಕಿ ಇಡಬೇಕು.

**ಶ್ರಾದ್ಧಕರ್ಮಾವಸಾನಪರ್ಯಂತಂ ಧ್ರುವಾಜ್ಯೇ ಪಿತರಃ ಸನ್ನಿಹಿತಾಃ ಸಂತ್ವಿತಿ ಭವಂತೋ ಬ್ರುವಂತು ॥ [ಧ್ರುವಾಜ್ಯೇ ಪಿತರಃ ಸನ್ನಿಹಿತಾಃ ಸಂತು ॥]**

## ಕ್ಷಣಪಾದ್ಯಾದಿ

**ಕ್ಷಣಪಾದ್ಯಾದಿಕಂ ಕರ್ಮ ಕರಿಷ್ಯೇ ॥**

ವಿಶ್ವೇದೇವಸ್ಥಾನದ ಬ್ರಾಹ್ಮಣರ ಬಲಕ್ಕೈಗೆ ಜಲಕೂರ್ಚದಿಂದ ನೀರು ಕೊಟ್ಟು ಎರಡು ದರ್ಭೆ, ಅಕ್ಕಿ ಕೊಟ್ಟು

**ಪಿತುಃ ........ಶ್ರಾದ್ಧೇ ಕಾಮಕಾಲಸಂಜ್ಞಕ ವಿಶ್ವೇದೇವಾಂತರ್ಯಾಮಿ ಪ್ರಾಣಸ್ಥನಾರಾಯಣಾನಿರುದ್ಧಯೋಃ ಸ್ಥಾನೇ ಆಹವನೀಯಾರ್ಥೇ ಕ್ಷಣಃ ॥**

ಒಂದು ಅಡಕೆ ಮತ್ತು ದಕ್ಷಿಣೆ ಕೊಟ್ಟು '**ಭವದ್ಭಿಃ ಪ್ರಸಾದಃ ಕರ್ತವ್ಯಃ ॥ ವಿಶ್ವೇದೇವಾಃ ಸನ್ನಿಹಿತಾಃ ಸಂತು ॥**' ಎನ್ನಬೇಕು. ಅನಂತರ (ಎಡ) ಜಲಕೂರ್ಚದಿಂದ ಪ್ರೇತಬ್ರಾಹ್ಮಣರ ಕೈಗೆ ನೀರು ಕೊಟ್ಟು ಒಂದು ದರ್ಭೆ, ಎಳ್ಳನ್ನು ಕೊಟ್ಟು, '**ಪಿತುಃ ........ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಕ್ಷಣಮುಪತಿಷ್ಠತು ॥**' -ಎಂದು ಒಂದು ಅಡಕೆ ಹಾಗೂ ದಕ್ಷಿಣೆ ಕೊಟ್ಟು, '**ಪ್ರೇತಾತ್ರ ಸನ್ನಿಹಿತೋ ಭವ ।**' ಪುನಃ ಪಿತೃಬ್ರಾಹ್ಮಣರಿಗೆ ಜಲಕೂರ್ಚದಿಂದ ಬಲಕ್ಕೈಗೆ ನೀರು ಕೊಟ್ಟು ಮೂರು ದರ್ಭೆ ಎಳ್ಳನ್ನು ಕೊಟ್ಟು '**ಪಿತಾಮಹ ಪ್ರಪಿತಾಮಹ ವೃದ್ಧಪ್ರಪಿತಾಮಹಾಂತರ್ಯಾಮಿ ......ವಾಸುದೇವಾನಾಂ ಸ್ಥಾನೇ ಆಹವನೀಯಾರ್ಥೇ ಕ್ಷಣಃ ॥**' ಒಂದು ಅಡಕೆ ಮತ್ತು ದಕ್ಷಿಣೆ ಕೊಟ್ಟು, '**ಭವದ್ಭಿಃ ಪ್ರಸಾದಃ ಕರ್ತವ್ಯಃ । ಪಿತಾಮಹಪ್ರಪಿತಾಮಹವೃದ್ಧಪ್ರಪಿತಾಮಹಾಃ (.....ಮಹ್ಯಃ) ಸನ್ನಿಹಿತಾಃ ಸಂತು ॥**'

**ಅಕ್ರೋಧನೈಃ ಶೌಚಪರೈಃ ಸತತಂ ಬ್ರಹ್ಮವಾದಿ[ಚಾರಿ]ಭಿಃ ।**
**ಭವಿತವ್ಯಂ ಭವದ್ಭಿಶ್ಚ ಮಯಾ ಚ ಶ್ರಾದ್ಧಕಾರಿಣಾ ॥**

-ಎಂಬ ಮಂತ್ರ ಪಠಿಸಿ,

## ಬ್ರಾಹ್ಮಣಪಾದಪ್ರಕ್ಷಾಲನಮ್

**ವಿಶ್ವೇದೇವಸ್ಥಾನೇ-**

ಕನಿಷ್ಠಪೂರ್ವಕರಾಗಿ ನೀರು ಮತ್ತು ದ್ರವ್ಯಗಳ ಹರಿವಾಣ ಹಿಡಿದುಕೊಂಡು ಬ್ರಾಹ್ಮಣರನ್ನು ಹಿಂದೆ ಮಾಡಿಕೊಂಡು ತುಳಸಿಕಟ್ಟೆಯ ಬಳಿ ಬಂದು ಪೂರ್ವಾಭಿಮುಖವಾಗಿ ವಿಶ್ವೇದೇವ

ಸ್ಥಾನೀಯ ಬ್ರಾಹ್ಮಣರನ್ನು ನಿಲ್ಲಿಸಿ ಯಜಮಾನ ಪಶ್ಚಿಮಾಭಿಮುಖವಾಗಿ ನಿಂತು ಎರಡು ದರ್ಭೆ ಹಿಡಿದು, '**ಕಾಮಕಾಲ.... ಪ್ರಾಣಸ್ಥನಾರಾಯಣಾನಿರುದ್ಧಯೋಃ ಸ್ಥಾನೇ ಕ್ಷಣಃ ಕ್ರಿಯತಾಮ್** ॥' ಎಂದು ದರ್ಭೆ ಕೊಟ್ಟು ಬ್ರಾಹ್ಮಣರ ಪಾದಮೂಲದಲ್ಲಿ ನೀರಿನಿಂದ ಪೂರ್ವದಿಂದ ಪಶ್ಚಿಮಕ್ಕೆ ಎರಡು ಚೌಕಾಕಾರದ ಮಂಡಲಗಳನ್ನು ಮಾಡಿ, '**ಕಾಮಕಾಲಕ...... ಪಾದ್ಯಸ್ಥಾನಂ ಕಲ್ಪಯಾಮಿ । ಆಸನಸ್ಥಾನಂ ಕಲ್ಪಯಾಮಿ** ।' ಎರಡು ದರ್ಭೆಯನ್ನು ಉತ್ತರಾಗ್ರವಾಗಿ ಹಿಡಿದು, '**ಪಾದ್ಯ ಸ್ಥಾನೇ ಇಮೌ ದರ್ಭೌ** ।' ಪಾದ್ಯಸ್ಥಾನದಲ್ಲಿ ಹಾಕಿ, ಪುನಃ ಎರಡು ದರ್ಭೆ ಹಿಡಿದು, '**ಆಸನಸ್ಥಾನೇ ಇಮೌ ದರ್ಭೌ** ॥' ಎಂದು ಆಸನಸ್ಥಾನದಲ್ಲಿ ಹಾಕಿ ಎರಡು ಸ್ಥಾನಗಳಲ್ಲಿ ಅಕ್ಷತೋದಕ ಕೊಟ್ಟು ಅಂಜಲಿಮುದ್ರೆ ಮಾಡಿ '**ಕಾಮಕಾಲಕ...... ಸ್ವಾಗತಮ್** ॥' ಎಂದು ಬ್ರಾಹ್ಮಣರ ಕೈಯ ಹೆಬ್ಬೆರಳು ಹಿಡಿದು [**ಸುಸ್ವಾಗತಮ್**] '**ಪ್ರಾಪ್ನೋತು ಭವಾನ್**।' [**ಓಂ ತಥಾ ಪ್ರಾಪ್ನವಾನಿ**] '**ವಿಶ್ವೇಭ್ಯೋ ದೇವೇಭ್ಯೋ ನಮಃ । ಶಿರಸಿ ಪುಷ್ಪಮ್** ॥' ತಲೆಗೆ ಹೂಇಟ್ಟು ಎರಡೂ ಪವಿತ್ರಗಳನ್ನು ಹೊರತೆಗೆದು ಹರಿವಾಣದಲ್ಲಿಟ್ಟು '**ಪಾದಯೋ-ರ್ಗಂಧಃ** ॥' ಎಂದು ಹೂವಿಗೆ ಗಂಧ ಮುಟ್ಟಿಸಿ ಕಾಲಿಗೆ ಇಟ್ಟು, ಹಿಂದಿನ ಪವಿತ್ರಗಳೆರಡನ್ನೂ ಧರಿಸಿ ಎರಡು ದರ್ಭೆ ಹಾಗೂ ಅಕ್ಷತೋದಕ ಹಿಡಿದು ಬ್ರಾಹ್ಮಣರ ಪಾದಕ್ಕೆ ಹಾಕಿ '**ವಿಶ್ವೇದೇವಾಃ ಇದಂ ವಃ ಪಾದ್ಯಮ್** ॥' ಅನಂತರ ಎರಡೂ ಪವಿತ್ರಗಳನ್ನು ಹೊರತೆಗೆದು ಬಲ ಕಿವಿಯಲ್ಲಿಟ್ಟು ಶುದ್ಧಮೃತ್ತಿಕೆ ಹಾಗೂ ಗೋಮಯದಿಂದ ವಿಶ್ವೇದೇವ ಬ್ರಾಹ್ಮಣರ ಬಲಕಾಲು ತೊಳೆದು ಅನಂತರ ಎಡಕಾಲು ತೊಳೆಯಬೇಕು. (ಕೆಲವರಲ್ಲಿ ಬ್ರಾಹ್ಮಣರ ಕಾಲಿನ ಅಂಗುಷ್ಠ ಬೆರಳುಗಳೆರಡಕ್ಕೆ ದರ್ಭೆಯಿಂದ ತುಪ್ಪ ಹಚ್ಚಿ ಕಾಲು ತೊಳೆಯುವ ಕ್ರಮವಿದೆ.)

**ಓಂ ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿ ಸ್ರವಂತು ನಃ ॥ ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತಸ್ತರತಿ ದುಷ್ಕೃತಾನಿ । ತೇನ ಪವಿತ್ರೇಣ ಶುದ್ಧೇನ ಪೂತಾ ಅತಿ ಪಾಪ್ಮಾನಮರಾತಿಂ ತರೇಮ ॥ ಲೋಕಸ್ಯ ದ್ವಾರಮರ್ಚಿಮತ್ಪವಿತ್ರಂ ಜ್ಯೋತಿಷ್ಮದ್ಭ್ರಾಜಮಾನಂ ಮಹಸ್ವತ್ । ಅಮೃತಸ್ಯ ಧಾರಾ ಬಹುಧಾ ದೋಹಮಾನಂ ಚರಣಂ ನೋ ಲೋಕೇ ಸುಧಿತಾಂ ದಧಾತು ॥ ಬಲಂ ಧೇಹಿ ತನೂಷು ನೋ ಬಲಮಿಂದ್ರಾನಳತ್ಸು ನಃ । ಬಲಂ ತೋಕಾಯ ತನಯಾಯ ಜೀವಸೇ ತ್ವಂ ಹಿ ಬಲದಾ ಅಸಿ ॥**

**ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ತೀರ್ಥಾನಿ ಸಾಗರೇ ।**
**ಸಾಗರೇ ಸರ್ವತೀರ್ಥಾನಿ ಪದೇ ವಿಪ್ರಸ್ಯ ದಕ್ಷಿಣೇ ॥**

**ಆಪಃ ಪಾದಾವನೇಜನೀರ್ದ್ವಿಷಂತಂ ನಿರ್ದಹಂತು ಮೇ ।**
**ಅಸ್ಮಿನ್ ಕುಲೇ ಬ್ರಹ್ಮವರ್ಚಸ್ವ್ಯಾಸಾನಿ ॥**

ಅನಂತರ ಪವಿತ್ರಗಳನ್ನು ಧರಿಸಿ ಪಾದೋದಕ ಪ್ರೋಕ್ಷಣೆ ಮಾಡಿಕೊಳ್ಳಬೇಕು.

**ಪ್ರೇತಸ್ಥಾನೇ–**

(ಎಡ) ಪ್ರೇತಬ್ರಾಹ್ಮಣರನ್ನು ಸಹ ಆಹ್ವಾನಿಸಿ ಉತ್ತರಾಭಿಮುಖವಾಗಿ ನಿಲ್ಲಿಸಿ ಒಂದು ದರ್ಭೆಯನ್ನು ಹಿಡಿದು, '**ಅಸ್ಮತ್ಪಿತುಃ [ಮಾತುಃ] ಗೋತ್ರಸ್ಯ [ಗೋತ್ರಾಯಾಃ] .......ಶರ್ಮಣಃ [ನಾಮ್ನ್ಯಾಃ] ಪ್ರೇತಸ್ಯ [ಪ್ರೇತಾಯಾಃ] ಕ್ಷಣಮುಪತಿಷ್ಠತು ॥**' ಎಂದು ದರ್ಭೆಕೊಟ್ಟು ನೀರಿನಿಂದ ಉತ್ತರದಿಂದ ದಕ್ಷಿಣಕ್ಕೆ ತ್ರಿಕೋನಾಕಾರದ ಎರಡು ಮಂಡಲಗಳನ್ನು ಮಾಡಿ '**ಪಾದ್ಯಾಸನಸ್ಥಾನಮುಪತಿಷ್ಠತು ॥**' ಪಾದ್ಯಾಸನದಲ್ಲಿ ಒಂದೊಂದು ದರ್ಭೆಯನ್ನು ಪೂರ್ವಾಗ್ರವಾಗಿ ಅಡ್ಡಹಾಕಿ '**ಪಾದ್ಯಾಸನಸ್ಥಾನಯೋಃ ದರ್ಭಪತ್ರಮುಪತಿಷ್ಠತು ॥**' ಎರಡು ಸ್ಥಾನಗಳಲ್ಲಿ ತಿಲೋದಕ ಕೊಟ್ಟು '**ತಿಲೋದಕಮುಪತಿಷ್ಠತು ॥**' (ಬಲ) ಅಂಜಲಿಮುದ್ರೆ ಮಾಡಿ '**ಪ್ರೇತಾಂತರ್ಗತ ಪ್ರಾಣಸ್ಥ ಪ್ರಾಜ್ಞಸ್ಯ ಸ್ವಾಗತಮುಪತಿಷ್ಠತು ॥**' (ಎಡ) ತಲೆಗೆ ಹೂ ಇಟ್ಟು '**ಪುಷ್ಪಮುಪತಿಷ್ಠತು ॥**' (ಬಲ) ಪವಿತ್ರಗಳೆರಡನ್ನು ಹೊರತೆಗೆದು ಹರಿವಾಣದಲ್ಲಿಟ್ಟು ಪಾದಕ್ಕೆ ಗಂಧ ಹಚ್ಚಿ, '**ಪಾದಯೋರ್ಗಂಧಪುಷ್ಪಮುಪತಿಷ್ಠತು ॥**' ಎಂದು ಹಿಂದಿನ ಪವಿತ್ರಗಳೆರಡನ್ನು ಧರಿಸಿ, (ಎಡ) ಒಂದು ದರ್ಭೆ ಹಾಗೂ ತಿಲೋದಕ ಹಿಡಿದು '**ಪಾದ್ಯಮುಪತಿಷ್ಠತು ॥**' ಎಂದು ಪಾದಗಳಿಗೆ ಬಿಟ್ಟು ಪವಿತ್ರಗಳೆರಡನ್ನು ಹೊರ ತೆಗೆದು ತನ್ನ ಬಲಕಿವಿಯಲ್ಲಿ ಸಿಕ್ಕಿಸಿಕೊಂಡು, ಕಾಲುತೊಳೆದು (ಪ್ರೋಕ್ಷಣೆ ಇಲ್ಲ) ಹಿಂದಿನ ಪವಿತ್ರಗಳೆರಡನ್ನು ಧರಿಸುವುದು.

**ಪಿತೃಸ್ಥಾನೇ–**

ಪ್ರೇತಬ್ರಾಹ್ಮಣರ ಪೂರ್ವಭಾಗದಲ್ಲಿ ಪಿತೃಬ್ರಾಹ್ಮಣರನ್ನು ಆಹ್ವಾನಿಸಿ ಉತ್ತರಾಭಿಮುಖವಾಗಿ ನಿಲ್ಲಿಸಿ, '**ಅಸ್ಮತ್ಪಿತುಃ ಮೃತಾಹಾದ್ದ್ವಾದಶೇಽಹನಿ ಪಿತಾಮಹ–ಪ್ರಪಿತಾಮಹವೃದ್ಧ–ಪ್ರಪಿತಾಮಹಾನಾಂ (...ಮಹೀನಾಂ) ಸ್ಥಾನೇ ಕ್ಷಣಃ ಕ್ರಿಯತಾಮ್ ॥**' ಎಂದು ಮೂರು ದರ್ಭೆಯನ್ನು ಕೊಟ್ಟು ಅವರ ಎದುರು ನೀರಿನಿಂದ ಉತ್ತರದಿಂದ ದಕ್ಷಿಣಕ್ಕೆ ವೃತ್ತಾಕಾರದ ಮಂಡಲಗಳೆರಡನ್ನು ಬರೆದು '**ಪಾದ್ಯಸ್ಥಾನಂ ಕಲ್ಪಯಾಮಿ । ಆಸನಸ್ಥಾನಂ ಕಲ್ಪಯಾಮಿ ॥**' ಮೂರು ದರ್ಭೆಗಳನ್ನು '**ಪಾದ್ಯಸ್ಥಾನೇ ಇಮೇ ದರ್ಭಾಃ ।**' ಎಂದು ಪಾದ್ಯಸ್ಥಾನದಲ್ಲಿ ಮೂರು ದರ್ಭೆಗಳನ್ನು ಪೂರ್ವಾಗ್ರವಾಗಿಟ್ಟು, '**ಆಸನಸ್ಥಾನೇ ಇಮೇ ದರ್ಭಾಃ ॥**' ಎಂದು ಆಸನಸ್ಥಾನದಲ್ಲಿ ಮೂರು ದರ್ಭೆಗಳನ್ನು ಪೂರ್ವಾಗ್ರವಾಗಿ ಹಾಕಿ ಎರಡು ಸ್ಥಾನಗಳಲ್ಲಿ ತಿಲೋದಕ ಕೊಟ್ಟು (ಬಲ) ಅಂಜಲಿಮುದ್ರೆ ಮಾಡಿ, '**ಸ್ವಾಗತಮ್ ॥**' (**ಸುಸ್ವಾಗತಮ್**) ಎಂದು ಬ್ರಾಹ್ಮಣರ ಬಲಕೈಯ ಹೆಬ್ಬೆರಳು ಹಿಡಿದು, '**ಪ್ರಾಪ್ನುವಂತು ಭವಂತಃ ॥**' (ಓಂ

**ತಥಾ ಪ್ರಾಪ್ನುವಾಮಃ)** (ಎಡ) ತಲೆಗೆ ಹೂಇಟ್ಟು, **'ಶಿರಸಿ ಪುಷ್ಪಮ್ ।'** (ಬಲ) ಪವಿತ್ರಗಳೆರಡನ್ನು ಹೊರತೆಗೆದು ಹರಿವಾಣದಲ್ಲಿಟ್ಟು ಪಾದಕ್ಕೆ ಪುಷ್ಪಕ್ಕೆ ಗಂಧ ಮುಟ್ಟಿಸಿ ಇಟ್ಟು **'ಪಾದಯೋರ್ಗಂಧಪುಷ್ಪಾದಿ ।'** ಪವಿತ್ರ ಧರಿಸಿ, (ಎಡ) ತಿಲೋದಕ ಹಿಡಿದು, **'ಪಿತಾಮಹಪ್ರಪಿತಾ......ವಾಸುದೇವಾಃ ಇದಂ ವಃ ಪಾದ್ಯಮ್ । ಇದಂ ವಃ ಪಾದ್ಯಮ್ । ಇದಂ ವಃ ಪಾದ್ಯಮ್ ॥'** ಎಂದು ಬ್ರಾಹ್ಮಣರ ಪಾದಗಳೆರಡಕ್ಕೆ ಹಾಕಿ (ಬಲ) ಪವಿತ್ರಗಳೆರಡನ್ನು ಹೊರ ತೆಗೆದು ಬಲಕಿವಿಯಲ್ಲಿ ಇಟ್ಟು (ಎಡ) ನೀರಿನಿಂದ ಹಿಂದಿನ ಕ್ರಮದಂತೆ ಬ್ರಾಹ್ಮಣರ ಕಾಲು ತೊಳೆಯಬೇಕು. **'ಶಂ ನೋ ದೇವೀ..... ಸ್ರವಂತು ನಃ ।' 'ಚರಣಂ ಪವಿತ್ರಂ..............ವಿಪ್ರಸ್ಯ ದಕ್ಷಿಣೇ ॥ ಆಪಃ ಪಾದಾವನೇಜನಿ........ಸ್ವ್ಯಾಸಾನಿ ॥'** ಅನಂತರ ಹಿಂದಿನ ಪವಿತ್ರಗಳೆರಡನ್ನು ಧರಿಸಿ, ಪಾದೋದಕವನ್ನು ಪ್ರೋಕ್ಷಣೆ ಮಾಡಿಕೊಂಡು (ಬಲ) ಪೂರ್ವಾಭಿಮುಖವಾಗಿ ಕುಳಿತು ಆಚಮನ ಮಾಡಿ ಪವಿತ್ರ ಬಿಚ್ಚಿ ಕಾಲು ತೊಳೆದು ಆಚಮನ ಮಾಡಿ,

**ಯದಿಚ್ಛಸಿ ಮಹಾರಾಜ ಸರ್ವತೀರ್ಥಾವಗಾಹನಮ್ ।**
**ವಿಪ್ರಪಾದವಿನಿರ್ಮುಕ್ತಂ ತೋಯಂ ಶಿರಸಿ ಧಾರಯ ॥**

**ಮಂತ್ರಮಧ್ಯೇ ಕ್ರಿಯಾಮಧ್ಯೇ ವಿಷ್ಣೋಃ ಸ್ಮರಣಪೂರ್ವಕಮ್ ।**
**ಯತ್ಕಿಂಚಿತ್ಕ್ರಿಯತೇ ಕರ್ಮ ತತ್ಕರ್ಮ ಸಫಲಂ ಕುರು ॥**

**ನ ಜಾನೇ ಕರ್ಮ ಯತ್ಕಿಂಚಿನ್ನಾಪಿ ಲೌಕಿಕವೈದಿಕೇ ।**
**ನ ನಿಷೇಧವಿಧೀ ವಿಷ್ಣೋಸ್ತವ ದಾಸೋಽಸ್ಮಿ ಕೇವಲಮ್ ॥**

**ಸ್ಮರ್ತವ್ಯಃ ಸತತಂ ವಿಷ್ಣುರ್ವಿಸ್ಮರ್ತವ್ಯೋ ನ ಜಾತು ಚಿತ್ ।**
**ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ ॥**

**ಮಂತ್ರತಂತ್ರೋಪಕರಣಕರ್ತೃ ವಹ್ನಿಷು ಕೇಶವಮ್ ।**
**ದೇಶೇ ಕಾಲೇ ಚ ಮನ್ವಾನಾಶ್ಚಕ್ಷುಸ್ತೇ ಕರ್ಮನಿರ್ಮಲಮ್ ॥**

–ಎಂದು ಪ್ರಾರ್ಥಿಸಿ ಕೈಕಾಲು ತೊಳೆದು (ಬಾಯಿ ಮುಕ್ಕಳಿಸಬಾರದು), ಒಳಗೆ ಹೋಗಬೇಕು. ಅನಂತರ ಬ್ರಾಹ್ಮಣರು ಒಳಗೆ ಬಂದು ಆಸನದಲ್ಲಿ ವಿಶ್ವೇದೇವಸ್ಥಾನದ ಬ್ರಾಹ್ಮಣರು ಪೂರ್ವಮುಖವಾಗಿ, ಪಿತೃಸ್ಥಾನದ ಬ್ರಾಹ್ಮಣರು ಉತ್ತರಮುಖವಾಗಿ ಹಾಗೂ ಕರ್ಮಿಗಳು ಈಶಾನ್ಯಮುಖವಾಗಿ ಕುಳಿತು ಆಚಮನ ಮಾಡಬೇಕು.

## ಮಹಾವಿಷ್ಣುಪ್ರಾರ್ಥನಾ

ಕ್ರಿಯಾಕರ್ತೃಗಳು ಆಚಾರ್ಯರಿಂದ ಮೂರು ಮತ್ತು ಒಂದು ಎಳೆಯ ಎರಡು ಪವಿತ್ರಗಳನ್ನು ಪಡೆದು,

## ಆಪೋಶನಮ್

ಉತ್ತಿಷ್ಠ ಪುರುಷ ಹರಿತಪಿಂಗಲಲೋಹಿತಾಕ್ಷೋಽಗ್ನಿವರ್ಣೋ ಅಜಪುರುಷೋಽಮೃತ ಋಷಿಃ । ಗಾಯತ್ರೀ ಛಂದಃ । ಸತ್ಯೋದೇವತಾ । ಅಮೃತೋಪಸ್ತರಣೇ ವಿನಿಯೋಗಃ ॥

**'ಅಮೃತೋಪಸ್ತರಣಮಸಿ ಜುಹೋಮಿ ಸ್ವಾಹಾ ॥'** ಎನ್ನಲು ಬ್ರಾಹ್ಮಣರು ಹಸ್ತೋದಕವನ್ನು ತೆಗೆದುಕೊಳ್ಳಬೇಕು. ಆಗ, **'ಶ್ರದ್ಧಾಯಾಂ ಪ್ರಾಣೇ.....'** ಮಂತ್ರವನ್ನು ಕರ್ತೃವೇ ಹೇಳಬೇಕು. ಬ್ರಾಹ್ಮಣರು ಪಂಚಪ್ರಾಣಾಹುತಿ ತೆಗೆದುಕೊಳ್ಳಬೇಕು.

**ಓಂ ಶ್ರದ್ಧಾಯಾಂ ಪ್ರಾಣೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾಪ್ರದಾಹಾಯ । ಪ್ರಾಣಾಯ ಸ್ವಾಹಾ ॥ ಪ್ರಾಣಾತ್ಮನೇ ಶ್ರೀಅನಿರುದ್ಧಾಯೇದಂ ನ ಮಮ ॥ ಓಂ ಶ್ರದ್ಧಾಯಾಮಪಾನೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾಪ್ರದಾಹಾಯ । ಅಪಾನಾಯ ಸ್ವಾಹಾ ॥ ಅಪಾನಾತ್ಮನೇ ಶ್ರೀಪ್ರದ್ಯುಮ್ನಾಯೇದಂ ನ ಮಮ ॥ ಓಂ ಶ್ರದ್ಧಾಯಾಂ ವ್ಯಾನೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾಪ್ರದಾಹಾಯ । ವ್ಯಾನಾಯ ಸ್ವಾಹಾ ॥ ವ್ಯಾನಾತ್ಮನೇ ಶ್ರೀಸಂಕರ್ಷಣಾಯೇದಂ ನ ಮಮ ॥ ಓಂ ಶ್ರದ್ಧಾಯಾಮುದಾನೇ ನಿವಿಷ್ಟೋಽಮೃತಂ ಜುಹೋಮಿ। ಶಿವೋ ಮಾ ವಿಶಾಪ್ರದಾಹಾಯ । ಉದಾನಾಯ ಸ್ವಾಹಾ ॥ ಉದಾನಾತ್ಮನೇ ಶ್ರೀ ವಾಸುದೇವಾಯೇದಂ ನ ಮಮ ॥ ಓಂ ಶ್ರದ್ಧಾಯಾಗ್ಂ ಸಮಾನೇ ನಿವಿಷ್ಟೋಽಮೃತಂ ಜುಹೋಮಿ। ಶಿವೋ ಮಾ ವಿಶಾಪ್ರದಾಹಾಯ। ಸಮಾನಾಯ ಸ್ವಾಹಾ ॥ ಸಮಾನಾತ್ಮನೇ ಶ್ರೀನಾರಾಯಣಾಯೇದಂ ನ ಮಮ ॥ ಬ್ರಹ್ಮಣಿ ಮ ಆತ್ಮಾಽಮೃತತ್ವಾಯ ॥ ಯಥಾಸುಖಂ ಜುಷಧ್ವಮ್ ।** –ಎಂದು ಬ್ರಾಹ್ಮಣರು ಪ್ರಾಣಾಹುತಿಯನ್ನು ತೆಗೆದುಕೊಂಡು, ಮುಂದಿನ ಮಂತ್ರವನ್ನು ಶ್ರವಣ ಮಾಡಬೇಕು

ಓಂ ಶ್ರದ್ಧಾಯಾಂ ಪ್ರಾಣೇ ನಿವಿಶ್ಯಾಮೃತಗ್ಂ ಹುತಮ್ । ಪ್ರಾಣಮನ್ನೇ–

ನಾಪ್ಯಾಯಸ್ವ ॥ ಓಂ ಶ್ರದ್ಧಾಯಾಮಪಾನೇ ನಿವಿಶ್ಯಾಮೃತಗ್ಂ ಹುತಮ್ । ಅಪಾನಮನ್ನೇನಾಪ್ಯಾಯಸ್ವ ॥ ಓಂ ಶ್ರದ್ಧಾಯಾಂ ವ್ಯಾನೇ ನಿವಿಶ್ಯಾಮೃತಗ್ಂ ಹುತಮ್ । ವ್ಯಾನಮನ್ನೇನಾಪ್ಯಾಯಸ್ವ ॥ ಓಂ ಶ್ರದ್ಧಾಯಾಮುದಾನೇ ನಿವಿಶ್ಯಾ-ಮೃತಗ್ಂ ಹುತಮ್ । ಉದಾನಮನ್ನೇನಾಪ್ಯಾಯಸ್ವ ॥ ಓಂ ಶ್ರದ್ಧಾಯಾಗ್ಂ ಸಮಾನೇ ನಿವಿಶ್ಯಾಮೃತಗ್ಂ ಹುತಮ್ । ಸಮಾನಮನ್ನೇನಾಪ್ಯಾಯಸ್ವ ॥ ಬ್ರಹ್ಮಣಿ ಮ ಆತ್ಮಾಽಮೃತತ್ವಾಯ । ಆತ್ಮನೇ ಸ್ವಾಹಾ ॥ ಸೂರ್ಯೇ ಜ್ಯೋತಿಷಿ ಪರಮಾತ್ಮನ ಇದಂ ನ ಮಮ ॥ –ಎಂದು ಮಂತ್ರವನ್ನು ಶ್ರವಣ ಮಾಡಿ ಭೋಜನವನ್ನು ಸ್ವೀಕಾರಮಾಡಬೇಕು. ಬ್ರಾಹ್ಮಣರು ಭೋಜನಾಂತ್ಯದವರೆಗೆ ಎಲೆಯನ್ನು ಎಡಗೈ (ಉಂಗುರ) ಬೆರಳಿನಿಂದ ಮುಟ್ಟಿಕೊಂಡಿರಬೇಕು. ನೀರು ಕುಡಿಯುವ ಸಂದರ್ಭದಲ್ಲಿ ಬಲಗೈಯಿಂದಲೇ ಕುಡಿಯಬೇಕು. (ಬಲ)

ಪಿತಾ ಮೇ ತವ ಕಾಯೇಽಸ್ಮಿನ್ ತಥಾ ಚೈವ ಪಿತಾಮಹಃ ।
ಸ್ವಪಿತ್ರಾ ಸಹಿತಾ ಹೇತು ತ್ವಂ ಚ ವ್ರತಪರೋ ಭವ ॥

ಅಪೇಕ್ಷಿತಂ ಯಾಚಿತವ್ಯಂ ಶ್ರಾದ್ಧಾರ್ಥಮುಪಕಲ್ಪಿತಮ್ ।
ಉಪವಿಶ್ಯ ಸುಖೇನೈವ ಭೋಕ್ತವ್ಯಂ ಸ್ವಸ್ಥಮಾನಸೈಃ ॥

ಸಂಕರ್ಷಣಶ್ಚ ಪ್ರದ್ಯುಮ್ನಸ್ತತ್ರ ಭೋಕ್ತೃಷು ಸಂಸ್ಥಿತೌ ।
ಭೋಕ್ತೃ ಶಕ್ತಿಪ್ರದಾತಾರೌ ಭೋಕ್ತಾರೌ ಚ ವಿಶೇಷತಃ ॥

ನಾರಾಯಣಾನಿರುದ್ಧೌ ತು ಭೋಜ್ಯವಸ್ತುಷು ಸಂಸ್ಥಿತೌ ।
ತರ್ಪಕೌ ಸರ್ವಜೀವಾನಾಂ ತಸ್ಮಾದ್ಭೋಜ್ಯೌ ನ ಚರ್ವ್ಯತಃ ।
ಅವಕಾಶಪ್ರದೋ ನಿತ್ಯಂ ವಾಸುದೇವೋ ನಭಸ್ಥಿತಃ ॥

ಏವಂ ಪಂಚಾತ್ಮಕಂ ವಿಷ್ಣುಂ ಯ ಉಪಾಸ್ತೇ ಸದೈವ ಹಿ ।
ಭೋಕ್ತಾ ಚಾಪ್ಯಾಯಕಶ್ಚೈವ ತಸ್ಯ ವಿಷ್ಣುಃ ಪ್ರಸೀದತು ॥

ಕುರುಕ್ಷೇತ್ರಂ ಗಯಾಂ ಗಂಗಾಂ ಪ್ರಭಾಸಂ ಪುಷ್ಕರಂ ತಥಾ ।
ಏತಾನಿ ಪುಣ್ಯತೀರ್ಥಾನಿ ಶ್ರಾದ್ಧಕಾಲೇ ಸದಾ ಸ್ಮರೇತ್ ॥

ಮಹಾವಿಷ್ಣವೇ ನಮಃ ಶನೈಶ್ಶನೈರ್ಭುಜ್ಯತಾಮ್ ॥

**ಕಾಮಕಾಲ........ನಾರಾಯಣಾನಿರುದ್ಧೌ ಶನೈಶ್ಶನೈರ್ಭುಜ್ಯತಾಮ್ ॥**

**(ಎಡ) ಪ್ರೇತಾಂತರ್ಗತ ಪ್ರಾಜ್ಞಃ ಶನೈಶ್ಶನೈರ್ಭುಜ್ಯತಾಮ್ ॥**

**ಪಿತಾಮಹ.......ವಾಸುದೇವಾಃ ಶನೈಶ್ಶನೈರ್ಭುಜ್ಯತಾಮ್ ॥**

ಪೂರ್ವಮುಖವಾಗಿ ಕುಳಿತು, '**ಮಧುಶುದ್ಧ್ಯರ್ಥಂ ಮಧುಸಂಸ್ಕಾರಾರ್ಥಂ ಚ ಮಧುಸೂಕ್ತಪಠನಂ ಕರಿಷ್ಯೇ ।**' ಎಂದು ಜಲಕೂರ್ಚದಿಂದ ಭೂಮಿಯನ್ನು ಶುದ್ಧಮಾಡಿ, ದರ್ಭೆ ಇಟ್ಟು ಅದರ ಮೇಲೆ ಮಧುಪಾತ್ರೆ ಇಟ್ಟು ಗಾಯತ್ರೀಮಂತ್ರದಿಂದ ಪ್ರೋಕ್ಷಣೆ ಮಾಡಿ, ಮಧುಸೂಕ್ತ ಜಪ ಮಾಡಬೇಕು.

**ಓಂ ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ ॥ ಮಧು ನಕ್ತಮುತೋಷಸಿ ಮಧುಮತ್ಪಾರ್ಥಿವಗ್ಂ ರಜಃ । ಮಧು ದ್ಯೌರಸ್ತು ನಃ ಪಿತಾ ॥ ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥ ಮಧು । ಮಧು । ಮಧು ॥ ಸರ್ವಂ ಮಧ್ವಸ್ತು ॥ (ಸರ್ವಂ ಮಧು ।)**

–ಎಂದು ಯಜಮಾನನೇ ಜೇನುತುಪ್ಪವನ್ನು ಮೂರು ಬ್ರಾಹ್ಮಣರ ಎಲೆಗೆ ಅಪ್ಪದ ಮೇಲೆ (ಚಿತ್ರಾನ್ನ ಹಾಕುವ ಜಾಗದಲ್ಲಿ) ಕ್ರಮವಾಗಿ ಬಡಿಸಬೇಕು. (ಕೆಲವರಲ್ಲಿ ರಸಬಾಳೆಯನ್ನು ತುಂಡುತುಂಡು ಮಾಡಿ ಹಾಕಿ ಅದರ ಮೇಲೆ ಜೇನುತುಪ್ಪ ಹಾಕುವ ಕ್ರಮವಿದೆ.) ಅನಂತರ ಕೈಮುಗಿದು,

**ಬ್ರಾಹ್ಮಣೋತ್ತಮಾಃ ದೂರಾದಾಗತಾಃ ಕ್ಷುಧಿತಾಃ ಶಾಕಪಾಕಾದಿಷು ಯದ್ರೋಚತೇ ತದ್ಗ್ರಾಹ್ಯಮ್ । ಯನ್ನರೋಚತೇ ತತ್ತ್ಯಾಜ್ಯಮ್ । ರಾತ್ರೌ ಕ್ಷುದ್ಬಾಧಾ ಯಥಾ ನ ಭವತಿ ತಥಾ ಸುಖೇನ ಮೌನೇನ ಭೋಕ್ತವ್ಯಮ್ ॥** –ಎಂದು ಪ್ರಾರ್ಥನೆ ಮಾಡಿ,

**ಓಂ ಯದಶ್ವಸ್ಯ ಕ್ರವಿಷೋ ಮಕ್ಷಿಕಾಶ ಯದ್ವಾ ಸ್ವರೌ ಸ್ವಧಿತೌ ರಿಪ್ತಮಸ್ತಿ । ಯದ್ಧಸ್ತಯೋಃ ಶಮಿತುರ್ಯನ್ನಖೇಷು ಸರ್ವಾ ತಾ ತೇ ಅಪಿ ದೇವೇಷ್ವಸ್ತು ॥**

**ಮಕ್ಷಿಕಾಬಾಧಾ ನಿವೃತ್ತಿರಸ್ತ್ವಿತಿ ಭವಂತೋ ಬ್ರುವಂತು ॥ (ಮಕ್ಷಿಕಾಬಾಧಾ ನಿವೃತ್ತಿರಸ್ತು ॥)**

ಅನಂತರ 'ರಕ್ಷೋಘ್ನಸೂಕ್ತಾದೀನ್ ಶ್ರಾವಯಿಷ್ಯೇ ॥' (ಆಶ್ರಾವಯ ॥) 'ಶ್ರಾದ್ಧ ಸಂರಕ್ಷಣಾರ್ಥಮ್ ಅಭಿಶ್ರವಣಸೂಕ್ತ ಮಂತ್ರಪಠನಂ ಕರಿಷ್ಯೇ ॥'

ಓಂ ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವಾಁಂ ಇಭೇನ । ತೃಷ್ವೀಮನುಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥ ೧ ॥ ತವ ಭ್ರಮಾಸ ಆಶುಯಾ ಪತಂತ್ಯನು ಸ್ಪೃಶ ಧೃಷತಾ ಶೋಶುಚಾನಃ । ತಪೂಂಷ್ಯಗ್ನೇ ಜುಹ್ವಾ ಪತಂಗಾನಸಂದಿತೋ ವಿ ಸೃಜ ವಿಷ್ವಗುಲ್ಕಾಃ ॥ ೨ ॥

ವೇದಜ್ಞ ಬ್ರಾಹ್ಮಣರಿಂದ ಪಾರಾಯಣ ಮಾಡಿಸಬೇಕು. (ಕೆಲವರಲ್ಲಿ ಸಪಿಂಡೀಕರಣ ಶ್ರಾದ್ಧದಲ್ಲಿ ಅಭಿಶ್ರವಣಸೂಕ್ತವನ್ನು ಪಠಿಸುವ ಕ್ರಮವಿಲ್ಲ.) ಇಲ್ಲದಿದ್ದರೆ ಪ್ರತ್ಯಾಮ್ನಾಯ ದಶ ಗಾಯತ್ರೀಮಂತ್ರ ಜಪಿಸಬೇಕು. ಈ ಸಮಯದಲ್ಲಿ ವೇದ, ಉಪನಿಷತ್, ಪವಮಾನಸೂಕ್ತಾದಿಗಳ ಪಾರಾಯಣ ಮಾಡಿಸಬೇಕು.

## ಭೋಜನಕಾಲೇ ಕರ್ತೃ-ಭೋಕ್ತೃ ನಿಯಮಾಃ

ಬ್ರಾಹ್ಮಣರಿಗೆ ವಿಚಾರಣೆ ಮಾಡಿ ಬಡಿಸುವಾಗ (ವಿಶ್ವೇದೇವ, ಪ್ರೇತ, ಪಿತೃ ಎಂಬ) ಕ್ರಮದಿಂದ ಬೇಕಾಗಿಲ್ಲ. ಯಾರಿಗೆ ಏನು ಬೇಕು ಕೇಳಿ ಅವಸರ ಮಾಡದೆ, ಶುದ್ಧ ಮನಸ್ಸಿನಿಂದ ಬಡಿಸಬೇಕು. ಯಜಮಾನ ಹಾಗೂ ಬ್ರಾಹ್ಮಣರು ಭೋಜನಸಮಯದಲ್ಲಿ ಅನಾವಶ್ಯಕ ಮಾತನಾಡಬಾರದು. ಯಜಮಾನನು ಅನ್ಯಮನಸ್ಕನಾಗಿ ಎಲ್ಲೋ ನೋಡುತ್ತಾ ಸಪ್ಪೆ ಮುಖ ಮಾಡಿಕೊಂಡು ಕೂರಬಾರದು. ಬ್ರಾಹ್ಮಣರು ಅಪೇಕ್ಷಿಸಿದಷ್ಟೂ ಖುಷಿಯಿಂದ ಬಡಿಸಬೇಕು. ಉದಾಸೀನ ಮಾಡಬಾರದು. ಬ್ರಾಹ್ಮಣರಲ್ಲಿ ವೈಷಮ್ಯ ತೋರಬಾರದು. ಬ್ರಾಹ್ಮಣರ ಪಂಕ್ತಿಯಲ್ಲಿ ಬೇರೆಯವರನ್ನು ಕುಳ್ಳಿರಿಸಿ ಭೋಜನ ಮಾಡಿಸಬಾರದು. 'ಉಪ್ಪು ಬೇಕಾ' ಎಂದು ಕೇಳಿ ಬಡಿಸಬಾರದು. ಬ್ರಾಹ್ಮಣರು ಪದಾರ್ಥಗಳನ್ನು ಹೊಗಳ ಬಾರದು. ಬೇಕಾದ್ದನ್ನು ಕೇಳಿ ಹಾಕಿಸಿಕೊಳ್ಳಬಹುದು. ಬೇಡದುದನ್ನು ಬಿಡಬಹುದು. ವಿಪ್ರರು ಭೋಜನಸಮಯದಲ್ಲಿ ಏನು ಬೇಕು ಏನು ಬೇಡ ಎಂಬುದನ್ನು ಬಾಯಿಯಿಂದ ಹೇಳದೆ ಹಸ್ತಸಂಜ್ಞೆಯಿಂದಲೇ ಹೇಳಬೇಕು.

ವಿಪ್ರರಿಗೆ ಎಷ್ಟು ಬೇಕೊ ಅಷ್ಟನ್ನೇ ಬಡಿಸದೆ ಸ್ವಲ್ಪ ಸ್ವಲ್ಪ ಹೆಚ್ಚಾಗಿಯೇ ಒತ್ತಾಯಪೂರ್ವಕ ಬಡಿಸಬೇಕು. ಏಕೆಂದರೆ, ಅವರು ಊಟ ಮಾಡಿದ ಮೇಲೆ ಎಲ್ಲಾ ಪಾಕಗಳಿಂದ ಸ್ವಲ್ಪ ಸ್ವಲ್ಪ ತೆಗೆದುಕೊಂಡು ಉಚ್ಛಿಷ್ಟಭಾಗಿಗಳಿಗೆ ಅವರು ಅರ್ಪಿಸಬೇಕು. ಮಾಡಿದ ಅನ್ನ ಎಲ್ಲಿಯವರೆಗೆ ಬಿಸಿಯಾಗಿರುತ್ತದೆಯೋ ಹಾಗೂ ಮಾಡಿದ ಪದಾರ್ಥಗಳ ರುಚಿಯನ್ನು ಎಲ್ಲಿಯ ವರಗೆ ವಿಪ್ರರು ಹೇಳುವುದಿಲ್ಲವೋ ಅಲ್ಲಿಯ ವರೆಗೆ ಪಿತೃಗಳು ತೃಪ್ತಿಯಾಗಿ ಊಟ ಮಾಡುತ್ತಾರೆ. ಹಾಗಾಗಿ ಕರ್ಮಿಯು ಪದಾರ್ಥಗಳ ರುಚಿಯನ್ನು ಕೇಳಲೂ ಬಾರದು ಅವರು ಹೇಳಲೂ ಬಾರದು. ಗೊಜ್ಜು, ಪಲ್ಯ ಇವುಗಳನ್ನು ಕೆಯಿಂದ

ಬಡಿಸಬಾರದು. ಬೇಯಿಸದ ಪದಾರ್ಥಗಳನ್ನು, ಫಲವಸ್ತುಗಳನ್ನು ಭಕ್ಷ್ಯಗಳನ್ನು ಕೈಯಿಂದಲೇ ಬಡಿಸಬೇಕು. ಊಟಕ್ಕೆ ನಿಮಂತ್ರಿತನಾದ ಬ್ರಾಹ್ಮಣನು ಎಡಗೈಯನ್ನು ನೆಲಕ್ಕೆ ಊರಿ ಕುಳಿತುಕೊಂಡು ಊಟ ಮಾಡಬಾರದು. ಸೊಂಟವನ್ನು ಬಗ್ಗಿಸಿಕೊಂಡು ಮೊಣಗಂಟಿನ ಹೊರ ಭಾಗದಲ್ಲಿ ಕೈಯಿಟ್ಟುಕೊಂಟು ಊಟ ಮಾಡಬಾರದು.

ಊಟ ಮಾಡುವಾಗ ನಾನಾ ವಿಧವಾದ ಲೋಕವಾರ್ತೆಗಳನ್ನು ಮಾತಾಡುತ್ತಿದ್ದರೆ, ನಗುತ್ತಿದ್ದರೆ, ಪಿತೃದೇವತೆಗಳು ನಿರಾಶರಾಗಿ ಹೊರಟುಹೋಗುತ್ತಾರೆ. ಶ್ರಾದ್ಧದಲ್ಲಿ ಬ್ರಾಹ್ಮಣನು ಪವಿತ್ರಸಹಿತವಾದ ಬಲಗೈಯಿಂದ ಭೋಜನ ಮಾಡಬೇಕು. ಒಂದು ಪಾತ್ರೆಯಲ್ಲಿಯ ನೀರನ್ನು ಅರ್ಧಕುಡಿದು ಪುನಃ ಊಟ ಮಾಡಿ ಅನಂತರ ಆ ಪಾತ್ರೆಯಲ್ಲಿದ್ದ ನೀರನ್ನು ಕುಡಿದು ಮತ್ತೆ ಊಟ ಮಾಡಿದರೆ ಪಿತೃಕಾರ್ಯವನ್ನು ಹಾಳು ಮಾಡಿದಂತೆ ಆಗುತ್ತದೆ.

ಭೋಜನ ಮಾಡುವ ಬ್ರಾಹ್ಮಣನು ಎಡಗೈಯಿಂದ ಜಲಪಾತ್ರೆಯನ್ನು ಎತ್ತಿಕೊಂಡು ನೀರನ್ನು ಕುಡಿದರೆ ಆ ಜಲಪಾನವು ಸುರಾಪಾನಕ್ಕೆ ಸಮವಾಗುತ್ತದೆ. ಆದ್ದರಿಂದ ಎಡಗೈಯಿಂದ ಜಲಪಾತ್ರೆಯನ್ನು ಎತ್ತಿನೀರು ಕುಡಿಯಬಾರದು. ಭೋಜನ ಮಾಡುವ ಬ್ರಾಹ್ಮಣನು, ಬಡಿಸಿದ ಭೋಜ್ಯ ಪದಾರ್ಥಗಳನ್ನು ನೋಡಿ ನಾಲಿಗೆ ಚಪ್ಪರಿಸುವುದು, ಆಶೆಯಿಂದ ಮುಟ್ಟಿ ನೋಡುವುದು, –ಇತ್ಯಾದಿ ಮಾಡಬಾರದು. ಮೊಸರು, ಹಾಲು, ಹಾಲಿನಿಂದ ತಯಾರಿಸಿದ ಪದಾರ್ಥಗಳು, ಹಿಟ್ಟು, ಹಿಟ್ಟಿನಿಂದ ತಯಾರಿಸಿದ ಪದಾರ್ಥಗಳನ್ನು ನಿಃಶೇಷವಾಗಿ ಊಟ ಮಾಡಬೇಕು. ಬ್ರಾಹ್ಮಣನು ತಲೆಕೊದಲನ್ನು ಗಂಟುಹಾಕಿಕೊಳ್ಳದೇ ಊಟ ಮಾಡಬಾರದು. ಮೊಸರಿನಿಂದ ಮುಂದಿನ ಎಲ್ಲಾ ಕ್ರಿಯೆಗಳು ಕ್ರಮದಿಂದ ಪಿತೃ–ಪ್ರೇತ–ವಿಶ್ವೇದೇವ ಸ್ಥಾನದಲ್ಲಿ ಆಗಬೇಕು.

## ವೈತರಣೀನೌಕಾದಾನಮ್

**ಅಸ್ಮತ್ಪಿತುಃ ....ಪಿತುಃ ಭೂಲೋಕಾತ್ಪಿತೃಲೋಕಗಮನಕಾಲೇ ಸುಖೇನ ಮಧ್ಯ ಮಾರ್ಗೇ ಸ್ಥಿತ ವೈತರಣೀನದ್ಯುತ್ತಾರಣಾರ್ಥಮ್ ಇಕ್ಷುಮಯನಾವಂ, ಗೋದಾನಂ (ಪ್ರತ್ಯಾಮ್ನಾಯ ಸುವರ್ಣದಾನಂ) ಚ ಕರಿಷ್ಯೇ ॥**

ಕಬ್ಬಿನ ಕೋಲನ್ನು ಸೀಳಿ ಒಂದು ಹಡಗಿನ ಪ್ರತಿರೂಪವನ್ನು ತಯಾರಿಸಿ ಪತಾಕೆ ಇಟ್ಟು ವಸ್ತ್ರದಿಂದ ಅಲಂಕರಿಸಿ ದೀಪ ಹಚ್ಚಿಟ್ಟು ದೇವತೆಗಳನ್ನು ಆವಾಹಿಸಿ ಪೂಜಿಸಬೇಕು. ಅಕ್ಕಿಕಾಳು ಹಿಡಿದು,

**ಓಂ ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಗ್ಂ ಸುಶರ್ಮಾಣ–ಮದಿತಿಗ್ಂ ಸುಪ್ರಣೀತಿಮ್ । ದೈವೀಂ ನಾವಗ್ಂ ಸ್ವರಿತ್ರಾಮನಾಗಸಮಸ್ರವಂ–ತೀಮಾ ರುಹೇಮಾ ಸ್ವಸ್ತಯೇ ॥ ಇಮಾಂ ಸುನಾವಮಾಽರುಹಗ್ ಶತಾರಿತ್ರಾಂ**

**ಶತಸ್ಫ್ಯಾಮ್ । ಅಚ್ಛಿದ್ರಾಂ ಪಾರಯಿಷ್ಣುಮ್ ॥ ಭೂರ್ಭುವಃ ಸ್ವಃ । ಲಕ್ಷ್ಮೀರೂಪಿಣ್ಯೈ ನೌಕಾಯ್ಯೈ ನಮಃ ॥**

–ಎಂದು ನೌಕೆಯ ಮೇಲೆ ಹಾಕಿ '**ಲಕ್ಷ್ಮೀಮ್ ಆವಾಹಯಾಮಿ ॥**' ಪುನಃ ಅಕ್ಕಿ ಹಿಡಿದು,

ನಾವಃ ಪೂರ್ವೇ– **ಶ್ರೀಧರಮ್** । ದಕ್ಷಿಣೇ– **ಮಧುಸೂದನಮ್** । ಪಶ್ಚಿಮೇ– **ವಾಮನಮ್** । ಉತ್ತರೇ– **ಗದಾಧರಮ್** । ಮಧ್ಯೇ– **ಪಿತಾಮಹಮ್** । **ಉಮಾಮಹೇಶ್ವರಮ್ ಆವಾಹಯಾಮಿ** ॥

–ಎಂದು ನೌಕೆಯ ಮೇಲೆ ಹಾಕಿ ಷೋಡಶೋಪಚಾರಪೂಜೆ ಮಾಡಿ ಪ್ರಾರ್ಥನೆ ಮಾಡಬೇಕು.

**ಸಂಸಾರಾರ್ಣವಮಗ್ನಂ ಮಾಂ ಶೋಕತಾಪಾದಿದುಃಖಿತಮ್ ।**
**ಧರ್ಮಪ್ಲವವಿಹೀನಂ ಚ ತಾರಯಸ್ವ ಜನಾರ್ದನ ॥**

**ಯಮದ್ವಾರೇ ಪಥೇ ಘೋರೇ ಘೋರಾ ವೈತರಣೀ ನದೀ ।**
**ತಸ್ಯಾ ಉತ್ತಾರಣಾರ್ಥಾಯ ನೌಕಾದಾನಂ ದದಾಮ್ಯಹಮ್ ॥**

–ಎಂದು ತಾಂಬೂಲ ಕೊಟ್ಟು ನೌಕೆ ಕೊಟ್ಟು, ದಕ್ಷಿಣೆ ಕೊಟ್ಟು **ವೈತರಣೀನದ್ಯುತ್ತಾರಣಯೋಗ್ಯತಾಸಿದ್ಧಿರಸ್ತ್ವಿತಿ ಭವಂತೋ ಬ್ರುವಂತು ॥ (ವೈತರಣೀನದ್ಯುತ್ತಾರಣಯೋಗ್ಯತಾಸಿದ್ಧಿರಸ್ತು)** ಎಂದು ಪ್ರತಿವಚನ ಪಡೆದು.

ಸಾಕ್ಷಾತ್ ಗೋದಾನ ಇದ್ದರೆ ಮತ್ತೆ ಕೊಡುವುದಾಗಿ ಸಂಕಲ್ಪಿಸಬೇಕು ಇಲ್ಲವೇ ತಾಂಬೂಲ ಕೊಟ್ಟು '**ಗವಾಮಂಗೇಷು ........ಪ್ರಯಚ್ಛ ಮೇ ॥**' ಎಂದು ಸುವರ್ಣದಾನ ಕೊಟ್ಟು, ದಕ್ಷಿಣೆ ಕೊಟ್ಟು ದಾನದ '**ಕೃಷ್ಣಾರ್ಪಣ**' ಬಿಡಬೇಕು.

## ಪಿಂಡಕರಣಮ್

ಪಿತೃ ಪ್ರೇತಸ್ಥಾನದ ಆಗ್ನೇಯದ ೪ನೇ ಭಾಗದ ಅನ್ನದ ಮೇಲೆ ಸ್ವಲ್ಪ ಎಳ್ಳು ಹಾಕಿ ಪಿಂಡ ಕಟ್ಟುವ ಅನ್ನದ ಜೊತೆಗೆ ಸೇರಿಸಿಕೊಳ್ಳುವುದು.

ನೈಋತ್ಯ ಭಾಗದ '೩'ನೇ ಭಾಗದ ವಿಕಿರಕ್ಕೆ ಉಪಯೋಗಿಸಿಕೊಳ್ಳಲು ಬ್ರಾಹ್ಮಣರಿಗೆ ಮೊಸರನ್ನು ಬಡಿಸಿದ ಅನಂತರ ಇದಕ್ಕೆ ಸ್ವಲ್ಪ ಮೊಸರನ್ನು ಹಾಕಿಸಿಕೊಂಡು ವಿಕಿರಕ್ಕೆ ಉಪಯೋಗಿಸಿಕೊಳ್ಳುವುದು.

ಪಿತೃಪ್ರೇತಸ್ಥಾನದ ಪಾಣಿಹೋಮದ ಉಳಿದ ಅನ್ನವನ್ನು ಬಿಟ್ಟು ಪಿತೃಸ್ಥಾನದ ಪಿಂಡದ ಅನ್ನಕ್ಕೆ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಎಳ್ಳು, ತೀರ್ಥ, ಜವೆಗೋಧಿ ಹಾಕಿ (ರೂಢಿಯಲ್ಲಿ ಪಿತೃಸ್ಥಾನದ ಹವಿಸ್ಸಿಗೆ ಬಾಳೆಹಣ್ಣು, ಬೆಲ್ಲ, ಗರಿಕೆ, ತುಳಸಿ ಹಾಕುವ

ಕ್ರಮವಿದೆ.) ತೆಂಗಿನಕಾಯಿ ಗಾತ್ರದ ಮೂರು ದೊಡ್ಡ ಪಿಂಡ, ಒಂದು ಬಿಲ್ವಫಲಪ್ರಮಾಣದ ಅನುಲೇಪನಪಿಂಡ ಹಾಗೂ ಒಂದು ಚಿಕ್ಕ ಉಚ್ಛಿಷ್ಟಪಿಂಡವನ್ನು ಮಾಡಬೇಕು. ಪ್ರೇತಹವಿಸ್ಸಿಗೆ ಪಂಚಾಮೃತಸಾಹಿತ್ಯ ಹಾಗೂ ದೇವರ ತೀರ್ಥ ಮಾತ್ರ ಹಾಕಿ, ೧೨ ಅಂಗುಲ ಉದ್ದದ ಒಂದು ಪ್ರೇತಪಿಂಡ ಮಾಡಬೇಕು.

**ಓಮ್ ಉಪಾಸ್ಮೈ ಗಾಯತಾ ನರಃ ಪವಮಾನಾಯೇಂದವೇ । ಅಭಿ ದೇವಾ ಇಯಕ್ಷತೇ ॥ ಅಭಿ ತೇ ಮಧುನಾ ಪಯೋಽಥರ್ವಾಣೋ ಅಶಿಶ್ರಯುಃ । ದೇವಂ ದೇವಾಯ ದೇವಯು ॥ ಸ ನಃ ಪವಸ್ವ ಶಂ ಗವೇ ಶಂ ಜನಾಯ ಶಮರ್ವತೇ । ಶಂ ರಾಜನ್ನೋಷಧೀಭ್ಯಃ ॥ ಬಭ್ರವೇ ನು ಸ್ವತವಸೇಽರುಣಾಯ ದಿವಿಸ್ಪೃಶೇ । ಸೋಮಾಯ ಗಾಥಮರ್ಚತ ॥ ಹಸ್ತಚ್ಯುತೇಭಿರದ್ರಿಭಿಃ ಸುತಂ ಸೋಮಂ ಪುನೀತನ । ಮಧಾವಾ ಧಾವತಾ ಮಧು ॥ ೧ ॥ ನಮಸೇದುಪ ಸೀದತ ದಧ್ನೇದಭಿ ಶ್ರೀಣೀತನ । ಇಂದುಮಿಂದ್ರೇ ದಧಾತನ ॥ ಅಮಿತ್ರಹಾ ವಿಚರ್ಷಣಿಃ ಪವಸ್ವ ಸೋಮ ಶಂ ಗವೇ । ದೇವೇಭ್ಯೋ ಅನುಕಾಮಕೃತ್ ॥ ಇಂದ್ರಾಯ ಸೋಮ ಪಾತವೇ ಮದಾಯ ಪರಿ ಷಿಚ್ಯಸೇ । ಮನಶ್ಚಿನ್ಮನಸ-ಸ್ಪತಿಃ ॥ ಪವಮಾನ ಸುವೀರ್ಯಂ ರಯಿಂ ಸೋಮ ರಿರೀಹಿ ನಃ । ಇಂದವಿಂದ್ರೇಣ ನೋ ಯುಜಾ ॥ ೨ ॥**

ಬ್ರಾಹ್ಮಣಾನಾಂ ದಧ್ಯೋದನ ಗಂಗಾಪಾನೀಯಂ ಸಂಪನ್ನಮ್ ॥ [ಸುಸಂಪನ್ನಂ]

ಯಜಮಾನನೇ ಜೇನುತುಪ್ಪವನ್ನು ವಿಚಾರಣಾರ್ಥವಾಗಿ ಹಿಡಿದು ನಿಲ್ಲುವುದು–

**ಅಕ್ಷನ್ನಮೀಮದಂತ ಹ್ಯವ ಪ್ರಿಯಾ ಅಧೂಷತ । ಅಸ್ತೋಷತ ಸ್ವಭಾನವೋ ವಿಪ್ರಾ ನವಿಷ್ಠಯಾ ಮತೀ ಯೋಜಾ ನ್ವಿಂದ್ರ ತೇ ಹರೀ ॥**

ಶ್ರಾದ್ಧಸಂರಕ್ಷಕ ಮಹಾವಿಷ್ಣವೇ ನಮಃ । ಮಧುಮಧು ಸಂಪನ್ನಮ್ ॥ [ಸುಸಂಪನ್ನಮ್] ॥

ವಿಶ್ವೇದೇವಸ್ಥಾನದಲ್ಲಿ ಕಾಮಕಾಲಸಂಜ್ಞಕ .....ಮಧುಮಧು ಸಂಪನ್ನಮ್ ॥ (ಸುಸಂಪನ್ನಮ್) ತೃಪ್ತಾಃ ಸ್ಥಃ । ತೃಪ್ತಾಃ ಸ್ಥಃ ॥ (ತೃಪ್ತಾಃ ಸ್ಮಃ)

(ಎಡ) ಪ್ರೇತಸ್ಥಾನದಲ್ಲಿ **ಅಸ್ಮತ್ಪಿತುಃ ......ಮಧುಮಧು ಸಂಪನ್ನಮ್ ॥ (ಸುಸಂಪನ್ನಮ್) ತೃಪ್ತಾಃ ಸ್ಥಃ ॥ (ತೃಪ್ತಾಃ ಸ್ಮಃ)**

ಪಿತೃಸ್ಥಾನದಲ್ಲಿ **ಪಿತಾಮಹ......ವಾಸುದೇವಾಃ ಮಧು ಮಧು ಸಂಪನ್ನಮ್ ॥ (ಸುಸಂಪನ್ನಮ್) ತೃಪ್ತಾಃ ಸ್ಥಃ । ತೃಪ್ತಾಃ ಸ್ಥಃ । ತೃಪ್ತಾಃ ಸ್ಥಃ ॥ (ತೃಪ್ತಾಃ ಸ್ಮಃ)**

## ವಿಕಿರಬಲಿಃ

(ಬಲ) ವಿಷ್ಣುವಿನ ಎದುರು ದೇವರ ಎಲೆಗೆ ತಾಗದಂತೆ ಸ್ವಲ್ಪ ದೂರದಲ್ಲಿ ನೀರಿನಿಂದ ಚೌಕಾಕಾರದ ಮಂಡಲ ಮಾಡಿ ಎರಡು ದರ್ಭೆಗಳನ್ನು ಪೂರ್ವಾಗ್ರವಾಗಿಟ್ಟು ಅದರ ಮೇಲೆ ಅಕ್ಷತೋದಕ ಕೊಟ್ಟು ಪಾಣಿಹೋಮದ ಉಳಿದ ಅನ್ನವನ್ನು ದರ್ಭೆಯ ಮೇಲೆ ಇಟ್ಟು

**ಅಸಂಶಯೋ ಭವೇದ್ವಿಷ್ಣುಃ ಮೋಕ್ಷಸಾಧನಮವ್ಯಯಮ್ ।**
**ಪಿತೄಣಾಂ ಚ ವರಂ ಶ್ರೇಷ್ಠಂ ವಿಕಿರಾನ್ನಂ ಚ ವೈಷ್ಣವಮ್ ॥**

ಅಕ್ಷತೋದಕ ಹಿಡಿದು '**ಮಹಾವಿಷ್ಣುಸ್ತೃಪ್ತಿರಸ್ತು** ॥' –ಎಂದು ಅನ್ನದ ಮೇಲೆ ಬಿಡಬೇಕು.

ಅನಂತರ ವಿಶ್ವೇದೇವಸ್ಥಾನದ ಎದುರು ಬ್ರಾಹ್ಮಣರ ಎಲೆಗೆ ತಾಗದಂತೆ ನೀರಿನಿಂದ ಚೌಕಾಕಾರದ ಮಂಡಲ ಮಾಡಿ ಎರಡು ದರ್ಭೆಯನ್ನು ಪೂರ್ವಾಗ್ರವಾಗಿಟ್ಟು ಅಕ್ಷತೋದಕ ಕೊಟ್ಟು ಅದರ ಮೇಲೆ ಪಿತೃಸ್ಥಾನದ ಮೊಸರು ಹಾಕಿದ ಮೂರನೆಯ ಪಾಲಿನ ಸ್ವಲ್ಪ ಅನ್ನವನ್ನಿಟ್ಟು,

**ಅಸೋಮಪಾಶ್ಚ ಯೇ ದೇವಾ ಯಜ್ಞಭಾಗವಿವರ್ಜಿತಾಃ ।**
**ತೇಷಾಮನ್ನಂ ಪ್ರದಾಸ್ಯಾಮಿ ವಿಕಿರಂ ವೈಶ್ವದೈವಿಕಮ್ ॥**

ಅಕ್ಷತೋದಕ ಹಿಡಿದು, '**ಅಸೋಮಪೇಭ್ಯೋ ದೇವಗಣೇಭ್ಯಃ ತೃಪ್ತಿರಸ್ತು** ॥' –ಎಂದು ಅನ್ನದ ಮೇಲೆ ಬಿಡಬೇಕು.

ಪ್ರೇತಸ್ಥಾನದಲ್ಲಿ ಬ್ರಾಹ್ಮಣರ ಎಲೆಗೆ ತಾಗದಂತೆ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ನೀರಿನಿಂದ ಮಾಡಿ ಒಂದು ದರ್ಭೆಯನ್ನು ದಕ್ಷಿಣಾಗ್ರವಾಗಿಟ್ಟು ತಿಲೋದಕ ಬಿಟ್ಟು, ಪ್ರೇತಸ್ಥಾನದ ಪಾಣಿಹೋಮದ ಮೂರನೆಯ ಪಾಲಿನ ಅನ್ನವನ್ನು ಹೆಬ್ಬೆರಳು ತೋರುಬೆರಳುಗಳಿಂದ ತೆಗೆದು '**ಪ್ರೇತೇ ವಿಕಿರಮುಪತಿಷ್ಠತು** ॥' ಎಂದು ಇಟ್ಟು ತಿಲೋದಕ ಬಿಟ್ಟು,

ಪಿತೃಬ್ರಾಹ್ಮಣರ ಎದುರು ಬ್ರಾಹ್ಮಣರ ಎಲೆಗೆ ತಾಗದಂತೆ ನೀರಿನಿಂದ ವೃತ್ತಾಕಾರದ ಮಂಡಲ ಮಾಡಿ ಮೂರು ದರ್ಭೆಯನ್ನು ದಕ್ಷಿಣಾಗ್ರವಾಗಿಟ್ಟು ಅದರ ಮೇಲೆ ತಿಲೋದಕ ಬಿಟ್ಟು, ಹೆಬ್ಬೆರಳು ತೋರುಬೆರಳಿನಿಂದ ಪಿತೃಸ್ಥಾನದ ಪಾಣಿಹೋಮದ ಮೂರನೆಯ ಪಾಲಿನ ಎಲ್ಲ ಅನ್ನವನ್ನು ಇಟ್ಟು,

**ಅಸಂಸ್ಕೃತ ಪ್ರಮೀತಾ ಯೇ ತ್ಯಾಗಿನ್ಯೋ ಯಾ ಕುಲಸ್ತ್ರಿಯಃ ।**
**ದಾಸ್ಯಾಮಿ ತೇಭ್ಯೋ ವಿಕಿರಮನ್ನಂ ತಾಭ್ಯಶ್ಚ ಪೈತೃಕಮ್ ॥**

–ಎಂದು ಅನ್ನದ ಮೇಲೆ ತಿಲೋದಕ ಬಿಡಬೇಕು.

## ಪ್ರಕಿರಬಲಿಃ

ಪಿತೃಸ್ಥಾನದ ಹಾಗೂ ವಿಶ್ವೇದೇವಸ್ಥಾನದ ಮಧ್ಯಭಾಗದಲ್ಲಿ ನೈಋತ್ಯಾಭಿಮುಖವಾಗಿ ಎಡಮೊಣಕಾಲನ್ನು ನೆಲಕ್ಕೂರಿ ನೀರಿನಿಂದ ಅಪ್ರದಕ್ಷಿಣಾಕಾರಾವಾಗಿ ವೃತ್ತಾಕಾರದ ಮಂಡಲ ಮಾಡಿ, ದಕ್ಷಿಣಾಗ್ರವಾಗಿ ಎರಡು ದರ್ಭೆ ಇಟ್ಟು ಅದರ ಮೇಲೆ ತಿಲೋದಕ ಬಿಟ್ಟು ಹಿಂದೆ ಮಾಡಿದ ಉಚ್ಛಿಷ್ಟಪಿಂಡವನ್ನು ದರ್ಭೆಯ ಮೇಲೆ ಇಡಬೇಕು.

**ಓಂ ಯೇ ಅಗ್ನಿದಗ್ಧಾ ಯೇ ಅನಗ್ನಿದಗ್ಧಾ ಮಧ್ಯೇ ದಿವಃ ಸ್ವಧಯಾ ಮಾದಯಂತೇ । ತೇಭಿಃ ಸ್ವರಾಳಸುನೀತಿಮೇತಾಂ ಯಥಾವಶಂ ತನ್ವಂ ಕಲ್ಪಯಸ್ವ ॥**

**ಯೇ ಅಗ್ನಿದಗ್ಧಾ ಯೇಽನಗ್ನಿದಗ್ಧಾ ಯೇ ವಾ ಜಾತಾಃ ಕುಲೇ ಮಮ ।**
**ಭೂಮೌ ದತ್ತೇನ ಪಿಂಡೇನ ತೃಪ್ತಾ ಯಾಂತು ಪರಾಂ ಗತಿಮ್ ॥**

**ಅಗ್ನಿದಗ್ಧೇಭ್ಯೋಽನಗ್ನಿದಗ್ಧೇಭ್ಯೋಽಸ್ಮತ್ಕುಲಪ್ರಸೂತೇಭ್ಯಸ್ತಾಭ್ಯಸ್ತೇಭ್ಯಸ್ತೃಪ್ತಿರಸ್ತು । ಅಯಂ ಪಿಂಡಃ ಸ್ವಧಾ ನಮಃ ॥ (ಅಸ್ತು ತೃಪ್ತಿಃ)**

–ಎಂದು ಅನ್ನದ ಮೇಲೆ ತಿಲೋದಕ ಬಿಟ್ಟು (ಕೆಲವರಲ್ಲಿ ಈ ಪಿಂಡವನ್ನು ಒಂದು ದೊಣ್ಣೆಗೆ ಹಾಕಿ ಹೊರಗೆ ಎತ್ತರದ ಜಾಗದಲ್ಲಿ ಕಾಗೆಗಳಿಗೆ ಇಟ್ಟು ಬರುವ ಕ್ರಮವಿದೆ.) ಪೂರ್ವಮುಖವಾಗಿ ಕುಳಿತು ಪವಿತ್ರನ್ನು ಹೊರ ತೆಗೆದು (ಕೆಲವರಲ್ಲಿ ಬಿಚ್ಚಿಹಾಕಿ ಬೇರೆ ಪವಿತ್ರವನ್ನು ಧರಿಸಿಕೊಳ್ಳುವ ಕ್ರಮವಿದೆ.) ಕೈಕಾಲುಗಳಿಗೆ ಹಾಗೂ ಕಣ್ಣಿಗೆ ನೀರು ಮುಟ್ಟಿಸಿಕೊಂಡು (ಬಲ) ಆಚಮನ ಮಾಡಿ ಪವಿತ್ರವನ್ನು ಧರಿಸಿಕೊಳ್ಳಬೇಕು. (ಕೆಲವರಲ್ಲಿ ವಿಕಿರಬಲಿಯನ್ನು ವಾಯಸಬಲಿಯ ಸಮಯದಲ್ಲಿ ಇಲ್ಲವೇ ಪಿಂಡಪ್ರದಾನದ ಅನಂತರ ಕೊಡುವ ಎರಡು ಕ್ರಮಗಳಿವೆ.)

## ಉತ್ತರಾಪೋಶನಮ್

**ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**

**ಓಂ ಚಂದ್ರಮಾ ಮನಸೋ .......... ವಾಯುರಜಾಯತ ॥**

ಮಹಾವಿಷ್ಣುವಿನ ಸ್ಥಾನದಲ್ಲಿ '**ದೇವಾಃ ಅಮೃತಾಪಿಧಾನಮಸಿ**' –ಎಂದು ಉತ್ತರಾಪೋಶನ ಕೊಟ್ಟು ಹಸ್ತಪ್ರಕ್ಷಾಲನಾದಿ ಉಪಚಾರಗಳನ್ನು ನೀಡಬೇಕು.

ಕೆಲವರಲ್ಲಿ ಮಹಾವಿಷ್ಣುಸ್ಥಾನದ ಭೋಜನಪತ್ರದ ಅನ್ನವನ್ನು ಶೇಷಾನ್ನವೆಂದು ಸ್ವೀಕರಿಸುವ ಕ್ರಮವಿದೆ. ಆಗ ನಿರ್ಮಾಲ್ಯತುಲಸಿ ಹಾಗೂ ದೇವರ ತೀರ್ಥವನ್ನು ಶೇಷಾನ್ನಕ್ಕೆ ಹಾಕಿ ಮನಸ್ಸಿನಲ್ಲಿ ಮುಖ್ಯಪ್ರಾಣದೇವರಿಗೆ '**ಓಂ ಪ್ರಾಣಾಯ ನಮಃ ಓಮ್**' –ಎಂದು ಸಮರ್ಪಿಸಿ ಶ್ರಾದ್ಧಾಂತ್ಯದಲ್ಲಿ ಶೇಷಾನ್ನವೆಂದು ಸ್ವೀಕರಿಸಬೇಕು. ಈ ಮೇಲಿನ ಕ್ರಮ ಇಲ್ಲದವರು ನಿರ್ಮಾಲ್ಯತುಳಸಿ ಹಾಗೂ ದೇವರ ತೀರ್ಥವನ್ನು ಭೋಜನಪತ್ರಕ್ಕೆ ಹಾಕಿ ಮನಸ್ಸಿನಲ್ಲಿ ವಿಷ್ವಕ್ಸೇನನಿಗೆ '**ಓಂ ವಿಷ್ವಕ್ಸೇನಾಯ ನಮಃ ಓಮ್**' –ಎಂದು ಸಮರ್ಪಿಸಿ ಬಿಡಬೇಕು.

ಅನಂತರ ವಿಶ್ವೇದೇವಸ್ಥಾನದ ಬ್ರಾಹ್ಮಣರ ಭೋಜನಪತ್ರದ ಬಲಭಾಗದಲ್ಲಿ ಹಾಗೂ ಪ್ರೇತಸ್ಥಾನದ ಪಿತೃಸ್ಥಾನದ ಬ್ರಾಹ್ಮಣರ ಎಡಭಾಗದಲ್ಲಿ ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ, ವಿಶ್ವೇದೇವಸ್ಥಾನದಲ್ಲಿ ಚೌಕಮಂಡಲ ಮಾಡಿ ಪೂರ್ವಾಗ್ರವಾಗಿ ಎರಡು ದರ್ಭೆ ಇಟ್ಟು ಅದರ ಮೇಲೆ ಒಂದು ದೊಣ್ಣೆತಟ್ಟೆಯನ್ನಿಡಬೇಕು. ಹಾಗೆಯೇ ಪ್ರೇತಬ್ರಾಹ್ಮಣರ ಸ್ಥಾನದಲ್ಲಿ ತ್ರಿಕೋಣಾಕಾರದ ಮಂಡಲ ಮಾಡಿ ದಕ್ಷಿಣಾಗ್ರವಾಗಿ ಎರಡು ದರ್ಭೆ ಇಟ್ಟು ಅದರ ಮೇಲೆ ಒಂದು ಬಾಳೆದೊಣ್ಣೆಯನ್ನಿಡಬೇಕು. ಹೀಗೆ ಪಿತೃಸ್ಥಾನದ ಬ್ರಾಹ್ಮಣರ ಸ್ಥಾನದಲ್ಲಿ ವೃತ್ತಕಾರದ ಮಂಡಲ ಮಾಡಿ ದಕ್ಷಿಣಾಗ್ರವಾಗಿ ದರ್ಭೆ ಇಟ್ಟು ಅದರ ಮೇಲೆ ಒಂದು ದೊಣ್ಣೆತಟ್ಟೆಯನ್ನಿಡಬೇಕು.

**ಭವದ್ಭಿಃ ಉಚ್ಛಿಷ್ಟಭಾಗೇಭ್ಯೋಽನ್ನಂ ದೀಯತಾಮ್** ॥ –ಎಂದು ಪ್ರಾರ್ಥಿಸಿ,

**ಅಂಗುಷ್ಠಮಾತ್ರ ಪುರುಷೋಽಂಗುಷ್ಠಂ ಸಮಾಶ್ರಿತಃ ।**
**ಈಶಃ ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್ ॥**

ನೀರು ಹಿಡಿದು '**ಪಿತರಃ ಅಮೃತಾಪಿಧಾನಮಸಿ** ॥' ಎಂದು ಮೊದಲು ಪ್ರೇತಸ್ಥಾನದಲ್ಲಿ, ಅನಂತರ ಪಿತೃಸ್ಥಾನದಲ್ಲಿ ಉತ್ತರಾಪೋಶನ ಕೊಟ್ಟು ವಿಶ್ವೇದೇವಸ್ಥಾನದಲ್ಲಿ '**ದೇವಾಃ ಅಮೃತಾಪಿಧಾನಮಸಿ** ॥' ಎಂದು ಉತ್ತರಾಪೋಶನ ಕೊಡಬೇಕು. ಬ್ರಾಹ್ಮಣರು ಉತ್ತರಾಪೋಶನ ತೆಗೆದುಕೊಂಡು ಉಳಿದ ನೀರನ್ನು ನೆಲದ ಮೇಲೆ ಬಿಡಬೇಕು. (ಕೆಲವರಲ್ಲಿ ಉತ್ತರಾಪೋಶನಕ್ಕೆ ಒಮ್ಮೆಗೇ ಎರಡು ಬಾರಿ ನೀರು ಹಾಕುವ ಕ್ರಮವಿದೆ.)

**ಯಜಮಾನಕುಲೇ ಜಾತಾ ದಾಸಾ ದಾಸ್ಯೋಽನ್ನಕಾಂಕ್ಷಿಣಃ ।**
**ತೇ ಸರ್ವೇ ತೃಪ್ತಿಮಾಯಾಂತು ಭುಕ್ತಶೇಷೇಣ ಭೂತಲೇ ॥**

ಬ್ರಾಹ್ಮಣರು ಭೋಜನದ ಅನಂತರ ಪಿತೃ ಹಾಗೂ ಪ್ರೇತ ಬ್ರಾಹ್ಮಣರು ಉಂಡು ಉಳಿದ ಅನ್ನವನ್ನು ಎಡಭಾಗದಲ್ಲಿಟ್ಟಿರುವ ದೊಣ್ಣೆಯಲ್ಲಿ ಹಾಕಬೇಕು. ಹಾಗೆಯೇ ವಿಶ್ವೇದೇವ ಬ್ರಾಹ್ಮಣರು ಬಲಭಾಗದಲ್ಲಿಟ್ಟಿರುವ ದೊಣ್ಣೆಯ ತಟ್ಟೆಗೆ ಉಚ್ಛಿಷ್ಟ ಹಾಕಬೇಕು.

**ಅರ್ಧಂ ಪಿಬತಿ ಗಂಡೂಷಮರ್ಧಂ ತ್ಯಜತಿ ಭೂತಲೇ ।**
**ಪ್ರೀಣಂತಿ ಪಿತರಃ ಸರ್ವೇ ಯೇ ಚಾನ್ಯೇ ಭೂಮಿದೇವತಾಃ ॥**

**ರೌರವೇ ಪೂಯನಿಲಯೇ ಪದ್ಮಾರ್ಬುದನಿವಾಸಿನಮ್ ।**
**ಅರ್ಥಿನಾಮುದಕಂ ದತ್ತಮಕ್ಷಯ್ಯಮುಪತಿಷ್ಠತು ॥**

–ಎಂದು ಬ್ರಾಹ್ಮಣರು '**ಅನ್ನದಾತಾ ಸುಖೀಭವ ॥**' ಎನ್ನಬೇಕು. ಅನಂತರ ಯಜಮಾನನು ಬ್ರಾಹ್ಮಣರು ಎಲೆಯ ಮೇಲಿಟ್ಟ ಎಡಕೈ ಬೆರಳನ್ನು ತೊಳೆದುಕೊಳ್ಳಲು ನೀರನ್ನು ಹಾಕಬೇಕು. ಬ್ರಾಹ್ಮಣರು ತಮಗೆ ಕೊಟ್ಟ ನೀರಿನ ತಂಬಿಗೆಯನ್ನು ಹಿಡಿದುಕೊಂಡು ಕೈತೊಳೆಯಲು ಹೋಗಬೇಕು. ಕ್ರಿಯಾಕರ್ತೃಗಳು ಹೋಗಬೇಕಾಗಿಲ್ಲ. ಅವರು ಕೈತೊಳೆದು ಮೂವತ್ತೆರಡು ಬಾರಿ ಬಾಯಿ ಮುಕ್ಕಳಿಸಿ, ಕಾಲು ತೊಳೆದುಕೊಂಡು ಬರಬೇಕು. ಯಜಮಾನನು ಆಚಮನಕ್ಕೆ ನೀರನ್ನು ಕೊಡಬೇಕು. ಅನಂತರ ಆಚಮನ ಮಾಡಿ ಅವರ ಪವಿತ್ರವನ್ನು ವಿಸರ್ಜಿಸಿ ಮೂರೂ ಸ್ಥಾನಗಳ ಬ್ರಾಹ್ಮಣರು ತಮ್ಮತಮ್ಮ ಸ್ಥಾನಗಳಲ್ಲಿ ಕುಳಿತು ಆಚಮನ ಮಾಡಬೇಕು. ಅನಂತರ ಯಜಮಾನ ನಿರ್ಮಾಲ್ಯ ತೀರ್ಥಾದಿಗಳನ್ನು ಕ್ರಮವಾಗಿ ಪ್ರೇತ–ಪಿತೃ–ವಿಶ್ವೇದೇವ ಬ್ರಾಹ್ಮಣರಿಗೆ ಕೊಡಬೇಕು.

**ಭೋಜನಾನಂತರಂ ವಿಷ್ಣೋರರ್ಪಿತಂ ತುಲಸೀದಲಮ್ ।**
**ಭಕ್ಷಣಾತ್ಪಾಪನಿರ್ಮುಕ್ತಾ ಚಾಂದ್ರಾಯಣಶತಾಧಿಕಮ್ ॥**

–ಎಂದು ಮಂತ್ರವನ್ನು ಉಚ್ಚರಿಸಬೇಕು.

## ಪ್ರೇತಬರ್ಹಿಷಿ ಪಿಂಡಪ್ರದಾನಮ್

**ಸಂಕಲ್ಪಃ**

(ಬಲ) **ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ** ...... (ಎಡ) **ಅಸ್ಮತ್ಪಿತುಃ** .....**ಪ್ರೇತಸ್ಯ** ......**ಶ್ರಾದ್ಧೇ ಭೋಜನಾಂತೇ ಪ್ರೇತಬರ್ಹಿಷಿ ತಿಲೋದಕ ಪಿಂಡಪ್ರದಾನಂ** (ಬಲ) **ಕರಿಷ್ಯೇ ॥ (ಕುರುಷ್ವ) ॥**

ಕೈಮುಗಿದು,

**ಪ್ರಯಾಗಮಾಧವೋ ಭೂಯಾದ್ದಯಾವಾರಿ ನಿಧಿರ್ಹೃದಿ ।**
**ಪ್ರಕೃಷ್ಟಯಾಗಸದೃಶೀ ಸಕೃದ್ಯಸ್ಯ ಹಿ ಸಂಸ್ಮೃತಿಃ ॥**

**ಸ ಬಿಂದುಮಾಧವಃ ಪಾಯಾದ್ವಿಭೋರ್ಯಸ್ಯ ನಿರೀಕ್ಷಣಾತ್ ।**
**ಅಪಾರೋಽಪಿ ಹಿ ಸಂಸಾರಸಿಂಧುರ್ಬಿಂದುತ್ವಮಶ್ನುತೇ ॥**

**ಗಯಾಭಿಧಮಿದಂ ಕ್ಷೇತ್ರಂ ಶ್ರಯೇ ಶ್ರೇಯಸ್ಕರಂ ನೃಣಾಮ್ ।**
**ನ ಯತ್ರ ಸಹತೇ ಜಾತುಕ್ರಿಯಾ ಜನ್ಮಾಂತರಕ್ರಿಯಾಮ್ ॥**

ಎಡಕಾಲೂರಿ ಕುಳಿತು **'ಜನ್ಮಭೂಮಿ ಗಯಾಕ್ಷೇತ್ರೇ ವಿಷ್ಣುವೈಷ್ಣವಸನ್ನಿಧೌ ಪಿಂಡದಾನಸ್ಯ ಅನುಜ್ಞಾ॥'** ಎಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಿ (**ಅಸ್ತು ಪಿಂಡದಾನಮ್** ।) ಎಂದು ಪ್ರತಿವಚನ ಪಡೆದು. (ಎಡ) ಪ್ರೇತಕಮಂಡಲುವನ್ನು ತನ್ನ ಎಡಕೈಯಲ್ಲಿ ಹಿಡಿದು, ಎಳ್ಳು ಹಾಗೂ ಕಮಂಡಲು ನೀರನ್ನು ತನ್ನ ಕೈಗೆ ಹಾಕಿಕೊಂಡು, ಪಿತೃತೀರ್ಥದಿಂದ **'ಅಸ್ಮತ್ಪಿತುಃ ...ಶ್ರಾದ್ಧೇ ಪಿಂಡಸ್ಥಾನೇ ಮಾರ್ಜನಮುಪತಿಷ್ಠತು॥'** ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಬಿಟ್ಟು ಪಿಂಡವನ್ನು ದಕ್ಷಿಣಾಗ್ರವಾಗಿ ಹಿಡಿದು **'ಅಸ್ಮತ್ಪಿತುಃ ಶ್ರಾದ್ಧೇ ....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಅಯಂ ಪಿಂಡ ಉಪತಿಷ್ಠತು॥'** ಎಂದು ತ್ರಿಕೋನಾಕಾರದ ಮಂಡಲದ ಮೇಲೆ ಪಿಂಡವನ್ನಿಟ್ಟು ಹೋಮಪ್ರಸಾದವನ್ನು ಪಿಂಡದ ಮೇಲೆ ಸ್ವಲ್ಪ ಹಾಕಿ, ಹೋಮದ ತಿಲ ಸಂಪಾತಾಜ್ಯ, ಭಸ್ಮ ಹಿಡಿದು, **'ಅಂಜನಾ–ಭ್ಯಂಜನಮುಪತಿಷ್ಠತು ॥'** ಎಂದು ಕೊಟ್ಟು **'ಬಲಿಸ್ಥಾನೇ ದರ್ಭಪತ್ರಮುಪತಿಷ್ಠತು॥** ಎಂದು ಪಿಂಡದ ಸುತ್ತ ಪಿಂಡಕ್ಕೆ ತಾಗದ ಹಾಗೆ ಅಪ್ರದಕ್ಷಿಣೆಯಾಗಿ ದರ್ಭೆಯನ್ನು ಹಾಕಿ ಎಳ್ಳುನೀರು ಹಿಡಿದು, **ದರ್ಭಪತ್ರೋಪರಿ ತಿಲೋದಕಮುಪತಿಷ್ಠತು ॥** ಎಂದು ಪಿಂಡದ ಸುತ್ತ ಹಾಕಿದ ದರ್ಭೆಯ ಮೇಲೆ ಬಿಟ್ಟು, ಹವಿಸ್ಸನ್ನು ಹಿಡಿದು, **ದರ್ಭಪತ್ರೋಪರಿ ಬಲಿರುಪತಿಷ್ಠತು ॥** ಎಂದು ಪಿಂಡದ ಸುತ್ತ ದರ್ಭೆಯ ಮೇಲೆ ಹಾಕಿ, ಪುನಃ ಎಳ್ಳುನೀರು ಹಿಡಿದು, **'ಬಲೇರುಪರಿ ತಿಲೋದಕಮುಪತಿಷ್ಠತು ॥'** ಎಂದು ಬಲಿಯ ಮೇಲೆ ಬಿಟ್ಟು, ಪಿಂಡದ ಮೇಲೆ **ವಾಸೋದಕಾದಿ**ಗಳನ್ನು ನೀಡಬೇಕು. (ಕೆಲವರಲ್ಲಿ ಒಬ್ಬ ಕ್ರಿಯಾಕರ್ತೃವಿನ ಪ್ರೇತಪಿಂಡದ ಮೇಲೆ ತಾಯಿ ಮತ್ತು ಹೆಣ್ಣುಮಕ್ಕಳು ವಾಸೋದಕಾದಿಗಳನ್ನು ಕೊಡುವ ಕ್ರಮವಿದೆ.) ಅನಂತರ ಒಂದು ದರ್ಭೆಯನ್ನು ಪಿಂಡದ ಮೇಲೆ ದಕ್ಷಿಣಾಗ್ರವಾಗಿಟ್ಟು (ಬಲ) ಅಕ್ಕಿ ಹಿಡಿದು,

**ನಾರಾಯಣ ನಮಸ್ತೇಽಸ್ತು ಶಂಖಚಕ್ರಗದಾಧರ ।**
**ಅಕ್ಷಯ್ಯ ಪಿಂಡದಾನೇನ ಪ್ರೇತತೃಪ್ತಿಕರೋ ಭವ ॥**

**ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

**ಅನಾದಿನಿಧನೋ ದೇವಃ ..... ॥ ಅತಸೀಪುಷ್ಪಸಂಕಾಶಂ .... ॥**

ಈ ನಾಲ್ಕು ಮಂತ್ರಗಳಿಂದ ಪಿಂಡದ ಮೇಲೆ ಹಾಕಿ **'ಅಸ್ಮತ್ಪಿತೃಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥'** –ಎಂದು ಕೃಷ್ಣಾರ್ಪಣ ಬಿಡಬೇಕು.

**ಪಿತೃಬರ್ಹಿಷಿ ಪಿಂಡಪ್ರದಾನಮ್**
**ಸಂಕಲ್ಪಃ**

(ಬಲ) **ಪಿತ್ರಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀಜನಾರ್ದನ** ..... (ಎಡ) **ಅಸ್ಮತ್ಪಿತುಃ**

....ಶ್ರಾದ್ಧೇ ಅಸ್ಮತ್ಪಿತಾಮಹಪ್ರಪಿತಾಮಹವೃದ್ಧಪ್ರಪಿತಾಮಹಾನಾಂ ಬರ್ಹಿಷಿ ತಿಲೋದಕ ಪಿಂಡಪ್ರದಾನಾನಿ (ಬಲ) ಕರಿಷ್ಯೇ ॥ (ಕುರುಷ್ವ)

ಈಶಾನವಿಷ್ಣುಕಮಲಾಸನಕಾರ್ತಿಕೇಯ
ವಹ್ನಿತ್ರಯಾರ್ಕರಜನೀಶಗಣೇಶ್ವರಾಣಾಮ್ ।
ಕ್ರೌಂಚಾಮರೇಂದ್ರಕಲಶೋದ್ಭವಕಾಶ್ಯಪಾನಾಂ
ಪಾದಾನ್ನಮಾಮಿ ಶಿರಸಾ ಪಿತೃಮುಕ್ತಿಹೇತೋ ॥

ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ।
ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ನಮೋ ನಮಃ ॥

ಜನ್ಮಭೂಮಿ ಗಯಾಕ್ಷೇತ್ರೇ ವಿಷ್ಣುವೈಷ್ಣವ ಸನ್ನಿಧೌ ॥ ಪಿಂಡದಾನಸ್ಯ ಅನುಜ್ಞಾ॥ (ಅಸ್ತು ಪಿಂಡದಾನಮ್)

ಎಡಕಾಲೂರಿ ಕುಳಿತು ಕಮಂಡಲುತೀರ್ಥದಿಂದ ಎಳ್ಳುಸಹಿತವಾಗಿ,

ಮಾರ್ಜಯಂತಾಂ ಪಿತಾಮಹಾಃ । ಮಾರ್ಜಯಂತಾಂ ಪ್ರಪಿತಾಮಹಾಃ । ಮಾರ್ಜಯಂತಾಂ ವೃದ್ಧಪ್ರಪಿತಾಮಹಾಃ ॥

–ಎಂದು ತಿಲೋದಕ ಕೊಟ್ಟು (ಬಲದಿಂದ) ಪಿಂಡ ಹಿಡಿದು (ಎಡದಿಂದ) ಬರ್ಹಿಸ್ಸಿನಲ್ಲಿಟ್ಟು ಪುನಃ ಬಲದಿಂದ ಅಷ್ಟಾಕ್ಷರ ಜಪ ಮಾಡಬೇಕು. (ಬಲ)

ಅಸ್ಮತ್ಪಿತುಃ ......ಶ್ರಾದ್ಧೇ ಅಸ್ಮತ್ಪಿತಾಮಹ .....ಶರ್ಮನ್ ....ಗೋತ್ರ .....ರೂಪ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಯೇ ಚ ತ್ವಾಮತ್ರಾನು ॥ (ಎಡ) ಪಿತಾಮಹಾಯ ....ಶರ್ಮಣೇ .....ಗೋತ್ರಾಯ .....ರೂಪಾಯ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಾಯ ಯೇ ಚ ತಮನುಗಚ್ಛಂತಿ ತೇಭ್ಯಶ್ಚಾಯಂ ಪಿಂಡಃ ತಸ್ಮೈ ತೇ ಸ್ವಧಾ ನಮಃ ॥ (ಬಲ) ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥ [ಅಸ್ಮನ್ಮಾತುಃ .....ಶ್ರಾದ್ಧೇ ಅಸ್ಮತ್ಪಿತಾಮಹಿ .....ದೇ .....ಗೋತ್ರೇ .....ರೂಪೇ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಯೇ ಚ ತ್ವಾಮತ್ರಾನು । ಪಿತಾಮಹ್ಯೈ .....ದಾಯೈ .....ಗೋತ್ರಾಯೈ .....ರೂಪಾಯೈ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಾಯ ಯೇ ಚ ತಾಮನುಗಚ್ಛಂತಿ ತೇಭ್ಯಶ್ಚಾಯಂ ಪಿಂಡಃ ತಸ್ಯೈ ತೇ ಸ್ವಧಾ ನಮಃ ॥]
–ಎಂದು ಪಿಂಡದ ಮೇಲೆ ೮ ಬಾರಿ ಜಪಿಸುವುದು.



ಅಸ್ಮತ್ಪಿತುಃ ......ಶ್ರಾದ್ಧೇ ಅಸ್ಮತ್ಪ್ರಪಿತಾಮಹ ....ಶರ್ಮನ್ ....ಗೋತ್ರ .....ರೂಪ ತದಂತರ್ಯಾಮಿ

**ಪ್ರಾಣಸ್ಥಸಂಕರ್ಷಣ ಯೇ ಚ ತ್ವಾಮತ್ರಾನು ॥** (ಎಡ) **ಪ್ರಪಿತಾಮಹಾಯ .....ಶರ್ಮಣೇ .....ಗೋತ್ರಾಯ .....ರೂಪಾಯ ತದಂತರ್ಯಾಮಿ ಪ್ರಾಣಸ್ಥಸಂಕರ್ಷಣಾಯ ಯೇ ಚ ತಮನುಗಚ್ಛಂತಿ ತೇಭ್ಯಶ್ಚಾಯಂ ಪಿಂಡಃ ತಸ್ಮೈ ತೇ ಸ್ವಧಾ ನಮಃ ॥** (ಬಲ) **ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥**

**ಅಸ್ಮತ್ಪಿತುಃ ......ಶ್ರಾದ್ಧೇ ಅಸ್ಮದ್‌ವೃದ್ಧಪ್ರಪಿತಾಮಹ ....ಶರ್ಮನ್ .....ಗೋತ್ರ .....ರೂಪ ತದಂತರ್ಯಾಮಿ ಪ್ರಾಣಸ್ಥವಾಸುದೇವ ಯೇ ಚ ತ್ವಾಮತ್ರಾನು ॥** (ಎಡ) **ವೃದ್ಧಪ್ರಪಿತಾಮಹಾಯ ....ಶರ್ಮಣೇ .....ಗೋತ್ರಾಯ .....ರೂಪಾಯ ತದಂತರ್ಯಾಮಿ ಪ್ರಾಣಸ್ಥವಾಸುದೇವಾಯ ಯೇ ಚ ತಮನುಗಚ್ಛಂತಿ ತೇಭ್ಯಶ್ಚಾಯಂ ಪಿಂಡಃ ತಸ್ಮೈ ತೇ ಸ್ವಧಾ ನಮಃ ॥** (ಬಲ) **ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥**

ಮುಂದಿನ ಪಿಂಡಸಂಯೋಜನೆಯ ಅನಂತರ ಅನುಲೇಪನಪಿಂಡ ಇಡಬೇಕು.

## ಪಿಂಡಸಂಯೋಜನಮ್

**ಸಂಕಲ್ಪಃ**

(ಬಲ) **ವಿಷ್ಣು ಪುಣ್ಯತಿಥೌ .... ಪ್ರಾಣಸ್ಥಶ್ರೀಪ್ರಾಜ್ಞರೂಪಿ .....** (ಎಡ) **ಅಸ್ಮತ್ಪಿತುಃ ....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಂ** (ಬಲ) **ಪಿತಾಮಹ ....ಮಹೈಃ ....ಶರ್ಮಭಿಃ ....ಗೋತ್ರೈಃ ವಸುರುದ್ರಾದಿತ್ಯಸ್ವರೂಪೈಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸಂಕರ್ಷಣವಾಸುದೇವೈಃ ಸಹ ಸಾಪಿಂಡ್ಯಸಿದ್ಧಿದ್ವಾರಾ ವಸ್ವಾದಿಪುಣ್ಯಲೋಕಾವಾಪ್ತ್ಯರ್ಥಂ ಪಿಂಡಸಂಯೋಜನಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥** –ಎಂದು ಬ್ರಹ್ಮದಂಡ ಇಟ್ಟು,

**ಪ್ರೇತಪಿಂಡಖಂಡನಪೂರ್ವಕಂ ಸಂಯೋಜನಾಧಿಕಾರಸಿದ್ಧಿರಸ್ತ್ವಿತಿ ಭವಂತೋ ಬ್ರುವಂತು ॥ (ಪಿಂಡಸಂಯೋಜನಾಧಿಕಾರಸಿದ್ಧಿರಸ್ತು)** –ಎಂದು ಪ್ರತಿವಚನ ಪಡೆದು,

ಪ್ರೇತಪಿಂಡದ ಮೇಲಿರುವ ಎಳ್ಳು ತುಲಸಿ ಹೂ ಗರಿಕೆ ತೆಗೆದು ಪ್ರೇತಪಿಂಡದ ಮೇಲೆ ಮೊಸರು ಜೇನುತುಪ್ಪದ ಮಿಶ್ರಣವನ್ನು ಸವರಿ (ಎಡ) ಎಡಕಾಲು ನೆಲಕ್ಕೆ ಊರಿ ಪಿಂಡದ ಎರಡು ಪಕ್ಕಗಳಲ್ಲಿ ಸರಿಯಾಗಿ ಬಂಗಾರದ ಅಥವಾ ಬೆಳ್ಳಿಯ ಸರಿಗೆ, ಇಲ್ಲವೇ ದರ್ಭೆಯ ಹಗ್ಗವನ್ನು ಪಿಂಡದ ಮೇಲಿಟ್ಟು ಅಂಗುಷ್ಠ–ಮಧ್ಯಮ–ಅನಾಮಿಕ ಬೆರಳುಗಳಿಂದ ಎರಡು ಕೈಗಳಲ್ಲಿ ಸರಿಗೆ ಹಿಡಿದು ಆಚಾರ್ಯರು **'ಮಧುಮತೀ'** ಮಂತ್ರ ಹೇಳುವಾಗ, ಎಲ್ಲರೂ ಕಣ್ಣು ಮುಚ್ಚಿಕೊಂಡು ಇರುವಂತೆ ತಾನು ಕಣ್ಣು ಮುಚ್ಚಿ ಕೊಂಡು ನಾರಾಯಣಸ್ಮರಣೆಯೊಂದಿಗೆ ಪಿಂಡವನ್ನು ತುಂಡು ಮಾಡಬೇಕು.




1. ಬಂಗಾರದ ಸರಿಗೆ
2. ಪ್ರೇತಪಿಂಡ
3. ಜೇನುತುಪ್ಪ ಹಚ್ಚುವ ಭಾಗ
4. ಪ್ರೇತಪಿಂಡಸಂಯೋಜನೆಯ ಸ್ಥಳ

**ಓಂ ಮಧುಮತೀರೋಷಧೀರ್ದ್ಯಾವ ಆಪೋ ಮಧುಮನ್ನೋ ಭವತ್ವಂತರಿಕ್ಷಮ್ । ಕ್ಷೇತ್ರಸ್ಯ ಪತಿರ್ಮಧುಮಾನ್ನೋ ಅಸ್ತ್ವರಿಷ್ಯಂತೋ ಅನ್ವೇನಂ ಚರೇಮ ॥**

ಮಂತ್ರಪೂರ್ವಕವಾಗಿ ಪಿಂಡವನ್ನು ತುಂಡು ಮಾಡಿ ಕತ್ತರಿಸಿದ ಭಾಗಕ್ಕೆ ಮೊಸರುಮಿಶ್ರಿತ ಜೇನುತುಪ್ಪ ಹಚ್ಚಿ ಪಾರ್ವಣಪಿಂಡಗಳ ಪಶ್ಚಿಮಭಾಗದಲ್ಲಿ ಮೊಸರು ಮಿಶ್ರಿತ ಜೇನುತುಪ್ಪ ಹಚ್ಚಿ ಆಚಾರ್ಯರು, '**ಮಧುವಾತಾ ಋತಾಯತೇ..... ।**' ಹೇಳಲು ಪ್ರೇತಪಿಂಡದ ಉತ್ತರಭಾಗದ ತುಂಡನ್ನು ಪಾರ್ವಣಪಿಂಡಸ್ಥಾನದ ಪಿತಾಮಹಪಿಂಡದ ಪಶ್ಚಿಮಭಾಗದಲ್ಲಿ ಸಂಯೋಜನೆ ಮಾಡಬೇಕು.

**ಓಂ ಮಧು ವಾತಾ ........ ಸಂತ್ವೋಷಧೀಃ ॥ ಯೇ ಸಮಾನಾಃ ಸಮನಸಃ ಪಿತರೋ ಯಮರಾಜ್ಯೇ । ತೇಷಾಂ ಲೋಕಃ ಸ್ವಧಾ ನಮೋ ಯಜ್ಞೋ ಯಜ್ಞೇಷು ಕಲ್ಪತಾಮ್ ॥ ಯೇ ಸಜಾತಾಃ ಸಮನಸೋ ಜೀವಾ ಜೀವೇಷು ಮಾಮಕಾಃ । ತೇಷಾಂ ಶ್ರೀರ್ಮಯಿ ಕಲ್ಪತಾಮಸ್ಮಿಲ್ಲೋಕೇ ಶತಂ ಸಮಾಃ ॥ ಸಂ ಗಚ್ಛಧ್ವಂ ಸಂ ವದಧ್ವಂ ಸಂ ವೋ ಮನಾಂಸಿ ಜಾನತಾಮ್ । ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ ॥ ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ಸಹ ಚಿತ್ತಮೇಷಾಮ್ । ಸಮಾನಂ ಮಂತ್ರಮಭಿ ಮಂತ್ರಯೇ ವಃ ಸಮಾನೇನ ವೋ ಹವಿಷಾ ಜುಹೋಮಿ ॥**

**ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ । ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾಸತಿ ॥**

**ಅಸ್ಮತ್ಪಿತಃ .....ಗೋತ್ರ ......ಶರ್ಮನ್ ಪ್ರೇತ ಅಸ್ಮತ್ಪಿತಾಮಹೇನ .....ಶರ್ಮಣಾ .....ಗೋತ್ರೇಣ ವಸುರೂಪೇಣ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನೇನ ಸಂಸೃಜಸ್ವ। ಸಹೈಷ ತೇ ಪಿಂಡ ಭಾಗಃ । ತಸ್ಮೈ ತೇ ಸ್ವಧಾ ನಮಃ । ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥ [ಅಸ್ಮನ್ಮಾತುಃ .....ಗೋತ್ರೇ .....ದೇ .....ಪ್ರೇತೇ ಅಸ್ಮತ್ಪಿತಾ–ಮಹ್ಯಾ .....ದಯಾ .....ಗೋತ್ರಯಾ .....ರೂಪಯಾ ...ತಸ್ಯೈ]**

ಮೊದಲ ತುಂಡನ್ನು ಸಂಯೋಜನೆ ಮಾಡಿದ ಅನಂತರ ಪ್ರೇತಪಿಂಡದ ಮಧ್ಯ ತುಂಡನ್ನು ಪ್ರಪಿತಾಮಹಪಿಂಡದ ಪಶ್ಚಿಮಭಾಗದಲ್ಲಿ ಮುಂದಿನ ಮಂತ್ರದಿಂದ ಸಂಯೋಜನೆ ಮಾಡಬೇಕು.

**ಓಂ ಮಧು ನಕ್ತಮುತೋಷಸೋ ....... ದ್ಯೌರಸ್ತು ನಃ ಪಿತಾ ॥ ಯೇ ಸಮಾನಾಃ ...... ಸುಸಹಾಸತಿ ॥**

**ಅಸ್ಮತ್ಪಿತಃ .....ಗೋತ್ರ .....ಶರ್ಮನ್ ಪ್ರೇತ ಅಸ್ಮತ್ ಪ್ರಪಿತಾಮಹೇನ .....ಶರ್ಮಣಾ .....ಗೋತ್ರೇಣ ರುದ್ರರೂಪೇಣ ತದಂತರ್ಯಾಮಿ ಪ್ರಾಣಸ್ಥಸಂಕರ್ಷಣೇನ ಸಂಸೃಜಸ್ವ। ಸಹೈಷ ತೇ ಪಿಂಡಭಾಗಃ । ತಸ್ಮೈ ತೇ ಸ್ವಧಾ ನಮಃ । ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥**

ಅನಂತರ 'ಮಧುಮಾನ್ನೋ....' ಮಂತ್ರದಿಂದ ಪ್ರೇತಪಿಂಡದ ದಕ್ಷಿಣದ ತುಂಡನ್ನು ವೃದ್ಧಪ್ರಪಿತಾಮಹಪಿಂಡದ ಪಶ್ಚಿಮಭಾಗದಲ್ಲಿ ಸಂಯೋಜನೆ ಮಾಡಬೇಕು.

**ಓಂ ಮಧುಮಾನ್ನೋ ...... ಭವಂತು ನಃ ॥ ಯೇ ಸಮಾನಾಃ ...... ಸುಸಹಾಸತಿ ॥**

**ಅಸ್ಮತ್ಪಿತಃ .....ಗೋತ್ರ .....ಶರ್ಮನ್ ಪ್ರೇತ ಅಸ್ಮದ್‌ವೃದ್ಧಪ್ರಪಿತಾಮಹೇನ .....ಶರ್ಮಣಾ .....ಗೋತ್ರೇಣ ಆದಿತ್ಯರೂಪೇಣ ತದಂತರ್ಯಾಮಿ ಪ್ರಾಣಸ್ಥ ವಾಸುದೇವೇನ ಸಂಸೃಜಸ್ವ । ಸಹೈಷ ತೇ ಪಿಂಡ ಭಾಗಃ । ತಸ್ಮೈ ತೇ ಸ್ವಧಾ ನಮಃ। ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥**

ಬಲಕೈಯಲ್ಲಿ ಪ್ರೇತಸ್ಥಾನದ ಕಮಂಡಲುವನ್ನು ತೆಗೆದು ಪಿತೃಸ್ಥಾನದ ಕಮಂಡಲುವಿನಲ್ಲಿ ಸಂಯೋಜನೆ ಮಾಡಿ ಪ್ರೇತಪಿಂಡದ ಬಲಿಯ ಅನ್ನವನ್ನು ಹಿಡಿದು ಪಿತಾಮಹಾದಿ ಮೂರೂ ಪಿಂಡಗಳ ಪಶ್ಚಿಮಭಾಗದಲ್ಲಿ ಜೋಡಿಸಿದ ಪಿಂಡವು ಬೀಳದ ಹಾಗೆ ಮೆತ್ತಬೇಕು. ಪ್ರೇತದ ಹವಿಸ್ಸಿನ ಎಲೆಗೆ ಎಳ್ಳುನೀರು ಬಿಟ್ಟು ವಿಸರ್ಜಿಸಿ ಕೈ ತೊಳೆಯುವುದು.

## ಪ್ರೇತೋದ್ವಾಸನಮ್

ಎದ್ದುನಿಂತು ಎಳ್ಳುನೀರು ಹಿಡಿದು, ಪ್ರೇತಬ್ರಾಹ್ಮಣರಲ್ಲಿ **'ಭೋಜನಪಾತ್ರಮುಚ್ಚಾಲ-ಯಿಷ್ಯೇ' (ಉಚ್ಚಾಲಯ) ॥'** ಎನ್ನಲು ಅವರ ಭೋಜನಪತ್ರಕ್ಕೆ ಎಳ್ಳುನೀರು ಬಿಟ್ಟು, ಗರಿಕೆ, ಎಳ್ಳು, ದರ್ಭೆ ನೀರು ಹಿಡಿದು,

**ಅಸ್ಮತ್ಪಿತುಃ .....ಗೋತ್ರಸ್ಯ ....ಶರ್ಮಣಃ ಪ್ರೇತಸ್ಯ ಇದಂ ತೇ ಸ್ವಸ್ತ್ಯುದಕಮುಪತಿಷ್ಠತು ॥**

-ಎಂದು ಪ್ರೇತಬ್ರಾಹ್ಮಣರ ಕೈಯಲ್ಲಿ ಕೊಟ್ಟು **'ಮುಖಶುದ್ಧ್ಯರ್ಥಂ ತಾಂಬೂಲಮುಪ-ತಿಷ್ಠತು ॥'** ಎಂದು ತಾಂಬೂಲಕೊಟ್ಟು, **'ಇಯಂ ತೇ ವಿಶಿಷ್ಟ ದಕ್ಷಿಣಾಮುಪತಿಷ್ಠತು ॥'** ಎಂದು ದಕ್ಷಿಣೆ ಕೊಟ್ಟು ಅವರ ಕೈಯ ಹೆಬ್ಬೆರಳು ಹಿಡಿದು, **'ಪ್ರೇತಮ್ ಉದ್ವಾಸಯಿಷ್ಯೇ ॥'** ಎಂದು ಅವರ ಕೈಯಲ್ಲಿ ತೆಂಗಿನಕಾಯಿ, ಎರಡು ದರ್ಭೆ ಕೊಟ್ಟು ತಾನು ಎರಡು ಉದ್ದದ ದರ್ಭೆಯಿಂದ ಪ್ರೇತಬ್ರಾಹ್ಮಣರ ಕೈಯಲ್ಲಿರುವ ತೆಂಗಿನಕಾಯಿಯನ್ನು ಮುಟ್ಟಿ ಅವರ ಮುಖವನ್ನು ನೋಡುತ್ತಾ ಕೈಮುಗಿದು,

**ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂ ಗತಿಮ್ ।**
**ಮನಸಾ ವಾಯುರೂಪೇಣ ವಿಪ್ರೇ ತ್ವಾ ಯೋಜಯಾಮ್ಯಹಮ್ ॥**

**ಏಷ ವೋಽನುಗತಃ ಪ್ರೇತಂ ಪಿತೃಭಾಗಮವಾಪ್ತವಾನ್ ।**
**ಶಿವಮಸ್ತ್ವಿಹ ಶೇಷಾಣಾಂ ಜಾಯಂತಾಂ ಚಿರಜೀವಿನಃ ॥**

**ಪ್ರೇತತ್ವಂ ತು ವಿಹಾಯಾಽಶು ಪಿತೃತ್ವಂ ಪ್ರಾಪ್ನುಯಾತ್ಪರಮ್ ॥**

-ಎಂದು ಪ್ರಾರ್ಥಿಸಿ (ಕೆಲವರಲ್ಲಿ ಒಂದು ಎಸಳಿನ ಪವಿತ್ರ ವಿಸರ್ಜಿಸಿ ಕಾಲು ತೊಳೆದು ಪರ್ವತವನ್ನೂ ಸೂರ್ಯನನ್ನೂ ನೋಡಿ ಬಂದು ಬ್ರಾಹ್ಮಣರಿಗೆ ನಮಸ್ಕರಿಸಿ ಶಿಖಾ ಬಂಧನ ಮಾಡಿ ಮೂರು ಬಾರಿ ಚಪ್ಪಾಳೆ ತಟ್ಟಬೇಕು.) **'ಇತಃ ಪರಂ ಪ್ರೇತಶಬ್ದೋ ನಾಸ್ತಿ ವಾ?'** -ಎಂದು ಕೇಳಲು ಪ್ರೇತಬ್ರಾಹ್ಮಣರು **'ಇತಃ ಪರಂ ಪ್ರೇತಶಬ್ದೋ ನಾಸ್ತಿ। ಇತಃ ಪರಂ ಪಿತೃಶಬ್ದೋಚ್ಚಾರಣಂ ಕುರು ॥'** ಎಂದು ಮೂರು ಬಾರಿ ಪ್ರತಿವಚನ ಹೇಳಬೇಕು.

## ಅನುಲೇಪನಪಿಂಡದಾನಮ್

ಮೂರು ಪಿಂಡಗಳನ್ನು ಪ್ರತ್ಯೇಕವಾಗಿ ಪಿತೃಪಿತಾಮಹಪ್ರಪಿತಾಮಹ ಎಂಬ ನಾಮ ಗೋತ್ರೋಚ್ಚಾರಣೆಯೊಂದಿಗೆ ಮುಟ್ಟಬೇಕು.

(ಎಡ) **ಅಸ್ಮತ್ಪಿತ್ರೇ .....ಶರ್ಮಣೇ .....ಗೋತ್ರಾಯ ವಸುರೂಪಾಯ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಾಯ ಯೇ ಚ ತಮನುಗಚ್ಛಂತಿ ತೇಭ್ಯಶ್ಚಾಯಂ ಪಿಂಡಃ ತಸ್ಮೈ ತೇ ಸ್ವಧಾ ನಮಃ ।** (ಬಲ) **ಗಯಾಯಾಂ ದತ್ತಮ್ ।** (ಅಸ್ತು) ।

**ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥ [ಮಾತ್ರೇ ....ದಾಯ್ಯೈ ....ಗೋತ್ರಾಯ್ಯೈ ....ರೂಪಾಯ್ಯೈ ..... ಯೇ ಚಾಮನುಗಚ್ಛಂತಿ ..... ತಸ್ಯೈ ತೇ ಸ್ವಧಾ ನಮಃ ।]**

(ಎಡ) **ಪಿತಾಮಹಾಯ .....ಶರ್ಮಣೇ .....ಗೋತ್ರಾಯ ರುದ್ರರೂಪಾಯ ತದಂತರ್ಯಾಮಿ ಪ್ರಾಣಸ್ಥಸಂಕರ್ಷಣಾಯ ಯೇ ಚ ತಮನುಗಚ್ಛಂತಿ ತೇಭ್ಯಶ್ಚಾಯಂ ಪಿಂಡಃ ತಸ್ಮೈ ತೇ ಸ್ವಧಾ ನಮಃ ।** (ಬಲ) **ಗಯಾಯಾಂ ದತ್ತಮ್ ।** (**ಅಸ್ತು**) **। ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥**

(ಎಡ) **ಪ್ರಪಿತಾಮಹಾಯ .....ಶರ್ಮಣೇ .....ಗೋತ್ರಾಯ ಆದಿತ್ಯರೂಪಾಯ ತದಂತರ್ಯಾಮಿ ಪ್ರಾಣಸ್ಥವಾಸುದೇವಾಯ ಯೇ ಚ ತಮನುಗಚ್ಛಂತಿ ತೇಭ್ಯಶ್ಚಾಯಂ ಪಿಂಡಃ ತಸ್ಮೈ ತೇ ಸ್ವಧಾ ನಮಃ ।** (ಬಲ) **ಗಯಾಯಾಂ ದತ್ತಮ್ ।** (**ಅಸ್ತು**) **। ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥**

ಅನುಲೇಪನ ಪಿಂಡವನ್ನು ಹಿಡಿದು (ಎಡ) '**ಅತ್ರ ಪಿತರೋ ಮಾದಯಧ್ವಮ್ । ಯಥಾಭಾಗಮಾವೃಷಾಯಧ್ವಮ್ ॥**' ಎಂದು ಪಿತೃಪಿತಾಮಹಪಿಂಡಗಳ ನಡುಸಂಧಿಯ ಪಶ್ಚಿಮಭಾಗದಲ್ಲಿ ಇಟ್ಟು (ಬಲ) '**ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥**' ಎಂದು ಜಪಿಸಬೇಕು.

## ಘ್ರಾಣಭಕ್ಷಣಮ್

(ಎಡ) ಪಾಣಿಹೋಮದ ಸ್ವಲ್ಪ ಅನ್ನ ಹಿಡಿದು (ಬಲ) '**ಅಮೀಮದಂತ ಪಿತರೋ ಯಥಾ ಭಾಗಮಾವೃಷಾಯೀಷತ ।**' –ಎಂದು ಅನ್ನವನ್ನು ಮೂಸಿ ನೀರಿಗೆ ಇಲ್ಲವೇ ಅಗ್ನಿಗೆ ಹಾಕಬೇಕು. ಕೈತೊಳೆದು, ಅನಂತರ ಪೂರ್ವಾಭಿಮುಖವಾಗಿ ಕುಳಿತು ಆಚಮನ ಮಾಡಿ ಎರಡೂ ಪವಿತ್ರಗಳನ್ನು ಬಿಚ್ಚಿ ಹಾಕಬೇಕು. ಸೊಂಟದಲ್ಲಿರುವ ದರ್ಭೆಯನ್ನು ವಿಸರ್ಜಿಸಬೇಕು ಪುನಃ ಆಚಮನ ಮಾಡಿ ಮೂರು ಎಳೆಯ ಪವಿತ್ರ ಧರಿಸಿ,

**ಓಂ ಸಹಸ್ರಧಾರೇ ವಿತತೇ ಪವಿತ್ರ ಆ ವಾಚಂ ಪುನಂತಿ ಕವಯೋ ಮನೀಷಿಣಃ । ರುದ್ರಾಸ ಏಷಾಮಿಷಿರಾಸೋ ಅದ್ರುಹಃ ಸ್ಪಶಃ ಸ್ವಂಚಃ ಸುದೃಶೋ ನೃಚಕ್ಷಸಃ ॥**

ದಕ್ಷಿಣಕ್ಕೆ ಮುಖಮಾಡಿ ಎಡಕಾಲೂರಿ ಕುಳಿತು ಕಮಂಡಲು ತೀರ್ಥ ಹಾಗೂ ಎಳ್ಳು ಹಿಡಿದು ಪಿಂಡದ ಮೇಲೆ ಅರ್ಘ್ಯ ಕೊಡಬೇಕು.

**ಶುಂಧಂತಾಂ ಪಿತರಃ । ಶುಂಧಂತಾಂ ಪಿತಾಮಹಾಃ । ಶುಂಧಂತಾಂ ಪ್ರಪಿತಾಮಹಾಃ ॥ [ಶುಂಧಂತಾಂ ಮಾತರಃ । ಶುಂಧಂತಾಂ ಪಿತಾಮಹ್ಯಃ । ಶುಂಧಂತಾಂ ಪ್ರಪಿತಾಮಹ್ಯಃ ।]**

ಎಂದು ಅರ್ಘ್ಯ ಕೊಟ್ಟು, ಅಂಗಾರಕವನ್ನು ಕೈಯಲ್ಲಿ ಹಿಚುಕಿ ಅಥವಾ ಹವಿಸ್ಸಿನ

ಪಾತ್ರೆಯ ಅಡಿಭಾಗದ ಮಸಿ, ಇಲ್ಲವೇ ಅಂಜನದ ಕಲ್ಲಿನ ಲೇಪ (ಅದೂ ಇಲ್ಲದಿದ್ದರೆ ದರ್ಭೆಯನ್ನು ತುಪ್ಪಕ್ಕೆ ಅದ್ದಿ ದೆಂಕಿಗೆ ಹಿಡಿದು ಆ ಮಸಿ) ಹಿಡಿದು,

**ಆಂಜಂತಾಂ ಪಿತರಃ । ಆಂಜಂತಾಂ ಪಿತಾಮಹಾಃ । ಆಂಜಂತಾಂ ಪ್ರಪಿತಾಮಹಾಃ ॥**

–ಎಂದು ಪಿಂಡದ ಮೇಲೆ ಕಣ್ಣಿನ ಆಕೃತಿಯಾಗಿ ಹಚ್ಚಿ, ಪುನಃ ಎಳ್ಳುನೀರು ಹಿಡಿದು,

**ಶುಂಧಂತಾಂ ಪಿತರಃ । ಶುಂಧಂತಾಂ ಪಿತಾಮಹಾಃ । ಶುಂಧಂತಾಂ ಪ್ರಪಿತಾಮಹಾಃ ॥**

–ಎಂದು ಪಿಂಡದ ಮೇಲೆ ಬಿಟ್ಟು, ಎಳ್ಳನ್ನು ತಿಕ್ಕಿ ನೀರು ಹಾಕಿ,

**ಅಭ್ಯಂಜಂತಾಂ ಪಿತರಃ । ಅಭ್ಯಂ........ ಪಿತಾಮಹಾಃ । ಅಭ್ಯಂ ..... ಪ್ರಪಿತಾಮಹಾಃ ॥**

–ಎಂದು ಪಿಂಡದ ಮೇಲೆ ಬಿಟ್ಟು, ಪುನಃ ಎಳ್ಳುನೀರು ಹಿಡಿದು,

**ಶುಂಧಂತಾಂ ಪಿತರಃ । ಶುಂ .......... ಪಿತಾಮಹಾಃ । ಶುಂ ........ ಪ್ರಪಿತಾಮಹಾಃ ॥**

–ಎಂದು ಪಿಂಡದ ಮೇಲೆ ಬಿಟ್ಟು ಪಿಂಡಕ್ಕೆ ಹಾಕುವ ಬಟ್ಟೆ ಹಿಡಿದು, (ಇಲ್ಲವೇ ತನ್ನ ಬಟ್ಟೆಯ ಅಂಚಿನಿಂದ ನೂಲನ್ನು ತೆಗೆದು)

**ಏತದ್ವಃ ಪಿತರೋ ವಾಸೋ ಮಾನೋಽತೋಽನ್ಯತ್ಪಿತರೋ ಯುಜ್ಧ್ವಮ್ । ಏತಾನಿ ವಃ ಪಿತೃಪಿತಾಮಹಪ್ರಪಿತಾಮಹಾಃ [ಮಾತೃ .....ಮಹ್ಯಃ] ವಾಸಾಂಸಿ ॥ (ಸುವಾಸಾಂಸಿ)** –ಎಂದು ಪಿಂಡದ ಮೇಲೆ ಬಟ್ಟೆ (ಇಲ್ಲವೇ ನೂಲನ್ನು) ಹಾಕಬೇಕು.

## ಷಡ್ಭಿರ್ನಮಸ್ಕಾರಃ

**ಷಡ್ಭಿರ್ನಮಸ್ಕಾರಂ ಕರಿಷ್ಯೇ ॥**

ಬಲಕೈಯ ಹೆಬ್ಬೆರಳು ತೋರುಬೆರಳುಗಳಿಂದ ದರ್ಭೆ ಕಟ್ಟು ಹಿಡಿದು ಎಳ್ಳು ತುಲಸಿ ಪುಷ್ಪ ಗರಿಕೆ ಹಿಡಿದು ಎಡಕೈಯಲ್ಲಿ ಜಲಪಾತ್ರೆಯಿಂದ ಸ್ವಲ್ಪ ಸ್ವಲ್ಪ ನೀರನ್ನು ಬಲಕೈಗೆ ಹಾಕುತ್ತಾ ಪಿಂಡದ ಮೇಲೆ ನೀರು ಮಾತ್ರ ಬಿಡುತ್ತಿರಬೇಕು.

**ಓಂ ನಮೋ ವಃ ಪಿತರ ಇಷೇ ನಮೋ ವಃ ಪಿತರ ಊರ್ಜೇ ನಮೋ ವಃ ಪಿತರಃ ಶುಷ್ಮಾಯ ನಮೋ ವಃ ಪಿತರೋ ಘೋರಾಯ ನಮೋ ವಃ ಪಿತರೋ ಜೀವಾಯ ನಮೋ ವಃ ಪಿತರೋ ರಸಾಯ । ಸ್ವಧಾ ವಃ ಪಿತರೋ ನಮೋ ವಃ ಪಿತರೋ ನಮ ಏತಾ ಯುಷ್ಮಾಕಂ ಪಿತರ ಇಮಾ ಅಸ್ಮಾಕಂ ಜೀವಾವೋ ಜೀವಂತಾಂ ಇಹ ಸಂತ ಸ್ಯಾಮ ॥** –ಎಂದು ಜಲಪಾತ್ರೆ ಕೆಳಗಿಟ್ಟು

**ಓಂ ಮನೋ ನ್ವಾ ಹುವಾಮಹೇ ನಾರಾಶಂಸೇನ ಸೋಮೇನ । ಪಿತೄಣಾಂ ಚ ಮನ್ಮಭಿಃ ॥ ಆ ತ ಏತು ಮನಃ ಪುನಃ ಕ್ರತ್ವೇ ದಕ್ಷಾಯ ಜೀವಸೇ । ಜ್ಯೋಕ್ಚ ಸೂರ್ಯಂ ದೃಶೇ ॥ ಪುನರ್ನಃ ಪಿತರೋ ಮನೋ ದದಾತು ದೈವ್ಯೋ ಜನಃ। ಜೀವಂ ವ್ರಾತಂ ಸಚೇಮಹಿ ॥**

–ಎಂದು ಕೈಯಲ್ಲಿರುವ ದರ್ಭೆಯನ್ನು ಎಡಕೈಯಲ್ಲಿ ಹಿಡಿದು ತುಳಸಿ ಪುಷ್ಪ ತಿಲ ಗರಿಕೆಗಳನ್ನು ಪಿಂಡದ ಮೇಲೆ ಹಾಕಿ ಎಡಕೈಯಲ್ಲಿರುವ ದರ್ಭೆಯನ್ನು ಬಲಕೈಯಲ್ಲಿ ಹಿಡಿದು,

**ದತ್ತಂ ಪಿಂಡಾದಿಕಂ ಸ್ವೀಕೃತ್ಯ ಪಿತೃಭಿಃ ಸಹಾಗತಾನಾಂ ಪರಿವಾರಗಣಾನಾಂ ಬಲಿಹರಣಸ್ಯ ಅನುಜ್ಞಾ ॥ (ಅಸ್ತು ಬಲಿಹರಣಮ್) ॥**

## ವಾಯಸಬಲಿಃ

'**ಬಲಿಸ್ಥಾನೇ ಇಮೇ ದರ್ಭಾಃ ॥**' ಎಂದು ಕೈಯಲ್ಲಿರುವ ದರ್ಭೆಯನ್ನು ಬರ್ಹಿಸ್ಸಿನ ಮೂಲದಿಂದ ಅಪ್ರದಕ್ಷಿಣೆಯಾಗಿ ಪಿಂಡಕ್ಕೆ ತಾಗದ ರೀತಿಯಲ್ಲಿ ಪಿಂಡದ ಸುತ್ತ ಹಾಕಿ ಎಳ್ಳುನೀರು ಹಿಡಿದು '**ದರ್ಭಾಣಾಮುಪರಿ ತಿಲೋದಕಮ್ ॥**' ಎಂದು ಸುತ್ತಲೂ ಹಾಕಿದ ದರ್ಭೆಯ ಮೇಲೆ ತಿಲೋದಕ ಬಿಟ್ಟು ಹೊರಗೆ ಇಡಲು ಬೇಕಾಗುವಷ್ಟು ಅನ್ನವನ್ನು ಬೇರೆ ಮಾಡಿ (ಪಾಣಿಹೋಮದ ಉಳಿದ ಅನ್ನ ಹಾಗೂ ವೈಶ್ವದೇವದ ಬಲಿಹರಣದ ಅನ್ನ ತೆಗೆದಿಟ್ಟಿದ್ದಲ್ಲಿ ಅದನ್ನು ಬಲಿಹರಣದ ಅನ್ನದೊಂದಿಗೆ ಸೇರಿಸಬೇಕು.) ಉಳಿದ ಅನ್ನದಿಂದ ಸುತ್ತಲೂ ಹಾಕಿದ ದರ್ಭೆಯ ಮೇಲೆ ಬರ್ಹಿಸ್ಸಿನ ಮೂಲದಿಂದ ಅಪ್ರದಕ್ಷಿಣೆಯಾಗಿ ನಡುವೆ ಎಲ್ಲಿಯೂ ಸಂಧಿ ಬಾರದಂತೆ ಅನ್ನವನ್ನು ದಂಡೆಯಾಕಾರದಲ್ಲಿ ಹಾಕಬೇಕು.

**ಆ ಬ್ರಹ್ಮಣೋ ಯೇ ಪಿತೃವಂಶಜಾತಾ ಮಾತುಸ್ತಥಾ ವಂಶಭವಾ ಮದೀಯಾಃ।**
**ವಂಶದ್ವಯೇಽಸ್ಮಿನ್ ಮಮ ದಾಸಭೂತಾ ಭೃತ್ಯಾಸ್ತಥೈವಾಶ್ರಿತಸೇವಕಾಶ್ಚ ॥**

**ಮಿತ್ರಾಣಿ ಸಖ್ಯಃ ಪಶವಶ್ಚ ವೃಕ್ಷಾಃ ಸ್ಪೃಷ್ಟಾಶ್ಚ ದೃಷ್ಟಾಶ್ಚ ಕೃತೋಪಕಾರಾಃ ।**
**ಜನ್ಮಾಂತರೇ ಯೇ ಮಮ ಸಂಗತಾಶ್ಚ ತೇಭ್ಯಃ ಸ್ವಧಾ ಹ್ಯನ್ನಮಹಂ ದಧಾಮಿ ॥**

**ಶಮೀಪತ್ರ ಪ್ರಮಾಣೇನ ಪಿಂಡಂ ದದ್ಯಾದ್ಗಯಾಶಿರೇ ।**
**ಉದ್ಧರೇತ್ ಸಪ್ತಗೋತ್ರಾಣಿ ಕುಲಮೇಕೋತ್ತರಂ ಶತಮ್ ॥**

**ಪಿತೃವಂಶೇ ಮೃತಾ ಯೇ ಚ ಮಾತೃವಂಶೇ ತಥೈವ ಚ ।**
**ಗುರು ಶ್ವಶುರಬಂಧೂನಾಂ ಯೇ ಚಾನ್ಯೇ ಬಾಂಧವಾ ಮೃತಾಃ ॥**

**ಯೇ ಮೇ ಕುಲೇ ಲುಪ್ತಪಿಂಡಾಃ ಪುತ್ರದಾರವಿವರ್ಜಿತಾಃ ।**
**ಕ್ರಿಯಾಲೋಪಹತಾಶ್ಚೈವ ಜಾತ್ಯಂಧಾಃ ಪಂಗವಸ್ತಥಾ ॥**

**ಅರೂಪಾ ಆಮಗರ್ಭಾಶ್ಚ ಜ್ಞಾತಾಽಜ್ಞಾತಾ ಕುಲೇ ಮಮ ।**
**ಭೂಮೌ ದತ್ತೇನ ಪಿಂಡೇನ ತೃಪ್ತಾ ಯಾಂತು ಪರಾಂ ಗತಿಮ್ ॥**

–ಎಂದು ಸುತ್ತಲೂ ಹಾಕಿ, ಅನಂತರ ಎಳ್ಳು ನೀರು ಹಿಡಿದು ಸುತ್ತಲೂ ಹಾಕಿದ ಅನ್ನದ ಮೇಲೆಯೇ ಬಿಡಬೇಕು.

**ಅತೀತಕುಲಕೋಟೀನಾಂ ಸಪ್ತದ್ವೀಪನಿವಾಸಿನಾಮ್ ।**
**ಪ್ರಾಣಿನಾಮುದಕಂ ದತ್ತಮಕ್ಷಯ್ಯಮುಪತಿಷ್ಠತು ॥**

**ಅಸ್ಮತ್ಕುಲೇಷು ಯೇ ಜಾತಾಃ ನಿಷ್ಕ್ರಿಯಾಃ ಸತ್ಕ್ರಿಯಾಶ್ಚ ಯೇ ।**
**ಸ್ವರ್ಗಸ್ಥಾ ನರಕಸ್ಥಾ ವಾ ಅಂತರಿಕ್ಷಗತಾಶ್ಚ ವಾ ।**
**ಅನ್ನೇನಾನೇನ ತೃಪ್ಯಂತು ತೃಪ್ತಾ ಯಾಂತು ಪರಾಂ ಗತಿಮ್ ॥**

**ಅಸಿಪತ್ರವನೇ ಘೋರೇ ಕುಂಭೀಪಾಕೇ ಚ ರೌರವೇ ।**
**ತೇಷಾಮುದ್ಧರಣಾರ್ಥಾಯ ಕುಶಪೃಷ್ಠೈಸ್ತಿಲೋದಕಮ್ ॥**

–ಎಂದು ಎಳ್ಳುನೀರು ಬಿಟ್ಟು ಎದ್ದು ನಿಂತು ತಾಯಿಗೆ ಎಳ್ಳುಕೊಟ್ಟು ಅಕ್ಕತಂಗಿಯರಿಗೆ (ಕೆಲವರಲ್ಲಿ ಗಂಡನಿಲ್ಲದಿದ್ದರೆ ಎಳ್ಳು ಕೊಡುವ ಕ್ರಮವಿದೆ) ಅಕ್ಕಿಕೊಟ್ಟು ಅವರು ಅಕ್ಕಿಗೆ ನೀರು ಹಾಕಿ ಹಾಗೆಯೇ ಯಜಮಾನ ಎಳ್ಳು ನೀರು ಹಿಡಿದು,

**ಆಬ್ರಹ್ಮಸ್ತಂಬಪರ್ಯಂತಂ ಯತ್ಕಿಂಚಿತ್ ಸಚರಾಚರಮ್ ।**
**ಮಯಾ ದತ್ತೇನ ಹವಿಷಾ ತೃಪ್ತಿಮಾಯಾಂತು ಪುಷ್ಕಲಾಮ್ ॥**

**ಗಯಾಯಾಂ ಧರ್ಮಪೃಷ್ಠೇಷು ಸದಸಿ ಬ್ರಹ್ಮಣಸ್ಪತೇಃ ।**
**ಗಯಾ ಶೀರ್ಷೇ ವಟೇ ಚೈವ ಪಿತೄಣಾಂ ದತ್ತಮಕ್ಷಯಮ್ ॥**

–ಎಂದು ಅವರವರ ವಾಯಸದ ಎಲೆಗೆ ಹಾಕಿ **'ಬಾಹ್ಯಪರಿವಾರಗಣಾನಾಂ ತೃಪ್ತಿರಸ್ತು ॥'** –ಎಂದು ಎಲೆಯನ್ನು ಸ್ವಲ್ಪ ದಕ್ಷಿಣಕ್ಕೆ ದೂಡಿ **'ಬಲಿಪಾತ್ರಮುದ್ವಾಸಯಿಷ್ಯೇ ॥'** **(ಉದ್ವಾಸಯ)** ಎಂದು (ಬಲ) ನಮಸ್ಕಾರ ಮಾಡಿ,

**ಓಂ ದಿವ್ಯಂ ಸುಪರ್ಣಂ ವಾಯಸಂ ಬೃಹಂತಮಪಾಂ ಗರ್ಭಂ ದರ್ಶತ–ಮೋಷಧೀನಾಮ್ । ಅಭೀಪತೋ ವೃಷ್ಟಿಭಿಸ್ತರ್ಪಯಂತಂ ಸರಸ್ವಂತಮವಸೇ ಜೋಹವೀಮಿ ॥**

**ಬಾಹ್ಯಪರಿವಾರಗಣಾನಾಂ ತೃಪ್ತಿರಸ್ತು ॥ (ಅಸ್ತು ತೃಪ್ತಿಃ)** ಕ್ರಿಯಾಕರ್ತೃಗಳು ಬೇರೆ ತಂಬಿಗೆಯಲ್ಲಿ ನೀರು ಹಿಡಿದು ಇಲ್ಲವೇ ಜಲಪಾತ್ರೆಯ ನೀರನ್ನು ಕೊಂಡುಹೋಗುವುದಾದರೆ ಜಲಪಾತ್ರೆಯ ಸ್ವಲ್ಪ ನೀರನ್ನು ಬೇರೆ ಪಾತ್ರೆಯಲ್ಲಿ ಹಾಕಿ ಜಲಕೂರ್ಚ ತೆಗೆದಿಟ್ಟು ಅಭಿಮಂತ್ರಣೆ ಮಾಡದ ನೀರನ್ನು ಸ್ವಲ್ಪ ಜಲಪಾತ್ರೆಗೆ ಹಾಕಿ ಎಡಕೈಯಲ್ಲಿ ಜಲಪಾತ್ರೆಯನ್ನು, ಬಲಕೈಯಲ್ಲಿ ಎರಡು ದರ್ಭೆಗಳನ್ನು ಹಿಡಿದು, ವಾಯಸಬಲಿಯ ಎಲೆಯು ದರ್ಭೆಯ ಮೇಲೆ ಬರುವಂತೆ ಹಿಡಿದು ಹೊರಗೆ ಹೋಗಬೇಕು. ಆಗ ಮನೆಯ ಹೆಂಗುಸರು ಹೊಸ್ತಿಲು ಬರೆಯಬೇಕು. ಕುಂಕುಮ ಹಚ್ಚಿ ಹೂ ಇಡಲಿಕ್ಕಿಲ್ಲ. ಅನಂತರ ಕ್ರಿಯಾಕರ್ತೃಗಳು ಹೊರಗೆ ದಕ್ಷಿಣಕ್ಕೆ ಮುಖ ಮಾಡಿ ನಿಂತು ತಮ್ಮಂದಿರು ಹಾಗೂ ಅಕ್ಕತಂಗಿಯರ ಎಲೆಗಳನ್ನು ಒಟ್ಟಿಗೆ ಇಡಲು ಬೇಕಾಗುವಷ್ಟು ಜಾಗಕ್ಕೆ ಜಲಪಾತ್ರೆಯ ನೀರಿನಿಂದ ಅಪ್ರದಕ್ಷಿಣೆಯಾಗಿ ವೃತ್ತಾಕಾರದಲ್ಲಿ ಎಲ್ಲ ನೀರನ್ನೂ ಹಾಕಿ ವಾಯಸಬಲಿಯನ್ನು ದಕ್ಷಿಣಕ್ಕೆ ಮುಖಮಾಡಿ ಇಟ್ಟು (ಎಡ) ಎಲೆಯನ್ನು ಮುಟ್ಟಿ ಮೂರು ಬಾರಿ ಚಪ್ಪಾಳೆ ತಟ್ಟಬೇಕು. ಅನಂತರ ಕೈಕಾಲು ತೊಳೆದು ಜಲಪಾತ್ರೆಯಲ್ಲಿ ಕಾಲುಭಾಗದಷ್ಟು ನೀರು ಹಿಡಿದು ಮನೆಯೊಳಗೆ ಬಂದು ಪೂರ್ವಾಭಿಮುಖವಾಗಿ ಕುಳಿತು (ಬಲ) ಜಲಪಾತ್ರೆಯನ್ನು ಮಂಡಲದಲ್ಲಿಟ್ಟು ಹಿಂದೆ ಅಭಿಮಂತ್ರಿತವಾದ ನೀರು ಬೇರೆ ತೆಗೆದಿಟ್ಟಿದ್ದಲ್ಲಿ ಆ ನೀರನ್ನು ಜಲಪಾತ್ರಕ್ಕೆ ತುಂಬಿಸಿ ಜಲಕೂರ್ಚವನ್ನು ಅದರೊಳಗಿಡಬೇಕು. ಪವಿತ್ರ ಹೊರ ತೆಗೆದು ಆಚಮನ ಮಾಡಿ ಪುನಃ ಪವಿತ್ರ ಧರಿಸಬೇಕು. (ಕೆಲವರಲ್ಲಿ ಪವಿತ್ರವನ್ನು ವಿಸರ್ಜಿಸಿ ಬೇರೆ ಪವಿತ್ರವನ್ನು ಧರಿಸುವ ಕ್ರಮವಿದೆ.)

## ಪಾತ್ರೋಚ್ಚಾಲನಮ್

**ಮಹಾವಿಷ್ಣವೇ ನಮಃ । ಭೋಜನಪಾತ್ರಮುಚ್ಚಾಲಯಿಷ್ಯೇ ॥ (ಉಚ್ಚಾಲಯ) ॥**

–ಎಂದು ಅಕ್ಕಿ ಮತ್ತು ಜಲಕೂರ್ಚದ ನೀರು ಹಿಡಿದು ದೇವರ ಭೋಜನಪತ್ರಕ್ಕೆ ಹಾಕಿ (ಶೇಷಾನ್ನವನ್ನು ಸ್ವೀಕರಿಸುವ ಕ್ರಮವಿರುವವರು ದೇವರ ಭೋಜನದ ಪತ್ರವನ್ನು ತೆಗೆದು) ಶುದ್ಧ ಮಾಡಬೇಕು.

(ಎಡ) ಜಲಕೂರ್ಚದಿಂದ ನೀರು ಹಾಗೂ ಎಳ್ಳು ಹಿಡಿದು **ಭೋಜನಪಾತ್ರಮುಚ್ಚಾಲಯಿಷ್ಯೇ ।** ಎನ್ನಲು ಬ್ರಾಹ್ಮಣರು **(ಉಚ್ಚಾಲಯ)** –ಎಂದು ಪ್ರತಿವಚನ ಹೇಳಿದ ಮೇಲೆ ಪಿತೃಸ್ಥಾನಗಳ ಭೋಜನಪತ್ರಕ್ಕೆ ಪ್ರೋಕ್ಷಣೆ ಮಾಡಿ (ಬಲ) ಜಲಕೂರ್ಚದಿಂದ ನೀರು ಹಾಗೂ ಅಕ್ಕಿ ಹಿಡಿದು '**ಭೋಜನಪಾತ್ರಮುಚ್ಚಾಲಯಿಷ್ಯೇ ॥**' ಎನ್ನಲು ಬ್ರಾಹ್ಮಣರು **(ಉಚ್ಚಾಲಯ)** –ಎಂದು ಪ್ರತಿವಚನ ಹೇಳಿದ ಮೇಲೆ ವಿಶ್ವೇದೇವಸ್ಥಾನದ ಬ್ರಾಹ್ಮಣರ ಎಲೆಗೆ ಪ್ರೋಕ್ಷಣೆ ಮಾಡಬೇಕು.

## ಹಸ್ತಶುದ್ಧಿಃ

ಜಲಕೂರ್ಚದಿಂದ ನೀರು ಹಿಡಿದು, **ಮಹಾವಿಷ್ಣವೇ ನಮಃ** ಎಂದು ದೇವರ

ಬಲಭಾಗದಲ್ಲಿ ನೀರು ಪ್ರೋಕ್ಷಣೆ ಮಾಡಿ ಗಂಧಪುಷ್ಪತುಳಸಿಯನ್ನು ದೇವರ ಮೇಲಿಟ್ಟು (ಎಡ) ಜಲಕೂರ್ಚದಿಂದ ಪಿತೃಬ್ರಾಹ್ಮಣರ ಕೈಗೆ ಪ್ರತಿಯೊಂದು ಉಪಚಾರದಲ್ಲಿ ನೀರು ಸಿಂಪಡಿಸಬೇಕು. ಮುಂದಿನ ಪ್ರತಿಯೊಂದು ಉಪಚಾರದ ಅನಂತರ,

ನೀರು ಸಿಂಪಡಿಸಿ– **'ಶಿವಾ ಆಪಃ ಸಂತು ॥'** (ಸಂತು ಶಿವಾ ಆಪಃ)
ಎಳ್ಳು ಕೊಟ್ಟು– **'ತಿಲಾಃ ಪಾಂತು ॥'** (ಪಾಂತು ತಿಲಾಃ)
ಮೂರು ದರ್ಭೆಗಳನ್ನು ಕೊಟ್ಟು– **'ದರ್ಭಾಃ ಪಾಂತು ॥'** (ಪಾಂತು ದರ್ಭಾಃ)
ತುಲಸಿಗೆ ಗಂಧಮುಟ್ಟಿಸಿ ಕೊಟ್ಟು– **'ಗಂಧಾಃ ಪಾಂತು ॥'** (ಪಾಂತು ಗಂಧಾಃ)
ಜಲಕೂರ್ಚದಿಂದ ಕೈಗೆ ನೀರು ಪ್ರೋಕ್ಷಣೆ ಮಾಡಿ– **'ಸುಪ್ರೋಕ್ಷಿತಮಸ್ತು ॥'**
(ಅಸ್ತು ಸುಪ್ರೋಕ್ಷಿತಮ್) ॥

(ಬಲ) ವಿಶ್ವೇದೇವಸ್ಥಾನೀಯ ಬ್ರಾಹ್ಮಣರ ಕೈಗೆ–

ಜಲಕೂರ್ಚದಿಂದ ನೀರು ಸಿಂಪಡಿಸಿ– **'ಶಿವಾ ಆಪಃ ಸಂತು ॥'** (ಸಂತು ಶಿವಾ ಆಪಃ)
ಅಕ್ಕಿ ಕೊಟ್ಟು– **'ಯವಾಃ ಪಾಂತು ॥'** (ಪಾಂತು ಯವಾಃ)
ಎರಡು ದರ್ಭೆಗಳನ್ನು ಕೊಟ್ಟು– **'ದರ್ಭಾಃ ಪಾಂತು ॥'** (ಪಾಂತು ದರ್ಭಾಃ)
ತುಲಸಿಗೆ ಗಂಧಮುಟ್ಟಿಸಿ ಕೊಟ್ಟು– **'ಗಂಧಾಃ ಪಾಂತು ॥'** (ಪಾಂತು ಗಂಧಾಃ)
ಜಲಕೂರ್ಚದಿಂದ ಕೈಗೆ ನೀರು ಪ್ರೋಕ್ಷಣೆ ಮಾಡಿ– **'ಸುಪ್ರೋಕ್ಷಿತಮಸ್ತು ॥'**
(ಅಸ್ತು ಸುಪ್ರೋಕ್ಷಿತಮ್)

**ತುಲಸೀಗಂಧಮಾಘ್ರಾಯ ತೃಪ್ಯಂತು ಪಿತರೋ ಮಮ ।**
**ಗಚ್ಛಂತಿ ಗರುಡಾರೂಢಾಃ ತದ್ವಿಷ್ಣೋಃ ಪರಮಂ ಪದಮ್ ॥**

## ಗೋತ್ರಾಭಿವಂದನಮ್

ಅಕ್ಕಿ ಹಿಡಿದು,

**ಆಕಾಶಾತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್ ।**
**ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥**

–ಎಂದು ದೇವರಿಗೆ ಹಾಕಿ ಗೋತ್ರಾಭಿವಂದನೆ ಮಾಡಿ ಮಹಾವಿಷ್ಣುವಿನ ಸ್ಥಾನದಲ್ಲಿ **'ಮಹಾವಿಷ್ಣವೇ ನಮಃ ॥** ಎಂದು ಹೇಳಬೇಕು.

(ಬಲ) ಪುನಃ ಪಿತೃಸ್ಥಾನದ ಹಾಗೂ ವಿಶ್ವೇದೇವಸ್ಥಾನದ ಬ್ರಾಹ್ಮಣರಿಗೆ ಜಲಕೂರ್ಚದಿಂದ ಕೈಗೆ ನೀರು ಕೊಟ್ಟು ಅಕ್ಕಿ ಕೊಟ್ಟು, ತಾನೂ ಅಕ್ಕಿ ಹಿಡಿದು **'ಅಸ್ಮದ್ಗೋತ್ರಮಭಿವರ್ಧತಾಮ್ ॥'** –ಎಂದು ಬ್ರಾಹ್ಮಣರ ಪಾದದ ಮೇಲೆ ಅಕ್ಕಿ ಹಾಕಿ ಗೋತ್ರಾಭಿವಂದನೆ ಮಾಡಿ ಕೈಮುಗಿದು ಬ್ರಾಹ್ಮಣರಲ್ಲಿ ಪ್ರಾರ್ಥಿಸಬೇಕು. ಆಗ ಬ್ರಾಹ್ಮಣರು **'ಸ್ವಸ್ತಿ ವರ್ಧತಾಂ ತೇ ಗೋತ್ರಂ ಗೋತ್ರಾಭಿವೃದ್ಧಿರಸ್ತು'** ಎನ್ನಬೇಕು.

## ಸ್ವಸ್ತಿವಾಚನಮ್

**ಮಹಾವಿಷ್ಣವೇ ಸ್ವಸ್ತಿ । (ಅಸ್ತು) ॥ ಮಯಾದತ್ತಂ ಶ್ರಾದ್ಧೀಯಮನ್ನಮ್ ಅಕ್ಷಯ್ಯಮಸ್ತ್ವಿ ಬ್ರೂತ ॥ (ಅಸ್ತ್ವಕ್ಷಯ್ಯೋದಕಮ್) ॥** –ಎಂದು ಆಚಾರ್ಯರಿಂದ ಪ್ರತಿವಚನ ಪಡೆದು.

**'ಅಸ್ಮತ್ಪಿತೃಪಿತಾಮಹಪ್ರಪಿತಾಮಹೇಭ್ಯಃ [ಮಹಿಭ್ಯಃ] ಸ್ವಸ್ತಿ । ಸ್ವಸ್ತಿ । ಸ್ವಸ್ತಿ ॥' (ಅಸ್ತು)** ಮುಚ್ಚಿಟ್ಟ ಅರ್ಘ್ಯಪಾತ್ರದ ನೀರನ್ನು ಪಿತೃಸ್ಥಾನದ ಬ್ರಾಹ್ಮಣರ ಕೈಗೆ ಹಾಕಿ, **'ಮಯಾ ದತ್ತಮನ್ನಮುದಕಾದಿ ತದಕ್ಷಯ್ಯೋದಕಮಸ್ತ್ವಿತಿ ಬ್ರೂತ ॥'** ಎನ್ನಲು ಬ್ರಾಹ್ಮಣರು **(ಅಸ್ತ್ವಕ್ಷಯ್ಯೋದಕಮ್)** –ಎಂದು ಆ ನೀರನ್ನು ಕೆಳಗೆ ಬಿಡಬೇಕು.

**ವಿಶ್ವೇಭ್ಯೋ ದೇವೇಭ್ಯಃ ಸ್ವಸ್ತಿ । ಸ್ವಸ್ತಿ ॥ (ಅಸ್ತು)** ವಿಶ್ವೇದೇವ ಸ್ಥಾನದ ಅರ್ಘ್ಯಪಾತ್ರದ ನೀರನ್ನು ಹಿಡಿದು ಬ್ರಾಹ್ಮಣರ ಕೈಗೆ ಹಾಕಿ **'ಮಯಾ ದತ್ತಮನ್ನಮುದಕಾದಿ ತದಕ್ಷಯ್ಯೋದಕಮಸ್ತ್ವಿತಿ ಬ್ರೂತ ॥'** –ಎನ್ನಲು ಬ್ರಾಹ್ಮಣರು **(ಅಸ್ತ್ವಕ್ಷಯ್ಯೋದಕಮ್)** –ಎಂದು ಆ ನೀರನ್ನು ಕೆಳಗೆ ಬಿಡಬೇಕು.

## ತಾಂಬೂಲದಕ್ಷಿಣಾ

ಅಕ್ಕಿ, ನಾಣ್ಯ ನೀರು ಹಿಡಿದು **'ವಿಷ್ಣವೇ ನಮಃ । ಕ್ರಮುಕ ತಾಂಬೂಲಂ ಸಮರ್ಪಯಾಮಿ ॥ ಸುವರ್ಣದಕ್ಷಿಣಾಂ ಸಮರ್ಪಯಾಮಿ ॥'** ಎಂದು ದೇವರ ಸ್ಥಾನದಲ್ಲಿಟ್ಟು,

ಪಿತೃಸ್ಥಾನದಲ್ಲಿ ಎಳ್ಳು ನಾಣ್ಯ ನೀರು ಹಿಡಿದು – **'ಉಪವಿಷ್ಟೇಭ್ಯೋ ಬ್ರಾಹ್ಮಣೇಭ್ಯಃ ಶ್ರಾದ್ಧ ಸಾದ್ಗುಣ್ಯಾರ್ಥಂ ಪಿತೄಣಾಂ ಕ್ರಮುಕತಾಂಬೂಲಂ ಪ್ರತಿಪಾದಯಾಮಿ ॥' (ಐಶ್ವರ್ಯಮಸ್ತು) 'ತಿಲೋಪೇತ ರಜತದಕ್ಷಿಣಾಂ ಪ್ರತಿಪಾದಯಾಮಿ ॥'** ಎಂದು ಬ್ರಾಹ್ಮಣರ ಕೈಯಲ್ಲಿ ಕೊಟ್ಟು **(ಅಸ್ತು ಪ್ರತಿಪಾದಯ । ಬಹುಧೇಯಂ ಚಾಸ್ತು) 'ತಾಂಬೂಲ ದಕ್ಷಿಣಾಃ ಸಂಕೋಚಃ ॥' (ಅಕ್ಷಯ್ಯಮಸ್ತು)** ಎಂದು ಪ್ರತಿವಚನ ಪಡೆದುಕೊಳ್ಳುವುದು.

ವಿಶ್ವೇದೇವಸ್ಥಾನದಲ್ಲಿ ಅಕ್ಕಿ ನಾಣ್ಯ, ನೀರು ಹಿಡಿದು– **ಉಪವಿಷ್ಟೇಭ್ಯೋ ಬ್ರಾಹ್ಮಣೇಭ್ಯಃ ಶ್ರಾದ್ಧಸಾದ್ಗುಣ್ಯಾರ್ಥಂ ದೇವಾನಾಂ ಕ್ರಮುಕ ತಾಂಬೂಲಂ ಪ್ರತಿಪಾದಯಾಮಿ ॥ ಯವೋಪೇತಸುವರ್ಣ ದಕ್ಷಿಣಾಂ ಪ್ರತಿಪಾದಯಾಮಿ ॥** ಎಂದು ಬ್ರಾಹ್ಮಣರ ಕೈಯಲ್ಲಿ ಕೊಟ್ಟು **(ಅಸ್ತು ಪ್ರತಿಪಾದಯ ಬಹುಧೇಯಂ ಚಾಸ್ತು) ತಾಂಬೂಲ ದಕ್ಷಿಣಾಃ ಸಂಕೋಚಃ ॥ (ಅಕ್ಷಯ್ಯಮಸ್ತು) ॥** ಎಂದು ಪ್ರತಿವಚನ ಪಡೆದುಕೊಳ್ಳುವುದು.

## ಪಾರ್ವಣದೇವತಾಪೂಜಾ

ಅಕ್ಕಿ ಹಿಡಿದು ಪಿಂಡದ ಮೇಲೆ ಹಾಕುತ್ತಾ,

**ಓಂ ಪುನರ್ನಃ ಪಿತರೋ ಮನೋ ದದಾತು ದೈವ್ಯೋ ಜನಃ । ಜೀವವ್ರಾತಗ್ಂ ಸಚೇಮಹಿ ॥ ಯದಂತರಿಕ್ಷಂ ಪೃಥಿವೀಮುತ ದ್ಯಾಂ ಯನ್ಮಾತರಂ ಪಿತರಂ ವಾಜಿಹಿಂಸಿಮ । ಅಗ್ನಿರ್ಮಾ ತಸ್ಮಾದೇನಸೋ ಗಾರ್ಹಪತ್ಯಃ ಪ್ರಮುಂಚತು ದುರಿತಾ ಯಾನಿ ಚಕೃಮ ಕರೋತು ಮಾಮನೇನಸಮ್** ॥ –ಎಂದು,

**ಪಾರ್ವಣದೇವತಾ ವಸುರುದ್ರಾದಿತ್ಯಾಂತರ್ಗತಪ್ರಾಣಸ್ಥಪ್ರದ್ಯುಮ್ನಸಂಕರ್ಷಣ ವಾಸುದೇವೇಭ್ಯೋ ನಮಃ ಧ್ಯಾನಂ ಸ್ವಧಾ । ಆವಾಹನಂ ಸ್ವಧಾ । ಆಸನಂ ಸ್ವಧಾ ।** ಜಲಕೂರ್ಚದಿಂದ ನೀರು ಬಿಡುತ್ತಾ, **ಪಾದ್ಯಂ ಸ್ವಧಾ । ಅರ್ಘ್ಯಂ ಸ್ವಧಾ । ಆಚಮನೀಯಂ ಸ್ವಧಾ । ಆಪೋಹಿಷ್ಠಾ ......** । ಮಂತ್ರದಿಂದ **ಸ್ನಾನಂ ಸ್ವಧಾ** ॥

ಕೇಶವಾದಿ ಚತುರ್ವಿಂಶತಿ ನಾಮಗಳಿಂದ ಗಂಧತುಳಸಿಪುಷ್ಪಾದಿಗಳಿಂದ ಪಿಂಡವನ್ನು ಅಲಂಕಾರ ಮಾಡಬೇಕು.

**ವಸ್ತ್ರಂ ಸ್ವಧಾ । ಉಪವೀತಂ ಸ್ವಧಾ । ಗಂಧಂ ಸ್ವಧಾ । ಪುಷ್ಪಂ ಸ್ವಧಾ ।** (ಜಲಕೂರ್ಚದಿಂದ ನೀರು ಹಿಡಿದು) **ಧೂಪಂ ಸ್ವಧಾ । ದೀಪಂ ಸ್ವಧಾ । ಸ್ವಾದುಃ ಪವಸ್ವ ...... ಅದಾಭ್ಯಃ** ॥ (ನೈವೇದ್ಯಕ್ಕೆ ಬಾಳೆಹಣ್ಣು, ಬೆಲ್ಲ, ವೀಳ್ಯದೆಲೆ ಅಡಕೆ ಇಡಬೇಕು.) **ನೈವೇದ್ಯಂ ಸ್ವಧಾ । ತಾಂಬೂಲಂ ಸ್ವಧಾ । ಸುವರ್ಣದಕ್ಷಿಣಾಂ ಸ್ವಧಾ ।** ಎಂದು ತಾಂಬೂಲದಲ್ಲಿ ನಾಣ್ಯವನ್ನು ಇಡಬೇಕು. ಜಲಕೂರ್ಚದಿಂದ, **ನೀರಾಜನಂ ಸ್ವಧಾ । ಮಂತ್ರಪುಷ್ಪಂ ಸ್ವಧಾ ।** ಎಂದು ಆರತಿ ಮಾಡಿ ತುಳಸಿ ಹಿಡಿದು, **ಪ್ರದಕ್ಷಿಣನಮಸ್ಕಾರಾನ್ ಸ್ವಧಾ** ॥ ಎಂದು ಪಿಂಡದ ಮೇಲೆ ಹಾಕಿ, ಕೈಮುಗಿಯಬೇಕು.

## ತೃಪ್ತಿಜಲಮ್

(ಎಡ) ಎಡಕಾಲೂರಿ, ಕಮಂಡಲುಪಾತ್ರವನ್ನು ಎಡಕೈಯಲ್ಲಿ ಹಿಡಿದು, ಬಲಕೈಯಲ್ಲಿ ಎಳ್ಳು, ತುಳಸಿ, ಗರಿಕೆ ಹಿಡಿದು ಕಮಂಡಲುಪಾತ್ರೆಯ ನೀರನ್ನು ಮೂರುಮೂರು ಬಾರಿ ಒಂದೊಂದು ಪಿಂಡದ ಮೇಲೆ ಬಿಡಬೇಕು.

**ಅಸ್ಮತ್ಪಿತುಃ ......ಶ್ರಾದ್ಧೇ ಪಿತ್ರಾಸಹ ಪಿತಾಮಹಸ್ಯ .....ಶರ್ಮಣಃ .....ಗೋತ್ರಸ್ಯ ವಸುರೂಪಸ್ಯ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸ್ಯ ಅಕ್ಷಯ್ಯ ತಿಲೋದಕಮ್ ।**

**ತೃಪ್ತಿರಸ್ತು। ತೃಪ್ತಿರಸ್ತು । ತೃಪ್ತಿರಸ್ತು ॥ ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥ [ಮಾತ್ರಾಸಹ ಪಿತಾಮಹ್ಯಾಃ .....ಮಾತ್ರಾಸಹ ಪ್ರಪಿತಾಮಹ್ಯಾಃ .....ಮಾತ್ರಾಸಹ ವೃದ್ಧಪ್ರಪಿತಾಮಹ್ಯಾಃ...]**

**ಅಸ್ಮತ್ಪಿತುಃ .....ಶ್ರಾದ್ಧೇ ಪಿತ್ರಾಸಹ ಪ್ರಪಿತಾಮಹಸ್ಯ .....ಶರ್ಮಣಃ .....ಗೋತ್ರಸ್ಯ ರುದ್ರರೂಪಸ್ಯ ತದಂತರ್ಯಾಮಿ ಪ್ರಾಣಸ್ಥಸಂಕರ್ಷಣಸ್ಯ ಅಕ್ಷಯ್ಯ ತಿಲೋದಕಮ್ । ತೃಪ್ತಿರಸ್ತು। ತೃಪ್ತಿರಸ್ತು । ತೃಪ್ತಿರಸ್ತು ॥ ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥**

**ಅಸ್ಮತ್ಪಿತುಃ .....ಶ್ರಾದ್ಧೇ ಪಿತ್ರಾಸಹ ವೃದ್ಧಪಿತಾಮಹಸ್ಯ .....ಶರ್ಮಣಃ .....ಗೋತ್ರಸ್ಯ ಆದಿತ್ಯರೂಪಸ್ಯ ತದಂತರ್ಯಾಮಿ ಪ್ರಾಣಸ್ಥವಾಸುದೇವಸ್ಯ ಅಕ್ಷಯ್ಯ ತಿಲೋದಕಮ್ । ತೃಪ್ತಿರಸ್ತು। ತೃಪ್ತಿರಸ್ತು । ತೃಪ್ತಿರಸ್ತು ॥ ಓಮ್ ಓಂ ನಮೋ ನಾರಾಯಣಾಯ ॥ ಓಮ್ ॥ (ಅಸ್ತುತೃಪ್ತಿಃ)**

## ಕಮಂಡಲುವಿಸರ್ಜನಮ್

ಅನಂತರ **'ಕಮಂಡಲುಪಾತ್ರಮುದ್ವಾಸಯಿಷ್ಯೇ । (ಅಸ್ತು ಉದ್ವಾಸಯ)'** ಎಂದು ಪ್ರತಿವಚನ ಪಡೆದು, ಕಮಂಡಲುವಿನ ಕೂರ್ಚವನ್ನು ವಿಶ್ವೇದೇವಸ್ಥಾನದ ಬ್ರಾಹ್ಮಣರ ಕೈಯಲ್ಲಿ ಕೊಡಬೇಕು. ಅವರು ಗ್ರಂಥಿಯನ್ನು ಬಿಚ್ಚಿ ಯಜಮಾನನ ಕೈಯಲ್ಲಿ ಕೊಡಬೇಕು. ಯಜಮಾನನು ಪಿತೃಸ್ಥಾನದ ಬ್ರಾಹ್ಮಣರ ಕೈಯಲ್ಲಿ ಕೊಡಬೇಕು. ಅನಂತರ, **'ಧ್ರುವಾಜ್ಯಪಾತ್ರಮುದ್ವಾಸಯಿಷ್ಯೇ । (ಅಸ್ತು ಉದ್ವಾಸಯ)'** ಧ್ರುವಾಜ್ಯಪಾತ್ರದ ದರ್ಭೆಯ ಗಂಟನ್ನು ಬಿಚ್ಚಿಹಾಕಬೇಕು. **'ಭವದನುಜ್ಞಯಾ ಪಿಂಡಾನುದ್ವಾಸಯಿಷ್ಯೇ ॥' (ಅಸ್ತು ಉದ್ವಾಸಯ)** –ಎಂದು ಪಿಂಡದ ಮೇಲೆ ಕೈಯಿಟ್ಟು ಮೆಲ್ಲಗೆ ಹಂದಾಡಿಸಿ **'ಬಲಿಮು–ದ್ವಾಸಯಿಷ್ಯೇ ॥' (ಅಸ್ತು ಉದ್ವಾಸಯ)** –ಎಂದು ಬಲಿಯ ನಾಲ್ಕು ದಿಕ್ಕುಗಳಲ್ಲಿ ಬಲಿಯನ್ನು ಕೈಯಿಂದ ಬೇರ್ಪಡಿಸಿ, (ಬಲ) ಅಕ್ಕಿ ನೀರು ಹಿಡಿದು ಏರಕೆಯ ಮೇಲೆ ಬಿಟ್ಟು,

**ಪರೇತನಃ ಪವಿತ್ರಃ ಸೋಮ್ಯಾಸೋऽಗ್ನಿಷ್ವಾತ್ತಾಃ ಪಥಿಭಿರ್ದೇವಯಾನೈಃ। ಅಸ್ಮಿನ್ಯಜ್ಞೇ ಸ್ವಧಯಾ ಮದಂತ್ವಧಿಬ್ರುವಂತು ತೇऽವಂತ್ವಸ್ಮಾನ್ ॥ ಸ್ವಧಾಂ ವಾಚಯಿಷ್ಯೇ ॥ (ವಾಚ್ಯತಾಮ್)** (ಕೆಲವರಲ್ಲಿ **'ಪರೇತನಃ ಪಿತರಃ ಸೋಮ್ಯಾಸೋ ಗಂಭೀರೇಭಿಃ ಪಥಿಭಿಃ ಪೂರ್ವಿಣೇಭಿಃ। ದತ್ವಾಯಾಸ್ಮಭ್ಯಂ ದ್ರವಿಣೇಹ ಭದ್ರಂ ರಯಿಂ ಚ ನಃ ಸರ್ವವೀರಂ ನಿಯಚ್ಛಥ ॥'**) –ಎಂದು ಎಡಕೈ ಹೆಬ್ಬೆರಳು ತೋರುಬೆರಳುಗಳಿಂದ ಏರಕವನ್ನು ಒತ್ತಿ ಹಿಡಿದು ಏರಕ ಎತ್ತದೆ ಬಲಕೈಯಿಂದ ಏರಕದ ಎರಡೂ ಕಡೆಯ ಗ್ರಂಥಿಗಳನ್ನು ಬಿಚ್ಚಿ ಹಾಕಿ ಪಿಂಡನಮಸ್ಕಾರಕ್ಕಾಗಿ ಕುಟುಂಬದವರನ್ನು ಕರೆಯಬೇಕು. ಮಂತ್ರಾಕ್ಷತೆಗೆ ಬರುವವರು ಮಂತ್ರಾಕ್ಷತೆ ಹಾಕಿಸಿಕೊಂಡ ಬಳಿಕ ಸ್ನಾನ ಮಾಡಲು ಬೇಕಾದ ಉಡುಪನ್ನು ಧರಿಸಿಕೊಂಡು ಬರಬೇಕು.

## ಪಿಂಡನಮಸ್ಕಾರಃ

ಕರ್ಮಿಯು ಆಚಾರ್ಯರಿಗೆ, ವಿಶ್ವೇದೇವಸ್ಥಾನದ ಹಾಗೂ ಪಿತೃಸ್ಥಾನದ ಬ್ರಾಹ್ಮಣರ ಕೈಯಲ್ಲಿ ಅಕ್ಷತೆಯನ್ನು ಕೊಟ್ಟು ಕುಟುಂಬದವರಿಗೆ ಅಕ್ಷತೆ ಇಲ್ಲವೇ ಗರಿಕೆ ಕೊಟ್ಟು ತಾನು ಎದ್ದುನಿಂತು ಯಜ್ಞೋಪವೀತ ಮಾಲಾಕಾರ ಮಾಡಿ ಬಲಕೈಯ ಹೆಬ್ಬೆರಳು ತೋರುಬೆರಳುಗಳ ನಡುವೆ ತಂದು ಜಲಕೂರ್ಚಸಹಿತ ಎಳ್ಳು ತುಲಸಿ ಗರಿಕೆ ದರ್ಭೆ ಹಿಡಿದು ಎಡಕೈಯಲ್ಲಿ ಜಲಪಾತ್ರೆ ಹಿಡಿದು ಪಿಂಡದ ಮೇಲೆ ಜಲಧಾರೆಯನ್ನು ಬಿಡುತ್ತಾ

ಓಂ ಸ್ವಾದುಷಂಸದಃ ಪಿತರೋ ವಯೋಧಾಃ ಕೃಚ್ಛ್ರೇಶ್ರಿತಃ ಶಕ್ತೀವಂತೋ ಗಭೀರಾಃ । ಚಿತ್ರಸೇನಾ ಇಷುಬಲಾ ಅಮೃಧ್ರಾಃ ಸತೋವೀರಾ ಉರವೋ ವ್ರಾತಸಾಹಾಃ ॥ ಬ್ರಾಹ್ಮಣಾಸಃ ಪಿತರಃ ಸೋಮ್ಯಾಸಃ ಶಿವೇ ನೋ ದ್ಯಾವಾಪೃಥಿವೀ ಅನೇಹಸಾ । ಪೂಷಾ ನಃ ಪಾತು ದುರಿತಾದೃತಾವೃಧೋ ರಕ್ಷಾ ಮಾಕಿರ್ನೋ ಅಘಶಂಸ ಈಶತ ॥ ಇದಂ ಪಿತೃಭ್ಯೋ ನಮೋ ಅಸ್ತ್ವದ್ಯ ಯೇ ಪೂರ್ವಾಸೋ ಯ ಉಪರಾಸ ಈಯುಃ । ಯೇ ಪಾರ್ಥಿವೇ ರಜಸ್ಯಾ ನಿಷತ್ತಾ ಯೇ ವಾ ನೂನಂ ಸುವೃಜನಾಸು ವಿಕ್ಷು ॥

ಓಮ್ ಊರ್ಜಂ ವಹಂತೀರಮೃತಂ ಘೃತಂ ದಧಿ ಮಧು ಪಯಃ ಕೀಲಾಲಂ ಪರಿಸ್ರುತಂ ಸ್ವಧಾ ಸ್ಥ ತರ್ಪಯತ ಮೇ ಪಿತೄನ್ ॥

ಕೃಷ್ಣೋಽನಂತೋಽಚ್ಯುತಶ್ಚಕ್ರೀ ವೈಕುಂಠೋಽಥ ಜನಾರ್ದನಃ ।
ಉಪೇಂದ್ರೋ ಯಜ್ಞಪುರುಷೋ ವಾಸುದೇವಸ್ತಥಾ ಹರಿಃ ॥

ಯೋಗೀಶಃ ಪುಂಡರೀಕಾಕ್ಷೋ ಮಾಸನಾಮಾನ್ಯನುಕ್ರಮಾತ್ ।
ಏತಾನಿ ಮಾಸನಾಮಾನಿ ಶ್ರಾದ್ಧಕಾಲೇ ಸದಾ ಪಠೇತ್ ॥

–ಎಂದು ನೀರು ಬಿಟ್ಟು ಜಲಪಾತ್ರವನ್ನು ಕೆಳಗಿಟ್ಟು ಜಲಕೂರ್ಚವನ್ನು ಜಲಪಾತ್ರದಲ್ಲಿಟ್ಟು

(ಬಲ) ಈಶಾನವಿಷ್ಣು......... ನಮಃ ॥

ವಿಶ್ವೋ ವಿಶ್ವಭುಗಾರಾಧ್ಯೋ ಧರ್ಮೋ ಧನ್ಯಃ ಶುಭಾನನಃ ।
ಭೂತಿದೋ ಭೂತಿಕೃದ್ಭೂತಿಃ ಪಿತೄಣಾಂ ಯೇ ಗಣಾ ನವ ॥

ಕಲ್ಯಾಣಃ ಕಲ್ಯಾಣಕರ್ತಾ ಚ ಕಲ್ಯಃ ಕಲ್ಯತರಾಽಶ್ರಯಃ ।
ಕಲ್ಯತಾಹೇತುರನಘಃ ಷಡಿಮೇ ತೇ ಗಣಾಃ ಸ್ಮೃತಾಃ ॥

ವರೋ ವರೇಣ್ಯೋ ವರದಃ ಪುಷ್ಟಿದಃ ತುಷ್ಟಿದಸ್ತಥಾ ।
ವಿಶ್ವಪಾತಾ ತಥಾ ಧಾತಾ ಸಪ್ತೈವೈತೇ ತಥಾ ಗಣಾಃ ॥

ಮಹಾನ್ ಮಹಾತ್ಮಾ ಮಹಿತೋ ಮಹಿಮಾವಾನ್ಮಹಾಬಲಃ ।
ಗಣಾಃ ಪಂಚ ತಥೈವೇತಿ ಪಿತೄಣಾಂ ಪಾಪನಾಶನಾಃ ॥

ಸುಖದೋ ಧನದಶ್ಚಾನ್ಯೋ ಧರ್ಮದೋಽನ್ಯಶ್ಚ ಭೂತಿದಃ ।
ಪಿತೄಣಾಂ ಕಥ್ಯತೇ ಚೈತತ್ ತಥಾ ಗುಣಚತುಷ್ಟಯಮ್ ॥

ಏಕತ್ರಿಂಶತ್ ಪಿತೃಗಣಾ ಯೈರ್ವ್ಯಾಪ್ತಮಖಿಲಂ ಜಗತ್ ।
ತೇ ಮೇಽನುತೃಪ್ತಾಸ್ತುಷ್ಯಂತು ಯಚ್ಛಂತು ಚ ಸದಾ ಹಿತಮ್ ॥

–ಎಂದು ಕೈಯಲ್ಲಿರುವ ದ್ರವ್ಯಗಳನ್ನು ಪಿಂಡದ ಮೇಲೆ ಹಾಕಿ ಹಾಗೆಯೇ ಕುಟುಂಬದವರೂ ಕೈಯಲ್ಲಿರುವ ಅಕ್ಷತೆ ಗರಿಕೆಯನ್ನು ಹಾಕಿ ನಮಸ್ಕಾರ ಮಾಡಬೇಕು. ಎಲ್ಲರೂ ನಮಸ್ಕರಿಸಿದ ಅನಂತರ ಯಜಮಾನನು ನಮಸ್ಕಾರ ಮಾಡಬೇಕು.

## ಮಂತ್ರಾಕ್ಷತಗ್ರಹಣಮ್

ಆಚಾರ್ಯರು ಅಕ್ಕಿತಟ್ಟೆಯನ್ನು ಹಿಡಿದು,

ಓಂ ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಮ್ । ಭಾಗಂ ದೇವೇಭ್ಯೋ ವಿ ದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ॥ ಇಹೈವ ಸ್ತಂ ಮಾ ವಿ ಯೌಷ್ಟಂ ವಿಶ್ವಮಾಯುರ್ವ್ಯಶ್ನುತಮ್ । ಕ್ರೀಳಂತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇ ಗೃಹೇ ॥ ಸರಸ್ವತೀಂ ಯಾಂ ಪಿತರೋ ಹವಂತೇ ದಕ್ಷಿಣಾ ಯಜ್ಞಮಭಿನಕ್ಷಮಾಣಾಃ । ಸಹಸ್ರಾರ್ಘಮಿಳೋ ಅತ್ರ ಭಾಗಂ ರಾಯಸ್ಪೋಷಂ ಯಜಮಾನೇಷು ಧೇಹಿ ॥

ಶತಮನೂಚ್ಯಮಾಯುಷ್ಕಾಮಸ್ಯ ಶತಾಯುರ್ವೈಪುರುಷಃ ಶತವೀರ್ಯಃ ಶತೇಂದ್ರಿಯಃ । ಆಯುಷ್ಯೇವೈನಂ ತದ್ವೀರ್ಯ ಇಂದ್ರಿಯೇ ದಧಾತಿ ॥

**ಆಯುಃ ಪ್ರಜ್ಞಾಂ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ ।**
**ಪ್ರಯಚ್ಛಂತು ತಥಾ ರಾಜ್ಯಂ ಪಿತಾ ಯುಷ್ಮತ್ಪಿತಾಮಹಾಃ ॥**

**ಪಿತೃಪ್ರಸಾದೋಽಸ್ತು ॥ ಆಚಂದ್ರಾರ್ಕವಂಶಾಭಿವೃದ್ಧಿರಸ್ತು । ವಿಶ್ವೇದೇವಾ ಪ್ರಸಾದೋಽಸ್ತು ॥ ಮಹಾವಿಷ್ಣುಪ್ರಸಾದೋಽಸ್ತು । ಗಯಾಶ್ರಾದ್ಧಫಲಸಿದ್ಧಿರಸ್ತು ॥**

–ಎಂದು ಆಚಾರ್ಯರಿಂದ ಅಕ್ಷತೆ ಸ್ವೀಕಾರ ಮಾಡಿ, ಪಿಂಡದ ಮೇಲೆ ಅಕ್ಷತೆಯನ್ನು ದಕ್ಷಿಣದಿಂದ ಉತ್ತರಕ್ಕೆ ಹಾಕಿ ಕುಟುಂಬದ ಹಿರಿಯ ಸದಸ್ಯರ ಬಳಿ ಹೋಗಿ ಕೊಟ್ಟು ಅವರು ಮೊದಲು ಶಿರಸ್ಸಿನಲ್ಲಿ ಮಂತ್ರಾಕ್ಷತೆಯನ್ನು ಧರಿಸಿ ಅನಂತರ ಕ್ರಿಯಾಕರ್ತೃಗಳಿಗೆ ಮಂತ್ರಾಕ್ಷತೆ ಹಾಕಬೇಕು. ಪಿಂಡನಮಸ್ಕಾರಕ್ಕೆ ಬಂದವರೆಲ್ಲ ಮಂತ್ರಾಕ್ಷತೆಯನ್ನು ಪಡೆದು ಶ್ರಾದ್ಧದ ಕೊನೆಗೆ ಶುದ್ಧ ಮಾಡಲು ಬೇಕಾದಷ್ಟು ಮಂದಿಯನ್ನು ಬಿಟ್ಟು ಉಳಿದವರು ಸ್ನಾನಕ್ಕೆ ಹೋಗಬೇಕು.

## ಅರ್ಘ್ಯಪಾತ್ರೋದ್ವಾಸನಮ್

(ಎಡ) ದಕ್ಷಿಣಾಭಿಮುಖವಾಗಿ ಕುಳಿತು,

ಧಾಮಂತೇ ವಾಮದೇವ ಆಪೋ ಜಗತಿ । ಕೂರ್ಚವಿಸರ್ಜನೇ ವಿನಿಯೋಗಃ ॥

**ಓಂ ಧಾಮಂತೇ ವಿಶ್ವಂ ಭುವನಮಧಿ ಶ್ರಿತಮಂತಃ ಸಮುದ್ರೇ ಹೃದ್ಯಂ ಅಂತರಾಯುಷಿ । ಅಪಾಮನೀಕೇ ಸಮಿಥೇ ಯ ಆಭೃತಸ್ತಮಶ್ಯಾಮ ಮಧುಮಂತಂ ತ ಊರ್ಮಿಮ್ ॥**

**ಓಮ್ ಋಚೇ ತ್ವಾ ರುಚೇ ತ್ವಾ ಸಮಿಥ್ಸ್ರವಂತಿ ಸರಿತೋ ನ ಧೇನಾಃ। ಅಂತರ್ಹೃದಾ ಮನಸಾ ಪೂಯಮಾನಾಃ। ಘೃತಸ್ಯ ಧಾರಾ ಅಭಿಚಾಕಶೀಮಿ। ಹಿರಣ್ಯಯೋ ವೇತಸೋ ಮಧ್ಯ ಆಸಾಮ್ । ತಸ್ಮಿನ್ಥ್ಸುಪರ್ಣೋ ಮಧುಕೃತ್ ಕುಲಾಯೀ ಭಜನ್ನಾಸ್ತೇ ಮಧು ದೇವತಾಭ್ಯಃ । ತಸ್ಯಾಸತೇ ಹರಯ–ಸ್ಸಪ್ತತೀರೇ ಸ್ವಧಾಂ ದುಹಾನಾ ಅಮೃತಸ್ಯ ಧಾರಾಮ್ ॥**

ಪಿತೃಣಾಂ ಪ್ರಾಣತುಲ್ಯಾ ತ್ವಂ ನಿಜಜೀವನರೂಪಿಣೀ ।
ಶ್ರದ್ಧಾಽಧಿಷ್ಠಾತೃದೇವೀ ಚ ಶ್ರಾದ್ಧಾದೀನಾಂ ಫಲಪ್ರದ ॥

ಸ್ವಧಾಂ ವಾಚಯಿಷ್ಯೇ । (ವಾಚ್ಯತಾಮ್) ॥

**ಪಿತೃಪಿತಾಮಹ ..... ವಾಸುದೇವಾಃ ಸ್ವಧೋಚ್ಯತಾಮ್ । (ಅಸ್ತು ಸ್ವಧಾ) ॥ ಸ್ವಧಾ ಸಂಪದ್ಯತಾಮ್ ॥ (ಸಂಪದ್ಯತಾಂ ಸ್ವಧಾ) ॥**

ಪಿತ್ರರ್ಘ್ಯಪಾತ್ರದ ಮೇಲಿನ ಪಾತ್ರೆ ತೆಗೆದು ಒಳಗಿರುವ ಮೂರು ಕೂರ್ಚಗಳನ್ನು (ಬಲ) ವಿಶ್ವೇದೇವಸ್ಥಾನೀಯ ಬ್ರಾಹ್ಮಣರ ಕೈಯಲ್ಲಿ ಕೊಡಬೇಕು. ಅವರು ಅದನ್ನು ಬಿಡಿಸಿ ಕ್ರಿಯಾಕರ್ತೃವಿನ ಕೈಯಲ್ಲಿ ಕೊಡಬೇಕು. ಅದನ್ನು (ಎಡ) ಪಿತೃಸ್ಥಾನದ ಬ್ರಾಹ್ಮಣರ ಕೈಯಲ್ಲಿ ಕೊಟ್ಟು ಬ್ರಾಹ್ಮಣರ ಕೈಯಿಂದ ಅವರ ಎಡಭಾಗಕ್ಕೆ ಮುಟ್ಟಿಸಿ **'ಅನುಗಚ್ಛಂತು ಪಿತರಃ ॥'** –ಎಂದು ದರ್ಭೆಯನ್ನು ಹಿಂದೆ ಬಿಸಾಡಬೇಕು.

**ಸ್ವಾಹಾಂ ವಾಚಯಿಷ್ಯೇ ॥ (ವಾಚ್ಯತಾಮ್) ॥**

**ಓಂ ಸ್ವಾಹಾಗ್ನಯೇ ವರುಣಾಯ । ಸ್ವಾಹೇಂದ್ರಾಯ ಮರುದ್ಭ್ಯಃ । ಸ್ವಾಹಾ ದೇವೇಭ್ಯೋ ಹವಿಃ ॥**

**ದೇವಾಃ ಸ್ವಾಹೋಚ್ಯತಾಮ್ । (ಅಸ್ತು ಸ್ವಾಹಾ) । ಸ್ವಾಹಾ ಸಂಪದ್ಯತಾಮ್ । (ಸಂಪದ್ಯತಾಂ ಸ್ವಾಹಾ) ॥**

ಅನಂತರ (ಬಲ) ವಿಶ್ವೇದೇವಸ್ಥಾನಾರ್ಘ್ಯಪಾತ್ರದ ಎರಡು ಕೂರ್ಚಗಳನ್ನು ವಿಶ್ವೇದೇವಸ್ಥಾನದ ಬ್ರಾಹ್ಮಣರ ಕೈಯಲ್ಲಿ ಕೊಟ್ಟು ಬಿಡಿಸಿ, ಬಲಕೈಯಿಂದ ವಿಶ್ವೇದೇವಸ್ಥಾನದ ಬ್ರಾಹ್ಮಣರ ಕೈಯಲ್ಲಿ ಕೊಟ್ಟು ಅವರ ಕೈಯಿಂದ ಅವರ ಬಲಭಾಗಕ್ಕೆ ಮುಟ್ಟಿಸಿ, **'ಅನುಗಚ್ಛಂತು ವಿಶ್ವೇದೇವಾಃ ॥'** –ಎಂದು ದರ್ಭೆಯನ್ನು ಹಿಂದೆ ಬಿಸಾಡಬೇಕು.

**ಯಜ್ಞೇಶ್ವರೋ ಹವ್ಯ ಸಮಸ್ತಕವ್ಯ ಭೋಕ್ತಾವ್ಯಯಾತ್ಮಾ ಹರಿರೀಶ್ವರೋಽತ್ರ ।
ತತ್ಸನ್ನಿಧಾನಾದಪಯಾಂತಿ ಸದ್ಯಃ ರಕ್ಷಾಂಸ್ಯಶೇಷಾಣ್ಯಸುರಾಶ್ಚ ಸರ್ವೇ ॥**

**ತ್ವಾಂ ಯೋಗಿನಶ್ಚಿಂತಯಂತಿ ತ್ವಾಂ ಯಜಂತಿ ಚ ಯಜ್ವನಃ ।
ಹವ್ಯಕವ್ಯಭುಗೇಕಸ್ತ್ವಂ ಪಿತೃದೇವಃ ಸ್ವರೂಪಧೃಕ್ ॥**

**ದೇಶಕಾಲ, ಮಂತ್ರತಂತ್ರ, ಕರ್ತೃಭೋಕ್ತೃ,ಹವಿರ್ನಿಯಮ, ಸ್ಥಲದ್ರವ್ಯಾದಿಭ್ಯಃ ಸರ್ವಂ ನ್ಯೂನಾತಿರಿಕ್ತಮಿತಿ ಭವಂತೋ ಬ್ರುವಂತು ॥ (ಸರ್ವಂ ನ್ಯೂನಾತಿರಿಕ್ತಾಭ್ಯಾ–ಮಿದಂ ಕರ್ಮಾಚ್ಛಿದ್ರಮಸ್ತು)** ॥ ಎಂದು ಪ್ರತಿವಚನ ಪಡೆದುಕೊಳ್ಳಬೇಕು.

## ಕೃಷ್ಣಾರ್ಪಣಮ್

ಅನಂತರ ಕ್ರಿಯಾಕರ್ತೃಗಳು ಪೂರ್ವಮುಖವಾಗಿ ಕುಳಿತು ನಾಣ್ಯ ತುಳಸಿ ನೀರು ಹಿಡಿದು ಆಚಾರ್ಯರಿಗೆ ದಕ್ಷಿಣೆ ಕೊಟ್ಟು ಅವರಿಂದ ತುಳಸಿಯನ್ನು ಪಡೆದು, ತುಳಸಿ ನೀರು ಸಮೇತವಾಗಿ ಹಿಡಿದು, ಮೂರು ಬಾರಿ ನೀರು ಹಾಕಿ,

**ಕಾಯೇನ ವಾಚಾ ಮನಸಾ ....... ನಾರಾಯಣಾಯೇತಿ ಸಮರ್ಪಯಾಮಿ ॥**

**ಓಂ ವಷಟ್ತೇ ವಿಷ್ಣವಾಸ ಆ ಕೃಣೋಮಿ ತನ್ಮೇ ಜುಷಸ್ವ ಶಿಪಿವಿಷ್ಟ ಹವ್ಯಮ್ । ವರ್ಧಂತು ತ್ವಾ ಸುಷ್ಟುತಯೋ ಗಿರೋ ಮೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥**

**ಅಸ್ಮತ್ಪಿತುಃ ಮೃತಾಹಾತ್ ದ್ವಾದಶೇಽಹನಿ ಪಿತುರುದ್ದಿಶ್ಯ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಾವಾಪ್ತ್ಯರ್ಥಂ ಪಿತಾಮಹಪ್ರಪಿತಾಮಹವೃದ್ಧಪ್ರಪಿತಾಮಹೈಃ ಸಮಾನೋದಕಸಾಪಿಂಡ್ಯಸಿದ್ಧಿದ್ವಾರಾ ವಸ್ವಾದಿಪುಣ್ಯಲೋಕಾವಾಪ್ತ್ಯರ್ಥಂ ಮಯಾ ಕೃತ ಸಪಿಂಡೀಕರಣಶ್ರಾದ್ಧಕರ್ಮಣಾ ಪಿತೃಪಿತಾ......ವಾಸುದೇವಾತ್ಮಕ ಪ್ರಾಣಸ್ಥಲಕ್ಷ್ಮೀ–ಜನಾರ್ದನಾತ್ಮಕ ವಿಶ್ವೇದೇವಾಂತರ್ಗತ... ನಾರಾಯಣಾನಿರುದ್ಧಾತ್ಮಕ ಮಾಸನಿಯಾಮಕ ಮಧ್ವಪತಿ ಶ್ರೀಗೋಪಾಲಕೃಷ್ಣಃ ಪ್ರೀಯತಾಮ್ ॥**

**ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಾಯಗೋವಿಂದಾಯ ನಮಃ ॥**

–ಎಂದು ಪಿಂಡದ ಮೇಲೆ ಬಿಟ್ಟು, ತುಲಸಿಯನ್ನು ತನ್ನ ಬಲಕಿವಿಯಲ್ಲಿಟ್ಟುಕೊಳ್ಳಬೇಕು.

## ಪಿತೄಣಾಮುದ್ವಾಸನಮ್

(ಎಡ) ಪಿತೃಬ್ರಾಹ್ಮಣರ ಬಲಕೈಯ ಹೆಬ್ಬೆರಳು ಹಿಡಿದು **'ಪೈತೃಕವರ್ಗಾನ್ ಉದ್ವಾಸ–ಯಾಮಿ ॥' (ಅಸ್ತೂದ್ವಾಸಯ)** –ಎಂದು ಹೇಳಿ, ಅನಂತರ (ಬಲ) ವಿಶ್ವೇದೇವಸ್ಥಾನೀಯ ಬ್ರಾಹ್ಮಣರ ಬಲಕೈಯ ಹೆಬ್ಬೆರಳು ಹಿಡಿದು, **'ವಿಶ್ವಾನ್ ದೇವಾನ್ ಉದ್ವಾಸಯಾಮಿ ॥' (ಅಸ್ತೂದ್ವಾಸಯ)** ಎಂದು ಹೇಳಿ, ಅನಂತರ ಅಕ್ಕಿ ಹಿಡಿದು **'ಮಹಾವಿಷ್ಣವೇ ನಮಃ ॥ ಮಂಗಲನೀರಾಜನಾದಿ ಸರ್ವೋಪಚಾರಪೂಜಾಃ ಸಮರ್ಪಯಾಮಿ ॥'** ಎಂದು ದೇವರ ಮೇಲೆ ಹಾಕಿ ಕೈಮುಗಿದು,

**ಉತ್ತಿಷ್ಠತ ಆವಾಹಿತಪಿತರಃ ಅನುಗಚ್ಛಂತು ವಿಶ್ವೇದೇವೈಃ ವಿಷ್ಣುನಾ ಸಹ ॥**

**ಓಮ್ ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ । ಉಪಪ್ರಯಂತು ಮರುತಃ ಸುದಾನವ ಇಂದ್ರಃ ಪ್ರಾಶುರ್ಭವಾ ಸಚಾ ॥**

**ಯಥಾಸ್ಥಾನಮುದ್ವಾಸಯಾಮಿ ॥** ಎಂದು ದೇವರ ಕೂರ್ಚವನ್ನು ಬಿಚ್ಚಿ ಹಾಕಬೇಕು.

## ಪಿಂಡವಿಸರ್ಜನಮ್

ಪಿಂಡದ ಮೇಲೆ ಹಾಕಿದ ಬಟ್ಟೆಯನ್ನು ತನ್ನ ಎಡಭಾಗದಲ್ಲಿ (ಪಿಂಡ ಮಾಡಲು ಅನ್ನ ಹಾಕಿದ ಎಲೆ ಇದ್ದ ಜಾಗದಲ್ಲಿ) ಬಿಡಿಸಿ ಬಟ್ಟೆಗೆ ತೀರ್ಥ ಹಾಕಿ (ಇಲ್ಲವೇ ಹವಿಸ್ಸು ಮಾಡಿದ ಪಾತ್ರೆಗೆ ನೀರು ಮತ್ತು ತೀರ್ಥ ಹಾಕಿ ಗಂಗೆಯನ್ನು ಆವಾಹನೆ ಮಾಡಿ)

**ಓಂ ಯತ್ರ ತತ್ಪರಮಂ ಪದಂ ವಿಷ್ಣೋರ್ಲೋಕೇ ಮಹೀಯತೇ । ದೇವೈಃ ಸುಕೃತಕರ್ಮಭಿಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ತತ್ಪರಮಾಪ್ಯಂ ಭೂತಾನಾಮಧಿಪತಿಮ್ । ಭಾವಭಾವೀ ಚ ಯೋಗೀಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ಲೋಕಾಸ್ತನೂತ್ಯಜಃ ಶ್ರದ್ಧಯಾ ತಪಸಾ ಜಿತಾಃ । ತೇಜಶ್ಚ ಯತ್ರ ಬ್ರಹ್ಮ ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ದೇವಾ ಮಹಾತ್ಮಾನಃ ಸೇಂದ್ರಾಶ್ಚ ಸಮರುದ್ಗಣಾಃ । ಬ್ರಹ್ಮಾ ಚ ಯತ್ರ ವಿಷ್ಣುಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ಗಂಗಾ ಚ ಯಮುನಾ ಚ ಯತ್ರ ಪ್ರಾಚೀ ಸರಸ್ವತೀ । ಯತ್ರ ಸೋಮೇಶ್ವರೋ ದೇವಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ತದ್ವಿಷ್ಣುರ್ಮಹೀ-ಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥**

**ಯಜ್ಞೇನ ಯಜ್ಞ..... ದೇವಾಃ ॥**

**ವೇಣೀಮಾಧವಾಯ ನಮಃ । ಬಿಂದುಮಾಧವಾಯ ನಮಃ । ಗಯಾಗದಾಧರಾಯ ನಮಃ ॥**

–ಎಂದು ಪ್ರಾರ್ಥಿಸಿ (ಎಡ) ಪಿತೃಪಿಂಡವನ್ನು ಹಿಡಿದು **'ಸರ್ವೋದ್ದಿಷ್ಟ ಪಿತ್ರಾಸಹ ಪಿತಾಮಹ [ಮಾತ್ರಾ ಸಹ ಪಿತಾಮಹಿ] ಪಿಂಡೋಽಯಂ ಗಯಾರ್ಪಿತೋಽಸ್ತು ।** (ಬಲ) ಬಟ್ಟೆಯಲ್ಲಿ ಅಥವಾ ಪಾತ್ರೆಯಲ್ಲಿ ಹಾಕಬೇಕು. ಹೀಗೆ ಉಳಿದ ಎರಡು ಪಿಂಡಗಳನ್ನು ವಿಸರ್ಜಿಸಬೇಕು. (ಎಡ) **ಪಿತ್ರಾಸಹ ಪ್ರಪಿತಾಮಹಪಿಂಡೋಽಯಂ ಗಯಾರ್ಪಿತೋಽಸ್ತು । ಪಿತ್ರಾಸಹ ವೃದ್ಧಪ್ರಪಿತಾಮಹಪಿಂಡೋಽಯಂ ಗಯಾರ್ಪಿತೋಽಸ್ತು ॥'**

ಬಲಿಯ ಅನ್ನವನ್ನು ಬಟ್ಟೆಗೆ (ಪಾತ್ರೆಗೆ) ಹಾಕಿ (ಎಡ) ಪಿಂಡಗಳ ಮೇಲೆ ತಿಲೋದಕ ಕೊಟ್ಟು, ಕೈಮುಗಿದು,

**ವಾಸನಾದ್ವಾಸುದೇವೋಽಸಿ ವಾಸಿತಂತೇ ಜಗತ್ತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

ಬ್ರಾಹ್ಮಣರಿಗೆ ಕೈಮುಗಿದು **ಪಿತೄಣಾಂ ಶಾಶ್ವತವಿಷ್ಣುಲೋಕಾವಾಪ್ತಿರಸ್ತ್ವಿತಿ ಭವಂತೋ ಬ್ರುವಂತು ॥ (ಶಾಶ್ವತ ವಿಷ್ಣುಲೋಕಾವಾಪ್ತಿರಸ್ತು) ॥**

## ತೀರ್ಥಪ್ರೋಕ್ಷಣಮ್

ಎಳ್ಳುನೀರು ಹಿಡಿದು,

**ಓಮ್ ಅಗ್ನೇ ತಮದ್ಯಾಽಶ್ವಂ ನ ಸ್ತೋಮೈಃ ಕ್ರತುಂ ನ ಭದ್ರಂ ಹೃದಿಸ್ಪೃಶಮ್ । ಋಧ್ಯಾಮಾ ತ ಓಹೈಃ ॥ ಯದಂತರಿಕ್ಷಂ ಪೃಥಿವೀಮುತ ದ್ಯಾಂ ಯನ್ಮಾತರಂ ಪಿತರಂ ವಾ ಜಿಹಿಂಸಿಮ । ಅಗ್ನಿರ್ಮಾ ತಸ್ಮಾದೇನಸೋ ಗಾರ್ಹಪತ್ಯಃ ಪ್ರ ಮುಂಚತು ದುರಿತಾ ಯಾನಿ ಚಕೃಮ ಕರೋತು ಮಾಮನೇ–ನಸಮ್ ॥** –ಎಂದು ಬರ್ಹಿಸ್ಸಿನ ಮೇಲೆ ಎಳ್ಳುನೀರು ಬಿಟ್ಟು, **ವೀರಪ್ರಾರ್ಥನಸ್ಯ ಅನುಜ್ಞಾ॥ (ತಥಾಸ್ತು) ॥ ವೀರಂ ಮೇ ದತ್ತ । ಅಂತರಿಕ್ಷಸ್ಥ ಪಿತೃಭ್ಯೋ ನಮಃ ॥**

**ದೇವತಾಭ್ಯಃ ಪಿತೃಭ್ಯಶ್ಚ ...... ನಮಃ ॥ ಪಿತೃ–ಪಿತಾಮಹ–ಪ್ರಪಿತಾಮಹಾಃ । ಭೂರ್ಭುವಃಸ್ವರೋಂ ಸ್ವರ್ಗಂ ಗಚ್ಛಂತು ಪಿತರಃ ॥**

–ಬರ್ಹಿಸ್ಸಿನ ಮೇಲೆ ಇರುವ ಎಳ್ಳನ್ನು ಆಕಾಶದ ಕಡೆಗೆ ಎರಚಬೇಕು.

ಅನಂತರ (ಬಲ) ಬರ್ಹಿಸ್ಸಿನ ನಾಲ್ಕು ದಿಕ್ಕಿನಲ್ಲಿ ಅಕ್ಷತೆಕಾಳು ಇಟ್ಟು ಜಲಕೂರ್ಚದಿಂದ ಪಂಚದಶವಾಕ್ಯದಿಂದ ಬರ್ಹಿಸ್ಸಿನ ಮೇಲೆ ನೀರು ಪ್ರೋಕ್ಷಣೆ ಮಾಡಬೇಕು– **ಶಾಂತಿರಸ್ತು । ಪುಷ್ಟಿರಸ್ತು । ತುಷ್ಟಿರಸ್ತು । ವೃದ್ಧಿರಸ್ತು । ಅವಿಘ್ನಮಸ್ತು । ಆಯುಷ್ಯಮಸ್ತು । ಆರೋಗ್ಯಮಸ್ತು । ಶಿವಂ ಕರ್ಮಾಸ್ತು । ಕರ್ಮಸಮೃದ್ಧಿರಸ್ತು । ಧರ್ಮಸಮೃದ್ಧಿರಸ್ತು । ವೇದಸಮೃದ್ಧಿರಸ್ತು । ಶಾಸ್ತ್ರಸಮೃದ್ಧಿರಸ್ತು । ಪುತ್ರಸಮೃದ್ಧಿರಸ್ತು । ಧನಧಾನ್ಯಸಮೃದ್ಧಿರಸ್ತು । ಇಷ್ಟಸಂಪದಸ್ತು । ಉತ್ತರೋತ್ತರಮಹರಹರಭಿವೃದ್ಧಿರಸ್ತು ॥**

**'ಅಸ್ಮಿನ್ ಸ್ಥಲೇ ಸ್ವಸ್ತಿ ಶೋಭನಂ ಹವಿಃ ॥' (ಸುಸಂತತಿಃ) ॥** ಬರ್ಹಿಸ್ಸಿನ ದರ್ಭೆಯಿಂದ ಪಿತ್ರರ್ಘ್ಯಪಾತ್ರದ ತೀರ್ಥವನ್ನು ಹಿಡಿದು,

**ಓಂ ಸ್ವಾಹಾಗ್ನಯೇ ವರುಣಾಯ ಸ್ವಾಹೇಂದ್ರಾಯ ಮರುದ್ಭ್ಯಃ । ಸ್ವಾಹಾ ದೇವೇಭ್ಯೋ ಹವಿಃ ॥**

–ಎಂದು ತನಗೆ, ತಾಯಿಗೆ ಹಾಗೂ ಅಕ್ಕತಂಗಿಯರಿಗೆ ಪ್ರೋಕ್ಷಣೆ ಮಾಡಬೇಕು. ಅನಂತರ ಬರ್ಹಿಸ್‌ಗಳ್ನು ತೆಗೆದು ಬಟ್ಟೆಗೆ (ಪಾತ್ರೆಗೆ) ಹಾಕಿ ವಿಷ್ಣುಪಾದವನ್ನು ತೆಗೆದು ತೊಳೆದು ಬದಿಯಲ್ಲಿಟ್ಟು, ಪಿಂಡ ವಿಸರ್ಜಿಸಿದ ಬಟ್ಟೆಯ ನಾಲ್ಕು ಮೂಲೆಗಳನ್ನು ಸೇರಿಸಿ ಗಂಟುಕಟ್ಟಿ **ಸ್ವಸ್ಥಾನೇ ವಾಸಃ । ಪುನರಪಿ ಸ್ವಸ್ಥಾನಮ್** । ಎಂದು ಪಿಂಡ ಹಾಕಿದ ಸ್ಥಳದಲ್ಲಿ ಇಡಬೇಕು.

## ಕರ್ಮವಸ್ತ್ರವಿಸರ್ಜನಮ್

ಪ್ರೇತ, ಪಿತೃ, ವಿಶ್ವೇದೇವಸ್ಥಾನದ ಬ್ರಾಹ್ಮಣರನ್ನು ಮುಂದು ಮಾಡಿಕೊಂಡು ಕನಿಷ್ಠಪೂರ್ವಕರಾಗಿ ಜಲಪಾತ್ರೆ, ಆಚಮನಪಾತ್ರೆ, ದ್ರವ್ಯಗಳ ಹರಿವಾಣ, ಕಾಲು ತೊಳೆಯಲು ನೀರು, ತಂಬಿಗೆ ಹಾಗೂ ಬ್ರಾಹ್ಮಣರಿಗೆ ಕೊಡುವ ಫಲ, ಕೊಡೆ, ತಾಂಬೂಲಾದಿಗಳನ್ನು ಹಿಡಿದು ಮನೆಯ ಹೊರಗೆ ತುಳಸಿಕಟ್ಟೆಯ ಬಳಗೆ ಮುಂದಿನ ಮಂತ್ರಪೂರ್ವಕವಾಗಿ ಹೋಗಬೇಕು.

**ಓಮ್ ಅಷ್ಟಾವಷ್ಟಾವನ್ಯೇಷು ಧಿಷ್ಣಿಯೇಷೂಪದಧಾತ್ಯಷ್ಟಾ ಶಫಾ ಪಶವಃ ಪಶೂನೇವಾವರುಂಧೇ । ಷಣ್ಮಾರ್ಜಾಲೀಯೇ ಷಡ್ವಾ ಋತವಃ । ಋತವಃ ಖಲು ವೈ ದೇವಾಃ ಪಿತರ ಋತೂನೇವ ದೇವಾನ್ ಪಿತೄನ್ ಪ್ರೀಣಾತಿ ॥**

ಅನಂತರ ತುಲಸಿಕಟ್ಟೆಯ ಎದುರು ವಿಶ್ವೇದೇವಸ್ಥಾನದ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿ, ಪಿತೃಪ್ರೇತಸ್ಥಾನದ ಬ್ರಾಹ್ಮಣರನ್ನು ಉತ್ತರಾಭಿಮುಖವಾಗಿ ನಿಲ್ಲಿಸಿ (ಎಡ) ಪ್ರೇತಬ್ರಾಹ್ಮಣರ ಪಾದ ತೊಳೆದು ತಾಂಬೂಲ, ಫಲ, ಕೊಡೆ, ಇತ್ಯಾದಿಗಳನ್ನು ಕೊಟ್ಟು (ಬಲ) ನಮಸ್ಕಾರ ಮಾಡಬೇಕು.

**ಅಸ್ಮತ್ ಪಿತುಃ ಸಪಿಂಡೀಕರಣಶ್ರಾದ್ಧಾಂತೇ ಕರ್ಮವಸ್ತ್ರವಿಸರ್ಜನಾಧಿಕಾರ ಸಿದ್ಧ್ಯರ್ಥಂ ಬ್ರಹ್ಮದಂಡಂ ಕರಿಷ್ಯೇ ॥** ಎಂದು ಹದಿನಾಲ್ಕು ಚಿಲ್ಲರೆ, ಹೂ ತುಳಸಿ, ದರ್ಭೆ, ಎಳ್ಳು ಹಿಡಿದು, ನಿಂತಲ್ಲೇ ಮೂರು ಪ್ರದಕ್ಷಿಣೆ ಬಂದು ಭೂಮಿಯ ಮೇಲೆ ಚೌಕಾಕಾರದ ಮಂಡಲ ಮಾಡಿ **ಬ್ರಹ್ಮದಂಡ** ಇಟ್ಟು, (ಎಡ) **'ಕರ್ಮವಸ್ತ್ರವಿಸರ್ಜನಾಧಿಕಾರ ಸಿದ್ಧಿರಸ್ತ್ವಿತಿ ಭವಂತೋ ಬ್ರುವಂತು ।'** ಪಿತೃಬ್ರಾಹ್ಮಣರಿಂದ ಅನುಜ್ಞೆ ಕೇಳಿ, **(ಅಧಿಕಾರ ಸಿದ್ಧಿರಸ್ತು)** –ಎಂದು ಪ್ರತಿವಚನ ಪಡೆದು, ಕ್ರಿಯಾಕರ್ತೃಗಳು ಕುತ್ತಿಗೆಯ ಬಟ್ಟೆಯನ್ನು ತೆಗೆದು ಇಡಿಅಡಕೆಗೆ ಸುತ್ತಿ ಅದರೊಟ್ಟಿಗೆ ಮೊಳೆಯನ್ನು ಇರಿಸಿ ಒಂದು ನಾಣ್ಯವನ್ನು

ಪ್ರೇತಬ್ರಾಹ್ಮಣರ ಕೈಯಲ್ಲಿ ಕೊಟ್ಟು ಆಡುಭಾಷೆಯಲ್ಲಿ ಪ್ರಾರ್ಥಿಸಿ ಅವರಿಂದ ಪ್ರತಿವಚನ ಕೇಳಬೇಕು. ಅನಂತರ ಪ್ರೇತಬ್ರಾಹ್ಮಣರು ಹಿಂದೆ ನೋಡದೆ ಹೋಗಬೇಕು. (ಎಡ) ಪಿತೃಬ್ರಾಹ್ಮಣರ ಪಾದ ತೊಳೆದು, ತಾಂಬೂಲ ಫಲ, ಕೊಡೆಗಳನ್ನು ಕೊಟ್ಟು (ಬಲ) ಅನಂತರ ವಿಶ್ವೇದೇವಬ್ರಾಹ್ಮಣರ ಪಾದ ತೊಳೆದು ತಾಂಬೂಲ, ಫಲ, ಕೊಡೆ ಕೊಡಬೇಕು.

## ಬ್ರಾಹ್ಮಣಪ್ರದಕ್ಷಿಣಾದಿ

ಕನಿಷ್ಠಪೂರ್ವಕರಾಗಿ, ಬಲಕೈಯಲ್ಲಿ ಜಲಕೂರ್ಚಸಹಿತ ಜಲಪಾತ್ರೆಯ ನೀರನ್ನು ಕೂರ್ಚಕ್ಕೆ ಹಾಕುತ್ತಾ ಬ್ರಾಹ್ಮಣರಿಗೆ ಹಾಗೂ ತುಲಸಿಕಟ್ಟೆಗೆ ಮೂರು ಸುತ್ತು ಪ್ರದಕ್ಷಿಣೆ ಬರಬೇಕು.

**ನಮೋಽಸ್ತ್ವನಂತಾಯ ....... ನಮಃ ॥ ನಮೋ ಬ್ರಹ್ಮಣ್ಯದೇವಾಯ ...... ನಮಃ ॥**

**ಓಂ ವಾಜೇವಾಜೇಽವತ ವಾಜಿನೋ ನೋ ಧನೇಷು ವಿಪ್ರಾ ಅಮೃತಾ ಋತಜ್ಞಾಃ । ಅಸ್ಯ ಮಧ್ವಃ ಪಿಬತ ಮಾದಯಧ್ವಂ ತೃಪ್ತಾ ಯಾತ ಪಥಿಭಿರ್ದೇವಯಾನೈಃ ॥ ಆ ಮ ವಾಜಸ್ಯ ಪ್ರಸವೋ ಜಗಮ್ಯಾದಾ ದ್ಯಾವಾಪೃಥಿವೀ ವಿಶ್ವಶಂಭೂ। ಆ ಮಾ ಗಂತಾಂ ಪಿತರಾ ಮಾತರಾ ಚಾಽಽಮಾ ಸೋಮೋ ಅಮೃತತ್ವಾಯ ಗಮ್ಯಾತ್ ॥** ಅನಂತರ,

**ವಿಶ್ವೇದೇವಾಂತರ್ಯಾಮಿ ಪ್ರಾಣಸ್ಥನಾರಾಯಣಾನಿರುದ್ಧಮ್ ಅಭಿವಾದಯೇ ॥ ಪಿತೃಪಿತಾಮಹ ....ವಾಸುದೇವಾನ್ ಅಭಿವಾದಯೇ ॥**

-ಎಂದು ಗೋತ್ರೋಚ್ಚಾರಣೆ ಹೇಳಿ ಪ್ರತ್ಯೇಕವಾಗಿ ಎರಡು ಸ್ಥಾನಗಳಲ್ಲಿಯ ಬ್ರಾಹ್ಮಣರಿಗೂ ಅಭಿವಾದನೆ ಮಾಡಬೇಕು.

**ಆಶಿಷಃಪ್ರಾರ್ಥನಾ**

**ದಾತರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ನಃ ।**
**ಶ್ರದ್ಧಾ ಚ ನೋ ಮಾ ವ್ಯಗಮದ್ಬಹುಧೇಯಂ ಚ ನೋ ಭವೇತ್ ॥**
**(ನೋಽಸ್ತು ತತ್)**
**ಅನ್ನಂ ಚ ನೋ ಬಹುಭವೇದತಿಥೀಂಶ್ಚ ಲಭೇಮಹಿ ।**
**ಯಾಚಿತಾರಶ್ಚ ನಃ ಸಂತು ಮಾ ಚ ಯಾಚಿಷ್ಮ ಕಂಚನ ॥**
**ದಾತಾರೋ ವೋಽಭಿವರ್ಧಂತಾಂ ವೇದಾಃ ಸಂತತಿರೇವ ವಃ ।**

– ಸುದಿನತ್ವಮಹ್ನಾಮಹ್ನಾಂ ಸುದಿನತ್ವಂ ಸುದಿನತ್ವಮಹ್ನಾಮ್ ।

– ಸುದಿನತ್ವಮಿತಿ ಸುದಿನತ್ವಮ್ । ಅಹ್ನಾಮಿತ್ಯಹ್ನಾಮ್ ॥

* ಸ್ವಸ್ತಿ ಮಂತ್ರಾರ್ಥಾಃ ಸತ್ಯಾಃ ಸಫಲಾಃ ಭೂಯಾಸುರಿತಿ ಭವಂತೋ ಮಹಾಂ-ತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)

* ಅಯಂ (ಸಭ್ರಾತೃಕಃ) ಯಜಮಾನಃ ತೇಜಸ್ವೀ ಓಜಸ್ವೀ ಬ್ರಹ್ಮವರ್ಚಸ್ವೀ ಭೂಯಾದಿತಿ ಭವಂತೋ ಮಹಾಂತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)

* ಇಮಂ ಯಜಮಾನಂ ಬಂಧುಜನಾಃ ದೀನಜನಾಃ ಪಂಡಿತಜನಾಃ ಅವನೀಪಜನಾಶ್ಚ ಸ್ವಸಮಾನ ಕಾಂಚನ ಸಮುಚಿತ ಕೌಶೇಯವಾಸೋ ವೃತ್ತಿಕ್ಷೇತ್ರ ರಥಕರಿತುರಂಗಛತ್ರಚಾಮರವ್ಯಜನಾಂದೋಲಿಕಾಗೋಮಹಿಷ್ಯಾದೀನಾಂ ಸಂಪಾದನಾರ್ಥಾಯ ಸಮಾಶ್ರಯಂತಾಮಿತಿ ಭವಂತೋ ಮಹಾಂತೋಽನು-ಗೃಹ್ಣಂತು ॥ (ಓಂ ತಥಾಽಸ್ತು ॥)

* ಅನೇನ ಯಜಮಾನೇನ ಪಿತರಮುದ್ದಿಶ್ಯ ಮೃತಾಹಾತ್ ತ್ರಯೋದಶೇಽಹನಿ ಕೃತ ಪಾಥೇಯಶ್ರಾದ್ಧಾಖ್ಯೇನ ಕರ್ಮಣಾ ಪಿತುಃ ಭೂಲೋಕಂ ಪರಿತ್ಯಜ್ಯ ವರ್ಷಾಂತೇ ವಸ್ವಾದಿಪುಣ್ಯಲೋಕವಾಪ್ತಿಪರ್ಯಂತಂ ಗಮನಕಾಲೇ ಸುಖಸಿದ್ಧಿ-ರ್ಭೂಯಾದಿತಿ ಭವಂತೋ ಮಹಾಂತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)

* ಅನೇನ ಯಜಮಾನೇನ ಅದ್ಯದಿನೇ ಆಚರಿತ ಯಮಸದನೇ ಗುಣಕಥಯಿತ್ರ್ಯಾಣಾಂ ಸಪತ್ನೀಕ ಚಿತ್ರಗುಪ್ತಸಹಿತಶ್ರವಣದೇವತಾಂತರ್ಯಾಮಿ ಕೇಶವಾದಿ ದ್ವಾದಶಮೂರ್ತ್ಯಾತ್ಮಕ ಮಹಾವಿಷ್ಣುಪ್ರೀತ್ಯರ್ಥಂ ತ್ರಯೋದಶಬ್ರಾಹ್ಮಣಾರಾಧನ ಕರ್ಮ ಯಥಾಶಾಸ್ತ್ರೀಯಮಸ್ತ್ವಿತಿ ಭವಂತೋ ಮಹಾಂತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)

* ಅಸ್ಮೈ ಯಜಮಾನಾಯ ಪೌಲಸ್ತ್ಯ ವೈರೋಚನೀ ದ್ರೌಣಿ ಮಾರುತಿ ಮಾರ್ಕಂ-ಡೇಯ ಪಾರಾಶರ್ಯ ಜಾಮದಗ್ನ್ಯಾದಿವತ್ ದೀರ್ಘಾಯುರ್ಭೂಯಾದಿತಿ ಭವಂತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)

* ಅಸ್ಮಾದ್ಯಜಮಾನಾತ್ ಶೋಕಪ್ರಭೃತಿತಾಪತ್ರಯಾಽಧಿವ್ಯಾಧಯೋ ದೂರತೋಪ-ಗಚ್ಛಂತೀತಿ ಭವಂತೋ ಮಹಾಂತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)

* ಅಸ್ಯ ಯಜಮಾನಃ ಶ್ರೀಮಂತೋ ಧೀಮಂತಃ ಕೀರ್ತಿವಂತೋ ದಯಾವಂತಃ ಸತ್ಯವಂತೋ ದೀರ್ಘಾಯುಷ್ಮಂತಃ ಪಾರಾಃ ಧೀರಾಃ ಶೂರಾಃ ಕುಮಾರೋ ಭೂಯಾಸುರಿತಿ ಭವಂತೋ ಮಹಾಂತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)

* ಏತದ್ಗ್ರಾಮನಿವಾಸಿನೋ ಮಹಾಜನಾಃ ನೀರೋಗಾ ನಿರುಪದ್ರವ ನಿರೀತಯಃ ಸಾಗ್ನಿಹೋತ್ರಾಸ್ಸಮವೇತಾಸ್ಸದಾಚಾರಸಂಪನ್ನಾ ನಿತ್ಯಸಂತೋಷಯುಕ್ತಾನ್ಯೋನ್ಯ ದಯಾಲವಶ್ಚ ಭೂಯಾಸುರಿತಿ ಭವಂತೋ ಮಹಾಂತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)
* ಅಸ್ಮಿನ್ ದೇಶೇ ಸದ್ಯಸ್ಸುವೃಷ್ಟ್ಯಾ ಸರ್ವೇ ನದನದೀತಟಾಕಾಸ್ಸಂಪೂರ್ಣಾಃ ಭೂಯಾಸುರಿತಿ ಭವಂತೋ ಮಹಾಂತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)
* ಅಸ್ಮಿನ್‌ದೇಶೇ ಕ್ಷಾಮಕ್ಷೋಭನಿವೃತ್ತಿಪೂರ್ವಕ ದೇಶೋಽಯಂ ನಿರುಪದ್ರವೋಽಸ್ತ್ವಿತಿ ಭವಂತೋ ಮಹಾಂತೋಽನುಗೃಹ್ಣಂತು ॥ (ಓಂ ತಥಾಽಸ್ತು ॥)
* ಏವಂ ಸರ್ವೇ ಜನಾಃ ಸುಖಿನೋ ಭವಂತು । ಸಮಸ್ತ ಸನ್ಮಂಗಲಾನಿ ಭವಂತು ॥

ಆಚಾರ್ಯರಿಗೆ ದಕ್ಷಿಣೆ ಕೊಟ್ಟು, ಕೃಷ್ಣಾರ್ಪಣ ಬಿಟ್ಟು, ಮಂತ್ರಾಕ್ಷತೆ ಪಡೆದು, ಸಂಕಲ್ಪ ಮಾಡಿ, ಅನ್ನದಾನ ಮಾಡಿ, ಆಶೀರ್ವಾದ ಪಡೆದು, ತಾನು ಭೋಜನ ಸ್ವೀಕರಿಸಬೇಕು.

ಸಪಿಂಡೀಕರಣದ ದಿನದಂದು ಸಂಜೆ ದೇವಸ್ಥಾನಕ್ಕೆ ಹೋಗದೇ ಇದ್ದ ಪಕ್ಷದಲ್ಲಿ ಸಂಜೆ ಗ್ರಾಮದೇವಸ್ಥಾನಕ್ಕೆ ಹೋಗಿ ದೇವರ ದರ್ಶನ ಪಡೆದು, ನಮಸ್ಕರಿಸಿ ಹಣ್ಣುಕಾಯಿ ಮಾಡಿ ಬಂಧುಗಳ (ಸೋದರಮಾವನ) ಮನೆಗೆ ಹೋಗಿ ಆತಿಥ್ಯವನ್ನು ಸ್ವೀಕರಿಸಿ ಬರಬೇಕು.

## ದೀಕ್ಷಾ ಕರ್ತೃನಿಯಮಾಃ

ಮೃತನಾಗಿ ಪ್ರೇತತ್ವವನ್ನು ಹೊಂದಿದ ಚೇತನವು ಮೊದಲನೆಯ ದಿನ ಸ್ಥೂಲದೇಹವನ್ನು ಬಿಟ್ಟು, ಕೇವಲ ಸೂಕ್ಷ್ಮದೇಹದಿಂದ ಕೂಡಿದವನಾಗಿ ಮೊದಲಿನ ಹತ್ತುದಿನಗಳಲ್ಲಿ ಕೊಡಲ್ಪಟ್ಟ ಪಿಂಡಬಲಿಗಳಿಂದ ಉತ್ಪನ್ನವಾದ, ಪೂರ್ಣವಾದ ಪ್ರೇತದೇಹದಿಂದ ಕೂಡಿದವನಾಗಿ ಅತ್ಯಧಿಕವಾದ ಹಸಿವಿನಿಂದ ಏಕೋದ್ದಿಷ್ಟ ಶ್ರಾದ್ಧಾನ್ನಗಳನ್ನು ಭುಂಜಿಸಿ, ಹನ್ನೆರಡನೆಯ ದಿನವೂ ಕರ್ತೃವಿನ ಮನೆಯ ಬಾಗಿಲಲ್ಲೇ ನಿಂತು ಅವನಿಂದ ಕೊಡಬಹುದಾದ ಶ್ರಾದ್ಧಾನ್ನವನ್ನು ಎದುರು ನೋಡುತ್ತಿರುತ್ತದೆ. ಹದಿಮೂರನೆಯ ದಿನದಿಂದ ಹಗಲೂ ರಾತ್ರಿ ಸೇರಿ ಪ್ರತಿದಿನವೂ ೨೪೭ ಯೋಜನಗಳಷ್ಟು ನಡೆದು ವರ್ಷದ ಕೊನೆಯಲ್ಲಿ ಯಮಧರ್ಮರಾಜರ ಆಸ್ಥಾನವನ್ನು ಸೇರುತ್ತದೆ.

ಇಡೀ ವರ್ಷ ಹಸಿವುದಾಹಗಳಿರುವುದರಿಂದ ಅವುಗಳಿಗೆ ಪುತ್ರನು ವರ್ಷಾಬ್ದಿಕ ಪರ್ಯಂತ ಒಂದು ವರ್ಷ ಕಾಲ ಪ್ರತಿನಿತ್ಯವೂ ತಪ್ಪದೆ ಉದಕುಂಭ ಸಹಿತ ಶ್ರಾದ್ಧವನ್ನು ಮಾಡಲೇಬೇಕು. ಅಲ್ಲದೇ ನನ್ನನ್ನು ದುಃಖದಿಂದ ಪಾರು ಮಾಡುವ ಪುತ್ರರು ಅಥವಾ ಬಂಧುಗಳಾದರೂ ಇದ್ದಾರೆಯೇ ಎಂದು ಚಿಂತಿಸುತ್ತಾ, ಯಮಪುರಿಗೆ ಕಾಲಿಡುತ್ತದೆ. ಆದ್ದರಿಂದ ಮೃತಜೀವಿಗೆ ಪುತ್ರಾದಿಗಳು ತಪ್ಪದೇ ಶ್ರದ್ಧೆಯಿಂದ ಶ್ರಾದ್ಧವನ್ನೂ ಜಲದಾನಗಳನ್ನೂ ಕೊಟ್ಟು ತಮ್ಮ ಪಿತೃಗಳನ್ನು ತೃಪ್ತಿಪಡಿಸಿ, ಅವರ ಪರಮಾನುಗ್ರಹಕ್ಕೆ ಪಾತ್ರರಾಗುವುದು ಉತ್ತಮ.

* ಪರಾನ್ನಭೋಜನ, ನಾಂದಿಶ್ರಾದ್ಧ, ಸ್ತ್ರೀಸಂಗ, ಕಾಮ್ಯಕರ್ಮಗಳು, ಕ್ಷೇತ್ರವಿಧಿ, ಗಂಡುಮಕ್ಕಳ ವಿವಾಹ, ಕ್ಷೌರ, ತಿಲತರ್ಪಣ ಮಾಡಬಾರದು. ನರಕಚತುರ್ದಶೀದಿನ ಅಭ್ಯಂಗ ಸ್ನಾನವನ್ನು ಹೊರತುಪಡಿಸಿ ಉಳಿದ ದಿನಗಳಲ್ಲಿ ಅಭ್ಯಂಗಸ್ನಾನ ಮಾಡಬಾರದು. ಹಾಗೂ ನರಕಚತುರ್ದಶೀದಿನ ಶ್ರಾದ್ಧ ಬಂದರೆ ಅಭ್ಯಂಗಸ್ನಾನ ಮಾಡಿ, ಪುನಃ ಸ್ನಾನ ಮಾಡಿ ಶ್ರಾದ್ಧವನ್ನು ಮಾಡಬೇಕು.
* ಯಾವ ಶುಭಕಾರ್ಯ ಹಾಗೂ ಹಬ್ಬವೇ ಮೊದಲಾದ ಆಚರಣೆಗಳನ್ನು ಮಾಡು ವಂತಿಲ್ಲ ಹಾಗೂ ಅಗತ್ಯ ಶುಭಕಾರ್ಯಗಳನ್ನು ಮಾಡಬೇಕಾದ ಸಂದರ್ಭದಲ್ಲಿ ವರ್ಷಪರ್ಯಂತದ ಎಲ್ಲಾ ಮಾಸಿಕಗಳನ್ನು ಅಪಕರ್ಷಣಕ್ರಮದಿಂದ ಮಾಡಿ ನಾಂದಿ ಮಾಡಿ ವಿನಾಯಕಶಾಂತಿ ಮಾಡಿ, ಶುಭಕರ್ಮವನ್ನು ಮಾಡಬೇಕು.
* ಹೆಂಡತಿ, ಮಗ, ಮೊಮ್ಮಗ, ಸಹೋದರ, ಸಹೋದರನ ಮಗ, ಸೊಸೆ, ಚಿಕ್ಕಪ್ಪ ಇವರ ಸಪಿಂಡೀಕರಣಶ್ರಾದ್ಧಾದಿಗಳನ್ನು ಬಿಟ್ಟು ಅನ್ಯರ ಸಪಿಂಡೀಕರಣ ಶ್ರಾದ್ಧಾದಿಗಳನ್ನು ಮಾಡುವಂತಿಲ್ಲ.
* ವೇದಪುರಾಣಸ್ತೋತ್ರಗೀತಾ ಪಾರಾಯಣಾದಿಗಳನ್ನು ಮಾಡಿಸಬೇಕು.
* ಒಂದು ವರ್ಷದೊಳಗೆ ಅಸ್ಥಿಶುದ್ಧಿಹೋಮ ಮಾಡಿ ಅಸ್ಥಿಯನ್ನು ಗಂಗೆಯಲ್ಲಿ ವಿಸರ್ಜಿಸಬೇಕು.
* ಒಂದು ವರ್ಷದವರೆಗೆ ನಿತ್ಯದಲ್ಲಿ ಬ್ರಹ್ಮಯಜ್ಞ ಮಾಡಿ ದೇವ ಋಷಿ ಹಾಗೂ ಆಚಾರ್ಯತರ್ಪಣಗಳನ್ನು ಬಲದಲ್ಲಿ ಕೊಡಬೇಕು. ಪಿತೃತರ್ಪಣ ಕೊಡಲಿಕ್ಕಿಲ್ಲ.
* ಪಿತೃಸಂಬಂಧ ಷೋಡಶಮಾಸಿಕಕರ್ಮ ಮಾಡಬೇಕು. ಹಾಗೂ ಪ್ರತಿನಿತ್ಯವೂ ಉದಕುಂಭಸಹಿತ ಶ್ರಾದ್ಧವನ್ನು ಮಾಡಬೇಕೆಂಬ ನಿಯಮ ಇರುವುದರಿಂದ ಶ್ರಾದ್ಧ ಮಾಡಲು ಕಷ್ಟವಾದರೆ, ಷೋಡಶಮಾಸಿಕದ ಪ್ರತಿ ಶ್ರಾದ್ಧದಲ್ಲಿಯೂ 'ಉದಕುಂಭಶ್ರಾದ್ಧ'ದ ಪ್ರತ್ಯಾಮ್ನಾಯವಾಗಿ ಬ್ರಾಹ್ಮಣರ ಕೂರ್ಚದ ಹತ್ತಿರ ಉದಕುಂಭ ಇಡಬೇಕು. ಅನಂತರ ಬ್ರಾಹ್ಮಣರಿಗೆ ಒಂದು ಉದಕುಂಭವನ್ನು '**ಏಷ ಉದಕುಂಭಃ ಇದಮನ್ನಂ ದತ್ತಂ ನ ಮಮ ॥**' –ಎಂದು ದಾನ ಕೊಡಬೇಕು. (ಸಾಧ್ಯವಿದ್ದರೆ ಆಮಾನ್ನದಾನವನ್ನು ಕೊಡ ಬೇಕು.)
* ಊನಮಾಸಿಕವನ್ನು ೨೭ರಿಂದ ೩೯ನೆಯ ದಿನದೊಳಗೆ ಮಾಡಿದ್ದಲ್ಲಿ ನಕ್ಷತ್ರದೋಷ ಗಳಿರುವುದಿಲ್ಲವೆಂದು ಶಾಸ್ತ್ರಗಳು ತಿಳಿಸಿರುತ್ತವೆ. ಒಂದು ವೇಳೆ ಈ ಮೇಲಿನ ದಿನ ತಪ್ಪಿದಲ್ಲಿ ಜ್ಯೇಷ್ಠಕರ್ತೃವಿನ ಜನ್ಮನಕ್ಷತ್ರಕ್ಕೆ ತಾರಾಬಲವಿರುವ ನಕ್ಷತ್ರ ಈ ಕಾರ್ಯಕ್ಕೆ ಪ್ರಶಸ್ತವಾಗಿರುತ್ತದೆ. ಜನ್ಮದಿವಸ, ಜನ್ಮವಾರ, ಪಾಡ್ಯ, ಷಷ್ಠಿ, ಏಕಾದಶಿ, ಚತುರ್ದಶಿ, ಅಮಾವಾಸ್ಯೆ, ಶುಕ್ರ, ಭಾನು, ಮಂಗಳವಾರಗಳಲ್ಲಿ ತ್ರಿಪುಷ್ಕರಾದಿಯೋಗಗಳು, ನಂದಾತಿಥಿಗಳಲ್ಲಿ ಊನಮಾಸಿಕವನ್ನು ಮಾಡಬಾರದು.

ಕೃತ್ತಿಕಾ, ಜ್ಯೇಷ್ಠಾ, ಆಶ್ಲೇಷಾ, ಹುಬ್ಬಾ, ಪೂರ್ವಾಭಾದ್ರಾ, ಪೂರ್ವಾಷಾಢ,

ಮೂಲ –ಈ ನಕ್ಷತ್ರಗಳಲ್ಲಿ ಊನಮಾಸಿಕಗಳನ್ನು ಮಾಡಿದಲ್ಲಿ ಜ್ಯೇಷ್ಠಪುತ್ರನಿಗೆ ಹಾನಿಯಾಗುತ್ತದೆ. ಹಸ್ತ, ಚಿತ್ರ, ಭರಣಿ, ಸ್ವಾತಿ, ಶ್ರವಣ, ಅಶ್ವಿನಿ, ಮಖಾ, ಅನುರಾಧಾ, ಪುಷ್ಯ, ಶತಭಿಷಾ, ಮೃಗಶಿರಾ –ಈ ಹನ್ನೊಂದು ನಕ್ಷತ್ರಗಳು ಊನಮಾಸಿಕಗಳಿಗೆ ಅತ್ಯಂತ ಶ್ರೇಷ್ಠವಾಗಿವೆ. ಅನಂತರದ ಮಾಸಿಕಗಳನ್ನು ಆಯಾ ನಿರ್ದಿಷ್ಟ ಕಾಲಗಳಲ್ಲಿ ಮಾತ್ರ ಮಾಡಬೇಕೇ ವಿನಾ ಬೇರೆ ಕಾಲಗಳಲ್ಲಿ ಅವನ್ನು ಮಾಡಬಾರದು. ಇತರ ಮಾಸಿಕಗಳೊಂದಿಗೆ ಉತ್ಕರ್ಷಣೆ ಅಥವಾ ಅಪಕರ್ಷಣೆಗೆ ಅವಕಾಶವಿರುದಿಲ್ಲ. ವರ್ಷಾಂತಿಕದ ಬಳಿಕ ಕರ್ಮವಸ್ತ್ರವನ್ನು ನೀರಿನಲ್ಲಿ ವಿಸರ್ಜಿಸಬೇಕು.

* ಷೋಡಶಮಾಸಿಕಶ್ರಾದ್ಧದಲ್ಲಿ ಪರೇಹನಿತರ್ಪಣ ಇರುವುದಿಲ್ಲ. ಹಾಗೂ ಯಜಮಾನನು ಹೆಂಡತಿಗೆ ಪಿತೃಪ್ರಸಾದದ ತಟ್ಟೆ ಎತ್ತಿ ಕೊಡಲಿಕ್ಕಿಲ್ಲ.

* ಊನಷಾಣ್ಮಾಸಿಕ, ಷಾಣ್ಮಾಸಿಕಶ್ರಾದ್ಧಗಳು ಹಾಗೂ ಪತಂಗ ವರ್ಷಾಂತಿಕಶ್ರಾದ್ಧಗಳು ಮೃತತಿಥಿಯ ಲೆಕ್ಕಾಚಾರದಲ್ಲಿ ಹಿಂದೆ-ಮುಂದೆ ಬರುವ ಸಾಧ್ಯತೆಗಳಿವೆ.

## ಷೋಡಶಮಾಸಿಕಶ್ರಾದ್ಧದಿನವಿವರಮ್

✪ **ಮರಣ ಹೊಂದಿದ ದಿನದಿಂದ ೨೧ನೇ ದಿನ = ಆದ್ಯಮಾಸಿಕಶ್ರಾದ್ಧ.**

**ಸಂಕಲ್ಪಃ** ಸೌಮ್ಯಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ ಅಕ್ಷಯ್ಯ ಪುಣ್ಯಲೋಕಾವಾಪ್ತ್ಯರ್ಥಂ....... ॥

✪ **೨೭ರಿಂದ ೨೯ನೇ ದಿನ = ಊನಮಾಸಿಕಶ್ರಾದ್ಧ.**
ಸೌರಿಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ...... ॥

✪ **೨ನೇ ತಿಂಗಳ ಮೃತತಿಥಿಯಂದು = ದ್ವಿತೀಯಮಾಸಿಕಶ್ರಾದ್ಧ.**
ನಗೇಂದ್ರಭವನಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ....... ॥

✪ **೪೧ರಿಂದ ೪೫ ಕವಿಃ = ತ್ರೈಪಾಕ್ಷಿಕಶ್ರಾದ್ಧ.**
ನಗೇಂದ್ರಭವನಾದ್ಗಂಧರ್ವಪುರಪ್ರವೇಶಮಧ್ಯೇ ಪಿತುಃ ಕ್ಷುತ್ತೃಷಾಬಾಧಾ....... ॥

✪ **೩ನೆಯ ತಿಂಗಳ ಮೃತತಿಥಿಯಂದು = ತೃತೀಯಮಾಸಿಕಶ್ರಾದ್ಧ.**
ಗಂಧರ್ವಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾ...............॥

✪ **೪ನೆಯ ತಿಂಗಳ ಮೃತತಿಥಿಯಂದು = ಚತುರ್ಥಮಾಸಿಕಶ್ರಾದ್ಧ.**
ಶೈಲಾಗಮಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ.... ॥

✪ **೫ನೆಯ ತಿಂಗಳ ಮೃತತಿಥಿಯಂದು = ಪಂಚಮಮಾಸಿಕಶ್ರಾದ್ಧ.**

ಕ್ರೌಂಚಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ.... ॥

- **೧೭೧ರಿಂದ ೧೮೦ (ವಿಶೇಷ ಗೋದಾನ) ಕಥಯ =ಊನಷಾಣ್ಮಾಸಿಕಶ್ರಾದ್ಧ.**

ಕ್ರೂರಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ.... ॥

- **೬ನೆಯ ತಿಂಗಳ ಮೃತತಿಥಿಯಂದು = ಷಾಣ್ಮಾಸಿಕಶ್ರಾದ್ಧ.**

ವಿಚಿತ್ರಭವನಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ.... ॥

- **೭ನೆಯ ತಿಂಗಳ ಮೃತತಿಥಿಯಂದು = ಸಪ್ತಮಮಾಸಿಕಶ್ರಾದ್ಧ.**

ಬಹ್ವಾಪದಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾದಾ ನಿವಾರಣಪೂರ್ವಕ... ॥

- **೮ನೆಯ ತಿಂಗಳ ಮೃತತಿಥಿಯಂದು = ಅಷ್ಟಮಮಾಸಿಕಶ್ರಾದ್ಧ.**

ದುಃಖಪ್ರದಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ..... ॥

- **೯ನೆಯ ತಿಂಗಳ ಮೃತತಿಥಿಯಂದು = ನವಮಮಾಸಿಕಶ್ರಾದ್ಧ.**

ನಾನಾಕ್ರಂದಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ.... ॥

- **೧೦ನೆಯ ತಿಂಗಳ ಮೃತತಿಥಿಯಂದು = ದಶಮಮಾಸಿಕಶ್ರಾದ್ಧ.**

ಸುತಪ್ತಭವನಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ.... ॥

- **೧೧ನೆಯ ತಿಂಗಳ ಮೃತತಿಥಿಯಂದು = ಏಕಾದಶಮಾಸಿಕಶ್ರಾದ್ಧ.**

ರೌದ್ರಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ.... ॥

- **೩೪೧ರಿಂದ ೩೫೫ ತನ್ವಂಗಿ = ಊನಾಬ್ದಿಕಶ್ರಾದ್ಧ.**

ಪಯೋವರ್ಷಣಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾ ........ ॥

- **(ಮೃತ ತಿಥಿ) ವರ್ಷಾಂತಿಕಶ್ರಾದ್ಧ**

ಶೀತಾಢ್ಯಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾನಿವಾರಣಪೂರ್ವಕ .....॥

(ಪ್ರಾಯಶ್ಚಿತ್ತ ಹೋಮ ಹಾಗೂ ಭಕ್ಷ್ಯದಾನ ವಿಶೇಷ.)

- **೩೬೧ರಂದು = ಪತಂಗಶ್ರಾದ್ಧ.**

(ಪ್ರಾಯಶ್ಚಿತ್ತ ಹೋಮ, ಕ್ಷಣಿಸಿ ಬ್ರಾಹ್ಮಣರ ಆರಾಧನೆ ವಿಶೇಷ)

ಬಹುಭೀತಿಧರ್ಮಭವನಪುರಪ್ರವೇಶಕಾಲೇ ಪಿತುಃ ಕ್ಷುತ್ತೃಷಾಬಾಧಾ....... ॥

* * *

## ಷಷ್ಠಗುಚ್ಛ

# ಅಸ್ಥಿ ಶುದ್ಧಿಃ



ಅಸ್ಥಿಶುದ್ಧಿಕರ್ಮಾಂಗವನ್ನು ಮನೆಯಲ್ಲಿ ಇಲ್ಲವೇ ಕ್ಷೇತ್ರದಲ್ಲಿ ಮಾಡಬಹುದು. ಒಂದು ವರ್ಷದ ಒಳಗಾದರೆ ಮೂರು ಪಿಂಡಪ್ರದಾನ ಮಾಡಬೇಕು. ಒಂದು ವರ್ಷ ದಾಟಿದರೆ ಎಲ್ಲಾ ಪಿತೃಗಳಿಗೂ ಪಿಂಡಪ್ರದಾನ ಮಾಡಬೇಕು. ದಶಾಹದ ಮೊದಲು ಅಸ್ಥಿನಿಕ್ಷೇಪ ಮಾಡುವುದಿದ್ದರೆ ಏಕೋದ್ದಿಷ್ಟವಿಧಿಯಿಂದ ಶ್ರಾದ್ಧ ಮಾಡಬೇಕು. ಸಪಿಂಡೀಕರಣದ ಬಳಿಕ ಮಾಡುವುದಿದ್ದರೆ ಪಾರ್ವಣವಿಧಿಯಿಂದ ಶ್ರಾದ್ಧ ಮಾಡಬೇಕು. ಇಲ್ಲದಿದ್ದರೆ ಹಿರಣ್ಯದಿಂದದಲಾದರೂ ತಿಲತರ್ಪಣದಿಂದಲಾದರೂ ಶ್ರಾದ್ಧವನ್ನು ಮಾಡಬೇಕು.

ಸ್ನಾನ ಮಾಡಿ ಮೈಒರೆಸಿಕೊಂಡು, ಗೋಪೀಚಂದನ ಧರಿಸಿ, ಪೂರ್ವಾಭಿಮುಖವಾಗಿ ಕುಳಿತು, ಆಚಮನ ಮಾಡಿ, ಆಚಾರ್ಯರಿಂದ ನಾಲ್ಕು ಎಳೆಯ ಪವಿತ್ರ ಪಡೆದು, ಧರಿಸಿ, ಸಂಕಲ್ಪ ಮಾಡಬೇಕು.

**ಗಂಗೇ ಚ ಯಮುನೇ ಚೈವ ..... ಪಿತ್ರಂತರ್ಗತ ಪ್ರಾಣಸ್ಥಲಕ್ಷ್ಮೀಜನಾರ್ದನ....** (ಎಡ) **ಅಸ್ಮತ್ಪಿತುಃ ......ಶರ್ಮಣಃ ....ಗೋತ್ರಸ್ಯ ವಸುರೂಪಸ್ಯ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸ್ಯ ಪೂರ್ಣಾನುಗ್ರಹಪ್ರಾಪ್ತ್ಯರ್ಥೇ ಅಸ್ಥಿಶುದ್ಧಿಕರ್ತುಂ** (ಬಲ) **ಮಮ ದೇಹಶುದ್ಧ್ಯರ್ಥಂ ಪಂಚಗವ್ಯಮೇಲನಪೂರ್ವಕ ಪುಣ್ಯಾಹವಾಚನಾಖ್ಯಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

ಕರ್ಮಿಗಳು ಎಳ್ಳು, ಚಿಲ್ಲರೆ, ದರ್ಭೆ, ತುಲಸಿ ಹಿಡಿದು ನಿಂತಲ್ಲೇ ಮೂರು ಪ್ರದಕ್ಷಿಣೆ ಬಂದು,

**ವಿಪ್ರೌಘದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।**
**ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಮ್ ॥**

ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ ಅವುಗಳನ್ನು ಮಂಡಲದಲ್ಲಿಟ್ಟು,

(ಎಡ) **ಅಸ್ಮತ್ಪಿತುರುದ್ದಿಶ್ಯ ಅಸ್ಥಿಶುದ್ಧಿಕರ್ತುಂ ಮಮ ಅಧಿಕಾರ ಸಂಪದಸ್ತ್ವಿತಿ ಭವಂತೋ ಬ್ರುವಂತು ॥ (ಸಂಪದಸ್ತು) ॥**

–ಎಂದು ಪ್ರತಿವಚನ ಪಡೆದು, ಪಂಚಗವ್ಯ, ಪುಣ್ಯಾಹವಾಚನ ಮಾಡಿಸಿ, ಪ್ರೋಕ್ಷಣೆ

ಸಂದರ್ಭದಲ್ಲಿ ಯಜಮಾನ ಅಸ್ಥಿಸಂಚಯನದಿನದಂದು ಹೂತಿಟ್ಟ ಅಸ್ಥಿಘಟದ ಸ್ಥಳದಲ್ಲಿ ಪಂಚಗವ್ಯ ಪ್ರೋಕ್ಷಣೆ ಮಾಡಿ ಕೊನೆಗೆ ತನಗೂ ಆಚಾರ್ಯರಿಂದ ಪ್ರೋಕ್ಷಣೆ ಮಾಡಿಸಿಕೊಂಡು ಪುಣ್ಯಾಹ ಮುಗಿಸಿ, ಪಂಚಗವ್ಯವನ್ನು ಸ್ವಲ್ಪ ಬೇರೆಯೇ ತೆಗೆದಿಟ್ಟು, ತಾನು ಪಂಚಗವ್ಯ ಪ್ರಾಶನ ಮಾಡಿ, ಅಸ್ಥಿಶುದ್ಧಿಹೋಮವನ್ನು ಯಜಮಾನನೇ ಮಾಡುವುದಾದರೆ ಅಸ್ಥಿಶುದ್ಧಿಶ್ರಾದ್ಧದ ಅನಂತರ ಮಾಡಬೇಕು. ಇಲ್ಲದಿದ್ದರೆ ಈ ಸಂದರ್ಭದಲ್ಲಿ ಆಚಾರ್ಯರಿಗೆ ಋತ್ವಿಗ್ವರಣೆಯನ್ನು ಮಾಡಿ ಹೋಮವನ್ನು ಆಚಾರ್ಯರಿಂದ ಮಾಡಿಸಬೇಕು.

## ಅನ್ವಾಧಾನಮ್

**ಅಸ್ಮಿನ್ನನ್ವಾಹಿತೇಽಗ್ನೌ ..... ಅತ್ರ ಪ್ರಧಾನದೇವತಾಂ ಪಿತರಃ ಉದೀರತಾಮಿತಿ ಚತುರ್ದಶಮಂತ್ರೈಃ, ಅಷ್ಟೋತ್ತರಶತಸಂಖ್ಯಯಾ (ಶ್ರೌತಪಿತೃಸೂಕ್ತೇನ ಪ್ರತ್ಯೃಚಮ್ ಏಕೈಕವಾರಂ ವಾ) ತಿಲಾಜ್ಯದ್ರವ್ಯೇಣ ಆಜ್ಯಶೇಷೇಣ ಸ್ವಿಷ್ಟಕೃತಮಿತ್ಯಾದಿ ॥**

ಪ್ರಧಾನಹೋಮದಲ್ಲಿ '**ಉದೀರತಾ**' ಹದಿನಾಲ್ಕು ಮಂತ್ರಗಳಿಂದ ಏಳು ಬಾರಿ ಹೋಮ ಮಾಡಿ ಎಂಟನೆಯ ಬಾರಿ ಹತ್ತು ಮಂತ್ರಗಳಿಂದ ಮಾತ್ರ ಆಹುತಿ 14 x 7=98+10=108 –ಹೀಗೆ ಉದ್ದೇಶತ್ಯಾಗಗಳನ್ನು ಹೇಳದೆ ಆಹುತಿಗಳನ್ನು ಕೊಟ್ಟು (ಇಲ್ಲವೇ ಪುಟಸಂಖ್ಯೆ 574) ಪಿತೃಸೂಕ್ತದ ೧೦೮ ಮಂತ್ರಗಳಿಂದಲೂ ಕೊಡಬಹುದು.) ಹೋಮಾಂತ್ಯದಲ್ಲಿ ಪ್ರಣೀತ, ಭಸ್ಮ, ಸಂಪಾತಾಜ್ಯವನ್ನು, ತೆಗೆದಿಡಬೇಕು.

ಉದೀರತಾಮಿತಿ ಚತುರ್ದಶರ್ಚಸ್ಯ ಸೂಕ್ತಸ್ಯ ಶಂಖಃ ಪಿತರಸ್ತ್ರಿಷ್ಟುಪ್ । ಏಕಾದಶೋ ಜಗತೀ । ಅಸ್ಥಿಶುದ್ಧಿಪ್ರಧಾನ ತಿಲಾಜ್ಯಹೋಮೇ ವಿನಿಯೋಗಃ ॥

**ಓಮ್ ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ । ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ಸ್ವಾಹಾ ॥ ೧ ॥ ಇದಂ ಪಿತೃಭ್ಯೋ ನಮೋ ಅಸ್ತ್ವದ್ಯ ಯೇ ಪೂರ್ವಾಸೋ ಯ ಉಪರಾಸ ಈಯುಃ । ಯೇ ಪಾರ್ಥಿವೇ ರಜಸ್ಯಾ ನಿಷತ್ತಾ ಯೇ ವಾ ನೂನಂ ಸುವೃಜನಾಸು ವಿಕ್ಷು ಸ್ವಾಹಾ ॥ ೨ ॥ ಆಹಂ ಪಿತೄನ್ ತ್ಸುವಿದತ್ರಾಂ ಅವಿತ್ಸಿ ನಪಾತಂ ಚ ವಿಕ್ರಮಣಂ ಚ ವಿಷ್ಣೋಃ । ಬರ್ಹಿಷದೋ ಯೇ ಸ್ವಧಯಾ ಸುತಸ್ಯ ಭಜಂತ ಪಿತ್ವಸ್ತ ಇಹಾಗಮಿಷ್ಠಾಃ ಸ್ವಾಹಾ ॥ ೩ ॥ ಬರ್ಹಿಷದಃ ಪಿತರ ಊತ್ಯರ್ವಾಗಿಮಾ ವೋ ಹವ್ಯಾ ಚಕೃಮಾ**

ಜುಷಧ್ವಮ್ । ತ ಆ ಗತಾವಸಾ ಶಂತಮೇನಾಽಥಾ ನಃ ಶಂ ಯೋರರಪೋ ದಧಾತ ಸ್ವಾಹಾ ॥ ೪ ॥ ಉಪಹೂತಾಃ ಪಿತರಃ ಸೋಮ್ಯಾಸೋ ಬರ್ಹಿಷ್ಯೇಷು ನಿಧಿಷು ಪ್ರಿಯೇಷು । ತ ಆ ಗಮಂತು ತ ಇಹ ಶ್ರುವಂತ್ವಧಿ ಬ್ರುವಂತು ತೇಽವಂತ್ವಸ್ಮಾನ್ ಸ್ವಾಹಾ ॥ ೫ ॥ ಆಚ್ಯಾ ಜಾನು ದಕ್ಷಿಣತೋ ನಿಷದ್ಯೇಮಂ ಯಜ್ಞಮಭಿ ಗೃಣೀತ ವಿಶ್ವೇ । ಮಾ ಹಿಂಸಿಷ್ಟ ಪಿತರಃ ಕೇನ ಚಿನ್ನೋ ಯದ್ವ ಆಗಃ ಪುರುಷತಾ ಕರಾಮ ಸ್ವಾಹಾ ॥ ೬ ॥ ಆಸೀನಾಸೋ ಅರುಣೀನಾಮುಪಸ್ಥೇ ರಯಿಂ ಧತ್ತ ದಾಶುಷೇ ಮರ್ತ್ಯಾಯ । ಪುತ್ರೇಭ್ಯಃ ಪಿತರಸ್ತಸ್ಯ ವಸ್ವಃ ಪ್ರ ಯಚ್ಛತ ತ ಇಹೋರ್ಜಂ ದಧಾತ ಸ್ವಾಹಾ ॥ ೭ ॥ ಯೇ ನಃ ಪೂರ್ವೇ ಪಿತರಃ ಸೋಮ್ಯಾಸೋಽನೂಹಿರೇ ಸೋಮಪೀಥಂ ವಸಿಷ್ಠಾಃ । ತೇಭಿರ್ಯಮಃ ಸಂರರಾಣೋ ಹವೀಂಷ್ಯುಶನ್ನುಶದ್ಭಿಃ ಪ್ರತಿಕಾಮಮತ್ತು ಸ್ವಾಹಾ ॥ ೮ ॥ ಯೇ ತಾತೃಷುರ್ದೇವತ್ರಾ ಜೇಹಮಾನಾ ಹೋತ್ರಾವಿದಃ ಸ್ತೋಮತಷ್ಟಾಸೋ ಅರ್ಕೈಃ । ಆಗ್ನೇ ಯಾಹಿ ಸುವಿದತ್ರೇಭಿರರ್ವಾಙ್ ಸತ್ಯೈಃ ಕವ್ಯೈಃ ಪಿತೃಭಿರ್ಘರ್ಮಸದ್ಭಿಃ ಸ್ವಾಹಾ ॥ ೯ ॥ ಯೇ ಸತ್ಯಾಸೋ ಹವಿರದೋ ಹವಿಷ್ಪಾ ಇಂದ್ರೇಣ ದೇವೈಃ ಸರಥಂ ದಧಾನಾಃ । ಆಗ್ನೇ ಯಾಹಿ ಸಹಸ್ರಂ ದೇವವಂದೈಃ ಪರೈಃ ಪೂರ್ವೈಃ ಪಿತೃಭಿರ್ಘರ್ಮಸದ್ಭಿಃ ಸ್ವಾಹಾ ॥ ೧೦ ॥ ಅಗ್ನಿಷ್ವಾತ್ತಾಃ ಪಿತರ ಏಹ ಗಚ್ಛತ ಸದಃಸದಃ ಸದತ ಸುಪ್ರಣೀತಯಃ । ಅತ್ತಾ ಹವೀಂಷಿ ಪ್ರಯತಾನಿ ಬರ್ಹಿಷ್ಯಥಾ ರಯಿಂ ಸರ್ವವೀರಂ ದಧಾತನ ಸ್ವಾಹಾ ॥ ೧೧ ॥ ತ್ವಮಗ್ನ ಈಳಿತೋ ಜಾತವೇದೋಽವಾಡ್ಢವ್ಯಾನಿ ಸುರಭೀಣಿ ಕೃತ್ವೀ । ಪ್ರಾದಾಃ ಪಿತೃಭ್ಯಃ ಸ್ವಧಯಾ ತೇ ಅಕ್ಷನ್ನದ್ಧಿ ತ್ವಂ ದೇವ ಪ್ರಯತಾ ಹವೀಂಷಿ ಸ್ವಾಹಾ ॥ ೧೨ ॥ ಯೇ ಚೇಹ ಪಿತರೋ ಯೇ ಚ ನೇಹ ಯಾँಶ್ಚ ವಿದ್ಮ ಯಾँ ಉ ಚ ನ ಪ್ರವಿದ್ಮ । ತ್ವಂ ವೇತ್ಥ ಯತಿ ತೇ ಜಾತವೇದಃ ಸ್ವಧಾಭಿರ್ಯಜ್ಞಂ

**ಸುಕೃತಂ ಜುಷಸ್ವ ಸ್ವಾಹಾ ॥ ೧೩ ॥ ಯೇ ಅಗ್ನಿದಗ್ಧಾ ಯೇ ಅನಗ್ನಿದಗ್ಧಾ ಮಧ್ಯೇ ದಿವಃ ಸ್ವಧಯಾ ಮಾದಯಂತೇ। ತೇಭಿಃ ಸ್ವರಾಳಸುನೀತಿಮೇತಾಂ ಯಥಾವಶಂ ತನ್ವಂ ಕಲ್ಪಯಸ್ವ ಸ್ವಾಹಾ ॥ ೧೪ ॥**

ಯಜಮಾನನು ಅಸ್ಥಿಸಂಚಯನದಿನದಂದು, ಹೂತಿಟ್ಟ ಅಸ್ಥಿಘಟದ ಸ್ಥಳದಿಂದ ಅಸ್ಥಿಘಟವನ್ನು ಮಂತ್ರಪೂರ್ವಕವಾಗಿ ಮೇಲೆ ತೆಗೆಯಬೇಕು.

ಉಪಸರ್ಪೇತಿ ಚತಸೃಣಾಂ ಪಿತರಸ್ತ್ರಿಷ್ಟುಪ್ । ಅಸ್ಥಿಗ್ರಹಣಾರ್ಥೇ ವಿನಿಯೋಗಃ॥

**ಓಮ್ ಉಪ ಸರ್ಪ ಮಾತರಂ .......ಸಾದನಾತೇ ಮಿನೋತು ॥**

(ಪುಟ ಸಂಖ್ಯೆ 138) ಅಸ್ಥಿಘಟವನ್ನು ಹಿಡಿದು ನದೀತೀರದ ಬಳಿ ಬಂದು, ದಕ್ಷಿಣಾಗ್ರವಾಗಿ ನೆಲದಲ್ಲಿ ದರ್ಭೆ ಹರಡಿ, ದರ್ಭೆಯ ಮೇಲೆ ಅಸ್ಥಿಘಟವನ್ನು ಇಟ್ಟು, ಮುಚ್ಚಳವನ್ನು ತೆಗೆಯಬೇಕು. ಪೂರ್ವಾಭಿಮುಖವಾಗಿ ಕುಳಿತು, ಪವಿತ್ರ ಹೊರ ತೆಗೆದು, ಆಚಮನ ಮಾಡಿ, ಪುನಃ ಪವಿತ್ರ ಧರಿಸಿ, ಸಂಕಲ್ಪ ಮಾಡಬೇಕು.

**ಅದ್ಯ ಪೂರ್ವೋಚ್ಚರಿತ .... (ಎಡ) ಅಸ್ಮತ್ಪಿತುಃ ......ಶರ್ಮಣಃ .....ಗೋತ್ರಸ್ಯ ವಸುರೂಪಸ್ಯ ತದಂತರ್ಯಾಮಿಪ್ರಾಣಸ್ಥಪ್ರದ್ಯುಮ್ನಸ್ಯ ಪೂರ್ಣಾನುಗ್ರಹಪ್ರಾಪ್ತ್ಯರ್ಥೇ ಮಮ ಪಿತುರುದ್ದಿಶ್ಯ ಅಸ್ಥಿಶುದ್ಧಿಕರ್ತುಂ (ಬಲ) ಮಮ ದೇಹಶುದ್ಧ್ಯರ್ಥಂ ದಶವಿಧಸ್ನಾನಮಹಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥** ಎಂದು ಬ್ರಹ್ಮದಂಡ ಇಟ್ಟು,

**ದಶವಿಧಸ್ನಾನಂ ಕರ್ತುಂ ಮಮ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ॥ (ಅಧಿಕಾರಸಂಪದಸ್ತು)** –ಎಂದು ಪ್ರತಿವಚನ ಪಡೆದು,

ಅಸ್ಥಿಘಟಕ್ಕೆ ನೀರು ಹಾಕಿ ಅದರ ಬಾಯಿಯನ್ನು ಕೈಯಿಂದ ಮುಚ್ಚಿ, ನೀರು ಮಾತ್ರ ಹೊರಹಾಕಿ ತೊಳೆದು, ಘಟವನ್ನು ದಡದಲ್ಲಿಟ್ಟು, ಪೂರ್ವಮುಖವಾಗಿ ಮುಳುಗಿ, ಸ್ನಾನ ಮಾಡಿ, ಗೋಮಯವನ್ನು ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿ, **'ಗಂಧದ್ವಾರಾಂ'** ಮಂತ್ರದಿಂದ ಸ್ವಲ್ಪ ಅಸ್ಥಿಘಟಕ್ಕೆ ಮತ್ತೆ, ಸ್ವಲ್ಪ ತನ್ನ ತಲೆಗೆ ಹಾಕಿಕೊಂಡು (ಎಡ) ಅಸ್ಥಿಘಟದ ಬಾಯಿಯನ್ನು ಕೈಯಿಂದ ಮುಚ್ಚಿ, ದಕ್ಷಿಣಕ್ಕೆ ಮುಖಮಾಡಿ, ಮುಳುಗಿ ಸ್ನಾನ ಮಾಡಿ, ಹೀಗೆ (ಬಲ) ಗೋಮೂತ್ರವನ್ನು **'ದೇವಸ್ಯ ತ್ವಾ'** ಮಂತ್ರದಿಂದ ಸ್ವಲ್ಪ ಅಸ್ಥಿಘಟಕ್ಕೆ ಮತ್ತೆ ಸ್ವಲ್ಪ ತನ್ನ ತಲೆಗೆ ಹಾಕಿಕೊಂಡು (ಎಡ) ಅಸ್ಥಿಘಟದ ಬಾಯಿಯನ್ನು ಕೈಯಿಂದ ಮುಚ್ಚಿ, ದಕ್ಷಿಣಕ್ಕೆ ಮುಖಮಾಡಿ, ಮುಳುಗಿ ಸ್ನಾನ ಮಾಡಿ, –ಹೀಗೆ ಈ ಕ್ರಮದಿಂದಲೇ ಮುಂದಿನ ದ್ರವ್ಯಗಳಿಂದ ಪ್ರತ್ಯೇಕವಾಗಿ ಸ್ನಾನ ಮಾಡಬೇಕು. **'ಆಪ್ಯಾಯಸ್ವ'** ಮಂತ್ರದಿಂದ ಹಾಲನ್ನು, **'ದಧಿಕ್ರಾವ್ಣೋ'** ಮಂತ್ರದಿಂದ ಮೊಸರನ್ನು, **'ಘೃತಂ ಮಿಮಿಕ್ಷೇ'** ಮಂತ್ರದಿಂದ ತುಪ್ಪವನ್ನು, **'ದೇವಸ್ಯ ತ್ವಾ'** ಮಂತ್ರದಿಂದ ಕುಶೋದಕವನ್ನು, **'ಮಧುವಾತಾ'** ಮಂತ್ರದಿಂದ ಜೇನುತುಪ್ಪವನ್ನು, **'ಸ್ಯೋನಾ ಪೃಥಿವೀ'** ಮಂತ್ರದಿಂದ ಮೃತ್ತಿಕೆಯನ್ನು,

**'ಮಾನಸ್ತೋಕೇ'** ಮಂತ್ರದಿಂದ ಭಸ್ಮವನ್ನು, **'ಇದಂ ವಿಷ್ಣು'** ಮಂತ್ರದಿಂದ ಪುನಃ ಮುಳುಗಿ ಸ್ನಾನ (ವಾರಿಸ್ನಾನ) ಮಾಡಬೇಕು. ಘಟವನ್ನು ದಡದ ಮೇಲಿಟ್ಟು (ಬಲ) ಪೂರ್ವಾಭಿಮುಖವಾಗಿ ಒಂದು ಬಾರಿ ಮುಳುಗಿ, ಶಂಖಮುದ್ರೆಯಿಂದ ನೀರನ್ನು ಎತ್ತಿ ಪುರುಷ ಸೂಕ್ತಮಂತ್ರಗಳಿಂದ ತಲೆಗೆ ನೀರನ್ನು ಹಾಕಿಕೊಂಡು ಸ್ನಾನ ಮಾಡಿ ಮೈಒರೆಸಿ ಕೊಂಡು ಗೋಪೀಚಂದನ ಧರಿಸಿ, ಪೂರ್ವಾಭಿಮುಖವಾಗಿ ಕುಳಿತು, ಪವಿತ್ರ ಹೊರ ತೆಗೆದು, ಆಚಮನ ಮಾಡಿ, ಪುನಃ ಅದೇ ಪವಿತ್ರವನ್ನು ಧರಿಸಿ, ಅಸ್ಥಿಘಟವನ್ನು ದರ್ಭೆಯಿಂದ ಮುಟ್ಟಿ **'ಏತೋನ್ವಿಂದ್ರಂ.......ಸಿಷಾಸಸಿ ॥'** ಮಂತ್ರ ಜಪಿಸಬೇಕು. ಅನಂತರ ದರ್ಭೆಯಿಂದ ಹಿಂದೆ ಪುಣ್ಯಾಹಸಮಯದಲ್ಲಿ ಬೇರೆ ತೆಗೆದಿಟ್ಟ ಪಂಚಗವ್ಯದಿಂದ ಮುಂದಿನ **'ಅತೋ ದೇವಾ'**ದಿ ಮಂತ್ರಗಳಿಂದ ಅಸ್ಥಿಗೆ ಪ್ರೋಕ್ಷಣೆ ಮಾಡಬೇಕು.

**'ಅತೋ ದೇವಾ.....ದಾಮಭಿಃ ॥'** (ಪುಟಸಂಖ್ಯೆ559) **'ಏತೋನ್ವಿಂದ್ರಂ....... ......ಸಿಷಾಸಸಿ ॥'** (ಪುಟಸಂಖ್ಯೆ 68) **'ನ ತಮಂಹೋ....ನ ಆಯುಃ ॥'** (ಪುಟಸಂಖ್ಯೆ 268) **'ಶುಚೀವೋ .....ಪಾವಕಾಃ ॥'** (ಪುಟಸಂಖ್ಯೆ 272)

**ಓಮ್ ಇತಿ ವಾ ಇತಿ ಮೇ ಮನೋ ಗಾಮಶ್ವಂ ಸನುಯಾಮಿತಿ । ಕುವಿತ್ಸೋಮಸ್ಯಾಪಾಮಿತಿ ॥ ೧ ॥ ಪ್ರ ವಾತಾ ಇವ ದೋಧತ ಉನ್ಮಾ ಪೀತಾ ಅಯಂಸತ । ಕುವಿತ್ಸೋಮಸ್ಯಾಪಾಮಿತಿ ॥ ೨ ॥ ಉನ್ಮಾ ಪೀತಾ ಅಯಂಸತ ರಥಮಶ್ವಾ ಇವಾಶವಃ । ಕುವಿತ್ಸೋಮಸ್ಯಾಪಾಮಿತಿ ॥ ೩ ॥ ಉಪ ಮಾ ಮತಿರಸ್ಥಿತ ವಾಶ್ರಾ ಪುತ್ರಮಿವ ಪ್ರಿಯಮ್ । ಕುವಿತ್ಸೋಮಸ್ಯಾಪಾ-ಮಿತಿ ॥ ೪ ॥ ಅಹಂ ತಷ್ಟೇವ ವಂಧುರಂ ಪರ್ಯಚಾಮಿ ಹೃದಾ ಮತಿಮ್ । ಕುವಿತ್ಸೋಮಸ್ಯಾಪಾಮಿತಿ ॥ ೫ ॥ ನಹಿ ಮೇ ಅಕ್ಷಿಪಚ್ಚನಾಚ್ಛಾಂತ್ಸುಃ ಪಂಚ ಕೃಷ್ಟಯಃ । ಕುವಿತ್ಸೋಮಸ್ಯಾಪಾಮಿತಿ ॥ ೬ ॥ ನಹಿ ಮೇ ರೋದಸೀ ಉಭೇ ಅನ್ಯಂ ಪಕ್ಷಂ ಚನ ಪ್ರತಿ । ಕುವಿತ್ಸೋಮಸ್ಯಾಪಾಮಿತಿ ॥ ೭ ॥ ಅಭಿ ದ್ಯಾಂ ಮಹಿನಾ ಭುವಮಭೀ೩ಮಾಂ ಪೃಥಿವೀಂ ಮಹೀಮ್ । ಕುವಿತ್ಸೋ-ಮಸ್ಯಾಪಾಮಿತಿ ॥ ೮ ॥ ಹಂತಾಹಂ ಪೃಥಿವೀಮಿಮಾಂ ನಿ ದಧಾನೀಹ ವೇಹ ವಾ । ಕುವಿತ್ಸೋಮಸ್ಯಾಪಾಮಿತಿ ॥ ೯ ॥ ಓಷಮಿತ್ಪೃಥಿವೀಮಹಂ**

**ಜಂಘಾನೀಹ ವೇಹ ವಾ । ಕುವಿತ್ಸೋಮಸ್ಯಾಪಾಮಿತಿ ॥ ೧೦ ॥ ದಿವಿ ಮೇ ಅನ್ಯಃ ಪಕ್ಷೋಽಧೋ ಅನ್ಯಮಚೀಕೃಷಮ್ । ಕುವಿತ್ಸೋಮಸ್ಯಾಪಾಮಿತಿ ॥ ೧೧ ॥ ಅಹಮಸ್ಮಿಮಹಾಮಹೋಽಭಿನಭ್ಯಮುದೀಷಿತಃ । ಕುವಿತ್ಸೋಮಸ್ಯಾ–ಪಾಮಿತಿ ॥ ೧೨ ॥ ಗೃಹೋಯಾಮ್ಯರಂಕೃತೋ ದೇವೇಭ್ಯೋ ಹವ್ಯವಾಹನಃ । ಕುವಿತ್ಸೋಮಸ್ಯಾಪಾಮಿತಿ ॥ ೧೩ ॥**

**'ಯದಂತಿ .....ಮಾಮ್ ॥'** (ಪುಟಸಂಖ್ಯೆ 270) **'ಮಮಾಗ್ನೇ ....ಮೇದಿನಂ ತ್ವಾ ॥'** (ಪುಟಸಂಖ್ಯೆ 267) **'ಕದ್ರುದ್ರಾಯ ......ವೇದಃ ॥'** (ಪುಟಸಂಖ್ಯೆ 200)

ತುಳಸಿ ನೀರು ಹಿಡಿದು,

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ..... ನಾರಾಯಣಾಯೇತಿ ಸಮರ್ಪಯಾಮಿ ॥ ಅಸ್ಥಿಶುದ್ಧಿಕರ್ಮಣಾ ಪಾಪಾಪಹ ಪ್ರಾಣಸ್ಥಶ್ರೀಮಹಾವಿಷ್ಣುಃ ಪ್ರೀಯತಾಮ್ ॥** –ಎಂದು ಕೆಳಗೆ ಬಿಟ್ಟು, **ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತ–ಗೋವಿಂದಾಯ ನಮಃ ॥** –ಎಂದು ತುಳಸಿಯನ್ನು ಕಿವಿಯಲ್ಲಿಟ್ಟು, ಆಚಮನ ಮಾಡಿ ಪವಿತ್ರ ಬಿಚ್ಚಿ ಪುನಃ ಮೂರು ಎಳೆಯ ಪವಿತ್ರ ಪಡೆದು ಧರಿಸಿ,

**ಅದ್ಯ ಪೂರ್ವೋಚ್ಚರಿತ ...ಅಸ್ಥಿಶುದ್ಧಿಶ್ರಾದ್ಧಾಖ್ಯಂ ಕರ್ಮ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

–ಎಂದು ಪ್ರತಿವಚನ ಪಡೆದು, ಸಾಂವತ್ಸರಿಕ ಶ್ರಾದ್ಧಕ್ರಮದಂತೆಯೇ ಹಿಟ್ಟಿನಿಂದ ಶ್ರಾದ್ಧ ಮಾಡಬೇಕು. (ಇಲ್ಲಿ ವೈಶ್ವದೇವ ಮತ್ತು ಅಗ್ನೌಕರಣ ಇಲ್ಲ.) ಶ್ರಾದ್ಧದ ಕೃಷ್ಣಾರ್ಪಣ ಬಿಟ್ಟು ಅಸ್ಥಿಗೆ ಹೋಮದ ಪ್ರಣೀತಜಲ, ಸಂಪಾತಾಜ್ಯ, ಭಸ್ಮಹಾಕಬೇಕು.

ಅನಂತರ ಒಂದು ತಾಮ್ರ ಅಥವಾ ಹಿತ್ತಾಳೆ ಸಂಪುಟದಲ್ಲಿ ಪಚ್ಚೆಕರ್ಪೂರ, ಕಸ್ತೂರಿ, ಕೇಸರಿಯಿಂದ ಕೂಡಿದ ಗಂಧವನ್ನಿರಿಸಿ ಅದರ ಮೇಲೆ ಅಸ್ಥಿಗಳನ್ನು ಚೆನ್ನಾಗಿ ಒರೆಸಿ ಸಂಪುಷ್ಟದಲ್ಲಿಡಬೇಕು. ಅನಂತರ ಸಂಪುಷ್ಟದ ಬಾಯಿಮುಚ್ಚಿ ನೆಲದಲ್ಲಿ ರೇಷ್ಮೆಬಟ್ಟೆ ಹಾಕಿ ಅದರ ಮೇಲೆ ಕಂಬಳಿ ಇಟ್ಟು ಅದರ ಮೇಲೆ ಭೂರ್ಜಪತ್ರ ಇಟ್ಟು –ಹೀಗೆ ತಾಳೆಗರಿ, ಕೃಷ್ಣಾಜಿನ, ಗೋಣಿನಾರು, ಒಣದರ್ಭೆ ಇಟ್ಟು ಈ ರೀತಿ ಏಳು ಆವರಣಗಳನ್ನು ಮಾಡಿ ಅದರ ಮೇಲೆ ಸಂಪುಷ್ಟವಿಟ್ಟು ಮಡಚಿ ಕಟ್ಟಬೇಕು. ಅನಂತರ ಇದನ್ನು ಮನೆಯ ಚಾವಡಿಯಲ್ಲಿ (ವಾಸ್ತುವಿನ ಹೊರಗೆ) ಕಟ್ಟಿಡಬೇಕು. ಆಚಾರ್ಯರಿಗೆ ದಾನ ದಕ್ಷಿಣೆ ಕೊಟ್ಟು, ಕೃಷ್ಣಾರ್ಪಣ ಬಿಟ್ಟು, ಆಚಮನ ಮಾಡಿ, ಪವಿತ್ರ ಬಿಚ್ಚಿ ಹಾಕಬೇಕು.

ಯಾತ್ರೆಯ ದಿನ ಅಸ್ಥಿಯನ್ನು ಹಿಡಿದುಕೊಂಡು ಹೋಗಿ ಪ್ರಯಾಗದ ತ್ರಿವೇಣೀಸಂಗಮ

ದಲ್ಲಿ ಅಲ್ಲಿಯ ಕ್ಷೇತ್ರಪುರೋಹಿತರ ಸಲಹೆಯ ಮೇರೆಗೆ ಸಂಬಂಧಪಟ್ಟ ಕರ್ಮಗಳನ್ನು ಪೂರೈಸಿ,

(ಎಡ) **ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣೋ ಬ್ರಹ್ಮಲೋಕಾದಿಪ್ರಾಪ್ತಯೇ...... ತೀರ್ಥೇಽಸ್ಥಿಪ್ರಕ್ಷೇಪಣಮಹಂ** (ಬಲ) **ಕರಿಷ್ಯೇ** ॥

ಅಸ್ಥಿಗೆ ಕೇಶವಾದಿ ನಾಮಗಳಿಂದ ಜಲಾಂಜಲಿ ನೀಡಿ ಪಾಲಾಶದ ಎಲೆಯಲ್ಲಿ ದರ್ಭೆ ಹರಡಿ, ಅಸ್ಥಿಗಳನ್ನು ಇಟ್ಟು, ಪಂಚಾಮೃತ, ಪಂಚಗವ್ಯಗಳಿಂದ ಪ್ರೋಕ್ಷಣೆ ಮಾಡಿ, ಪುರುಷಸೂಕ್ತದಿಂದ ಪೂಜಿಸಿ, ಹಿರಣ್ಯ, ತುಪ್ಪ, ಎಳ್ಳು, ಮಣ್ಣಿನಿಂದ ಅಸ್ಥಿಯನ್ನು ಸೇರಿಸಿ ಮಣ್ಣಿನ ಪಿಂಡ ಮಾಡಿ, ಗೆರಸೆಯಲ್ಲಿ ದಕ್ಷಿಣಾಗ್ರವಾಗಿ ದರ್ಭೆ, ಎಳ್ಳನ್ನು ಹರಡಿ ಅದರ ಮೇಲೆ ಮೃತ್ಪಿಂಡ ಇಟ್ಟು, ಮೃತ್ಪಿಂಡದ ಮೇಲೆ ಕುಶೋದಕ ಹಾಗೂ ತಿಲೋದಕ ನೀಡಿ ಪಿಂಡವನ್ನು ಇನ್ನೊಂದು ಗೆರಸೆಯಿಂದ ಮುಚ್ಚಿ '**ನಮೋಽಸ್ತು ಧರ್ಮಾಯೇ** ॥' ಎಂದು ದಕ್ಷಿಣಕ್ಕೆ ಮುಖಮಾಡಿ ನಾಭಿವರೆಗಿನ ನೀರಿನಲ್ಲಿ ನಿಂತು '**ಸ ಮೇ ಸುಪ್ರೀತೋಽಸ್ತು** ॥' –ಎಂದು,

**ಯಾವದಸ್ಥಿ ಮನುಷ್ಯಾಣಾಂ ಗಂಗಾತೋಯೇಷು ತಿಷ್ಠತಿ ।**
**ತಾವದ್ವರ್ಷ ಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥**

**ಪ್ರಯಾಗಮಾಧವೋ ಭೂಯಾದ್ದಯಾವಾರಿ ನಿಧಿರ್ಹೃದೇ ।**
**ಪ್ರಕೃಷ್ಟಯಾಗಸದೃಶೀ ಸಕೃದ್ಯಸ್ಯ ಹಿ ಸಂಸ್ಮೃತಿಃ ॥**

–ಎಂದು ಸಂಗಮಕ್ಷೇತ್ರದಲ್ಲಿ ನಾರಾಯಣಸ್ಮರಣೆಯೊಂದಿಗೆ ಅಸ್ಥಿಯನ್ನು ಹಿಂದೆ ಬಿಸಾಡಿ,

**ಓಂ ಪೃಥಿವೀಂ ಗಚ್ಛಾಂತರಿಕ್ಷಂ ಗಚ್ಛ ದಿವಂ ಗಚ್ಛ ದಿಶೋ ಗಚ್ಛ ಸುವರ್ಗಚ್ಛ ಸುವರ್ಗಚ್ಛ ದಿಶೋ ಗಚ್ಛ ದಿವಂ ಗಚ್ಛಾಂತರಿಕ್ಷಂ ಗಚ್ಛ ಪೃಥಿವೀಂ ಗಚ್ಛಾಽಪೋ ಗಚ್ಛ ಯದಿ ತತ್ರ ತೇ ಹಿತಮೋಷಧೀಷು ಪ್ರತಿತಿಷ್ಠಾ ಶರೀರೈಃ ॥**

–ಎಂದು ಮೂರು ಬಾರಿ ಹೇಳಿ, ಹಾಲಿನಿಂದ ಕೈಕಾಲು ತೊಳೆದು, ಸ್ನಾನಮಾಡಿ ಕೈಮುಗಿದು ಸೂರ್ಯನ ದರ್ಶನ ಪಡೆದು, ಕರ್ಮದ ಸಂಪೂರ್ಣ ಫಲಪ್ರಾಪ್ತಿಗಾಗಿ ಪಿತೃಪ್ರೀತ್ಯರ್ಥವಾಗಿ ಪಿಂಡಪ್ರದಾನ ಮಾಡಿ ಬ್ರಾಹ್ಮಣರಿಗೆ ರಜತದಕ್ಷಣೆ ಕೊಟ್ಟು ಕೃಷ್ಣಾರ್ಪಣ ಬಿಡಬೇಕು.

* * *

# ಸಾಯುಜ್ಯನಾರಾಯಣಬಲಿಃ

ಅನ್ಯಗೋತ್ರದರಾಗಿದ್ದು ಮುಂದೆ ಶ್ರಾದ್ಧಾದಿಗಳನ್ನು ಮಾಡುವವರಿಲ್ಲದಿದ್ದ ಪಕ್ಷದಲ್ಲಿ ಹನ್ನೆರಡನೆಯ ದಿನ ಮಾಡುವ ಸಾಯುಜ್ಯನಾರಾಯಣಬಲಿ.




## ಸಂಕಲ್ಪಃ

ಪೂರ್ವಕ್ಕೆ ಮುಖಮಾಡಿ ಕುಳಿತು, ಪಂಚಗವ್ಯ ಪುಣ್ಯಾಹವಾಚನದ ಬಳಿಕ ಪಂಚಗವ್ಯಪ್ರಾಶನ ಮಾಡಿ, ಆಚಮನ, ಪ್ರಾಣಾಯಾಮ ಮಾಡಿ, ಆಚಾರ್ಯರಿಂದ ನಾಲ್ಕು ಎಳೆಯ ಮತ್ತು ಒಂದು ಎಳೆಯ ಪವಿತ್ರ ಪಡೆದು, ಧರಿಸಿ, ಸಂಕಲ್ಪ ಮಾಡಬೇಕು.

**ಗಂಗೇ ಚ ಯಮುನೇ ಚೈವ ..... ಮಿತ್ರಾಂತರ್ಗತ** (ಶ್ವಶುರ, ಮಾತುಲ ಇತ್ಯಾದಿ ಸಂಬಂಧವಾಚಕಶಬ್ದ) **ಪ್ರಾಣಸ್ಥಶ್ರೀಪ್ರಾಜ್ಞರೂಪಿ.....** (ಎಡ) **ಅಸ್ಮನ್ಮಿತ್ರಸ್ಯ .......ಗೋತ್ರಸ್ಯ .......ಶರ್ಮಣಃ .......ಪ್ರೇತಸ್ಯ ಪ್ರೇತತ್ವವಿಮೋಕ್ಷಾರ್ಥಮ್ ಅಂಧತ್ವ ಮೂಕತ್ವ ಬಧಿರತ್ವ ಪಂಗುತ್ವ ಕುಬ್ಜತ್ವ ನಗ್ನತ್ವ ಪೈಶಾಚತ್ವ ನಿವೃತ್ತಿಮುದ್ದಿಶ್ಯ ಸಮಸ್ತ ಪಾಪಪರಿಹಾರಾರ್ಥಂ**

**ವಸ್ವಾದಿಪುಣ್ಯಲೋಕಪ್ರಾಪ್ತಿದ್ವಾರಾ ಮೋಕ್ಷಜ್ಞಾನಪೂರ್ವಕ ಜೀವಯೋಗ್ಯತಾನುಗುಣ ಸ್ವಸ್ವರೂಪಸ್ಥಾನ ಸದ್ಗತಿಪ್ರಾಪ್ತ್ಯರ್ಥಂ ವಿಷ್ಣುಸಾಯುಜ್ಯ ಪ್ರಾಪ್ತ್ಯರ್ಥಂ** (ಬಲ) **ನಾರಾಯಣಬಲಿಹೋಮಪೂರ್ವಕ ವಿಷ್ಣುಸಾಯುಜ್ಯಪ್ರದ ನಾರಾಯಣಬಲಿಶ್ರಾದ್ಧಂ ಕರಿಷ್ಯೇ ॥ ತದಂಗ ಋತ್ವಿಗ್ವರಣಂ ಕರಿಷ್ಯೇ ॥**

–ಎಂದು ಸಂಕಲ್ಪಿಸಿ, ಆಚಾರ್ಯರನ್ನು ಆಹ್ವಾನಿಸಿ ನಾರಾಯಣಬಲಿ ಅನುಕ್ರಮಣಿಕೆಗೆ, ಹೋಮಕ್ಕೆ, ಸ್ವಸ್ತಿಕೆಗೆ, ಪಾರಾಯಣಾದಿಗಳಿಗೆ ಮತ್ತು ಕಲಶಪೂಜೆಗೆ ವರಣೆ ಕೊಡಬೇಕು.

## ನಾರಾಯಣಬಲಿಹೋಮಃ

ಆಚಾರ್ಯರು ಪೂರ್ವಮುಖವಾಗಿ ಕುಳಿತು, ಸ್ಥಂಡಿಲ ಬರೆದು, ಹೋಮ ಪ್ರಾರಂಭ ಮಾಡಬೇಕು. ಕಲಶಪೂಜೆಯವರು ಕಲಶ ಪ್ರತಿಷ್ಠಾಪಿಸಿ, ವಿಷ್ಣುಸೂಕ್ತ–ಪುರುಷಸೂಕ್ತಗಳಿಂದ ವಿಷ್ಣುವನ್ನು ಹಾಗೂ ಕೇಶವಾದಿ (ಕೆಲವರಲ್ಲಿ ಕೃಷ್ಣಪಕ್ಷದಲ್ಲಿ– ಸಂಕರ್ಷಣಾದಿ) ದ್ವಾದಶ ಮೂರ್ತಿಗಳನ್ನು ಆವಾಹನೆ ಮಾಡಿ ಪೂಜೆ ಮಾಡಿ, ಕಲಶಕ್ಕೆ ವಿಷ್ಣುಸೂಕ್ತಾದಿಗಳ ಅಭಿಮಂತ್ರಣೆ ಮಾಡಬೇಕು. ಸ್ವಸ್ತಿಕೆಯ ಪೂಜೆಯವರು ವಿಷ್ಣುಸಹಸ್ರನಾಮಾದಿಗಳಿಂದ ಅರ್ಚನೆ, ಪಾರಾಯಣ ಮಾಡಬೇಕು.

## ಅನ್ವಾಧಾನಮ್

**ಅಸ್ಮಿನ್ ಅನ್ವಾಹಿತೇಽಗ್ನೌ ....... ಪ್ರಣವವ್ಯಸ್ತಸಮಸ್ತವ್ಯಾಹೃತಿಭಿಃ ಏಕವಾರಂ ಪಾಯಸದ್ರವ್ಯೇಣ, ಆಶ್ರಾವಯೇತಿ ಪಂಚಮಂತ್ರೈಃ ಏಕೈಕವಾರಂ ಪಾಯಸದ್ರವ್ಯೇಣ, ವಿಷ್ಣುಗಾಯತ್ರ್ಯಾ ಅಷ್ಟವಾರಂ ಪಾಯಸದ್ರವ್ಯೇಣ, ಪುರುಷಸೂಕ್ತಮಂತ್ರೈಃ ಪ್ರತ್ಯೃಚಮ್ ಏಕೈಕವಾರಂ ಪಾಯಸದ್ರವ್ಯೇಣ, ವಿಷ್ಣುಸೂಕ್ತೇನ(ಪಂಚಚತ್ವಾರಿಂಶನ್ಮಂತ್ರೈಃ) ಪ್ರತ್ಯೃಚಮ್ ಏಕೈಕವಾರಂ ಪಾಯಸದ್ರವ್ಯೇಣ, ವಿಷ್ಣೋರ್ನುಕಮಿತಿ ತ್ರಿಭಿರ್ಮಂತ್ರೈಃ ಪ್ರತ್ಯೃಚಮ್ ಏಕೈಕವಾರಂ ಪಾಯಸದ್ರವ್ಯೇಣ, ನಾರಾಯಣಸೂಕ್ತೇನ ಪ್ರತ್ಯೃಚಮ್ ಏಕವಾರಂ ಪಾಯಸದ್ರವ್ಯೇಣ, ಕೇಶವಾದಿ ದೇವತಾನಾಮಮಂತ್ರೈಃ ಏಕೈಕವಾರಂ ಪಾಯಸ ದ್ರವ್ಯೇಣ, ಪಾಯಸಶೇಷೇಣ ಸ್ವಿಷ್ಟಕೃತಂ.... ಯಕ್ಷ್ಯೇ ॥ ಆಶ್ರಾವಯ** ಮಂತ್ರ (ಪುಟಸಂಖ್ಯೆ 434) **ವಿಷ್ಣುಸೂಕ್ತಮ್** (ಪುಟಸಂಖ್ಯೆ 559) **ವಿಷ್ಣೋರ್ನುಕಮಿತಿ** ಮಂತ್ರ (ಪುಟಸಂಖ್ಯೆ 428) **ನಾರಾಯಣಪನ್ನಮ್** (ಪುಟಸಂಖ್ಯೆ 564) ಅನಂತರ ಸ್ವಿಷ್ಟಕೃತ್ ಹೋಮಮಾಡಿ, ಹೋಮವನ್ನು ಪೂರ್ಣಗೊಳಿಸಿ, ಸಂಪಾತಾಜ್ಯ, ಹುತಭಸ್ಮವನ್ನು ತೆಗೆದಿಡಬೇಕು.

## ವಿಷ್ಣುಪೂಜಾ

ಯಜಮಾನನು ನಾರಾಯಣಬಲಿಯ ಸ್ವಸ್ತಿಕೆಯ ಎದುರು ಪೂರ್ವಾಭಿಮುಖವಾಗಿ ಕಳಿತು ಜಲಪಾತ್ರಸ್ಥಾಪನ ಮಾಡಿ, ಶರೀರಸೂಕ್ತ ಪಠಿಸಿ, ಬ್ರಹ್ಮದಂಡ ಇಟ್ಟು, ಪ್ರತಿವಚನವನ್ನು ಪಡೆದು ಅನಂತರ ಸ್ವಸ್ತಿಕೆಯಲ್ಲಿ ನಾಲ್ಕು ಎಳೆಯ ಕೂರ್ಚ ಇಟ್ಟು ಕ್ರಮವಾಗಿ ಮಂಟಪಪೂಜೆ, ಶಂಖಪೂಜೆ, ಪೀಠಪೂಜೆ, ಮಾಡಿ ಆವಾಹನೆ ಮಾಡಬೇಕು. ಅಕ್ಕಿ ತುಳಸಿ ಹಿಡಿದು,

**ಧ್ಯಾನಮ್**

**ಉದ್ಯದ್ಭಾಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್ ।**
**ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ॥**

**ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ ।**
**ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ॥**

**ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್ ।**
**ಮೂರ್ತಯೋಽಷ್ಟಾವಪಿ ಧ್ಯೇಯಾಶ್ಚಕ್ರಶಂಖವರಾಭಯೈಃ ।**
**ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ ॥**

**ಬಿಂಬೋಽಸಿ ಪ್ರತಿಬಿಂಬೋಽಸ್ಮಿ ತವ ಯದ್ಯಪಿ ಚಾಂತರಮ್ ।**
**ಸ್ವಾಮಿನ್ನಿರ್ದೋಷ ಮದ್ದೋಷಂ ವಿರೇಚಯ ನಮೋಽಸ್ತು ತೇ ॥**

**'ಭಾರತೀರಮಣಮುಖ್ಯಪ್ರಾಣಾಂತರ್ಗತ ರಮಾಸಹಿತ ಕೇಶವಾದಿದ್ವಾದಶ ಮೂರ್ತ್ಯಾತ್ಮಕಮೋಕ್ಷಪ್ರದಮಹಾವಿಷ್ಣುಂ ಸ್ವಸ್ತಿಕಾಮಧ್ಯೇ ಸೂರ್ಯಮಂಡಲಾದಾ–ವಾಹಯಾಮಿ'**

**ಓಮ್ ಓಂ ನಮೋ ನಾರಾಯಣಾಯ ಓಮ್ ॥** (ಅಷ್ಟವಾರಮ್ ॥)

**ಓಂ ವಿಷ್ಣವೇ ನಮಃ ಓಮ್ ॥** (ಅಷ್ಟವಾರಮ್)

ತತ್ತ್ವನ್ಯಾಸ, ಮಾತೃಕಾನ್ಯಾಸ ಮಾಡಿ, ಎರಡು ದರ್ಭೆಯನ್ನು ಹಿಡಿದು, **'ಕೇಶವಾದಿ ದ್ವಾದಶಮೂರ್ತ್ಯಾತ್ಮಕ ಪಿತೃದೇವತಾಸಹಿತ ವಿಶ್ವೇದೇವತಾಂತರ್ಗತ ಪ್ರಾಣಸ್ಥಪ್ರದ್ಯು–ಮ್ನಾದಿ ಪಂಚಮೂರ್ತ್ಯಾತ್ಮಕ ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿಪರಮಾತ್ಮಾತ್ಮಕ ಮಹಾವಿಷ್ಣವೇ ನಮಃ । ಕ್ಷಣಃ ಕ್ರೀಯತಾಮ್ ॥' (ಅಸ್ತು ಕ್ಷಣಃ)** –ಎಂದು ಸ್ವಸ್ತಿಕೆಯ ಮೇಲೆ ಇಟ್ಟು, ಅಂಜಲಿ ಮುದ್ರೆಯಿಂದ, **ಕೇಶವಾದಿದ್ವಾದಶ ....... ನಮಃ ಸ್ವಾಗತಮ್ ॥ (ಸುಸ್ವಾಗತಮ್) ॥**

ಸ್ವಸ್ತಿಕೆಯ ಎದುರು ನೀರಿನಿಂದ ಚೌಕಾಕಾರದ ಮಂಡಲ ಮಾಡಿ, **'ಮಹಾವಿಷ್ಣವೇ ನಮಃ । ಪಾದ್ಯಸ್ಥಾನಂ ಕಲ್ಪಯಾಮಿ ॥ ಪಾದ್ಯಸ್ಥಾನೇ ಇಮೇ ದರ್ಭಾಃ ॥'** ಎಂದು ಎರಡು ಮಂಡಲಗಳಲ್ಲಿ ಉತ್ತರಾಗ್ರವಾಗಿ ದರ್ಭೆ ಹರಡಿ, ಎರಡೂ ಸ್ಥಾನಗಳಲ್ಲಿ ಅಕ್ಷತೋದಕ ಕೊಟ್ಟು, **'ಶಿರಸಿ ಪುಷ್ಪಮ್ । ಪಾದಯೋರ್ಗಂಧಪುಷ್ಪಾಣಿ ॥'** –ಎಂದು ತಲೆಗೆ ಪುಷ್ಪ ಹಾಗೂ ಪಾದದ ಸ್ಥಾನದಲ್ಲಿ ಗಂಧಪುಷ್ಪ ಇಟ್ಟು, ಅಕ್ಕಿ ನೀರು ಹಿಡಿದು, **'ಕೇಶವಾದಿದ್ವಾದಶ ಮೂರ್ತ್ಯಾತ್ಮಕ ಮಹಾವಿಷ್ಣವೇ ನಮಃ ಇದಂ ವಃ ಪಾದ್ಯಮ್ ॥' (ಅಸ್ತು ಪಾದ್ಯಮ್) ॥** –ಎಂದು ಪಾದಸ್ಥಾನದಲ್ಲಿ ಕೊಟ್ಟು, **'ಓಂ ಶಂ ನೋ ದೇವೀ...... ಸ್ರವಂತು ನಃ ॥'** ಪಾದೋದಕವನ್ನು ಪ್ರೋಕ್ಷಣೆ ಮಾಡಿಕೊಳ್ಳಬೇಕು.

## ಬರ್ಹಿಷ್ಯಾಸನಾಽವಾಹನಮ್

ಸ್ವಸ್ತಿಕೆಯ ಎದುರು ಪೂರ್ವಾಗ್ರವಾಗಿ ದ್ವಾದಶ ಕೋಣೆಗಳುಳ್ಳ ಚೌಕಾಕಾರದ ಮಂಡಲ ಮಾಡಿ, ದ್ವಾದಶ ಕೋಣೆಗಳಲ್ಲಿ ಹಾಗೂ ಮಧ್ಯದ ಕೋಣೆಯಲ್ಲಿ ಅಷ್ಟದಲಪದ್ಮ ಬರೆಯ ಬೇಕು. ಜಲಕೂರ್ಚದಿಂದ **ಓಂ ಭೂರ್ಭುವಃಸ್ವರೋಮ್** ॥ –ಎಂದು ಮಂಡಲವನ್ನು ಪ್ರೋಕ್ಷಿಸಿ,

**ಓಮ್ ಅಸ್ಯೇದು ಮಾತುಃ ಸವನೇಷು ಸದ್ಯೋ ಮಹಃ ಪಿತುಂ ಪಪಿವಾ-ಞ್ಚಾರ್ವನ್ನಾ। ಮುಷಾಯದ್ವಿಷ್ಣುಃ ಪಚತಂ ಸಹೀಯಾನ್, ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ॥**

ಔದುಂಬರಸಮಿಧೆಯಿಂದ ಪಶ್ಚಿಮದಿಂದ ಪೂರ್ವಕ್ಕೆ ಉಲ್ಲೇಖನ ಮಾಡಿ, ಅಕ್ಕಿ ಹಿಡಿದು,

**ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।**
**ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಿಕಾಃ ॥**

–ಮಂಡಲದ ಈಶಾನ್ಯದಿಂದ ಅಕ್ಕಿ ಹರಡಿ, ವಿಷ್ಣುಪಾದ ಹಿಡಿದು,

**ಓಂ ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ। ದಿವೀವ ಚಕ್ಷುರಾತತಮ್ ॥ ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ। ವಿಷ್ಣೋರ್ಯತ್ ಪರಮಂ ಪದಮ್** ॥ –ಮಂಡಲಮಧ್ಯದಲ್ಲಿ ವಿಷ್ಣುಪಾದ ಇಟ್ಟು,

**ಅಪಹತಾ ಅಸುರಾ ರಕ್ಷಾಗ್ಂಸಿ ಬರ್ಹಿಷದಃ ॥**

–ಎಂದು ಪೂರ್ವಾಗ್ರವಾಗಿ ಮುನ್ನೂರ ಅರುವತ್ತು ದರ್ಭೆ ಹರಡಿ,

**ಗೋಕರ್ಣ ಸೇತೋ ಹಿಮವತ್ಪ್ರಯಾಗೌ**
**ಕಾಶ್ಮೀರ ಸೋಮೇಶ್ವರ ವಿಷ್ಣುಪಾದಾಃ ।**
**ಶ್ರೀರಂಗ ಕೇದಾರ ಅನಂತ ಕನ್ಯೇ**
**ಸ್ವಾಮಿನ್ ಕುರುಕ್ಷೇತ್ರ ಸದಾ ನಮಸ್ತೇ ॥**

ಹನ್ನೆರಡು ಎಳೆಯ ಕೂರ್ಚ ಹಿಡಿದು,

**ಓಂ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ**

ವಿಶ್ವತಃ । ಅತಪ್ತತನೂರ್ನ ತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ ಸಮಾಶತ ॥ –ಎಂದು ಮಂಡಲದ ಮಧ್ಯದಲ್ಲಿಟ್ಟು, ತುಲಸಿ, ಪುಷ್ಪಾಕ್ಷತೆ ಹಿಡಿದು, ದ್ವಾದಶ ಕೋಣೆಗಳಲ್ಲಿ ಅಕ್ಷತೋದಕ ಕೊಡಬೇಕು.

**ರೂಪ್ಯಪೀಠಂ ಕುಮಾರಾದ್ರಿಃ ಕುಂಭಾಸಿಶ್ಚ ಧ್ವಜೇಶ್ವರಃ ।**
**ಕ್ರೋಡ ಗೋಕರ್ಣ ಮೂಕಾಂಬಾಃ ಸಪ್ತೈತೇ ಮೋಕ್ಷದಾಯಕಾಃ ॥**

ಈಶಾನ್ಯದಿಂದ ಕ್ರಮವಾಗಿ ಎರಡೆರಡು ದರ್ಭೆಗಳನ್ನು ಉತ್ತರಾಗ್ರವಾಗಿ ಹಿಡಿದು,

**ಶಂಖಚಕ್ರಗದಾಬ್ಜೇತಃ ಕೇಶವಃ ಸೂರ್ಯಸನ್ನಿಭಃ । ಕೇಶವ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಕೇಶವಸ್ಯ ಇದಮಾಸನಮ್ ॥**

**ನಾರಾಯಣಃ ಸಾಬ್ಜಗದಾಚಕ್ರಶಂಖೋ ರವಿಪ್ರಭಃ । ನಾರಾಯಣನಾರಾಯಣ ಓಂ ನಮೋ ನಾರಾಯಣಾಯ ನಮಃ । ನಾರಾಯಣಸ್ಯ ಇದಮಾಸನಮ್ ॥**

**ಮಾಧವಶ್ಚಕ್ರಶಂಖಾಬ್ಜಗದೇಶಃ ಸೂರ್ಯಸನ್ನಿಭಃ । ಮಾಧವನಾರಾಯಣ ಓಂ ನಾರಾಯಣ ನಮೋ ನಾರಾಯಣಾಯ ನಮಃ । ಮಾಧವಸ್ಯ ಇದಮಾಸನಮ್ ॥**

**ಗದಾಬ್ಜಶಂಖಚಕ್ರೇಶೋ ಗೋವಿಂದೋ ಭಾಸ್ಕರದ್ಯುತಿಃ । ಗೋವಿಂದನಾರಾಯಣ ಓಂ ನಮೋ ನಾರಾಯಣಾಯ ನಮಃ । ಗೋವಿಂದಸ್ಯ ಇದಮಾಸನಮ್ ॥**

**ಸಪದ್ಮಶಂಖಾರಿಗದೋ ವಿಷ್ಣುಶ್ಚಾಲಕ್ತಸಪ್ರಭಃ । ವಿಷ್ಣುನಾರಾಯಣ ಓಂ ನಮೋ ನಾರಾಯಣಾಯ ನಮಃ । ವಿಷ್ಣೋರಿದಮಾಸನಮ್ ॥**

**ಕಂಜಕಂಬುಗದಾಚಕ್ರಃ ಸೂರ್ಯಾಭೋ ಮಧುಸೂದನಃ । ಮಧುಸೂದನ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಮಧುಸೂದನಸ್ಯ ಇದಮಾ-ಸನಮ್ ॥**

**ತ್ರಿವಿಕ್ರಮೋ ಗದಾಚಕ್ರಶಂಖಪದ್ಮೋ ರವಿಪ್ರಭಃ । ತ್ರಿವಿಕ್ರಮನಾರಾಯಣ ಓಂ ನಮೋ ನಾರಾಯಣಾಯ ನಮಃ । ತ್ರಿವಿಕ್ರಮಸ್ಯ ಇದಮಾಸನಮ್ ॥**

**ವಾಮನೋಽರಿಗದಾಪದ್ಮಶಂಖೋದ್ಯದ್ರವಿಪ್ರಭಃ । ವಾಮನನಾರಾಯಣ ಓಂ ನಮೋ ನಾರಾಯಣಾಯ ನಮಃ । ವಾಮನಸ್ಯ ಇದಮಾಸನಮ್ ॥**

**ಶ್ರೀಧರೋಽರಿಗದಾಕಂಬುಪದ್ಮೋದ್ಯದ್ರವಿಪ್ರಭಃ । ಶ್ರೀಧರನಾರಾಯಣ ಓಂ ನಮೋ ನಾರಾಯಣಾಯ ನಮಃ । ಶ್ರೀಧರಸ್ಯ ಇದಮಾಸನಮ್ ॥**

**ಸಾರಿಪದ್ಮಶಂಖಗದಾಃ ಹೃಷೀಕೇಶೋಽರ್ಕಸನ್ನಿಭಃ ॥ ಹೃಷೀಕೇಶನಾರಾಯಣ ಓಂ ನಮೋ ನಾರಾಯಣಾಯ ನಮಃ । ಹೃಷೀಕೇಶಸ್ಯ ಇದಮಾಸನಮ್ ॥**

**ಪದ್ಮನಾಭಃ ಸಾಬ್ಜಚಕ್ರಗದಾಶಂಖೋ ರವಿದ್ಯುತಿಃ । ಪದ್ಮನಾಭನಾರಾಯಣ ಓಂ ನಮೋ ನಾರಾಯಣಾಯ ನಮಃ । ಪದ್ಮನಾಭಸ್ಯ ಇದಮಾಸನಮ್ ॥**

**ದಾಮೋದರಃ ಶಂಖಗದಾಚಕ್ರಪದ್ಮೋ ರವಿಪ್ರಭಃ ॥ ದಾಮೋದರ ನಾರಾಯಣ ಓಂ ನಮೋ ನಾರಾಯಣಾಯ ನಮಃ । ದಾಮೋದರಸ್ಯ ಇದಮಾಸನಮ್ ॥**

–ಎಂದು ಆಸನ ಇಟ್ಟು ಅಕ್ಕಿ, ತುಳಸಿ ಹಿಡಿದು, '**ಕೇಶವ ನಾರಾಯಣ ಓಂ ನಮೋ ನಾರಾಯಣಾಯ । ಕೇಶವಮಾವಾಹಯಾಮಿ ॥**' ಎಂದು ಆವಾಹಿಸಿ; ಹೀಗೆಯೇ '**ನಾರಾಯಣ ನಾರಾಯಣ ಓಂ ನಮೋ ನಾರಾಯಣಾಯ । ನಾರಾಯಣ–ಮಾವಾಹಯಾಮಿ ॥**' ಉಳಿದ ಹತ್ತು ಸ್ಥಾನದಲ್ಲಿ **ಮಾಧವಂ, ಗೋವಿಂದಂ, ವಿಷ್ಣುಂ, ಮಧುಸೂದನಂ, ತ್ರಿವಿಕ್ರಮಂ, ವಾಮನಂ, ಶ್ರೀಧರಂ, ಹೃಷೀಕೇಶಂ, ಪದ್ಮನಾಭಂ, ದಾಮೋದರಂ** –ಎಂದು ಪ್ರತ್ಯೇಕವಾಗಿ ಆವಾಹನೆಮಾಡಿ ಮಂಡಲಮಧ್ಯದಲ್ಲಿ ವಿಷ್ಣುವನ್ನು ಆವಾಹನೆ ಮಾಡಬೇಕು. ಅನಂತರ ತುಪ್ಪವನ್ನು ಹನ್ನೆರಡು ಸ್ಥಾನಗಳಲ್ಲಿ ದರ್ಭೆಯಿಂದ ಮುಟ್ಟಿಸಬೇಕು.

## ಸ್ಥಾನಕಲ್ಪನಮ್

ಪ್ರೇತಪಿಂಡಸ್ಥಾನದಲ್ಲಿ ದಕ್ಷಿಣಕ್ಕೆ ಮುಖ ಮಾಡಿ ಕುಳಿತು, ತನ್ನ ಬಲಭಾಗದಲ್ಲಿ ವಿಶ್ವೇದೇವಸ್ಥಾನಕ್ಕೆ ಜೇಡಿಯಿಂದ ಚೌಕಾಕಾರದ ಮಂಡಲ ಮಾಡಿ ಒಂದು ತುಂಡು ಬಾಳೆಎಲೆಯಲ್ಲಿ ನಾಲ್ಕು ಎಳೆಯ ಕೂರ್ಚವನ್ನು ಪೂರ್ವಾಭಿಮುಖವಾಗಿ (ಪಶ್ಚಿಮಕ್ಕೆ ತುದಿ) ಇರುವಂತೆ ಇಟ್ಟು, ತನ್ನ ಎದುರು ಭಾಗದಲ್ಲಿ ಪ್ರೇತಸ್ಥಾನಕ್ಕೆ ಅಪ್ರದಕ್ಷಿಣೆಯಾಗಿ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲ ಹಾಗೂ ಪಿತೃದೇವತಾಸ್ಥಾನದಲ್ಲಿ ಅಪ್ರದಕ್ಷಿಣೆಯಾಗಿ ವೃತ್ತಾಕಾರದ ಮಂಡಲ ಮಾಡಿ, ಒಂದು ತುಂಡು ಬಾಳೆಎಲೆಯಲ್ಲಿ ಉತ್ತರಾಭಿಮುಖವಾಗಿ (ದಕ್ಷಿಣಕ್ಕೆ ತುದಿ ಬರುವಂತೆ) ಪ್ರೇತಸ್ಥಾನದಲ್ಲಿ ಒಂದು ಎಳೆಯ ಕೂರ್ಚ ಹಾಗೂ ಪಿತೃಸ್ಥಾನದಲ್ಲಿ ಮೂರು ಎಳೆಯ ಕೂರ್ಚವನ್ನು ಇಡಬೇಕು.

## ಪ್ರೇತಬರ್ಹಿಷ್ಯಾಸನಾಽವಾಹನಮ್

(ಎಡ) ಪಿಂಡಸ್ಥಾನದಲ್ಲಿ ದಕ್ಷಿಣಾಗ್ರವಾಗಿ ಜೇಡಿಯಿಂದ ತ್ರಿಕೋನಾಕಾರದ ಮಂಡಲ ಬರೆದು, ಎರಡು ದರ್ಭೆಗಳನ್ನು ಹಿಡಿದು,

**ಅಸ್ಮನ್ಮಿತ್ರಸ್ಯ ......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ನಾರಾಯಣಬಲಿಶ್ರಾದ್ಧೇ ಮಂಡಲಮಧ್ಯೇ ಉಲ್ಲೇಖನಮುಪತಿಷ್ಠತು ॥** –ಎಂದು ಉತ್ತರದಿಂದ ದಕ್ಷಿಣಕ್ಕೆ ಉಲ್ಲೇಖನ ಮಾಡಿ, ಮಂಡಲದಲ್ಲಿಟ್ಟು, ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ, ತುಂಡು ಮಾಡಿ, ಹಿಂದೆ ಬಿಸಾಡಿ ಕೈತೊಳೆದು, ಎಳ್ಳು ಹಿಡಿದು,

**ಅಸ್ಮನ್ಮಿತ್ರಸ್ಯ .....ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ .....ಶ್ರಾದ್ಧೇ ತಿಲಮುಪತಿಷ್ಠತು ॥**

-ಎಂದು ಮಂಡಲಮಧ್ಯದಲ್ಲಿ ಎಳ್ಳು ಹರಡಿ, ನಾಲ್ಕು ದರ್ಭೆಯನ್ನು ದಕ್ಷಿಣಾಗ್ರವಾಗಿ ಹಿಡಿದು,

**ಅಸ್ಮನ್ಮಿತ್ರಸ್ಯ .....ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ......ಶ್ರಾದ್ಧೇ ಬರ್ಹಿರುಪತಿಷ್ಠತು ॥** -ಎಂದು ಮಂಡಲದ ಮಧ್ಯೆ ಇಟ್ಟು, ಎಳ್ಳು ನೀರು ಹಿಡಿದು,

**ಬರ್ಹಿಷ್ಯುಪರಿ ತಿಲೋದಕಮುಪತಿಷ್ಠತು ॥** -ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಕೊಟ್ಟು, ಪುನಃ ಒಂದು ದರ್ಭೆಯನ್ನು ಪೂರ್ವಾಗ್ರವಾಗಿ ಹಿಡಿದು,

**ಅಸ್ಮನ್ಮಿತ್ರಸ್ಯ .......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ .......ಶ್ರಾದ್ಧೇ ಬರ್ಹಿಷ್ಯಾಸನಮುಪತಿಷ್ಠತು ॥** -ಎಂದು ಮಂಡಲಮಧ್ಯೆ ಇಟ್ಟು ಜಲಕೂರ್ಚದಿಂದ ನೀರನ್ನು ಹಿಡಿದು,

**ಆಸನಾಂತೇ ಉದಕಮುಪತಿಷ್ಠತು ॥** -ಎಂದು ಕೂರ್ಚದಿಂದ ನೀರು ಹಾಕಿ ಎಳ್ಳು ಗರಿಕೆ ತುಳಸಿ ಹಿಡಿದು,

**ಅಸ್ಮನ್ಮಿತ್ರಸ್ಯ ......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ .......ಶ್ರಾದ್ಧೇ ಆವಾಹನಮುಪತಿಷ್ಠತು ॥** -ಎಂದು ಮಂಡಲದ ಆಸನದಲ್ಲಿಟ್ಟು ಜಲಕೂರ್ಚದಿಂದ ನೀರನ್ನು ಹಿಡಿದು, **ಆವಾಹನಾಂತೇ ಉದಕಮುಪತಿಷ್ಠತು ॥** -ಎಂದು ನೀರು ಬಿಡಬೇಕು.

## ಕ್ಷಣಪಾದ್ಯಾದಿ

(ಬಲ) ವಿಶ್ವೇದೇವಸ್ಥಾನದಲ್ಲಿ ಪಶ್ಚಿಮಾಭಿಮುಖವಾಗಿ ಎರಡು ದರ್ಭೆ ಹಿಡಿದು,

**ಕಾಮಕಾಲಸಂಜ್ಞಕ ವಿಶ್ವೇದೇವತಾಂತರ್ಯಾಮಿ ಪ್ರಾಣಸ್ಥಶ್ರೀನಾರಾಯಣಾನಿರುದ್ಧಾಯ ನಮಃ। ಅತ್ರ ಸನ್ನಿಹಿತಾಃ ಸಂತು । ಕ್ಷಣಃ ಕ್ರಿಯತಾಮ್ ॥**

-ಎಂದು ಕೂರ್ಚದ ಮೇಲೆ ಇಡುವುದು. ಹೀಗೆಯೇ (ಎಡ) ಪ್ರೇತಸ್ಥಾನದಲ್ಲಿ ಒಂದು ದರ್ಭೆಯನ್ನು ದಕ್ಷಿಣಾಗ್ರವಾಗಿ ಹಿಡಿದು, **ಪ್ರೇತಾಂತರ್ಯಾಮಿ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮನೇ ನಮಃ ॥ ಅಸ್ಮನ್ಮಿತ್ರಸ್ಯ ..........ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಕ್ಷಣಮುಪತಿಷ್ಠತು ॥** -ಎಂದು ಕೂರ್ಚದ ಮೇಲೆ ಇಟ್ಟು ಮೂರು ದರ್ಭೆಯನ್ನು ಹಿಡಿದು, **ಪಿತೃದೇವತಾಂತರ್ಯಾಮಿ ಪ್ರಾಣಸ್ಥಲಕ್ಷ್ಮೀಜನಾರ್ದನಾಯ ನಮಃ । ಅತ್ರ ಸನ್ನಿಹಿತಾಃ ಸಂತು । ಕ್ಷಣಃ ಕ್ರಿಯತಾಮ್ ॥** -ಎಂದು ಕೂರ್ಚದ ಮೇಲೆ ಇಟ್ಟು

**ಅಕ್ರೋಧನೈಃ ಶೌಚಪರೈಃ .............ಶ್ರಾದ್ಧಕಾರಿಣಾ ॥** -ಎಂದು ಪಠಿಸಬೇಕು.

## ವಿಶ್ವೇದೇವಪಾದಪ್ರಕ್ಷಾಲನಮ್

(ಬಲ) ಪಶ್ಚಿಮಾಭಿಮುಖವಾಗಿ ವಿಶ್ವೇದೇವಸ್ಥಾನದ ಕೂರ್ಚದ ಎದುರು ನೀರಿನಿಂದ ಎರಡು ಚೌಕಾಕಾರದ ಮಂಡಲ ಮಾಡಿ **'ಪಾದ್ಯಾಸನಸ್ಥಾನಂ ಕಲ್ಪಯಾಮಿ ॥'** ಎಂದು

ಹೇಳಿ, ನಾಲ್ಕು ದರ್ಭೆಗಳನ್ನು ಹಿಡಿದು, '**ಪಾದ್ಯಸ್ಥಾನೇ ಇಮೌ ದರ್ಭೌ । ಆಸನಸ್ಥಾನೇ ಇಮೌ ದರ್ಭೌ ॥**' –ಎಂದು ಮಂಡಲಗಳೆರಡರ ಮೇಲೆ ಎರಡೆರಡು ದರ್ಭೆಗಳನ್ನು ಉತ್ತರಾಗ್ರವಾಗಿ ಅಡ್ಡ ಇಟ್ಟು ಅಕ್ಕಿ ನೀರು ಹಿಡಿದು, ಎರಡು ಸ್ಥಾನದಲ್ಲಿ ಅಕ್ಷತೋದಕ ಕೊಟ್ಟು ವಿಶ್ವೇದೇವಸ್ಥಾನದಲ್ಲಿ ಅಂಜಲಿಮುದ್ರೆ ಮಾಡಿ,

**ಕಾಮಕಾಲಸಂಜ್ಞಕವಿಶ್ವೇದೇವತಾಂತರ್ಯಾಮಿ ಪ್ರಾಣಸ್ಥನಾರಾಯಣಾನಿರುದ್ಧಾಯ ನಮಃ। ಸ್ವಾಗತಮ್ । ಶಿರಸಿ ಪುಷ್ಪಮ್ ॥** –ಎಂದು ಹೂಇಟ್ಟು, ಪವಿತ್ರ ತೆಗೆದು ಬಲಕಿವಿಯಲ್ಲಿ ಧರಿಸಿ, ಹೂವಿಗೆ ಗಂಧ ಮುಟ್ಟಿಸಿ, **ಪಾದಯೋರ್ಗಂಧಪುಷ್ಪಾದಿ ॥** –ಎಂದು ಪಾದಗಳಿಗೆ ಮುಟ್ಟಿಸಿ, ಪವಿತ್ರ ಧರಿಸಿ, ಪಾದಗಳಿಗೆ ಅಕ್ಷತೋದಕ ಕೊಟ್ಟು, **ಇದಂ ವಃ ಪಾದ್ಯಮ್ । ಇದಂ ವಃ ಪಾದ್ಯಮ್ ॥** ಪವಿತ್ರ ತೆಗೆದು ಬದಿಯಲ್ಲಿಟ್ಟು,

**ಓಂ ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿ ಸ್ರವಂತು ನಃ ॥ ಚರಣಂಪವಿತ್ರಂ ವಿತತಂ ಪುರಾಣಂ ಯೇನ ಪೂತಸ್ತರತಿ ದುಷ್ಕೃತಾನಿ। ತೇನ ಪವಿತ್ರೇಣ ಶುದ್ಧೇನ ಪೂತಾ ಅತಿ ಪಾಪ್ಮಾನಮರಾತಿಂ ತರೇಮ ॥ ಲೋಕಸ್ಯ ದ್ವಾರಮರ್ಚಿಮತ್ಪವಿತ್ರಂ ಜ್ಯೋತಿಷ್ಮದ್ಭ್ರಾಜಮಾನಂ ಮಹಸ್ವತ್। ಅಮೃತಸ್ಯ ಧಾರಾ ಬಹುಧಾ ದೋಹಮಾನಂ ಚರಣಂ ನೋ ಲೋಕೇ ಸುಧಿತಾಂ ದಧಾತು ॥**

**ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ತೀರ್ಥಾನಿ ಸಾಗರೇ ।**
**ಸಾಗರೇ ಸರ್ವತೀರ್ಥಾನಿ ಪದೇ ವಿಪ್ರಸ್ಯ ದಕ್ಷಿಣೇ ॥**

**ಆಪಃ ಪಾದಾವನೇಜನೀರ್ದ್ವಿಷಂತಂ ನಿರ್ದಹಂತು ಮೇ ।**
**ಅಸ್ಮಿನ್ ಕುಲೇ ಬ್ರಹ್ಮವರ್ಚಸ್ವ್ಯಸಾನಿ ॥**

–ಎಂದು ಕಾಲು ತೊಳೆದು, ಪವಿತ್ರ ಧರಿಸಿ ಪಾದೋದಕವನ್ನು ಪ್ರೋಕ್ಷಣೆ ಮಾಡಿಕೊಳ್ಳಬೇಕು.

## ಪ್ರೇತಸ್ಥಾನೇ ಪಾದಪ್ರಕ್ಷಾಳನಮ್

(ಎಡ) ಕೂರ್ಚದ ಎದುರು ನೀರಿನಿಂದ ಎರಡು ತ್ರಿಕೋನಕಾರದ ಮಂಡಲ ಮಾಡಿ '**ಪಾದ್ಯಾಸನಸ್ಥಾನಂ ಕಲ್ಪಯಾಮಿ ॥**' –ಎಂದು ಹೇಳಿ, ಎರಡು ದರ್ಭೆಯನ್ನು ಹಿಡಿದು '**ಪಾದ್ಯಸ್ಥಾನೇ ದರ್ಭಮುಪತಿಷ್ಠತು । ಆಸನಸ್ಥಾನೇ ದರ್ಭಪತ್ರಮುಪತಿಷ್ಠತು**' –ಎಂದು ಎರಡು ಮಂಡಲಗಳ ಮೇಲೆ ಒಂದೊಂದು ದರ್ಭೆಯನ್ನು ಪೂರ್ವಾಗ್ರವಾಗಿ

ಅಡ್ಡವಾಗಿಟ್ಟು ಎಳ್ಳುನೀರು ಹಿಡಿದು '**ಪಾದ್ಯಾಸನಸ್ಥಾನೇ ತಿಲೋದಕಮುಪತಿಷ್ಠತು**' ಎಂದು ಎರಡು ಸ್ಥಾನಗಳಲ್ಲಿ ತಿಲೋದಕ ಕೊಟ್ಟು (ಬಲ) ಅಂಜಲಿಮುದ್ರೆ ಮಾಡಿ, '**ಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ಪರಮಾತ್ಮನಃ ಸ್ವಾಗತಮುಪತಿಷ್ಠತು** । (ಎಡ) **ಶಿರಸಿ ಪುಷ್ಪಮುಪತಿಷ್ಠತು । ಪಾದಯೋರ್ಗಂಧಪುಷ್ಪಮುಪತಿಷ್ಠತು** ।' ಎಳ್ಳುನೀರು ಹಿಡಿದು '**ಪಾದ್ಯಮುಪತಿಷ್ಠತು** ।' ಎಂದು ಪಾದಸ್ಥಾನದಲ್ಲಿ ಕೊಟ್ಟು ಪವಿತ್ರ ತೆಗೆದು ಬದಿಗಿಟ್ಟು, ಕಾಲು ತೊಳೆದು ಪವಿತ್ರವನ್ನು ಧರಿಸಿಕೊಳ್ಳಬೇಕು.

## ಪಿತೃದೇವತಾಪಾದಪ್ರಕ್ಷಾಳನಮ್

ಕೂರ್ಚದ ಎದುರು ನೀರಿನಿಂದ ಎರಡು ವೃತ್ತಾಕಾರದ ಮಂಡಲ ಮಾಡಿ '**ಪಾದ್ಯಾಸನಸ್ಥಾನಂ ಕಲ್ಪಯಾಮಿ** ।' –ಎಂದು ಹೇಳಿ ಆರು ದರ್ಭೆಗಳನ್ನು ಹಿಡಿದು, '**ಪಾದ್ಯಾಸನಸ್ಥಾನೇ ಇಮೇ ದರ್ಭಾಃ**' –ಎಂದು ಮಂಡಲಗಳೆರಡರ ಮೇಲೆ, ಮೂರು ಮೂರು ದರ್ಭೆಗಳನ್ನು ಪೂರ್ವಾಗ್ರವಾಗಿ ಅಡ್ಡವಾಗಿಟ್ಟು, ಎಳ್ಳುನೀರು ಹಿಡಿದು '**ಪಾದ್ಯಾಸನಸ್ಥಾನೇ ತಿಲೋದಕಮ್** ।' –ಎಂದು ತಿಲೋದಕ ಕೊಟ್ಟು, (ಬಲ) '**ಪಿತೃದೇವತಾಂತರ್ಯಾಮಿ ಪ್ರಾಣಸ್ಥಲಕ್ಷ್ಮೀಜನಾರ್ದನಾಯ ನಮಃ । ಸ್ವಾಗತಮ್** । (ಎಡ) **ಶಿರಸಿ ಪುಷ್ಪಮ್** ।' –ಎಂದು ಹೂ ಇಟ್ಟು, ಪವಿತ್ರ ಹೊರ ತೆಗೆದು '**ಪಾದಯೋರ್ಗಂಧಪುಷ್ಪಾಣಿ** ।' –ಎಂದು ಪಾದಗಳಿಗೆ ಗಂಧ ಹೂ ಮುಟ್ಟಿಸಿ, ಪವಿತ್ರ ಧರಿಸಿ, ತಿಲೋದಕ ಹಿಡಿದು, '**ಇದಂ ವಃ ಪಾದ್ಯಮ್** ।' ಎಂದು ಪಾದಗಳಿಗೆ ಬಿಟ್ಟು, ಪವಿತ್ರ ಬದಿಗಿಟ್ಟು '**ಶಂ ನೋದೇವೀರಭಿಷ್ಟಯ.... ಸ್ರವಂತು ನಃ ॥ ಆಪಃ ಪಾದಾವನೇ...... ....ಬ್ರಹ್ಮವರ್ಚಸ್ವ್ಯಸಾನಿ ॥**' –ಎಂದು ಕಾಲು ತೊಳೆದು, ಪವಿತ್ರ ಧರಿಸಿ, ಪಾದೋದಕವನ್ನು ಪ್ರೋಕ್ಷಣೆ ಮಾಡಿಕೊಳ್ಳಬೇಕು. ಪೂರ್ವಕ್ಕೆ ಮುಖಮಾಡಿ ಕುಳಿತು, (ಬಲ) ಆಚಮನ ಮಾಡಿ, ಪವಿತ್ರ ಬಿಚ್ಚಿ, ಪುನಃ ಆಚಮನ ಮಾಡಿ, ಪ್ರಾಣಾಯಾಮ ಮಾಡಿ, ಆಚಾರ್ಯರಿಂದ ನಾಲ್ಕು ಎಳೆಯ ಮತ್ತು ಒಂದು ಎಳೆಯ ಪವಿತ್ರಗಳನ್ನು ಪಡೆದು ಧರಿಸಿ ಸಂಕಲ್ಪ ಮಾಡಬೇಕು.

## ದಿಗ್ಬಂಧನಮ್

**ನಾರಾಯಣಬಲಿಶ್ರಾದ್ಧೇ ಪ್ರಾಚ್ಯಾದಿ ದಿಗ್ಬಂಧನಂ ಕರಿಷ್ಯೇ ॥**

**ನಮೋ ನಮಸ್ತೇ ಗೋವಿಂದ ಪುರಾಣಪುರುಷೋತ್ತಮ ।**
**ನಾರಾಯಣಬಲಿಶ್ರಾದ್ಧಂ ರಕ್ಷ ತ್ವಂ ಸರ್ವತೋ ದಿಶಃ ॥**

–ಎಂದು ಪ್ರಾರ್ಥಿಸಿ, ಎಡಕೈಯಲ್ಲಿ ಮೊದಲ ಕಟ್ಟಿನ ಎಲ್ಲ ದರ್ಭೆಗಳನ್ನೂ ಒಟ್ಟಾಗಿ ಹಿಡಿದು ಪ್ರತ್ಯೇಕವಾಗಿ ಎಳ್ಳು, ಹಾಗೂ ಅಕ್ಕಿಕಾಳು ಹಿಡಿದುಕೊಂಡು, ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಪ್ರದಕ್ಷಿಣೆಯಾಗಿ ಅಕ್ಕಿ ಮತ್ತು ಎರಡೆರಡು ದರ್ಭೆಗಳನ್ನು ಬಿಸಾಡಬೇಕು.

**ಅಗ್ನಿಷ್ವಾತ್ತಾಃ ಪಿತೃಗಣಾಃ ಪ್ರಾಚೀಂ ರಕ್ಷಂತು ಮೇ ದಿಶಮ್ ।** (ಪೂರ್ವಕ್ಕೆ)
**ಬರ್ಹಿಷದಃ ಪಿತೃಗಣಾಃ ಯಾಮ್ಯಾಂ ರಕ್ಷಂತು ಮೇ ದಿಶಮ್ ॥** (ದಕ್ಷಿಣಕ್ಕೆ)

**ಆಜ್ಯಪಾಃ ಪಿತೃಗಣಾಃ ಪ್ರತೀಚೀಂ ರಕ್ಷಂತು ಮೇ ದಿಶಮ್ ।** (ಪಶ್ಚಿಮಕ್ಕೆ)
**ಸೋಮಪಾಃ ಪಿತೃಗಣಾಃ ಉದೀಚೀಂ ರಕ್ಷಂತು ಮೇ ದಿಶಮ್ ॥** (ಉತ್ತರಕ್ಕೆ)

ಅನಂತರ (ಎಡ) ಅಪ್ರದಕ್ಷಿಣೆಯಾಗಿ ಎಳ್ಳು ಮತ್ತು ಎರಡೆರಡು ದರ್ಭೆಗಳನ್ನು ನಾಲ್ಕು ವಿದಿಕ್ಕುಗಳಿಗೆ ಬಿಸಾಡಬೇಕು.

**ರಕ್ಷೋಭೂತಪಿಶಾಚೇಭ್ಯಸ್ತಥೈವಾಸುರದೋಷತಃ ।** (ಈಶಾನ್ಯಕ್ಕೆ)
**ಸರ್ವತಶ್ಚಾಧಿಪಸ್ತೇಷಾಂ ಯಮೋ ರಕ್ಷಾಂ ಕರೋತು ಮೇ ॥** (ವಾಯವ್ಯಕ್ಕೆ)

**ನಿಹನ್ಮಿ ಸರ್ವಂ ಯದಮೇಧ್ಯವದ್ಭವೇ-**
**ದ್ಧತಾಶ್ಚ ಸರ್ವೇಽಸುರದಾನವಾ ಮಯಾ ।** (ನೈಋತ್ಯಕ್ಕೆ)

**ರಕ್ಷಾಂಸಿ ಯಕ್ಷಾಃ ಸಪಿಶಾಚಗುಹ್ಯಕಾ**
**ಹತಾ ಮಯಾ ಯಾತುಧಾನಾಶ್ಚ ಸರ್ವೇ ॥** (ಆಗ್ನೇಯಕ್ಕೆ)

**ಅಪಹತಾ ಅಸುರಾ ರಕ್ಷಾಂಸಿ ವೇದಿಷದಃ ॥** -ಎಂದು ಎರಡು ದರ್ಭೆಗಳನ್ನು ಹಿಡಿದು, **'ಕಕ್ಷೀವಂತಂ ಔಷಿಜಮ್ । ಶರೀರಂ ಯಜ್ಞಶಮಲಂ ಕುಸೀದತಸ್ಮಿನ್ಸೀದತು ಯೋಽಸ್ಮಾನ್ ದ್ವೇಷ್ಟಿ ॥'**

- ಎಂದು ಎಡ ಸೊಂಟಕ್ಕೆ ಸಿಕ್ಕಿಸಿ ಉಳಿದ ದ್ರವ್ಯಗಳನ್ನು ಹಿಡಿದು ಜಲಪಾತ್ರೆಯೊಂದಿಗೆ (ಕೆಲವರಲ್ಲಿ ಬೇರೆಯೇ ಪಾತ್ರೆಯಲ್ಲಿ ನೀರನ್ನು ಕೊಂಡುಹೋಗುವ ಕ್ರಮವಿದೆ.) ಬಾಗಿಲ ಬಳಿ ಹೋಗಿ ಜಲಪಾತ್ರೆಯನ್ನು ಕೆಳಗಿಟ್ಟು ಜಲಕೂರ್ಚದಿಂದ ಹೊಸ್ತಿಲ ಎರಡು ಬದಿಗಳಿಗೆ ನೀರು ಪ್ರೋಕ್ಷಣೆ ಮಾಡಿ ಕೈಯಲ್ಲಿದ್ದ ದ್ರವ್ಯಗಳನ್ನು ಸಮಪಾಲು ಮಾಡಿ ಹಿಡಿದು ಬಲಅಂಗೈಯನ್ನು ಅಂಗಾತ ಮಾಡಿ, ಬಲಕೈ ಮೇಲೆ ಎಡಅಂಗೈಯನ್ನು ಬೋರಲು (ಸ್ವಸ್ತಿಕಚಿಹ್ನೆಯಂತೆ) ಮಾಡಿ ಬಾಗಿಲ ಎರಡು ಬದಿಗಳಿಗೆ ಹಾಕಿ, ಎಂದು ಜಲಕೂರ್ಚದಿಂದ ಹೊಸ್ತಿಲ ಎರಡು ಬದಿಗಳಿಗೆ ನೀರು ಪ್ರೋಕ್ಷಣೆ ಮಾಡಿ ಜಲಪಾತ್ರೆಯೊಂದಿಗೆ ಬಂದು, ಉತ್ತರೀಯಬಟ್ಟೆಯನ್ನು ಸೊಂಟಕ್ಕೆ ಕಟ್ಟಿಕೊಳ್ಳಬೇಕು. ಪೂರ್ವಮುಖವಾಗಿ ಕುಳಿತು (ಬಲ) ಪವಿತ್ರ ಹೊರ ತೆಗೆದು ಆಚಮನ ಮಾಡಿ ಪುನಃ ಆ ಪವಿತ್ರವನ್ನೇ ಧರಿಸಿಕೊಳ್ಳಬೇಕು.

## ಮಹಾವಿಷ್ಣ್ವಾವಾಹನಮ್

ಎರಡು ದರ್ಭೆಯನ್ನು ಊರ್ಧ್ವಾಗ್ರವಾಗಿ ಹಿಡಿದು, **ಕೇಶವಾದಿದ್ವಾದಶ......... ನಮಃ**

**ವಿಷ್ಟರೋಽಯಮ್ । (ಸುವಿಷ್ಟರಃ) । ಇದಮಾಸನಮ್ । (ಸುಖಾಸನಮ್) ॥** ಎಂದು ಸ್ವಸ್ತಿಕೆಯ ಅಡಿಗಿಟ್ಟು ಅಕ್ಕಿ ಹಿಡಿದು, **ಕೇಶವಾದಿದ್ವಾದಶ........ವಿಷ್ಣುಮ್ ಆವಾಹಯಿಷ್ಯೇ । (ಅಸ್ತು ಆವಾಹಯ) ॥ ವಿಶ್ವತಶ್ಚಕ್ಷುರುತ ವಿಶ್ವತೋ.....ಜನಯನ್ ದೇವ ಏಕಃ ॥ ಮಹಾವಿಷ್ಣುಮ್ ಆವಾಹಯಾಮಿ ॥** –ಎಂದು ಅಕ್ಕಿ ಹಾಕಿ ಆವಾಹನೆ ಮಾಡಿ,

## ಅರ್ಘ್ಯಪಾತ್ರಸ್ಥಾಪನಮ್

'**ಅರ್ಘ್ಯಪಾತ್ರಾಸಾದನಮಹಂ ಕರೀಷ್ಯೇ ॥**' –ಎಂದು ತನ್ನ ಎಡಭಾಗದಲ್ಲಿ ಅರ್ಘ್ಯಪಾತ್ರೆಗೆ,

**ಆಮ ಆಗಚ್ಛಂತು । ಕೇಶವಾದಯೋ ದೇವಯಾನಾನ್ ಸಮುದ್ರಾನ್ ಸಲಿಲಾನ್ ಸುಪರ್ಣಾನ್ । ಅಸ್ಮಿನ್ಯಜ್ಞೇ ಸರ್ವಕಾಮಾಂಲ್ಲಭಂತೇಽಕ್ಷೀಯಮಾಣಾ ಉಪದುಹ್ಯಂ–ತಾಮ್ । ಕೇಶವಾದಿಭ್ಯೋ ವೋ ಗೃಹ್ಣಾಮಿ ॥**

–ಎಂದು ನೀರು ಹಾಕಿ, ನಾಲ್ಕು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು, ಗಂಧಪುಷ್ಪಾಕ್ಷತೆ ಹಾಕಿ, '**ಅರ್ಘ್ಯಪಾತ್ರೇ ಗಂಧಪುಷ್ಪಾಕ್ಷತೈಃ ಸಂಪನ್ನಮ್ । ಸ್ವಾಹಾ ನಮಃ ॥ (ಸುಸಂಪನ್ನಮ್)** ಎಂದು ಅಷ್ಟಾಕ್ಷರಜಪ ಮಾಡಿ, ಅರ್ಘ್ಯಪಾತ್ರೆಯ ದರ್ಭೆ ಹಾಗೂ ನೀರು ಹಿಡಿದು, '**ಕೇಶವಾದಿದ್ವಾದಶ...... ಮಹಾವಿಷ್ಣೋರಿದಂ ವೋ ಅರ್ಘ್ಯಮ್ ॥**' –ಎಂದು ಸ್ವಸ್ತಿಕೆಯ ಸ್ಥಾನದಲ್ಲಿ ಅರ್ಘ್ಯ ಕೊಟ್ಟು,

**ಕೇಶವಾದಿದ್ವಾದಶಮೂರ್ತ್ಯಾತ್ಮಕ ಪ್ರಾಣಸ್ಥಶ್ರೀಮಹಾವಿಷ್ಣವೇ ನಮಃ ॥ ಅಲಂಕಾರಾರ್ಥೇ ಅಮೀ ವೋ ಗಂಧಾಃ । ಇಮೇ ತೇ ಅಕ್ಷತಾಃ ॥ ಇಮಾನಿ ವಃ ಪುಷ್ಪಾಣಿ । ಕೇಶವ ಶ್ರೀಪಾದಪದ್ಮಾಭ್ಯಾಂ ನಮಃ ॥ ಪಾದಾದಿಮುಕುಟಪರ್ಯಂತಂ ಸರ್ವಾಲಂಕಾರೋಽಸ್ತು (ಅಸ್ತು ಸರ್ವಾಲಂಕಾರಃ) । ಆಘ್ರಾಣಾರ್ಥೇ ಅಯಂ ತೇ ಧೂಪಃ । ದರ್ಶನಾರ್ಥೇ ಅಯಂ ತೇ ದೀಪಃ । ಇದಮಂಜನಮ್ । ಆಚ್ಛಾದನಾರ್ಥೇ ವಸ್ತ್ರದ್ವಯಮ್ । ಧಾರಣಾರ್ಥೇ ಯಜ್ಞೋಪವೀತಮ್ । ಆಚಮನೀಯಾರ್ಥೇ ಕಮಂಡಲುಃ । ಪವಿತ್ರಾರ್ಥಾವಿಮೌ ಕುಶೌ ॥**

ಹೀಗೆ ಉಪಚಾರಾದಿಗಳನ್ನು ಸಲ್ಲಿಸಬೇಕು. **ಧೂಪದೀಪಾಂಜನಾ....... ಸಂಕಲ್ಪ–ಯಾಮಿ ॥ (ಸಂಕಲ್ಪಿತಾಃ ಸಂತು)** ತುಲಸೀಪುಷ್ಪಾಕ್ಷತೆ ಹಿಡಿದು, **ನಮೋ ಮಹದ್ಭ್ಯೋ ......ದೇವಾಃ ॥** –ಎಂದು ಮಂಡಲದಲ್ಲಿಟ್ಟು ನಮಸ್ಕಾರ ಮಾಡಿ ಕೈಮುಗಿದು. '**ಕೇಶವಾದಿ ದ್ವಾದಶಮೂರ್ತ್ಯಾತ್ಮಕ ಮಹಾವಿಷ್ಣುರುದ್ದಿಶ್ಯ ಕೂರ್ಚಮುಖೇಷು ಕೃತಮಾರಾಧನಂ ಯಥಾಶಾಸ್ತ್ರೀಯಮಸ್ತ್ವಿತಿ ಭವಂತೋ ಬ್ರುವಂತು । (ಯಥಾ ಶಾಸ್ತ್ರೀಯಮಸ್ತು) । ಸಕಲಾರಾಧನೈಃ ಸ್ವರ್ಚಿತಮ್ । (ಅಸ್ತು) ॥ ಅಷ್ಟಾರ್ಘ್ಯಂ ಸಂಪೂರ್ಯತಾಮ್ । (ಸಂಪೂರ್ಣಮಸ್ತು) ॥**

## ವಿಶ್ವೇದೇವಾವಾಹನಮ್

ಪಶ್ಚಿಮಕ್ಕೆ ಮುಖಮಾಡಿ ಕುಳಿತು, ಎರಡು ದರ್ಭೆಗಳನ್ನು ಊರ್ಧ್ವಾಗ್ರವಾಗಿ ಹಿಡಿದು,

**ಕಾಮಕಾಲಸಂಜ್ಞಕವಿಶ್ವೇದೇವತಾಂತರ್ಯಾಮಿ ಪ್ರಾಣಸ್ಥನಾರಾಯಣಾನಿ–ರುದ್ಧಯೋಃ ವಿಷ್ಟರೋಽಯಮ್ । (ಸುವಿಷ್ಟರಃ) ॥ ಓಂ ಭೂರ್ಭುವಃಸ್ವಃ । ಸಮಾಧ್ವಮ್ । ಆಸ್ಯತಾಂ ಧರ್ಮೋಽಸಿ ವಿಶಿರಾಜಾ ಪ್ರತಿಷ್ಠಿತಃ । ಇದಮಾಸನಮ್ ॥** –ಎಂದು ಕೂರ್ಚದ ಅಡಿಯಲ್ಲಿ ಉತ್ತರಾಗ್ರವಾಗಿ ಅಡ್ಡ ಇಟ್ಟು, **ಕ್ಷಣಃ ಕ್ರಿಯತಾಮ್ ॥ ವಿಶ್ವಾನ್ ದೇವಾನಾವಾಹಯಿಷ್ಯೇ ॥**

ಅಕ್ಕಿ ಹಿಡಿದು,

**ಓಂ ವಿಶ್ವೇ ದೇವಾಸ ಆ ಗತ ಶೃಣುತಾ ಮ ಇಮಂ ಹವಮ್ । ಏದಂ ಬರ್ಹಿರ್ನಿ ಷೀದತ ॥**

ಕೂರ್ಚಮಧ್ಯದಲ್ಲಿ ಅಕ್ಕಿ ಹಾಕಿ, ಅಕ್ಕಿನೀರು ಹಿಡಿದು, **'ವಿಶ್ವೇದೇವಾಂತರ್ಯಾಮಿ ಪ್ರಾಣಸ್ಥನಾರಾಯಣಾನಿರುದ್ಧ ಇದಂ ತೇ ಅರ್ಘ್ಯಂ ಸ್ವಾಹಾ ನ ಮಮ ॥'** –ಎಂದು ಎರಡು ಬಾರಿ ಅರ್ಘ್ಯ ಕೊಟ್ಟು, ಪವಿತ್ರ ಹೊರ ತೆಗೆದು,

**ಅಲಂಕಾರಾರ್ಥೇ ಅಮೀ ವೋ ಗಂಧಾಃ ।** ಪವಿತ್ರ ಧರಿಸಿ, **ಇಮೇ ತೇ ಅಕ್ಷತಾಃ । ಇಮಾನಿ ವೋ ಪುಷ್ಪಾಣಿ । ಉಪೇಂದ್ರ ಮೂರ್ತಯೇ ನಮಃ । ಶ್ರೀಪಾದ–ಪದ್ಮಾಭ್ಯಾಂ ನಮಃ ॥ ಆಧಿವ್ಯಾಧಿ.......ಪಾದಪಂಕಜಮ್ ॥ ಪಾದಾದಿ ಮೂರ್ಧ ಪರ್ಯಂತಂ ಸರ್ವಾಲಂಕಾರೋಽಸ್ತು ॥ (ಅಸ್ತು ಸರ್ವಾಲಂಕಾರಃ) ಆಘ್ರಾಣಾರ್ಥೇ ಅಯಂ ತೇ ಧೂಪಃ । ದರ್ಶನಾರ್ಥೇ ಅಯಂ ತೇ ದೀಪಃ । ಇದಮಂಜನಮ್ । ಅಚ್ಛಾದನಾರ್ಥೇ ವಸ್ತ್ರದ್ವಯಮ್ । ಧಾರಣಾರ್ಥೇ ಯಜ್ಞೋಪವೀತಮ್ । ಆಚಮನೀಯಾರ್ಥೇ ಕಮಂಡಲುಃ । ಪವಿತ್ರಾರ್ಥಾವಿಮೌ ಕುಶೌ ॥**

ಹೀಗೆ ಉಪಚಾರಾದಿಗಳನ್ನು ಸಲ್ಲಿಸಬೇಕು. **'ಧೂಪದೀಪಾ....... ಸಂಕಲ್ಪಯಾಮಿ ॥ (ಸಂಕಲ್ಪಿತಾಃ ಸಂತು)'** ಅಕ್ಕಿ ಹಿಡಿದು, **'ನಮೋ ಮಹದ್ಭ್ಯೋ...ದೇವಾಃ ॥'** ಎಂದು ಹೇಳಿ ಹಾಕಿ, **ನಾರಾಯಣಬಲಿಶ್ರಾದ್ಧೇ ಕೂರ್ಚಮುಖೇ ಮಯಾ ಕೃತ.......ಬ್ರುವಂತು ॥ (ಶಾಸ್ತ್ರೀಯಮಸ್ತು) ಸಕಲಾರಾಧನೈಃ ಸ್ವರ್ಚಿತಮ್ (ಅಸ್ತು) । ಅಷ್ಟಾರ್ಘ್ಯಮ್ ಸಂಪೂರ್ಯತಾಮ್ ॥ (ಸಂಪೂರ್ಣಮಸ್ತು) ॥**

## ಪ್ರೇತಾವಾಹನಮ್

(ಎಡ) ದಕ್ಷಿಣಾಭಿಮುಖವಾಗಿ ಕುಳಿತು, ಒಂದು ದರ್ಭೆಯನ್ನು ಹಿಡಿದು,

**ಅಸ್ಮನ್ಮಿತ್ರಸ್ಯ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ವಿಷ್ಟರೋಽಯಮುಪತಿಷ್ಠತು ॥**
–ಎಂದು ಕೂರ್ಚದ ಅಡಿಯಲ್ಲಿ ಪೂರ್ವಾಗ್ರವಾಗಿ ಅಡ್ಡ ಇಟ್ಟು,

**ಪ್ರೇತಸ್ಯ ಆಸನಮುಪತಿಷ್ಠತು ॥**

ಎಳ್ಳು ಹಿಡಿದು,

**ಅಸ್ಮನ್ಮಿತ್ರಸ್ಯ .......ಗೋತ್ರಸ್ಯ ......ಶರ್ಮಣಃ ಪ್ರೇತಾಂತರ್ಯಾಮಿ ಪ್ರಾಣಸ್ಥಪ್ರಾಜ್ಞಸ್ಯ ಆವಾಹನಮುಪತಿಷ್ಠತು ॥** –ಎಂದು ಕೂರ್ಚದ ಮೇಲೆ ಹಾಕಿ,

**ಓಂ ಪ್ರೇತಾ ಜಯತಾ ನರ ಇಂದ್ರೋ ವಃ ಶರ್ಮ ಯಚ್ಛತು । ಉಗ್ರಾ ವಃ ಸಂತು ಬಾಹವೋಽನಾಧೃಷ್ಯಾ ಯಥಾಸಥ ॥** –ಎಂದು ಆವಾಹಿಸಬೇಕು.

### ಪ್ರೇತಾರ್ಘ್ಯಪಾತ್ರಾಸಾಧನಮ್

**ಅರ್ಘ್ಯಪಾತ್ರಾಸಾಧನಮಹಂ ಕರಿಷ್ಯೇ ॥**

ಒಂದು ಎಲೆಯ ಬಾಳೆಲೆ ದೊಣ್ಣೆಗೆ ನೀರು ಹಾಕಿ,

**ಓಮ್ ಆಮ ಆಗಚ್ಛಂತು ಪ್ರೇತಾ ದೇವಯಾನಾನ್ ಸಮುದ್ರಾನ್ ಸಲಿಲಾನ್ ಸುಪರ್ಣಾನ್ । ಅಸ್ಮಿನ್ಯಜ್ಞೇ ಸರ್ವಕಾಮಾಂಲ್ಲಭಂತೇ ಕ್ಷೀಯಮಾಣಾ ಉಪದುಹ್ಯಂತಾಮ್ । ಇಮಾಂ ಪ್ರೇತಾಯ ತೇ ಗೃಹ್ಣಾಮಿ ॥**

ಒಂದು ಎಳೆಯ ಕೂರ್ಚ ಇಟ್ಟು, ತಿಲ ಗಂಧಪುಷ್ಪಾಕ್ಷತೆ ಹಾಕಿ, ಅಷ್ಟಾಕ್ಷರಮಂತ್ರ ಜಪಿಸಿ, ಎಳ್ಳು ಹಾಗೂ ಅರ್ಘ್ಯಪಾತ್ರೆಯ ನೀರು ಹಿಡಿದು,

**ಅಸ್ಮನ್ಮಿತ್ರಸ್ಯ .......ಶರ್ಮಣಃ ........ಗೋತ್ರಸ್ಯ ಪ್ರೇತಸ್ಯ ಅರ್ಘ್ಯಮುಪತಿಷ್ಠತು ॥**
–ಎಂದು ಕೂರ್ಚದ ಮೇಲೆ ಅರ್ಘ್ಯ ಕೊಡಬೇಕು.

### ಪ್ರೇತಾರಾಧನಮ್

(ಬಲ) ಪವಿತ್ರ ಹೊರ ತೆಗೆದು **ಅಸ್ಮನ್ಮಿತ್ರಸ್ಯ ........ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಅಲಂಕಾರಾರ್ಥೇ ಗಂಧಾಃ ಉಪತಿಷ್ಠತು ॥** ಪವಿತ್ರ ಧರಿಸಿ, (ಎಡ) **ಅಕ್ಷತಾ ಉಪತಿಷ್ಠತು ॥ ಇಮಾನಿ ತೇ ಪುಷ್ಪಾಣಿ ಉಪತಿಷ್ಠತು । ಧೂಪಮುಪತಿಷ್ಠತು । ದರ್ಶನಾರ್ಥೇ ದೀಪಮುಪತಿಷ್ಠತು । ಅಂಜನಮುಪತಿಷ್ಠತು । ಆಚ್ಛಾದನಾರ್ಥೇ ವಸ್ತ್ರದ್ವಯಮುಪತಿಷ್ಠತು । ಧಾರಣಾರ್ಥೇ ಯಜ್ಞೋಪವೀತಮುಪತಿಷ್ಠತು ।**

**ಆಚಮನೀಯಾರ್ಥೇ ಕಮಂಡಲುಮುಪತಿಷ್ಠತು ॥ ಪವಿತ್ರಾರ್ಥೇ ಕುಶಮುಪತಿಷ್ಠತು ॥** –ಹೀಗೆ ಉಪಚಾರಾದಿಗಳನ್ನು ಸಲ್ಲಿಸಬೇಕು.

**ಧೂಪದೀಪಾ......... ಉಪಚಾರಾರ್ಥೇ ತಿಲೋದಕಮುಪತಿಷ್ಠತು ॥**

(ಬಲ) ಅಕ್ಕಿ ಹಿಡಿದು, '**ಅನಾದಿ ನಿಧನೋ ದೇವ....**' ಮತ್ತು '**ಅತಸೀಪುಷ್ಪ**' ಮಂತ್ರಗಳೆರಡರಿಂದ ಅಕ್ಕಿ ಹಾಕಿ ಕೈಮುಗಿಯಬೇಕು.

## ಪಿತ್ರಾರಾಧನಮ್

ಮೂರು ದರ್ಭೆಗಳನ್ನು ಊರ್ಧ್ವಾಗ್ರವಾಗಿ ಹಿಡಿದು, **ಪಿತೃದೇವತಾಂತರ್ಯಾಮಿ ಪ್ರಾಣಸ್ಥಲಕ್ಷ್ಮೀಜನಾರ್ದನಾಯ ವಿಷ್ಟರೋಽಯಮ್ ॥ (ಸುವಿಷ್ಟರಃ) ॥ ಓಂ ಭೂರ್ಭುವಃ ಸ್ವಃ । ಸಮಾಧ್ವಮ್ । ಆಸ್ಯತಾಂ ಧರ್ಮೋಽಸಿ ವಿಶಿರಾಜಾ ಪ್ರತಿಷ್ಠಿತಃ । ಇದಮಾಸನಮ್ ।** ಎಂದು ಕೂರ್ಚದ ಅಡಿಯಲ್ಲಿ ಪೂರ್ವಾಗ್ರವಾಗಿ ಅಡ್ಡ ಇಟ್ಟು, **ಕ್ಷಣಃ ಕ್ರಿಯತಾಮ್ ॥ ಪಿತೃದೇವತಾಂತರ್ಯಾಮಿ ಪ್ರಾಣಸ್ಥಲಕ್ಷ್ಮೀಜನಾರ್ದನಮ್ ಆವಾಹಯಿಷ್ಯೇ ॥**

–ಎಂದು ಎಳ್ಳು ಹಿಡಿದು,

**ಓಮ್ ಉಶಂತಸ್ತ್ವಾ ನಿ ಧೀಮಹ್ಯುಶಂತಃ ಸಮಿಧೀಮಹಿ । ಉಶನ್ನುಶತ ಆ ವಹ ಪಿತೄನ್ ಹವಿಷೇ ಅತ್ತವೇ ॥**

**ಪಿತೃದೇವತಾಂತರ್ಯಾಮಿ ಪ್ರಾಣಸ್ಥಲಕ್ಷ್ಮೀಜನಾರ್ದನಮಾವಾಹಯಾಮಿ ॥**

–ಎಂದು ಕೂರ್ಚದ ಮೇಲೆ ಹಾಕಿ, ಎಳ್ಳು ನೀರು ಹಿಡಿದು,

**ಪಿತೃದೇವತಾಂತರ್ಯಾಮಿ ಪ್ರಾಣಸ್ಥಲಕ್ಷ್ಮೀಜನಾರ್ದನ ಇದಂ ವೋ ಅರ್ಘ್ಯಮ್ ॥** –ಎಂದು ಮೂರು ಬಾರಿ ಕೂರ್ಚದ ಮೇಲೆ ಎಳ್ಳು ನೀರು ಕೊಟ್ಟು,

(ಬಲ) ಪವಿತ್ರ ಹೊರ ತೆಗೆದು **ಅಲಂಕಾರಾರ್ಥೇ ಅಮೀ ವೋ ಗಂಧಾಃ ।** ಪವಿತ್ರ ಧರಿಸಿ, (ಎಡ) **ಇಮೇ ತೇ ಅಕ್ಷತಾಃ । ಇಮಾನಿ ವಃ ಪುಷ್ಪಾಣಿ । ಉಪೇಂದ್ರ ಮೂರ್ತಯೇ ನಮಃ ॥ ಶ್ರೀಪಾದ ಪದ್ಮಾಭ್ಯಾಂ ನಮಃ । ಆಧಿವ್ಯಾಧಿ ........ ಪಾದಪಂಕಜಮ್ ॥ ಮೂರ್ಧಾದಿಪಾದ ಪರ್ಯಂತಂ ಸರ್ವಾಲಂಕಾರೋಽಸ್ತು ॥ (ಅಸ್ತು ಸರ್ವಾಲಂಕಾರಃ) ಆಘ್ರಾಣಾರ್ಥೇ ಅಯಂ ತೇ ಧೂಪಃ । ದರ್ಶನಾರ್ಥೇ ಅಯಂ ತೇ ದೀಪಃ । ಇದಮಂಜನಮ್ । ಅಚ್ಛಾದನಾರ್ಥೇ ವಸ್ತ್ರದ್ವಯಮ್ । ಧಾರಣಾರ್ಥೇ ಯಜ್ಞೋಪವೀತಮ್ । ಆಚಮನೀಯಾರ್ಥೇ ಕಮಂಡಲುಃ । ಪವಿತ್ರಾರ್ಥಾ ಇಮೇ ಕುಶಾಃ ॥**

–ಹೀಗೆ ಉಪಚಾರಾದಿಗಳನ್ನು ಸಲ್ಲಿಸಬೇಕು.

**ಧೂಪದೀಪಾ ......... ಸಂಕಲ್ಪಯಾಮಿ ॥ (ಸಂಕಲ್ಪಿತಾ ಸಂತು)** (ಬಲ) ಕೈಮುಗಿದು **ದೇವತಾಭ್ಯ ಪಿತೃಭ್ಯಶ್ಚ ........ ಪ್ರಸಾದಾದ್ಭವತಾಂ ಮಮ ॥** (ಎಡ) **ಕೂರ್ಚಮುಖೇಷು ಕೃತಮಾರಾಧನಂ ಯಥಾಶಾಸ್ತ್ರೀಯಮಸ್ತ್ವಿತಿ ಭವಂತೋ ಬ್ರುವಂತು । (ಶಾಸ್ತ್ರೀಯಮಸ್ತು) ಸಕಲಾರಾಧನೈಃ ಸ್ವರ್ಚಿತಮ್ । (ಸ್ವರ್ಚಿತಮಸ್ತು) ॥ ಅಷ್ಟಾರ್ಘ್ಯಂ ಸಂಪೂರ್ಯತಾಮ್ । (ಸಂಪೂರ್ಣಮಸ್ತು) ॥**

## ಪ್ರೇತಾರ್ಘ್ಯಪಾತ್ರಸಂಯೋಜನಮ್

(ಎಡ) **ಅಸ್ಮನ್ಮಿತ್ರಸ್ಯ ......ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಪ್ರೇತತ್ವವಿಮೋಕ್ಷಾರ್ಥಂ ......ಪ್ರೇತಾರ್ಘ್ಯಸಂಯೋಜನಂ ಕರಿಷ್ಯೇ ॥ ತದಂಗ ಬ್ರಹ್ಮದಂಡ ಕರಿಷ್ಯೇ । (ಕುರುಷ್ವ) ॥**

ಬ್ರಾಹ್ಮಣರಿಂದ ಪ್ರೇತಾರ್ಘ್ಯಪಾತ್ರಸಂಯೋಜನೆಯ ಅಧಿಕಾರಪ್ರಾಪ್ತಿಗಾಗಿ ಬ್ರಹ್ಮದಂಡ ಇಟ್ಟು (ಪ್ರೇತಘಟದಾನ, ಉದಕುಂಭದಾನ ಕೊಡುವುದಾದರೆ ಕೊಡಬಹುದು. ಪುಟಸಂಖ್ಯೆ 207) ಅನುಜ್ಞೆ ಪಡೆದು ವಿಷ್ಣುಸ್ಥಾನದ ಅರ್ಘ್ಯಪಾತ್ರೆಗೆ ಹಾಗೂ ಪ್ರೇತಾರ್ಘ್ಯಪಾತ್ರೆಗೆ ಜೇನುತುಪ್ಪ ಸೇರಿಸಿ ಎಡಗೈಯಲ್ಲಿ ಪ್ರೇತಾರ್ಘ್ಯಪಾತ್ರವನ್ನು ಹಿಡಿದುಬಲಗೈಯಲ್ಲಿ ಮುಚ್ಚಿ

**ಓಂ ಯೇ ಸಮಾನಾಃ ಸಮನಸಃ ಪಿತರೋ ಯಮರಾಜ್ಯೇ । ತೇಷಾಂ ಲೋಕಃ ಸ್ವಧಾ ನಮೋ ಯಜ್ಞೋ ಯಜ್ಞೇಷು ಕಲ್ಪತಾಮ್ ॥ ಯೇ ಸಜಾತಾಃ ಸಮನಸೋ ಜೀವಾ ಜೀವೇಷು ಮಾಮಕಾಃ । ತೇಷಾಂ ಶ್ರೀರ್ಮಯಿ ಕಲ್ಪತಾಮಸ್ಮಿಁಲ್ಲೋಕೇ ಶತಂ ಸಮಾಃ ॥ ಸಂ ಗಚ್ಛಧ್ವಂ ಸಂ ವದಧ್ವಂ ಸಂ ವೋ ಮನಾಂಸಿ ಜಾನತಾಮ್ । ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ । ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ಸಹ ಚಿತ್ತಮೇಷಾಮ್ । ಸಮಾನಂ ಮಂತ್ರಮಭಿಮಂತ್ರಯೇ ವಃ ಸಮಾನೇನ ವೋ ಹವಿಷಾ ಜುಹೋಮಿ ॥ ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ । ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾಸತಿ ॥ ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ ॥**

**ಅಸ್ಮನ್ಮಿತ್ರಸ್ಯ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಸಮಸ್ತಪಾಪಪರಿಹಾರಾರ್ಥಂ ದುರ್ಗತಿನಿವಾರಣಾರ್ಥಂ ಶಾಶ್ವತ ವಿಷ್ಣುಸಾಯುಜ್ಯಪ್ರಾಪ್ತ್ಯರ್ಥಂ ಮೋಕ್ಷನಾರಾಯಣ ಬಲಿಶ್ರಾದ್ಧೇ ಏತತ್ ಪಾತ್ರೋದಕಂ ಕೇಶವಾದಿ ದ್ವಾದಶಮೂರ್ತಿ ಪಾತ್ರೋದಕೇನ ಸಹಸಂಯೋಜಯಿಷ್ಯೇ ॥ (ಸಂಯೋಜಯ) ॥**

–ಎಂದು ನಾರಾಯಣಬಲಿಶ್ರಾದ್ಧದ ಅರ್ಘ್ಯಪಾತ್ರಕ್ಕೆ ಸ್ವಲ್ಪ ಸೇರಿಸಿ, **ಅಸ್ಮನ್ಮಿತ್ರ .......ಗೋತ್ರ .......ಶರ್ಮನ್ ಪ್ರೇತ ಪ್ರೇತಾರ್ಘ್ಯಪಾತ್ರಸ್ಥೋದಕಂ ಕೇಶವಾದಿ ದ್ವಾದಶಮೂರ್ತಿಭಿಸ್ಸಹ ಪ್ರಾಣಸ್ಥಶ್ರೀಮಹಾವಿಷ್ಣುರೂಪೇಣ ಸಂಯೋಜಯಿಷ್ಯೇ ॥ ಸಾಯುಜ್ಯಂ ಗಚ್ಛ । ಏಷ ತೇ ಅರ್ಘ್ಯಭಾಗಃ । ತಸ್ಮೈ ತೇ ಸ್ವಧಾ ನಮಃ ॥ ಓಮ್ ಓಂ ನಮೋ ನಾರಾಯಣಾಯ ಓಮ್** ॥ –ಎಂದು ಉಳಿದ ನೀರು ಮತ್ತು ಕೂರ್ಚ ಹಿಡಿದು, (ಎಡ)

(ಬಲ) **ಅಸ್ಮನ್ಮಿತ್ರಸ್ಯ .......ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಅರ್ಘ್ಯಮುಪತಿಷ್ಠತು ॥**

–ಎಂದು ಪ್ರೇತಸ್ಥಾನದ ಕೂರ್ಚದ ಮೇಲೆ ಬಿಟ್ಟು (ಎಡ) ಎಡಕಾಲೂರಿ ಕುಳಿತು, ಅರ್ಘ್ಯಪಾತ್ರೆಯನ್ನು ನಾರಾಯಣಸ್ಮರಣೆಯೊಂದಿಗೆ ಕಣ್ಣುಮುಚ್ಚಿ ಎಡಕಾಲಿನ ಹೆಬ್ಬೆರಳಿನಿಂದ ತುಂಡು ಮಾಡಿ, ಹಿಂದೆ ಬಿಸಾಡಬೇಕು.

## ಅರ್ಘ್ಯಮ್

ಪೂರ್ವಮುಖವಾಗಿ ಕುಳಿತು, (ಬಲ) ಆಚಮನ ಮಾಡಿ, ಪವಿತ್ರ ಬಿಚ್ಚಿ, ಪುನಃ ಆಚಮನ ಮಾಡಿ, ಪವಿತ್ರ ಧರಿಸಿ, ನಾರಾಯಣಬಲಿಶ್ರಾದ್ಧದ ಅರ್ಘ್ಯಪಾತ್ರದ ನೀರನ್ನು ಕೂರ್ಚಸಹಿತವಾಗಿ ಹಿಡಿದು,

**ನಾರಾಯಣಾಯ ವಿದ್ಮಹೇ । ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್ ॥ ಕೇಶವ ಇದಂ ತೇ ಅರ್ಘ್ಯಮ್ ॥**

–ಎಂದು ಅರ್ಘ್ಯ ಕೊಟ್ಟು, ಹೀಗೆಯೇ ನಾರಾಯಣಬಲಿಮಂಡಲದ ಉಳಿದ ಹನ್ನೊಂದು ಸ್ಥಾನಗಳಲ್ಲಿಯೂ ಅರ್ಘ್ಯ ಕೊಡಬೇಕು.

## ಪಾಕಶುದ್ಧಿಃ

ನೀರಿನಿಂದ ಚೌಕಾಕಾರದ ಮಂಡಲ ಮಾಡಿ, ಹವಿಸ್ಸನ್ನು ತಂದು ಮಂಡಲದಲ್ಲಿ ಇಟ್ಟು ತುಲಸಿ ಹಾಗೂ ನೀರು ಹಿಡಿದು,

**ಓಂ ಭೂರ್ಭುವಃಸ್ವಃ ಸ್ವಾಹಾ ॥ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥ ಅಯಂ ತ ಆಘೃಣೇ ಸುತೋ ಘೃತಂ ನ ಪವತೇ ಶುಚಿ । ಆ ಭಕ್ಷತ್ಕನ್ಯಾಸು ನಃ ॥ ಪ್ರ ಪ್ಯಾಯಸ್ವ**

**ಪ್ರ ಸ್ಯಂದಸ್ವ ಸೋಮ ವಿಶ್ವೇಭಿರಂಶುಭಿಃ । ದೇವೇಭ್ಯ ಉತ್ತಮಂ ಹವಿಃ ॥**

–ಎಂದು ಭೋಜನ ಪದಾರ್ಥಗಳಿಗೆ ಪ್ರೋಕ್ಷಣೆ ಮಾಡಿ,

**ಸಿದ್ಧಂ ಸರ್ವಂ ಹವಿಃ ಶ್ರಾದ್ಧಯೋಗ್ಯಮಸ್ತ್ವಿತಿ ಭವಂತೋ ಬ್ರುವಂತು ॥ (ಶ್ರಾದ್ಧಯೋಗ್ಯಮಸ್ತು) ಪಾಕಾದೀನಾಂ ಪವಿತ್ರತಾಽಸ್ತ್ವಿತಿ ಭವಂತೋ ಬ್ರುವಂತು ॥ (ಪವಿತ್ರತಾಽಸ್ತು)**

## ಮಂಡಲಾದ್ಯರ್ಚನಮ್

ವಿಶ್ವೇದೇವಸ್ಥಾನ, ಪ್ರೇತ, ಪಿತೃದೇವತಾಸ್ಥಾನಗಳಲ್ಲಿ ಮೂರು ಬಾರಿ ತೀರ್ಥ ಕೊಟ್ಟು, ನಿರ್ಮಾಲ್ಯ ತುಳಸಿ ಅಕ್ಷತಾಂಗಾರಕಾದಿಗಳನ್ನು ನೀಡಿ, ಸ್ವಸ್ತಿಕೆಯ ಎದುರು ಹಾಗೂ ವಿಶ್ವೇದೇವಸ್ಥಾನದ ಎದುರು ನೀರಿನಿಂದ ಚೌಕಾಕಾರದ, ಪ್ರೇತಸ್ಥಾನದಲ್ಲಿ ತ್ರಿಕೋನಾಕಾರದ, ಪಿತೃಸ್ಥಾನದಲ್ಲಿ ವೃತ್ತಾಕಾರದ, ಮಂಡಲ ಮಾಡಿ, ಬಾಳೆಎಲೆ ಹಾಕಿ, ನಾರಾಯಣಬಲಿ ಮಂಡಲದ ಬಳಿ (ತನ್ನ ಎಡಭಾಗದಲ್ಲಿ) ಪಿಂಡ ಮಾಡಲು ಹವಿಸ್ಸನ್ನು ಹಾಕಲು ಪೂರ್ವಾಗ್ರವಾಗಿ ಎಲೆ ಹಾಕಿ ಅನಂತರ ಗೋಗ್ರಾಸಕ್ಕಾಗಿ ಪೂರ್ವಕ್ಕೆ ತುದಿ ಇರುವಂತೆ ಎಲೆ ಹಾಕಿ ಹಾಗೂ ಬಲಭಾಗದಲ್ಲಿ ಪ್ರೇತಹವಿಸ್ಸನ್ನು ಹಾಕಲು ದಕ್ಷಿಣಾಗ್ರವಾಗಿ ಬಾಳೆಎಲೆ ಹಾಕಿ ಎಲ್ಲಾ ಎಲೆಗಳಿಗೂ ಜಲಕೂರ್ಚದಿಂದ ಪ್ರೋಕ್ಷಣೆ ಮಾಡಿ ಒರಸಿ ಕ್ರಮವಾಗಿ ಅಭಿಘಾರ ಮಾಡಿ, ಸ್ವಸ್ತಿಕೆಯ ಎಲೆಗೆ ಹಾಗೂ ನಾರಾಯಣಬಲಿಯ ಪಿಂಡದ ಎಲೆಗೆ ಮಧು–ಘೃತಮಿಶ್ರಿತಾನ್ನವನ್ನು ಬಡಿಸಿ, ಎರಡು ಬಾರಿ ಅಭಿಘಾರ ಮಾಡಿ ಸ್ವಸ್ತಿಕೆಯ ನೈವೇದ್ಯವನ್ನು ಕೇಶವಾದಿ ದ್ವಾದಶಮೂರ್ತ್ಯಾತ್ಮಕಮಹಾವಿಷ್ಣುವಿಗೆ ಸಮರ್ಪಿಸಬೇಕು. ಅನಂತರ ಉಳಿದ ಅನ್ನವನ್ನು ವಿಶ್ವೇದೇವಸ್ಥಾನ, ಪ್ರೇತಸ್ಥಾನ, ಪಿತೃಸ್ಥಾನದ ಎಲೆಗಳಿಗೆ ಬಡಿಸಿ, ಪಾಣಿಹೋಮಕ್ಕೆ ಬೇರೆಯೇ ಸ್ವಲ್ಪ ಅನ್ನವನ್ನು ಬಾಳೆಲೆ ದೊಣ್ಣೆಯಲ್ಲಿ ತೆಗೆದಿಟ್ಟು ಉಳಿದ ಅನ್ನವನ್ನು ಪ್ರೇತಪಿಂಡದ ಎಲೆಗೆ ಹಾಕಿ, ಬ್ರಾಹ್ಮಣಸ್ಥಾನಗಳಲ್ಲಿ ಬಡಿಸಿದ ಅನ್ನಕ್ಕೆಲ್ಲ ಎರಡು ಬಾರಿ ಅಭಿಘಾರ ಮಾಡಬೇಕು.

## ಪಾಣಿಹೋಮಃ

ಪ್ರೇತಸ್ಥಾನದ ಕೂರ್ಚದ ಬಲಭಾಗದಲ್ಲಿ, ನೆಲದಲ್ಲಿ ನೀರಿನಿಂದ ತ್ರಿಕೋನಾಕಾರದ ಮಂಡಲ ಮಾಡಿ, ದಕ್ಷಿಣಾಗ್ರವಾಗಿ ದರ್ಭೆ ಇಟ್ಟು, '**ಅಗ್ನಿಂ ಪ್ರಜ್ವಲಿತಂ ವಂದೇ....**' ಎಂದು ಅಗ್ನಿಯನ್ನು ಧ್ಯಾನಿಸಿ, ಪರಿಷೇಕ ಮಾಡಿ, ಪರಶುರಾಮ ಆವಾಹನೆ ಮಾಡಿ, ವ್ಯಾಹೃತಿ ಮಾಡಿ, ಪಾಣಿಹೋಮದ ಅನ್ನವನ್ನು ಒಂದು ದರ್ಭೆಯಿಂದ ನಾಲ್ಕು ಪಾಲು ಮಾಡಿ ಮೊದಲನೆಯ ಪಾಲಿನಿಂದ ಒಂದು ಪಿಂಡ ಮಾಡಿ, (ಎಡ) '**ಅಸ್ಮನ್ಮಿತ್ರಾಯ ......ಶರ್ಮಣೇ ....ಪ್ರೇತಾಯ ಯಮಾಯ ಚ ಸ್ವಾಹಾ ॥**' ಎಂದು ಒಂದು ಆಹುತಿ ನೀಡಿ, (ಬಲ) ವ್ಯಾಹೃತಿ ಮಾಡಿ, ಉತ್ತರಪರಿಷೇಕ, ಅಗ್ನ್ಯುಪಸ್ಥಾನ, ಕೃಷ್ಣಾರ್ಪಣ

ಬಿಡಬೇಕು. ಅನಂತರ ಎರಡನೆಯ ಪಾಲಿನ ಪಾಣಿಹೋಮಾನ್ನವನ್ನು ಪ್ರೇತಬ್ರಾಹ್ಮಣರ ಎಲೆಗೆ **'ಸ್ವಧೇಯಮ್'** ಎಂದು ಹಾಕಬೇಕು. **'ಅಸ್ತು ಸ್ವಧೇಯಮ್'** ಎಂದು ಪ್ರತಿವಚನ ಹೇಳಬೇಕು.

## ಬ್ರಾಹ್ಮಣಭೋಜನವಿಧಿಃ

ವಿಶ್ವೇದೇವಸ್ಥಾನದಲ್ಲಿ, **'ಪೃಥಿವೀ ತೇ ಪಾತ್ರಮ್ । ದ್ಯೌರಪಿಧಾನಮ್ । ಕೂರ್ಚ ಮುಖೇऽಮೃತೇऽಮೃತಂ ಜುಹೋಮಿ ಸ್ವಾಹಾ । ಓಂ ಭೂರ್ಭುವಃ ಸ್ವಾಹಾ ॥'** –ಎಂದು ಅನ್ನವನ್ನು ಪ್ರೋಕ್ಷಣೆ ಮಾಡಿ, **'ಸತ್ಯಂ ತ್ವರ್ತೇನ ಪರಿಷಿಂಚಾಮಿ ॥'** ಎಂದು ಜಲಕೂರ್ಚದಿಂದ ಪ್ರದಕ್ಷಿಣೆಮಾಡಿ, ಸುತ್ತು ಕಟ್ಟಿ,

**ಓಮ್ ಅತೋ ದೇವಾ ......ಧಾಮಭಿಃ ॥**

**ವಿಷ್ಣೋ ಹವ್ಯಂ ರಕ್ಷಸ್ವ । ನಾರಾಯಣಬಲಿ ಶ್ರಾದ್ಧೇ ವಿಶ್ವೇಭ್ಯೋ ದೇವೇಭ್ಯಃ ಇದಮನ್ನಮಮೃತರೂಪಂ ಸ್ವಾಹಾ ನಮಃ ॥**

ಪ್ರೇತಸ್ಥಾನದಲ್ಲಿ,

(ಎಡ) **ಪೃಥಿವೀ ತೇ ಪಾತ್ರಮುಪತಿಷ್ಠತು । ದ್ಯೌರಪಿಧಾನಮುಪತಿಷ್ಠತು । ಓಂ ಭೂರ್ಭುವಃ ಸ್ವಾಹಾ ॥** –ಎಂದು ಅನ್ನಕ್ಕೆ ಪ್ರೋಕ್ಷಣೆ ಮಾಡಿ, **'ಸತ್ಯಂ ತ್ವರ್ತೇನ ಪರಿಷಿಂಚಾಮಿ ॥'** ಎಂದು ಜಲಕೂರ್ಚದಿಂದ ಅಪ್ರದಕ್ಷಿಣೆ ಮಾಡಿ, ಸುತ್ತು ಕಟ್ಟಿ, **'ವಿಷ್ಣೋ ಕವ್ಯಂ ರಕ್ಷಸ್ವ । ನಾರಾಯಣಬಲಿಶ್ರಾದ್ಧೇ ಪ್ರೇತಾಯ ಇದಮನ್ನಮಮೃತ–ರೂಪಮುಪತಿಷ್ಠತು ॥'**

ಪಿತೃಸ್ಥಾನದಲ್ಲಿ, **'ಪೃಥಿವೀ ತೇ ಪಾತ್ರಮ್ । ದ್ಯೌರಪಿಧಾನಮ್ । ಕೂರ್ಚ ಮುಖೇऽಮೃತೇऽಮೃತಂ ಜುಹೋಮಿ ಸ್ವಧಾ । ಓಂ ಭೂರ್ಭುವಃ ಸ್ವಾಹಾ ॥'**

–ಎಂದು ಅನ್ನವನ್ನು ಪ್ರೋಕ್ಷಣೆ ಮಾಡಿ, **'ಸತ್ಯಂ ತ್ವರ್ತೇನ ಪರಿಷಿಂಚಾಮಿ ॥'** ಎಂದು ಜಲಕೂರ್ಚದಿಂದ ಅಪ್ರದಕ್ಷಿಣೆಯಾಗಿ ಸುತ್ತುಕಟ್ಟಿ, **'ಓಮ್ ಇದಂ ವಿಷ್ಣುಃ...... ಪಾಂಸುರೇ ॥ ವಿಷ್ಣೋ ಕವ್ಯಂ ರಕ್ಷಸ್ವ । ನಾರಾಯಣಬಲಿಶ್ರಾದ್ಧೇ ಪಿತೃ ದೇವತಾಭ್ಯ ಇದಮನ್ನಮಮೃತರೂಪಂ ಸ್ವಧಾ ನಮಃ ॥'**

(ಬಲ) ಗೋಗ್ರಾಸಕ್ಕೆ ತೀರ್ಥ ಹಾಕಿ,

**ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।**
**ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥**

**ಗವಾಂತರ್ಗತ ಪ್ರಾಣಸ್ಥಶ್ರೀಗೋಪಾಲಕೃಷ್ಣಃ ಪ್ರೀಯತಾಮ್ ॥** –ಎಂದು ನೀರು ಬಿಟ್ಟು,

**ನಾರಾಯಣಬಲಿಶ್ರಾದ್ಧಾಂಗತಯಾ ಮಯಾ ಕೃತ ಕೂರ್ಚಮುಖಬ್ರಾಹ್ಮಣಾ-ರಾಧನೇನ ಪ್ರಾಣಸ್ಥಶ್ರೀಮಹಾವಿಷ್ಣುಃ ಪ್ರೀಯತಾಮ್ ॥**

ಅನಂತರ ಮೂರು ಸ್ಥಾನಗಳಲ್ಲಿ ತೀರ್ಥ ಕೊಟ್ಟು ಜಲಪಾತ್ರ ಹಿಡಿದು ಎದ್ದುನಿಂತು,

**ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ ।**
**ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ॥**

**ಶ್ರೀಕೃಷ್ಣಾರ್ಪಣಮಮಸ್ತು । ಸುಭೋಜ್ಯಮಸ್ತು ॥ ಅಮೃತೋಪಸ್ತರಣಮಸಿ ಜುಹೋಮಿ ಸ್ವಾಹಾ ॥**

**ಓಂ ಶ್ರದ್ಧಾಯಾಂ ಪ್ರಾಣೇ .................. ಆತ್ಮನೇ ಸ್ವಾಹಾ ॥**

**ಪರಮಾತ್ಮನ ಇದಂ ನ ಮಮ ॥**

**ಅಪೇಕ್ಷಿತಂ ಯಾಚಿತವ್ಯಂ......ಸ್ವಸ್ಥಮಾನಸೈಃ ॥**

**ಮಹಾವಿಷ್ಣವೇ ನಮಃ ........ಶನೈಶ್ಶನೈರ್ಭುಜ್ಯತಾಮ್ ॥ ಕಾಮಕಾಲ........ ಶನೈಶ್ಶನೈರ್ಭುಜ್ಯತಾಮ್ ॥**

**(ಎಡ) ಪ್ರೇತಾಂತರ್ಗತ..........ಶನೈಶ್ಶನೈರ್ಭುಜ್ಯತಾಮ್ ॥**

**ಪಿತೃದೇವತಾಂತರ್ಯಾಮಿ ಪ್ರಾಣಸ್ಥಲಕ್ಷ್ಮೀಜನಾರ್ದನ ಶನೈಶ್ಶನೈರ್ಭುಜ್ಯತಾಮ್ ॥**

ನಾರಾಯಣಬಲಿಯ ಮಧುಘೃತಮಿಶ್ರಿತ ಅನ್ನದಿಂದ ಹನ್ನೆರಡು ಪಿಂಡ ಹಾಗೂ ಒಂದು ಉಲೂಖಲಾ(ಒನಕೆಯಾ)ಕಾರದ ದೊಡ್ಡ ಪಿಂಡ ಮಾಡಬೇಕು. ಅನಂತರ ಪಾಣಿಹೋಮದ ಮೂರನೆಯ ಪಾಲಿನ ಅನ್ನಕ್ಕೆ ಸ್ವಲ್ಪ ಮೊಸರು ಹಾಕಿ ವಿಕಿರಬಲಿಗೆ ತೆಗೆದಿಡಬೇಕು ಹಾಗೂ ನಾಲ್ಕನೆಯ ಪಾಲಿನ ಅನ್ನವನ್ನು ಪ್ರೇತಪಿಂಡಾನ್ನದೊಂದಿಗೆ ಸೇರಿಸಿ ಮಧುಘೃತತಿಲಮಿಶ್ರಿತ ಪ್ರೇತಪಿಂಡಾನ್ನದಿಂದ ಹನ್ನೆರಡು ಅಂಗುಲ ಉದ್ದದ ಒಂದು ಪ್ರೇತಪಿಂಡ ಮಾಡಬೇಕು.

**ಪ್ರಾಣಸ್ಥಶ್ರೀಮಹಾವಿಷ್ಣವೇ ನಮಃ । ಮಧುಮಧು ಸಂಪನ್ನಮ್ । (ಸುಸಂಪನ್ನಮ್) ॥**

**ಕಾಮಕಾಲಸಂಜ್ಞಕ ....... ಪ್ರಾಣಸ್ಥಶ್ರೀನಾರಾಯಣಾನಿರುದ್ಧ ಮಧುಮಧು ಸಂಪನ್ನಮ್ । (ಸುಸಂಪನ್ನಮ್) ॥ ತೃಪ್ತಾಸ್ಥಃ । (ತೃಪ್ತಾಃ ಸ್ಮಃ) ॥**

**ಪ್ರೇತ ...... ಪ್ರಾಣಸ್ಥಶ್ರೀಪ್ರಾಜ್ಞಮಧುಮಧು ಸಂಪನ್ನಮ್ । (ಸುಸಂಪನ್ನಮ್) ॥ ತೃಪ್ತಾಸ್ಥಃ । (ತೃಪ್ತಾಃ ಸ್ಮಃ) ॥**

**ಪಿತೃದೇವತಾಂತರ್ಯಾಮಿ ಪ್ರಾಣಸ್ಥಶ್ರೀಲಕ್ಷ್ಮೀಜನಾರ್ದನ ಮಧುಮಧು ಸಂಪನ್ನಮ್ । (ಸುಸಂಪನಮ್) ॥ ತೃಪ್ತಾಸ್ಥಃ । (ತೃಪ್ತಾಃ ಸ್ಮಃ) ॥**

## ವಿಕಿರಬಲಿಃ

(ಬಲ) ವಿಷ್ಣುವಿನ ಎದುರು ನೀರಿನಿಂದ ಚೌಕಾಕಾರದ ಮಂಡಲ ಮಾಡಿ ಎರಡು ದರ್ಭೆಗಳನ್ನು ಪೂರ್ವಾಗ್ರವಾಗಿಟ್ಟು ಅದರ ಮೇಲೆ ಅಕ್ಷತೋದಕ ಕೊಟ್ಟು ದರ್ಭೆಯ ಮೇಲೆ ನಾರಾಯಣಬಲಿಯ ಅನ್ನ ಇಟ್ಟು,

**ಅಸಂಶಯೋ ಭವೇದ್ವಿಷ್ಣುಃ ಮೋಕ್ಷಸಾಧನಮವ್ಯಯಮ್ ।**
**ಪಿತೄಣಾಂ ಚ ವರಂ ಶ್ರೇಷ್ಠಂ ವಿಕಿರಾನ್ನಂ ಚ ವೈಷ್ಣವಮ್ ॥**

ಅಕ್ಷತೋದಕ ಹಿಡಿದು '**ಪ್ರಾಣಸ್ಥಶ್ರೀಮಹಾವಿಷ್ಣುಸ್ತೃಪ್ತಿರಸ್ತು ॥**' –ಎಂದು ಅನ್ನದ ಮೇಲೆ ಬಿಡ ಬೇಕು.

ಅನಂತರ ವಿಶ್ವೇದೇವಸ್ಥಾನದ ಎದುರು ನೀರಿನಿಂದ ಚೌಕಾಕಾರದ ಮಂಡಲ ಮಾಡಿ ಎರಡು ದರ್ಭೆಯನ್ನು ಪೂರ್ವಾಗ್ರವಾಗಿಟ್ಟು ಅಕ್ಷತೋದಕ ಕೊಟ್ಟು ಅದರ ಮೇಲೆ ನಾರಾಯಣಬಲಿಯ ಸ್ವಲ್ಪ ಅನ್ನವನ್ನಿಟ್ಟು,

**ಅಸೋಮಪಾಶ್ಚ ಯೇ ದೇವಾ ಯಜ್ಞಭಾಗವಿವರ್ಜಿತಾಃ ।**
**ತೇಷಾಮನ್ನಂ ಪ್ರದಾಸ್ಯಾಮಿ ವಿಕಿರಂ ವೈಶ್ವದೈವಿಕಮ್ ॥**

ಅಕ್ಷತೋದಕ ಹಿಡಿದು, '**ಅಸೋಮಪೇಭ್ಯೋ ದೇವಗಣೇಭ್ಯಃ ತೃಪ್ತಿರಸ್ತು ॥**' –ಎಂದು ಅನ್ನದ ಮೇಲೆ ಬಿಡಬೇಕು.

ಪ್ರೇತಸ್ಥಾನದಲ್ಲಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ನೀರಿನಿಂದ ಮಾಡಿ ಒಂದು ದರ್ಭೆಯನ್ನು ದಕ್ಷಿಣಾಗ್ರವಾಗಿಟ್ಟು ತಿಲೋದಕ ಬಿಟ್ಟು ಮೂರನೆಯ ಪಾಲಿನ ಮೊಸರು ಸೇರಿಸಿದ ಅನ್ನವನ್ನು ತೆಗೆದು, '**ಪ್ರೇತೇ ವಿಕಿರಮುಪತಿಷ್ಠತು ॥**' ಎಂದು ಇಟ್ಟು ತಿಲೋದಕ ಬಿಟ್ಟು, ಪಿತೃಬ್ರಾಹ್ಮಣರ ಎದುರು ನೀರಿನಿಂದ ವೃತ್ತಾಕಾರದ ಮಂಡಲ ಮಾಡಿ ಮೂರು ದರ್ಭೆಯನ್ನು ದಕ್ಷಿಣಾಗ್ರವಾಗಿಟ್ಟು ಅದರ ಮೇಲೆ ತಿಲೋದಕ ಬಿಟ್ಟು, ಹೆಬ್ಬೆರಳು ತೋರುಬೆರಳಿನಿಂದ ನಾರಾಯಣಬಲಿಯ ಸ್ವಲ್ಪ ಅನ್ನ ಇಟ್ಟು,

**ಅಸಂಸ್ಕೃತ ಪ್ರಮೀತಾ ಯೇ ತ್ಯಾಗಿನ್ಯೋ ಯಾ ಕುಲಸ್ತ್ರಿಯಃ ।**
**ದಾಸ್ಯಾಮಿ ತೇಭ್ಯೋ ವಿಕಿರಮನ್ನಂ ತಾಭ್ಯಶ್ಚ ಪೈತೃಕಮ್ ॥**

–ಎಂದು ಅನ್ನದ ಮೇಲೆ ತಿಲೋದಕ ಬಿಡಬೇಕು.

ಸ್ವಸ್ತಿಕಾಮಧ್ಯದಲ್ಲಿ ಉತ್ತರಾಪೋಶನ ನೀಡಿ, ನೈವೇದ್ಯವನ್ನು ವಿಸರ್ಜಿಸಿ ಹಸ್ತಪ್ರಕ್ಷಾಲನಾದಿ ಉಪಚಾರ ಮಾಡಿ, ಎಲೆಯ ಅನ್ನಕ್ಕೆ ತೀರ್ಥ ಹಾಕಿ, '**ವಿಷ್ವಕ್ಸೇನಾಯ ನಮಃ । ಮಹಾನೈವೇದ್ಯಂ ಸಮರ್ಪಯಾಮಿ ॥**' ಎಂದು ವಿಷ್ವಕ್ಸೇನನಿಗೆ ಸಮರ್ಪಿಸಬೇಕು.

ಅನಂತರ ನೀರು ಹಿಡಿದು '**ಅಮೃತಾಪಿಧಾನಮಸಿ ॥**' ಎಂದು ಪ್ರೇತಸ್ಥಾನದಲ್ಲಿ, ಪಿತೃಸ್ಥಾನದಲ್ಲಿ ಉತ್ತರಾಪೋಶನ ಕೊಟ್ಟು, ಅನಂತರ ವಿಶ್ವದೇವಸ್ಥಾನದಲ್ಲಿ ಕೊಟ್ಟು (ಎಡ) ಜಲಕೂರ್ಚದಿಂದ ಪ್ರೇತಸ್ಥಾನದಲ್ಲಿ, ಪಿತೃಸ್ಥಾನದಲ್ಲಿ ಹಸ್ತಪ್ರಕ್ಷಾಲನಾದಿಗಳನ್ನು ಕೊಟ್ಟು ವಿಶ್ವೇದೇವಸ್ಥಾನದಲ್ಲಿ ಹಸ್ತಪ್ರಕ್ಷಾಲನಾದಿಗಳನ್ನು ಕೊಡಬೇಕು.

## ಪಿಂಡಪ್ರದಾನಮ್

(ಬಲ) ಪೂರ್ವಾಭಿಮುಖವಾಗಿ ಕುಳಿತು, **ಮಿತ್ರಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞ... ವಿಷ್ಣುಸಾಯುಜ್ಯಪ್ರಾಪ್ತ್ಯರ್ಥಂ** (ಎಡ) **ನಾರಾಯಣಬಲಿಶ್ರಾದ್ಧೇ ಪ್ರೇತಪಿಂಡಪ್ರದಾನಂ** (ಬಲ) **ಕರಿಷ್ಯೇ ॥ (ಕುರುಷ್ವ) ॥ ಈಶಾನವಿಷ್ಣುಕಮಲಾಸನ .......॥ ಪಿಂಡದಾನಸ್ಯ ಅನುಜ್ಞಾ ॥ (ಅಸ್ತುಪಿಂಡದಾನಮ್)**

(ಎಡ) ಪ್ರೇತಬರ್ಹಿಸ್ಸಿನಲ್ಲಿ ಎಳ್ಳುನೀರು ಹಿಡಿದು,

**ಅಸ್ಮನ್ಮಿತ್ರಸ್ಯ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯಾಪ್ಯಾಯನಾರ್ಥಂ ತಿಲತೋಯಾಂಜಲಿರುಪತಿಷ್ಠತು ॥** –ಎಂದು ದರ್ಭೆಯ ಮೇಲೆ ತಿಲೋದಕ ಬಿಡಬೇಕು.

ಉದ್ದದ ಪಿಂಡವನ್ನು ದಕ್ಷಿಣಾಗ್ರವಾಗಿ ಹಿಡಿದು ತ್ರಿಕೋನಾಕಾರದ ಮಂಡಲದ ಮೇಲೆ,

**ಅಸ್ಮನ್ಮಿತ್ರಸ್ಯ ........ಗೋತ್ರಸ್ಯ .......ಶರ್ಮಣಃ ಪ್ರೇತಸ್ಯಾಪ್ಯಾಯನಾರ್ಥಮ್ ಅಯಂ ತೇ ಪಿಂಡ ಉಪತಿಷ್ಠತು** ॥ –ಎಂದು ಪಿಂಡ ಇಡಬೇಕು.

**ಅಸ್ಮನ್ಮಿತ್ರಸ್ಯ ......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯಾಪ್ಯಾಯನಾರ್ಥಂ ತಿಲತೋಯಾಂಜಲಿರುಪತಿಷ್ಠತು** ॥ –ಎಂದು ಪಿಂಡದ ಮೇಲೆ ತಿಲೋದಕ ಬಿಡಬೇಕು.

ಹೋಮಪ್ರಸಾದವನ್ನು ಸ್ವಲ್ಪ ಪಿಂಡದ ಮೇಲೆ ಹಾಕಿ, ಉಳಿದ ಹೋಮದ ತಿಲ, ಭಸ್ಮ ಹಿಡಿದು, ಅಂಜನಾಭ್ಯಂಜನ ನೀಡಿ, ವಾಸೋದಕಾದಿಗಳನ್ನು ನೀಡಬೇಕು. ದರ್ಭೆ ಹಿಡಿದು '**ಬಲಿಸ್ಥಾನೇ ದರ್ಭಪತ್ರಮುಪತಿಷ್ಠತು**' ಎಂದು ಪಿಂಡದ ಸುತ್ತ ಅಪ್ರದಕ್ಷಿಣಾ–ಕಾರವಾಗಿ ದರ್ಭೆಯನ್ನು ಹರಡಬೇಕು. ಎಳ್ಳು ನೀರು ಹಿಡಿದು, '**ಬಲಿಸ್ಥಾನೇ ತಿಲೋದಕ–ಮುಪತಿಷ್ಠತು ॥**' ಎಂದು ದರ್ಭೆಯ ಮೇಲೆ ಕೊಟ್ಟು, ಅನ್ನವನ್ನು ಹಿಡಿದು, '**ಪಿಂಡಾನಾಂ ಪರಿತಃ ಬಲಿರುಪತಿಷ್ಠತು ॥**' ಎಂದು ಬಲಿಹಾಕಿ, ಎಳ್ಳು ನೀರು ಹಿಡಿದು, '**ಬಲೇರುಪರಿ ತಿಲೋದಕಮುಪತಿಷ್ಠತು ॥**' –ಎಂದು ಬಲಿಯ ಮೇಲೆ ನೀಡಿ, (ಬಲ) ದೂರ್ವಾತುಳಸೀ ಪುಷ್ಪಗಳಿಂದ ಪಿಂಡವನ್ನು ಅಲಂಕರಿಸಿ ಅಕ್ಕಿ ಹಿಡಿದು, '**ಅನಾದಿ ನಿಧನೋ**' ಮಂತ್ರ ಪಠಿಸಿ, ಕೃಷ್ಣಾರ್ಪಣ ಬಿಡಬೇಕು.

## ನಾರಾಯಣಬಲಿಮಂಡಲೇ ಪಿಂಡಪ್ರದಾನಮ್

ನಾರಾಯಣಬಲಿಮಂಡಲದಲ್ಲಿ ಪೂರ್ವಾಭಿಮುಖವಾಗಿ ಕುಳಿತು, ಹೂವಿನಿಂದ ಕೇಶವಾದಿ ದ್ವಾದಶನಾಮಗಳಿಂದ ಸ್ವಸ್ತಿಕಾಸ್ಥಾನದಲ್ಲಿ ಹಾಗೂ ಮಂಡಲದಲ್ಲಿ ಅರ್ಚನೆ ಮಾಡಿ, ಪಿಂಡ ಹಿಡಿದು,

**(ಎಡ) ಅಸ್ಮನ್ಮಿತ್ರಸ್ಯ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಆಪ್ಯಾಯನಾರ್ಥೇ ನಾರಾಯಣಬಲಿಶ್ರಾದ್ಧೇ (ಬಲ) ಕೇಶವ ಅಯಂ ತೇ ಪಿಂಡಃ ॥ ಓಮ್ ಓಂ ನಮೋ ನಾರಾಯಣಾಯ ಓಮ್ ॥**

**(ಎಡ) ಅಸ್ಮನ್ಮಿತ್ರಸ್ಯ ......ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಆಪ್ಯಾಯನಾರ್ಥೇ ನಾರಾಯಣಬಲಿಶ್ರಾದ್ಧೇ (ಬಲ) ನಾರಾಯಣ ಅಯಂ ತೇ ಪಿಂಡಃ ॥ ಓಮ್ ಓಂ ನಮೋ ನಾರಾಯಣಾಯ ಓಮ್ ॥**

ಹೀಗೆಯೇ ಇನ್ನುಳಿದ ಹತ್ತು ಸ್ಥಾನದಲ್ಲಿ ಪಿಂಡಪ್ರದಾನ ಮಾಡಿ, ಕೊನೆಗೆ, (ಎಡ) ದೊಡ್ಡ ಪಿಂಡವನ್ನು ಹಿಡಿದು,

**ಅಸ್ಮನ್ಮಿತ್ರಸ್ಯ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಆಪ್ಯಾಯನಾರ್ಥೇ ನಾರಾಯಣಬಲಿಶ್ರಾದ್ಧೇ (ಬಲ) ಮಹಾವಿಷ್ಣೋ ಅಯಂ ತೇ ಪಿಂಡಃ ॥ ಓಮ್ ಓಂ ನಮೋ ನಾರಾಯಣಾಯ ಓಮ್ ॥**

–ಎಂದು ಮಂಡಲಮಧ್ಯದಲ್ಲಿಟ್ಟು ಪುನಃ ಹೂವಿನಿಂದ ಸ್ವಸ್ತಿಕೆ ಹಾಗೂ ಪಿಂಡದ ಮೇಲೆ ಕೇಶವಾದಿ ದ್ವಾದಶನಾಮಗಳಿಂದ ಅರ್ಚನೆ ಮಾಡಬೇಕು.

## ಪ್ರೇತಪಿಂಡಸಂಯೋಜನಮ್

**ಸಂಕಲ್ಪಃ**

**ಪ್ರೇತಾಂತರ್ಗತ ಪ್ರಾಣಸ್ಥ ಪ್ರಾಜ್ಞರೂಪಿ ..... (ಎಡ) ಅಸ್ಮನ್ಮಿತ್ರಸ್ಯ .......ಗೋತ್ರಸ್ಯ ..........ಶರ್ಮಣಃ ಪ್ರೇತಸ್ಯ ಪ್ರೇತತ್ವವಿಮೋಕ್ಷಾರ್ಥಂ (ಬಲ) ಬ್ರಹ್ಮದಂಡಪೂರ್ವಕ ಪಿಂಡಸಂಯೋಜನಂ ಚ ಕರಿಷ್ಯೇ ॥ (ಕುರುಷ್ವ) ॥**

ಬ್ರಾಹ್ಮಣರಿಂದ ಪ್ರೇತಪಿಂಡಸಂಯೋಜನೆಯ ಅಧಿಕಾರಪ್ರಾಪ್ತಿಗಾಗಿ ಬ್ರಹ್ಮದಂಡ ಇಟ್ಟು, ಅನುಜ್ಞೆ ಪಡೆದು, ದಕ್ಷಿಣಕ್ಕೆ ಮುಖ ಮಾಡಿ ಕುಳಿತು, ಉದ್ದವಿರುವ ಪ್ರೇತಪಿಂಡವನ್ನು ಜಾಗ್ರತೆಯಿಂದ ಮೆಲ್ಲನೆ ನಾರಾಯಣಸ್ಮರಣೆಯೊಂದಿಗೆ ಚೌಕವಾಡಿ (ಬಲ) ನಾರಾಯಣಸ್ಮರಣೆಯೊಂದಿಗೆ ನಾರಾಯಣಬಲಿಮಂಡಲದ ಮಧ್ಯದಲ್ಲಿಟ್ಟು ಮಹಾವಿಷ್ಣುವಿನ ಪಿಂಡದೊಂದಿಗೆ ಸಂಯೋಜನೆ ಮಾಡಿ ಮುಟ್ಟಿಕೊಂಡು,

**ಓಂ ಯೇ ಸಮಾನಾಃ ಸಮನಸಃ ಪಿತರೋ ಯಮರಾಜ್ಯೇ । ತೇಷಾಂ ಲೋಕಃ ಸ್ವಧಾ ನಮೋ ಯಜ್ಞೋ ಯಜ್ಞೇಷು ಕಲ್ಪತಾಮ್ ॥ ಯೇ ಸಜಾತಾಃ ಸಮನಸೋ ಜೀವಾ ಜೀವೇಷು ಮಾಮಕಾಃ । ತೇಷಾಂ ಶ್ರೀರ್ಮಯಿ ಕಲ್ಪತಾಮಸ್ಮಿಲ್ಲೋಕೇ ಶತಂ ಸಮಾಃ ॥ ಸಂಗಚ್ಛಧ್ವಂ ....... ಸುಸಹಾಸತಿ ॥**

ಅನಂತರ ನೀರು ಹಿಡಿದು '**ಅಮೃತಾಪಿಧಾನಮಸಿ ॥**' ಎಂದು ಪ್ರೇತಸ್ಥಾನದಲ್ಲಿ, ಪಿತೃಸ್ಥಾನದಲ್ಲಿ ಉತ್ತರಾಪೋಶನ ಕೊಟ್ಟು, ಅನಂತರ ವಿಶ್ವೇದೇವಸ್ಥಾನದಲ್ಲಿ ಕೊಟ್ಟು (ಎಡ) ಜಲಕೂರ್ಚದಿಂದ ಪ್ರೇತಸ್ಥಾನದಲ್ಲಿ, ಪಿತೃಸ್ಥಾನದಲ್ಲಿ ಹಸ್ತಪ್ರಕ್ಷಾಲನಾದಿಗಳನ್ನು ಕೊಟ್ಟು ವಿಶ್ವೇದೇವಸ್ಥಾನದಲ್ಲಿ ಹಸ್ತಪ್ರಕ್ಷಾಲನಾದಿಗಳನ್ನು ಕೊಡಬೇಕು.

## ಪಿಂಡಪ್ರದಾನಮ್

(ಬಲ) ಪೂರ್ವಾಭಿಮುಖವಾಗಿ ಕುಳಿತು, **ಮಿತ್ರಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞ.... ವಿಷ್ಣುಸಾಯುಜ್ಯಪ್ರಾಪ್ತ್ಯರ್ಥಂ** (ಎಡ) **ನಾರಾಯಣಬಲಿಶ್ರಾದ್ಧೇ ಪ್ರೇತಪಿಂಡಪ್ರದಾನಂ** (ಬಲ) **ಕರಿಷ್ಯೇ ॥ (ಕುರುಷ್ವ) ॥ ಈಶಾನವಿಷ್ಣುಕಮಲಾಸನ .......॥ ಪಿಂಡದಾನಸ್ಯ ಅನುಜ್ಞಾ ॥ (ಅಸ್ತುಪಿಂಡದಾನಮ್)**

(ಎಡ) ಪ್ರೇತಬರ್ಹಿಸ್ಸಿನಲ್ಲಿ ಎಳ್ಳುನೀರು ಹಿಡಿದು,

**ಅಸ್ಮನ್ಮಿತ್ರಸ್ಯ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯಾಪ್ಯಾಯನಾರ್ಥಂ ತಿಲತೋಯಾಂಜಲಿರುಪತಿಷ್ಠತು ॥** –ಎಂದು ದರ್ಭೆಯ ಮೇಲೆ ತಿಲೋದಕ ಬಿಡಬೇಕು.

ಉದ್ದದ ಪಿಂಡವನ್ನು ದಕ್ಷಿಣಾಗ್ರವಾಗಿ ಹಿಡಿದು ತ್ರಿಕೋನಾಕಾರದ ಮಂಡಲದ ಮೇಲೆ,

**ಅಸ್ಮನ್ಮಿತ್ರಸ್ಯ ........ಗೋತ್ರಸ್ಯ .......ಶರ್ಮಣಃ ಪ್ರೇತಸ್ಯಾಪ್ಯಾಯನಾರ್ಥಮ್ ಅಯಂ ತೇ ಪಿಂಡ ಉಪತಿಷ್ಠತು ॥** –ಎಂದು ಪಿಂಡ ಇಡಬೇಕು.

**ಅಸ್ಮನ್ಮಿತ್ರಸ್ಯ ......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯಾಪ್ಯಾಯನಾರ್ಥಂ ತಿಲತೋಯಾಂಜಲಿರುಪತಿಷ್ಠತು ॥** –ಎಂದು ಪಿಂಡದ ಮೇಲೆ ತಿಲೋದಕ ಬಿಡಬೇಕು.

ಹೋಮಪ್ರಸಾದವನ್ನು ಸ್ವಲ್ಪ ಪಿಂಡದ ಮೇಲೆ ಹಾಕಿ, ಉಳಿದ ಹೋಮದ ತಿಲ, ಭಸ್ಮ ಹಿಡಿದು, ಅಂಜನಾಭ್ಯಂಜನ ನೀಡಿ, ವಾಸೋದಕಾದಿಗಳನ್ನು ನೀಡಬೇಕು. ದರ್ಭೆ ಹಿಡಿದು '**ಬಲಿಸ್ಥಾನೇ ದರ್ಭಪತ್ರಮುಪತಿಷ್ಠತು**' ಎಂದು ಪಿಂಡದ ಸುತ್ತ ಅಪ್ರದಕ್ಷಿಣಾ–ಕಾರವಾಗಿ ದರ್ಭೆಯನ್ನು ಹರಡಬೇಕು. ಎಳ್ಳು ನೀರು ಹಿಡಿದು, '**ಬಲಿಸ್ಥಾನೇ ತಿಲೋದಕ–ಮುಪತಿಷ್ಠತು ॥**' ಎಂದು ದರ್ಭೆಯ ಮೇಲೆ ಕೊಟ್ಟು, ಅನ್ನವನ್ನು ಹಿಡಿದು, '**ಪಿಂಡಾನಾಂ ಪರಿತಃ ಬಲಿರುಪತಿಷ್ಠತು ॥**' ಎಂದು ಬಲಿಹಾಕಿ, ಎಳ್ಳು ನೀರು ಹಿಡಿದು, '**ಬಲೇರುಪರಿ ತಿಲೋದಕಮುಪತಿಷ್ಠತು ॥**' –ಎಂದು ಬಲಿಯ ಮೇಲೆ ನೀಡಿ, (ಬಲ) ದೂರ್ವಾತುಳಸೀ ಪುಷ್ಪಗಳಿಂದ ಪಿಂಡವನ್ನು ಅಲಂಕರಿಸಿ ಅಕ್ಕಿ ಹಿಡಿದು, '**ಅನಾದಿ ನಿಧನೋ**' ಮಂತ್ರ ಪಠಿಸಿ, ಕೃಷ್ಣಾರ್ಪಣ ಬಿಡಬೇಕು.

## ನಾರಾಯಣಬಲಿಮಂಡಲೇ ಪಿಂಡಪ್ರದಾನಮ್

ನಾರಾಯಣಬಲಿಮಂಡಲದಲ್ಲಿ ಪೂರ್ವಾಭಿಮುಖವಾಗಿ ಕುಳಿತು, ಹೂವಿನಿಂದ ಕೇಶವಾದಿ ದ್ವಾದಶನಾಮಗಳಿಂದ ಸ್ವಸ್ತಿಕಾಸ್ಥಾನದಲ್ಲಿ ಹಾಗೂ ಮಂಡಲದಲ್ಲಿ ಅರ್ಚನೆ ಮಾಡಿ, ಪಿಂಡ ಹಿಡಿದು,

(ಎಡ) ಅಸ್ಮನ್ಮಿತ್ರಸ್ಯ .......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಆಪ್ಯಾಯನಾರ್ಥೇ ನಾರಾಯಣಬಲಿಶ್ರಾದ್ಧೇ (ಬಲ) ಕೇಶವ ಅಯಂ ತೇ ಪಿಂಡಃ ॥ ಓಮ್ ಓಂ ನಮೋ ನಾರಾಯಣಾಯ ಓಮ್ ॥

(ಎಡ) ಅಸ್ಮನ್ಮಿತ್ರಸ್ಯ ......ಗೋತ್ರಸ್ಯ ........ಶರ್ಮಣಃ ಪ್ರೇತಸ್ಯ ಆಪ್ಯಾಯನಾರ್ಥೇ ನಾರಾಯಣಬಲಿಶ್ರಾದ್ಧೇ (ಬಲ) ನಾರಾಯಣ ಅಯಂ ತೇ ಪಿಂಡಃ ॥ ಓಮ್ ಓಂ ನಮೋ ನಾರಾಯಣಾಯ ಓಮ್ ॥

ಹೀಗೆಯೇ ಇನ್ನುಳಿದ ಹತ್ತು ಸ್ಥಾನದಲ್ಲಿ ಪಿಂಡಪ್ರದಾನ ಮಾಡಿ, ಕೊನೆಗೆ, (ಎಡ) ದೊಡ್ಡ ಪಿಂಡವನ್ನು ಹಿಡಿದು,

ಅಸ್ಮನ್ಮಿತ್ರಸ್ಯ ......ಗೋತ್ರಸ್ಯ ......ಶರ್ಮಣಃ ಪ್ರೇತಸ್ಯ ಆಪ್ಯಾಯನಾರ್ಥೇ ನಾರಾಯಣಬಲಿಶ್ರಾದ್ಧೇ (ಬಲ) ಮಹಾವಿಷ್ಣೋ ಅಯಂ ತೇ ಪಿಂಡಃ ॥ ಓಮ್ ಓಂ ನಮೋ ನಾರಾಯಣಾಯ ಓಮ್ ॥

–ಎಂದು ಮಂಡಲಮಧ್ಯದಲ್ಲಿಟ್ಟು ಪುನಃ ಹೂವಿನಿಂದ ಸ್ವಸ್ತಿಕೆ ಹಾಗೂ ಪಿಂಡದ ಮೇಲೆ ಕೇಶವಾದಿ ದ್ವಾದಶನಾಮಗಳಿಂದ ಅರ್ಚನೆ ಮಾಡಬೇಕು.

## ಪ್ರೇತಪಿಂಡಸಂಯೋಜನಮ್

ಸಂಕಲ್ಪಃ

ಪ್ರೇತಾಂತರ್ಗತ ಪ್ರಾಣಸ್ಥ ಪ್ರಾಜ್ಞರೂಪಿ ..... (ಎಡ) ಅಸ್ಮನ್ಮಿತ್ರಸ್ಯ .......ಗೋತ್ರಸ್ಯ ..........ಶರ್ಮಣಃ ಪ್ರೇತಸ್ಯ ಪ್ರೇತತ್ವವಿಮೋಕ್ಷಾರ್ಥಂ (ಬಲ) ಬ್ರಹ್ಮದಂಡಪೂರ್ವಕ ಪಿಂಡಸಂಯೋಜನಂ ಚ ಕರಿಷ್ಯೇ ॥ (ಕುರುಷ್ವ) ॥

ಬ್ರಾಹ್ಮಣರಿಂದ ಪ್ರೇತಪಿಂಡಸಂಯೋಜನೆಯ ಅಧಿಕಾರಪ್ರಾಪ್ತಿಗಾಗಿ ಬ್ರಹ್ಮದಂಡ ಇಟ್ಟು, ಅನುಜ್ಞೆ ಪಡೆದು, ದಕ್ಷಿಣಕ್ಕೆ ಮುಖ ಮಾಡಿ ಕುಳಿತು, ಉದ್ದವಿರುವ ಪ್ರೇತಪಿಂಡವನ್ನು ಜಾಗ್ರತೆಯಿಂದ ಮೆಲ್ಲನೆ ನಾರಾಯಣಸ್ಮರಣೆಯೊಂದಿಗೆ ಚೌಕಮಾಡಿ (ಬಲ) ನಾರಾಯಣಸ್ಮರಣೆಯೊಂದಿಗೆ ನಾರಾಯಣಬಲಿಮಂಡಲದ ಮಧ್ಯದಲ್ಲಿಟ್ಟು ಮಹಾವಿಷ್ಣುವಿನ ಪಿಂಡದೊಂದಿಗೆ ಸಂಯೋಜನೆ ಮಾಡಿ ಮುಟ್ಟಿಕೊಂಡು,

ಓಂ ಯೇ ಸಮಾನಾಃ ಸಮನಸಃ ಪಿತರೋ ಯಮರಾಜ್ಯೇ । ತೇಷಾಂ ಲೋಕಃ ಸ್ವಧಾ ನಮೋ ಯಜ್ಞೋ ಯಜ್ಞೇಷು ಕಲ್ಪತಾಮ್ ॥ ಯೇ ಸಜಾತಾಃ ಸಮನಸೋ ಜೀವಾ ಜೀವೇಷು ಮಾಮಕಾಃ । ತೇಷಾಂ ಶ್ರೀರ್ಮಯಿ ಕಲ್ಪತಾಮಸ್ಮಿಲ್ಲೋಕೇ ಶತಂ ಸಮಾಃ ॥ ಸಂಗಚ್ಛಧ್ವಂ ....... ಸುಸಹಾಸತಿ ॥

ವೇದಾಂತ ವಿಜ್ಞಾನಸುನಿಶ್ಚಿತಾರ್ಥಾಃ
ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ ।
ತೇ ಬ್ರಹ್ಮಲೋಕೇ ತು ಪರಾಂತಕಾಲೇ
ಪರಾಮೃತಾತ್ ಪರಿಮುಚ್ಯಂತಿ ಸರ್ವೇ ॥

ದಹ್ರಂ ವಿ ಪಾಪಂ ಪರಮೇಽಶ್ಮಭೂತಂ
ಯತ್ಪುಂಡರೀಕಂ ಪುರಮಧ್ಯಸಗ್ಂಸ್ಥಮ್ ।
ತತ್ರಾಪಿ ದಹ್ರಂ ಗಗನಂ ವಿಶೋಕ–
ಸ್ತಸ್ಮಿನ್ ಯದಂತಸ್ತದುಪಾಸಿತವ್ಯಮ್ ॥

ಓಂ ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾ ರೂಪಾಣಿ ಪಿಂಶತು । ಆ ಸಿಂಚತು ಪ್ರಜಾಪತಿರ್ಧಾತಾ ಗರ್ಭಂ ದಧಾತು ತೇ ॥ ೧ ॥ ಗರ್ಭಂ ಧೇಹಿ ಸಿನೀವಾಲಿ ಗರ್ಭಂ ಧೇಹಿ ಸರಸ್ವತಿ । ಗರ್ಭಂ ತೇ ಅಶ್ವಿನೌ ದೇವಾವಾ ಧತ್ತಾಂ ಪುಷ್ಕರಸ್ರಜಾ ॥ ೨ ॥ ಹಿರಣ್ಯಯೀ ಅರಣೀ ಯಂ ನಿರ್ಮಂಥತೋ ಅಶ್ವಿನಾ । ತಂ ತೇ ಗರ್ಭಂ ಹವಾಮಹೇ ದಶಮೇ ಮಾಸಿ ಸೂತವೇ ॥ ೩ ॥

ಅಸ್ಮನ್ಮಿತ್ರ ........ಶರ್ಮನ್ ........ಗೋತ್ರ ಪ್ರೇತ ಪ್ರಾಣಸ್ಥಶ್ರೀಮಹಾವಿಷ್ಣುನಾ ಸಹ ಸಾಯುಜ್ಯಂ ಗಚ್ಛ ॥ ಓಮ್ ಓಂ ನಮೋ ನಾರಾಯಣಾಯ ಓಮ್ ॥

–ಎಂದು ಹತ್ತು ಬಾರಿ ಜಪಿಸಬೇಕು. ಅನಂತರ ಪ್ರೇತಸ್ಥಾನದ ಬಲಿಹರಣದ ಅನ್ನವನ್ನು ತೆಗೆದು ಮೆಲ್ಲಗೆ ಸಂಯೋಜನೆ ಮಾಡಿದ ಭಾಗಕ್ಕೆ ಮೆತ್ತಬೇಕು. ಬಲಿಪತ್ರವನ್ನು ವಿಸರ್ಜಿಸಬೇಕು.

## ದಾನಾನಿ

ಪ್ರೇತಾಂತರ್ಗತ ..... (ಎಡ) ಅಸ್ಮನ್ಮಿತ್ರಸ್ಯ ......ಗೋತ್ರಸ್ಯ .......ಶರ್ಮಣಃ ಪ್ರೇತಸ್ಯ ಅಂಧತ್ವ ಮೂಕತ್ವ ಬಧಿರತ್ವ ಪಂಗುತ್ವ ಕುಬ್ಜತ್ವ ನಗ್ನತ್ವ ಪೈಶಾಚತ್ವನಿವೃತ್ತಿಮುದ್ದಿಶ್ಯ ಪ್ರೇತಶಬ್ದನಿವೃತ್ತಿಯೋಗ್ಯತಾಸಿದ್ಧಯೇ ಚ (ಬಲ) ಬ್ರಾಹ್ಮಣಾರಾಧನಪೂರ್ವಕ ದೀಪ ಪುಸ್ತಕ ಘಂಟಾ ಶಾಲಗ್ರಾಮ ಗೋದಾನ ಆಮಾನ್ನದಾನಂ ಚ ಕರ್ಮ ಕರಿಷ್ಯೇ ॥ (ಕುರುಷ್ವ) ॥ ನಮೋ ಬ್ರಹ್ಮಣ್ಯ .... ನಮೋನಮಃ ॥

ಎಂದು ಬ್ರಾಹ್ಮಣರನ್ನು ಸ್ವಾಗತಿಸಿ, ದೀಪ, ಪುಸ್ತಕ, ಘಂಟಾ, ಶಾಲಗ್ರಾಮ, ಗೋದಾನಾದಿಗಳನ್ನು ಕೊಟ್ಟು ದಕ್ಷಿಣೆಯನ್ನು ನೀಡಿ ವಿಶ್ವೇದೇವಸ್ಥಾನದ ಪ್ರೇತಸ್ಥಾನದ

ಹಾಗೂ ಪಿತೃದೇವತಾಸ್ಥಾನದ ಉದ್ದೇಶದಿಂದ ಮೂವರು ಬ್ರಾಹ್ಮಣರನ್ನು ಆಮಂತ್ರಿಸಿ ಮೂರು ಹೊಸ ಮಣೆ ಹಾಕಿ ಪಾದಪ್ರಕ್ಷಾಲನಪೂರ್ವಕ ತಾಂಬೂಲ, ವಸ್ತ್ರ, ಗೋಪಿ, ಯಜ್ಞೋಪವೀತ, ಪಂಚಪಾತ್ರೆ, ಫಲ ಹಾಗೂ ಮೂರು ಆಮಾನ್ನಪಾತ್ರೆಗಳನ್ನು ಎತ್ತಿ,

**ಆಮಾನ್ನಂ ವಿಷ್ಣುದೈವತ್ಯಂ ಪಾಕೇನಾನ್ನಂ ಭವಿಷ್ಯತಿ ।**
**ಯಸ್ಮಾದಸ್ಯ ಪ್ರದಾನೇನ ಅತಃ ಶಾಂತಿಂ ಪ್ರಯಚ್ಛ ಮೇ ॥**

–ಎಂದು ಕೊಟ್ಟು ದಕ್ಷಿಣೆಯನ್ನು ನೀಡಿ ಕೈಮುಗಿದು,

**ವ್ರತನಿಯಮತಪಃ ಸ್ವಾಧ್ಯಾಯನಿರತಾಃ ಬ್ರಾಹ್ಮಣಾಃ । ಯಾನಿ ಭಾಷ್ಯಂತೇ ಮನ್ಯಂತೇ ತಾನಿ ದೇವತಾಃ ॥ ಇತಿ ನ್ಯಾಯೇನ ಭವತ್ಪಾದಕಮಲಸನ್ನಿಧೌ ಪ್ರಾರ್ಥಯೇ ॥**

**ಅಸ್ಮನ್ಮಿತ್ರಂ ......ಗೋತ್ರಂ ......ಶರ್ಮಾಣಂ ಪ್ರೇತಮುದ್ದಿಶ್ಯ ತಾಂತ್ರಿಕವಿಧಾನೇನ ಕೃತೇನ ಸಾಯುಜ್ಯ ನಾರಾಯಣಬಲಿಕರ್ಮಣಾ ಅಸ್ಮನ್ಮಿತ್ರಸ್ಯ ......ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ ಪ್ರೇತಶಬ್ದನಿವೃತ್ತಿಪೂರ್ವಕ ಮೋಕ್ಷಜ್ಞಾನಪೂರ್ವಕ ಜೀವಯೋಗ್ಯತಾನುಸಾರೇಣ ಸದ್ಗತಿಪ್ರಾಪ್ತಿರ್ಭೂಯಾದಿತಿ ಭವಂತೋ ಬ್ರುವಂತು ॥ (ಮೋಕ್ಷಜ್ಞಾನಪೂರ್ವಕಸದ್ಗತಿ ಪ್ರಾಪ್ತಿರಸ್ತು) ॥**

–ಎಂದು ಪ್ರೇತಸ್ಥಾನದಲ್ಲಿ ತಾಂಬೂಲ ದಕ್ಷಿಣೆ ಕೊಟ್ಟು,

**ಓಂ ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ ।**
**ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ॥**

**ಪ್ರೇತತ್ವಂ ಚ ವಿಹಾಯಾಽಶು ವಿಷ್ಣುತ್ವಂ ಪ್ರಾಪ್ನುಯಾತ್ ಪರಮ್ ।**
**ಶಿವಾ ಭವತು ಶೇಷಾಶ್ಚ ವಿಷ್ಣುನಾ ಸಹ ಗಚ್ಛತು ॥**

**ಏಷ ವೋಽನುಗತಃ ಪ್ರೇತೋ ವಿಷ್ಣುಸಾಯುಜ್ಯಮಾಪ್ನುಯಾತ್ ।**
**ಶುಭಂ ಭವತು ಶೇಷಾಣಾಂ ಜಾಯಂತಾಂ ಚಿರಜೀವಿನಃ ॥**

**ಇತಃ ಪರಂ ಪ್ರೇತಶಬ್ದೋ ನಾಸ್ತಿ ವಾ?**

**ಇತಃ ಪರಂ ಪ್ರೇತಶಬ್ದೋ ನಾಸ್ತಿ ।**

**ಇತಃ ಪರಂ ವಿಷ್ಣುಶಬ್ದೋಚ್ಚಾರಣಂ ಕುರು ॥**

–ಎಂದು ಬ್ರಾಹ್ಮಣರು ಪ್ರತಿವಚನ ನೀಡಲು, '**ಪ್ರೇತಮ್ ಉದ್ವಾಸಯಿಷ್ಯೇ ॥**' ಎಂದು ಪ್ರೇತಸ್ಥಾನದ ಕೂರ್ಚವನ್ನು ಬಿಚ್ಚಿ ಹಾಕಿ, ಪೂರ್ವಮುಖವಾಗಿ ಕುಳಿತು, ಆಚಮನ ಮಾಡಿ, ಪವಿತ್ರ ಬಿಚ್ಚಿ, ಪುನಃ ಆಚಮನ ಮಾಡಿ, ನಾಲ್ಕು ಎಳೆಯ ಪವಿತ್ರ ಧರಿಸಿ,

**ಪಿಂಡಸ್ಯೋಪರಿ ಅಕ್ಷತೋದಕಮ್ । ಅಂಜನೋದಕಮ್ । ಅಭ್ಯಂಜನೋದಕಮ್ ॥**

– ಎಂದು ಕೊಟ್ಟು ಪಿಂಡದ ಮೇಲೆ ಬಟ್ಟೆ ಹಾಕಿ, **'ಸಹಸ್ರಶೀರ್ಷಂ ದೇವಂ ....... ಸ್ವರಾಟ್ ॥** ಎಂದು **ನಾರಾಯಣಪನ್ನ**(ಪುಟ ಸಂಖ್ಯೆ 564)ದಿಂದ ಮಂಡಲದ ಸುತ್ತ ಬಲಿ ಹಾಕಿ ಅರಳು ಹರಡಬೇಕು.

## ನಾರಾಯಣಬಲಿಪೂಜಾ

ತುಲಸಿ ಪುಷ್ಪಾಕ್ಷತೆ ಹಿಡಿದು, **ಚತುರ್ವಿಂಶತಿನಾಮ**ಗಳಿಂದ ಅರ್ಚನೆ ಮಾಡಿ, ಪುನಃ **ಅನಂತಾಯ ನಮಃ । ವಿಶ್ವೇಶ್ವರಾಯ ನಮಃ । ವಿಶ್ವಾತ್ಮನೇ । ಶ್ರೀಪತಯೇ ॥ ಶ್ರೀನಿವಾಸಾಯ । ವೈಕುಂಠಾಯ । ಮುಕುಂದಾಯ । ಬ್ರಹ್ಮಣ್ಯಾಯ । ಪುಷ್ಕರಾಯ । ಚಕ್ರಿಣೇ । ಯೋಗೀಶಾಯ । ಸರ್ವೇಶಾಯ । ಓಂ ಮಹಾವಿಷ್ಣವೇ ನಮಃ ॥** ಎಂದು ಅರ್ಚಿಸಿ, ಪುರುಷಸೂಕ್ತದಿಂದ ಧ್ಯಾನಾವಾಹನಾದಿ ಷೋಡಶೋಪಚಾರಪೂಜೆ ಮಾಡಿ ಅರಳು ಹಿಡಿದು **ನಾರಾಯಣೋಪನಿಷತ್** (ಪುಟ ಸಂಖ್ಯೆ 444) ಪಠಿಸಿ ಮುಂದಿನ ಮಂತ್ರಗಳಿಂದ ಮೂರು ಸುತ್ತು ಬರಬೇಕು.

**ನಮಸ್ತೇ ಪುಂಡರೀಕಾಕ್ಷ ಋಣತ್ರಯವಿಮೋಚನ ।**
**ಲಕ್ಷ್ಮೀಕಾಂತ ನಮಸ್ತುಭ್ಯಂ ನಮಸ್ತೇ ಪಿತೃಮೋಕ್ಷದ ॥**

**ಜನಾರ್ದನ ನಮಸ್ತುಭ್ಯಂ ನಮಸ್ತೇ ಪಿತೃಮೋಕ್ಷದ ।**
**ಪಿತೃಪತೇ ನಮಸ್ತೇಽಸ್ತು ನಮಸ್ತೇ ಪಿತೃರೂಪಿಣೇ ॥**

**'ಅನಾದಿ ನಿಧನೋ'** ಮತ್ತು **'ಅತಸೀಪುಷ್ಪ.....'**

**ಅಸ್ಮನ್ಮಿತ್ರ .........ಶರ್ಮನ್ ........ಗೋತ್ರ ಮೋಕ್ಷಜ್ಞಾನಪೂರ್ವಕ ಜೀವಯೋಗ್ಯತಾನುಸಾರೇಣ ಸದ್ಗತಿಂ ಗಚ್ಛ ॥**

–ಎಂದು ಕೈಯಲ್ಲಿರುವ ಅರಳನ್ನು ಪಿಂಡದ ಮೇಲೆ ಹಾಕಿ ನಮಸ್ಕಾರ ಮಾಡಬೇಕು. ಅನಂತರ ತುಳಸಿ ನೀರು ಹಿಡಿದು,

**ಮಯಾ ಕೃತಮಿದಂ ಶ್ರಾದ್ಧಂ ಮೋಕ್ಷನಾರಾಯಣಾತ್ಮಕಮ್ ।**
**ಮಹಾವಿಷ್ಣುಪ್ರಸಾದೇನ ಪ್ರೀಯತಾಂ ಮೇ ಜನಾರ್ದನ ॥**

**ಕಾಯೇನ ವಾಚಾ ........ ನಾರಾಯಣಾಯೇತಿ ಸಮರ್ಪಯಾಮಿ ॥**

–ಎಂದು ಕೃಷ್ಣಾರ್ಪಣಬಿಟ್ಟು ಒಂದು ತುಳಸಿಯನ್ನು ಪಿಂಡದ ಮೇಲೆ ಹಾಕಿ ಉಳಿದ ತುಳಸಿಯನ್ನು ಕಿವಿಯಲ್ಲಿ ಧರಿಸಿ ಕೈಮುಗಿದು **ಅಚ್ಯುತಾನಂತಗೋವಿಂದಾಯನಮಃ** ಎಂದು ಪ್ರಾರ್ಥಿಸಬೇಕು.

## ಪಿಂಡವಿಸರ್ಜನಮ್

ಅರ್ಘ್ಯಪಾತ್ರದ ಕೂರ್ಚವನ್ನು ವಿಶ್ವೇದೇವಸ್ಥಾನಕ್ಕೆ ಮುಟ್ಟಿಸಿ, ನಾರಾಯಣಸ್ಮರಣೆಮಾಡಿ, ಬಿಚ್ಚಿ ತೀರ್ಥವನ್ನು ಪ್ರೋಕ್ಷಣೆ ಮಾಡಿಕೊಂಡು, ಉಳಿದ ತೀರ್ಥವನ್ನು ಹವಿಸ್ಸಿನ ಪಾತ್ರೆಗೆ ಹಾಕಿ ಹಾಗೆ ಸ್ವಲ್ಪ ದೇವರ ತೀರ್ಥ ಹಾಕಿ, ಅಕ್ಕಿ ಹಿಡಿದು

**ಓಮ್ ಇಮಂ ಮೇ ಗಂಗೇ ............. ಸುಷೋಮಯಾ ॥**

**ಗಂಗಾದಿ ಸರ್ವನದ್ಯಂತರ್ಯಾಮಿ ಪ್ರಾಣಸ್ಥಲಕ್ಷ್ಮೀಜನಾರ್ದನಮಾವಾಹಯಾಮಿ ॥**

–ಎಂದು ನೀರಿನ ಪಾತ್ರೆಗೆ ಹಾಕಿ, ಅನಂತರ ಪಿಂಡಗಳನ್ನು ಕ್ರಮವಾಗಿ ತೆಗೆದು ನೀರಿನ ಪಾತ್ರೆಗೆ ಹಾಕಬೇಕು.

**ಓಂ ಯತ್ರ ತದ್ವಿಷ್ಣುರ್ಮಹೀಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥**

**ವಾಸನಾದ್ವಾಸುದೇವೋಽಸಿ ವಾಸಿತಂತೇ ಜಗತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

**ಓಂ ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಸ್ಸಚಂತ ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ॥**

**ವೇಣೀಮಾಧವಾಯ ನಮಃ । ಬಿಂದು ಮಾಧವಾಯ ನಮಃ । ಗಯಾಗದಾಧರಾಯ ನಮಃ ॥**

ವಿಶ್ವೇದೇವಸ್ಥಾನದಲ್ಲಿ ಹಾಗೂ ಪಿತೃಸ್ಥಾನದಲ್ಲಿ ಪಾತ್ರೋಚ್ಚಾಲನ, ಕರಶುದ್ಧಿ, ಸ್ವಸ್ತಿವಾಚನ, ಗೋತ್ರಾಭಿವಂದನೆ ಹಾಗೂ ತಾಂಬೂಲದಕ್ಷಿಣಾದಿಗಳನ್ನು (ಪುಟಸಂಖ್ಯೆ 339ರಲ್ಲಿ ಹೇಳಿದಂತೆ) ಮಾಡಬೇಕು.

## ಸಮಾಪನಮ್

ಜಲಕೂರ್ಚದಿಂದ (ಎಡ) ಪಿತೃಸ್ಥಾನದ ಕೂರ್ಚಕ್ಕೆ ನೀರು ಕೊಟ್ಟು, (ಬಲ) ವಿಶ್ವೇದೇವಸ್ಥಾನದ ಕೂರ್ಚಕ್ಕೆ ನೀರು ಕೊಟ್ಟು, ನಿಂತಲ್ಲೇ ಮೂರು ಸುತ್ತು ಬಂದು,

**ಓಂ ವಾಜೇವಾಜೇಽವತ ವಾಜಿನೋ ನೋ ಧನೇಷು ವಿಪ್ರಾ ಅಮೃತಾ ಋತಜ್ಞಾಃ । ಅಸ್ಯ ಮಧ್ವಃ ಪಿಬತ ಮಾದಯಧ್ವಂ ತೃಪ್ತಾ ಯಾತ ಪಥಿಭಿ-ರ್ದೇವಯಾನೈಃ ॥**

ವಿಶ್ವೇದೇವಸ್ಥಾನದ ಕೂರ್ಚಕ್ಕೆ ಮುಟ್ಟಿಸಿ (ಎಡ) ಪಿತೃಸ್ಥಾನದಲ್ಲಿ ಮುಟ್ಟಿಸಿ ಬಿಚ್ಚಿ ಹಾಕಿ (ಬಲ) ಕೈಮುಗಿದು,

**ಆಸೀಮಾಂತಮನುವ್ರಜ ॥ (ಮಮಾನುವ್ರಜೇ) ಮಾಯಾ ಕೃತ ಸಾಯುಜ್ಯ ನಾರಾಯಣಬಲಿಶ್ರಾದ್ಧ ಗಯಾಶ್ರಾದ್ಧತುಲ್ಯಮಸ್ತ್ವಿತಿ ಭವಂತೋ ಬ್ರುವಂತು ॥ (ಗಯಾಶ್ರಾದ್ಧತುಲ್ಯಮಸ್ತು) ಕೃತಂ ಕರ್ಮ ಸಂಪೂರ್ಣಮಸ್ತ್ವಿತಿ ಭವಂತೋ ಬ್ರುವಂತು ॥ (ಕೃತಂ ಕರ್ಮ ಸಂಪೂರ್ಣಮಸ್ತು) ॥**

–ಎಂದು ಪ್ರತಿವಚನ ಪಡೆದು, ಅನಂತರ (ಎಡ) ಪಿತೃಬ್ರಾಹ್ಮಣರ ಕೂರ್ಚ ಮುಟ್ಟಿ, **'ಪಿತೃದೇವತಾ ಉದ್ವಾಸಯಾಮಿ ॥'** ಎಂದು ಹೇಳಿ, ಅನಂತರ (ಬಲ) ವಿಶ್ವೇದೇವಸ್ಥಾನೀಯ ಬ್ರಾಹ್ಮಣಕೂರ್ಚ ಮುಟ್ಟಿ, **'ವಿಶ್ವಾನ್‌ದೇವಾನ್ ಉದ್ವಾಸಯಾಮಿ ॥'** ಎಂದು ಹೇಳಿ ಎರಡು ಸ್ಥಾನಗಳಲ್ಲಿಯ ಕೂರ್ಚವನ್ನು ಬಿಚ್ಚಿ ಹಾಕಬೇಕು. ಅನಂತರ ಅಕ್ಕಿ ಹಿಡಿದು **'ಮಹಾವಿಷ್ಣವೇ ನಮಃ । ಮಂಗಲನೀರಾಜನಾದಿ ಸರ್ವೋಪಚಾರಪೂಜಾ ಸಮರ್ಪ-ಯಾಮಿ ॥'** ಎಂದು ದೇವರ ಮೇಲೆ ಹಾಕಿ **'ಓಮ್ ಉತ್ತಿಷ್ಠ ಬ್ರಹ್ಮಣಸ್ಪತೇ.....ಸಚಾ ॥ ಯಥಾಸ್ಥಾನಮುದ್ವಾಸಯಾಮಿ ॥'** ಎಂದು ಕೂರ್ಚವನ್ನು ಬಿಚ್ಚಿ ಹಾಕಬೇಕು.

**ಕಾಯೇನ ವಾಚಾ ...... ನಾರಾಯಣಾಯೇತಿ ಸಮರ್ಪಯಾಮಿ ॥**

**ಅದ್ಯ ದಿನೇ ಮಮ ಮಿತ್ರಸ್ಯ ಉದ್ದಿಶ್ಯ ಮಯಾ ಕೃತ ಸಾಯುಜ್ಯನಾರಾಯಣ ಬಲಿಶ್ರಾದ್ಧ ಕರ್ಮಣಾ ಪ್ರಾಣಸ್ಥಮಹಾವಿಷ್ಣ್ವಾತ್ಮಕಮಧ್ವಪತಿಗೋಪಾಲಕೃಷ್ಣಃ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಗೋವಿಂದಾಯ ನಮಃ ॥**

ಪಿಂಡವನ್ನು ನೀರಿಗೆ ಹಾಕಿ, ಬಂದು ಪಂಚಗವ್ಯ ಪುಣ್ಯಾಹಮಾಡಿಸಿ, ತೀರ್ಥಪ್ರೋಕ್ಷಣೆ ತೀರ್ಥಪ್ರಾಶನ ಮಾಡಿ, ಯಜ್ಞೋಪವೀತಧಾರಣೆ ಮಾಡಿ, ಬ್ರಾಹ್ಮಣರನ್ನು ಆಹ್ವಾನಿಸಿ, ದಾನ ಕೊಟ್ಟು, ಬ್ರಹ್ಮಚಾರಿಯಾಗಿದ್ದಲ್ಲಿ ಬ್ರಹ್ಮಚಾರಿಗಳಿಗೆ ದಾನ ದಕ್ಷಿಣೆ ನೀಡಿ ಆಚಾರ್ಯರಿಂದ ಮಂತ್ರಾಕ್ಷತೆ ಮಾಡಿಸಿ ಕ್ರಿಯಾದಕ್ಷಿಣೆ ಕೊಟ್ಟು, ಕೃಷ್ಣಾರ್ಪಣ ಬಿಟ್ಟು, ಬಂಧುಮಿತ್ರರನ್ನು ಮಂತ್ರಾಕ್ಷತೆಗೆ ಕರೆದು ತಾನೂ ಮಂತ್ರಾಕ್ಷತೆ ಧರಿಸಿ ಆಶೀರ್ವಾದ ಪಡೆದು ಯಥಾಶಕ್ತಿ ಬ್ರಾಹ್ಮಣ ಸುವಾಸಿನಿ ಸಮಾರಾಧನೆ ಮಾಡಿ ತಾನು ಭೋಜನಮಾಡಿ ಧನ್ಯನಾಗಬೇಕು.

# ಮೋಕ್ಷನಾರಾಯಣಬಲಿಃ

(ಅಪಮೃತ್ಯುವಿನಿಂದ ಮರಣ ಹೊಂದಿದಾಗ ದುರ್ಗತಿನಿವಾರಣೆಗೆ ಸಪಿಂಡೀಕರಣದ ಅನಂತರ ಒಂದು ವರ್ಷದೊಳಗೆ ಜೀವಿಗೆ ಸದ್ಗತಿಪ್ರಾಪ್ತಿಗಾಗಿ ಹಾಗೂ ಪಿತೃಶಾಪಾದಿ ದೋಷಗಳಿರುವ ಸಂದರ್ಭದಲ್ಲಿ ಹಾಗೂ ಸಮಸ್ತಪಿತೃಪ್ರೀತ್ಯರ್ಥವಾಗಿ ಮಾಡುವ ಮೋಕ್ಷ ನಾರಾಯಣಬಲಿ ವಿಧಾನ)

1. ಸ್ವಸ್ತಿಕೆ
2. ಗೋಗ್ರಾಸ
3. ಜಲಪಾತ್ರ
4. ಬ್ರಾಹಣಸ್ಥಾನ
5. ಅರ್ಘ್ಯಪಾತ್ರೆ




ಪೂರ್ವಾಭಿಮುಖವಾಗಿ ಕುಳಿತು, ಆಚಮನ ಮಾಡಿ, ಆಚಾರ್ಯರಿಂದ ನಾಲ್ಕು ಎಳೆಯ ಪವಿತ್ರ ಪಡೆದು ಧರಿಸಿ, ಪುಣ್ಯಾಹ ಮಾಡಿ(ಮಾಡಿಸಿ) ಋತ್ವಿಗ್ವರಣೆ ಮಾಡಿ ಆಚಾರ್ಯರನ್ನು ಆಹ್ವಾನಿಸಿ ನಾರಾಯಣಬಲಿ ಅನುಕ್ರಮಣಿಕೆಗೆ, ಹೋಮಕ್ಕೆ, ಮತ್ತು ಕಲಶಪೂಜೆಗೆ ಪಾರಾಯಣಕ್ಕೆ ವರಣೆ ಕೊಡಬೇಕು.

## ನಾರಾಯಣಬಲಿಹೋಮಃ

ಆಚಾರ್ಯರು ಪೂರ್ವದಲ್ಲಿ ಸ್ಥಂಡಿಲ ಬರೆದು, ಹೋಮ ಪ್ರಾರಂಭ ಮಾಡಬೇಕು. ಕಲಶಪೂಜೆಯವರು ಕಲಶ ಪ್ರತಿಷ್ಠಾಪಿಸಿ, ಪುರುಷಸೂಕ್ತದಿಂದ ವಿಷ್ಣುವನ್ನು ಹಾಗೂ ಕೇಶವಾದಿ (ಸಂಕರ್ಷಣಾದಿ) ದ್ವಾದಶಮೂರ್ತಿಗಳನ್ನು ಆವಾಹನೆ ಮಾಡಿ, ವಿಷ್ಣುಸೂಕ್ತ, ನಾರಾಯಣಪನ್ನ, ಕಠೋಪನಿಷತ್, ನಾರಾಯಣೋಪನಿಷತ್, ವಿಷ್ಣುಸಹಸ್ರನಾಮ, ಇವುಗಳಿಂದ ಕಲಶವನ್ನು ಅಭಿಮಂತ್ರಿಸಿ, ಪೂಜೆ ಮಾಡಬೇಕು.

## ಅನ್ವಾಧಾನಮ್

**ಅಸ್ಮಿನ್ ಅನ್ವಾಹಿತೇಽಗ್ನೌ ......ಪ್ರಣವವ್ಯಸ್ತಸಮಸ್ತವ್ಯಾಹೃತಿಭಿಃ ಏಕವಾರಂ ಪಾಯಸ ದ್ರವ್ಯೇಣ ಆಶ್ರಾವಯೇತಿ ಪಂಚಮಂತ್ರೈಃ ಏಕೈಕವಾರಂ ಪಾಯಸದ್ರವ್ಯೇಣ,**

ವಿಷ್ಣುಗಾಯತ್ರ್ಯಾ ಅಷ್ಟವಾರಂ ಪಾಯಸದ್ರವ್ಯೇಣ, ಪುರುಷಸೂಕ್ತಮಂತ್ರೈಃ ಪ್ರತ್ಯೃಚಮ್ ಏಕೈಕವಾರಂ ಪಾಯಸದ್ರವ್ಯೇಣ, ವಿಷ್ಣುಸೂಕ್ತೇನ (ಪಂಚಚತ್ವಾರಿಂಶತ್ ಮಂತ್ರೈಃ) ಪ್ರತ್ಯೃಚಮ್ ಏಕೈಕವಾರಂ ಪಾಯಸದ್ರವ್ಯೇಣ, ವಿಷ್ಣೋರ್ನುಕಮಿತಿ ತ್ರಿಭಿರ್ಮಂತ್ರೈಃ ಪ್ರತ್ಯೃಚಮೇಕೈಕವಾರಂ ಪಾಯಸದ್ರವ್ಯೇಣ, ನಾರಾಯಣಸೂಕ್ತೇನ ಪ್ರತ್ಯೃಚಮ್ ಏಕೈಕವಾರಂ ಪಾಯಸದ್ರವ್ಯೇಣ, ಕೇಶವಾದಿ ದೇವತಾನಾಮಮಂತ್ರೈಃ ಏಕೈಕವಾರಂ ಪಾಯಸದ್ರವ್ಯೇಣ, (ಯಜಮಾನೇನ) ಪಿತ್ರಾದಿಭ್ಯ ಪಂಚವಿಂಶತಿ(೨೫)ನಾಮಮಂತ್ರೈಃ ಘೃತಮಿಶ್ರ ಚರುದ್ರವ್ಯೇಣ ಪಾಯಸಶೇಷೇಣ ಸ್ವಿಷ್ಟಕೃತಂ .... ಯಕ್ಷ್ಯೇ ॥ ಆಶ್ರಾವಯ ಮಂತ್ರ- ಓಮ್ ಆಶ್ರಾವಯ ಸ್ವಾಹಾ । ಯಜ್ಞಾಯ ಇದಂ ನ ಮಮ ॥ ಅಸ್ತು ಶ್ರೌಷಟ್ । ಯಜ್ಞಪುರುಷಾಯ ॥ ಯಜ । ಯಜ್ಞೇಶ್ವರಾಯ ॥ ಯೇ ಯಜಾಮಹೇ । ಯಜ್ಞಭೋಕ್ತ್ರೇ ॥ ವೌಷಟ್ । ಯಜ್ಞಭಾವನಾಯ ॥, ವಿಷ್ಣುಸೂಕ್ತಮಂತ್ರ (ಪುಟಸಂಖ್ಯೆ 559), ವಿಷ್ಣೋರ್ನುಕಮಿತಿ ಮಂತ್ರ (ಪುಟಸಂಖ್ಯೆ428), ನಾರಾಯಣಸೂಕ್ತಮಂತ್ರ (ಪುಟಸಂಖ್ಯೆ 564).

## ಸಂಕಲ್ಪಃ

ಸ್ವಸ್ತಿಕೆಯ ಸ್ಥಾನದಲ್ಲಿ ಯಜಮಾನ ಮಂಡಲದ ಎದುರು ಪೂರ್ವಾಭಿಮುಖವಾಗಿ ಕುಳಿತು, ಪವಿತ್ರ ಹೊರ ತೆಗೆದು, ಆಚಮನ ಮಾಡಿ, ಪವಿತ್ರ ಧರಿಸಿ, ಸಂಕಲ್ಪ ಮಾಡಬೇಕು.

ಗಂಗೇ ಚ ಯಮುನೇ ಚೈವ ...... । ಪ್ರಾಣಸ್ಥಶ್ರೀಮಹಾವಿಷ್ಣುಪ್ರೀತ್ಯರ್ಥಂ (ಎಡ) ಮಮ ಸಮಸ್ತ ಪಿತ್ರೄಣಾಮ್ ಅಂಧತ್ವ ಮೂಕತ್ವ ಬಧಿರತ್ವ ಪಂಗುತ್ವ ಕುಬ್ಜತ್ವ ಪೈಶಾಚತ್ವಾದಿ ಸಮಸ್ತದುರ್ಗತಿ ನಿವಾರಣಪೂರ್ವಕ ಮೋಕ್ಷ ಜ್ಞಾನಪೂರ್ವಕ ಜೀವಯೋಗ್ಯತಾನುಸಾರಿ ಸ್ವಸ್ವರೂಪಸ್ಥಾನ ಪ್ರಾಪ್ತ್ಯರ್ಥಂ ಸಮಸ್ತಪಿತೃಂತರ್ಗತ ಪ್ರಾಣಸ್ಥಶ್ರೀಮಹಾವಿಷ್ಣುಪ್ರೇರಣಯಾ ಶ್ರೀಮಹಾವಿಷ್ಣುಪ್ರೀತ್ಯರ್ಥಂ (ಬಲ) ಪ್ರಾಣಸ್ಥರಮಾಸಹಿತಕೇಶವಾದಿದಾಮೋದರಾಂತಾಃ ಪಿತೃಮಾತ್ರಾದಯಃ ವಿಶ್ವೇದೇವೈಃ ಸಹಿತಾಯ ಪ್ರಾಣಸ್ಥಶ್ರೀನಾರಾಯಣಪ್ರೀತ್ಯರ್ಥಂ ಮೋಕ್ಷನಾರಾಯಣಬಲಿಶ್ರಾದ್ಧಮಹಂ ಕರಿಷ್ಯೇ ॥ (ಕುರುಷ್ವ) ॥

ಸ್ವಸ್ತಿಕೆಯಲ್ಲಿ ಕ್ರಮದಿಂದ ಮಂಟಪಪೂಜೆ, ಶಂಖಪೂಜೆ, ಪೀಠಪೂಜೆ ಮಾಡಿ ಆವಾಹನೆ ಮಾಡಬೇಕು. ತುಳಸಿ, ಅಕ್ಕಿ, ಹೂ ಹಿಡಿದು,

## ಧ್ಯಾನಮ್

ಉದ್ಯದ್ಭಾಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್ ।
ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ॥

ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ ।
ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ॥

ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷ ಶಕ್ತಿಮಾನ್ ।
ಮೂರ್ತಯೋಽಷ್ಟಾವಪಿ ಧ್ಯೇಯಾಶ್ಚಕ್ರಶಂಖವರಾಭಯೈಃ ॥

ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ ।
ಬಿಂಬೋಽಸಿ ಪ್ರತಿಬಿಂಬೋಽಸಿ ತವಯದ್ಯಪಿ ಚಾಂತರಮ್ ।
ಸ್ವಾಮಿನ್ನಿರ್ದೋಷ ಮದ್ದೋಷಂ ವಿರೇಚಯ ನಮೋಽಸ್ತು ತೇ ॥

ಭಾರತೀರಮಣಮುಖ್ಯಪ್ರಾಣಾಂತರ್ಗತ ರಮಾಸಹಿತಕೇಶವಾದಿದ್ವಾದಶ–ಮೂರ್ತ್ಯಾತ್ಮಕ ಪಿತೃದೇವತಾಸಹಿತ ವಿಶ್ವೇದೇವಾಂತರ್ಗತ ಪ್ರಾಣಸ್ಥಶ್ರೀಪ್ರದ್ಯುಮ್ನಾದಿ–ಪಂಚಮೂರ್ತ್ಯಾತ್ಮಕ ಮೋಕ್ಷಪ್ರದನಾರಾಯಣಂ ಸ್ವಸ್ತಿಕಾಮಧ್ಯೇ ಸೂರ್ಯಮಂಡ–ಲಾದಾವಾಹಯಾಮಿ ॥ – ಎಂದು ಆವಾಹಿಸಿ, 'ಓಮ್ ಓಂ ನಮೋ ನಾರಾಯಣಾಯ ನಮಃ ಓಮ್ ॥' – ಎಂದು ಎಂಟು ಬಾರಿ ಜಪಿಸಿ 'ಸರ್ವಾಭ್ಯಸ್ತತ್ತ್ವದೇವತಾಭ್ಯೋ ನಮಃ । ಸರ್ವಾಭ್ಯೋ ಮಾತೃಕಾ ದೇವತಾಭ್ಯೋ ನಮಃ ॥' –ಎಂದು ಹೇಳಿ, ನ್ಯಾಸ ಮಾಡಿ, ಕೈಮುಗಿದು,

ಆರಾಧ್ಯಸೇ ಪ್ರಾಣಭೃತಾಂ ಪ್ರಣೇತ್ರಾ ಪ್ರಾಣಾಧಿನಾಥೇನ ಸಮೀರಣೇನ ।
ನಾರಾಯಣಜ್ಞಾನಸುಖೈಕಪೂರ್ಣಾ ಸ್ವಾಮಿನ್ ಮಮ ಶ್ರೀರಮಣ ಪ್ರಸೀದ ॥

–ಎಂದು ಪ್ರಾರ್ಥಿಸಿ, ಪುರುಷಸೂಕ್ತದಿಂದ ಷೋಡಶೋಪಚಾರಪೂಜೆ ಮಾಡಿ, ಆವರಣ ಪೂಜೆ ಮಾಡಿ, ಧೂಪ ದೀಪ ಸಮರ್ಪಿಸಿ, ನೈವೇದ್ಯಸಮಯದಲ್ಲಿ ಫಲಸಮರ್ಪಣೆ ಮಾಡಿ, ಆರತಿಮಾಡಿ, ಅಕ್ಕಿ ಹಿಡಿದು, 'ಅನಾದಿ ನಿಧನೋ.....' ಮತ್ತು 'ಅತಸೀಪುಷ್ಪ ಸಂಕಾಶಂ.....' ಮಂತ್ರದಿಂದ ಹಾಕಿ, 'ಜಿತಂತೇ ಪುಂಡರೀಕಾಕ್ಷ ॥' (ಪ್ರವರ್ತಯೇ ॥) ಎಂದು ಪ್ರತಿವಚನ ಪಡೆದು ಕೈಮುಗಿದು,

ಅಗತೀನಾಂ ಚ ಸರ್ವೇಷಾಂ ಗತಿರ್ನಾರಾಯಣೋ ಹರಿಃ ।
ತತ್ರ ಸಂಪೂಜನಂ ಕಾರ್ಯಂ ಸರ್ವಪಾಪಹರಂ ಶುಭಮ್ ॥

ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।
ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥

–ಎಂದು ಪ್ರಾರ್ಥಿಸಿ ಜಲಪಾತ್ರಸ್ಥಾಪನೆ ಮಾಡಬೇಕು.

## ಜಲಪಾತ್ರಸ್ಥಾಪನಮ್

ಚೌಕಾಕಾರದ ಮಂಡಲ ಮಾಡಿ, ಜಲಪಾತ್ರ ಪ್ರತಿಷ್ಠಾಪಿಸಿ, ಸಪಿಂಡೀಕರಣಶ್ರಾದ್ಧಕ್ರಮದಂತೆ, ಕ್ರಮದಂತೆ ವೈಶ್ವದೇವಾದಿಸೂಕ್ತಪಠನ ಮಾಡಿ, ಶಾರೀರಸೂಕ್ತ ಪಠಿಸಿ, ಬ್ರಹ್ಮದಂಡ ಇಡಬೇಕು.

## ಬರ್ಹಿಷಃ ಶುದ್ಧಿಃ

ಜೇಡಿಯಿಂದ ಚಿತ್ರದಲ್ಲಿ ತೋರಿಸಿದಂತೆ ೪೮ ಕೋಣೆಗಳ ಮಂಡಲ ಮಾಡಿ ಜಲಕೂರ್ಚದಿಂದ '**ಓಂ ಭೂರ್ಭುವಃಸ್ವರೋಮ್** ॥' ಎಂದು ಮಂಡಲವನ್ನು ಪ್ರೋಕ್ಷಿಸಿ,

**ಓಮ್ ಅಸ್ಯೇದು ಮಾತುಃ ಸವನೇಷು ಸದ್ಯೋ ಮಹಃ ಪಿತುಂ ಪಪಿವಾಂ–ಚಾರ್ವನ್ನಾ । ಮುಷಾಯದ್ವಿಷ್ಣುಃ ಪಚತಂ ಸಹೀಯಾನ್, ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ॥**

ಔದುಂಬರ ಸಮಿಧೆಯಿಂದ ಪಶ್ಚಿಮದಿಂದ ಪೂರ್ವಕ್ಕೆ ಉಲ್ಲೇಖನ ಮಾಡಿ, ಅನಂತರ ಎರಡು ದರ್ಭೆಗಳನ್ನು ಹಿಡಿದು,

**ಓಮ್ ಅಪಹತಾ ಅಸುರಾ ರಕ್ಷಾꣳಸಿ ಪಿಶಾಚಾ ಯೇ ಕ್ಷಯಂತಿ ಪೃಥಿವೀಮನು । ಅನ್ಯತ್ರೈತೋ ಗಚ್ಛಂತು ಯತ್ರೈಷಾಂ (ಯತ್ರಾಸಾಂ) ಗತಂ ಮನಃ** ॥ –ಎಂದು ಉಲ್ಲೇಖನ ಮಾಡಿ,

**ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।**
**ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಿಕಾಃ ॥**

–ಎಂದು ಅಕ್ಷತೆಯನ್ನು ಹಾಕಿ, ವಿಷ್ಣುಪಾದ ಹಿಡಿದು,

**ಓಂ ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಮ್ ॥ ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ । ವಿಷ್ಣೋರ್ಯತ್ ಪರಮಂ ಪದಮ್ ॥**

–ಎಂದು ಮಂಡಲಮಧ್ಯದಲ್ಲಿ ವಿಷ್ಣುಪಾದ ಇಟ್ಟು,

**ಗೋಕರ್ಣ ಸೇತೋ ಹಿಮವತ್ಪ್ರಯಾಗೌ**
**ಕಾಶ್ಮೀರ ಸೋಮೇಶ್ವರ ವಿಷ್ಣುಪಾದಾಃ ।**
**ಶ್ರೀರಂಗ ಕೇದಾರ ಅನಂತ ಕನ್ಯೇ**
**ಸ್ವಾಮಿನ್ ಕುರುಕ್ಷೇತ್ರ ಸದಾ ನಮಸ್ತೇ ॥**

–ಎಂದು ಪೂರ್ವಾಗ್ರವಾಗಿ ೩೬೦ ದರ್ಭೆ ಹರಡಿ, ಅಂಜಲಿಮುದ್ರೆ ಮಾಡಿ,

**ನಾರಾಯಣಬಲಿಶ್ರಾದ್ಧೇ ಕೇಶವಾದಿ ದಾಮೋದರಾಂತಾಃ ಪಿತೃಮಾತ್ರಾದಯಃ ವಿಶ್ವೇದೇವಸಹಿತಾಯ ಪ್ರಾಣಸ್ಥಶ್ರೀನಾರಾಯಣಾಯ ಇಮಾನಿ ಸ್ಥಾನಾನಿ ॥** –ಎಂದು ಅಂಜಲಿಮುದ್ರೆ ತೋರಿಸಿ,

**ರೂಪ್ಯಪೀಠಂ ಕುಮಾರಾದ್ರಿಃ ಕುಂಭಾಸಿಶ್ಚ ಧ್ವಜೇಶ್ವರಃ ।**
**ಕ್ರೋಡ ಗೋಕರ್ಣ ಮೂಕಾಂಬಾಃ ಸಪ್ತೈತೇ ಮೋಕ್ಷದಾಯಕಾಃ ॥**

–ಎಂದು ಈಶಾನ್ಯದಿಂದಾರಂಭಿಸಿ, ನಲುವತ್ತೊಂಬತ್ತು ಸ್ಥಾನಗಳಲ್ಲಿ ನಾರಾಯಣ ಸ್ಮರಣೆಯೊಂದಿಗೆ ಅಕ್ಷತೋದಕ ಕೊಟ್ಟು, ಮಂಡಲದ ಹೊರಗಿನ ದಳಗಳಲ್ಲಿ (೧–೧೨) ಈಶಾನ್ಯದಿಂದ ಕ್ರಮವಾಗಿ ಎರಡೆರಡು ದರ್ಭೆಗಳನ್ನು ಮಂತ್ರಪೂರ್ವಕವಾಗಿ ಉತ್ತರಾಗ್ರವಾಗಿ ಹಿಡಿದು,

**ಶಂಖಚಕ್ರಗದಾಬ್ಜೇತಃ ಕೇಶವಃ ಸೂರ್ಯಸನ್ನಿಭಃ । ಕೇಶವ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಕೇಶವಸ್ಯ ಇದಮಾಸನಮ್ ॥** ಎಂದು ಬರ್ಹಿಸ್ಸಿನ ಮೇಲೆ ಅಡ್ಡ ಇಟ್ಟು, ಹೀಗೆಯೇ ಹಿಂದಿನ ಕ್ರಮದಂತೆ ಎರಡೆರಡು ದರ್ಭೆಗಳನ್ನು ಮುಂದಿನ ಸ್ಥಾನಗಳಲ್ಲಿಯೂ ಇಡಬೇಕು.

**ನಾರಾಯಣಃ ಸಾಬ್ಜಗದಾಚಕ್ರಶಂಖೋ ರವಿಪ್ರಭಃ । ನಾರಾಯಣನಾರಾಯಣ ಓಂ ನಮೋ ನಾರಾಯಣಾಯ ನಮಃ । ನಾರಾಯಣಸ್ಯ ಇದಮಾಸನಮ್ ॥**

**ಮಾಧವಶ್ಚಕ್ರಶಂಖಾಬ್ಜಗದೇಶಃ ಸೂರ್ಯಸನ್ನಿಭಃ । ಮಾಧವನಾರಾಯಣ ಓಂ ನಾರಾಯಣ ನಮೋ ನಾರಾಯಣಾಯ ನಮಃ । ಮಾಧವಸ್ಯ ಇದಮಾಸನಮ್ ॥**

**ಗದಾಬ್ಜಶಂಖಚಕ್ರೇಶೋ ಗೋವಿಂದೋ ಭಾಸ್ಕರದ್ಯುತಿಃ । ಗೋವಿಂದನಾರಾಯಣ ಓಂ ನಮೋ ನಾರಾಯಣಾಯ ನಮಃ । ಗೋವಿಂದಸ್ಯ ಇದಮಾಸನಮ್ ॥**

**ಸಪದ್ಮಶಂಖಾರಿಗದೋ ವಿಷ್ಣುಶ್ಚಾಲಕ್ತಸಪ್ರಭಃ । ವಿಷ್ಣುನಾರಾಯಣ ಓಂ ನಮೋ ನಾರಾಯಣಾಯ ನಮಃ । ವಿಷ್ಣೋರಿದಮಾಸನಮ್ ॥**

**ಕಂಜಕಂಬುಗದಾಚಕ್ರಃ ಸೂರ್ಯಾಭೋ ಮಧುಸೂದನಃ । ಮಧುಸೂದನ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಮಧುಸೂದನಸ್ಯ ಇದಮಾ–ಸನಮ್ ॥**

**ತ್ರಿವಿಕ್ರಮೋ ಗದಾಚಕ್ರಶಂಖಪದ್ಮೋ ರವಿಪ್ರಭಃ । ತ್ರಿವಿಕ್ರಮನಾರಾಯಣ ಓಂ ನಮೋ ನಾರಾಯಣಾಯ ನಮಃ । ತ್ರಿವಿಕ್ರಮಸ್ಯ ಇದಮಾಸನಮ್ ॥**

**ವಾಮನೋಽರಿಗದಾಪದ್ಮಶಂಖೋದ್ಯದ್ರವಿಪ್ರಭಃ । ವಾಮನನಾರಾಯಣ ಓಂ ನಮೋ ನಾರಾಯಣಾಯ ನಮಃ । ವಾಮನಸ್ಯ ಇದಮಾಸನಮ್ ॥**

**ಶ್ರೀಧರೋಽರಿಗದಾಕಂಬುಪದ್ಮೋದ್ಯದ್ರವಿಪ್ರಭಃ । ಶ್ರೀಧರನಾರಾಯಣ ಓಂ ನಮೋ ನಾರಾಯಣಾಯ ನಮಃ । ಶ್ರೀಧರಸ್ಯ ಇದಮಾಸನಮ್ ॥**

**ಸಾರಿಪದ್ಮಶಂಖಗದಾಃ ಹೃಷೀಕೇಶೋಽರ್ಕಸನ್ನಿಭಃ ॥ ಹೃಷೀಕೇಶನಾರಾಯಣ ಓಂ ನಮೋ ನಾರಾಯಣಾಯ ನಮಃ । ಹೃಷೀಕೇಶಸ್ಯ ಇದಮಾಸನಮ್ ॥**

**ಪದ್ಮನಾಭಃ ಸಾಬ್ಜಚಕ್ರಗದಾಶಂಖೋ ರವಿದ್ಯುತಿಃ । ಪದ್ಮನಾಭನಾರಾಯಣ ಓಂ ನಮೋ ನಾರಾಯಣಾಯ ನಮಃ । ಪದ್ಮನಾಭಸ್ಯ ಇದಮಾಸನಮ್ ॥**

**ದಾಮೋದರಃ ಶಂಖಗದಾಚಕ್ರಪದ್ಮೋ ರವಿಪ್ರಭಃ ॥ ದಾಮೋದರ ನಾರಾಯಣ ಓಂ ನಮೋ ನಾರಾಯಣಾಯ ನಮಃ । ದಾಮೋದರಸ್ಯ ಇದಮಾಸನಮ್ ॥**

–ಎಂದು ಆಸನ ಇಟ್ಟು, ಮಂಡಲದ ಮೊದಲ ಸುತ್ತಿನಲ್ಲಿ (೧೩ರಿಂದ ೩೨) ಈಶಾನ್ಯ ಕೋಣೆಯಿಂದ ವೃತ್ತಾಕಾರದಲ್ಲಿ ಹಿಂದಿನ ಕ್ರಮದಂತೆ ಆಸನ ಇಡಬೇಕು.

**ಪಿತೃಭ್ಯಃ ಸ್ವಧಾ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಪಿತೃಭ್ಯ ಇದಮಾಸನಮ್ ॥ ಪಿತಾಮಹೇಭ್ಯಃ ಸ್ವಧಾ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಪಿತಾಮಹೇಭ್ಯ ಇದಮಾಸನಮ್ ॥ ಪ್ರಪಿತಾಮಹೇಭ್ಯಃ ಸ್ವಧಾ । ಮಾತೃಭ್ಯಃ ಸ್ವಧಾ । ಪಿತಾಮಹೀಭ್ಯಃ ಸ್ವಧಾ । ಪ್ರಪಿತಾಮಹೀಭ್ಯಃ ಸ್ವಧಾ । ಮಾತಾಮಹೇಭ್ಯಃ ಸ್ವಧಾ । ಮಾತುಃ ಪಿತಾಮಹೇಭ್ಯಃ ಸ್ವಧಾ । ಮಾತುಃಪ್ರಪಿತಾಮಹೇಭ್ಯಃ ಸ್ವಧಾ । ಮತಾಮಹೀಭ್ಯಃ ಸ್ವಧಾ । ಮಾತುಃಪಿತಾಮಹೀಭ್ಯಃ ಸ್ವಧಾ । ಮಾತುಃ ಪ್ರಪಿತಾಮಹೀಭ್ಯಃ ಸ್ವಧಾ । ಆಚಾರ್ಯೇಭ್ಯಃ ಸ್ವಧಾ। ಆಚಾರ್ಯಪತ್ನೀಭ್ಯಃ ಸ್ವಧಾ । ಗುರುಭ್ಯಃ ಸ್ವಧಾ । ಗುರುಪತ್ನೀಭ್ಯಃ ಸ್ವಧಾ । ಸಖಿಭ್ಯಃ ಸ್ವಧಾ । ಸಖಿಪತ್ನೀಭ್ಯಃ ಸ್ವಧಾ । ಜ್ಞಾತಿಭ್ಯಃ ಸ್ವಧಾ । ಜ್ಞಾತಿಪತ್ನೀಭ್ಯಃ ಸ್ವಧಾ ॥**

ಮಂಡಲದ ಎರಡನೆಯ ಸುತ್ತಿನಲ್ಲಿ ಈಶಾನ್ಯದಿಂದ (೩೩–೪೪)

**ಅಮಾತ್ಯೇಭ್ಯಃ ಸ್ವಧಾ । ಅಮಾತ್ಯಪತ್ನೀಭ್ಯಃ ಸ್ವಧಾ । ಸರ್ವೇಭ್ಯಃ ಸ್ವಧಾ । ಸರ್ವಾಭ್ಯಃ ಸ್ವಧಾ । ಅಗ್ನಯೇ ಕವ್ಯವಾಹನಾಯ ಸ್ವಿಷ್ಟಕೃತೇ ಸ್ವಧಾ । ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ನಾರಾಯಣ ಓಂ ನಮೋ ನಾರಾಯಣಾಯ ನಮಃ । ವಿಶ್ವೇಭ್ಯೋ ದೇವೇಭ್ಯ ಇದಮಾಸನಮ್ ॥ ಸಾಧ್ಯೇಭ್ಯೋ ದೇವೇಭ್ಯಃ ಸ್ವಾಹಾ । ಮರುದ್ಭ್ಯೋ ದೇವೇಭ್ಯಃ ಸ್ವಾಹಾ । ವಿಷ್ಣವೇ ನಾರಾಯಣ ಓಂ ನಮೋ ನಾರಾಯಣಾಯ**

**ನಮಃ। ವಿಷ್ಣವ ಇದಮಾಸನಮ್ ॥ ನಾರಾಯಣಾಯ । ಬ್ರಹ್ಮಣ್ಯಾಯ । ಬ್ರಾಹ್ಮಣಪ್ರಿಯಾಯ ॥**

ಮಂಡಲದ ಮೂರನೆಯ ಸುತ್ತಿನಲ್ಲಿ ಈಶಾನ್ಯದಿಂದ (೪೫-೪೯)

**ಯಜ್ಞೇಶ್ವರಾಯ । ಯಜ್ಞಪುರುಷಾಯ । ಯಜ್ಞಾತ್ಮನೇ । ಸರ್ವಾತ್ಮನೇ । ಮಂಡಲಮಧ್ಯೇ ಸರ್ವಾನ್ ಪಿತೃನ್ ಸಮಧಿಗಚ್ಛತ ಯಸ್ತಸ್ಮೈ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಸರ್ವೇಭ್ಯಃ ಪಿತೃಭ್ಯ ಇದಮಾಸನಮ್ ॥ ಕೇಶವಾದಿ ದಾಮೋದರಾಂತಾ ಪಿತೃದೇವತಾದಯಃ ವಿಶ್ವೇದೇವೈಃ ಸಹಿತಾಯ ನಾರಾಯಣಾಯ ಆಸನಾಂತೇ ಉದಕಮ್ ॥**

–ಎಂದು ಜಲಕೂರ್ಚದಿಂದ ಎಲ್ಲಾ ಸ್ಥಾನಗಳಲ್ಲಿ ನಾರಾಯಣಸ್ಮರಣೆಯೊಂದಿಗೆ ನೀರನ್ನು ಕೊಡಬೇಕು.

ಅಕ್ಕಿ ತುಲಸಿ ಹೂ ಹಿಡಿದು '**ಕೇಶವನಾರಾಯಣ ಓಂ ನಮೋ ನಾರಾಯಣಾಯ ನಮಃ। ಕೇಶವಮ್ ಆವಾಹಯಾಮಿ ॥**' ಎಂದು ಆಸನದ ದರ್ಭೆಯ ಮೇಲೆ ಇಡಬೇಕು. '**ನಾರಾಯಣ ನಾರಾಯಣ ಓಂ ನಮೋ ನಾರಾಯಣಾಯ ನಮಃ । ನಾರಾಯಣ–ಮಾವಾಹಯಾಮಿ ॥**'

ಹೀಗೆ ಉಳಿದ **ಮಾಧವಾದಿ** ಹತ್ತು ಸ್ಥಾನಗಳಲ್ಲಿ ಆವಾಹನೆ ಮಾಡಬೇಕು. ಅನಂತರ ಮಂಡಲದ ಮೊದಲ ಸುತ್ತಿನಲ್ಲಿ ಕ್ರಮವಾಗಿ, ಅಕ್ಕಿ ತುಳಸಿ ಹೂ ಹಿಡಿದು,

**ಪಿತೃಭ್ಯಃ ಸ್ವಧಾ ನಾರಾಯಣ ಓಂ ನಮೋ ನಾರಾಯಣಾಯ ನಮಃ। ಪಿತೄನ್ ಆವಾಹಯಾಮಿ ॥ ಹೀಗೆ, ಪಿತಾಮಹಾನ್ ಆವಾಹಯಾಮಿ । ಪ್ರಪಿತಾಮಹಾನ್ ಆವಾಹಯಾಮಿ । ಮಾತೄಃ । ಪಿತಾಮಹೀಃ । ಪ್ರಪಿತಾಮಹೀಃ । ಮಾತಾಮಹಾನ್ । ಮಾತುಃಪಿತಾಮಹಾನ್ । ಮಾತುಃಪ್ರಪಿತಾಮಹಾನ್ । ಮಾತಾಮಹೀಃ । ಮಾತುಃಪಿತಾಮಹೀಃ । ಮಾತುಃಪ್ರಪಿತಾಮಹೀಃ । ಆಚಾರ್ಯಾನ್ । ಆಚಾರ್ಯಪತ್ನೀಃ। ಗುರೂನ್ । ಗುರುಪತ್ನೀಃ । ಸಖೀನ್ । ಸಖಿಪತ್ನೀಃ ॥ ಜ್ಞಾತೀನ್ । ಜ್ಞಾತಿಪತ್ನೀಃ।**

**ಅಮಾತ್ಯಾನ್ । ಅಮಾತ್ಯಪತ್ನೀಃ । ಸರ್ವಾನ್ । ಸರ್ವಾಃ । ಅಗ್ನಯೇ ಕವ್ಯ–ವಾಹನಾಯ ಸ್ವಿಷ್ಟಕೃತಮ್ । ವಿಶ್ವಾನ್ ದೇವಾನ್ । ಸಾಧ್ಯಾನ್ ದೇವಾನ್ । ಮರುತಃ ದೇವಾನ್ । ವಿಷ್ಣುಂ । ನಾರಾಯಣಂ । ಬ್ರಹ್ಮಣ್ಯಂ । ಬ್ರಾಹ್ಮಣಪ್ರಿಯಮ್ ।**

**ಯಜ್ಞೇಶ್ವರಂ । ಯಜ್ಞಪುರುಷಂ । ಯಜ್ಞಾತ್ಮಾನಂ । ಸರ್ವಾತ್ಮಾನಂ । ಸರ್ವಾನ್ ಪಿತೄನ್ ಸಮಧಿಗಚ್ಛತ ಯಸ್ತಸ್ಮೈ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಸರ್ವಾನ್ ಪಿತೄನ್ ಆವಾಹಯಾಮಿ ॥**

ಎಂದು ಆವಾಹಿಸಿ, ಎರಡು ದರ್ಭೆಯಿಂದ ತುಪ್ಪವನ್ನು ಉತ್ಪವನ ಮಾಡಿ ನಾರಾಯಣ ಸ್ಮರಣೆಯೊಂದಿಗೆ ಎಲ್ಲಾ ಸ್ಥಾನದಲ್ಲಿ ಹಚ್ಚಬೇಕು. ಅನಂತರ ಸ್ವಸ್ತಿಕೆಯ ಬಲಭಾಗದಲ್ಲಿ

ಒಂದು ತುಂಡು ಬಾಳೆ ಎಲೆಯ ಮೇಲೆ ಪಶ್ಚಿಮಾಭಿಮುಖವಾಗಿ ಬ್ರಾಹ್ಮಣಸ್ಥಾನದಲ್ಲಿ ನಾಲ್ಕು ಎಳೆಯ ಕೂರ್ಚ ಇಟ್ಟು, ಎರಡು ದರ್ಭೆ ಹಿಡಿದು,

**ಕೇಶವದಾಮೋದರಾಂತಾಃ ಪಿತೃಮಾತ್ರಾದಯಃ ವಿಶ್ವೇದೇವಾಃ ಸಹಿತಾಯ ಪ್ರಾಣಸ್ಥಶ್ರೀನಾರಾಯಣ ಕ್ಷಣಃ ಕ್ರಿಯತಾಮ್ ॥** ಎಂದು ಕೂರ್ಚದ ಮೇಲಿಟ್ಟು,

**ಕೇಶವ ದಾಮೋದರಾಂತಾಃ ಪಿತೃಮಾತ್ರಾದಯಃ ವಿಶ್ವೇದೇವಾಃ ಸಹಿತಾಯ ಪ್ರಾಣಸ್ಥಶ್ರೀನಾರಾಯಣಾಯ ಪಾದ್ಯಾಸನಸ್ಥಾನಂ ಕಲ್ಪಯಾಮಿ ॥**

–ಎಂದು ನೀರಿನಿಂದ ಚೌಕಾಕಾರದ ಮಂಡಲ ಮಾಡಿ, '**ಪಾದ್ಯಾಸನಸ್ಥಾನಯೋಃ ಇಮೇ ದರ್ಭಾಃ ॥**' ಎಂದು ಮಂಡಲಗಳೆರಡರ ಮೇಲಿಟ್ಟು, ಎರಡು ಸ್ಥಾನಗಳಲ್ಲಿ ಅಕ್ಷತೋದಕ ಕೊಟ್ಟು, '**ಶಿರಸಿ ಪುಷ್ಪಮ್ ।**' ಎಂದು ಮೇಲಿನ ಸ್ಥಾನದಲ್ಲಿಟ್ಟು (ಪವಿತ್ರ ಹೊರ ತೆಗೆದು) '**ಪಾದಯೋರ್ಗಂಧಪುಷ್ಪಾದಿ ॥**' ಆಸನಸ್ಥಾನದಲ್ಲಿ ಗಂಧ ಹೂ ಇಟ್ಟು, ಪವಿತ್ರ ಧರಿಸಿ, ಅಕ್ಕಿ ನೀರು ಹಿಡಿದು,

**ಕೇಶವದಾಮೋದರಾಂತಾಃ ಪಿತೃಮಾತ್ರಾದಯಃ ವಿಶ್ವೇದೇವಾಃ ಸಹಿತಾಯ ಪ್ರಾಣಸ್ಥಶ್ರೀನಾರಾಯಣಾಯ ಇದಂ ವಃ ಪಾದ್ಯಮ್ ॥**

–ಎಂದು ಪಾದದ ಸ್ಥಾನದಲ್ಲಿ ಹಾಕಿ, ಪವಿತ್ರ ತೆಗೆದು '**ಶಂ ನೋ.......ನಃ ॥**', '**ಆಪಃ ಪಾದ.......ಸ್ವಾಸಾನಿ ॥**' ಎಂದು ಪಾದ ತೊಳೆದು ಪವಿತ್ರ ಧರಿಸಿ, ಪಾದೋದಕವನ್ನು ಶಿರಸ್ಸಿನಲ್ಲಿ ಧರಿಸಿ, ಆಚಮನ ಮಾಡಿ ಪವಿತ್ರವನ್ನು ಬಿಚ್ಚಿ ಹಾಕಿ, ಪುನಃ ಆಚಮನ ಮಾಡಿ ನಾಲ್ಕು ಎಳೆಯ ಪವಿತ್ರವನ್ನು ಆಚಾರ್ಯರಿಂದ ಪಡೆದು ಧರಿಸಿಕೊಳ್ಳಬೇಕು.

## ದಿಗ್ಬಂಧನಮ್

**ನಾರಾಯಣಬಲಿಶ್ರಾದ್ಧೇ ಪ್ರಾಚ್ಯಾದಿ ದಿಗ್ಬಂಧನಂ ಕರಿಷ್ಯೇ ॥** –ಎಂದು ಎದ್ದುನಿಂತು, ಎಡಗೈಯಲ್ಲಿ ಪ್ರತ್ಯೇಕವಾಗಿ, ದರ್ಭೆ, ಅಕ್ಕಿ ಹಿಡಿದು ಬಲಗೈಯಿಂದ ಮುಚ್ಚಿ,

**ನಮೋ ನಮಸ್ತೇ ಗೋವಿಂದ ಪುರಾಣಪುರುಷೋತ್ತಮ ।**
**ನಾರಾಯಣಬಲಿಶ್ರಾದ್ಧಂ ರಕ್ಷ ತ್ವಂ ಸರ್ವತೋ ದಿಶಃ ॥**

–ಎಂದು ಪ್ರಾರ್ಥಿಸಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಹಾಗೂ ಮೇಲೆ ಮತ್ತು ಕೆಳಗೆ –ಹೀಗೆ ಆರು ಸ್ಥಾನಗಳಲ್ಲಿ ಪ್ರದಕ್ಷಿಣೆ ಮಾಡಿ ಅಕ್ಕಿ ಮತ್ತು ದರ್ಭೆ ಬಿಸಾಡಬೇಕು.

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಸ್ತು ದಕ್ಷಿಣೇ ।**
**ಪ್ರದ್ಯುಮ್ನಃ ಪಶ್ಚಿಮೇ ಪಾತು ವಾಸುದೇವಸ್ತಥೋತ್ತರೇ ।**
**ಊರ್ಧ್ವಂ ಗೋವರ್ಧನೋ ರಕ್ಷೇದಧಸ್ತಾಚ್ಚ ತ್ರಿವಿಕ್ರಮಃ ॥**

ಮೂರು ದರ್ಭೆಯನ್ನು ಹಿಡಿದು,

**ಸೋಮಸ್ಯ ನೀವಿರಸಿ ವಿಷ್ಣೋಃ ಶರ್ಮಾಸಿ ಶರ್ಮ ಯಜಮಾನಸ್ಯೇಂದ್ರಸ್ಯ ಯೋನಿರಸಿ ಸುಸಸ್ಯಾಃ ಕೃಷೀಸ್ಕೃಧಿ ॥**

ಬಲ ಸೊಂಟಕ್ಕೆ ಸಿಕ್ಕಿಸಿ ಉಳಿದ ದ್ರವ್ಯಗಳನ್ನು ಹರಿವಾಣದಲ್ಲಿ ಹಾಕಿ ಪೂರ್ವಕ್ಕೆ ಮುಖ ಮಾಡಿ ಕುಳಿತು ಪವಿತ್ರ ತೆಗೆದು ಆಚಮನ ಮಾಡಿ ಪುನಃ ಹಿಂದಿನ ಪವಿತ್ರ ಧರಿಸುವುದು.

## ಅರ್ಘ್ಯಪಾತ್ರಾಸಾಧನಮ್

**ಅರ್ಘ್ಯಪಾತ್ರಾಸಾಧನಮಹಂ ಕರೀಷ್ಯೇ ॥**

–ಎಂದು ತನ್ನ ಎಡಭಾಗದಲ್ಲಿ ಅರ್ಘ್ಯಪಾತ್ರೆಗೆ,

**ಓಮ್ ಆಮ ಆಗಚ್ಛಂತು ಕೇಶವಾದಯೋ ದೇವಯಾನಾನ್ ಸಮುದ್ರಾನ್ ಸಲಿಲಾನ್ ಸುಪರ್ಣಾನ್ । ಅಸ್ಮಿನ್ಯಜ್ಞೇ ಸರ್ವಕಾಮಾಂಲ್ಲಭಂತೇಽಕ್ಷೀಯಮಾಣಾ ಉಪದುಹ್ಯಂತಾಮ್ । ಕೇಶವಾದಿಭ್ಯೋ ವೋ ಗೃಹ್ಣಾಮಿ ॥**

–ಎಂದು ನೀರು ಹಾಕಿ, ನಾಲ್ಕು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವಂತೆ ಇಟ್ಟು ಗಂಧಪುಷ್ಪಾಕ್ಷತೆ ಹಾಕಿ, ಅಷ್ಟಾಕ್ಷರಜಪ ಮಾಡಿ, ಅರ್ಘ್ಯಪಾತ್ರದ ನೀರು ಹಾಗೂ ಅಕ್ಕಿ ಹಿಡಿದು,

**ಕೇಶವಾದಿ ದಾಮೋದರಾಂತಾಃ ಪಿತೃಮಾತ್ರಾದಯಃ ವಿಶ್ವೇದೇವಾಃ ಸಹಿತಾಯ ಪ್ರಾಣಸ್ಥನಾರಾಯಣಾಯ ಸ್ವಾಹಾ ಅರ್ಘ್ಯಮ್ ॥**

–ಎಂದು ಹೇಳಿ ನಾರಾಯಣಸ್ಮರಣೆಯೊಂದಿಗೆ ಮಂಡಲದ ಎಲ್ಲಾ ಸ್ಥಾನಗಳಲ್ಲಿ ಅರ್ಘ್ಯ ಕೊಟ್ಟು, ಪುನಃ ಅರ್ಘ್ಯಪಾತ್ರದ ಕೂರ್ಚ, ನೀರು ಹಾಗೂ ಅಕ್ಕಿ ಹಿಡಿದು

**ಕೇಶವಾದಿ ದಾಮೋದರಾಂತಾಃ ಪಿತೃಮಾತ್ರಾದಯಃ ವಿಶ್ವೇದೇವಾಃ ಸಹಿತಾಯ ಪ್ರಾಣಸ್ಥನಾರಾಯಣಾಯ ಸ್ವಾಹಾ ಅರ್ಘ್ಯಮ್ ॥**

–ಎಂದು ಹೇಳಿ, ಕೂರ್ಚಸ್ಥಾನದಲ್ಲಿ ಅರ್ಘ್ಯ ಕೊಟ್ಟು, ಪವಿತ್ರ ಹೊರತೆಗೆದು ತುಳಸಿಗೆ ಗಂಧ ಮುಟ್ಟಿಸಿ,

**ಕೇಶವಾದಿ ದಾಮೋದರಾಂತಾಃ ಪಿತೃಮಾತ್ರಾದಯಃ ವಿಶ್ವೇದೇವಾಃ ಸಹಿತಾಯ ಪ್ರಾಣಸ್ಥನಾರಾಯಣಾಯ ನಮಃ । ಅಲಂಕಾರಾರ್ಥೇ ಇಮೇ ತೇ ಗಂಧಾಃ ।** ಎಂದು ಕೂರ್ಚದ ಮೇಲಿಟ್ಟು, ಪವಿತ್ರ ಧರಿಸಿ, **ಇಮೇ ತೇ ಅಕ್ಷತಾಃ । ಇಮಾನಿ ತೇ ಪುಷ್ಪಾಣಿ ॥**

–ಎಂದು ಕೂರ್ಚದ ಮೇಲೆ ಅಕ್ಷತೆ, ಪುಷ್ಪವನ್ನಿಟ್ಟು ಕೂರ್ಚದ ಎದುರು ಒಂದು ಚೌಕಾಕಾರದ ಮಂಡಲ ಮಾಡಿ ಹೂ ಇಟ್ಟು,

**ಉಪೇಂದ್ರಮೂರ್ತಯೇ ನಮಃ । ಶ್ರೀಪಾದಪದ್ಮಾಭ್ಯಾಂ ನಮಃ ॥ ಆಧಿವ್ಯಾಧಿ..... ...... ಮೂರ್ಧಪರ್ಯಂತಂ ಸರ್ವಾಲಂಕಾರೋಽಸ್ತು । ಆಘ್ರಾಣಾರ್ಥೇ ಅಯಂ ತೇ ಧೂಪಃ । ಆದರ್ಶನಾರ್ಥೇ ಅಯಂ ತೇ ದೀಪಃ । ಇದಮಂಜನಮ್ । ಆಚ್ಛಾದನಾರ್ಥೇ ವಸ್ತ್ರದ್ವಯಮ್ । ಧಾರಣಾರ್ಥೇ ಯಜ್ಞೋಪವೀತಮ್ । ಆಚಮನೀಯಾರ್ಥೇ ಕಮಂಡಲುಃ । ಪವಿತ್ರಾರ್ಥಾವಿಮೇ ಕುಶಾಃ ॥** ಹೀಗೆ ಉಪಚಾರಾದಿಗಳನ್ನು ಸಲ್ಲಿಸಬೇಕು.

'**ಧೂಪದೀಪಾಂಜನಾ ......... ಸಂಕಲ್ಪಯಾಮಿ ॥ (ಸಂಕಲ್ಪಿತಾಃ ಸಂತು)**' ತುಲಸೀಪುಷ್ಪಾಕ್ಷತೆ ಹಿಡಿದು 'ನಮೋ ಮಹದ್ಭ್ಯೋ.......ದೇವಾಃ ॥' ಎಂದು ಕೂರ್ಚದ ಮೇಲೆ ಹಾಕಿ ಕೈಮುಗಿದು, **ಕೇಶವ ದಾಮೋದರಾಂತಃ ಪಿತೃಮಾತ್ರಾದಯಃ ವಿಶ್ವೇದೇವಾಯ ಸಹಿತಾಯ, ಪ್ರಾಣಸ್ಥನಾರಾಯಣಮುದ್ದಿಶ್ಯ ಕೂರ್ಚಮುಖೇಷು ಕೃತಮಾರಾಧನಂ ಯಥಾಶಾಸ್ತ್ರೀಯ–ಮಸ್ತ್ವಿತಿ ಭವಂತೋ ಬ್ರುವಂತು (ಶಾಸ್ತ್ರೀಯಮಸ್ತು) ॥ ಸಕಲಾರಾಧನೈಃ ಸುವರ್ಚಿತಮ್ ॥ (ಅಸ್ತು) ॥ ಅಷ್ಟಾರ್ಘ್ಯಂ ಸಂಪೂರ್ಯತಾಮ್ । (ಸಂಪೂರ್ಣಮಸ್ತು) ॥**

## ಪಾಕಶುದ್ಧಿಃ

ತುಲಸಿ ನೀರು ಹಿಡಿದು, '**ಓಂ ಭೂರ್ಭುವಃಸ್ವಃ ।**' ಎಂದು ಪಾಕಾದಿಗಳಿಗೆ ಪ್ರೋಕ್ಷಣೆ ಮಾಡಿ,

**ಓಂ ತತ್ಸವಿತುರ್ವರೇಣ್ಯಂ.......ಪ್ರಚೋದಯಾತ್ ॥ ಓಮ್ ಅಯಂ ತ ಆಘೃಣೇ ಸುತೋ ಘೃತಂ ನ ಪವತೇ ಶುಚಿ । ಆ ಭಕ್ಷತ್ಕನ್ಯಾಸು ನಃ ॥ ಪ್ರ ಪ್ಯಾಯಸ್ವ ಪ್ರ ಸ್ಯಂದಸ್ವ ಸೋಮ ವಿಶ್ವೇಭಿರಂಶುಭಿಃ । ದೇವೇಭ್ಯ ಉತ್ತಮಂ ಹವಿಃ ॥**

**ಸಿದ್ಧಂ ಸರ್ವಂ ಹವಿಃ ಶ್ರಾದ್ಧಯೋಗ್ಯಮಸ್ತ್ವಿತಿ ಭವಂತೋ ಬ್ರುವಂತು ॥ (ಶ್ರಾದ್ಧಯೋಗ್ಯಮಸ್ತು) ಪಾಕಾದೀನಾಂ ಪವಿತ್ರತಾಽಸ್ತ್ವಿತಿ ಭವಂತೋ ಬ್ರುವಂತು ॥ (ಪವಿತ್ರತಾಸ್ತು) ॥**

ಅನಂತರ ಸ್ವಸ್ತಿಕೆಯ ಎದುರು ಚೌಕಾಕಾರದ ಮಂಡಲ ಮಾಡಿ ಒಂದು ಚಿಕ್ಕ ಬಾಳೆಎಲೆ ಹಾಗೂ ಬ್ರಾಹ್ಮಣಕೂರ್ಚದ ಎದುರು ಚೌಕಾಕಾರದ ಮಂಡಲ ಮಾಡಿ ಒಂದು ತುಂಡು ಬಾಳೆ ಎಲೆ ಇಟ್ಟು ಗೋಗ್ರಾಸಕ್ಕೆ ಪೂರ್ವಾಗ್ರವಾಗಿ ಇನ್ನೊಂದು ಬಾಳೆಎಲೆ ಇಟ್ಟು ತನ್ನ ಎಡಭಾಗದಲ್ಲಿ ಹವಿಸ್ಸನ್ನು ಹಾಕಲು ಪಶ್ಚಿಮಾಗ್ರವಾಗಿ ಮತ್ತೊಂದು ಎಲೆ ಹಾಕಿ ಎಲ್ಲಾ ಎಲೆಗಳಿಗೂ ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ ಒರಸಿ, ತುಪ್ಪ ಹಾಕಿ ಅಭಿಘಾರ ಮಾಡಿ ಹವಿಸ್ಸಿನ ಪಾತ್ರೆಗೂ ಅಭಿಘಾರ ಮಾಡಿ ಚಿಕ್ಕಬಾಳೆಎಲೆಗಳಿಗೆ ನೈವೇದ್ಯ ಹಾಕಿ ಉಳಿದ ಎಲ್ಲಾ ಹವಿಸ್ಸನ್ನು ತನ್ನ ಬಾಳೆಎಲೆಗೆ ಹಾಕಿ ಎಲ್ಲಾ ಎಲೆಗಳಿಗೂ ಪಂಚಾಮೃತದ್ರವ್ಯಗಳನ್ನು ಹಾಕಿ ಎರಡು ಬಾರಿ ಅಭಿಘಾರ ಮಾಡಿ ದೇವರ ನೈವೇದ್ಯ ಸಮರ್ಪಣೆ ಮಾಡಬೇಕು.

## ಆಹುತಿಪ್ರದಾನಮ್

ಯಜಮಾನನು ಹೋಮದ ಬಳಿಗೆ ಬಂದು, ಅಕ್ಕಿ ಹಿಡಿದು ಕೇಶವಾದಿ ದ್ವಾದಶನಾಮ ಮಂತ್ರಗಳಿಂದ ಅಕ್ಕಿಯನ್ನು ಹೋಮಕ್ಕೆ ಅರ್ಚನೆ ಮಾಡಿ ಪಿತ್ರಾದಿ ಇಪ್ಪತ್ತೈದು ಆಹುತಿಗಳನ್ನು ಕೊಟ್ಟು ಪುನಃ ಅಕ್ಕಿ ಹಿಡಿದು. ಕೇಶವಾದಿ ನಾಮಮಂತ್ರಗಳಿಂದ ಅರ್ಚನೆ ಮಾಡಬೇಕು.

## ಬ್ರಾಹ್ಮಣಭೋಜನವಿಧಿಃ

ಅನಂತರ ಬ್ರಾಹ್ಮಣರ ಸ್ಥಾನದಲ್ಲಿ ಮೂರು ಬಾರಿ ತೀರ್ಥ, ನಿರ್ಮಾಲ್ಯ ತುಳಸಿ, ಅಂಗಾರಕಾದಿಗಳನ್ನು ಕೊಟ್ಟು ಅಂಜಲಿಮುದ್ರೆಯಿಂದ '**ಪೃಥಿವೀ ತೇ ಪಾತ್ರಮ್**' ಎಂದು ಹೇಳಿ ಪರಿಷೇಕಾದಿಗಳನ್ನು ಮಾಡಿ ಗೋಗ್ರಾಸ ಬಿಟ್ಟು, ಬ್ರಾಹ್ಮಣ ಹಸ್ತೋದಕಾದಿಗಳನ್ನು ನೀಡಿ '**ಶ್ರದ್ಧಾಯಾಂ ಪ್ರಾಣೇ .... '** ಮಂತ್ರ ಪಠಿಸಿ, **ಕೇಶವಾದಿದಾಮೋದರಾಂತಾಃ ........ಪ್ರಾಣಸ್ಥಶ್ರೀನಾರಾಯಣ ಶನೈಶ್ಶನೈರ್ಭುಜ್ಯತಾಮ್** ॥' ವಿಷ್ಣುಸೂಕ್ತಾದಿ ಪಾರಾಯಣ ಮಾಡುತ್ತಾ ೪೯ ಪಿಂಡಗಳನ್ನು ಮಾಡಬೇಕು.

**ಮಧುವಾತಾ............ನಃ ॥ ಮಧು ಮಧು ಸಂಪನ್ನಮ್ । ಮಹಾವಿಷ್ಣೋ ತೃಪ್ತೋಽಸಿ ॥**

ದೇವರ ಭೋಜನಪತ್ರದ ಎದುರು ನೀರಿನಿಂದ ಚೌಕಾಕಾರದ ಮಂಡಲ ಮಾಡಿ, ಅಕ್ಷತೋದಕ ಕೊಟ್ಟು ಎರಡು ದರ್ಭೆಯಿಟ್ಟು ಅದರ ಮೇಲೆ ಅನ್ನ ಇಟ್ಟು,

**ಅಸಂಶಯೋ ಭವೇದ್ವಿಷ್ಣುಃ ಮೋಕ್ಷಸಾಧನಮವ್ಯಯಮ್ ।**
**ಪಿತೄಣಾಂ ಚ ವರಂ ಶ್ರೇಷ್ಠಂ ಏಕಿರಾನ್ನಂ ಚ ವೈಷ್ಣವಮ್ ॥**

ಅಕ್ಷತೋದಕ ಹಿಡಿದು '**ಮಹಾವಿಷ್ಣುಸ್ತೃಪ್ತಿರಸ್ತು** ॥' ಎಂದು ಅನ್ನದ ಮೇಲೆ ಬಿಡಬೇಕು. ಅನಂತರ ಕೂರ್ಚಬ್ರಾಹ್ಮಣರ ಸ್ಥಾನದಲ್ಲಿ '**ಅಮೃತಾಪಿದಾನಮಸಿ** ॥' ಎಂದು ಉತ್ತರಾಪೋಶನ ಕೊಟ್ಟು ಹಸ್ತಪ್ರಕ್ಷಾಲನಾದಿಗಳನ್ನು ನೀಡಬೇಕು.

## ಪಿಂಡಪ್ರದಾನಮ್

**ಕೇಶವಾದಿ...... ಪ್ರಾಣಸ್ಥನಾರಾಯಣಪ್ರೀತ್ಯರ್ಥಂ ನಾರಾಯಣಬಲಿಶ್ರಾದ್ಧೇ ಪಿಂಡ ಪ್ರದಾನಾನಿ ಕರಿಷ್ಯೇ ॥ (ಕುರುಷ್ವ) ॥**

**ಈಶಾನ ವಿಷ್ಣು.............॥ ಪಿಂಡದಾನಸ್ಯ ಅನುಜ್ಞಾ ॥ (ಅಸ್ತು ಪಿಂಡದಾನಮ್)**

–ಎಂದು ಬ್ರಾಹ್ಮಣರಿಂದ ಅನುಜ್ಞೆ ಪಡೆದು ಸ್ವಸ್ತಿಕೆಯಲ್ಲಿ ಹಾಗೂ ಕೇಶವಾದಿ ೧೨ ಪಿಂಡಸ್ಥಾನಗಳಲ್ಲಿ ಹೂ, ತುಲಸಿ, ಅಕ್ಕಿಯಿಂದ **ಕೇಶವ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಕೇಶವಾಯ ನಮಃ** ॥ ಎಂದು, ಹೀಗೆ ಉಳಿದ ೧೧ ಸ್ಥಾನಗಳಲ್ಲಿಯೂ ಅರ್ಚನೆ ಮಾಡಿ, ಪಿಂಡ ಹಿಡಿದು,

**ಕೇಶವನಾರಾಯಣ ಓಂ ನಮೋ ನಾರಾಯಣಾಯ ಸ್ವಾಹಾ ॥ ನಾರಾಯಣಾಯ ಇದಂ ನ ಮಮ ॥ ನಾರಾಯಣ ನಾರಾಯಣ ಓಂ ನಮೋ ನಾರಾಯಣಾಯ ಸ್ವಾಹಾ ॥ ನಾರಾಯಣಾಯ ಇದಂ ನ ಮಮ ॥**

ಹೀಗೆಯೇ ಉಳಿದ ಹನ್ನೊಂದು ಸ್ಥಾನಗಳಲ್ಲಿಯೂ ಪಿಂಡಪ್ರದಾನ ಮಾಡಿ,

**ಪಿತೃಭ್ಯಃ ಸ್ವಧಾ ನಾರಾಯಣ ಓಂ ನಮೋ ನಾರಾಯಣಾಯ ಸ್ವಾಹಾ ॥ ನಾರಾಯಣಾಯ ಇದಂ ನ ಮಮ ॥**

ಹೀಗೆಯೇ ಇಪ್ಪತ್ತನಾಲ್ಕು ಸ್ಥಾನಗಳಲ್ಲಿಯೂ ಪಿಂಡ ಪ್ರದಾನ ಮಾಡಿ,

**ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ನಾರಾಯಣ ಓಂ ನಮೋ ನಾರಾಯಣಾಯ ಸ್ವಾಹಾ ॥ ನಾರಾಯಣಾಯ ಇದಂ ನ ಮಮ ॥**

ಹೀಗೆಯೇ ಉಳಿದ ಸ್ಥಾನಗಳಲ್ಲಿಯೂ ಪಿಂಡದಾನ ಮಾಡಿ ಅನಂತರ ಪುನಃ ಹೂವು ತುಳಸಿಯಿಂದ ಸ್ವಸ್ತಿಕೆ ಹಾಗೂ ಕೇಶವಾದಿ ೧೨ ಪಿಂಡಸ್ಥಾನಗಳಲ್ಲಿ '**ಕೇಶವ ನಾರಾಯಣ ಓಂ ನಮೋ ನಾರಾಯಣಾಯ ನಮಃ । ಕೇಶವಾಯ ನಮಃ ॥**' ಎಂದು ಅರ್ಚನೆ ಮಾಡಿ, ಹೀಗೆಯೇ ಉಳಿದ ೧೧ ಸ್ಥಾನಗಳಲ್ಲಿಯೂ ಅರ್ಚನೆ ಮಾಡಿ, ಅರ್ಘ್ಯಪಾತ್ರದ ಕೂರ್ಚ, ನೀರು ಹಾಗೂ ಅಕ್ಕಿ ಹಿಡಿದು, '**ಕೇಶವಾದಿ ದಾಮೋದರಾಂತಾಃ ..........ನಾರಾಯಣಾಯ ಪಿಂಡಸ್ಯೋಪರಿ ಅಕ್ಷತೋದಕಮ್** । ಎಂದು ಪಿಂಡಗಳ ಮೇಲೆ ಬಿಟ್ಟು, ಹೋಮದ ಹುತಭಸ್ಮ ಹಾಗೂ ಸಂಪಾತಾಜ್ಯ ಹಾಗೂ ನೀರು ಹಿಡಿದು, **ಅಂಜನೋದಕಮ್ । ಅಭ್ಯಂಜನೋದಕಮ್** ।' ಎಂದು ಪಿಂಡಗಳ ಮೇಲೆ ಕೊಟ್ಟು ಪಿಂಡಗಳ ಮೇಲೆ ಬಟ್ಟೆಯ ನೂಲನ್ನು ಹಾಕಿ, ದರ್ಭೆ ಹಿಡಿದು '**ಬಲಿಸ್ಥಾನೇ ಇಮೇ ದರ್ಭಾಃ**' ಎಂದು ಪ್ರದಕ್ಷಿಣಾಕಾರವಾಗಿ ಸುತ್ತ ದರ್ಭೆ ಹರಡಿ,

**ಓಂ ಸಹಸ್ರಶೀರ್ಷಂ ದೇವಂ ....... ನಾರಾಯಣಪನ್ನ**(ಪುಟಸಂಖ್ಯೆ 564)ದಿಂದ ಮಂಡಲದ ಸುತ್ತ ಬಲಿ ಹಾಕಿ ಬಲಿಯ ಸುತ್ತ ಅರಳು ಹರಡಬೇಕು. '**ಸಹಸ್ರಶೀರ್ಷಾ ಪುರುಷಃ** ........' ಎಂಬ ಪುರುಷಸೂಕ್ತದಿಂದ ಪಿಂಡಕ್ಕೆ ಷೋಡಶೋಪಚಾರಪೂಜೆ ಮಾಡಿ, ಆರತಿಸಮಯದಲ್ಲಿ ಸ್ವಸ್ತಿಕೆ ಹೋಮ ಕಲಶಮಧ್ಯದಲ್ಲಿ ಪೂಜೆ ಮಾಡಿ, ಎಲ್ಲ ಕುಟುಂಬಿಕರೂ ಅರಳು ಹಿಡಿದು ನಾರಾಯಣೋಪನಿಷತ್ ಪಠಿಸಬೇಕು.

## ನಾರಾಯಣೋಪನಿಷತ್

**ಓಂ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಅಥ ಪುರುಷೋ ಹ ವೈ ನಾರಾಯಣೋಽಕಾಮಯತ ಪ್ರಜಾಸ್ಸೃಜೇಯೇತಿ। ನಾರಾಯಣಾತ್ಪ್ರಾಣೋ ಜಾಯತೇ । ಮನಸ್ಸರ್ವೇಂದ್ರಿಯಾಣಿ ಚ। ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ । ನಾರಾಯಣಾದ್ಬ್ರಹ್ಮಾ ಜಾಯತೇ । ನಾರಾಯಣಾದ್ರುದ್ರೋ ಜಾಯತೇ । ನಾರಾಯಣಾದಿಂದ್ರೋ ಜಾಯತೇ। ನಾರಾಯಣಾತ್ ಪ್ರಜಾಪತಯಃ ಪ್ರಜಾಯಂತೇ। ನಾರಾಯಣಾ-ದ್ದ್ವಾದಶಾದಿತ್ಯಾರುದ್ರಾವಸವಸ್ಸರ್ವಾಣಿ ಚ ಛಂದಾಂಸಿ। ನಾರಾಯಣಾದೇವ-ಸಮುತ್ಪದ್ಯಂತೇ । ನಾರಾಯಣೇ ಪ್ರವರ್ತಂತೇ । ನಾರಾಯಣೇ ಪ್ರಲೀ-ಯಂತೇ ॥ ೧ ॥

ಓಮ್ । ಅಥ ನಿತ್ಯೋ ನಾರಾಯಣಃ । ಬ್ರಹ್ಮಾ ನಾರಾಯಣಃ । ಶಿವಶ್ಚ ನಾರಾಯಣಃ। ಶಕ್ರಶ್ಚ ನಾರಾಯಣಃ । ದ್ಯಾವಾಪೃಥಿವ್ಯೌ ಚ ನಾರಾಯಣಃ। ಕಾಲಶ್ಚ ನಾರಾಯಣಃ। ದಿಶಶ್ಚ ನಾರಾಯಣಃ । ಊರ್ಧ್ವಶ್ಚ ನಾರಾಯಣಃ । ಅಧಶ್ಚ ನಾರಾಯಣಃ । ಅಂತರ್ಬಹಿಶ್ಚ ನಾರಾಯಣಃ । ನಾರಾಯಣ ಏವೇದಗ್ಂ ಸರ್ವಮ್ । ಯದ್ಭೂತಂ ಯಚ್ಚ ಭವ್ಯಮ್ । ನಿಷ್ಕಲೋ ನಿರಂಜನೋ ನಿರ್ವಿಕಲ್ಪೋ ನಿರಾಖ್ಯಾತಶ್ಶುದ್ಧೋ ದೇವ ಏಕೋ ನಾರಾಯಣಃ। ನ ದ್ವಿತೀಯೋಽಸ್ತಿ ಕಶ್ಚಿತ್। ಯ ಏವಂ ವೇದ। ಸ ವಿಷ್ಣುರೇವ ಭವತಿ ಸ ವಿಷ್ಣುರೇವ ಭವತಿ ॥ ೨ ॥

ಓಮಿತ್ಯಗ್ರೇ ವ್ಯಾಹರೇತ್ । ನಮ ಇತಿ ಪಶ್ಚಾತ್ । ನಾರಾಯಣಾಯೇ ತ್ಯುಪರಿಷ್ಟಾತ್। ಓಮಿತ್ಯೇಕಾಕ್ಷರಮ್। ನಮ ಇತಿ ದ್ವೇ ಅಕ್ಷರೇ। ನಾರಾಯಣಾ ಯೇತಿ ಪಂಚಾಕ್ಷರಾಣಿ। ಏತದ್ವೈ ನಾರಾಯಣಸ್ಯಾಷ್ಟಾಕ್ಷರಂ ಪದಮ್। ಯೋ ಹ ವೈ ನಾರಾಯಣಸ್ಯಾಷ್ಟಾಕ್ಷರಂ ಪದಮಧ್ಯೇತಿ। ಅನಪಬ್ರವಸ್ಸರ್ವ-ಮಾಯುರೇತಿ। ವಿಂದತೇ ಪ್ರಾಜಾಪತ್ಯಂ ರಾಯಸ್ಪೋಷಂ ಗೌಪತ್ಯಮ್ ।

ತತೋಽಮೃತತ್ವಮಶ್ನುತೇ ತತೋಽಮೃತತ್ವಮಶ್ನುತ ಇತಿ । ಯ ಏವಂ ವೇದ ॥ ೩ ॥

ಪ್ರತ್ಯಗಾನಂದಂ ಬ್ರಹ್ಮಪುರುಷಂ ಪ್ರಣವಸ್ವರೂಪಮ್ । ಅಕಾರ ಉಕಾರ ಮಕಾರ ಇತಿ । ತಾನೇಕಧಾ ಸಮಭರತ್ತದೇತದೋಮಿತಿ । ಯಮುಕ್ತ್ವಾ ಮುಚ್ಯತೇ ಯೋಗೀ ಜನ್ಮಸಂಸಾರಬಂಧನಾತ್ । ಓಂ ನಮೋ ನಾರಾಯಣಾಯೇತಿ ಮಂತ್ರೋಪಾಸಕಃ । ವೈಕುಂಠಭುವನಲೋಕಂ ಗಮಿಷ್ಯತಿ । ತದಿದಂ ಪರಂ ಪುಂಡರೀಕಂ ವಿಜ್ಞಾನ ಘನಮ್ । ತಸ್ಮಾತ್ತದಿದಾವನ್ಮಾತ್ರಮ್ । ಬ್ರಹ್ಮಣ್ಯೋ ದೇವಕೀಪುತ್ರೋ ಬ್ರಹ್ಮಣ್ಯೋ ಮಧುಸೂದನೋಮ್ । ಸರ್ವಭೂತಸ್ಥಮೇಕಂ ನಾರಾಯಣಮ್ । ಕಾರಣರೂಪಮಕಾರ ಪರಬ್ರಹ್ಮೋಮ್ । ಏತದಥರ್ವ–ಶಿರೋಯೋಽಽಧೀತೇ । ಪ್ರಾತರಧೀಯಾನೋ ರಾತ್ರಿಕೃತಂ ಪಾಪಂ ನಾಶಯತಿ । ಸಾಯಮಧೀಯಾನೋ ದಿವಸಕೃತಂ ಪಾಪಂ ನಾಶಯತಿ । ಮಾಧ್ಯಂದಿನಮಾದಿತ್ಯಾಭಿಮುಖೋಽಧೀಯಾನಃ ಪಂಚಪಾತಕೋಪ–ಪಾತಕಾತ್ಪ್ರಮುಚ್ಯತೇ । ಸರ್ವವೇದಪಾರಾಯಣಪುಣ್ಯಂ ಲಭತೇ । ನಾರಾಯಣ ಸಾಯುಜ್ಯಮವಾಪ್ನೋತಿ ನಾರಾಯಣಸಾಯುಜ್ಯಮವಾಪ್ನೋತಿ । ಯ ಏವಂ ವೇದ । ಇತ್ಯುಪನಿಷತ್ ॥ ೪ ॥

ಓಂ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಅರಳು ಹಾಕಿ, ಕೈಮುಗಿದು–

ನಮಸ್ತೇ ಪುಂಡರೀಕಾಕ್ಷ ಋಣತ್ರಯವಿಮೋಚನ ।<br>
ಲಕ್ಷ್ಮೀಕಾಂತ ನಮಸ್ತುಭ್ಯಂ ನಮಸ್ತೇ ಪಿತೃಮೋಕ್ಷದ ॥

**ಜನಾರ್ದನ ನಮಸ್ತುಭ್ಯಂ ನಮಸ್ತೇ ಪಿತೃಮೋಕ್ಷದ ।**
**ಪಿತೃಪತೇ ನಮಸ್ತೇಽಸ್ತು ನಮಸ್ತೇ ಪಿತೃರೂಪಿಣೇ ॥**

**ನಾರಾಯಣಾಖ್ಯೇನ ಬಲಿನಾ ವಿಷ್ಣುಸಾಯುಜ್ಯಮಾಪ್ನುಹಿ ।**
**ಶುಭಂ ಭವತು ಶೇಷಾಣಾಂ ಜಾಯಂತಾಂ ಚಿರಜೀವಿನಃ ॥**

ನಮಸ್ಕಾರ ಮಾಡಿ, ಅನಂತರ,

**ಅಸ್ಮತ್ ಕುಟುಂಬೇ ಮರಣಗತಾನಾಂ ಸರ್ವೇಷಾಮಪಿ ಮೋಕ್ಷಜ್ಞಾನಪೂರ್ವಕ ಜೀವಯೋಗ್ಯತಾನುಸಾರೇಣ ಸದ್ಗತಿಸಿದ್ಧಿರಸ್ತು ಇತಿ ಭವಂತೋ ಬ್ರುವಂತು ॥ (ಸದ್ಗತಿ ಸಿದ್ಧಿರಸ್ತು) ॥** – ಎಂದು ಪ್ರತಿವಚನ ಪಡೆದು, ಹೋಮದ ಪೂರ್ಣಾಹುತಿ ಮಾಡಿ ಪ್ರಣೀತ ಸಂಪಾತ ಹುತಭಸ್ಮವನ್ನು ಪಿಂಡಕ್ಕೆ ಮುಟ್ಟಿಸಿ ಕೃಷ್ಣಾರ್ಪಣ ಬಿಟ್ಟು, ಹವಿಸ್ಸಿನ ಪಾತ್ರೆಗೆ ನೀರು ಹಾಕಿ, ಅನಂತರ ತೀರ್ಥ ಹಾಕಿ,

**ಓಂ ಯತ್ರ ತತ್ಪರಮಂ .... ಪರಿಸ್ರವ ॥** (ಪುಟಸಂಖ್ಯೆ 349) **ಓಮ್ ಓಂ ನಮೋ ನಾರಾಯಣಾಯ ॥ ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಸ್ಸಚಂತ ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ॥**

**ವೇಣೀಮಾಧವಾಯ ನಮಃ ॥ ಬಿಂದುಮಾಧವಾಯ ನಮಃ । ಗಯಾ ಗದಾಧರಾಯ ನಮಃ ॥**

– ಎಂದು ಪ್ರಾರ್ಥಿಸಿ **'ನಾರಾಯಣಬಲಿ ಪಿಂಡೋಽಯಂ ಗಯಾರ್ಪಿತೋಽಸ್ತು ।'** ಎಂದು ಪಿಂಡಗಳನ್ನು ಕ್ರಮವಾಗಿ ಪಾತ್ರೆಗೆ ಹಾಕಿ,

**ವಾಸನಾದ್ವಾಸುದೇವೋಽಸಿ ವಾಸಿತಂತೇ ಜಗತ್ತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

ವಿಷ್ಣುಪಾದದ ತೀರ್ಥವನ್ನು,

**ಓಂ ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ । ಉರುಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ॥**

–ಎಂದು ತನಗೆ ಪ್ರೋಕ್ಷಣೆ ಮಾಡಿಕೊಂಡು, ಕೂರ್ಚಬ್ರಾಹ್ಮಣರಿಗೆ ತಾಂಬೂಲ ದಕ್ಷಿಣೆ ಕೊಟ್ಟು ತುಳಸಿ ನೀರು ಹಿಡಿದು,

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥**

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ..... ನಾರಾಯಣಾಯೇತಿ ಸಮರ್ಪಯಾಮಿ ॥**

**ಅದ್ಯದಿನೇ ಮಮ ಸಮಸ್ತ ಪಿತೄಣಾಮುದ್ದಿಶ್ಯ ಸಮಸ್ತ ದುರ್ಗತಿನಿವಾರಣ–ಪೂರ್ವಕ ಮೋಕ್ಷಜ್ಞಾನಪೂರ್ವಕ ಜೀವಯೋಗ್ಯತಾನುಸಾರೀ ಸ್ವಸ್ವರೂಪಸ್ಥಾನ–ಪ್ರಾಪ್ತ್ಯರ್ಥಂ ಮಯಾ ಕೃತ ಮೋಕ್ಷನಾರಾಯಣಶ್ರಾದ್ಧಬಲಿಕರ್ಮಣಾ ಕೇಶವಾದಿ ದಾಮೋದರಾಂತಾಃ ಪಿತೃಮಾತ್ರಾದಯಃ ವಿಶ್ವೈದೇವೈಃ ಸಹಿತಾಯ ಪ್ರಾಣಸ್ಥ ಶ್ರೀನಾರಾಯಣಾತ್ಮಕ ಮಧ್ವಪತಿ ಶ್ರೀಗೋಪಾಲಕೃಷ್ಣಃ ಪ್ರೀಯತಾಮ್ ॥ ತತ್ಸರ್ವಂ ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಗೋವಿಂದಾಯ ನಮಃ ॥** ಎಂದು ಕೃಷ್ಣಾರ್ಪಣ ಬಿಟ್ಟು, ಕೈಮುಗಿದು,

**ಸಮಸ್ತಪಿತೃಣಾಮುದ್ದಿಶ್ಯ ನಾರಾಯಣಬಲಿಶ್ರಾದ್ಧ ಗಯಾಶ್ರಾದ್ಧತುಲ್ಯಮಸ್ತ್ವಿತಿ ಭವಂತೋ ಬ್ರುವಂತು ॥ (ಗಯಾಶ್ರಾದ್ಧತುಲ್ಯಮಸ್ತು) ಪಿತೃಣಾಂ ಶಾಶ್ವತವಿಷ್ಣುಲೋಕಾ–ವಾಪ್ತಿರಸ್ತ್ವಿತಿ ಭವಂತೋ ಬ್ರುವಂತು ॥ (ಶಾಶ್ವತವಿಷ್ಣುಲೋಕಾವಾಪ್ತಿರಸ್ತು) ಕೃತಂ ಕರ್ಮ ಸಂಪೂರ್ಣಮಸ್ತ್ವಿತಿ ಭವಂತೋ ಬ್ರುವಂತು ॥ (ಸಂಪೂರ್ಣಮಸ್ತು)**

ಪ್ರತಿವಚನ ಪಡೆದು ಸ್ವಸ್ತಿಕೆಯಲ್ಲಿ ಉತ್ತರಪೂಜೆ ಮಾಡಿ ಬ್ರಾಹ್ಮಣಸ್ಥಾನದ ಕೂರ್ಚವನ್ನು ಬಿಚ್ಚಿ, ದೇವರನ್ನು ಸಹ ಉದ್ವಾಸನೆ ಮಾಡಿ, ಅನಂತರ ಕಲಶಮಾರ್ಜನೆ, ದಾನದಕ್ಷಿಣೆ, ಅನ್ನಸಂತರ್ಪಣೆ ಮಾಡಬೇಕು.

## ತ್ರಿಪಿಂಡೀಶ್ರಾದ್ಧಮ್

**ಸಾಹಿತ್ಯಗಳು**

ಮೂರು ಆಮಾನ್ನ ಗ್ರಂಥಿಗಳು, ಕಲಶ, ವಸ್ತ್ರ, ಪಂಚಪಾತ್ರಾದಿಗಳು, ಶ್ರಾದ್ಧಕ್ಕೆ ಸಂಬಂಧಪಟ್ಟ ದ್ರವ್ಯಗಳು, ಬತ್ತದ ಹಿಟ್ಟು, ಗೋಧಿಹಿಟ್ಟು, ಎಳ್ಳು ಹಿಟ್ಟು, ಪುಣ್ಯಾಹವಾಚನ ಹಾಗೂ ತಿಲಹೋಮದ ಸಾಮಗ್ರಿಗಳೊಂದಿಗೆ ನದೀತೀರಕ್ಕೆ ಹೋಗಿ ಪ್ರೇತಪ್ರತಿಮೆ ಅಥವಾ ಪ್ರೇತಕೂರ್ಚವನ್ನು ಹಿಡಿದು,

**ಕುಶೋಽಸಿ ಬ್ರಹ್ಮಪುತ್ರೋಽಸಿ ಬ್ರಹ್ಮಣಾ ನಿರ್ಮಿತಃ ಪುರಾ ।**
**ತ್ವಯಿ ಸ್ನಾತೇ ಸ ಚ ಸ್ನಾತೋ ಯಸ್ಯೇದಂ ಗ್ರಂಥಿಬಂಧನಮ್ ॥**

–ಎಂದು ದಶವಿಧಸ್ನಾನ ಮಾಡಿ, ಪ್ರೇತಕೂರ್ಚ, ಪ್ರತಿಮೆಗಳನ್ನು ಹರಿವಾಣದಲ್ಲಿ ಕೆಳಗಿಟ್ಟು, ತಲೆ ಒರೆಸಿಕೊಳ್ಳಬೇಕು.

1. ಪಿಂಡಸ್ಥಾನ
2. ಅರ್ಘ್ಯಪಾತ್ರೆ
3. ಜಲಪಾತ್ರೆ
4. ಕಲಶ
5. ಹೋಮ
6. ಚಕ್ರಾಬ್ಜಮಂಡಲ
7. ಪ್ರೇತಾನ್ನದ ಎಲೆ
8. ಸ್ವಸ್ತಿಕೆ
9. ಗೋಗ್ರಾಸ
10. ಪ್ರೇತಸ್ಥಾನ
11. ಆಮಾನ್ನದಾನಗ್ರಂಥಿ







ಪೂರ್ವಕ್ಕೆ ಮುಖ ಮಾಡಿ ಕುಳಿತು, ಆಚಮನ ಮಾಡಿ ಗೋಪೀಚಂದನ ಧರಿಸಿ, ಆಚಾರ್ಯರಿಂದ ನಾಲ್ಕು ಎಳೆಯ ಪವಿತ್ರ ಪಡೆದು ಧರಿಸಿ, ಸಂಕಲ್ಪ ಮಾಡಿ ಪುಣ್ಯಾಹ ಮಾಡಿಸಿ, ಪ್ರೇತಪ್ರತಿಮೆಗೆ ಹಾಗೂ ತನಗೆ ಪ್ರೋಕ್ಷಣೆ ಮಾಡಿಸಿಕೊಂಡು, ತೀರ್ಥಪ್ರಾಶನ ಮಾಡಿ, ತಿಲಹೋಮದ ಸಂಕಲ್ಪ ಮಾಡಿ, '**ಋತ್ವಿಗ್ವರಣಂ ಕರಿಷ್ಯೇ ॥**' ಎಂದು ಸಂಕಲ್ಪ ಮಾಡಿ, ಚಕ್ರಾಬ್ಜಮಂಡಲಪೂಜೆಗೆ, ಕಲಶಪೂಜೆಗೆ ಹಾಗೂ ಹೋಮಕ್ಕೆ ಋತ್ವಿಗ್ವರಣಕೊಟ್ಟು, ಕೃಷ್ಣಾರ್ಪಣ ಬಿಟ್ಟು, ಆಚಮನ ಮಾಡಿ, ಪವಿತ್ರ ಬಿಚ್ಚಿ ಹಾಕಬೇಕು. ಪುನಃ ಆಚಮನ ಮಾಡಿ ಮೂರು ಎಳೆಯ ಪವಿತ್ರ ಪಡೆದು ಧರಿಸಿ, ಸಂಕಲ್ಪ ಮಾಡಬೇಕು.

**ಅದ್ಯ ಪೂರ್ವೋಚ್ಚರಿತ ಸಮಸ್ತಪ್ರೇತಾಂತರ್ಗತ ಪ್ರಾಣಸ್ಥಶ್ರೀಪ್ರಾಜ್ಞರೂಪಿ ......।** (ಎಡ) **ಅಸ್ಮತ್ಕುಲೇ ಪ್ರಜಾತಾನಾಂ ಗೋತ್ರಜಾನಾಮ್ ಅನ್ಯಗೋತ್ರೇ ಜಾತಾನಾಂ ತ್ರಿವಿಧಾನಾಂ ದಿವ್ಯಾಂತರಿಕ್ಷಭೌಮಾನಾಂ ಸಾತ್ತ್ವಿಕ–ರಾಜಸ–ತಾಮಸಾನಾಮ್, ಅಜ್ಞಾತ ನಾಮಗೋತ್ರಾಣಾಂ ದುರ್ಗತಿಗತಾನಾಮ್ ಅಸ್ಮತ್ಕುಲೇ ಕ್ಲೇಶದಾನಾಂ ಸಂತತ್ಯಾದಿ ಪ್ರತಿಬಂಧಕಾರಿಣಾಂ ಪ್ರೇತಸ್ವರೂಪಿಣಾಂ ಪ್ರೇತತ್ವನಿವೃತ್ತಿಪೂರ್ವಕ ಸದ್ಗತಿಪ್ರಾಪ್ತ್ಯರ್ಥಂ ಸರ್ವವಿಧಬಾಧಾಪರಿಹಾರಾರ್ಥಂ** (ಬಲ) **ತ್ರಿಪಿಂಡೀಶ್ರಾದ್ಧಂ ಕರಿಷ್ಯೇ ॥ ತದಂಗ ಬ್ರಹ್ಮದಂಡಂ ಕರಿಷ್ಯೇ ॥ (ಕುರುಷ್ವ) ॥**

– ಎಂದು ಬ್ರಹ್ಮದಂಡ ಇಟ್ಟು '**ತ್ರಿಪಿಂಡೀಶ್ರಾದ್ಧಕರ್ತುಮ್ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು । (ಅಧಿಕಾರಸಂಪದಸ್ತು) ॥**' ಎಂದು ಪ್ರತಿವಚನ ಪಡೆದು,

## ಜಲಪಾತ್ರಸ್ಥಾಪನಮ್

(ಬಲ) **ಜಲಪಾತ್ರಸ್ಥಾಪನಂ ಕರಿಷ್ಯೇ ॥**

ತನ್ನ ಎಡಭಾಗದಲ್ಲಿ ನೀರಿನಿಂದ ದಕ್ಷಿಣಾಗ್ರವಾಗಿ ತ್ರಿಕೋನಾಕಾರದ ಮಂಡಲವನ್ನು ಅಪ್ರದಕ್ಷಿಣೆಯಾಗಿ ಮಾಡಿ ಅದರ ಮೇಲೆ ಒಂದು ದರ್ಭೆಯನ್ನು ಇಟ್ಟು ಅದರ ಮೇಲೆ ಜಲಪಾತ್ರೆ ಇಟ್ಟು ನಾರಾಯಣಸ್ಮರಣೆಯೊಂದಿಗೆ ಜಲಪಾತ್ರಕ್ಕೆ ನೀರು ಹಾಕಿ,

**ಗಂಗಾ ಗೋದಾವರೀ ಕೃಷ್ಣಾ ಪ್ರಯಾಗಾ ದ್ವಾರಕಾ ತಥಾ ।**
**ಆವಾಹ್ಯ ಪಂಚಗಂಗಾಶ್ಚ ಸರ್ವಪಾಪಹರಾಃ ಶುಭಾಃ ॥**

ಒಂದು ಎಳೆಯ ಕೂರ್ಚದ ಗಂಟು ಕೆಳಮುಖವಾಗಿರುವರೆ ಇಟ್ಟು ಎಳ್ಳು ಸಹಿತ ಗಂಧ, ಪುಷ್ಪ, ಹಿರಣ್ಯ, ಗರಿಕೆ ಹಾಕಿ, ಹತ್ತು ಬಾರಿ ಅಷ್ಟಾಕ್ಷರದಿಂದ ಜಪಿಸಿ

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥**

ಜಲಕೂರ್ಚದಿಂದ ನೀರು ಹಿಡಿದು, ಸುತ್ತ ಪ್ರೋಕ್ಷಣೆ ಮಾಡಬೇಕು.

## ವಿಷ್ಣುಪೂಜಾ

ಪಶ್ಚಿಮಮುಖ ಮಾಡಿ ಕುಳಿತು ದೇವರ ಮುಖ ಪೂರ್ವಕ್ಕೆ ಬರುವಂತೆ ಸ್ವಸ್ತಿಕೆ ಇಟ್ಟು ಮಹಾವಿಷ್ಣುವನ್ನು ಆವಾಹನೆ ಮಾಡಿ ಪುರುಷಸೂಕ್ತದಿಂದ ಷೋಡಶೋಪಚಾರ ಪೂಜೆ ಮಾಡಬೇಕು. ಪೂರ್ವಮುಖವಾಗಿ ಕುಳಿತು,

**ತಿಲೋದಕಸಹಿತ ತ್ರಿಪಿಂಡೀಶ್ರಾದ್ಧಂ ಸದ್ಯಃ ಕರಿಷ್ಯೇ ॥ (ಕುರುಷ್ವ) ॥**

–ಎಂದು ಸಂಕಲ್ಪಿಸಿ, ದಕ್ಷಿಣಕ್ಕೆ ಮುಖ ಮಾಡಿ ಕುಳಿತು, ತನ್ನೆದುರು ಮಧ್ಯ–ಪಶ್ಚಿಮ–ಪೂರ್ವ ದಿಕ್ಕುಗಳಲ್ಲಿ ಜೇಡಿಯಿಂದ ಮೂರು ತ್ರಿಕೋನಾಕಾರದ ಮಂಡಲ ಮಾಡಿ ದಕ್ಷಿಣಾಗ್ರವಾಗಿ ಒಂದು ಎಳೆಯ ಮೂರು ಕೂರ್ಚಗಳನ್ನು ಪ್ರತ್ಯೇಕವಾಗಿ ಮೂರು ಬಾಳೆಎಲೆಗಳ ಮೇಲೆ ಇಟ್ಟು (ಎಡ) ಒಂದು ದರ್ಭೆಯನ್ನು ಹಿಡಿದು ಮಧ್ಯಕೂರ್ಚದಲ್ಲಿ,

**ದಿವಿಷ್ಠಾನಾಂ ಸಾತ್ತ್ವಿಕಾನಾಮ್ ಅಜ್ಞಾತನಾಮಗೋತ್ರಾಣಾಂ ಪ್ರೇತಾನಾಂ ಸ್ಥಾನೇ ಕ್ಷಣ ಉಪತಿಷ್ಠತು ॥** –ಎಂದು ದರ್ಭೆಯನ್ನು ಕೂರ್ಚದ ಮೇಲೆ ಇಟ್ಟು, ಪಶ್ಚಿಮ ಕೂರ್ಚದಲ್ಲಿ,

**ಅಂತರಿಕ್ಷಸ್ಥಾನಾಂ ರಾಜಸಾನಾಮ್ ಅಜ್ಞಾತನಾಮಗೋತ್ರಾಣಾಂ ಪ್ರೇತಾನಾಂ ಸ್ಥಾನೇ ಕ್ಷಣ ಉಪತಿಷ್ಠತು ॥** ಎಂದು ಒಂದು ದರ್ಭೆಯನ್ನು ಕೂರ್ಚದ ಮೇಲೆ ಇಟ್ಟು, ಪುನಃ ಒಂದು ದರ್ಭೆಯನ್ನು ಹಿಡಿದು, ಪೂರ್ವಕೂರ್ಚದಲ್ಲಿ

**ಭೂಮಿಷ್ಠಾನಾಂ ತಾಮಸಾನಾಮ್ ಅಜ್ಞಾತನಾಮಗೋತ್ರಾಣಾಂ ಪ್ರೇತಾನಾಂ ಸ್ಥಾನೇ ಕ್ಷಣ ಉಪತಿಷ್ಠತು ॥**

–ಎಂದು ದರ್ಭೆಯನ್ನು ಕೂರ್ಚದ ಮೇಲೆ ಇಡಬೇಕು. ಕೈಮುಗಿದು, **ಭವದ್ಭಿಃ ಪ್ರಸಾದಃ ಕರ್ತವ್ಯಃ ॥ (ಸುಪ್ರಸಾದಃ)**

(ಬಲ) **ಅಕ್ರೋಧನೈಃ ....... ಶ್ರಾದ್ಧಕಾರಿಣಾ ॥**

(ಎಡ) **ದಿವ್ಯಂತರಿಕ್ಷಭೂಮಿಷ್ಠಾನಾಂ ಸಾತ್ತ್ವಿಕರಾಜಸತಾಮಸಾನಾಮ್ ಅಜ್ಞಾತನಾಮ ಗೋತ್ರಾಣಾಂ ಪ್ರೇತಾನಾಂ ಪಾದ್ಯಸ್ಥಾನಂ ಕಲ್ಪಯಾಮಿ । ಆಸನಸ್ಥಾನಂ ಕಲ್ಪಯಾಮಿ ॥**

– ಎಂದು ಮೂರು ಸ್ಥಾನಗಳಲ್ಲಿ ನೀರಿನಿಂದ ಉತ್ತರದಿಂದ ದಕ್ಷಿಣಕ್ಕೆ ತ್ರಿಕೋನಾಕಾರದ ಎರಡೆರಡು ಮಂಡಲ ಮಾಡಿ ಆರು ದರ್ಭೆ ಹಿಡಿದು, '**ಪಾದ್ಯಸ್ಥಾನೇ ದರ್ಭಪತ್ರಮುಪತಿಷ್ಠತು । ಆಸನಸ್ಥಾನೇ ದರ್ಭಪತ್ರಮುಪತಿಷ್ಠತು ॥**' –ಎಂದು ಒಂದೊಂದು ದರ್ಭೆಯನ್ನು ಪೂರ್ವಾಗ್ರವಾಗಿ ಆರು ಮಂಡಲಗಳಲ್ಲಿಟ್ಟು ಎಳ್ಳು ನೀರು ಹಿಡಿದು '**ಪಾದ್ಯಾಸನಸ್ಥಾನೇ ತಿಲೋದಕಮುಪತಿಷ್ಠತು ॥**' –ಎಂದು ಆರು ಮಂಡಲದ ದರ್ಭೆಯ ಮೇಲೆ ಕೊಟ್ಟು, ಅಂಜಲಿಮುದ್ರೆ ಮಾಡಿ,

(ಬಲ) **ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾಃ ಅಜ್ಞಾತನಾಮ ಗೋತ್ರಾಃ ಪ್ರೇತಾಃ ಸ್ವಾಗತಮುಪತಿಷ್ಠತು ॥** (ಎಡ) **ಶಿರಸಿ ಪುಷ್ಪಮುಪತಿಷ್ಠತು ।**

–ಎಂದು ಮೇಲಿನ ಮೂರು ಸಾಲಿನ ಆಸನಸ್ಥಾನದ ಮಂಡಲದಲ್ಲಿ ಹೂ ಇಟ್ಟು, (ಬಲ) ಮೂರು ತುಳಸಿಗೆ ಗಂಧ ಮುಟ್ಟಿಸಿ ಹಿಡಿದು '**ಪಾದಯೋರ್ಗಂಧಪುಷ್ಪಮುಪತಿಷ್ಠತು**'. ಎಂದು ಕೆಳಗಿನ ಸ್ಥಾನದ ಮೂರು ಮಂಡಲಗಳಲ್ಲಿಟ್ಟು (ಎಡ) ಅನಂತರ ತಿಲೋದಕ ಹಿಡಿದು,

**ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾಃ ಅಜ್ಞಾತನಾಮಗೋತ್ರಾಃ ಪ್ರೇತಾಃ ಇದಂ ವೋ ಪಾದ್ಯಮುಪತಿಷ್ಠತು ॥**

–ಎಂದು ಕೆಳಗಿನ ಸಾಲಿನ ಮೂರು ಮಂಡಲದಲ್ಲಿ ಕೊಟ್ಟು, ಪೂರ್ವಮುಖವಾಗಿ ಕುಳಿತು, (ಬಲ) ಆಚಮನ ಮಾಡಿ, ಪವಿತ್ರ ಬಿಚ್ಚಿ ಹಾಕಿ, ಪುನಃ ಆಚಮನ ಮಾಡಿ, ಮೂರು ಎಳೆಯ ಪವಿತ್ರ ಪಡೆದು ಧರಿಸಬೇಕು.

## ದಿಗ್ಬಂಧನಮ್

**ತ್ರಿಪಿಂಡೀಕರಣಶ್ರಾದ್ಧೇ ಪ್ರಾಚ್ಯಾದಿ ದಿಗ್ಬಂಧನಂ ಕರಿಷ್ಯೇ ॥** –ಎಂದು ಎದ್ದುನಿಂತು, ಎಡಗೈಯಲ್ಲಿ ಪ್ರತ್ಯೇಕವಾಗಿ, ದರ್ಭೆ, ಅಕ್ಕಿ ಹಿಡಿದು ಬಲಗೈಯಿಂದ ಮುಚ್ಚಿ,

**ನಮೋ ನಮಸ್ತೇ ಗೋವಿಂದ ಪುರಾಣಪುರುಷೋತ್ತಮ ।**
**ನಾರಾಯಣಬಲಿಶ್ರಾದ್ಧಂ ರಕ್ಷ ತ್ವಂ ಸರ್ವತೋ ದಿಶಃ ॥**

–ಎಂದು ಪ್ರಾರ್ಥಿಸಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಹಾಗೂ ಮೇಲೆ ಮತ್ತು ಕೆಳಗೆ –ಹೀಗೆ ಆರು ಸ್ಥಾನಗಳಲ್ಲಿ ಪ್ರದಕ್ಷಿಣೆ ಮಾಡಿ ಅಕ್ಕಿ ಮತ್ತು ದರ್ಭೆ ಬಿಸಾಡಬೇಕು.

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಸ್ತು ದಕ್ಷಿಣೇ ।**
**ಪ್ರದ್ಯುಮ್ನಃ ಪಶ್ಚಿಮೇ ಪಾತು ವಾಸುದೇವಸ್ತಥೋತ್ತರೇ ।**
**ಊರ್ಧ್ವಂ ಗೋವರ್ಧನೋ ರಕ್ಷೇದಧಸ್ತಾಚ್ಚ ತ್ರಿವಿಕ್ರಮಃ ॥**

ಮೂರು ದರ್ಭೆಯನ್ನು ಹಿಡಿದು,

**ಸೋಮಸ್ಯ ನೀವಿರಸಿ ವಿಷ್ಣೋಃ ಶರ್ಮಾಸಿ ಶರ್ಮ ಯಜಮಾನಸ್ಯೇಂದ್ರಸ್ಯ ಯೋನಿರಸಿ ಸುಸಸ್ಯಾಃ ಕೃಷೀಸ್ಕೃಧಿ ॥**

ಎಡ ಸೊಂಟಕ್ಕೆ ಸಿಕ್ಕಿಸಿ ಉಳಿದ ದ್ರವ್ಯಗಳನ್ನು ಹರಿವಾಣದಲ್ಲಿ ಹಾಕಿ ಪೂರ್ವಕ್ಕೆ ಮುಖ ಮಾಡಿ ಕುಳಿತು ಪವಿತ್ರ ತೆಗೆದು ಆಚಮನ ಮಾಡಿ ಪುನಃ ಹಿಂದಿನ ಪವಿತ್ರ ಧರಿಸುವುದು.

## ಪ್ರೇತಾವಾಹನಮ್

ಪೂರ್ವಾಗ್ರವಾಗಿ ಮೂರು ದರ್ಭೆ ಹಿಡಿದು,

**ತ್ರಿಪಿಂಡೀಕರಣಶ್ರಾದ್ಧೇ ದಿವ್ಯಂತರಿಕ್ಷಭೂಮಿಷ್ಠಾನಾಂ ಸಾತ್ತ್ವಿಕರಾಜಸತಾಮಸಾನಾಂ ಅಜ್ಞಾತನಾಮಗೋತ್ರಾಣಾಂ ಪ್ರೇತಾನಾಂ ಆಸನಮುಪತಿಷ್ಠತು ॥**

– ಎಂದು ಮಧ್ಯ–ಪಶ್ಚಿಮ–ಪೂರ್ವಸ್ಥಾನಗಳಲ್ಲಿ ಒಂದೊಂದು ದರ್ಭೆಯನ್ನು ಕೂರ್ಚ ಸ್ಥಾನದಲ್ಲಿಟ್ಟು ಜಲಕೂರ್ಚದಿಂದ ಮೂರು ಕೂರ್ಚಸ್ಥಾನಗಳಲ್ಲಿ '**ಆಸನಾಂತೇ ಜಲ–ಮುಪತಿಷ್ಠತು ॥**' ಎಂದು ಮೂರು ಕೂರ್ಚದ ಮೇಲೆ ನೀರು ಕೊಟ್ಟು ಎಳ್ಳು ಹಿಡಿದು,

**ದಿವ್ಯಂತರಿಕ್ಷಭೂಮಿಷ್ಠಾನ್ ಸಾತ್ತ್ವಿಕರಾಜಸತಾಮಸಾನ್ ಅಜ್ಞಾತನಾಮಗೋತ್ರಾನ್ ಪ್ರೇತಾನ್ ಕೂರ್ಚಮುಖೇ ಆವಾಹನಮುಪತಿಷ್ಠತು ॥**

– ಎಂದು ಮಧ್ಯ–ಪಶ್ಚಿಮ–ಪೂರ್ವಸ್ಥಾನದ ಕೂರ್ಚದ ಮೇಲೆ ಹಾಕಬೇಕು.

## ಅರ್ಘ್ಯಮ್

ಮೂರು ಅರ್ಘ್ಯಪಾತ್ರವನ್ನು ಒಂದೊಂದು ಕೂರ್ಚದ ಎದುರಿಟ್ಟು ನೀರು ಹಾಕಿ ಒಂದು ಎಳೆಯ ಕೂರ್ಚದ ಗಂಟು ಕೆಳಗಿರುವಂತೆ ಮೂರು ಪಾತ್ರೆಗಳಲ್ಲಿಟ್ಟು ದೂರ್ವಾದಿ ದ್ರವ್ಯಗಳನ್ನು ಹಾಕಿ, ಅಷ್ಟಾಕ್ಷರದಿಂದ ಅಭಿಮಂತ್ರಣ ಮಾಡಿ (ಎಡ) ಎಳ್ಳು ಹಿಡಿದು, ಒಂದೊಂದು ಪಾತ್ರೆಯ ನೀರಿನಿಂದ ಆಯಾ ಕೂರ್ಚಸ್ಥಾನದಲ್ಲಿ ಅರ್ಘ್ಯ ಕೊಡಬೇಕು.

(ಬಲ) **ದಿವ್ಯಂತರಿಕ್ಷ ಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾ ಅಜ್ಞಾತನಾಮ ಗೋತ್ರಾಃ ಪ್ರೇತಾಃ ಇದಂ ವೋ ಅರ್ಘ್ಯಮುಪತಿಷ್ಠತು । ಇದಂ ವೋ ಅರ್ಘ್ಯಮುಪ- ತಿಷ್ಠತು । ಇದಂ ವೋ ಅರ್ಘ್ಯಮುಪತಿಷ್ಠತು ॥**

ಅನಂತರ ಒಂದೊಂದು ಉಪಚಾರವನ್ನು ಮೂರೂ ಸ್ಥಾನಗಳಲ್ಲಿ ಮಾಡಬೇಕು.

**ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾಃ ಅಜ್ಞಾತನಾಮಗೋತ್ರಾಃ ಪ್ರೇತಾಃ ಗಂಧಮುಪತಿಷ್ಠತು ।** (ಎಡ) **ತಿಲಮುಪತಿಷ್ಠತು । ಪುಷ್ಪಮುಪತಿಷ್ಠತು ॥**

ಅನಂತರ ಮೂರು ಸ್ಥಾನದ ಎದುರು ನೀರಿನಿಂದ ತ್ರಿಕೋನಾಕಾರದ ಮಂಡಲವನ್ನು ಮಾಡಿ ಹೂ ಇಟ್ಟು, '**ಉಪೇಂದ್ರಮೂರ್ತಯೇ ನಮಃ । ಪಾದಪದ್ಮಾಭ್ಯಾಂ ನಮಃ ॥**'

ಉದ್ಧರಣೆಯಲ್ಲಿ ನೀರು ಹಿಡಿದು, ಮೂರು ಸ್ಥಾನಗಳಲ್ಲಿ '**ಧೂಪಮುಪತಿಷ್ಠತು । ದೀಪಮುಪತಿಷ್ಠತು ॥**' ಎಂದು ಎರಡು ಬಾರಿ ನೀರನ್ನು ಹರಿವಾಣದಲ್ಲಿ ಬಿಟ್ಟು, '**ಅಂಜನಾರ್ಥೇ ಕ್ರಮುಕಮುಪತಿಷ್ಠತು । ವಸ್ತ್ರಮುಪತಿಷ್ಠತು । ಪವಿತ್ರಾರ್ಥೇ ಕುಶಮುಪತಿಷ್ಠತು । ಆಚಮನೀಯಾರ್ಥೇ ಜಲಪಾತ್ರಮುಪತಿಷ್ಠತು । ಹಸ್ತಪ್ರಕ್ಷಾಲನಾರ್ಥೇ ತಾಮ್ರಮಯ ಕುಂಭಮುಪತಿಷ್ಠತು । ಧೂಪದೀಪಾಂಜನಾಚ್ಛಾದನಾದಿ ಶುದ್ಧಜಲಸಮಸ್ತೋಪಚಾರಾಃ ತಿಲೋದಕೇನೈವಮುಪತಿಷ್ಠಂತು ॥**'

(ಬಲ) ಕೈಮುಗಿದು '**ಸಪ್ತವ್ಯಾಧಾ............ಭವತಾಂ ಮಮ ॥**'

## ಬ್ರಾಹ್ಮಣಭೋಜನವಿಧಿಃ

(ಬಲ) ಕೂರ್ಚಬ್ರಾಹ್ಮಣರಿಗೆ ಮೂರು ಬಾರಿ ತೀರ್ಥವನ್ನು ಕೊಟ್ಟು, ದೇವರ ಎದುರು ಹಾಗೂ ಬ್ರಾಹ್ಮಣಕೂರ್ಚದ ಎದುರು ಎಲೆ ಹಾಕಿ ಗೋಗ್ರಾಸಕ್ಕೂ ಎಲೆಹಾಕಿ ಹಾಗೂ ತನ್ನ ಎಡಭಾಗದಲ್ಲಿ ಪಿಂಡ ಮಾಡಲು ದಕ್ಷಿಣಾಗ್ರವಾಗಿ ಎಲೆ ಹಾಕಿ ಜಲಕೂರ್ಚದಿಂದ ನೀರು ಪ್ರೋಕ್ಷಣೆ ಮಾಡಿ ಒರಸಿ ಎಲೆಗಳಿಗೆ ಅಭಿಘಾರಮಾಡಿ, ಗೋಧಿಹಿಟ್ಟು, ಬತ್ತದ ಹಿಟ್ಟು, ತಿಲದ ಹಿಟ್ಟುಗಳಿಗೆ ಪ್ರತ್ಯೇಕವಾಗಿ ಪಂಚಾಮೃತದ್ರವ್ಯಗಳನ್ನು ಹಾಕಿ ಕಲಸಿ, ಜಲಕೂರ್ಚದಿಂದ ಪಾಕಪ್ರೋಕ್ಷಣೆ ಮಾಡಿ, ಮೂರು ಬಗೆಯ ಹವಿಸ್ಸನ್ನು ದೇವರ ಎಲೆಗೆ ಹಾಕಿ ಎರಡು ಬಾರಿ ಅಭಿಘಾರ ಮಾಡಿ ಸಮರ್ಪಿಸಿ, ಕೈಮುಗಿದು, ಅನಂತರ ನಿರ್ಮಾಲ್ಯತೀರ್ಥ, ತುಳಸಿಯನ್ನು ಹವಿಸ್ಸಿಗೆ ಹಾಕಿ ಮಧ್ಯ–ಪಶ್ಚಿಮ–ಪೂರ್ವದ

ಕೂರ್ಚಸ್ಥಾನಗಳಲ್ಲಿ ಕ್ರಮವಾಗಿ, ಗೋಧಿ, ಭತ್ತ, ತಿಲಮಿಶ್ರಿತಾನ್ನವನ್ನು ಪ್ರತ್ಯೇಕವಾಗಿ ಹಾಕಿ, ಗೋಗ್ರಾಸದ ಎಲೆಗೂ ಹಾಕಿ, ಎರಡು ಬಾರಿ ಅಭಿಘಾರ ಮಾಡಿ, ಹಾಗೆಯೇ ಮೂರು ಆಮಾನ್ನ ಗ್ರಂಥಿಯನ್ನು ಮೂರು ಸ್ಥಾನದಲ್ಲಿಟ್ಟು (ಎಡ)

**ಪೃಥಿವೀ ತೇ ಪಾತ್ರಮ್ । ದ್ಯೌರಪಿಧಾನಮ್ । ಬ್ರಾಹ್ಮಣಸ್ಯ ಮುಖೇಽಮೃತೇ–ಽಮೃತಂ ಜುಹೋಮಿ ॥ ಬ್ರಾಹ್ಮಣಾನಾಂ ತ್ವಾ ವಿದ್ಯಾವತಾಂ ಪ್ರಾಣಾಪಾನಯೋರ್ಜು–ಹೋಮಿ ತಿಲಮಸಿ ಮಾಮೈಷಾಂ ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕ ರಾಜಸ ತಾಮಸಾಃ ಅಜ್ಞಾತನಾಮಗೋತ್ರಜಾಃ ಪ್ರೇತಾಃ ಕ್ಷೇಷ್ಠಾಃ । ಅಮುತ್ರಾಮುಷ್ಮಿನ್ ಲೋಕೇ ॥**

ಜಲಕೂರ್ಚದಿಂದ ನೀರು ಹಿಡಿದು, '**ಭೂರ್ಭುವಃಸ್ವಃ । ಸತ್ಯಂ ತ್ವರ್ತೇನ ಪರಿಷಿಂಚಾಮಿ ॥**' ಎಂದು ಮೂರು ಸ್ಥಾನದಲ್ಲಿ ಅಪ್ರದಕ್ಷಿಣೆಯಾಗಿ ಸುತ್ತು ಕಟ್ಟಿ,

**ಓಮ್ ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಮ್ । ಸಮೂಢಮಸ್ಯ ಪಾಂಸುರೇ ॥**

**ವಿಷ್ಣೋ ಕವ್ಯಂ ರಕ್ಷಸ್ವ । ಏತದ್ವೋಽನ್ನಂ ಸಪರಿಕರಂ ಚ । ದಿವ್ಯಯಂತರಿಕ್ಷ.... .......ಪ್ರೇತಾಃ । ಇದಮನ್ನಂ ಕವ್ಯಮ್ । ಅಯಂ ಬ್ರಾಹ್ಮಣಃ ಆಹವನೀಯಾರ್ಥೇ ದತ್ತಂ ದಾಸ್ಯಮಾನಂ ಚ ಆತೃಪ್ತೇಃ ತತ್ಸರ್ವಮ್ ಇಯಂ ಭೂಮಿರ್ಗಯಾ ಭೋಕ್ತಾ ದೇವೋ ಗದಾಧರ ಅನ್ನಮಮೃತಂ ರಜತಮಯಪಾತ್ರಸ್ಥಿತಮನ್ನಮ್ ಅಕ್ಷಯ್ಯ ವಟಚ್ಛಾಯೇಯಮ್ ॥ ದಿವ್ಯಂತರಿಕ್ಷಭೂಮಿಷ್ಠೇಭ್ಯಃ ಸಾತ್ತ್ವಿಕರಾಜಸತಾಮಸೇಭ್ಯಃ ಇದಂ ವೋಽನ್ನಮ್ ॥**

–ಎಂದು ಅನ್ನವನ್ನು ಮುಟ್ಟಿ (ಅಸ್ತು ಅನ್ನಂ) ಎಳ್ಳು ತುಲಸಿ ಹಿಡಿದು,

**ಇದಮನ್ನಂ ಸೋಪಸ್ಕರಮ್ ಅಮೃತರೂಪಮ್ ಅಸ್ಯ ಬ್ರಾಹ್ಮಣಸ್ಯ ಆತೃಪ್ತೇಃ ಪರಿವಿಷ್ಟಂ ಪರಿವೇಕ್ಷ್ಯಮಾಣಂ ಚ ಅಕ್ಷಯ್ಯ ತೃಪ್ತ್ಯರ್ಥಂ ಬ್ರಾಹ್ಮಣಸ್ಯ ಇದಂ ಸೋಪಸ್ಕರಾನ್ನಮುಪತಿಷ್ಠತು ॥**

–ಎಂದು ಮೂರು ಸ್ಥಾನಗಳ ಕೂರ್ಚಬ್ರಾಹ್ಮಣ ಎಲೆಯ ಅನ್ನದ ಮೇಲೆ ಬಿಡಬೇಕು. (ಬಲ) ತುಳಸಿ ಹಿಡಿದು, ಪೂರ್ವಮುಖವಾಗಿ,

**ಸುರಭಿರ್ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದಾಶ್ರಿತಾ ।**
**ಗೋಗ್ರಾಸಸ್ತು ಮಯಾ ದತ್ತಃ ಸುರಭಿಃ ಪ್ರತಿಗೃಹ್ಯತಾಮ್ ॥**

ಗೋಗ್ರಾಸಕ್ಕೆ ದತ್ತ ಬಿಟ್ಟು,

**ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।**
**ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥**

**ದಿವ್ಯಂತರಿಕ್ಷಭೂಮಿಷ್ಠಾನಾಂ ಸಾತ್ತ್ವಿಕ ರಾಜಸ ತಾಮಸಾನಾಂ ಅಜ್ಞಾತನಾಮ ಗೋತ್ರಜಾನಾಂ ಪ್ರೇತಾನಾಮುದ್ದಿಶ್ಯ ತ್ರಿಪಿಂಡೀಕರಣಶ್ರಾದ್ಧಾಂಗಕೂರ್ಚಮುಖ ಬ್ರಾಹ್ಮಣಾರಾಧನಾಖ್ಯೇನ ಕರ್ಮಣಾ ಪ್ರೇತಾಂತರ್ಗತ ಪ್ರಾಣಸ್ಥಪ್ರಾಜ್ಞರೂಪಿಪರಮಾತ್ಮಾ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥**

(ಬಲ) ಒಂದು ಸೌಟು ತೀರ್ಥ (ನೀರು) ಹಿಡಿದು, '**ಆಪೋಶನಮುಪತಿಷ್ಠತು ॥**' ಎಂದು ಕೂರ್ಚದ ಮೇಲೆ ನೀರು ಬಿಟ್ಟು, '**ಕೃಷ್ಣಾರ್ಪಣಮಸ್ತು ॥**'

**ಅಪೇಕ್ಷಿತಂ ಯಾಚಿತವ್ಯಂ..........ಮಾನಸೈಃ ॥ ದಿವ್ಯಂತರಿಕ್ಷ...... ಪ್ರಾಣಸ್ಥಪ್ರಾಜ್ಞ ಶನೈಃಶನೈರ್ಭುಜ್ಯತಾಮ್ ॥**

ಮೂರು ಬಗೆಯ ಹಿಟ್ಟಿನಿಂದ ಮೂರು ಬಗೆಯ ಪಿಂಡಗಳನ್ನು ಮಾಡಬೇಕು. ವಾಯಸಾದಿಗಳಿಗೆ ಉಳಿಸಬೇಕಾಗಿಲ್ಲ. (ಬಲ) **ಉತ್ತರಾಪೋಶನ** ಕೊಟ್ಟು (ಎಡ) ಜಲಕೂರ್ಚದಿಂದ **ಹಸ್ತಪ್ರಕ್ಷಾಳನ**ವನ್ನು ಕೊಡುವುದು.

## ಪಿಂಡಪ್ರದಾನಮ್

(ಬಲ) '**ಯುಷ್ಮದನುಜ್ಞಯಾ ಪಿಂಡದಾನಮಹಂ ಕರಿಷ್ಯೇ ॥**' ಎಂದು ಸಂಕಲ್ಪ ಮಾಡಿ (ಎಡ) ಮೂರು ಕೂರ್ಚದ ಎದುರು ಜೇಡಿಯಿಂದ ಮೂರು ತ್ರಿಕೋನಾಕಾರದ ಮಂಡಲಗಳನ್ನು ದಕ್ಷಿಣಾಗ್ರವಾಗಿ ಅಪ್ರದಕ್ಷಿಣಾಕಾರದಲ್ಲಿ ಬರೆದು, ಔದುಂಬರಸಮಿಧೆಯಿಂದ

**ದಿವ್ಯಂತರಿಕ್ಷಭೂಮಿಷ್ಠಾನಾಂ ಸಾತ್ತ್ವಿಕ ರಾಜಸ ತಾಮಸಾನಾಂ ಅಜ್ಞಾತನಾಮ ಗೋತ್ರಜಾನಾಂ ಪ್ರೇತಾನಾಂ ಪಿಂಡಸ್ಥಾನೇ ಉಲ್ಲೇಖನಮುಪತಿಷ್ಠತು ॥**

–ಎಂದು ಉತ್ತರದಿಂದ ದಕ್ಷಿಣಕ್ಕೆ ರೇಖೆ ಎಳೆದು, ಆ ಸಮಿತ್ತನ್ನು ಮಂಡಲದಲ್ಲಿಟ್ಟು ಜಲಕೂರ್ಚದಿಂದ **ಪ್ರೋಕ್ಷಣೆ** ಮಾಡಿ, ಸಮಿಧೆಯನ್ನು ತುಂಡು ಮಾಡಿ, ಹಿಂದೆ ಬಿಸಾಡಿ ಕೈತೊಳೆದು, ಪುನಃ ಎರಡೆರಡು ದರ್ಭೆಯಿಂದಲೂ ಹಿಂದಿನ ಕ್ರಮದಂತೆ ಮೂರು ಸ್ಥಾನಗಳಲ್ಲಿ '**ಉಲ್ಲೇಖನಮುಪತಿಷ್ಠತು ॥**' ಎಂದು ಉಲ್ಲೇಖನ ಮಾಡಿ ಹಿಂದೆ ಬಿಸಾಡಿ ಕೈತೊಳೆದು ಎಳ್ಳು ಹಿಡಿದು '**ತ್ರಿಪಿಂಡೀಕರಣಶ್ರಾದ್ಧೇ ಮಂಡಲೋಪರಿ ತಿಲಮುಪತಿಷ್ಠತು ॥**' ಎಂದು ಮೂರು ಮಂಡಲದಲ್ಲಿ ಎಳ್ಳು ಹರಡಿ ನಾಲ್ಕು ದರ್ಭೆ ದಕ್ಷಿಣಾಗ್ರವಾಗಿ ಹಿಡಿದು, '**ಮಂಡಲಮಧ್ಯೇ ಬರ್ಹಿರುಪತಿಷ್ಠತು ॥**' ಎಂದು ಮೂರು ಮಂಡಲಮಧ್ಯದಲ್ಲಿಟ್ಟು ಅಂಜಲಿಮುದ್ರೆಯಿಂದ,

ಮಧ್ಯ– **ದಿವಿಷ್ಠೇಭ್ಯಃ ಇಮಾನಿ ವಃ ಸ್ಥಾನಮುಪತಿಷ್ಠತು ।**
ಪಶ್ಚಿಮ– **ಅಂತರಿಕ್ಷಸ್ತೇಭ್ಯಃ ಇಮಾನಿ ವಃ ಸ್ಥಾನಮುಪತಿಷ್ಠತು ।**
ಪೂರ್ವ– **ಭೂಮಿಷ್ಠೇಭ್ಯಃ ಇಮಾನಿ ವಃ ಸ್ಥಾನಮುಪತಿಷ್ಠತು ॥**

ಹೀಗೆ ಸ್ಥಾನಚಿಂತನೆ ಮಾಡಿ ತಿಲೋದಕ ಹಿಡಿದು, (ಮಧ್ಯಪಿಂಡಸ್ಥಾನದಲ್ಲಿ) '**ಅಪಹತಾ**

**ಅಸುರಾ ರಕ್ಷಾಗ್ಂಸಿ ವೇದಿಷದಃ ॥ ಅಸ್ಮತ್ಕುಲೇ ಮೃತಾ ಯೇ ಚ ಗತಿರ್ಯೇಷಾಂ ನ ವಿದ್ಯತೇ । ಆವಾಹಯಿಷ್ಯೇ ತಾನ್ ಸರ್ವಾನ್ ದರ್ಭಪೃಷ್ಠೈಸ್ತಿಲೋದಕೈಃ ॥**

–ಎಂದು ಬರ್ಹಿಸ್ಸಿನ ಮೇಲೆ ತಿಲೋದಕ ಕೊಟ್ಟು ಪುನಃ ಎಳ್ಳು ನೀರು ಹಿಡಿದು,

**ಮಾತಾಮಹಕುಲೇ ಯೇ ಚ ಗತಿರ್ಯೇಷಾಂ ನ ವಿದ್ಯತೇ । ಆವಾಹಯಿಷ್ಯೇ ತಾನ್ ಸರ್ವಾನ್ ದರ್ಭಪೃಷ್ಠೈಸ್ತಿಲೋದಕೈಃ ॥**

–ಎಂದು ತಿಲೋದಕ ಕೊಟ್ಟು ಪುನಃ ಎಳ್ಳು ನೀರು,

**ಬಂಧುವರ್ಗಕುಲೇ ಯೇ ಚ ಗತಿರ್ಯೇಷಾಂ ನ ವಿದ್ಯತೇ । ಆವಾಹಯಿಷ್ಯೇ ತಾನ್ ಸರ್ವಾನ್ ದರ್ಭಪೃಷ್ಠೈಸ್ತಿಲೋದಕೈಃ ॥**

–ಎಂದು ತಿಲೋದಕ ಕೊಟ್ಟು ಒಂದು ತಟ್ಟೆಯಲ್ಲಿ ತುಪ್ಪ, ಜೇನುತುಪ್ಪ, ಮೊಸರು ಮೂರನ್ನು ಒಟ್ಟು ಮಾಡಿ ತ್ರಿಮಧುರ ಮಾಡಿಟ್ಟುಕೊಂಡು, ಗೋಧಿಹಿಟ್ಟಿನ ಪಿಂಡ ಹಿಡಿದು '**ಮಧುವಾತಾ.....**' ಮಂತ್ರದಿಂದ ಸ್ವಲ್ಪ ತ್ರಿಮಧುರವನ್ನು ಪಿಂಡಕ್ಕೆ ಹಚ್ಚಿ,

**ಪಿತೃವಂಶೇ ಮೃತಾ ಯೇ ಚ ಮಾತೃವಂಶೇ ತಥೈವ ಚ ।**
**ಗುರುಶ್ವಶುರಬಂಧೂನಾಂ ಯೇ ಚಾನ್ಯೇ ಬಾಂಧವಾಸ್ತಥಾ ॥**

**ಯೇ ಮೇ ಕುಲೇ ಲುಪ್ತ ಪಿಂಡಾಃ ಪುತ್ರದಾರವಿವರ್ಜಿತಾಃ ।**
**ಕ್ರಿಯಾಲೋಪಹತಾಶ್ಚೈವ ಜಾತ್ಯಂಧಾಃ ಪಂಗವಸ್ತಥಾ ॥**

**ವಿರೂಪಾ ಆಮಗರ್ಭಾಶ್ಚ ಜ್ಞಾತಾಜ್ಞಾತಾಃ ಕುಲೇ ಮಮ ।**
**ಧರ್ಮಪಿಂಡಂ ಪ್ರದಾಸ್ಯಾಮಿ ಹ್ಯಕ್ಷಯ್ಯಮುಪತಿಷ್ಠತು ॥**

**ಇಮಂ ಯವಮಯಂ ಪಿಂಡಂ ಮಧುರತ್ರಯಸಂಯುತಮ್ ।**
**ದದಾಮಿ ತಸ್ಮೈ ಪ್ರೇತಾಯ ಯಃ ಪಿಂಡಾಂ ಕುರುತೇ ಮಮ ॥**

**ಯೇ ಕೇಚಿತ್ಪ್ರೇತರೂಪೇಣ ವರ್ತಂತೇ ಪಿತರೋ ಮಮ ।**
**ಯವಪಿಂಡಪ್ರದಾನೇನ ತೃಪ್ತಿಂ ಗಚ್ಛಂತು ಶಾಶ್ವತೀಮ್ ॥**

**ಯೇ ಕೇಚಿದ್ದಿವಿ ತಿಷ್ಠಂತಿ ಪ್ರೇತಾ ಸಾತ್ವಿಕ ರೂಪಿಣಃ ।**
**ಯವಪಿಂಡಪ್ರದಾನೇನ ತೇ ತೃಪ್ಯಂತು ಕ್ಷುಧಾರ್ದಿತಾಃ ॥**

**ದಿವಿಷ್ಠಾ ಸಾತ್ತ್ವಿಕಾ ಅಜ್ಞಾತನಾಮಗೋತ್ರಾಃ ಪ್ರೇತಾಃ ಏಷ ವೋ ಯವಮಯ ಪಿಂಡ ಉಪತಿಷ್ಠತು ॥**

–ಎಂದು ದರ್ಭೆಯ ಮೇಲೆ ಪಿಂಡ ಇಟ್ಟು ಎಳ್ಳುನೀರು ಹಿಡಿದು ಕೆಳಗಿನ ಮೂರು ಮಂತ್ರಗಳಿಂದ ಪಿಂಡದ ಮೇಲೆ ತಿಲೋದಕ ಕೊಡಬೇಕು–

**ಅಸ್ಮತ್ಕುಲೇ ಮೃತಾ ಯೇ ಚ ಗತಿರ್ಯೇಷಾಂ ನ ವಿದ್ಯತೇ ।**
**ತೇಷಾಮುದ್ಧರಣಾರ್ಥಾಯ ಪಿಂಡೋಪರಿ ತಿಲೋದಕಮ್ ॥**

**ಮಾತಾಮಹಕುಲೇ ಯೇ ಚ ಗತಿರ್ಯೇಷಾಂ ನ ವಿದ್ಯತೇ ।**
**ತೇಷಾಮುದ್ಧರಣಾರ್ಥಾಯ ಪಿಂಡೋಪರಿ ತಿಲೋದಕಮ್ ॥**

**ಬಂಧುವರ್ಗಕುಲೇ ಯೇ ಚ ಗತಿರ್ಯೇಷಾಂ ನ ವಿದ್ಯತೇ ।**
**ತೇಷಾಮುದ್ಧರಣಾರ್ಥಾಯ ಪಿಂಡೋಪರಿ ತಿಲೋದಕಮ್ ॥**

–ಎಂದು ತಿಲೋದಕ ಕೊಟ್ಟು ಕೆಳಗಿನ ಮೂರು ಮಂತ್ರಗಳನ್ನು ಒಟ್ಟಿಗೆ ಪಠಿಸಿ ಒಂದು ಬಾರಿ ತಿಲೋದಕ ಕೊಡಬೇಕು.

**ಪಿತೃವಂಶೇ ಮೃತಾ ಯೇ ಚ ಮಾತೃವಂಶೇ ತಥೈವ ಚ ।**
**ಗುರುಶ್ವಶುರಬಂಧೂನಾಂ ಯೇ ಚಾನ್ಯೇ ಬಾಂಧವಾಸ್ತಥಾ ॥**

**ಯೇ ಮೇ ಕುಲೇ ಲುಪ್ತ ಪಿಂಡಾಃ ಪುತ್ರದಾರವಿವರ್ಜಿತಾಃ ।**
**ಕ್ರಿಯಾಲೋಪಹತಾಶ್ಚೈವ ಜಾತ್ಯಂಧಾಃ ಪಂಗವಸ್ತಥಾ ॥**

**ವಿರೂಪಾ ಆಮಗರ್ಭಾಶ್ಚ ಜ್ಞಾತಾಜ್ಞಾತಾಃ ಕುಲೇ ಮಮ ।**
**ಧರ್ಮಪಿಂಡಂ ಪ್ರದಾಸ್ಯಾಮಿ ಹ್ಯಕ್ಷಯ್ಯಮುಪತಿಷ್ಠತು ॥**

**ತೇಷಾಮುದ್ಧರಣಾರ್ಥಾಯ ಪಿಂಡೋಪರಿ ತಿಲೋದಕಮ್ ॥**

–ಎಂದು ತಿಲೋದಕ ಕೊಟ್ಟು, ಪುನಃ ಪಶ್ಚಿಮಭಾಗದ ಪಿಂಡಸ್ಥಾನದಲ್ಲಿ, '**ಅಪಹತಾ ಅಸುರಾ ರಕ್ಷಾಗ್ಂಸಿ ವೇದಿಷದಃ ॥**' ಎಂದು ಎಳ್ಳು ನೀರು ಹಿಡಿದು, ಮೂರು ಬಾರಿ ಆವಾಹನೆಯೊಂದಿಗೆ ದರ್ಭೆಯ ಮೇಲೆ ಹಿಂದಿನ ಕ್ರಮದಂತೆ ಪ್ರತ್ಯೇಕವಾಗಿ ಮೂರು ಬಾರಿ ತಿಲೋದಕ ಕೊಡಬೇಕು.

**ಅಸ್ಮತ್ಕುಲೇ ಮೃತಾ ಯೇ ಚ.......ತಿಲೋದಕೈಃ ॥**

'**ಮಧುವಾತಾ....**' ಮಂತ್ರದಿಂದ ಬತ್ತದ ಹಿಟ್ಟಿನ ಪಿಂಡಕ್ಕೆ ತ್ರಿಮಧುರ ಹಚ್ಚಿ ಪಿಂಡವನ್ನು ಹಿಡಿದು, '**ಪಿತೃವಂಶೇ ಮೃತಾ.......ಅಕ್ಷಯ್ಯಮುಪತಿಷ್ಠತು ॥**' ಎಂದು ಮೂರು ಮಂತ್ರಗಳನ್ನು ಪಠಿಸಿ,

**ಇಮಂ ವ್ರೀಹಿಮಯಂ ಪಿಂಡಂ ಮಧುರತ್ರಯಸಂಯುತಮ್ ।**
**ತನ್ಮುಕ್ತಯೇ ಪ್ರದಾಸ್ಯಾಮಿ ಪೀಡಾ ಯಃ ಕುರುತೇ ಮಮ ॥**

**ಯೇ ಕೇಚಿದ್ವಾಯುರೂಪೇಣ ವರ್ತಂತೇ ಪಿತರೋ ಮಮ ।**
**ತಂಡುಲೈಃ ಪಿಂಡದಾನೇನ ವ್ರಜಂತು ಗತಿಮುತ್ತಮಾಮ್ ॥**

**ಅಂತರಿಕ್ಷೇ ಚ ಯೇ ಕೇಚಿದ್ರಾಜಸಾ ವಾಯುರೂಪಿಣಃ ।**
**ವ್ರೀಹಿಪಿಂಡಪ್ರದಾನೇನ ತೇ ತೃಪ್ಯಂತು ಕ್ಷುಧಾರ್ದಿತಾಃ ॥**

**ಅಂತರಿಕ್ಷಸ್ಥಾ ರಾಜಸಾ ಅಜ್ಞಾತ ನಾಮಗೋತ್ರಾಃ ಪ್ರೇತಾಃ ಏಷ ವೋ ವ್ರೀಹಿ-ಮಯಃ ಪಿಂಡ ಉಪತಿಷ್ಠತು ॥** – ಎಂದು ಪಿಂಡವನ್ನು ಇಟ್ಟು, ಎಳ್ಳು ನೀರು ಹಿಡಿದು,

**ಅಸ್ಮತ್ಕುಲೇ ಮೃತಾ ................ ತಿಲೋದಕಮ್ ॥** –ಎಂದು ಪಿಂಡದ ಮೇಲೆ ಮೂರು ಬಾರಿ ಪ್ರತ್ಯೇಕವಾಗಿ ತಿಲೋದಕ ಕೊಡಬೇಕು. ಅನಂತರ

**'ಪಿತೃವಂಶೇ ಮೃತಾ.......ಅಕ್ಷಯ್ಯಮುಪತಿಷ್ಠತು ॥ ತೇಷಾಮುದ್ಧರಣಾರ್ಥಾಯ ಪಿಂಡೋಪರಿ ತಿಲೋದಕಮ್'** –ಎಂದು ಮೂರು ಮಂತ್ರ ಹೇಳಿ ಒಂದು ಬಾರಿ ತಿಲೋದಕ ಕೊಡಬೇಕು.

ಪುನಃ ಪೂರ್ವಭಾಗದ ಪಿಂಡಸ್ಥಾನದಲ್ಲಿ, **'ಅಪಹತಾ ಅಸುರಾ ರಕ್ಷಾಗ್ಂಸಿ ವೇದಿಷದಃ ॥'** –ಎಂದು ಎಳ್ಳು ನೀರು ಹಿಡಿದು ಮೂರು ಬಾರಿ ದರ್ಭೆಯ ಮೇಲೆ ಪ್ರತ್ಯೇಕವಾಗಿ ಆವಾಹನೆಯೊಂದಿಗೆ ತಿಲೋದಕ ಕೊಡಬೇಕು.

**'ಅಸ್ಮತ್ಕುಲೇ ಮೃತಾ ಯೇ ಚ.......ತಿಲೋದಕೈಃ ॥'**

**'ಮಧುವಾತಾ ......'** ಮಂತ್ರದಿಂದ ಎಳ್ಳುಹಿಟ್ಟಿನ ಪಿಂಡಕ್ಕೆ ತ್ರಿಮಧುರ ಹಚ್ಚಿ ಪಿಂಡವನ್ನು ಹಿಡಿದು, **'ಪಿತೃವಂಶೇ ಮೃತಾ.......ಅಕ್ಷಯ್ಯಮುಪತಿಷ್ಠತು ॥'** ಎಂದು ಮೂರು ಮಂತ್ರಗಳನ್ನು ಪಠಿಸಿ,

**ಇಮಂ ತಿಲಮಯಂ ಪಿಂಡಂ ಸರ್ಪಿಷಾ ಮಧುನಾ ಯುತಮ್ ।**
**ತೇಭ್ಯೋ ದದಾಮಿ ಯೇ ಪೀಡಾಂ ಮತ್ಕುಲೇ ಕುರ್ವತೇ ಸದಾ ॥**

**ಯೇ ಕೇಚಿತ್ತಾಮಸಾಃ ಪ್ರೇತಾ ಭೂಮೌ ತಿಷ್ಠಂತಿ ಸರ್ವದಾ ।**
**ತಿಲಪಿಂಡಪ್ರದಾನೇನ ಗತಿಂ ಗಚ್ಛಂತು ತೇ ಧ್ರುವಾಮ್ ॥**

**ತಮೋರೂಪಾಶ್ಚ ಯೇ ಕೇಚಿತ್ ವರ್ತಂತೇ ಪಿತರೋ ಮಮ ।**
**ಪಿಣ್ಯಾಕಪಿಂಡದಾನೇನ ತೇ ತೃಪ್ಯಂತು ಕ್ಷುಧಾರ್ದಿತಾಃ ॥**

**ಭೂಮಿಷ್ಠಾಸ್ತಾಮಸಾ ಅಜ್ಞಾತ ನಾಮಗೋತ್ರಾಃ ಪ್ರೇತಾಃ ಏಷ ವಃ ತಿಲಮಯಃ ಪಿಂಡ ಉಪತಿಷ್ಠತು ॥** –ಎಂದು ಪಿಂಡವನ್ನು ಇಟ್ಟು ಎಳ್ಳು ನೀರು ಹಿಡಿದು,

**ಅಸ್ಮತ್ಕುಲೇ ಮೃತಾ............. ತಿಲೋದಕಮ್ ॥** –ಎಂದು ಪಿಂಡದ ಮೇಲೆ ಮೂರು ಮಂತ್ರಗಳಿಂದ ಪ್ರತ್ಯೇಕವಾಗಿ ತಿಲೋದಕ ಕೊಡಬೇಕು. ಅನಂತರ,

**'ಪಿತೃವಂಶೇ ಮೃತಾ....... ಅಕ್ಷಯ್ಯಮುಪತಿಷ್ಠತು ॥ ತೇಷಾಮುದ್ಧರಣಾರ್ಥಾಯ ಪಿಂಡೋಪರಿ ತಿಲೋದಕಮ್'** –ಎಂದು ಮೂರು ಮಂತ್ರ ಹೇಳಿ ಒಂದು ಬಾರಿ

ತಿಲೋದಕ ಕೊಟ್ಟು, ಪೂರ್ವಕ್ಕೆ ಮುಖ ಮಾಡಿ ಕುಳಿತು, ಆಚಮನ ಮಾಡಿ, ಪವಿತ್ರ ಬಿಚ್ಚಿ, ಆಚಮನ ಮಾಡಿ, ಪುನಃ ಮೂರು ಎಳೆಯ ಪವಿತ್ರ ಧರಿಸಿ, ದಕ್ಷಿಣಕ್ಕೆ ಮುಖಮಾಡಿ ಕುಳಿತು ಎಳ್ಳು ನೀರು ಹಿಡಿದು ಮೂರು ಸ್ಥಾನಗಳಲ್ಲಿ–

**ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾಃ ಅಜ್ಞಾತನಾಮಗೋತ್ರಾಃ ಪ್ರೇತಾಃ ಶುಂಧಂತಾಮ್ ॥**

ತಿಲೋದಕ ಕೊಟ್ಟು ತಿಲಹೋಮದ ಪ್ರಸಾದವನ್ನು ಸ್ವಲ್ಪ ಪಾಪೆ ಇಲ್ಲವೇ ಪ್ರೇತಕೂರ್ಚದ ಮೇಲೆ ಹಾಕಿ ಹೋಮದ ಹುತಭಸ್ಮದಿಂದ ಮೂರು ಸ್ಥಾನಗಳಲ್ಲಿ–

**ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾಃ ಅಜ್ಞಾತನಾಮಗೋತ್ರಾಃ ಪ್ರೇತಾಃ ಅಂಜಂತಾಮ್ ॥**

ಪುನಃ ಎಳ್ಳು ನೀರು ಹಿಡಿದು, ಮೂರು ಸ್ಥಾನಗಳಲ್ಲಿ–

**ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾಃ ಅಜ್ಞಾತನಾಮಗೋತ್ರಾಃ ಪ್ರೇತಾಃ ಶುಂಧಂತಾಮ್ ॥**

ಎಳ್ಳನ್ನು ತಿಕ್ಕಿ ನೀರು ಹಾಕಿ ಮೂರು ಸ್ಥಾನಗಳಲ್ಲಿ–

**ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾಃ ಅಜ್ಞಾತನಾಮಗೋತ್ರಾಃ ಪ್ರೇತಾಃ ಅಭ್ಯಂಜಂತಾಮ್ ॥**

ಪುನಃ ಎಳ್ಳು ನೀರು ಹಿಡಿದು,

**ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾಃ ಅಜ್ಞಾತನಾಮಗೋತ್ರಾಃ ಪ್ರೇತಾಃ ಶುಂಧಂತಾಮ್ ॥** –ಎಂದು ಮೂರು ಸ್ಥಾನಗಳಲ್ಲಿ ಕೊಟ್ಟು,

**ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ತ್ವಿಕರಾಜಸತಾಮಸಾಃ ಅಜ್ಞಾತನಾಮಗೋತ್ರಾಃ ಪ್ರೇತಾಃ ಏತದ್ವಃ ಪ್ರೇತಾಃ ವಾಸಾಂಸಿ ॥** –ಎಂದು ಮೂರು ಪಿಂಡಗಳಿಗೆ ಬಟ್ಟೆಯ ನೂಲು ಹಾಕಿ ಹೋಮದ ಕಲಶತೀರ್ಥ ಎಳ್ಳು ಗರಿಕೆ ದರ್ಭೆ ಹೂ ತುಲಸಿ ಹಿಡಿದು, ಸ್ವಲ್ಪ ಸ್ವಲ್ಪ ನೀರನ್ನು ಮೂರು ಪಿಂಡಗಳ ಮೇಲೆ ಬಿಡುತ್ತಾ,

**'ಓಂ ನಮೋ ವಃ ಪಿತರ.........ಸಚೇಮಹಿ ॥'** ಎಂದು ಉಪಸ್ಥಾನ ಮಾಡಿ, ಅನಂತರ (ಬಲ) ತುಲಸಿ ಹಿಡಿದು **'ಓಂ ಸಹಸ್ರಶೀರ್ಷಾ...... ದೇವಾಃ ॥'** ಪುರುಷಸೂಕ್ತ ಪಠಿಸಿ ಪಿಂಡದ ಮೇಲಿಟ್ಟು, **'ಧ್ಯಾಯಾಮಿ ....'** ಎಂದು ಷೋಡಶೋಪಚಾರಪೂಜೆ ಮಾಡಿ,

(ಮಧ್ಯದ ಅರ್ಘ್ಯಪಾತ್ರೆಯಲ್ಲಿ) ಮೂರು ಮಾತುಲಂಗ (ಮಾದ್ಯಫಲ) ಇಟ್ಟು (ಎಡ) ಎಳ್ಳು ಹಾಗೂ ಅರ್ಘ್ಯಪಾತ್ರದ ನೀರು ಹಿಡಿದು,

**ದಿವಿಷ್ಠಾಃ ಸಾತ್ತ್ವಿಕಾಃ ಅಜ್ಞಾತಗೋತ್ರಾಃ ಪ್ರೇತಾಃ ಯುಷ್ಮಭ್ಯಃ ಇದಮರ್ಘ್ಯ–ಮುಪತಿಷ್ಠತು ॥** ಎಂದು ಪಿಂಡದ ಮೇಲೆ ಅರ್ಘ್ಯ ಕೊಡಬೇಕು.

(ಪಶ್ಚಿಮದ ಅರ್ಘ್ಯಪಾತ್ರೆಯಲ್ಲಿ) ಮೂರು ಜಂಬೀರಫಲ (ಲಿಂಬೆ) ಇಟ್ಟು ಎಳ್ಳು ಹಾಗೂ ಅರ್ಘ್ಯಪಾತ್ರದ ನೀರು ಹಿಡಿದು,

**ಅಂತರಿಕ್ಷಸ್ಥಾಃ ರಾಜಸಾ ಅಜ್ಞಾತಗೋತ್ರಾಃ ಪ್ರೇತಾಃ ಯುಷ್ಮಭ್ಯಃ ಇದಮರ್ಘ್ಯ–ಮುಪತಿಷ್ಠತು ॥** –ಎಂದು ಪಿಂಡದ ಮೇಲೆ ಅರ್ಘ್ಯ ಕೊಡಬೇಕು.

(ಪೂರ್ವದ ಪಾತ್ರೆಯಲ್ಲಿ) ಮೂರು ಖರ್ಜೂರ ಫಲವಿಟ್ಟು ಎಳ್ಳು ಹಾಗೂ ಅರ್ಘ್ಯ ಪಾತ್ರದ ನೀರು ಹಿಡಿದು,

**ಭೂಮಿಷ್ಠಾಃ ತಾಮಸಾ ಅಜ್ಞಾತಗೋತ್ರಾಃ ಪ್ರೇತಾಃ ಯುಷ್ಮಭ್ಯಃ ಇದಮರ್ಘ್ಯ–ಮುಪತಿಷ್ಠತು ॥** –ಎಂದು ಪಿಂಡದ ಮೇಲೆ ಅರ್ಘ್ಯ ಕೊಟ್ಟು,

(ಬಲ) **ಪ್ರಾಣಸ್ಥಮಹಾವಿಷ್ಣುಪ್ರೀತ್ಯರ್ಥಂ ತರ್ಪಣಂ ಕರಿಷ್ಯೇ ॥ (ಕುರುಷ್ವ) ॥**

–ಎಂದು ಹೇಳಿ ಒಂದು ಸಣ್ಣಪಾತ್ರೆಯಲ್ಲಿ ಕ್ಷೀರೋದಕ ಮಾಡಿ ಅದರಿಂದ ಪಿಂಡಗಳ ಮೂರು ಸ್ಥಾನಗಳಲ್ಲಿಯೂ ಪುರುಷಸೂಕ್ತದ ಪ್ರತಿ ಋಕ್ಕಿನ ಅಂತ್ಯದಲ್ಲಿ '**ವಿಷ್ಣುಂ ತರ್ಪಯಾಮಿ ॥**' ಎಂದು ತರ್ಪಣ ಕೊಡಬೇಕು. '**ಅತೋ ದೇವಾ ...ಪದಮ್ ॥**' ಎಂಬ ಆರು ಮಂತ್ರಗಳಿಂದ ತರ್ಪಣ ಕೊಟ್ಟು,

**ಅನಾದಿ ನಿಧನೋ.... ॥' 'ಅತಸೀಪುಷ್ಪ.... ॥'**

**ಕೃಷ್ಣ ಕೃಷ್ಣ ಕೃಪಾಲೋ ತ್ವಮಗತೀನಾಮ್ ಗತಿರ್ಭವ ।**
**ಸಂಸಾರಾರ್ಣವಮಗ್ನಾನಾಂ ಪ್ರಸೀದ ಪುರುಷೋತ್ತಮ ॥**

**ನಾರಾಯಣ ಸುರಶ್ರೇಷ್ಠ ಲಕ್ಷ್ಮೀಕಾಂತ ವರಪ್ರದ ।**
**ಅನೇನ ತರ್ಪಣೇನಾದ್ಯ ಪ್ರೇತಮೋಕ್ಷಪ್ರದೋ ಭವ ॥**

**ಶ್ರೀಮಹಾವಿಷ್ಣುಂ ತರ್ಪಯಾಮಿ ॥** –ಎಂದು ಮೇಲಿನ ನಾಲ್ಕು ಮಂತ್ರಗಳಿಂದಲೂ ತರ್ಪಣ ಕೊಟ್ಟು, ಕೆಳಗಿನ ಮೂರು ಮಂತ್ರಗಳಿಂದ ಮೂರು ಸ್ಥಾನಗಳಲ್ಲಿಯೂ ತರ್ಪಣ ಕೊಡಬೇಕು.

(ಎಡ) **ಯೇ ಕೇಚಿದನ್ನಲೋಭೇನ ಮೃತ್ಯುಂ ಪ್ರಾಪ್ತಾ ನರಾಧಮಾಃ ।**
**ತೇ ಮೇ ಪ್ರೇತಾಃ ಸುಖಂ ದದ್ಯುಸ್ತೇಭ್ಯಃ ಕ್ಷೀರತಿಲೋದಕಮ್ ॥**

**ತಾನ್ ಪ್ರೇತಾನ್ ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥**

**ಯೇ ಕೇಚಿದ್ದ್ರವ್ಯಲೋಭೇನ ಮೃತ್ಯುಂ ಪ್ರಾಪ್ತಾ ನರಾಧಮಾಃ ।**
**ತೇ ಮೇ ಪ್ರೇತಾಃ ಸುಖಂ ದದ್ಯುಸ್ತೇಭ್ಯಃ ಕ್ಷೀರತಿಲೋದಕಮ್ ॥**

**ತಾನ್ ಪ್ರೇತಾನ್ ತರ್ಪಯಾಮಿ..... ॥**

**ಯೇ ಕೇಚಿತ್ಸರ್ವಲೋಭೇನ ಮೃತ್ಯುಂ ಪ್ರಾಪ್ತಾ ನರಾಧಮಾಃ ।**
**ತೇ ಮೇ ಪ್ರೇತಾಃ ಸುಖಂ ದದ್ಯುಸ್ತೇಭ್ಯಃ ಕ್ಷೀರತಿಲೋದಕಮ್ ॥**

**ತಾನ್ ಪ್ರೇತಾನ್ ತರ್ಪಯಾಮಿ.... ॥**

ಅನಂತರ ಕೂರ್ಚಸ್ಥಾನದಲ್ಲಿ ಕೈಮುಗಿದು,

**ದಿವ್ಯಂತರಿಕ್ಷಭೂಮಿಷ್ಠೇಭ್ಯಃ ಸಾತ್ತ್ವಿಕ ರಾಜಸತಾಮಸೇಭ್ಯಃ ಅಜ್ಞಾತನಾಮ ಗೋತ್ರಜೇಭ್ಯಃ ಪ್ರೇತೇಭ್ಯಸ್ತೃಪ್ತಿರಸ್ತು ॥ (ಅಸ್ತುತೃಪ್ತಿಃ) ॥**

(ಬಲ) ಜಲಕೂರ್ಚದಿಂದ ಮೂರು ಸ್ಥಾನಗಳಲ್ಲಿ ನೀರು ಕೊಟ್ಟು,

**ಶಿವಾ ಆಪಃ ಸಂತು ॥ (ಸಂತು ಶಿವಾ ಆಪಃ) ಕ್ರಮುಕತಾಂಬೂಲಮುಪತಿಷ್ಠತು । ದಕ್ಷಿಣಾಮುಪತಿಷ್ಠತು ॥**

**ತ್ರಿಪಿಂಡೀಕರಣಶ್ರಾದ್ಧಸಂಪೂರ್ಣಫಲಪ್ರಾಪ್ತ್ಯರ್ಥಂ ತಿಲಪಾತ್ರದಾನಮ್ ಆಮಾನ್ನ ದಾನಂ ಚ ಕರಿಷ್ಯೇ ॥** –ಎಂದು ನಾಲ್ಕು ಮಣೆ ಹಾಕಿ ನಾಲ್ಕು ಬ್ರಾಹ್ಮಣರನ್ನು ಆಹ್ವಾನಿಸಿ ತಿಲಪಾತ್ರದಾನ ಹಾಗೂ ಮೂರು ಆಮಾನ್ನಗ್ರಂಥಿಗಳನ್ನು ದಾನಮಾಡಬೇಕು.

**ತಿಲಪಾತ್ರದಾನಮ್–**

**ತಿಲಾಃ ಕಶ್ಯಪ ..... ಅತಃ ಶಾಂತಿಂ ಪ್ರಯಚ್ಛ ಮೇ ॥** –ಎಂದು ತಿಲದಾನ ಕೊಟ್ಟು

**ದಿವಿಷ್ಠಾಃ ಸಾತ್ತ್ವಿಕಾ ಅಜ್ಞಾತನಾಮಗೋತ್ರಜಾಃ ಪ್ರೇತಾಃ ದೇವತಾ ಇದಂ ವೋಽನ್ನಮ್ । ಭೂಃ ದಿವಿಷ್ಠೇಭ್ಯಃ ಸಾತ್ವಿಕೇಭ್ಯ ಅಜ್ಞಾತಪ್ರೇತೇಭ್ಯ ಇದಮನ್ನಮುಪ–ತಿಷ್ಠತು ॥**

**ಅಂತರಿಕ್ಷಸ್ಥಾಃ ರಾಜಸಾಃ ಅಜ್ಞಾತನಾಮಗೋತ್ರಜಾಃ ಪ್ರೇತಾಃ ದೇವತಾಃ ಇದಂ ವೋಽನ್ನವಮ್ ॥ ಭೂಃ ಅಂತರಿಕ್ಷಸ್ಥೇಭ್ಯಃ ರಾಜಸೇಭ್ಯ ಅಜ್ಞಾತಪ್ರೇತೇಭ್ಯಃ ಇದಮನ್ನಮುಪತಿಷ್ಠತು ॥**

**ಭೂಮಿಷ್ಠಾಸ್ತಾಮಸಾಃ ಅಜ್ಞಾತನಾಮಗೋತ್ರಜಾಃ ಪ್ರೇತಾಃ ದೇವತಾಃ ಇದಂ ವೋಽನ್ನಮ್ । ಭೂಃ ಭೂಮಿಷ್ಠೇಭ್ಯಸ್ತಾಮಸೇಭ್ಯಃ ಅಜ್ಞಾತಪ್ರೇತೇಭ್ಯಃ ಇದಮನ್ನ–ಮುಪತಿಷ್ಠತು ॥**

**ಅನೇನ ತಿಲಪಾತ್ರದಾನಪೂರ್ವಕ ಆಮಾನ್ನಗ್ರಂಥಿದಾನೇನ ಪ್ರಾಣಸ್ಥಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ ॥**

ಆಚಾರ್ಯರಿಗೆ ಹಾಗೂ ನಾಲ್ಕು ಜನ ಬ್ರಾಹ್ಮಣರಿಗೆ ಮಂತ್ರಾಕ್ಷತೆ ಕೊಟ್ಟು ತಾನು ಎದ್ದು ನಿಂತು ಅಕ್ಕಿ ಹಿಡಿದು. '**ಅನಾದಿ ನಿಧನೋ.....**' ಮತ್ತು '**ಅತಸೀಪುಷ್ಪ....**' ಮಂತ್ರಗಳಿಂದ ಮೂರು ಪಿಂಡದ ಮೇಲೆ ಹಾಕಿ ನಮಸ್ಕಾರ ಮಾಡಿ ಕೈಮುಗಿದು,

(ಪಶ್ಚಿಮದ ಅರ್ಘ್ಯಪಾತ್ರೆಯಲ್ಲಿ) ಮೂರು ಜಂಬೀರಫಲ (ಲಿಂಬೆ) ಇಟ್ಟು ಎಳ್ಳು ಹಾಗೂ ಅರ್ಘ್ಯಪಾತ್ರದ ನೀರು ಹಿಡಿದು,

**ಅಂತರಿಕ್ಷಸ್ಥಾಃ ರಾಜಸಾ ಅಜ್ಞಾತಗೋತ್ರಾಃ ಪ್ರೇತಾಃ ಯುಷ್ಮಭ್ಯಃ ಇದಮರ್ಘ್ಯ-ಮುಪತಿಷ್ಠತು ॥** –ಎಂದು ಪಿಂಡದ ಮೇಲೆ ಅರ್ಘ್ಯ ಕೊಡಬೇಕು.

(ಪೂರ್ವದ ಪಾತ್ರೆಯಲ್ಲಿ) ಮೂರು ಖರ್ಜೂರ ಫಲವಿಟ್ಟು ಎಳ್ಳು ಹಾಗೂ ಅರ್ಘ್ಯ ಪಾತ್ರದ ನೀರು ಹಿಡಿದು,

**ಭೂಮಿಷ್ಠಾಃ ತಾಮಸಾ ಅಜ್ಞಾತಗೋತ್ರಾಃ ಪ್ರೇತಾಃ ಯುಷ್ಮಭ್ಯಃ ಇದಮರ್ಘ್ಯ-ಮುಪತಿಷ್ಠತು** ॥ –ಎಂದು ಪಿಂಡದ ಮೇಲೆ ಅರ್ಘ್ಯ ಕೊಟ್ಟು,

(ಬಲ) **ಪ್ರಾಣಸ್ಥಮಹಾವಿಷ್ಣುಪ್ರೀತ್ಯರ್ಥಂ ತರ್ಪಣಂ ಕರಿಷ್ಯೇ ॥ (ಕುರುಷ್ವ) ॥**

–ಎಂದು ಹೇಳಿ ಒಂದು ಸಣ್ಣಪಾತ್ರೆಯಲ್ಲಿ ಕ್ಷೀರೋದಕ ಮಾಡಿ ಅದರಿಂದ ಪಿಂಡಗಳ ಮೂರು ಸ್ಥಾನಗಳಲ್ಲಿಯೂ ಪುರುಷಸೂಕ್ತದ ಪ್ರತಿ ಋಕ್ಕಿನ ಅಂತ್ಯದಲ್ಲಿ '**ವಿಷ್ಣುಂ ತರ್ಪಯಾಮಿ ॥**' ಎಂದು ತರ್ಪಣ ಕೊಡಬೇಕು. '**ಅತೋ ದೇವಾ ...ಪದಮ್** ॥' ಎಂಬ ಆರು ಮಂತ್ರಗಳಿಂದ ತರ್ಪಣ ಕೊಟ್ಟು,

**ಅನಾದಿ ನಿಧನೋ.... ॥' 'ಅತಸೀಪುಷ್ಪ.... ॥'**

**ಕೃಷ್ಣ ಕೃಷ್ಣ ಕೃಪಾಲೋ ತ್ವಮಗತೀನಾಮ್ ಗತಿರ್ಭವ ।**
**ಸಂಸಾರಾರ್ಣವಮಗ್ನಾನಾಂ ಪ್ರಸೀದ ಪುರುಷೋತ್ತಮ ॥**

**ನಾರಾಯಣ ಸುರಶ್ರೇಷ್ಠ ಲಕ್ಷ್ಮೀಕಾಂತ ವರಪ್ರದ ।**
**ಅನೇನ ತರ್ಪಣೇನಾದ್ಯ ಪ್ರೇತಮೋಕ್ಷಪ್ರದೋ ಭವ ॥**

**ಶ್ರೀಮಹಾವಿಷ್ಣುಂ ತರ್ಪಯಾಮಿ** ॥ –ಎಂದು ಮೇಲಿನ ನಾಲ್ಕು ಮಂತ್ರಗಳಿಂದಲೂ ತರ್ಪಣ ಕೊಟ್ಟು, ಕೆಳಗಿನ ಮೂರು ಮಂತ್ರಗಳಿಂದ ಮೂರು ಸ್ಥಾನಗಳಲ್ಲಿಯೂ ತರ್ಪಣ ಕೊಡಬೇಕು.

(ಎಡ) **ಯೇ ಕೇಚಿದನ್ನಲೋಭೇನ ಮೃತ್ಯುಂ ಪ್ರಾಪ್ತಾ ನರಾಧಮಾಃ ।**
**ತೇ ಮೇ ಪ್ರೇತಾಃ ಸುಖಂ ದದ್ಯುಸ್ತೇಭ್ಯಃ ಕ್ಷೀರತಿಲೋದಕಮ್ ॥**

**ತಾನ್ ಪ್ರೇತಾನ್ ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥**

**ಯೇ ಕೇಚಿದ್ದ್ರವ್ಯಲೋಭೇನ ಮೃತ್ಯುಂ ಪ್ರಾಪ್ತಾ ನರಾಧಮಾಃ ।**
**ತೇ ಮೇ ಪ್ರೇತಾಃ ಸುಖಂ ದದ್ಯುಸ್ತೇಭ್ಯಃ ಕ್ಷೀರತಿಲೋದಕಮ್ ॥**

**ತಾನ್ ಪ್ರೇತಾನ್ ತರ್ಪಯಾಮಿ..... ॥**

**ಯೇ ಕೇಚಿತ್ಸರ್ವಲೋಭೇನ ಮೃತ್ಯುಂ ಪ್ರಾಪ್ತಾ ನರಾಧಮಾಃ ।**
**ತೇ ಮೇ ಪ್ರೇತಾಃ ಸುಖಂ ದದ್ಯುಸ್ತೇಭ್ಯಃ ಕ್ಷೀರತಿಲೋದಕಮ್ ॥**

**ತಾನ್ ಪ್ರೇತಾನ್ ತರ್ಪಯಾಮಿ.... ॥**

ಅನಂತರ ಕೂರ್ಚಸ್ಥಾನದಲ್ಲಿ ಕೈಮುಗಿದು,

**ದಿವ್ಯಂತರಿಕ್ಷಭೂಮಿಷ್ಠೇಭ್ಯಃ ಸಾತ್ತ್ವಿಕ ರಾಜಸತಾಮಸೇಭ್ಯಃ ಅಜ್ಞಾತನಾಮ ಗೋತ್ರಜೇಭ್ಯಃ ಪ್ರೇತೇಭ್ಯಸ್ತೃಪ್ತಿರಸ್ತು ॥ (ಅಸ್ತುತೃಪ್ತಿಃ) ॥**

(ಬಲ) ಜಲಕೂರ್ಚದಿಂದ ಮೂರು ಸ್ಥಾನಗಳಲ್ಲಿ ನೀರು ಕೊಟ್ಟು,

**ಶಿವಾ ಆಪಃ ಸಂತು ॥ (ಸಂತು ಶಿವಾ ಆಪಃ) ಕ್ರಮುಕತಾಂಬೂಲಮುಪತಿಷ್ಠತು । ದಕ್ಷಿಣಾಮುಪತಿಷ್ಠತು ॥**

**ತ್ರಿಪಿಂಡೀಕರಣಶ್ರಾದ್ಧಸಂಪೂರ್ಣಫಲಪ್ರಾಪ್ತ್ಯರ್ಥಂ ತಿಲಪಾತ್ರದಾನಮ್ ಆಮಾನ್ನ ದಾನಂ ಚ ಕರಿಷ್ಯೇ ॥** –ಎಂದು ನಾಲ್ಕು ಮಣೆ ಹಾಕಿ ನಾಲ್ಕು ಬ್ರಾಹ್ಮಣರನ್ನು ಆಹ್ವಾನಿಸಿ ತಿಲಪಾತ್ರದಾನ ಹಾಗೂ ಮೂರು ಆಮಾನ್ನಗ್ರಂಥಿಗಳನ್ನು ದಾನಮಾಡಬೇಕು.

**ತಿಲಪಾತ್ರದಾನಮ್–**

**ತಿಲಾಃ ಕಶ್ಯಪ ..... ಅತಃ ಶಾಂತಿಂ ಪ್ರಯಚ್ಛ ಮೇ ॥** –ಎಂದು ತಿಲದಾನ ಕೊಟ್ಟು

**ದಿವಿಷ್ಠಾಃ ಸಾತ್ತ್ವಿಕಾ ಅಜ್ಞಾತನಾಮಗೋತ್ರಜಾಃ ಪ್ರೇತಾಃ ದೇವತಾ ಇದಂ ವೋಽನ್ನಮ್ । ಭೂಃ ದಿವಿಷ್ಠೇಭ್ಯಃ ಸಾತ್ವಿಕೇಭ್ಯ ಅಜ್ಞಾತಪ್ರೇತೇಭ್ಯ ಇದಮನ್ನಮುಪ–ತಿಷ್ಠತು ॥**

**ಅಂತರಿಕ್ಷಸ್ಥಾಃ ರಾಜಸಾಃ ಅಜ್ಞಾತನಾಮಗೋತ್ರಜಾಃ ಪ್ರೇತಾಃ ದೇವತಾಃ ಇದಂ ವೋಽನ್ನವಮ್ ॥ ಭೂಃ ಅಂತರಿಕ್ಷಸ್ಥೇಭ್ಯಃ ರಾಜಸೇಭ್ಯ ಅಜ್ಞಾತಪ್ರೇತೇಭ್ಯಃ ಇದಮನ್ನಮುಪತಿಷ್ಠತು ॥**

**ಭೂಮಿಷ್ಠಾಸ್ತಾಮಸಾಃ ಅಜ್ಞಾತನಾಮಗೋತ್ರಜಾಃ ಪ್ರೇತಾಃ ದೇವತಾಃ ಇದಂ ವೋಽನ್ನಮ್ । ಭೂಃ ಭೂಮಿಷ್ಠೇಭ್ಯಸ್ತಾಮಸೇಭ್ಯಃ ಅಜ್ಞಾತಪ್ರೇತೇಭ್ಯಃ ಇದಮನ್ನ–ಮುಪತಿಷ್ಠತು ॥**

**ಅನೇನ ತಿಲಪಾತ್ರದಾನಪೂರ್ವಕ ಆಮಾನ್ನಗ್ರಂಥಿದಾನೇನ ಪ್ರಾಣಸ್ಥಪ್ರಾಜ್ಞರೂಪಿ ಪರಮಾತ್ಮಾ ಪ್ರೀಯತಾಮ್ ॥**

ಆಚಾರ್ಯರಿಗೆ ಹಾಗೂ ನಾಲ್ಕು ಜನ ಬ್ರಾಹ್ಮಣರಿಗೆ ಮಂತ್ರಾಕ್ಷತೆ ಕೊಟ್ಟು ತಾನು ಎದ್ದು ನಿಂತು ಅಕ್ಕಿ ಹಿಡಿದು. '**ಅನಾದಿ ನಿಧನೋ.....**' ಮತ್ತು '**ಅತಸೀಪುಷ್ಪ.....**' ಮಂತ್ರಗಳಿಂದ ಮೂರು ಪಿಂಡದ ಮೇಲೆ ಹಾಕಿ ನಮಸ್ಕಾರ ಮಾಡಿ ಕೈಮುಗಿದು,

**ದಿವ್ಯಂತರಿಕ್ಷಭೂಮಿಷ್ಠಾಃ ಸಾತ್ವಿಕಾ ರಾಜಸಾಸ್ತಥಾ ।**
**ಪ್ರೇತಾ ವೈ ತಾಮಸಾ ಯೇಽನ್ಯೇ ಶಾಂತಿಂ ಯಚ್ಛಂತು ತರ್ಪಿತಾ ॥**

**ತೃಪ್ತೈಶ್ಚ ಆಶಿಷೋ ದೇಯಾಃ ॥** ಎಂದು ಹೇಳಲು, ಬ್ರಾಹ್ಮಣರು ಪ್ರತಿವಚನ ಹೇಳಬೇಕು.

**ಯಾನುದ್ದಿಶ್ಯ ಭವದ್ಭಿರ್ಯತ್ಕೃತಂ ಶ್ರಾದ್ಧಂ ತ್ರಿಪಿಂಡಕಮ್ ।**
**ಶ್ರಾದ್ಧೇನಾನೇನ ತೇ ಸರ್ವೇ ತೃಪ್ತಿಂ ಯಾಂತು ಮುದಾನ್ವಿತಾಃ ॥**

**ತೇಷಾಂ ಪ್ರಸಾದಾದ್ಭವತಾಂ ಪೂರ್ಣಾಃ ಸಂತು ಮನೋರಥಾಃ ।**
**ಸಂಪತ್ತಿಃ ಸಂತತಿಶ್ಚೈವ ವರ್ಧತಾಮುತ್ತರೋತ್ತರಮ್ ॥**

–ಎಂದು ಆಚಾರ್ಯರಿಂದ ಮಂತ್ರಾಕ್ಷತೆ ಪಡೆದು ಮೂರು ಪಿಂಡಗಳ ಮೇಲೆ ಹಾಕಿ, ಅನಂತರ ಹಿರಿಯರಲ್ಲಿ ಕೊಟ್ಟು ಮಂತ್ರಾಕ್ಷತೆ ಹಾಕಿಸಿಕೊಂಡು, ನಾಲ್ಕು ತುಲಸಿ ನೀರು ಹಿಡಿದು, '**ಕಾಯೇನ ವಾಚಾ........ಸಮರ್ಪಯಾಮಿ ॥ ಕೃಷ್ಣಾರ್ಪಣಮಸ್ತು ॥**' ಎಂದು ಮೂರು ತುಲಸೀದಲಗಳನ್ನು ಪಿಂಡದ ಮೇಲೆ ಹಾಕಿ, ಒಂದನ್ನು ತನ್ನ ಬಲ ಕಿವಿಯಲ್ಲಿ ಧರಿಸಿ ಕೈಮುಗಿದು,

(ಎಡ) **ಭೋಜನಪಾತ್ರಾಣ್ಯುಚ್ಚಾಲಯಿಷ್ಯೇ ॥ (ಉಚ್ಚಾಲಯ)** ಎಂದು ಪ್ರತಿವಚನ ಪಡೆದು, ಎಳ್ಳು ನೀರು ಹಿಡಿದು ಬ್ರಾಹ್ಮಣರ ಭೋಜನಪತ್ರಕ್ಕೆ ಪ್ರೋಕ್ಷಣೆ ಮಾಡುವುದು. **ಪಿಂಡಾನುದ್ವಾಸಯಿಷ್ಯೇ ॥ (ಅಸ್ತು ಉದ್ವಾಸಯ)** (ಬಲ) ಹವಿಸ್ಸಿನ ಪಾತ್ರೆಗೆ ನೀರು ಹಾಕಿ ಗಂಗಾಪೂಜೆಯನ್ನು ಮಾಡಿ ಪಿಂಡವನ್ನು,

**ಓಂ ಯತ್ರ ತತ್ಪರಮಂ ಪದಂ ವಿಷ್ಣೋರ್ಲೋಕೇ ಮಹೀಯತೇ । ದೇವೈಃ ಸುಕೃತಕರ್ಮಭಿಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥**

**ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

**ವೇಣೀಮಾಧವಾಯ ನಮಃ । ಬಿಂದುಮಾಧವಾಯ ನಮಃ । ಗಯಾಗದಾಧರಾಯ ನಮಃ ॥**

**ದಿವ್ಯಂತರಿಕ್ಷ ......ಪ್ರೇತೇಭ್ಯೋ ಯದ್ದತ್ತ ಪಿಂಡೋಽಯಂ ಗಯಾರ್ಪಿತೋಽಸ್ತು ॥**
–ಎಂದು ವಿಸರ್ಜಿಸಬೇಕು.

ಜಲಕೂರ್ಚಸಹಿತ ಪಾತ್ರೆಯನ್ನು ಹಿಡಿದುಕೊಂಡು ನಿಂತಲ್ಲೆ ಮೂರು ಪ್ರದಕ್ಷಿಣೆ ಬಂದು, ಜಲಕೂರ್ಚವನ್ನು (ಎಡ) ಮೂರು ಕೂರ್ಚಸ್ಥಾನಗಳಿಗೆ ಮುಟ್ಟಿಸಿ ಬಿಚ್ಚಿ ಹಾಕಬೇಕು. (ಬಲ) ಕೈಮುಗಿದು, 'ಆಸೀಮಾಂತಮನುವ್ರಜೇ ॥ [ಮಾಽನುವ್ರಜ] ॥'

**ತ್ರಿಪಿಂಡೀಕರಣಶ್ರಾದ್ಧ ಗಯಾಶ್ರಾದ್ಧತುಲ್ಯಮಸ್ತ್ವಿತಿ ಭವಂತೋ ಬ್ರುವಂತು ॥ [ಗಯಾಶ್ರಾದ್ಧತುಲ್ಯಮಸ್ತು] ॥**

**ಮಯಾ ಯತ್ಕೃತಂ ತ್ರಿಪಿಂಡೀಕರಣಶ್ರಾದ್ಧಂ ತತ್ಕಾಲಾದಿಹೀನಂ ಬ್ರಾಹ್ಮಣ ವಚನಾತ್ ಶ್ರೀವಿಷ್ಣೋಃ ಪ್ರಸಾದಾಚ್ಚ ಸರ್ವಂ ಸಂಪೂರ್ಣಮಸ್ತ್ವಿತಿ ಭವಂತೋ ಬ್ರುವಂತು ॥ [ಸರ್ವಂ ಸಂಪೂರ್ಣಮಸ್ತು]**

**ಕೂರ್ಚಸ್ಥಾನೇ ಉದ್ವಾಸನಮುಪತಿಷ್ಠತು ॥ (ಅಸ್ತು ಉದ್ವಾಸಯ) ॥**

ಅನಂತರ ಮೂರೂ ಕೂರ್ಚದ ಗ್ರಂಥಿಗಳನ್ನು ಬಿಚ್ಚಿ ಹರಿವಾಣಕ್ಕೆ ಹಾಕಿ ಸ್ವಸ್ತಿಕೆಯಲ್ಲಿ ಉತ್ತರಪೂಜೆ ಮಾಡಿ ದೇವರನ್ನು ಉದ್ವಾಸನೆ ಮಾಡಿ, ತುಳಸಿ ನೀರು ಹಿಡಿದು

**ಜಪಚ್ಛಿದ್ರಂ ತಪಚ್ಛಿದ್ರಂ ಯಚ್ಛಿದ್ರಂ ಶ್ರಾದ್ಧಕರ್ಮಣಿ ।**
**ಸರ್ವಂ ಭವತು ನಿಶ್ಛಿದ್ರಂ ಬ್ರಾಹ್ಮಣಾನಾಂ ಪ್ರಸಾದತಃ ॥**

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥**

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ..... ನಾರಾಯಣಾಯೇತಿ ಸಮರ್ಪಯಾಮಿ ॥**

**ಅದ್ಯ ದಿನೇ ಮಯಾ ಕೃತ ಅಸ್ಮತ್ಕುಲೇ ಪ್ರಜಾತಾನಾಂ ಗೋತ್ರಜಾನಾಂ ಅನ್ಯ ಗೋತ್ರೇ ಜಾತಾನಾಂ ತ್ರಿವಿಧಾನಾಂ ದಿವ್ಯಾಂತರಿಕ್ಷಭೌಮಾನಾಂ ಸಾತ್ತ್ವಿಕರಾಜಸ ತಾಮಸಾನಾಂ ಪ್ರೇತಾನಾಮುದ್ದಿಶ್ಯ ತ್ರಿಪಿಂಡೀಶ್ರಾದ್ಧಕರ್ಮಣಾ ಪ್ರೇತಾಂತರ್ಯಾಮಿ ಪ್ರಾಜ್ಞಾತ್ಮಕ ಮಧ್ವಪತಿಗೋಪಾಲಕೃಷ್ಣಃ ಪ್ರೀಯತಾಮ್ ॥ ತತ್ಸರ್ವಂ ಕೃಷ್ಣಾರ್ಪಣಮಸ್ತು ॥ ಅಚ್ಯುತಾನಂತಗೋವಿಂದಾಯ ನಮಃ ॥**

(ದ್ವಾದಶಮೂರ್ತಿ ಆರಾಧನೆ ಇಲ್ಲವೇ ಚತುರ್ಮೂರ್ತಿ ಆರಾಧನೆ ಇದ್ದರೆ ಅದನ್ನು ಮಾಡಿ ಪಾದೋದಕವನ್ನು ಪಾಪೆಯ ಮೇಲೆ ಹಾಕಿ) ಪಾಪೆ ಇಲ್ಲವೇ ಪ್ರೇತಕೂರ್ಚವನ್ನು ಹಿಡಿದು ಚಕ್ರಾಬ್ಜಮಂಡಲಕ್ಕೆ ಮೂರು ಸುತ್ತು ಬಂದು ಮಂಡಲದ ಬಳಿ ಇಟ್ಟು ದೇವರಿಗೆ ಪಾಯಸಸಮರ್ಪಣೆ ಮಾಡಿ ಆರತಿ ಮಾಡಿ ಎಲ್ಲರೂ ಅರಳು ಹಿಡಿದು **ನಾರಾಯಣೋ-ಪನಿಷತ್** ಪಾರಾಯಣ ಮಾಡಿ ಅಂತ್ಯದಲ್ಲಿ, '**ಸಂಸಮಿದ್ಯುವಸೇ.........ಸುಸಹಾಸತಿ ॥**' ಪಠಿಸಿ ಎಲ್ಲರೂ '**ಅನಾದಿ ನಿಧನೋ.....**' ಮಂತ್ರ ಹೇಳಿ, ಮಂಡಲಕ್ಕೆ ಹಾಕಿ ನಮಸ್ಕಾರ ಮಾಡಿ, ಪಾಪೆಯನ್ನು ಕ್ಷೇತ್ರವಿಧಿ ಇದ್ದರೆ ಮಾಡಿ ಇಲ್ಲದಿದ್ದರೆ ಪುಣ್ಯನದಿಗಳಲ್ಲಿ ವಿಸರ್ಜಿಸಬೇಕು. ಅನಂತರ ಬ್ರಾಹ್ಮಣಾರಾಧನೆ ಮಾಡಿ ಅನುಗ್ರಹ ಪಡೆದುಕೊಳ್ಳಬೇಕು.

* * *

# ಯತೇರಾರಾಧನಮ್

ಯತಿಗಳು ಸಿದ್ಧಿಹೊಂದಿದ ಅನಂತರ ಹನ್ನೆರಡನೆಯ ಅಥವಾ ಹದಿಮೂರನೆಯ ದಿನ ಪಾರ್ವಣಶ್ರಾದ್ಧವಾದ ಮೇಲೆ ಕರ್ತೃವು ಆರಾಧನೆಯನ್ನು ಮಾಡಬೇಕು. ಪ್ರತಿವರ್ಷವೂ ಕರ್ತೃ ಮಾತ್ರವಲ್ಲದೆ ಶಿಷ್ಯರೂ ಸ್ವಗೃಹದಲ್ಲಿ ಆಚರಿಸಬಹುದು. ಇದು ಶುಭಕರ್ಮ. ಅಪಸವ್ಯ ತಿಲಾದಿಗಳ ಸೋಂಕು ಇರುವುದಿಲ್ಲ. ಶಿಷ್ಯರ ಶ್ರೇಯೋಽಭಿವೃದ್ಧಿಗೆ ಪರಮ ಸಾಧನವಾದುದು. ಶಿಷ್ಯರ ಸಕಲಪಾಪವೂ ಪರಿಹಾರವಾಗಿ ಶ್ರದ್ಧಾಭಕ್ತಿಜ್ಞಾನವೈರಾಗ್ಯಗಳು ಸಿದ್ಧಿಸುವುವು.

ಗುರು, ಪರಮಗುರು, ಪರಮೇಷ್ಠಿಗುರು ಹಾಗೂ ಪರಾತ್ಪರಗುರುಗಳ ಸ್ಥಾನಕ್ಕೆ ನಾಲ್ವರನ್ನು ಅಥವಾ ಒಬ್ಬರನ್ನು ಆಮಂತ್ರಿಸಬೇಕು. ಯತಿಗಳು ಶುಕ್ಲಪಕ್ಷದಲ್ಲಿ ಸಿದ್ಧಿಹೊಂದಿದರೆ ಕೇಶವಾದಿ (ಕೃಷ್ಣಪಕ್ಷದಲ್ಲಿ– ಸಂಕರ್ಷಣಾದಿ) ಹನ್ನೆರಡು ದೇವತೆಗಳ ಸ್ಥಾನದಲ್ಲಿ ಹನ್ನೆರಡು ಜನ ಬ್ರಾಹ್ಮಣರನ್ನು ಆಮಂತ್ರಿಸಬೇಕು. ಅಶಕ್ತರು ಯಥಾಶಕ್ತಿ ವಿಪ್ರರನ್ನೋ ಯತಿಗಳನ್ನೋ ಆಮಂತ್ರಿಸಿ ಆರಾಧನೆಯನ್ನು ಮಾಡಬೇಕು.

ಆಚಮನ, ಪ್ರಾಣಾಯಾಮ ಮಾಡಿ,

## ಸಂಕಲ್ಪ :

**ಅದ್ಯ ಪೂರ್ವೋಚ್ಚರಿತ..... ಜ್ಞಾನಭಕ್ತಿವೈರಾಗ್ಯಸಿದ್ಧ್ಯರ್ಥಂ ಬ್ರಹ್ಮೀಭೂತಸ್ಯ ಅಸ್ಮದ್ಗುರೋರಾರಾಧನಾಖ್ಯಂ ಕರಿಷ್ಯೇ ॥**

ಗುರು, ಗಣಪತಿ ಪ್ರಾರ್ಥನಾಪೂರ್ವಕ ಒಂದು ಪದ್ಮಾಕಾರದ ಮಂಡಲ ಬರೆದು ಕಲಶ ಪ್ರತಿಷ್ಠಾಪನೆ ಮಾಡಿ ಬ್ರಹ್ಮದಂಡ ಇಟ್ಟು '**ಅಸ್ಮದ್ಗುರೋಃ ಆರಾಧನಂ ಕರ್ತುಂ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ॥**' – ಎಂದು ಹೇಳಿ ಬ್ರಾಹ್ಮಣರಿಂದ ಅನುಜ್ಞೆಯನ್ನು ಪಡೆದುಕೊಳ್ಳಬೇಕು

**ಅಸ್ಮದ್ಗುರೋ ಸ್ವಾಗತಮ್ ॥ (ಸುಸ್ವಾಗತಂ)**

**ಅಸ್ಮತ್ಪರಮಗುರೋ ಸ್ವಾಗತಮ್ ॥**

**ಅಸ್ಮತ್ಪರಮೇಷ್ಠಿಗುರೋ ಸ್ವಾಗತಮ್ ॥**

**ಅಸ್ಮತ್ಪರಾತ್ಪರಗುರೋ ಸ್ವಾಗತಮ್ ॥**

**ಕೇಶವ ಸ್ವಾಗತಮ್ ॥**

ಹೀಗೆ ಉಳಿದ ಹನ್ನೊಂದು ಬ್ರಾಹ್ಮಣರನ್ನು ಸ್ವಾಗತಿಸಿ ಕೊನೆಗೆ, '**ವಿಶ್ವಂಭರಾಖ್ಯ ವಿಷ್ಣೋಃ ಸ್ವಾಗತಮ್ ॥**' ಎಂದು ಆಮಂತ್ರಿಸಿ, ನಮಸ್ಕಾರ ಮಾಡಿ

**ಬ್ರಹ್ಮೀಭೂತಸ್ಯ ಅಸ್ಮದ್ಗುರೋಃ ಸಮಾರಾಧನೇ ಗುರ್ವರ್ಥೇ ಭವದ್ಭಿಃ ಕ್ಷಣಃ ಪ್ರಸಾದಃ ಕರ್ತವ್ಯಃ ॥ (ಓಂ ತಥಾ)**

ಹೀಗೆ ಪ್ರತಿಯೊಬ್ಬರಿಗೂ (**ಪರಮಗುರ್ವರ್ಥೇ.. ॥ ಕೇಶವಾರ್ಥೇ.... ॥**) ಕ್ಷಣ ಕೊಟ್ಟು ಉತ್ತಮ ಆಸನದಲ್ಲಿ ಕುಳ್ಳಿರಿಸಿ, ಗಂಧಾಕ್ಷತ, ತುಲಸೀದಲ, ಕರ್ಪೂರಮಿಶ್ರಿತ ನೀರಿನಿಂದ ಪ್ರತಿಯೊಬ್ಬರ ಪಾದ ತೊಳೆದು, ಪಾದ ತೊಳೆದ ನೀರನ್ನು ಬೇರೆಯೇ ಪಾತ್ರೆಯಲ್ಲಿ ತೆಗೆದಿಟ್ಟು ಗಂಧಪುಷ್ಪಗಳಿಂದ ಪಾತ್ರೆಯನ್ನು ಅಲಂಕರಿಸಿ, ಬ್ರಾಹ್ಮಣರನ್ನು ಪೂರ್ವ ಇಲ್ಲವೇ ಉತ್ತರಮುಖವಾಗಿ ಕುಶಾಸನದಲ್ಲಿ ಕುಳ್ಳಿರಿಸಿ **ಪುರುಷಸೂಕ್ತ**ದಿಂದ ಪ್ರತಿಋಕ್ಕಿನ ಅಂತ್ಯದಲ್ಲಿ '**ಓಮ್ ಓಂ ನಮೋ ನಾರಾಯಣಾಯ ಓಮ್**' –ಎಂದು ಸೇರಿಸಿ ಆವಾಹನಾದಿ ಷೋಡಶೋಪಚಾರಪೂಜೆ ಮಾಡಿ, ಬ್ರಾಹ್ಮಣರಿಗೆ ಬಟ್ಟೆ, ಗೋಪಿ, ಯಜ್ಞೋಪವೀತ, ಕಲಶ, ಪಂಚಪಾತ್ರೆ, ಪವಿತ್ರ, ತುಲಸೀಮಾಲೆ ಕೊಟ್ಟು ಅವರ ಎದುರು ಚೌಕಾಕಾರದ ಮಂಡಲ ಮಾಡಿ, ಬಾಳೆಎಲೆ ಹಾಕಿ, ಅಭಿಘಾರ ಮಾಡಿ, ಪಾಯಸಾದಿಗಳನ್ನು ಬಳಸಿ ಅಭಿಘಾರ ಮಾಡಿ, ಅನ್ನವನ್ನು ಗಾಯತ್ರೀಮಂತ್ರದಿಂದ ಪ್ರೋಕ್ಷಿಸಿ,

'**ಬ್ರಹ್ಮೀಭೂತಸ್ಯ ಅಸ್ಮದ್ಗುರವೇ ಇದಮನ್ನಂ ಪರಿವಿಷ್ಟಂ ಪರಿವೇಕ್ಷ್ಯಮಾಣಂ ಚಾತೃಪ್ತೇಃ ಸ್ವಾಹಾ ಹವ್ಯಂ ನ ಮಮ ನ ಮಮ ॥**'

–ಎಂದು, ಹೀಗೆಯೇ ಉಳಿದ ಪ್ರತಿಸ್ಥಾನಗಳಲ್ಲೂ ('**ಪರಮಗುರವೇ.... ॥ ಕೇಶವಾಯ.... ॥** ಇತ್ಯಾದಿ) ಮಾಡಿ, '**ಓಂ ತದ್ಬ್ರಹ್ಮಾ ......ರೋಮ್** ।' ಅನುವಾಕ ಹೇಳಿ ಜೇನುತುಪ್ಪ ಬಳಿಸಿದ ಅನಂತರ ಆಪೋಶನ ಕೊಟ್ಟು ಸಾವಕಾಶ ಹೇಳಿ ಉಪನಿಷತ್ ಪಠಿಸಿ ಊಟದ ಕೊನೆಗೆ ಕರ್ಪೂರಾರತಿ ಮಾಡಿ ಪುನಃ ಅನುವಾಕ ಪಠಿಸಿ ಉತ್ತರಾಪೋಶನ ಕೊಡಬೇಕು.

ಬ್ರಾಹ್ಮಣರು ಕೈಕಾಲು ತೊಳೆದು ಬಂದ ಅನಂತರ ಆಸನದಲ್ಲಿ ಕುಳ್ಳಿರಿಸಿ ಗಂಧ ಪುಷ್ಪ ತಾಂಬೂಲಾದಿಗಳನ್ನು ಕೊಟ್ಟು ತಾನು ಅವರ ಎದುರು ಕುಳಿತು, ಚೌಕಾಕಾರದ ಮಂಡಲ ಮಾಡಿ, ಅಕ್ಕಿ ಹಾಕಿ ಅದರ ಮೇಲೆ ಪಾದೋದಕ ಕಲಶ ಇಟ್ಟು ಗಂಗಾದಿ ತೀರ್ಥಾಭಿಮಾನಿದೇವತೆಗಳನ್ನು ಚಿಂತಿಸಿ **ಪುರುಷಸೂಕ್ತ**ದ ಪ್ರತಿ ಮಂತ್ರದ ಕೊನೆಗೆ '**ತೀರ್ಥರಾಜಾಯ ನಮಃ**' ಎಂದು ಸೇರಿಸಿ ಅರ್ಚಿಸಿ ಅನಂತರ ಆ ಕಲಶವನ್ನು ತಲೆಯಲ್ಲಿ ಧರಿಸಿ ಮುಂದಿನ ಮಂತ್ರ ಹಾಗೂ ಹರಿಕೀರ್ತನೆಯೊಂದಿಗೆ ನೃತ್ಯ ಮಾಡಬೇಕು.

**ಓಂ ಲೋಕಸ್ಸರಸ್ವತ್ಯಾ ಯಾಂತ್ಯೇಷ ವೈ ದೇವಯಾನಃ ಪಂಥಾಸ್ತಮೇ ವಾನ್ವಾರೋ ಹಂತ್ಯಾ ಕ್ರೋಶಂತೋ ಯಾಂತ್ಯರ್ವಾರ್ತಿಮೇವಾನ್ಯಸ್ಮಿನ್ ಪ್ರತಿಪದ್ಯ ಪ್ರತಿಷ್ಠಾಂ ಗಚ್ಛಂತಿ ಯದಾದಶ ಶತಂ ಕುರ್ವಂತ್ಯಥೈಕಮುತ್ಥಾನಗ್ಂ ಶತಾಯುಃ ಪುರುಷಶ್ಶತೇಂದ್ರಿಯ ಆಯುಷ್ಯೇವೇಂದ್ರಿಯೇ ಪ್ರತಿ ತಿಷ್ಠತಿ ಯದಾ ಶತಗ್ಂ ಸಹಸ್ರಂ ಕುರ್ವಂತ್ಯಥೈಕಮುತ್ಥಾನಗ್ಂ ಸಹಸ್ರ ಸಂಮಿತೋವಾ ಅಸೌ ಲೋಕೋ ಮುಮೇವ ಲೋಕಮಭಿ ಜಯಂತಿ ಯಥೈಷಾಂ ಪ್ರಮೀ–ಯೇತ ಯದಾವಾ ಜೀಯೇರನ್ನಥೈಕಮುತ್ಥಾನಂ ತದ್ಧಿ ತೀರ್ಥಮ್ ॥**

ಭೀಷಾಽಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಽಸ್ಮಾ-ದಗ್ನಿಶ್ಚೇಂದ್ರಶ್ಚ । ಮೃತ್ಯುರ್ಧಾವತಿ ಪಂಚಮ ಇತಿ ॥

ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ ।

.....ಈ ಎರಡು ಅನುವಾಕ, **'ರಾಮ ಕೃಷ್ಣ ಗೋವಿಂದ......', 'ಕೃಷ್ಣ ರಾಮ ಗೋವಿಂದ** ....' ಎಂದು ದೇವತಾಸ್ಮರಣೆ ಮಾಡಿ, ಅನಂತರ ತಲೆಯಲ್ಲಿರುವ ಕಲಶಪಾತ್ರವನ್ನು ಮಂಡಲದಲ್ಲಿಟ್ಟು ಬ್ರಾಹ್ಮಣರಿಂದ ಮಂತ್ರಾಕ್ಷತೆ ಮಾಡಿಸಿ ಬ್ರಾಹ್ಮಣರಿಗೆ ತನ್ನ ಆರ್ಥಿಕ ಶಕ್ತ್ಯನುಸಾರ ದಕ್ಷಿಣೆ ಕೊಟ್ಟು ಬ್ರಾಹ್ಮಣರಿಂದ ಚಂದನಾಕ್ಷತಪುಷ್ಪವನ್ನು ಸ್ವೀಕರಿಸಿ ಪ್ರದಕ್ಷಿಣೆ ಬಂದು ತೀರ್ಥರಾಜನಿಗೂ ಬ್ರಾಹ್ಮಣರಿಗೂ ನಮಸ್ಕರಿಸಿ,

**ಆನಂದಮಾನಂದಕರಂ ಪ್ರಸನ್ನಂ ಜ್ಞಾನಸ್ವರೂಪಂ ನಿಜಬೋಧರೂಪಮ್ ।**
**ಯೋಗೀಂದ್ರಮೀಡ್ಯಂ ಭವರೋಗವೈದ್ಯಂ ಶ್ರೀಮದ್ಗುರುಂ ನಿತ್ಯಮಹಂ ನಮಾಮಿ ॥**

**ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ।**
**ಗುರುಸ್ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥**

ಬ್ರಾಹ್ಮಣರ ಕೈಯಲ್ಲಿ ತೀರ್ಥಕಲಶವನ್ನು ಕೊಟ್ಟು ಅವರಿಂದ ತೀರ್ಥಪ್ರೋಕ್ಷಣೆ ಮಾಡಿಸಿಕೊಂಡು ಪುನಃ ಬ್ರಾಹ್ಮಣರಿಗೆ ನಮಸ್ಕರಿಸಬೇಕು.

**ಅವಿದ್ಯಾಮೂಲಶಮನಂ ಸರ್ವಪಾಪಪ್ರಣಾಶನಮ್ ।**
**ಗುರುಪಾದೋದಕಂ ತೀರ್ಥಂ ಸಂಸಾರದ್ರುಮನಾಶನಮ್ ॥**

**ಪುತ್ರಾದಿಕಾಮನಾಯಾಂತು**

**ಶೋಷಣಂ ಪಾಪಪಂಕಸ್ಯ ದೀಪನಂ ಜ್ಞಾನತೇಜಸಃ ।**
**ಗುರೋಃ ಪಾದೋದಕಂ ಚಿತ್ರಂ ಪುತ್ರ ಪೌತ್ರ ಪ್ರವರ್ಧನಮ್ ॥**

ಅನಂತರ ಬ್ರಾಹ್ಮಣರನ್ನು ಬೀಳ್ಕೊಡಬೇಕು. ಬಳಿಕ ತಾನು ಪ್ರಸಾದಸೇವನೆ ಮಾಡಬೇಕು.

* * *

# ಸಪ್ತಮ ಗುಚ್ಛ

## ಶ್ರಾದ್ಧಪ್ರಕರಣಮ್

## ಷಣ್ಣವತಿಶ್ರಾದ್ಧಾನಿ

ಶ್ರಾದ್ಧವು ನಿತ್ಯನೈಮಿತ್ತಿಕಾದಿ ರೂಪಗಳಿಂದ ತೊಂಬತ್ತಾರು ವಿಧಗಳಲ್ಲಿದೆ.

12 ಅಮಾವಾಸ್ಯಾ, 14 ಮನ್ವಾದಿ, 4 ಯುಗಾದಿ, 12 ಸಂಕ್ರಾಂತಿ, 13 ವ್ಯತೀಪಾತ, 13 ವೈಧೃತಿ, 16 ಮಹಾಲಯ, 12 ತಿಸ್ರಾಷ್ಟಕ –ಹೀಗೆ ತೊಂಬತ್ತಾರು ಶ್ರಾದ್ಧದಿನಗಳು.

### ದರ್ಶಶ್ರಾದ್ಧ

ಸೂರ್ಯಚಂದ್ರರು ಒಂದೇ ರಾಶಿಯಲ್ಲಿರುವ ದಿನ '**ಅಮಾವಾಸ್ಯೆ**'ಯು. ೧೮ರಿಂದ ೨೪ ಗಳಿಗೆ **ದರ್ಶ**ಬೇಕು. **ದರ್ಶಶ್ರಾದ್ಧ**ದಲ್ಲಿ ಮೊದಲು ತರ್ಪಣಕೊಟ್ಟು ಅನಂತರ ಶ್ರಾದ್ಧ ಮಾಡಬೇಕು. ದರ್ಶಶ್ರಾದ್ಧದಲ್ಲಿ ಸಪತ್ನೀಕಪಿತೃವರ್ಗ ಮತ್ತು ಸಪತ್ನೀಕಮಾತಾಮಹವರ್ಗವನ್ನು ಉದ್ದೇಶಿಸಿ ಆರು ಪಿಂಡಗಳನ್ನು ಇಟ್ಟು ಶ್ರಾದ್ಧ ಮಾಡಬೇಕು. ಸಂಕ್ರಮಣಪುಣ್ಯಕಾಲದಲ್ಲಿ ತರ್ಪಣ ಕೊಡಬೇಕು.

### ಮನ್ವಾದಿಶ್ರಾದ್ಧ

ಚೈತ್ರ ಶುಕ್ಲ ತೃತೀಯಾ, ಚೈತ್ರ ಪೂರ್ಣಿಮಾ, ಜ್ಯೇಷ್ಠ ಶುಕ್ಲ ಪೂರ್ಣಿಮಾ, ಆಷಾಢ ಶುಕ್ಲ ದಶಮೀ, ಆಷಾಡ ಶುಕ್ಲ ಪೂರ್ಣಿಮಾ, ಶ್ರಾವಣ ಕೃಷ್ಣಾಷ್ಟಮೀ, ಭಾದ್ರಪದ ಶುಕ್ಲ ತೃತೀಯ, ಆಶ್ವಯುಜ ಶುಕ್ಲ ನವಮೀ, ಕಾರ್ತಿಕ ಶುಕ್ಲ ದ್ವಾದಶಿ, ಕಾರ್ತಿಕ ಪೂರ್ಣಿಮಾ, ಪುಷ್ಯ ಶುಕ್ಲೈಕಾದಶೀ, ಮಾಘ ಶುಕ್ಲಸಪ್ತಮೀ (ರಥಸಪ್ತಮಿ), ಫಾಲ್ಗುನ ಪೂರ್ಣಿಮಾ, ಫಾಲ್ಗುನ ಅಮಾವಾಸ್ಯೆ –ಇವು ಮನ್ವಾದಿಗಳು.

ಮನ್ವಾದಿಶ್ರಾದ್ಧ ತಪ್ಪಿದರೆ ನೀರಿನಲ್ಲಿ ಕುಳಿತು,

**ಓಂ ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾ ಋಷ್ವವೀರಸ್ಯ ಬೃಹತಃ ಪತಿರ್ಭೂಃ। ವಿಶ್ವಮಾಪ್ರಾ ಅಂತರಿಕ್ಷಂ ಮಹಿತ್ವಾ ಸತ್ಯಮದ್ಧಾ ನಕಿರನ್ಯಸ್ತ್ವಾವಾನ್ ॥**

–ಎಂಬ ಮಂತ್ರವನ್ನು ನೂರು ಆವರ್ತಿ ಜಪಿಸಬೇಕು. ಸಂಕಲ್ಪಶ್ರಾದ್ಧ ಮಾಡಿ, ಶ್ರಾದ್ಧ ಮುಗಿದ ಅನಂತರ ತರ್ಪಣಕೊಡಬೇಕು. ಶುಕ್ಲಪಕ್ಷದ ಮನ್ವಾದಿಗಳಲ್ಲಿ ಪೂರ್ವಾಹ್ಣದಲ್ಲೂ

**ಭೀಷಾಽಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ। ಭೀಷಾಽಸ್ಮಾ-ದಗ್ನಿಶ್ಚೇಂದ್ರಶ್ಚ । ಮೃತ್ಯುರ್ಧಾವತಿ ಪಂಚಮ ಇತಿ ॥**

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ ।**

.....ಈ ಎರಡು ಅನುವಾಕ, **'ರಾಮ ಕೃಷ್ಣ ಗೋವಿಂದ......', 'ಕೃಷ್ಣ ರಾಮ ಗೋವಿಂದ ....'** ಎಂದು ದೇವತಾಸ್ಮರಣೆ ಮಾಡಿ, ಅನಂತರ ತಲೆಯಲ್ಲಿರುವ ಕಲಶಪಾತ್ರವನ್ನು ಮಂಡಲದಲ್ಲಿಟ್ಟು ಬ್ರಾಹ್ಮಣರಿಂದ ಮಂತ್ರಾಕ್ಷತೆ ಮಾಡಿಸಿ ಬ್ರಾಹ್ಮಣರಿಗೆ ತನ್ನ ಆರ್ಥಿಕ ಶಕ್ತ್ಯನುಸಾರ ದಕ್ಷಿಣೆ ಕೊಟ್ಟು ಬ್ರಾಹ್ಮಣರಿಂದ ಚಂದನಾಕ್ಷತಪುಷ್ಪವನ್ನು ಸ್ವೀಕರಿಸಿ ಪ್ರದಕ್ಷಿಣೆ ಬಂದು ತೀರ್ಥರಾಜನಿಗೂ ಬ್ರಾಹ್ಮಣರಿಗೂ ನಮಸ್ಕರಿಸಿ,

**ಆನಂದಮಾನಂದಕರಂ ಪ್ರಸನ್ನಂ ಜ್ಞಾನಸ್ವರೂಪಂ ನಿಜಬೋಧರೂಪಮ್ ।**
**ಯೋಗೀಂದ್ರಮೀಡ್ಯಂ ಭವರೋಗವೈದ್ಯಂ ಶ್ರೀಮದ್ಗುರುಂ ನಿತ್ಯಮಹಂ ನಮಾಮಿ ॥**

**ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ।**
**ಗುರುಸ್ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥**

ಬ್ರಾಹ್ಮಣರ ಕೈಯಲ್ಲಿ ತೀರ್ಥಕಲಶವನ್ನು ಕೊಟ್ಟು ಅವರಿಂದ ತೀರ್ಥಪ್ರೋಕ್ಷಣೆ ಮಾಡಿಸಿಕೊಂಡು ಪುನಃ ಬ್ರಾಹ್ಮಣರಿಗೆ ನಮಸ್ಕರಿಸಬೇಕು.

**ಅವಿದ್ಯಾಮೂಲಶಮನಂ ಸರ್ವಪಾಪಪ್ರಣಾಶನಮ್ ।**
**ಗುರುಪಾದೋದಕಂ ತೀರ್ಥಂ ಸಂಸಾರದ್ರುಮನಾಶನಮ್ ॥**

**ಪುತ್ರಾದಿಕಾಮನಾಯಾಂತು**

**ಶೋಷಣಂ ಪಾಪಪಂಕಸ್ಯ ದೀಪನಂ ಜ್ಞಾನತೇಜಸಃ ।**
**ಗುರೋಃ ಪಾದೋದಕಂ ಚಿತ್ರಂ ಪುತ್ರ ಪೌತ್ರ ಪ್ರವರ್ಧನಮ್ ॥**

ಅನಂತರ ಬ್ರಾಹ್ಮಣರನ್ನು ಬೀಳ್ಕೊಡಬೇಕು. ಬಳಿಕ ತಾನು ಪ್ರಸಾದಸೇವನೆ ಮಾಡಬೇಕು.

# ಸಪ್ತಮ ಗುಚ್ಛ

# ಶ್ರಾದ್ಧಪ್ರಕರಣಮ್

## ಷಣ್ಣವತಿಶ್ರಾದ್ಧಾನಿ

ಶ್ರಾದ್ಧವು ನಿತ್ಯನೈಮಿತ್ತಿಕಾದಿ ರೂಪಗಳಿಂದ ತೊಂಬತ್ತಾರು ವಿಧಗಳಲ್ಲಿದೆ.

12 ಅಮಾವಾಸ್ಯಾ, 14 ಮನ್ವಾದಿ, 4 ಯುಗಾದಿ, 12 ಸಂಕ್ರಾಂತಿ, 13 ವ್ಯತೀಪಾತ, 13 ವೈಧೃತಿ, 16 ಮಹಾಲಯ, 12 ತಿಸ್ರಾಷ್ಟಕ –ಹೀಗೆ ತೊಂಬತ್ತಾರು ಶ್ರಾದ್ಧದಿನಗಳು.

### ದರ್ಶಶ್ರಾದ್ಧ

ಸೂರ್ಯಚಂದ್ರರು ಒಂದೇ ರಾಶಿಯಲ್ಲಿರುವ ದಿನ 'ಅಮಾವಾಸ್ಯೆ'ಯು. ೧೮ರಿಂದ ೨೪ ಗಳಿಗೆ ದರ್ಶಬೇಕು. ದರ್ಶಶ್ರಾದ್ಧದಲ್ಲಿ ಮೊದಲು ತರ್ಪಣಕೊಟ್ಟು ಅನಂತರ ಶ್ರಾದ್ಧ ಮಾಡಬೇಕು. ದರ್ಶಶ್ರಾದ್ಧದಲ್ಲಿ ಸಪತ್ನೀಕಪಿತೃವರ್ಗ ಮತ್ತು ಸಪತ್ನೀಕಮಾತಾಮಹವರ್ಗವನ್ನು ಉದ್ದೇಶಿಸಿ ಆರು ಪಿಂಡಗಳನ್ನು ಇಟ್ಟು ಶ್ರಾದ್ಧ ಮಾಡಬೇಕು. ಸಂಕ್ರಮಣಪುಣ್ಯಕಾಲದಲ್ಲಿ ತರ್ಪಣ ಕೊಡಬೇಕು.

### ಮನ್ವಾದಿಶ್ರಾದ್ಧ

ಚೈತ್ರ ಶುಕ್ಲ ತೃತೀಯಾ, ಚೈತ್ರ ಪೂರ್ಣಿಮಾ, ಜ್ಯೇಷ್ಠ ಶುಕ್ಲ ಪೂರ್ಣಿಮಾ, ಆಷಾಢ ಶುಕ್ಲ ದಶಮೀ, ಆಷಾಡ ಶುಕ್ಲ ಪೂರ್ಣಿಮಾ, ಶ್ರಾವಣ ಕೃಷ್ಣಾಷ್ಟಮೀ, ಭಾದ್ರಪದ ಶುಕ್ಲ ತೃತೀಯ, ಆಶ್ವಯುಜ ಶುಕ್ಲ ನವಮೀ, ಕಾರ್ತಿಕ ಶುಕ್ಲ ದ್ವಾದಶೀ, ಕಾರ್ತಿಕ ಪೂರ್ಣಿಮಾ, ಪುಷ್ಯ ಶುಕ್ಲೈಕಾದಶೀ, ಮಾಘ ಶುಕ್ಲಸಪ್ತಮೀ (ರಥಸಪ್ತಮಿ), ಫಾಲ್ಗುನ ಪೂರ್ಣಿಮಾ, ಫಾಲ್ಗುನ ಅಮಾವಾಸ್ಯೆ –ಇವು ಮನ್ವಾದಿಗಳು.

ಮನ್ವಾದಿಶ್ರಾದ್ಧ ತಪ್ಪಿದರೆ ನೀರಿನಲ್ಲಿ ಕುಳಿತು,

**ಓಂ ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾ ಋಷ್ವವೀರಸ್ಯ ಬೃಹತಃ ಪತಿರ್ಭೂಃ। ವಿಶ್ವಮಾಪ್ರಾ ಅಂತರಿಕ್ಷಂ ಮಹಿತ್ವಾ ಸತ್ಯಮದ್ಧಾ ನಕಿರನ್ಯಸ್ತ್ವಾವಾನ್ ॥**

–ಎಂಬ ಮಂತ್ರವನ್ನು ನೂರು ಆವರ್ತಿ ಜಪಿಸಬೇಕು. ಸಂಕಲ್ಪಶ್ರಾದ್ಧ ಮಾಡಿ, ಶ್ರಾದ್ಧ ಮುಗಿದ ಅನಂತರ ತರ್ಪಣಕೊಡಬೇಕು. ಶುಕ್ಲಪಕ್ಷದ ಮನ್ವಾದಿಗಳಲ್ಲಿ ಪೂರ್ವಾಹ್ಣದಲ್ಲೂ

(೧೨ ಘಂಟೆಯ ಒಳಗೆ ಮಾಡಬೇಕು.) ಕೃಷ್ಣಪಕ್ಷದ ಅಪರಾಹ್ಣದಲ್ಲೂ (೧–೩೦ರ ಅನಂತರ ಮಾಡಬೇಕು) ಇಲ್ಲಿ ಪಿತೃತರ್ಪಣವು ಪ್ರಶಸ್ತ.

## ಯುಗಾದಿ

ಕಾರ್ತಿಕ ಶುಕ್ಲ ನವಮೀ – ಕೃತ ಯುಗಾದಿ
ವೈಶಾಖ ಶುಕ್ಲ ತೃತೀಯಾ – ತ್ರೇತಾ ಯುಗಾದಿ (ಅಕ್ಷಯತದಿಗೆ)
ಮಾಘ ಅಮಾವಾಸ್ಯಾ – ದ್ವಾಪರ ಯುಗಾದಿ
ಭಾದ್ರಪದ ಕೃಷ್ಣ ತ್ರಯೋದಶೀ – ಕಲಿ ಯುಗಾದಿ

– ಹೀಗೆ ಈ ನಾಲ್ಕು ಯುಗಾದಿಗಳಲ್ಲಿಯೂ ಶುಕ್ಲಪಕ್ಷದ ಮನ್ವಾದಿಗಳಲ್ಲಿ ಹಾಗೂ ಪೂರ್ವಾಹ್ಣದಲ್ಲೂ, ಕೃಷ್ಣಪಕ್ಷದ ಅಪರಾಹ್ಣದಲ್ಲೂ ಸಂಕಲ್ಪ ಶ್ರಾದ್ಧ ಮಾಡಿ ತರ್ಪಣ ಕೊಡಬೇಕು. ಇಲ್ಲಿ ಪಿತೃತರ್ಪಣವು ಪ್ರಶಸ್ತ.

## ತಿಸ್ರಾಷ್ಟಕ

ಮಾರ್ಗಶೀರ್ಷ, ಪುಷ್ಯ, ಮಾಘ, ಫಾಲ್ಗುಣ, (ಭಾದ್ರಪದ ಮಹಾಲಯದಲ್ಲಿ ಅಂತರ್ಧಾನ ವಾಗಿದೆ.) – ಈ ಮಾಸಗಳಲ್ಲಿ ಕೃಷ್ಣಪಕ್ಷದ ಸಪ್ತಮೀ, ಅಷ್ಟಮೀ, ನವಮೀ –ಇವುಗಳನ್ನು **ತಿಸ್ರಾಷ್ಟಕ** ಎನ್ನುವರು.

## ಅಷ್ಟಕಶ್ರಾದ್ಧ

ತಿಸ್ರಾಷ್ಟಕದ ಅಷ್ಟಮಿಯಲ್ಲಿ ಅಪರಾಹ್ಣವ್ಯಾಪಿನಿಯಾದ ಅಷ್ಟಮೀತಿಥಿ ಇದ್ದ– '**ಅಷ್ಟಕಶ್ರಾದ್ಧ**'.

## ಅನ್ವಷ್ಟಕಶ್ರಾದ್ಧ

ಅಷ್ಟಮಿಯ ಹಿಂದಿನ ಹಾಗೂ ಮಾರನೆಯ ದಿನ– **ಅನ್ವಷ್ಟಕಶ್ರಾದ್ಧ.**

ಈ ಎಲ್ಲಾ ಅಷ್ಟಕಗಳಲ್ಲಿ ಶ್ರಾದ್ಧ ಮಾಡಲಾಗದಿದ್ದ ಪಕ್ಷದಲ್ಲಿ ಮಾಘಮಾಸದಲ್ಲಿ ಯಾದರೂ ಮಾಡಬೇಕು. 'ಅನ್ವಷ್ಟಕಶ್ರಾದ್ಧ'ದಲ್ಲಿ ಭೋಜನ ಮಾಡಿದ ಬ್ರಾಹ್ಮಣರನ್ನು ಬಾಗಿಲಿನ ವರೆಗೆ ಬಿಟ್ಟು ಬಂದು ತರ್ಪಣ ಕೊಟ್ಟು ಶ್ರಾದ್ಧ ಮುಗಿಸಬೇಕು.

ಅಷ್ಟಕಶ್ರಾದ್ಧ ಲೋಪವಾದಲ್ಲಿ ಉಪವಾಸ ಪ್ರಾಯಶ್ಚಿತ್ತ. ಅನ್ವಷ್ಟಕಶ್ರಾದ್ಧ ಲೋಪವಾದಲ್ಲಿ

**ಓಮ್ ಏಭಿರ್ದ್ಯುಭಿಃ ಸುಮನಾ ಏಭಿರಿಂದುಭಿರ್ನಿರುಂಧಾನೋ ಅಮತಿಂ ಗೋಭಿರಶ್ವಿನಾ । ಇಂದ್ರೇಣ ದಸ್ಯುಂ ದರಯಂತ ಇಂದುಭಿರ್ಯುತದ್ವೇಷಸಃ ಸಮಿಷಾ ರಭೇಮಹಿ ॥**

–ಎಂಬ ಮಂತ್ರವನ್ನು ನೂರು ಬಾರಿ ಜಪಿಸಬೇಕು. ಅನ್ವಷ್ಟಕಶ್ರಾದ್ಧದಲ್ಲಿ ಪಿತೃವರ್ಗ, ಮಾತೃವರ್ಗ ಮತ್ತು ಸಪತ್ನೀಕಮಾತಾಮಹವರ್ಗವನ್ನು ಉದ್ದೇಶಿಸಿ ಒಂಬತ್ತು ಪಿಂಡಗಳನ್ನು ಇಟ್ಟು ಶ್ರಾದ್ಧ ಮಾಡಬೇಕು.

ಸಾಂವತ್ಸರಿಕಶ್ರಾದ್ಧದಿನದಂದು ಷಣ್ಣವತಿಶ್ರಾದ್ಧಗಳಲ್ಲಿ ಯಾವುದಾದರೂ ಬಂದರೆ ಮೊದಲು ಸಾಂವತ್ಸರಿಕಶ್ರಾದ್ಧ ಮಾಡಿ ಅನಂತರ ಉಳಿದ ಶ್ರಾದ್ಧ ಮಾಡಬೇಕು. ಒಂದು ವೇಳೆ ಸಂಕ್ರಮಣಶ್ರಾದ್ಧದ ಕಾಲವು ಮುಂಚೆಯೇ ಮುಗಿಯುವ ಪಕ್ಷದಲ್ಲಿ ವಿಹಿತಕಾಲದಲ್ಲಿ ಆ ಶ್ರಾದ್ಧ ಮಾಡಿ ಅನಂತರ ಸಾಂವತ್ಸರಿಕ ಶ್ರಾದ್ಧ ಮಾಡಬೇಕು.

ಷಣ್ಣವತಿಶ್ರಾದ್ಧದಿನಗಳಲ್ಲಿ ಎರಡು ನಿಮಿತ್ತ ಗಳು ಒಂದೇ ದಿನ ಸೇರಿದಾಗ ಎರಡು ನಿಮಿತ್ತವನ್ನು ಸಂಕಲ್ಪಿಸಿ ಒಂದೇ ಬಾರಿ ತರ್ಪಣ ಕೊಡಬೇಕು.

## ಶ್ರಾದ್ಧವಿಧಾಃ

ಶ್ರಾದ್ಧಗಳಲ್ಲಿ ೧೨ ವಿಧದ ಶ್ರಾದ್ಧಗಳನ್ನು ಹೇಳಲಾಗಿದೆ. ೧. ಪ್ರತಿನಿತ್ಯ ಪಿತೃತರ್ಪಣ ಕೊಡುವುದು– **ನಿತ್ಯಶ್ರಾದ್ಧ**; ೨. ಏಕೋದ್ದಿಷ್ಟ ಎಂಬುದು– **ನೈಮಿತ್ತಿಕಶ್ರಾದ್ಧ**; ೩. ಪಿತೃಶಾಪ ಪರಿಹಾರಪೂರ್ವಕ ಶ್ರೇಯಸ್ಸಿಗಾಗಿ ನಡೆಸುವುದು– **ಕಾಮ್ಯಶ್ರಾದ್ಧ**; ೪. ಪುತ್ರಜನನಾದಿ ಸಂಸ್ಕಾರಗಳಲ್ಲಿ– **ವೃದ್ಧಿಶ್ರಾದ್ಧ**; ೫. ಮೃತರನ್ನು ಪಿತೃಪಂಕ್ತಿಪ್ರವೇಶಗೊಳಿಸುವುದಕ್ಕಾಗಿ– **ಸಪಿಂಡೀಕರಣಶ್ರಾದ್ಧ**; ೬. ಸಾಂವತ್ಸರಿಕವಾದುದು–**ಪಾರ್ವಣಶ್ರಾದ್ಧ**; ೭. ವಿದ್ವಾಂಸರು ವಿದ್ವದ್ಗೋಷ್ಠಿ ನಡೆಸುವ ಸಂದರ್ಭದಲ್ಲಿ ಮಾಡುವುದು– **ಗೋಷ್ಠಿಶ್ರಾದ್ಧ**; ೮. ಬ್ರಾಹ್ಮಣರನ್ನು ಭೋಜನದಿಂದ ತೃಪ್ತಿಪಡಿಸುವುದು– **ಶುದ್ಧಿಶ್ರಾದ್ಧ**; ೯. ಸೀಮಂತೋನ್ನಯನಾದಿಗಳಲ್ಲಿ– **ಕರ್ಮಾಂಗಶ್ರಾದ್ಧ**; ೧೦. ದೇವಕಾರ್ಯಾರಂಭದಲ್ಲಿ– **ದೈವಿಕಶ್ರಾದ್ಧ**; ೧೧. ದೇಶಾಂತರ ಪ್ರಯಾಣಕಾಲದಲ್ಲಿ ನಡೆಸುವುದು– **ಯಾತ್ರಾಶ್ರಾದ್ಧ**; ೧೨. ಪುಷ್ಟಿ (ಶಾಂತಿ)ಕರ್ಮಗಳಲ್ಲಿ ನಡೆಸುವುದು– **ಪುಷ್ಟಿಶ್ರಾದ್ಧ**. ಇವಲ್ಲದೆ, **ಸಂಕಲ್ಪಶ್ರಾದ್ಧ, ಆಮಶ್ರಾದ್ಧ, ಹಿರಣ್ಯಶ್ರಾದ್ಧ**ಗಳಲ್ಲಿ ಬ್ರಾಹ್ಮಣರ ಕಾಲು ತೊಳೆದು ಅಕ್ಕಿ, ತೆಂಗಿನಕಾಯಿ, ದಕ್ಷಿಣೆ ಕೊಟ್ಟು ಬ್ರಾಹ್ಮಣರ ಭೋಜನ ಮಾಡಿಸಿ, ಪರೇಽಹನಿ ತರ್ಪಣ ಕೊಡಬೇಕು. ಇಲ್ಲವೇ '**ಉದಕುಂಭಶ್ರಾದ್ಧ**' ಎಂದು ನೀರಿನ ತಂಬಿಗೆಯನ್ನು ದಾನ ಮಾಡಬೇಕು. ಇಷ್ಟಕ್ಕೂ ಶಕ್ತಿ ಇಲ್ಲದಿದ್ದರೆ '**ರೋದನಶ್ರಾದ್ಧ**' ಎಂದು ಮನೆಯಿಂದ ಹೊರಗೆ ಬಂದು, ಕೈಗಳನ್ನು ಆಕಾಶಮುಖವಾಗಿ ಎತ್ತಿಹಿಡಿದು,"ನಾನು ಬಡವ; ನನಗೇನೂ ಗತಿಯಿಲ್ಲ; ಪಿತೃಗಳೇ ತೃಪ್ತರಾಗಿರಿ" ಎಂದು ಪಿತೃಗಳನ್ನು ಪ್ರಾರ್ಥಿಸುವುದು ಅಥವಾ ಹಲಸಿನ ಮರವನ್ನು ತಬ್ಬಿಕೊಂಡು, '**ನ ಮೇ ಅಸ್ತಿ ವಿತ್ತಮ್**' (ಪುಟಸಂಖ್ಯೆ 15) ಎಂದು ಮನಃಪೂರ್ವಕವಾಗಿ ನಿರ್ವಂಚನೆಯಿಂದ 'ನಾನು ದರಿದ್ರ' ಎಂದು ಅಳುವುದರಿಂದ ಪಿತೃಗಳು ತೃಪ್ತಿಯನ್ನು ಹೊಂದುತ್ತಾರೆ. ಇಲ್ಲವೇ ಗೋವಿಗೆ ಮೇವನ್ನು ಕೊಟ್ಟು ಆ ದಿನ ಪೂರ್ತಿ ಉಪವಾಸವಿದ್ದು ಪರೇಽಹನಿತರ್ಪಣವನ್ನು ಕೊಡಬೇಕು. ಸೂರ್ಯಗ್ರಹಣದ ಪೂರ್ವಾರ್ಧದಲ್ಲೂ ಚಂದ್ರಗ್ರಹಣದ ಉತ್ತರಾರ್ಧದಲ್ಲೂ ಸರ್ವ ಪಿತೃಗಳನ್ನುದ್ದೇಶಿಸಿ ಆಮದಾನವನ್ನು ಕೊಡಬೇಕು. ಇಲ್ಲವೇ ಸಂಕಲ್ಪಶ್ರಾದ್ಧ, ಹಿರಣ್ಯಶ್ರಾದ್ಧ ಮಾಡಿ ತರ್ಪಣ ಕೊಡಬೇಕು.

# ಕರ್ತೃನಿಯಮಾಃ

ಶ್ರಾದ್ಧದ ಪಕ್ಷದಲ್ಲಿ ಕ್ಷೌರಾದಿಗಳನ್ನು ಮಾಡದೆ ಕರ್ತೃನಿಯಮವನ್ನು ಪಾಲಿಸಬೇಕು. ಶ್ರಾದ್ಧದ ಹದಿನಾಲ್ಕು ದಿನಗಳ ಹಿಂದೆ ದೇವರ ಎದುರು ಬರ್ಹಿಸ್ಸನ್ನು ಹಿಡಿದು ದೀಕ್ಷಾಬದ್ಧನಾಗಿರುವೆ ಎಂದು ಸಂಕಲ್ಪಿಸಿ ನಿತ್ಯದಲ್ಲಿ ವೇದಪಾರಾಯಣ, ಪವಮಾನಾದಿ ಪಾರಾಯಣ, ಗಾಯತ್ರೀಮಂತ್ರಜಪಾದಿಗಳನ್ನು ಮಾಡಬೇಕು. ಈ ನಿಯಮದ ಪಾಲನೆಯಾಗದೇ ಇದ್ದ ಸಂದರ್ಭದಲ್ಲಿ ಬ್ರಹ್ಮದಂಡವನ್ನು ಇಟ್ಟು ಬ್ರಾಹ್ಮಣರಿಂದ ಶ್ರಾದ್ಧಾಧಿಕಾರವನ್ನು ಪಡೆದುಕೊಳ್ಳಬೇಕು. ಶ್ರಾದ್ಧದ ಪೂರ್ವ ದಿನ ಹಾಗೂ ಶ್ರಾದ್ಧದ ದಿನ ಅಭ್ಯಂಜನ ಮಾಡಬಾರದು. ಪರಾನ್ನ, ಪ್ರತಿಗ್ರಹ, ಸ್ತ್ರೀಸಂಸರ್ಗ, ದಂತಕಾಷ್ಠದಿಂದ ದಂತಧಾವನ ಮಾಡಬಾರದು. ತಾಂಬೂಲಸೇವನೆ, ದ್ವಿಭೋಜನ ಬಿಡಬೇಕು.

ಅನಿವಾರ್ಯವಲ್ಲದೇ ಇದ್ದಲ್ಲಿ ಔಷಧಸೇವನೆ ಸಹ ಮಾಡಬಾರದು. ಚಾ, ಕಾಫಿ, ಇತ್ಯಾದಿ ಪೇಯಗಳನ್ನು ತೆಗೆದುಕೊಳ್ಳಬಾರದು. ಶ್ರಾದ್ಧದ ದಿನ ಪ್ರಯಾಣ ಮಾಡಬಾರದು. ರಜಸ್ವಲೆಯನ್ನು, ಸಕೇಶವಿಧವೆಯರನ್ನು, ಕುಷ್ಠರೋಗಿಗಳನ್ನು, ಶೂದ್ರಾದಿಗಳನ್ನು ನೋಡಬಾರದು, ಸ್ಪರ್ಶ ಮಾಡಬಾರದು. ಕೋಪ ಮಾಡಿಕೊಳ್ಳಬಾರದು, ಕಣ್ಣೀರು ಹಾಕಬಾರದು. ಶ್ರಾದ್ಧಕಾಲದಲ್ಲಿ ಜಾಜಿಹೂವಿನ ಪರಿಮಳ ಬರಬಾರದು. ತಟ್ಟೆಯಲ್ಲಿ ಊಟ ಮಾಡಬಾರದು, ಶ್ರಾದ್ಧದ ಅನಂತರ ಸ್ನಾನ ಮಾಡಬಾರದು ಶ್ರಾದ್ಧ ಮಾಡಿ ಬೇರೆ ಕಡೆ ಊಟಕ್ಕೆ ಹೋಗಬಾರದು.

ಶ್ರಾದ್ಧದ ದಿನ ರಾತ್ರಿ ನೀರನ್ನು ಮಾತ್ರ ಸೇವಿಸಬೇಕು. ಬೇರೆ ಯಾವ ಆಹಾರವನ್ನೂ ಸೇವಿಸಬಾರದು. ಶ್ರಾದ್ಧದ ದಿನ ಹಾಸಿಗೆಯಲ್ಲಿ ಮಲಗದೆ ಚಾಪೆ ಇಲ್ಲವೇ ಕಂಬಳಿಯನ್ನು ಹೊದ್ದು ಮಲಗಬೇಕು. ಊರ್ಧ್ವಪುಂಡ್ರ, ಶಂಖಚಕ್ರಮುದ್ರಾಧಾರಿಯಾಗಿ ಮಾಡಿದ ಶ್ರಾದ್ಧವು ಗಯಾಶ್ರಾದ್ಧಕ್ಕೆ ಸಮವಾಗುತ್ತದೆ.

ಪಿತೃತರ್ಪಣಸಮಯದಲ್ಲಾಗಲೀ, ಹವ್ಯಕವ್ಯಗಳಲ್ಲಾಗಲೀ ನಾಯಿಯ ದರ್ಶನ ಮಾಡಬಾರದು. ನಾಯಿಯು ನೋಡಿದ ಹವಿಸ್ಸನ್ನು ಪಿತೃಗಳಾಗಲೀ ದೇವತೆಗಳಾಗಲೀ ಇಷ್ಟಪಡುವುದಿಲ್ಲ. ಪಿಂಡಪ್ರದಾನಸಮಯದಲ್ಲಿ ಚಂಡಾಲನನ್ನು, ಕಾಷಾಯವಸ್ತ್ರವನ್ನು ಧರಿಸಿರುವವನು, ಕುಷ್ಠರೋಗಿಯು, ಪತಿತನು, ಬ್ರಹ್ಮಹತ್ಯೆ ಮಾಡಿದವನು, ಸಂಕರಯೋನಿಯಲ್ಲಿ ಹುಟ್ಟಿದ ಬ್ರಾಹ್ಮಣನು, ಧರ್ಮಭ್ರಷ್ಟನಾದ ಸಂಬಂಧಿ ಇವರನ್ನು ವಿದ್ವಾಂಸನಾದವನು ಶ್ರಾದ್ಧಕರ್ಮದಲ್ಲಿ ವರ್ಜಿಸಬೇಕು.

ರಜಸ್ವಲೆ ಸ್ತ್ರೀಯಿಂದ ನೋಡಲ್ಪಟ್ಟ ಪಿಂಡವನ್ನು ಸ್ವೀಕರಿಸದೇ ಪಿತೃಗಳು ಮರಳಿ ಹೋಗುತ್ತಾರೆ. ಕಾರಣ, ರಜಸ್ವಲೆಯರು ಶ್ರಾದ್ಧಕ್ರಿಯೆಯನ್ನು ನೋಡುವುದು ನಿಷಿದ್ಧ. ಅವರು ಆ ಸ್ಥಳದಲ್ಲಿ ಇರಕೂಡದು.

ಕೆಲವು ಮಹಾದೋಷಗಳು ಸಂಭವಿಸದಂತೆ ಕರ್ತೃಗಳೂ ನಿಮಂತ್ರಿತ ವಿಪ್ರರೂ, ಹಿಂದಿನ ದಿನ ರಾತ್ರಿಯಿಂದಲೇ ಕಟ್ಟುನಿಟ್ಟಾಗಿ ಇರಬೇಕು. ಮೇಲೆ ತಿಳಿಸಿದ ಕರ್ತೃ, ಭೋಕ್ತೃಗಳಲ್ಲಿ ಯಾರಿಗೂ ಶ್ರಾದ್ಧಸಮಯದಲ್ಲಿ ವಾಂತಿ ಆಗಲೇಕೂಡದು. ಪರಸ್ಪರ

ಎಲೆಯ ಎಂಜಲು ತಾಕಬಾರದು. ಯಾರ ಮಧ್ಯದಲ್ಲಿಯೂ, ಬೆಕ್ಕು, ಕಪ್ಪೆ, ಇಲಿ, ಮನುಷ್ಯರಾಗಲಿ ಬರಬಾರದು ಹಾಗೂ ಕರ್ಮಸಂದರ್ಭದಲ್ಲಿ ಯಾರ ಜನಿವಾರವೂ ಹರಿದುಹೋಗಬಾರದು. ಕಟ್ಟಿದ ಪಿಂಡಗಳು ಒಡೆದುಹೋಗಬಾರದು. ಇವುಗಳಿಗೆ ಮಹಾ ಅನರ್ಥಗಳೇ ಫಲಗಳು. ಪರಿಹಾರವೂ ಕಷ್ಟಸಾಧ್ಯ. ಆದ ಕಾರಣ ಯಾವ ಕಾರಣದಿಂದಲೂ ಇಂತಹ ದೋಷಗಳು ಸಂಭವಿಸದಂತೆ ಎಲ್ಲರೂ ಎಚ್ಚರಿಕೆಯಿಂದ ಇರುವುದು ಸೂಕ್ತ.

ಬ್ರಾಹ್ಮಣವಿಸರ್ಜನಕ್ಕೆ ಮುಂಚೆ ನಿತ್ಯಕರ್ಮವನ್ನು ಬಿಟ್ಟು ಉಳಿದ ದಾನ, ಅಧ್ಯಯನ, ವ್ರತ, ಹೋಮ, ಜಪ –ಇವುಗಳನ್ನು ಮಾಡಬಾರದು. ಶಿಖೆಯುಳ್ಳವರು ಬಿಚ್ಚದಂತೆ ಭದ್ರವಾಗಿ ಗಂಟು ಹಾಕಿಕೊಳ್ಳಬೇಕು.

ಕೆಲವರಲ್ಲಿ ಹಿಂದಿನ ದಿನವೇ ಪಂಚಗವ್ಯಪ್ರಾಶನ ಮಾಡಿ, ಜನಿವಾರವನ್ನೂ ಹಾಕಿಕೊಳ್ಳುವ ರೂಢಿಯಿಟ್ಟುಕೊಂಡಿರುತ್ತಾರೆ. ಇದು ಒಳ್ಳೆಯ ಪದ್ಧತಿ.

ಕರ್ತೃವು ಬ್ರಹ್ಮಚಾರಿಯಾಗಿದ್ದರೆ ಕೌಪೀನ ಧರಿಸಿ, ಅಡ್ಡಪಂಚೆಯನ್ನುಡಬೇಕು. ಗೃಹಸ್ಥರಾಗಿದ್ದರೆ 'ಪಂಚಕಚ್ಚೆ' ಉಡಬೇಕು. ನಾಭಿ, ಹಿಂದೆ, ಎಡ, ಬಲಪಕ್ಕ ನಾಭಿಸ್ಥಾನದಲ್ಲಿ ಇನ್ನೊಂದು ಬಾರಿ –ಹೀಗೆ ಐದು ಸ್ಥಳಗಳಲ್ಲಿ ಸಿಕ್ಕಿಸಿಕೊಂಡಿರಬೇಕು. ಉತ್ತರೀಯಾರ್ಥವಾಗಿ ಒಂದು ಬಟ್ಟೆ ಇಟ್ಟುಕೊಳ್ಳಬೇಕು. ಅಂಚುಳ್ಳ ಬಿಳಿ ಬಟ್ಟೆಗಳು ಶ್ರೇಷ್ಠ. ತ್ರಿಕಚ್ಚೆ, ಪುಚ್ಛಕಚ್ಚೆ, ಅಲ್ಲದೆ, ಬಣ್ಣಬಣ್ಣದ ಬಟ್ಟೆಗಳೂ ಕೂಡದು.

ಶ್ರಾದ್ಧದ ಸಂದರ್ಭದಲ್ಲಿ ಹಾವುಗೆಮೆಟ್ಟು, ಛತ್ರ, ನಾನಾ ವಿಧದ ಬಣ್ಣದ ಬಟ್ಟೆ, ಕೆಂಪಾದ ವಸ್ತ್ರ ಉಡುವುದು, ಕೆಂಪುಬಣ್ಣದ ಹೂ, ಬೆಕ್ಕು –ಇವುಗಳ ಸಂಪರ್ಕವಿರಬಾರದು. ಇವುಗಳನ್ನು ಸರ್ವಥಾ ಉಪಯೋಗಿಸಬಾರದೆಂದು ತಾತ್ಪರ್ಯ

## ಬ್ರಾಹ್ಮಣಲಕ್ಷಣಮ್

ಮಗಳ ಮಗ, ತಂಗಿಯ ಮಗ, ಮಗಳ ಗಂಡ, ಮಾವ, ಶಿಷ್ಯ ಇವರು ಅತ್ಯುತ್ತಮ. ಇಲ್ಲವಾದರೆ ಬೇರೆ ಗೋತ್ರದವನು, ವೇದಶಾಸ್ತ್ರಜ್ಞ, ಸತ್ಕುಲೀನ, ಸಪತ್ನೀಕನು ಹಾಗೂ ಹೆಂಡತಿಯು ಗರ್ಭಿಣಿ ಇಲ್ಲವೇ ರಜಸ್ವಲೆಯಾಗಿಲ್ಲದವನು, ಕುಷ್ಠಾದಿರೋಗವಿಲ್ಲದವನು, ಅಂಗವೈರೂಪ್ಯಶೂನ್ಯನು, ಸದಾಚಾರವಂತನೂ ಆಗಿರಬೇಕು. ಹಾಗೂ ಊರ್ಧ್ವಪುಂಡ್ರ, ಶಂಖಚಕ್ರಾದಿಮುದ್ರೆಗಳನ್ನು ಧರಿಸಿದ್ದವನಾಗಿದ್ದರೆ ಪಿತೃಗಳು ಕೋಟಿಕಲ್ಪಾಂತದವರೆಗೆ ತೃಪ್ತರಾಗುತ್ತಾರೆ. ದಯಾಳುವಾಗಿಯೂ, ಲಜ್ಜಾಶೀಲನಾಗಿಯೂ, ಸರಳ ಸತ್ಯನಿಷ್ಠನೂ, ತ್ರಿಸಂಧ್ಯೆಗಳಲ್ಲಿ ಗಾಯತ್ರೀಮಂತ್ರವನ್ನು ಜಪಿಸುವವನು, ಭಿಕ್ಷಾವೃತ್ತಿಯಿಂದ ಜೀವಿಸುವವನು, ಕ್ರಿಯನಿಷ್ಠನು ಆದ ಬ್ರಾಹ್ಮಣನು ಶ್ರಾದ್ಧಕರ್ಮದಲ್ಲಿ ಯೋಗ್ಯನಾಗಿದ್ದಾನೆ.

ತಂದೆ – ಮಕ್ಕಳು, ಅಣ್ಣ– ತಮ್ಮಂದಿರು, ಮೃತರ ಹೆಣ್ಣು ಕೊಟ್ಟ ಮಾವ, ಶ್ರಾದ್ಧಭೋಜನಕ್ಕೆ ಪ್ರಶಸ್ತರಲ್ಲ. ಪತಿತನಾಗಿರುವ, ಜಡನಾಗಿರುವ, ಉನ್ಮತ್ತರಾಗಿರುವ ಬ್ರಾಹ್ಮಣ, ತೊನ್ನುರೋಗಿ, ನಪುಂಸಕ, ಕ್ಷಯರೋಗಿ, ಮೂರ್ಛರೋಗಿ, ಕುರುಡ, ಶೂದ್ರರಿಗೆ, ಯಜ್ಞ ಮಾಡಿಸುವವ,

ಶೂದ್ರರಿಗೆ ಅಧ್ಯಯನ ಮಾಡಿಸುವವ, ಶೂದ್ರರೇ ಶಿಷ್ಯರಾಗಿ ಉಳ್ಳವ, ಬಡ್ಡಿಗಾಗಿ ಹಣಕೊಡುವ, ಹೆಚ್ಚು ಬಡ್ಡಿಯನ್ನು ಕೊಡುವ, ಪ್ರಾಣಿಗಳ ಕ್ರಯವಿಕ್ರಯ ಮಾಡುವವ, ಯಾರು ಹೆಂಗುಸರಿಗೆ ಪ್ರಾಧಾನ್ಯ ಕೊಟ್ಟು ಅವರ ಅಡಿಯಾಳಾಗಿರುವವನು, ಶಸ್ತ್ರಾಸ್ತ್ರ ತಯಾರಿಸಿ ಜೀವನ ಮಾಡುವವನು ಮತ್ತು ಸಂಧ್ಯಾ ಗಾಯತ್ರೀಜಪ ಮಾಡದವನು ಅಂತಹ ಬ್ರಾಹ್ಮಣನು ಸದಾಚಾರಸಂಪನ್ನನಾಗಿ, ಅನಂತರ ನೀಚವರ್ಣದ ಸ್ತ್ರೀಯನ್ನು ಪರಿಗ್ರಹ ಮಾಡಿದರೆ ಅಂತಹ ಬ್ರಾಹ್ಮಣನು ಸಕಲವಿದ್ಯಾಪಾರಂಗತನಾಗಿದ್ದರೂ ಶ್ರಾದ್ಧಕರ್ಮದಲ್ಲಿ ಆಮಂತ್ರಣಕ್ಕೆ ಅಯೋಗ್ಯನೆನಿಸುತ್ತಾನೆ. ಇಂತಹ ಬ್ರಾಹ್ಮಣರು ಶ್ರಾದ್ಧಕರ್ಮದಲ್ಲಿ ಆಮಂತ್ರಣಕ್ಕೆ ಅಯೋಗ್ಯರೆನಿಸುತ್ತಾರೆ.

## ನಿಮಂತ್ರಿತ ಬ್ರಾಹ್ಮಣಾನಾಂ ನಿಯಮಾಃ

ಪೂರ್ವದಿನದಲ್ಲಿ ಕ್ಷಣಬ್ರಾಹ್ಮಣನ ರಾತ್ರಿ ಭೋಜನದ ಅನಂತರ ಆತನನ್ನು ಯಜಮಾನ ನಿಮಂತ್ರಿಸಿದರೆ ಆತ ರಾತ್ರಿಯಲ್ಲಿ ಪುನರ್ಭೋಜನ ಮಾಡಬಾರದು. ಅಭ್ಯಂಗ, ಪ್ರಯಾಣ, ಅಧ್ಯಯನ, ದಾನಸ್ವೀಕಾರ, ಹೋಮ –ಇವುಗಳನ್ನೆಲ್ಲ ಬಿಡಬೇಕು. ಕ್ಷಣಬ್ರಾಹ್ಮಣನು ಬ್ರಹ್ಮಚರ್ಯದಲ್ಲಿಯೇ ಇದ್ದು ಮರುದಿನ ಬೆಳಗ್ಗೆ ಸ್ನಾನಮಾಡಿ, ಊರ್ಧ್ವಪುಂಡ್ರಧಾರಣೆ ಹಾಗೂ ಪಂಚಮುದ್ರಾಧಾರಣೆ ಮಾಡಿದವನಾಗಿ ಮಾಧ್ಯಾಹ್ನಿಕಪರ್ಯಂತ ನಿತ್ಯವಿಧಿಗಳನ್ನು ಮಾಡಿ ಶುಚಿರ್ಭೂತನಾಗಿ, ಶ್ರಾದ್ಧಭೋಜನ ಮಾಡಿ ತೃಪ್ತನಾಗಿ, ಸಂಜೆಯ ಗಾಯತ್ರೀಜಪದ ಅಧಿಕಾರಪ್ರಾಪ್ತಿಯಾಗಬೇಕಾದರೆ ಶ್ರಾದ್ಧಭೋಜನವಾದಮೇಲೆ ಕೈಯಲ್ಲಿ ನೀರು ಹಿಡಿದು, ಹತ್ತು ಬಾರಿ ಗಾಯತ್ರೀಮಂತ್ರ ಅಭಿಮಂತ್ರಿಸಿ ಕುಡಿಯಬೇಕು. ರಾತ್ರಿ ಸಂಧ್ಯಾವಂದನೆ ಮಾತ್ರ ಮಾಡಿ, ರಾತ್ರಿಯ ದೇವಪೂಜೆ, ರಾತ್ರಿಭೋಜನ ಹಾಗೂ ತಾಂಬೂಲಸೇವನೆಯನ್ನು ಮಾಡದೆ ಬ್ರಹ್ಮಚರ್ಯದಲ್ಲಿದ್ದು ಮರುದಿನ ಬೆಳಗ್ಗೆ ಸ್ನಾನಮಾಡಿ ಕ್ಷಣಭೋಜನ ಪ್ರಾಯಶ್ಚಿತ್ತಕ್ಕಾಗಿ ೧೦೦ ಬ್ರಹ್ಮಗಾಯತ್ರೀಜಪ ಮಾಡಬೇಕು. ಸಪಿಂಡೀಕರಣ ಕ್ಷಣ ಭೋಜನಪ್ರಾಯಶ್ಚಿತ್ತಕ್ಕಾಗಿ ೧೦೦೦ ಬ್ರಹ್ಮಗಾಯತ್ರೀಜಪ ಮಾಡಬೇಕು.

## ಶ್ರಾದ್ಧಕಾಲಃ

ದಿವಾಮಾನವನ್ನು ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ಣ, ಸಾಯಾಹ್ನ ಎಂದು ಐದು ಭಾಗ ಮಾಡಿ, ಮೃತತಿಥಿಯು ನಾಲ್ಕನೆಯ ಅಪರಾಹ್ಣದಲ್ಲಿ ಯಾವ ದಿನ ಅಧಿಕವಿರುತ್ತದೋ ಅಂದು ಶ್ರಾದ್ಧ ಕರ್ತವ್ಯ.

ಹಗಲಿನ ಎಂಟನೆಯ ಮುಹೂರ್ತ ಎಂದರೆ ೧೫-೧೬ನೆಯ ಗಳಿಗೆಗೆ ಒದಗುವ **ಕುತಪ**ಕಾಲದಲ್ಲಿ ಶ್ರಾದ್ಧಮಾಡಲು ತೊಡಗಬೇಕು. ಶ್ರಾದ್ಧತಿಥಿ ಸಾಮಾನ್ಯವಾಗಿ ೨೪ ಘಳಿಗೆಗೆ ಕಡಿಮೆಯಾಗಿರಕೂಡದು.

**'ಚತುರ್ಭಿಶ್ಚ ........ ಪ್ರಸೀದತು ॥'** ಎಂಬ ಮಂತ್ರವು ಕುತಪಕಾಲದ ಘಳಿಗೆಯನ್ನು ಹೋಮಮಂತ್ರಗಳ ಅಕ್ಷರಸಂಖ್ಯೆಯಿಂದ ತಿಳಿಸಿದೆ. **'ಆಶ್ರಾವಯ'** – ೪, **'ಅಸ್ತು**

**ಶ್ರೌಷಟ್'** – ೪, **'ಯಜ'** – ೨, **'ಯೇ ಯಜಾಮಹೇ'** – ೫, **'ವೌಷಟ್'** – ೨, ಒಟ್ಟು ೧೭. ಈ ೧೭ ಎಂಬ ಸಂಖ್ಯೆಯು, ಸೂರ್ಯೋದಯಾನಂತರ ೧೬ ಘಳಿಗೆಗಳು ಅಂದರೆ ೬ ಘಂಟೆ ೨೪ ನಿಮಿಷಗಳು ಕಳೆದು, ೧೭ನೇ ಘಳಿಗೆ ಪ್ರಾರಂಭವನ್ನು ಸೂಚಿಸುತ್ತದೆ. ಇದೇ **'ಕುತಪ'**ಕಾಲ.

ಸಾಮಾನ್ಯವಾಗಿ ೬ ಗಂಟೆಗೆ ಸೂರ್ಯೋದಯವಾದರೆ ೧೨–೨೫ಕ್ಕೆ **'ಕುತಪಕಾಲ'** ಬರುತ್ತದೆ. ಹಾಗಾಗಿ ೧೨–೨೫ರ ಒಳಗೆ ಬ್ರಾಹ್ಮಣಪಾದಪ್ರಕ್ಷಾಲನಾದಿಗಳನ್ನು ಮುಗಿಸಿ, ಶ್ರಾದ್ಧದ ಪ್ರಧಾನಾಂಗವನ್ನು ಪ್ರಾರಂಭಿಸಬೇಕು ಹಾಗೂ ಯಾವ ದಿನದಲ್ಲಿಯಾದರೂ ಸರಿ ಘಂಟೆ ೩–೩೦ರ ಒಳಗೆ ಶ್ರಾದ್ಧ ಮುಗಿದು ಕರ್ತೃವಿನ ಭೋಜನವೂ ಮುಗಿಯಬೇಕು. ೩–೩೦ರ ಅನಂತರ ಕಾಲಕ್ಕೆ ರಾಕ್ಷಸಕಾಲ ಎಂದು ಕರೆಯುತ್ತಾರೆ. ಈ ಕಾಲದಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳು ಸ್ವೀಕರಿಸುವುದಿಲ್ಲ.

ಎರಡು ದಿನಗಳಲ್ಲಿಯೂ ಅಪರಾಹ್ಣವ್ಯಾಪಿನೀ ಮೃತತಿಥಿಯು ಸಾಮ್ಯವಾಗಿದ್ದರೆ ಪೂರ್ವೋತ್ತರತಿಥಿಘಟಿಕಾ ನೋಡಿಕೊಂಡು ಕ್ಷಯತಿಥಿ ಬಂದರೆ ಪೂರ್ವದಿನ, ವೃದ್ಧಿ ತಿಥಿ ಬಂದರೆ ಮರುದಿನ, ಶ್ರಾದ್ಧ ಕರ್ತವ್ಯ.

ಏಕಾದಶೀತಿಥಿಯಲ್ಲಿ ಮೃತನಾದವನಿಗೆ, (ಮರಣಕಾಲದಲ್ಲಿ ಏಕಾದಶಿ ಇದ್ದರೆ ಅಂತಹವನಿಗೆ) ವಿದ್ಧೈಕಾದಶೀ ಬಂದಲ್ಲಿ ಮಾತ್ರ ಅಥವಾ ಸ್ವಲ್ಪ ದಶಮೀಯಿದ್ದು ಆ ಮೇಲೆ ಏಕಾದಶೀ ಬಂದಲ್ಲಿ ಈ ಎರಡು ತಿಥಿಗಳಲ್ಲಿಯೂ ಉಪವಾಸವಿಲ್ಲದಿರುವುದರಿಂದ ಇಂತಹ ದಶಮೀ ದಿನವೇ ಶ್ರಾದ್ಧ ಕರ್ತವ್ಯ, ಇತರ ಸಂದರ್ಭದಲ್ಲಿ ದ್ವಾದಶೀ ದಿನವೇ ಕರ್ತವ್ಯ. ಶ್ರಾದ್ಧವನ್ನು ಉಪವಾಸದಿನದಲ್ಲಿ ಆಚರಿಸಕೂಡದು. ಉಪವಾಸದಂದು ಮಾಡಿದರೆ ಮಾಡಿದವರಿಗೂ ಉಂಡವರಿಗೂ ಪಿತೃಗಳಿಗೂ ದುರ್ಗತಿಯಾಗುವುದು.

## ಶ್ರಾದ್ಧೋಪಯುಕ್ತಪಾತ್ರಾಣಿ

ಶ್ರಾದ್ಧಕರ್ಮಕ್ಕೆ ಉಪಯೋಗಿಸುವ ಪಾತ್ರೆಗಳು ಬೆಳ್ಳಿಯವೇ ಆಗಿರಬೇಕು. ಬೆಳ್ಳಿಯು ರುದ್ರದೇವರ ಕಣ್ಣಿನಿಂದ ಹುಟ್ಟಿದೆ. ಪಿತೃಗಳಿಗೆ ಈ ಧಾತುವು ಅತ್ಯಂತ ಪ್ರಿಯವಾಗಿದೆ. ಆದ್ದರಿಂದಲೇ ದೇವಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡುವ ಸಂದರ್ಭದಲ್ಲಿ ಸುವರ್ಣವನ್ನು ಕೊಟ್ಟರೆ ಪಿತೃಬ್ರಾಹ್ಮಣರಿಗೆ ಬೆಳ್ಳಿಯನ್ನು ಕೊಡುವುದುಂಟು. ಪಿತೃಗಳಿಗೆ ಅನ್ನನಿರ್ದೇಶನ ಮಾಡುವಾಗ 'ರಜತಮಯಪಾತ್ರೇ ಸ್ಥಿತಮನ್ನಂ' ಎಂದು ಹೇಳಲಾಗುತ್ತದೆ. ಆದುದರಿಂದ ಪಿತೃಕಾರ್ಯಗಳಿಗೆ ಬೆಳ್ಳಿಯ ಪ್ರಾತೆಗಳು ಅವಶ್ಯ ಹಾಗೂ ಅನಿವಾರ್ಯ. ಬೆಳ್ಳಿಯ ಪಾತ್ರೆಗಳನ್ನು ಸಂಗ್ರಹ ಮಾಡುವ ಶಕ್ತಿ ಇಲ್ಲದಿದ್ದರೆ ಒಂದಾದರೂ ಬೆಳ್ಳಿಯ ಪಾತ್ರೆಯನ್ನು ಇಟ್ಟು ಉಳಿದವುಗಳನ್ನು ತಾಮ್ರ ಅಥವಾ ಹಿತ್ತಾಳೆಯ ಪಾತ್ರೆಗಳನ್ನು ಪಿತೃಕಾರ್ಯದಲ್ಲಿ ಉಪಯೋಗಿಸಬೇಕು.

ಶ್ರಾದ್ಧಕಾರ್ಯದಲ್ಲಿ ಹಾಗೂ ಶ್ರಾದ್ಧದ ಅಡುಗೆಕೋಣೆಯಲ್ಲಿ ಕಣ್ಣಿಗೆ ಕಾಣುವಂತೆ ಕಬ್ಬಿಣದ ಅಗ್ನಿಷ್ಟಿಕೆ ಬಿಟ್ಟು ಉಳಿದ ಕಬ್ಬಿಣ ಅಥವಾ ಸ್ಟೀಲ್‌ಪಾತ್ರೆಗಳನ್ನು, ಸೌಟನ್ನು

ಶೂದ್ರರಿಗೆ ಅಧ್ಯಯನ ಮಾಡಿಸುವವ, ಶೂದ್ರರೇ ಶಿಷ್ಯರಾಗಿ ಉಳ್ಳವ, ಬಡ್ಡಿಗಾಗಿ ಹಣಕೊಡುವ, ಹೆಚ್ಚು ಬಡ್ಡಿಯನ್ನು ಕೊಡುವ, ಪ್ರಾಣಿಗಳ ಕ್ರಯವಿಕ್ರಯ ಮಾಡುವವ, ಯಾರು ಹೆಂಗುಸರಿಗೆ ಪ್ರಾಧಾನ್ಯ ಕೊಟ್ಟು ಅವರ ಅಡಿಯಾಳಾಗಿರುವವನು, ಶಸ್ತ್ರಾಸ್ತ್ರ ತಯಾರಿಸಿ ಜೀವನ ಮಾಡುವವನು ಮತ್ತು ಸಂಧ್ಯಾ ಗಾಯತ್ರೀಜಪ ಮಾಡದವನು ಅಂತಹ ಬ್ರಾಹ್ಮಣನು ಸದಾಚಾರಸಂಪನ್ನನಾಗಿ, ಅನಂತರ ನೀಚವರ್ಣದ ಸ್ತ್ರೀಯನ್ನು ಪರಿಗ್ರಹ ಮಾಡಿದರೆ ಅಂತಹ ಬ್ರಾಹ್ಮಣನು ಸಕಲವಿದ್ಯಾಪಾರಂಗತನಾಗಿದ್ದರೂ ಶ್ರಾದ್ಧಕರ್ಮದಲ್ಲಿ ಆಮಂತ್ರಣಕ್ಕೆ ಅಯೋಗ್ಯನೆನಿಸುತ್ತಾನೆ. ಇಂತಹ ಬ್ರಾಹ್ಮಣರು ಶ್ರಾದ್ಧಕರ್ಮದಲ್ಲಿ ಆಮಂತ್ರಣಕ್ಕೆ ಅಯೋಗ್ಯರೆನಿಸುತ್ತಾರೆ.

## ನಿಮಂತ್ರಿತ ಬ್ರಾಹ್ಮಣಾನಾಂ ನಿಯಮಾಃ

ಪೂರ್ವದಿನದಲ್ಲಿ ಕ್ಷಣಬ್ರಾಹ್ಮಣನ ರಾತ್ರಿ ಭೋಜನದ ಅನಂತರ ಆತನನ್ನು ಯಜಮಾನ ನಿಮಂತ್ರಿಸಿದರೆ ಆತ ರಾತ್ರಿಯಲ್ಲಿ ಪುನರ್ಭೋಜನ ಮಾಡಬಾರದು. ಅಭ್ಯಂಗ, ಪ್ರಯಾಣ, ಅಧ್ಯಯನ, ದಾನಸ್ವೀಕಾರ, ಹೋಮ –ಇವುಗಳನ್ನೆಲ್ಲ ಬಿಡಬೇಕು. ಕ್ಷಣಬ್ರಾಹ್ಮಣನು ಬ್ರಹ್ಮಚರ್ಯದಲ್ಲಿಯೇ ಇದ್ದು ಮರುದಿನ ಬೆಳಗ್ಗೆ ಸ್ನಾನಮಾಡಿ, ಊರ್ಧ್ವಪುಂಡ್ರಧಾರಣೆ ಹಾಗೂ ಪಂಚಮುದ್ರಾಧಾರಣೆ ಮಾಡಿದವನಾಗಿ ಮಾಧ್ಯಾಹ್ನಿಕಪರ್ಯಂತ ನಿತ್ಯವಿಧಿಗಳನ್ನು ಮಾಡಿ ಶುಚಿರ್ಭೂತನಾಗಿ, ಶ್ರಾದ್ಧಭೋಜನ ಮಾಡಿ ತೃಪ್ತನಾಗಿ, ಸಂಜೆಯ ಗಾಯತ್ರೀಜಪದ ಅಧಿಕಾರಪ್ರಾಪ್ತಿಯಾಗಬೇಕಾದರೆ ಶ್ರಾದ್ಧಭೋಜನವಾದಮೇಲೆ ಕೈಯಲ್ಲಿ ನೀರು ಹಿಡಿದು, ಹತ್ತು ಬಾರಿ ಗಾಯತ್ರೀಮಂತ್ರ ಅಭಿಮಂತ್ರಿಸಿ ಕುಡಿಯಬೇಕು. ರಾತ್ರಿ ಸಂಧ್ಯಾವಂದನೆ ಮಾತ್ರ ಮಾಡಿ, ರಾತ್ರಿಯ ದೇವಪೂಜೆ, ರಾತ್ರಿಭೋಜನ ಹಾಗೂ ತಾಂಬೂಲಸೇವನೆಯನ್ನು ಮಾಡದೆ ಬ್ರಹ್ಮಚರ್ಯದಲ್ಲಿದ್ದು ಮರುದಿನ ಬೆಳಗ್ಗೆ ಸ್ನಾನಮಾಡಿ ಕ್ಷಣಭೋಜನ ಪ್ರಾಯಶ್ಚಿತ್ತಕ್ಕಾಗಿ ೧೦೦ ಬ್ರಹ್ಮಗಾಯತ್ರೀಜಪ ಮಾಡಬೇಕು. ಸಪಿಂಡೀಕರಣ ಕ್ಷಣ ಭೋಜನಪ್ರಾಯಶ್ಚಿತ್ತಕ್ಕಾಗಿ ೧೦೦೦ ಬ್ರಹ್ಮಗಾಯತ್ರೀಜಪ ಮಾಡಬೇಕು.

## ಶ್ರಾದ್ಧಕಾಲಃ

ದಿವಾಮಾನವನ್ನು ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ಣ, ಸಾಯಾಹ್ನ ಎಂದು ಐದು ಭಾಗ ಮಾಡಿ, ಮೃತತಿಥಿಯು ನಾಲ್ಕನೆಯ ಅಪರಾಹ್ಣದಲ್ಲಿ ಯಾವ ದಿನ ಅಧಿಕವಿರುತ್ತದೋ ಅಂದು ಶ್ರಾದ್ಧ ಕರ್ತವ್ಯ.

ಹಗಲಿನ ಎಂಟನೆಯ ಮುಹೂರ್ತ ಎಂದರೆ ೧೫–೧೬ನೆಯ ಗಳಿಗೆಗೆ ಒದಗುವ **ಕುತಪ**ಕಾಲದಲ್ಲಿ ಶ್ರಾದ್ಧಮಾಡಲು ತೊಡಗಬೇಕು. ಶ್ರಾದ್ಧತಿಥಿ ಸಾಮಾನ್ಯವಾಗಿ ೨೪ ಘಳಿಗೆಗೆ ಕಡಿಮೆಯಾಗಿರಕೂಡದು.

'**ಚತುರ್ಭಿಶ್ಚ ........ ಪ್ರಸೀದತು** ॥' ಎಂಬ ಮಂತ್ರವು ಕುತಪಕಾಲದ ಘಳಿಗೆಯನ್ನು ಹೋಮಮಂತ್ರಗಳ ಅಕ್ಷರಸಂಖ್ಯೆಯಿಂದ ತಿಳಿಸಿದೆ. '**ಆಶ್ರಾವಯ**' – ೪, '**ಅಸ್ತು**

**ಶ್ರೌಷಟ್'** – ೪, **'ಯಜ'** – ೨, **'ಯೇ ಯಜಾಮಹೇ'** – ೫, **'ವೌಷಟ್'** – ೨, ಒಟ್ಟು ೧೭. ಈ ೧೭ ಎಂಬ ಸಂಖ್ಯೆಯು, ಸೂರ್ಯೋದಯಾನಂತರ ೧೬ ಘಳಿಗೆಗಳು ಅಂದರೆ ೬ ಘಂಟೆ ೨೪ ನಿಮಿಷಗಳು ಕಳೆದು, ೧೭ನೇ ಘಳಿಗೆ ಪ್ರಾರಂಭವನ್ನು ಸೂಚಿಸುತ್ತದೆ. ಇದೇ **'ಕುತಪ'**ಕಾಲ.

ಸಾಮಾನ್ಯವಾಗಿ ೬ ಗಂಟೆಗೆ ಸೂರ್ಯೋದಯವಾದರೆ ೧೨–೨೫ಕ್ಕೆ **'ಕುತಪಕಾಲ'** ಬರುತ್ತದೆ. ಹಾಗಾಗಿ ೧೨–೨೫ರ ಒಳಗೆ ಬ್ರಾಹ್ಮಣಪಾದಪ್ರಕ್ಷಾಲನಾದಿಗಳನ್ನು ಮುಗಿಸಿ, ಶ್ರಾದ್ಧದ ಪ್ರಧಾನಾಂಗವನ್ನು ಪ್ರಾರಂಭಿಸಬೇಕು ಹಾಗೂ ಯಾವ ದಿನದಲ್ಲಿಯಾದರೂ ಸರಿ ಘಂಟೆ ೩–೩೦ರ ಒಳಗೆ ಶ್ರಾದ್ಧ ಮುಗಿದು ಕರ್ತೃವಿನ ಭೋಜನವೂ ಮುಗಿಯಬೇಕು. ೩–೩೦ರ ಅನಂತರ ಕಾಲಕ್ಕೆ ರಾಕ್ಷಸಕಾಲ ಎಂದು ಕರೆಯುತ್ತಾರೆ. ಈ ಕಾಲದಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳು ಸ್ವೀಕರಿಸುವುದಿಲ್ಲ.

ಎರಡು ದಿನಗಳಲ್ಲಿಯೂ ಅಪರಾಹ್ಣವ್ಯಾಪಿನೀ ಮೃತತಿಥಿಯು ಸಾಮ್ಯವಾಗಿದ್ದರೆ ಪೂರ್ವೋತ್ತರತಿಥಿಘಟಿಕಾ ನೋಡಿಕೊಂಡು ಕ್ಷಯತಿಥಿ ಬಂದರೆ ಪೂರ್ವದಿನ, ವೃದ್ಧಿ ತಿಥಿ ಬಂದರೆ ಮರುದಿನ, ಶ್ರಾದ್ಧ ಕರ್ತವ್ಯ.

ಏಕಾದಶೀತಿಥಿಯಲ್ಲಿ ಮೃತನಾದವನಿಗೆ, (ಮರಣಕಾಲದಲ್ಲಿ ಏಕಾದಶಿ ಇದ್ದರೆ ಅಂತಹವನಿಗೆ) ವಿದ್ಧೈಕಾದಶೀ ಬಂದಲ್ಲಿ ಮಾತ್ರ ಅಥವಾ ಸ್ವಲ್ಪ ದಶಮೀಯಿದ್ದು ಆ ಮೇಲೆ ಏಕಾದಶೀ ಬಂದಲ್ಲಿ ಈ ಎರಡು ತಿಥಿಗಳಲ್ಲಿಯೂ ಉಪವಾಸವಿಲ್ಲದಿರುವುದರಿಂದ ಇಂತಹ ದಶಮೀ ದಿನವೇ ಶ್ರಾದ್ಧ ಕರ್ತವ್ಯ, ಇತರ ಸಂದರ್ಭದಲ್ಲಿ ದ್ವಾದಶೀ ದಿನವೇ ಕರ್ತವ್ಯ. ಶ್ರಾದ್ಧವನ್ನು ಉಪವಾಸದಿನದಲ್ಲಿ ಆಚರಿಸಕೂಡದು. ಉಪವಾಸದಂದು ಮಾಡಿದರೆ ಮಾಡಿದವರಿಗೂ ಉಂಡವರಿಗೂ ಪಿತೃಗಳಿಗೂ ದುರ್ಗತಿಯಾಗುವುದು.

## ಶ್ರಾದ್ಧೋಪಯುಕ್ತಪಾತ್ರಾಣಿ

ಶ್ರಾದ್ಧಕರ್ಮಕ್ಕೆ ಉಪಯೋಗಿಸುವ ಪಾತ್ರೆಗಳು ಬೆಳ್ಳಿಯವೇ ಆಗಿರಬೇಕು. ಬೆಳ್ಳಿಯು ರುದ್ರದೇವರ ಕಣ್ಣಿನಿಂದ ಹುಟ್ಟಿದೆ. ಪಿತೃಗಳಿಗೆ ಈ ಧಾತುವು ಅತ್ಯಂತ ಪ್ರಿಯವಾಗಿದೆ. ಆದ್ದರಿಂದಲೇ ದೇವಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡುವ ಸಂದರ್ಭದಲ್ಲಿ ಸುವರ್ಣವನ್ನು ಕೊಟ್ಟರೆ ಪಿತೃಬ್ರಾಹ್ಮಣರಿಗೆ ಬೆಳ್ಳಿಯನ್ನು ಕೊಡುವುದುಂಟು. ಪಿತೃಗಳಿಗೆ ಅನ್ನನಿರ್ದೇಶನ ಮಾಡುವಾಗ 'ರಜತಮಯಪಾತ್ರೇ ಸ್ಥಿತಮನ್ನಂ' ಎಂದು ಹೇಳಲಾಗುತ್ತದೆ. ಆದುದರಿಂದ ಪಿತೃಕಾರ್ಯಗಳಿಗೆ ಬೆಳ್ಳಿಯ ಪ್ರಾತೆಗಳು ಅವಶ್ಯ ಹಾಗೂ ಅನಿವಾರ್ಯ. ಬೆಳ್ಳಿಯ ಪಾತ್ರೆಗಳನ್ನು ಸಂಗ್ರಹ ಮಾಡುವ ಶಕ್ತಿ ಇಲ್ಲದಿದ್ದರೆ ಒಂದಾದರೂ ಬೆಳ್ಳಿಯ ಪಾತ್ರೆಯನ್ನು ಇಟ್ಟು ಉಳಿದವುಗಳನ್ನು ತಾಮ್ರ ಅಥವಾ ಹಿತ್ತಾಳೆಯ ಪಾತ್ರೆಗಳನ್ನು ಪಿತೃಕಾರ್ಯದಲ್ಲಿ ಉಪಯೋಗಿಸಬೇಕು.

ಶ್ರಾದ್ಧಕಾರ್ಯದಲ್ಲಿ ಹಾಗೂ ಶ್ರಾದ್ಧದ ಅಡುಗೆಕೋಣೆಯಲ್ಲಿ ಕಣ್ಣಿಗೆ ಕಾಣುವಂತೆ ಕಬ್ಬಿಣದ ಅಗ್ನಿಷ್ಠಿಕೆ ಬಿಟ್ಟು ಉಳಿದ ಕಬ್ಬಿಣ ಆಥವಾ ಸ್ಟೀಲ್‌ಪಾತ್ರೆಗಳನ್ನು, ಸೌಟನ್ನು

ಕಲಾಯಿ ಹಾಕಿದ ಪಾತ್ರೆಗಳನ್ನು ಉಪಯೋಗಿಸಬಾರದು. ಬ್ರಾಹ್ಮಣರನ್ನು ಕುಳ್ಳಿರಿಸಲು ಕಬ್ಬಿಣದ ಮೊಳೆಗಳಿದ್ದ ಮಣೆಗಳನ್ನು ಉಪಯೋಗಿಸದೇ ಅಖಂಡ ಮಣೆಗಳನ್ನು ಉಪಯೋಗಿಸುವುದು ಉತ್ತಮ. ಹೀಗೆ ಶ್ರಾದ್ಧಕರ್ಮದಲ್ಲಿ ಉಪಯೋಗಿಸಿದ ವಸ್ತುಗಳಲ್ಲಿ ಸ್ವಲ್ಪ ಕಬ್ಬಿಣದ ಅಂಶವಿದ್ದರೂ ಪಿತೃಗಳು ಶ್ರಾದ್ಧದಲ್ಲಿ ಕೊಡಲ್ಪಟ್ಟ ಅನ್ನಾದಿಗಳನ್ನು ಸ್ವೀಕರಿಸದೇ ಆ ಸ್ಥಳದಿಂದ ಓಡಿಹೋಗುತ್ತಾರೆ.

ವಿಶ್ವೇದೇವರಿಗೆ ಸುವರ್ಣಪಾತ್ರವೂ, ಪಿತೃಗಳಿಗೆ ಬೆಳ್ಳಿಯ ಪಾತ್ರವೂ ಪರಮ ಶ್ರೇಷ್ಠವಾದವುಗಳು. ಎಲೆಗಳಲ್ಲಿ ಮುತ್ತುಗದ ಎಲೆಗಳು ಶ್ರೇಷ್ಠ. ಬಾಳೆಎಲೆ ಬೆಂಕಿಯಲ್ಲಿ ಬಾಡಿಸಿದರೆ ಶ್ರೇಷ್ಠ. ಇಲ್ಲವಾದರೆ ನಿಷಿದ್ಧ. ಬಾಳೆಎಲೆ, ಹಲಸು, ಮಾವು, ನೇರಳೆ, ಸಂಪಿಗೆ, ಪುನ್ನಾಗ ಮಧ್ಯಮ. ಚಿನ್ನ, ಬೆಳ್ಳಿ ಪಾತ್ರೆಗಳು ಅತ್ಯಂತ ಶ್ರೀಮಂತರಿಗೆ ಲಭ್ಯವಾಗುವವುಗಳು. ಬಾಳೆಎಲೆಯು ಹಸ್ತಪ್ರಮಾಣ (೨೪ ಅಂಗುಲ, ಒಂದು ಮೊಳ) ಇರಬೇಕು. ವಿಪ್ರರ ಎಡಕ್ಕೆ ತುದಿಯು ಬರುವಂತೆ ಅಗ್ರವುಳ್ಳ ಎರಡೆರಡು ಬಾಳೆಎಲೆಗಳನ್ನು ಒಬ್ಬೊಬ್ಬರಿಗೆ ಹಾಕಬೇಕು.

### ಪಾಕನಿಯಮಾಃ

ಔಪಾಸನೆ ಮಾಡಿದ ಅಗ್ನಿಯಲ್ಲಿ ಹವಿಸ್ಸು ಹಾಗೂ ಪಾಕಾದಿಗಳನ್ನು ಮಾಡಬೇಕು. ಇಲ್ಲವೇ ಅರಣಿಮಥಿತಾಗ್ನಿ, ದೇವರ ಭದ್ರದೀಪದ ಅಗ್ನಿ, ಇಲ್ಲವೇ ಶ್ರೋತ್ರಿಯಬ್ರಾಹ್ಮಣನ ಮನೆಯಿಂದ ತಂದ ಅಗ್ನಿಯಿಂದ ಪಾಕವನ್ನು ಮಾಡಬೇಕು. ಶ್ರಾದ್ಧದ ಅಡುಗೆಯನ್ನು ಯಜಮಾನನ ಹೆಂಡತಿಯೇ ಮಾಡುವುದು ಉತ್ತಮ. ಕಾಷ್ಠಾಗ್ನಿಯಿಂದಲೇ ಅಡುಗೆ ಮಾಡಬೇಕು. ಪಾಕಾದಿಗಳನ್ನು ಸಾತ್ತ್ವಿಕ ಪದಾರ್ಥಗಳಿಂದಲೇ ಮಾಡಬೇಕು.

## ಕರ್ತೃಪತ್ನಿನಿಯಮಾಃ

ಕರ್ತೃವಿನ ಹೆಂಡತಿಯು ಶ್ರಾದ್ಧದ ಹಿಂದಿನ ದಿನ ತಲೆಗೆ ಸ್ನಾನ ಮಾಡಿ ಮಡಿಯನ್ನು ಒಣಹಾಕಿ, ಶ್ರಾದ್ಧದಿನ ಪುನಃ ಸ್ನಾನ ಮಾಡಿ ಅಡುಗೆ ಮಾಡಿ, ಮಾರನೆಯ ದಿನ ಪುನಃ ನೀರೆರೆದುಕೊಳ್ಳಬೇಕು. ಶ್ರಾದ್ಧದ ರಾತ್ರಿ ಯಜಮಾನನ ಹೆಂಡತಿ ಪಿಂಡ ಹಾಕಿದ ಸ್ಥಳದಲ್ಲಿ ಗೋಮಯದಿಂದ ಶುದ್ಧ ಮಾಡಿ, ದೀಪ, ಹಾಲು, ನೀರು ಇಟ್ಟು ನಮಸ್ಕಾರ ಮಾಡುವ ಸಂಪ್ರದಾಯ ಕೆಲವರಲ್ಲಿದೆ.

ಋಷಿ ಪಂಚಮಿಯಂದು ಅತ್ತೆ ಮಾವನ ಸಾಂವತ್ಸರಿಕ ಶ್ರಾದ್ಧ ಬಂದರೆ ಸ್ತ್ರೀಯರು ಪಿತೃಪ್ರಸಾದವನ್ನು ಸ್ವೀಕರಿಸಲೇಬೇಕು. ಹಾಗಾಗಿ ತಪ್ಪಿಹೋದ ಋಷಿಪಂಚಮೀ ವ್ರತವನ್ನು ಮಾಘಶುದ್ಧ ಪಂಚಮಿಯಂದು ಮಾಡಬೇಕು. ಮನೆಬಾಗಿಲಿಗೆ ತೋರಣ ಕಟ್ಟಬಾರದು, ದೇವರ ಮುಂದೆ ರಂಗೋಲಿ ಹಾಕಬೇಕು. ಆದರೆ ಮನೆಯ ಮುಂದೆ ರಂಗೋಲಿ ಹಾಕಬಾರದು. ವರ್ಷದಲ್ಲಿ ಮನೆಗೆ ಸಂಸ್ಥಾನಾಧಿಪತಿಗಳನ್ನು ಕರೆಸಿದರೆ ಆಗ ದೇವರು ಬರುವ ಉದ್ದೇಶದಿಂದ ತೋರಣ ಕಟ್ಟಿ ರಂಗೋಲಿ ಹಾಕಬಹುದು. ಕರ್ತೃಗಳ ಪತ್ನಿಯರು ರಾತ್ರಿ ಭುಂಜಿಸಲೇಬೇಕು. ಹಾಗೆಯೇ ಪಿಂಡನಮಸ್ಕಾರ ಮಾಡುವ ಸಂದರ್ಭದ

ಬರುವವರೆಗೂ, ಕರ್ತೃವಿನ ಪತ್ನಿ ಕುಂಕುಮವನ್ನು ಧರಿಸುವುದಿಲ್ಲ. (ಪಿಂಡಗಳಿಗೆ ನಮಿಸುವಾಗ ಕುಂಕುಮಧಾರಣೆ ಮಾಡುವ ಪದ್ಧತಿ ಕೆಲವರಲ್ಲಿದೆ.)

ಕರ್ಮಿಯ ಪತ್ನಿಯು ಏಕಾದಶಿ ಉಪವಾಸ, ಪಂಚಗವ್ಯಪ್ರಾಶನ ಮಾಡಿ ಶುಚಿತ್ವವನ್ನು ಸಂಪಾದಿಸಿಕೊಂಡಿರುವವಳು ಅಡುಗೆಯನ್ನು ಮಾಡಬೇಕು ಇಲ್ಲವೇ ಯೋಗ್ಯರಾದ ಅಡುಗೆಯವರನ್ನು ಕರೆದು ಅಡುಗೆ ಮಾಡಿಸುವುದು ಪ್ರಶಸ್ತವಾಗಿದೆ.

ಮನೆಯಲ್ಲಿ ಶ್ರಾದ್ಧಕರ್ಮವನ್ನು ಮಾಡುವ ಸ್ಥಳವನ್ನು ಮೊದಲು ಗೋಮಯದಿಂದ ಸಾರಿಸಿ ಶುದ್ಧಿಗೊಳಿಸಬೇಕು. ಆ ಸ್ಥಳದಲ್ಲಿ ಜಂತು, ಕ್ರಿಮಿ, ಕೀಟಾದಿಗಳು ಇರದಂತೆ ನೋಡಿಕೊಳ್ಳಬೇಕು. ನೆಲವು ತಗ್ಗು, ದಿನ್ನೆಗಳಿಂದ ಕೂಡಿರಬಾರದು. ಅದು ಸಮತಟ್ಟಾದ ಪ್ರದೇಶವಾಗಿರಬೇಕು. ಆ ಪ್ರದೇಶದಲ್ಲಿ ಯಾವುದೇ ತರಹದ ದುರ್ಗಂಧ ಇರಬಾರದು.

ಬೆಕ್ಕು, ಕೋಳಿ, ಹಂದಿ, ನಾಯಿ ಮೊದಲಾದ ಪ್ರಾಣಿಗಳು ಆ ಶ್ರಾದ್ಧಕರ್ಮ ಸ್ಥಳದ ಹತ್ತಿರ ಬರದಂತೆ ನೋಡಿಕೊಳ್ಳಬೇಕು. ಅಂದರೆ ಆ ಸ್ಥಳದ ಪಾವಿತ್ರ್ಯವನ್ನು ಕಾಯ್ದುಕೊಳ್ಳಬೇಕು.

ಬಂಜೆ, ಜಾರಿಣಿ, ಗರ್ಭಿಣಿ, ವಿಧವೆ, ಗರ್ಭಪಾತ ಹಾಗೂ ಗರ್ಭನಿರೋಧಕ ಚಿಕಿತ್ಸೆ ಮಾಡಿಕೊಂಡವರು –ಇವರು ಮಾಡಿದ ಅಡುಗೆ ಶ್ರಾದ್ಧಕ್ಕೆ ಯೋಗ್ಯವಲ್ಲ.

ಋತುಸ್ನಾತರಾಗಿ ಏಳನೆಯ ದಿನವಾಗಿದ್ದಲ್ಲಿ (ಐದನೆಯ ದಿನ ಸ್ರಾವ ನಿಂತಿದ್ದಲ್ಲಿ) ಶ್ರಾದ್ಧದ ಅಡುಗೆ ಮಾಡಬಹುದು.

## ಶ್ರಾದ್ಧಪಾಕೇ ವರ್ಜ್ಯದ್ರವ್ಯಾಣಿ

ರಾಗಿ, ಜೋಳ, ಹುರುಳಿ, ತೊಗರಿಬೇಳೆ, ಕಪ್ಪು ಹೆಸರು, ಕಡಲೇಬೇಳೆ, ಬೇಯಿಸಿದ ಅರಿಶಿನ, ಇಂಗು, ಏಲಕ್ಕಿ, ಲವಂಗ, ಗೋಡಂಬಿ, ಗಸಗಸೆ, ಕೊತ್ತಂಬರಿಬೀಜ, ಜೀರಿಗೆ, ಮೆಂತೆ, ಹುಣಸೇಹುಳಿ, ಹಸಿಮೆಣಸಿನಕಾಯಿ, ಕೆಂಪುಮೆಣಸು, ಪುಡಿಯುಪ್ಪು,

ಬೂದುಗುಂಬಳ, ಬೆಂಡೆಕಾಯಿ –ಇವೆರಡು ಕೆಲವು ಕಡೆ ನಿಷಿದ್ಧವಿಲ್ಲ, ಸಿಹಿಕುಂಬಳ, ಆಲೂಗಡ್ಡೆ, ತೊಂಡೆಕಾಯಿ, ಅಲಸಂಡೆಕೋಡು, ಕೆಸುವು, ಪಡುವಲಕಾಯಿ, ಹುರುಳಿಕಾಯಿ, ದಪ್ಪಮೆಣಸಿನಕಾಯಿ, ಬಟಾಣಿ, ಕೆಸು, ಹರಿವೆ ಸೊಪ್ಪುಗಳು, ಈರುಳ್ಳಿ, ಬೆಳ್ಳುಳ್ಳಿ, ಗಜ್ಜರಿ, ಸೋರೆಕಾಯಿ, ಮೊಳಕೆ ಬಂದ ಧಾನ್ಯಗಳು

ಎಮ್ಮೆಯ ಹಾಲು, ಮೊಸರು, ತುಪ್ಪ ಹಾಗೂ ಕರಗಿಸಿದ ತುಪ್ಪ, ಕರು ಇಲ್ಲದ ಹಾಗೂ ಕರು ಹಾಕಿ ಹತ್ತು ದಿನ ಪೂರ್ಣವಾಗಿರದ ಹಸುವಿನ ಹಾಲು

ಶ್ರಾದ್ಧಕ್ಕೆ ಬೇಕಾದ ಭಕ್ಷ್ಯಗಳನ್ನು ಹಿಂದಿನ ದಿನ ಮಾಡುವಂತಿಲ್ಲ. ಹಾಗೂ ತರಕಾರಿಗಳನ್ನು ಹೆಚ್ಚಿಡಕೂಡದು. ಹಾಗೂ ತರಕಾರಿ ಸಿಪ್ಪೆಯೇ ಮೊದಲಾದ ಪದಾರ್ಥಗಳನ್ನು ಕ್ಷಣ ಭೋಜನಕ್ಕಿಂತ ಮೊದಲೇ ಹೊರ ಚೆಲ್ಲಬಾರದು.

**ನಿಷಿದ್ಧ ಫಲಗಳು**

ಕರಬೂಜದ ಹಣ್ಣು, ದ್ರಾಕ್ಷಿ, ನೇರಳೆ, ಕಿತ್ತಳೆ, ದಾಳಿಂಬೆ, ಸೀಬೆ, ಸೀತಾಫಲ, ಅಂಜೂರ,

**ನಿಷಿದ್ಧ ಹೂವುಗಳು**

ಕೇದಗೆ, ಬಕುಳ, ಕರವೀರ, ತಾವರೆಹೂ, ಜಾಜಿ, ದತ್ತೂರ, ಬಿಲ್ವಪತ್ರೆ, ಕುಂದ, ಪಾಲಾಶಹೂ, ಹಳದಿ ಗೋರಂಟಿ, ಕುಮುದ, ಅವರೆಹೂ ಮುಂತಾದ ಪರಿಮಳ ಹೂಗಳನ್ನು ದಾಸವಾಳ ಇತ್ಯಾದಿ ಕೆಂಪುಬಣ್ಣದ ಹೂವುಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದು ಹಾಗೂ ತಾಮ್ರಪಾತ್ರೆಗೆ ಜೇನು ಹಾಕಿದರೆ, ಕಾಂಸ್ಯಪಾತ್ರೆಗೆ ಎಳನೀರು ನಿಷಿದ್ಧ.

## ಶ್ರಾದ್ಧಪಾಕೇ ವಿಹಿತದ್ರವ್ಯಾಣಿ

ಗೋಧಿ, ಸಾಸಿವೆ, ಜೀರಿಗೆ, ಕೊತ್ತಂಬರಿಬೀಜ, ಹಸಿಅರಸಿನ, ಹುಣಸೆಹಣ್ಣು, ಸೈಂಧವ ಲವಣ ಜವೆಗೋಧಿ, ಎಳ್ಳು, ಉದ್ದಿನಬೇಳೆ, ಗೋಧಿರವೆ, ಸಾವೆಕ್ಕಿ, ಸವಣಕ್ಕಿ, ಹೆಸರುಬೇಳೆ, ಕಾಳುಮೆಣಸು, ಒಣದ್ರಾಕ್ಷಿ, ಖರ್ಜೂರ, ಬಾದಾಮಿ, ಇವು ಪ್ರಶಸ್ತ.

ಗಡ್ಡೆಗೆಣಸು, ಬಾಳೇದಿಂಡು, ಬಾಳೇಕಾಯಿ, ಬಾಳೇಹೂ, ಸೌತೆ, ಹಾಗಲಕಾಯಿ, ಕಾರಗೆಣಸು, ಚೌಳಿಕಾಯಿ, ಪಡುವಲಕಾಯಿ, ಅರಸಿನ ಕೋಡು, ಮಾವಿನಕಾಯಿ, ನೆಲ್ಲಿಕಾಯಿ, ಹಲಸಿನಕಾಯಿ, ತೆಂಗಿನಕಾಯಿ, ಶುಂಠಿ, ಹೀರೇಕಾಯಿ ಕೊತ್ತಂಬರಿಸೊಪ್ಪು, ಕರಿಬೇವು, ಒಂದೆಲಗಸೊಪ್ಪು, ತೆಂಗಿನೆಣ್ಣೆ. ಆಕಳ ಹಾಲು, ಮೊಸರು, ಮಜ್ಜಿಗೆ, ತುಪ್ಪ, ಮಾವಿನಹಣ್ಣು, ಬಾಳೆಹಣ್ಣು, ಹಲಸಿನ ಹಣ್ಣು.

**ಗ್ರಾಹ್ಯ ಪತ್ರಪುಷ್ಪಗಳು**

ಅಗಸಿಪತ್ರೆ ಭೃಂಗರಾಜ, ಅಗಸೀಹೂ, ಕಮಲ, ಚಂಪಕ, ಎಳ್ಳಿನಹೂ, ಗರಿಕೆ ತುದಿ, ಮಲ್ಲಿಗೆ, ಚೂತ (ಮಾವಿನ) ಹೂ, ಮಾಧವೀ, ಅಶೋಕ, ಪಾರಿಜಾತ, ಶತಪತ್ರಕ, ಯೂಥಿಕಾ, ಅತಿಮುಕ್ತ, ಮುಡಿವಾಳ, ಪುನ್ನಾಗ, ಮಂದಾರ, ಗಿರಿಕರ್ಣಿಕಾ, ನಂದ್ಯಾವರ್ತ.

## ಶ್ರಾದ್ಧೇ ಭೋಜ್ಯಪದಾರ್ಥಾನಿ

ಅನ್ನ, ಒಂದೆಲಗ ತಂಬುಳಿ, ಶುಂಠಿಚಟ್ನಿ, ಬಾಳೆಕಾಯಿ ಹಾಗೂ ಗೆಣಸಿನ ಪಲ್ಯ, ಕಟ್ಟುಸಾರು, ಬೋಳುಹುಳಿ, ಅವಿಲ್, ಮೆಣಸುಕಾಯಿ, ಉಪ್ಪಿನ ಬದಲು– ಶುಂಠಿ, ಮೆಣಸು, ಮಾವಿನಕಾಯಿ, ಸೌತೆ ಮೊದಲಾದವುಗಳ ಚಿಕ್ಕಚಿಕ್ಕ ತುಂಡುಗಳಿಗೆ ಹೆಚ್ಚು ಉಪ್ಪನ್ನು ಬೆರಸಿ ತಯಾರಿಸಿದ ಪದಾರ್ಥ, ಹಾಗಲಕಾಯಿ ಗೊಜ್ಜು, ಮಜ್ಜಿಗೆಹುಳಿ, ಹೆಸರುಬೇಳೆ ತೋವೆ, ಉದ್ದಿನ ವಡೆ, ರವೆವಡೆ, ಅಪ್ಪ, ರವೆಲಾಡು, ಕೇಸರಿಬಾತ್, ಪಾಯಸ, ಮಾವಿನ ಹಣ್ಣಿನ ಸೀಕರಣೆ, ಎಳ್ಳುಹಾಕಿದ ಮಾಡಿದ ಬಾಳೆಹಣ್ಣಿನ ರಸಾಯನ –ಇತ್ಯಾದಿ ಅಡುಗೆಯನ್ನು ಎಷ್ಟು ಬೇಕೋ ಅಷ್ಟೇ ಮಾಡಬೇಕು. ವ್ರತಸಮಯದಲ್ಲಿ

ವ್ರತಕ್ಕೆ ಸಂಬಂಧಿಸಿದ ದ್ರವ್ಯಗಳಿಂದ ಅಡುಗೆ ಮಾಡಬೇಕು. ಫಲ, ಪಾನಕಗಳನ್ನು ಬಿಟ್ಟು ಉಳಿದೆಲ್ಲ ಪದಾರ್ಥಗಳು ಬಿಸಿಯಾಗಿಯೇ ಇರಬೇಕು.

ಮೇಲೆ ಹೇಳಿದ ಶ್ರಾದ್ಧದ ಅಡುಗೆಗೆ ಬಳಸುವ ವಸ್ತುಗಳು, ಬಳಸದ ವಸ್ತುಗಳು ಹಾಗೂ ಭೋಜ್ಯಪದಾರ್ಥಗಳಲ್ಲಿ ದೇಶಾಚಾರಕ್ಕನುಸಾರ ವ್ಯತ್ಯಾಸಗಳಿದ್ದು, ಅದನ್ನು ಪ್ರಾಜ್ಞರಿಂದ ತಿಳಿದುಕೊಂಡು ಅನುಸರಿಸುವುದು ಉತ್ತಮ.

## ವ್ರತೇ ಪಾಕದ್ರವ್ಯಾಣಿ

ಮೊದಲ ತಿಂಗಳ ಆಹಾರಕ್ರಮವನ್ನು **ಶಾಕವ್ರತ** ಎನ್ನುತ್ತಾರೆ. ಈ ತಿಂಗಳಲ್ಲಿ ತರಕಾರಿ, ಹಣ್ಣುಗಳನ್ನು ಬಳಸುವುದಿಲ್ಲ. ಪೊನ್ನಂಗಣೆಸೊಪ್ಪು, ಒಂದೆಲಗಸೊಪ್ಪು, ಮಾವಿನಕಾಯಿ, ಪಾಪಡ್ಕ ಕಾಯಿಯನ್ನು ಬಳಸುತ್ತಾರೆ. ಕಾಳು ಮೆಣಸು, ಸಾಸಿವೆ, ಜೀರಿಗೆ, ಉದ್ದು, ಹೆಸರುಬೇಳೆ ಹೊರತುಪಡಿಸಿ ಇನ್ನಾವುದೇ ಬೇಳೆಯನ್ನು ಬಳಸುವುದಿಲ್ಲ.

ಎರಡನೆಯ ತಿಂಗಳಿನ ವ್ರತವನ್ನು **ದಧಿವ್ರತ** ಎನ್ನುತ್ತಾರೆ. ಈ ತಿಂಗಳಲ್ಲಿ ಮೊಸರನ್ನು ಬಳಸುವುದಿಲ್ಲ. ಮೂರನೆಯ ತಿಂಗಳ ವ್ರತವನ್ನು **ಕ್ಷೀರವ್ರತ** ಎನ್ನುತ್ತಾರೆ. ಈ ತಿಂಗಳಲ್ಲಿ ಹಾಲಿನ ಬಳಕೆ ಇಲ್ಲ.

ನಾಲ್ಕನೆಯ ತಿಂಗಳ ಆಹಾರಕ್ರಮವನ್ನು **ದ್ವಿದಳವ್ರತ** ಎನ್ನುತ್ತಾರೆ. ಭೂಮಿಯಡಿ ಬೆಳೆಯುವ ಗಡ್ಡೆ ಗೆಣಸು, ಸಾಂಬ್ರಾಣಿ, ಬಾಳೆದಿಂಡು, ಬಾಳೆಕಾಯಿ, ಬಾಳೆಕೂಂಬೆ, ಬಾಳೆಹಣ್ಣು, ಕಾಳುಮೆಣಸು, ಮಾವಿನಕಾಯಿ, ಅವಲಕ್ಕಿ, ಅರಳು, ಉದ್ದು, ಹೆಸರುಬೇಳೆ ಬಳಸುತ್ತಾರೆ.

ಮೊದಲ ಮತ್ತು ಕೊನೆಯ ತಿಂಗಳಲ್ಲಿ ಗೋಡಂಬಿ, ದ್ರಾಕ್ಷಿ, ಲಾವಂಚ, ಏಲಕ್ಕಿಯಂತಹ ಪರಿಮಳ ದ್ರವ್ಯಗಳನ್ನು ಬಳಸುವುದಿಲ್ಲ.

### ಶ್ರಾದ್ಧದಲ್ಲಿ ದರ್ಭೆಯ ಕ್ರಮ

ಪಿತೃಸ್ಥಾನದ ಕಮಂಡಲುಪಾತ್ರ ಹಾಗೂ ಮೂರು ಅರ್ಘ್ಯಪಾತ್ರಗಳಿಗೆ 3 ದಳದ ನಾಲ್ಕು ಕೂರ್ಚ; ವಿಶ್ವೇದೇವ ಸ್ಥಾನದ ಎರಡು ಅರ್ಘ್ಯಪಾತ್ರಗಳಿಗೆ 2 ಎಳೆಯ ಎರಡು ಕೂರ್ಚ; ಏರಕಸ್ಥಾನಕ್ಕೆ 7 ದಳಗಳ ಜಡೆಯಂತೆ ಹೆಣೆದ ಕೂರ್ಚ; ಬುಡದಲ್ಲಿ ಪವಿತ್ರ ಗ್ರಂಥಿಸಹಿತ, ಉರುಟಾಗಿ ಸುತ್ತಿದ 21 ದಳಗಳ ಒಂದು ಜಲಕೂರ್ಚ; ಬರ್ಹಿಸ್ಸಿಗೆ 96 ಇಲ್ಲವೇ 64 ದರ್ಭೆಗಳ ಒಂದು ಕಟ್ಟು. ಆಜ್ಯೋತ್ಪವನಕ್ಕೆ 2 ದರ್ಭೆಯಿಂದ ನಡು ಗ್ರಂಥಿ ಮಾಡಿಡುವುದು. ಜಲಪಾತ್ರದ ಕುತ್ತಿಗೆಗೆ ಕಟ್ಟಲು ಉದ್ದದ ಒಂದು ದರ್ಭೆ. ಮುಷ್ಟಿ ದರ್ಭೆ ಕಟ್ಟು ಎರಡು (1ನೇ ದರ್ಭಮುಷ್ಟಿ ಪಾದಪ್ರಕ್ಷಾಲನದವರೆಗೆ, 2ನೇ ದರ್ಭಮುಷ್ಟಿ ಬಲಿಹರಣದವರೆಗೆ)

ಚಟಕದಲ್ಲಿ ವಿಶ್ವೇದೇವಸ್ಥಾನದ ಬ್ರಾಹ್ಮಣ ಪ್ರತಿನಿಧಿ 4 ಎಳೆಯ ಒಂದು ಕೂರ್ಚ. ಪಿತೃಸ್ಥಾನಕ್ಕೆ ಬ್ರಾಹ್ಮಣ ಪ್ರತಿನಿಧಿ 3 ಎಳೆಯ ಒಂದು ಕೂರ್ಚ.

ವಿಶ್ವೇದೇವಸ್ಥಾನಕ್ಕೆ ಪ್ರತಿಯೊಬ್ಬ ಬ್ರಾಹ್ಮಣನ ಪವಿತ್ರಕ್ಕೆ 4 ದಳಗಳ ಸಾಗ್ರದರ್ಭೆ, ಪಿತೃಸ್ಥಾನಕ್ಕೆ ಪ್ರತಿಯೊಬ್ಬ ಬ್ರಾಹ್ಮಣನ ಪವಿತ್ರಕ್ಕೆ 3 ದಳಗಳ ಸಾಗ್ರದರ್ಭ.

## ಸಂಕ್ಷಿಪ್ತ ಸಾಂವತ್ಸರಿಕಶ್ರಾದ್ಧವಿಧಿಃ




### ಶ್ರಾದ್ಧಸಾಹಿತ್ಯ

ಜವೆಗೋದಿ (ಭತ್ತ) 50 ಗ್ರಾಂ, ಬೆಲ್ಲ 50 ಗ್ರಾಂ, ಗೋಪೀಚಂದನ 3, ಯಜ್ಞೋಪವೀತಗಳು- 6, ಕರ್ಪೂರ 5, ಎಳ್ಳೆಣ್ಣೆ $^1/_4$ ಲೀ., ಬತ್ತಿ ಹಾಗೂ ದರ್ಭೆ 1 ಕಟ್ಟು, ಬಿಳಿಸಾಸಿವೆ 50 ಗ್ರಾಂ, ಎಳ್ಳು 100 ಗ್ರಾಂ, ಬಾಳೇಹಣ್ಣು 5, ಇಡಿಅಡಕೆ 2, ಉದ್ದ ಕತ್ತರಿಸಿದ ಅಡಕೆತುಂಡು 16, ವೀಳ್ಯದೆಲೆ- 16, ಭೃಂಗರಾಜ (ಗರಗ) 10 ತುದಿ ಒಂದು ಮಣೆ, ಚೂರಿ, ಬೆಂಕಿಯಲ್ಲಿ ಸಂಸ್ಕರಿಸಿದ ಅಗಲವಾದ ತುದಿಬಾಳೆಲೆ 1 ಹಾಗೂ ಚಿಕ್ಕ ತುದಿ ಬಾಳೆಎಲೆಗಳು 5, ಹವಿಸ್ಸಿಗೆ ಅಕ್ಕಿ (ಒಬ್ಬರಿಗೆ) 2 ಪಾವು, ಆಕಳ ಹಾಲು, ಮೊಸರು, ತುಪ್ಪ ಹಾಗೂ ಜೇನುತುಪ್ಪ ಎಲ್ಲವೂ $^1/_2$ ಲೋಟದಷ್ಟು, ನಾಣ್ಯಗಳು 25, ಹಿತ್ತಾಳೆದೊನ್ನೆಗಳು- 8, ಗೋಮಯ ಹಾಗೂ ಗಂಧ ಒಂದು ನೆಲ್ಲಿಕಾಯಿಯಷ್ಟು, ವಿಷ್ಣುಪಾದ, ಶ್ರೀವಿಷ್ಣುವಿನ ತೀರ್ಥ, ಶಾಲಿಗ್ರಾಮ ಅಥವಾ ಸುದರ್ಶನ, ಪಿಂಡಕ್ಕೆ ಹಾಕಲು ಬೈರಾಸು (ಒಬ್ಬರಿಗೆ) 1, ಕಾಲುದೀಪ 1, ಬೆಳ್ಳಿಯ ಪಾತ್ರೆಗಳು (ತಾಮ್ರ ಅಥವಾ ಹಿತ್ತಾಳೆ) ಆಚಮನ ಕೌಳಿಗೆಸೌಟು, ಅರ್ಚನ ಪಾತ್ರೆ (ಬುಟ್ಟಿ) ಹರಿವಾಣ 3, ಕೈತೊಳೆಯಲು ಅಗಲವಾದ ಒಂದು ಪಾತ್ರೆ, ನೀರಿಗೆ ಪಾತ್ರೆ, ತಂಬಿಗೆ, ಬಿಂದಿಗೆ, ಜಲಪಾತ್ರೆ, ಅತ್ತಿತುದಿ, ಅಕ್ಕಿ 50 ಗ್ರಾಂ, ಹೆಸರುಬೇಳೆ 50 ಗ್ರಾಂ, ನಿರ್ಮಾಲ್ಯತುಳಸಿ 20, ಶುದ್ಧತುಲಸಿ 10, ಹೂ 20, ಗರಿಕೆ 30 ತುದಿ, ಅಂಜನಕಲ್ಲು, ಸಂಸ್ಕರಿಸಿದ ಭಸ್ಮ, ಅಂಗಾರಕ ತುಂಡು, ತೆಂಗಿನಸಿಪ್ಪೆ,

ಸ್ನಾನಮಾಡಿ ಊರ್ಧ್ವ ಪುಂಡ್ರಧಾರಣೆ ಹಾಗೂ ಪಂಚಮುಧ್ರಾಧಾರಣೆಯನ್ನು ಮಾಡಿ ಪ್ರಾತಃ ಸಂಧ್ಯಾವಂದನೆ ಮಾಡಿ, ಬ್ರಹ್ಮಯಜ್ಞ ಮಾಡಬೇಕು.

# ಬ್ರಹ್ಮಯಜ್ಞಃ

ಎಡತೊಡೆಯ ಮೇಲೆ ಬಲ ಕಾಲಿಟ್ಟು (ಎಡ ಕಾಲಿನ ಪಾದದ ಮೇಲೆ ಬಲ ತೊಡೆ ಬರುವಂತೆ) ಪೂರ್ವಮುಖವಾಗಿ ಕುಳಿತು-

**ಭಾರತೀರಮಣ ಮುಖ್ಯಪ್ರಾಣಾಂತರ್ಗತಶ್ರೀವೇದವ್ಯಾಸಪ್ರೇರಣಯಾ ಶ್ರೀವೇದ ವ್ಯಾಸಪ್ರೀತ್ಯರ್ಥಂ ಬ್ರಹ್ಮಯಜ್ಞೇನ ಯಕ್ಷ್ಯೇ ॥ ದೇವ-ಋಷಿ-ಆಚಾರ್ಯ ತರ್ಪಣಪೂರ್ವಕ ಶ್ರಾದ್ಧಾಂತೇ ಪಿತೃತರ್ಪಣಾಖ್ಯಂ ಕರ್ಮ ಕರಿಷ್ಯೇ ॥**

ವಿದ್ಯುದಸೀತಿ ಮಂತ್ರಸ್ಯ ಅಗ್ನಿರ್ಋಷಿರ್ವರುಣೋ ದೇವತಾ । ಉದಕಸ್ಪರ್ಶನೇ ವಿನಿಯೋಗಃ ॥

**ಓಂ ವಿದ್ಯುದಸಿ ವಿದ್ಯಮೇ ಪಾಪ್ಮಾನಮೃತಾತ್ಸತ್ಯಮುಪೈಮಿ । ಓಮ್ ॥**

ನೀರು ಹಿಡಿದು,

ಬ್ರಹ್ಮಯಜ್ಞಪೂರ್ವಭಾಗಿನೀಂ ಗಾಯತ್ರೀಂ ಸಾವಿತ್ರೀಂ ಸಕೃತ್ಪ್ರಣವಾಂ, ಸವ್ಯಾಹೃತಿಕಾಂ ಪಚ್ಛೋಽರ್ಧರ್ಚಶಃ ಋಕ್ಶಃ ಜಪಂ ಕರಿಷ್ಯೇ ॥

**ಓಂ ಭೂಃ । ತತ್ಸವಿತುರ್ವರೇಣ್ಯಮ್ । ಓಂ ಭುವಃ । ಭರ್ಗೋ ದೇವಸ್ಯ ಧೀಮಹಿ । ಓಂ ಸ್ವಃ । ಧಿಯೋ ಯೋ ನಃ ಪ್ರಚೋದಯಾತ್ ॥**

(ಸವ್ಯಾಹೃತಿಶಃ ಪದಃ)

**ಓಂ ಭೂರ್ಭುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಓಂ ಸ್ವಃ ಧಿಯೋ ಯೋ ನಃ ಪ್ರಚೋದಯಾತ್ ॥** (ಸವ್ಯಾಹೃತಿಶ ಅರ್ಧಋಕ್)

**ಓಂ ಭೂರ್ಭುವಃಸ್ವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥** (ಸವ್ಯಾಹೃತಿ ಋಕ್)

**ಓಮಾಪೋಜ್ಯೋತೀರಸೋಽಮೃತಂ ಬ್ರಹ್ಮಭೂರ್ಭುವಃಸ್ವರೋಮ್ ॥**

(ಶಿರೋಮಂತ್ರಃ)

-ಎಂದು ಪ್ರದಕ್ಷಿಣಾಕಾರದಲ್ಲಿ ಕೈಯಲ್ಲಿರುವ ನೀರನ್ನು ತನ್ನ ಸುತ್ತಲೂ ಸುರಿಸಿ,



ಎಡಕ್ಕೈಯನ್ನು ಬಲ ತೊಡೆಯ ಮೇಲೆ ಮೇಲ್ಮುಖವಾಗಿ ಪೂರ್ವಕ್ಕೆ ಬೆರಳುಗಳ ತುದಿ ಬರುವಂತೆ ಇಟ್ಟು ಕೈಯ ಮೇಲೆ ಅಭಿಮಂತ್ರಿತ ನೀರು, ನಿರ್ಮಾಲ್ಯತುಲಸಿ ಹಾಗೂ ಒಂದು ಗೇಣು ಪ್ರಮಾಣದ ಎರಡು ದರ್ಭೆಯ ತುದಿಗಳನ್ನು ಹಿಡಿದು ಬಲಕೈಯಿಂದ ಮುಚ್ಚಿ ಮನಸ್ಸಿನಲ್ಲಿ ದೇವತಾರೂಪಚಿಂತನೆ ಮಾಡುತ್ತಾ ತದೇಕಚಿತ್ತದಿಂದ ಮುಂದಿನ ಮಂತ್ರಗಳನ್ನು ಪಠಿಸಬೇಕು.

(ಋಗ್ವೇದ) ಓಮ್ ಅಗ್ನಿಮೀಳೇ ಪುರೋಽಹಿತಂ ಯಜ್ಞಸ್ಯ ದೇವಮೃತ್ವಿಜಮ್ ।
ಹೋತಾರಂ ರತ್ನಧಾತಮಮ್ ॥

(ಐತರೇಯಬ್ರಾಹ್ಮಣ) ಓಮ್ ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ ॥

(ಆರಣ್ಯಕ) ಓಮ್ ಅಥ ಮಹಾವ್ರತಮ್ । ಏಷ ಪಂಥಾ ಏತತ್ ಕರ್ಮ ।
ಅಥಾತಃ ಸಂಹಿತಾಯಾ ಉಪನಿಷತ್ । ವಿದಾಮಘವನ್ವಿದಾ ।
ಮಹಾವ್ರತಸ್ಯ ಪಂಚವಿಂಶತಿಂ ಸಾಮಿಧೇನ್ಯಃ ॥

(ಸೂತ್ರಮ್) ಓಮ್ ಅಥೈತಸ್ಯ ಸಮಾಮ್ನಾಯಸ್ಯ ॥

(ಯಜುರ್ವೇದ) ಓಮ್ ಇಷೇ ತ್ವೋರ್ಜೇ ತ್ವಾ ವಾಯವಃ ಸ್ಥೋಪಾಯವಃ
ಸ್ಥ ದೇವೋ ವಃ ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ
ಕರ್ಮಣ ಆ ಪ್ಯಾಯಧ್ವಮಘ್ನಿಯಾ ದೇವಭಾಗಮೂರ್ಜಸ್ವತೀಃ
ಪಯಸ್ವತೀಃ ಪ್ರಜಾವತೀರನಮೀವಾ ಅಯಕ್ಷ್ಮಾ ಮಾ ವಃ ಸ್ತೇನ
ಈಶತ ಮಾಽಘಶꣳಸೋ ರುದ್ರಸ್ಯ ಹೇತಿಃ ಪರಿ ವೋ ವೃಣಕ್ತು
ಧ್ರುವಾ ಅಸ್ಮಿನ್ ಗೋಪತೌ ಸ್ಯಾತ ಬಹ್ವೀರ್ಯಜಮಾನಸ್ಯ ಪಶೂನ್
ಪಾಹಿ ॥

(ಬೋಧಾಯನಸೂತ್ರ) ಓಮ್ ಅಥಾತೋ ದರ್ಶಪೂರ್ಣಮಾಸೌ ವ್ಯಾಖ್ಯಾಸ್ಯಾಮಃ
ಓಮ್ ॥

(ಸಾಮವೇದ) ಓಮ್ ಅಗ್ನ ಆಯಾಹಿ ವೀತಯೇ ಗೃಣಾನೋ ಹವ್ಯದಾತಯೇ ।
ನಿ ಹೋತಾ ಸತ್ಸಿ ಬರ್ಹಿಷಿ ॥

(ಅಥರ್ವವೇದ) ಓಂ ಶಂ ನೋ ದೇವೀರಭಿಷ್ಟಯ ಆಪೋ ಭವಂತು
ಪೀತಯೇ । ಶಂ ಯೋರಭಿ ಸ್ರವಂತು ನಃ ॥

(ಶಿಕ್ಷಾ) ಓಮ್ ಅಥ ಶಿಕ್ಷಾಂ ಪ್ರವಕ್ಷ್ಯಾಮಿ ॥

(ವ್ಯಾಕರಣ) ವೃದ್ಧಿರಾದೈಚ್ ॥

(ನಿರುಕ್ತ) ಸಮಾಮ್ನಾಯಃ ಸಮಾಮ್ನಾತಃ ॥

(ಛಂದಃ) ಮಯರಸತಜ ಭನಲಗಸಮ್ಮಿತಮ್ ॥

(ಜ್ಯೋತಿಷಃ) ಪಂಚಸಂವತ್ಸರಮಯಮ್ ॥

(ನಿಘಂಟು) ಗೌಃ ಗ್ಮಾ ಜ್ಮಾ ಕ್ಷ್ಮಾ ॥

(ಬ್ರಹ್ಮಸೂತ್ರ) ಓಮ್ ಓಮ್ ಅಥಾತೋ ಬ್ರಹ್ಮಜಿಜ್ಞಾಸಾ ಓಮ್ ॥

(ಉತ್ತರಮೀಮಾಂಸಾ) ಓಮ್ ಅಥಾತೋ ಧರ್ಮಜಿಜ್ಞಾಸಾ ಓಮ್ ॥

(ದೈವೀಮೀಮಾಂಸಾ) ಓಮ್ ಅಥಾತೋ ದೈವೀಮೀಮಾಂಸಾ ಓಮ್ ॥

(ಸ್ಮೃತಿ) ಯೋಗೀಶ್ವರಂ ಯಾಜ್ಞವಲ್ಕ್ಯಮ್ ॥

(ಮಹಾಭಾರತ) ನಾರಾಯಣಂ ಸುರಗುರುಂ ಜಗದೇಕನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥

(ತಾತ್ಪರ್ಯನಿರ್ಣಯ) ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋನಮಸ್ತೇ ॥

(ಭಾಗವತ) ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ।
ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥

(ಭಾಷ್ಯ) ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥

(ಅಣುಭಾಷ್ಯ) ನಮೋ ನಮೋಽಶೇಷ ದೋಷದೂರಪೂರ್ಣಗುಣಾತ್ಮನೇ ।
ವಿರಿಂಚಿ ಶರ್ವಪೂರ್ವೇಡ್ಯ ವಂದ್ಯಾಯ ಶ್ರೀವರಾಯತೇ ॥

ಓಂ ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ ನಮಃ ಪೃಥಿವ್ಯೈ ನಮ ಓಷಧೀಭ್ಯಃ । ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಮಹತೇ ಕರೋಮಿ ॥ ತಚ್ಛಂ ಯೋರಾವೃಣೀಮಹೇ ಗಾತುಂ ಯಜ್ಞಾಯ ಗಾತುಂ ಯಜ್ಞಪತಯೇ ॥ ದೈವೀ ಸ್ವಸ್ತಿರಸ್ತು ನಃ ಸ್ವಸ್ತಿರ್ಮಾನು–ಷೇಭ್ಯಃ॥ ಊರ್ಧ್ವಂ ಜಿಗಾತು ಭೇಷಜಂ ಶಂ ನೋ ಅಸ್ತು ದ್ವಿಪದೇ ಶಂ ಚತುಷ್ಪದೇ ॥ ಶಾಂತಾ ಪೃಥಿವೀ ಶಿವಮಂತರಿಕ್ಷಂ ದ್ಯೌರ್ನೋ ದೇವ್ಯಭಯಂ ನೋ ಅಸ್ತು। ಶಿವಾ ದಿಶಃ ಪ್ರದಿಶ ಉದ್ದಿಶೋ ನ ಆಪೋ ವಿಶ್ವತಃ ಪರಿಪಾಂತು ಸರ್ವತಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ವೃಷ್ಟಿರಸಿಮಂತ್ರಸ್ಯ ಅಗ್ನಿರ್ಋಷಿಃ ವರುಣೋ ದೇವತಾ । ಉದಕೋಪಸ್ಪರ್ಶನೇ ವಿನಿಯೋಗಃ ॥

**ಓಂ ವೃಷ್ಟಿರಸಿ ವೃಶ್ಚಮೇ ಪಾಪ್ಮಾನಮೃತಾತ್ಸತ್ಯಮುಪಾಗಾಮ್ ॥**

-ಎಂದು ತನ್ನ ಕೈಯಲ್ಲಿದ್ದ ನೀರನ್ನು ತುಲಸಿಯಿಂದ ಪ್ರೋಕ್ಷಣೆ ಮಾಡಿಕೊಂಡು ತುಲಸಿಯನ್ನು ಮಾತ್ರ ವಿಸರ್ಜನೆ ಮಾಡಬೇಕು.

## ದೇವತಾತರ್ಪಣಮ್



ಬೇರೆ ನಿರ್ಮಾಲ್ಯತುಳಸಿ ಹಾಗೂ ದರ್ಭೆಯ ತುದಿ ಹಾಗೂ ಬೆರಳಿನ ತುದಿಗಳು ಪೂರ್ವಕ್ಕೆ ಇರುವಂತೆ ಮಾಡಿಕೊಂಡು ತರ್ಪಣ ಕೊಡಬೇಕು.

**ದೇವತಾಸ್ತರ್ಪಯತಿ ॥ ಓಮ್ ಅಗ್ನಿಸ್ತೃಪ್ಯತು । ವಿಷ್ಣುಸ್ತೃಪ್ಯತು । ಪ್ರಜಾಪತಿಸ್ತೃಪ್ಯತು । ಬ್ರಹ್ಮಾ ತೃಪ್ಯತು । ವೇದಾಸ್ತೃಪ್ಯಂತು । ದೇವಾಸ್ತೃ-ಪ್ಯಂತು । ಋಷಯಸ್ತೃಪ್ಯಂತು । ಸರ್ವಾಣಿ ಛಂದಾಂಸಿ ತೃಪ್ಯಂತು । ಓಂಕಾರಸ್ತೃಪ್ಯತು । ವಷಟ್ಕಾರಸ್ತೃಪ್ಯತು । ವ್ಯಾಹೃತಯ ಸ್ತೃಪ್ಯಂತು । ಸಾವಿತ್ರೀ ತೃಪ್ಯತು । ಯಜ್ಞಾಸ್ತೃಪ್ಯಂತು । ದ್ಯಾವಾ.ಪೃಥಿವ್ಯೌ ತೃಪ್ಯೇತಾಮ್ । ಅಂತರಿಕ್ಷಾಣಿ ತೃಪ್ಯಂತು । ಅಹೋ ರಾತ್ರಾಣಿ ತೃಪ್ಯಂತು । ಸಾಂಖ್ಯಾಸ್ತೃಪ್ಯಂತು । ಸಿದ್ಧಾಸ್ತೃಪ್ಯಂತು । ಸಮುದ್ರಾಸ್ತೃಪ್ಯಂತು । ನದ್ಯಸ್ತೃಪ್ಯಂತು । ಗಿರಯಸ್ತೃಪ್ಯಂತು । ಕ್ಷೇತ್ರೌಷಧಿವನಸ್ಪತಿಗಂಧ-ರ್ವಾಪ್ಸರಸಸ್ತೃಪ್ಯಂತು । ನಾಗಾಸ್ತೃಪ್ಯಂತು । ವಯಾಂಸಿ ತೃಪ್ಯಂತು । ಗಾವಸ್ತೃಪ್ಯಂತು । ಸಾಧ್ಯಾಸ್ತೃಪ್ಯಂತು । ವಿಪ್ರಾಸ್ತೃಪ್ಯಂತು । ಯಕ್ಷಾಸ್ತೃಪ್ಯಂತು । ರಕ್ಷಾಂಸಿ ತೃಪ್ಯಂತು । ಭೂತಾನಿ ತೃಪ್ಯಂತು । ಏವಮಂತಾನಿ ತೃಪ್ಯಂತು ॥**

## ಋಷಿತರ್ಪಣಮ್



ಉತ್ತರಾಭಿಮುಖ ಮಾಡಿ ಯಜ್ಞೋಪವೀತವನ್ನು ಮಾಲಾಕಾರ ಮಾಡಿ ದರ್ಭೆಯ ಮಧ್ಯಭಾಗದಿಂದ ಹಾಗೂ ಕಿರುಬೆರಳಿನ ಮೂಲ ದಲ್ಲಿ ಎರಡೆರಡು ತರ್ಪಣ ಕೊಡಬೇಕು.

**ಶತರ್ಚಿನಸ್ತೃಪ್ಯಂತು ತೃಪ್ಯಂತು ॥ ಮಾಧ್ಯಮಾಸ್ತೃಪ್ಯಂತು ತೃಪ್ಯಂತು ॥ ಗೃತ್ಸಮದಸ್ತೃಪ್ಯತು ತೃಪ್ಯತು ॥ ವಿಶ್ವಾಮಿತ್ರಸ್ತೃಪ್ಯತು ತೃಪ್ಯತು ॥ ವಾಮದೇವಸ್ತೃಪ್ಯತು ತೃಪ್ಯತು ॥ ಅತ್ರಿಸ್ತೃಪ್ಯತು ತೃಪ್ಯತು ॥ ಭರದ್ವಾಜಸ್ತೃಪ್ಯತು ತೃಪ್ಯತು ॥ ವಸಿಷ್ಠಸ್ತೃಪ್ಯತು ತೃಪ್ಯತು ॥ ಪ್ರಗಾಥಾಸ್ತೃಪ್ಯಂತು ತೃಪ್ಯಂತು ॥ ಪಾವಮಾನ್ಯ ಸ್ತೃಪ್ಯಂತು ತೃಪ್ಯಂತು ॥ ಕ್ಷುದ್ರಸೂಕ್ತಾಸ್ತೃಪ್ಯಂತು ತೃಪ್ಯಂತು ॥ ಮಹಾಸೂಕ್ತಾಸ್ತೃಪ್ಯಂತು ತೃಪ್ಯಂತು ॥ ಸನಕಸ್ತೃಪ್ಯತು ತೃಪ್ಯತು ॥ ಸನಂದನಸ್ತೃಪ್ಯತು ತೃಪ್ಯತು ॥ ಸನತ್ಸುಜಾತಸ್ತೃಪ್ಯತು ತೃಪ್ಯತು ॥ ಸನಾತನಸ್ತೃಪ್ಯತು ತೃಪ್ಯತು ॥ ಸನತ್ಕುಮಾರಸ್ತೃಪ್ಯತು ತೃಪ್ಯತು ॥ ಕಪಿಲಸ್ತೃಪ್ಯತು ತೃಪ್ಯತು ॥ ಓಹ್ಪರಿಸ್ತೃಪ್ಯತು ತೃಪ್ಯತು ॥ ಆಸುರೀ ತೃಪ್ಯತು ತೃಪ್ಯತು ॥ ಪಂಚಶಿಖಾಸ್ತೃಪ್ಯಂತು ತೃಪ್ಯಂತು ॥**

# ಆಚಾರ್ಯತರ್ಪಣಮ್

ಯಜ್ಞೋಪವೀತವನ್ನು ಎಡಮಾಡಿ ಆಗ್ನೇಯ ಮುಖಮಾಡಿ ದರ್ಭೆಯ ತುದಿ ಬುಡದಿಂದ ತೋರುಬೆರಳು ಹಾಗೂ ಹೆಬ್ಬೆರಳಿನ ಮೂಲದಿಂದ ಮೂರು ಮೂರು ತರ್ಪಣ ಕೊಡಬೇಕು (ಅಧಿಕಾರ ಇಲ್ಲದವರು ಬಲದಿಂದ ಕೊಡಬೇಕು.)

**ಸುಮಂತುಜೈಮಿನಿವೈಶಂಪಾಯನಪೈಲಸೂತ್ರಭಾಷ್ಯಭಾರತಮಹಾಭಾರತಧರ್ಮಾ– ಚಾರ್ಯಸ್ತೃಪ್ಯಂತು ತೃಪ್ಯಂತು ತೃಪ್ಯಂತು ॥**

**ಜಾನಂತಿಬಾಹವಿಗಾರ್ಗ್ಯಗೌತಮಶಾಕಲ್ಯಬಾಭ್ರವ್ಯಮಾಂಡವ್ಯಮಾಂಡೂಕೇಯಾ– ಸ್ತೃಪ್ಯಂತು ತೃಪ್ಯಂತು ತೃಪ್ಯಂತು ॥**

**ಗಾರ್ಗೀವಾಚಕ್ನವೀ ತೃಪ್ಯತು ತೃಪ್ಯತು ತೃಪ್ಯತು ॥**
**ವಡವಾಪ್ರಾತೀಥೇಯೀ ತೃಪ್ಯತು ತೃಪ್ಯತು ತೃಪ್ಯತು ॥**
**ಸುಲಭಾಮೈತ್ರೇಯೀ ತೃಪ್ಯತು ತೃಪ್ಯತು ತೃಪ್ಯತು ॥**
**ಕಹೋಳಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಕೌಶೀತಕಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಮಹಾಕೌಶೀತಕಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಭರದ್ವಾಜಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಪೈಂಗ್ಯಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಮಹಾಪೈಂಗ್ಯಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಸುಯಜ್ಞಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಸಾಂಖ್ಯಾಯನಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಐತರೇಯಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಮಹೈತರೇಯಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಶಾಕಲಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಬಾಷ್ಕಲಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಸುಜಾತವಕ್ತ್ರಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಔದವಾಹಿಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಮಹೌದವಾಹಿಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಸೌಜಾಮಿಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**
**ಶೌನಕಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**

**ಆಶ್ವಲಾಯನಂ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ॥**

**ಯೇ ಚಾನ್ಯೇ ಆಚಾರ್ಯಾಸ್ತೇ ಸರ್ವೇ ತೃಪ್ಯಂತು ತೃಪ್ಯಂತು ತೃಪ್ಯಂತು ॥**

ಬ್ರಹ್ಮಯಜ್ಞ, ದೇವರ್ಷಿತರ್ಪಣ ಕೊಟ್ಟು ಪಿತ್ರಾದಿಗಳ ತರ್ಪಣವನ್ನು ಶ್ರಾದ್ಧದ ಅನಂತರ ಕೊಡಬೇಕು. ತಾಯಿಯ ಶ್ರಾದ್ಧವಾಗಿದ್ದಲ್ಲಿ ಪಿತೃತರ್ಪಣ ಹಾಗೂ ಪಿತೃಸಂಬಂಧಿಗಳಿಗೆ ತರ್ಪಣ ಕೊಟ್ಟು ಮಾತೃವರ್ಗಕ್ಕೆ ಶ್ರಾದ್ಧದ ಅನಂತರ ಕೊಡಬೇಕು.

## ಔಪಾಸನಾಗ್ನಿನಷ್ಟೇ ಪ್ರಾಯಶ್ಚಿತ್ತಮ್

ಔಪಾಸನಾಗ್ನಿಯನ್ನು ತನ್ನ ಅಂತ್ಯಕಾಲದವರೆಗೆ ನಿತ್ಯೌಪಾಸನದ ಮೂಲಕ ರಕ್ಷಣೆ ಮಾಡಬೇಕು ಒಂದು ವೇಳೆ ರಕ್ಷಣೆ ಮಾಡಲಾಗದಿದ್ದಲ್ಲಿ ನೈಮಿತ್ತಿಕ ಕಾಮ್ಯಕರ್ಮಗಳ ಸಮಯದಲ್ಲಿ ಪ್ರಾಯಶ್ಚಿತ್ತಪೂರ್ವಕವಾಗಿಯಾದರೂ ಅಗ್ನಿಯನ್ನು ಸಂಪಾದಿಸಿಕೊಳ್ಳತಕ್ಕದ್ದು.

**ಓಂ ಸ್ವಸ್ತಿ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಮಮ ಸಾಯಂಪ್ರಾತರೌಪಾಸನಹೋಮ ಅಕರಣಲೋಪದೋಷಪ್ರಾಯಶ್ಚಿತ್ತಾರ್ಥಮ್ ಅದ್ಯ ಪ್ರಾತರೌಪಾಸನಾಧಿಕಾರಯೋಗ್ಯತಾಸಿದ್ಧ್ಯರ್ಥಂ ಯಜ್ಞೇಶ್ವರಪ್ರೀತ್ಯರ್ಥಂ ಯಥಾಶಕ್ತಿ ತಂಡುಲ ದ್ರವ್ಯದಾನಂ ಕರಿಷ್ಯೇ ॥** ದಿನಕ್ಕೆ ಎರಡು ಮುಷ್ಟಿಯ ಲೆಕ್ಕದಲ್ಲಿ ಲೋಪವಾದ ದಿನಗಳ ಒಟ್ಟು ಅಕ್ಕಿಯನ್ನು ಸಂಗ್ರಹಿಸಿ '**ಶ್ರೀಮನ್ನಾರಾಯಣಸ್ವರೂಪಾಯ ಬ್ರಾಹ್ಮಣಾಯ ತುಭ್ಯಮಹಂ ಸಂಪ್ರದದೇ ನ ಮಮ ನ ಮಮ ॥**' –ಎಂದು ಬ್ರಾಹ್ಮಣರಿಗೆ ಕೊಟ್ಟು ದಕ್ಷಿಣೆಯನ್ನು ಕೊಟ್ಟು ('**ಔಪಾಸನಾಧಿಕಾರಯೋಗ್ಯತಾ ಸಿದ್ಧಿರಸ್ತು**') –ಎಂದು ಪ್ರತಿವಚನ ಪಡೆದು, '**ಶ್ರೀಪರಮಾತ್ಮಪ್ರೀತ್ಯರ್ಥಂ ಮಮ ವಿಚ್ಛಿನ್ನಸ್ಯ ಔಪಾಸನಾಗ್ನೇಃ ಪುನಸ್ಸಂಧಾನಂ ಕರಿಷ್ಯೇ**' – ಎಂದು ಸಂಕಲ್ಪಿಸಿ ಅಗ್ನಿಪ್ರತಿಷ್ಠೆ ಮಾಡಿ ಎರಡು ದರ್ಭೆಯಿಂದ ಕ್ರವ್ಯಾದಗ್ನಿಯನ್ನು ವಿಸರ್ಜಿಸಿ ಅಕ್ಕಿ ಹಿಡಿದು,

**ಓಮ್ ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಧಿತೋ ಗರ್ಭಿಣೀಷು । ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥**

'**ಅಗ್ನಿಮ್ ಆವಾಹಯಾಮಿ**' ಎಂದು ಅಕ್ಕಿಯನ್ನು ಅಗ್ನಿಗೆ ಹಾಕಿ ನೀರಿನಿಂದ ಪರಿಷೇಕಮಾಡಿ, ಅಗ್ನ್ಯಂತರ್ಗತ ಪ್ರಾಣಸ್ಥ ಪರಶುರಾಮನನ್ನು ಆವಾಹಿಸಿ, ವ್ಯಾಹೃತಿ ಹೋಮಪೂರ್ವಕ ನಾಲ್ಕು ಬಾರಿ ತುಪ್ಪ ಹಿಡಿದು '**ಅಯಾಶ್ಚಾಗ್ನೇ** (ಪುಟಸಂಖ್ಯೆ 66) ಮಂತ್ರದಿಂದ ತುಪ್ಪದ ಆಹುತಿ ಕೊಟ್ಟು ವ್ಯಾಹೃತಿ ಮಾಡಿ '**ಪ್ರಾತರೌಪಾಸನಂ ಕರಿಷ್ಯೇ**' ಎಂದು ಸಂಕಲ್ಪಿಸಿ, ಅಕ್ಕಿ ಹಿಡಿದು **ಪ್ರತ್ಯವರೋಹ......ಶಂ ಯೋಃ ॥** (ಪುಟಸಂಖ್ಯೆ 66) **ಮಮ ಹೃದಿಸ್ಥ ಔಪಾಸನಾಗ್ನಿಂ ಪ್ರತಿಷ್ಠಾಪಯಾಮಿ ॥**' –ಎಂದು ಅಗ್ನಿಗೆ ಹಾಕಿ,

ವ್ಯಾಹೃತಿ ಹೋಮ ಮಾಡಿ, ಒಂದು ಮುಷ್ಟಿ ಅಕ್ಕಿ ತೊಳೆದು ಎರಡು ಪಾಲು ಮಾಡಿ ಅಭಿಘಾರ ಮಾಡಿ ಸೂರ್ಯ, ಪ್ರಜಾಪತಿಗೆ ಆಹುತಿ ನೀಡಿ ವ್ಯಾಹೃತಿಪೂರ್ವಕ ಅಗ್ನ್ಯುಪಸ್ಥಾನ ಮಾಡಿ ಅಗ್ನಿಯನ್ನು ಹೃತ್ಕಮಲದಲ್ಲಿ ಪ್ರಾವಾಹಿಸಿ ಅನಂತರ ಹೋಮದ ಅಗ್ನಿಯಿಂದ ಹವಿಸ್ಸು ಮಾಡಿ ದೇವರಿಗೆ ಹವಿಸ್ಸನ್ನು ಸಮರ್ಪಿಸಿದ ಬಳಿಕ ಅದೇ ಅಗ್ನಿಯಲ್ಲಿ ವೈಶ್ವದೇವ ಮಾಡಿ ಶ್ರಾದ್ಧದ ಪಾಣಿಹೋಮಕ್ಕೆ ಅದೇ ಅಗ್ನಿಯನ್ನು ತಂದು ಪಾಣಿಹೋಮ ಮಾಡಿ ಅನಂತರ ಬ್ರಾಹ್ಮಣಭೋಜನದ ಅನ್ನಕ್ಕೆ ಅದೇ ಅಗ್ನಿಯಿಂದ ವೈಶ್ವದೇವ ಮಾಡಬೇಕು.

ಒಬ್ಬರಿಗೆ ಎರಡು ಪಾವಿನಂತೆ ಅಕ್ಕಿಯನ್ನು ಹಾಗೂ ಸ್ವಲ್ಪ ಹೆಸರು ಬೇಳೆಯನ್ನು ಒಮ್ಮೆ ತೊಳೆದು ಹವಿಸ್ಸನ್ನು ಮಾಡಬೇಕು. ಅನಂತರ ದೇವರ ಪೂಜೆಯಲ್ಲಿ ದೇವರಿಗೆ ಗಂಗಾಜಲದಿಂದ ಅಭಿಷೇಕ ಮಾಡುವುದು ವಿಶೇಷವಾಗಿದೆ.

ಶ್ರಾದ್ಧಕ್ಕೆ ಬೇಕಾಗುವಷ್ಟು ಬಿಳಿಬಣ್ಣದ ಸಾತ್ತ್ವಿಕಪುಷ್ಪ ವಿಶೇಷವಾಗಿ ಅಗಸೆಹೂ ತುಳಸಿ, ಗರಿಕೆ, ಭೃಂಗರಾಜ, ಗಂಧ ಹಾಗೂ ಗೋಪಿ, ಯಜ್ಞೋಪವೀತವನ್ನು ದೇವರಿಗೆ ಸಮರ್ಪಿಸಿ, ಧೂಪ ದೀಪ ಮಾಡಿ, ನೈವೇದ್ಯಸಮಯದಲ್ಲಿ ದೇವರ ಎದುರು ನೀರಿನಿಂದ ಚೌಕಾಕಾರದ ಮಂಡಲ ಮಾಡಿ ಹವಿಸ್ಸನ್ನು ಮಂಡಲದಲ್ಲಿಟ್ಟು ಶ್ರಾದ್ಧಕ್ಕೆ ಬೇಕಾಗುವಷ್ಟು ಬಾಳೆಹಣ್ಣು, ಪಂಚಾಮೃತದ್ರವ್ಯ, ವೀಳ್ಯದೆಲೆ ಅಡಕೆ, ಎಳ್ಳು, ಅಕ್ಕಿ ಇಟ್ಟು ದೇವರಿಗೆ ಹವಿಸ್ಸನ್ನು ಸಮರ್ಪಣೆ ಮಾಡಿ, ವೈಶ್ವದೇವಕ್ಕೆ ಹಾಗೂ ವಿಷ್ವಕ್ಸೇನನಿಗೆ ಬೇರೆಯೇ ಅನ್ನವನ್ನು ತೆಗೆದಿಟ್ಟು ವಿಷ್ವಕ್ಸೇನನ ನೈವೇದ್ಯಕ್ಕೆ ಮೊಸರು ಹಾಕಿ ಸಮರ್ಪಿಸಿ ಅನಂತರ (ಶ್ರಾದ್ಧದಲ್ಲಿ ವಿಷ್ಣುವಿಗೆ ಪ್ರತ್ಯೇಕ ಆರಾಧನೆ ಇದ್ದರೆ ಈಗ ಫಲ ಸಮರ್ಪಿಸಿ ಶ್ರಾದ್ಧಸಮಯದಲ್ಲಿ ಹವಿಸ್ಸನ್ನು ಕೂರ್ಚಸ್ಥಾನದಲ್ಲಿ ದೇವರಿಗೆ ಸಮರ್ಪಿಸಿ ಬೇರೆಯವರಿಂದ ವೈಶ್ವದೇವ ಮಾಡಿಸಿ ವಿಶ್ವೇದೇವಾದಿ ಸ್ಥಾನಗಳಲ್ಲಿ ಬಡಿಸಬೇಕು.) ಜಾಗಂಟೆ ಬಾರಿಸದೆ, ಶಂಖ ಊದದೆ, ದೇವರ ಪೂಜೆ ಮಾಡಿ ಶ್ರಾದ್ಧಕ್ಕೆ ಬೇಕಾಗುವಷ್ಟು ದೇವರ ಮೇಲಿನ ಹೂ ತುಳಸಿ ಗರಿಕೆ, ಭೃಂಗರಾಜ, ಅಗಸೆಹೂ, ಗಂಧವನ್ನು ಹಾಗೂ ಗೋಪಿ, ಯಜ್ಞೋಪವೀತ ವನ್ನು ತೆಗೆದು ಹರಿವಾಣದಲ್ಲಿ ಇಟ್ಟು ದೇವರ ತೀರ್ಥ ಹಾಗೂ ಅಂಗಾರಕದ ತುಂಡನ್ನು ತೆಗೆದಿಡಬೇಕು ಹಾಗೂ ದೇವರಿಗೆ ತುಪ್ಪದ ದೀಪವನ್ನು ಹಚ್ಚಬೇಕು.

## ವೈಶ್ವದೇವವಿಧಿಃ

ದೇವರಿಗೆ ಸಮರ್ಪಿಸಿದ ಹವಿಸ್ಸಿನಿಂದ ವೈಶ್ವದೇವಕ್ಕೆ ತೆಗೆದಿಟ್ಟ ಹವಿಸ್ಸನ್ನು ಹಿಡಿದು, ಜಲಪಾತ್ರೆ, ತುಪ್ಪ, ಅಕ್ಕಿ, ಎರಡು ದರ್ಭೆಯೊಂದಿಗೆ ಹವಿಸ್ಸನ್ನು ಮಾಡಿದ ಒಲೆಯ ಬಳಿಗೆ ಬಂದು, '**ಅದ್ಯ ಪೂರ್ವೋಚ್ಚರಿತ .......ಖಂಡನ, ಪೇಷಣ, ಚುಲ್ಲೀ, ಭರ್ಜನ, ಉದಕುಂಭಾದಿ ಪಂಚಸೂನಾದೋಷ ಪರಿಹಾರಾರ್ಥಂ ವೈಶ್ವದೇವಹೋಮಾಖ್ಯಂ ಕರ್ಮ ಕರಿಷ್ಯೇ ॥**' ಎಂದು ಸಂಕಲ್ಪಿಸಿ '**ರುಕ್ಮಕ**' ಎಂಬ ಅಗ್ನಿಯನ್ನು ಧ್ಯಾನಿಸಿ, ಹವಿಸ್ಸನ್ನು ಮೂರು ಭಾಗ ಮಾಡಿ, ಮೊದಲನೆಯ ಭಾಗದಿಂದ ಅಷ್ಟಾಕ್ಷರ, ಕೃಷ್ಣಷಡಕ್ಷರ, ಪುರುಷ ಸೂಕ್ತದಿಂದ ಆಹುತಿ ನೀಡಿ, ಮುಂದಿನ ಪ್ರಧಾನ ಹನ್ನೆರಡು ಆಹುತಿಗಳನ್ನು ಕೊಡಬೇಕು.

೧) ಓಂ ಸೂರ್ಯಾಯ ಸ್ವಾಹಾ । ೨) ಓಂ ಪ್ರಜಾಪತಯೇ ಸ್ವಾಹಾ । ೩) ಓಮ್ ಅಗ್ನಯೇ ಸ್ವಾಹಾ । ೪) ಓಂ ಪ್ರಜಾಪತಯೇ ಸ್ವಾಹಾ । ೫) ಓಂ ಸೋಮಾಯ ವನಸ್ಪತಯೇ ಸ್ವಾಹಾ । ೬) ಓಮ್ ಅಗ್ನೀಷೋಮಾಭ್ಯಾಂ ಸ್ವಾಹಾ । ೭) ಓಮ್ ಇಂದ್ರಾಗ್ನೀಭ್ಯಾಂ ಸ್ವಾಹಾ । ೮) ಓಂ ದ್ಯಾವಾಪೃಥಿವೀಭ್ಯಾಂ ಸ್ವಾಹಾ । ೯) ಓಂ ಧನ್ವಂತರಯೇ ಸ್ವಾಹಾ । ೧೦) ಓಮ್ ಇಂದ್ರಾಯ ಸ್ವಾಹಾ ೧೧) ಓಂ ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ । ೧೨) ಓಂ ಬ್ರಹ್ಮಣೇ ಸ್ವಾಹಾ ॥ ಎಂದು ಮೊದಲ ಭಾಗದ ಅನ್ನವನ್ನು ಹೋಮಿಸಿ ವ್ಯಾಹೃತಿಹೋಮ ಮಾಡಿ, ಅಗ್ನಿಯ ದಕ್ಷಿಣಭಾಗದಲ್ಲಿ ಭೂಮಿಯನ್ನು ನೀರಿನಿಂದ ಪ್ರೋಕ್ಷಣೆ ಮಾಡಿ ವೃತ್ತಾಕಾರದ ಮಂಡಲ ಮಾಡಿ ದ್ವಿತೀಯಭಾಗದ ಅನ್ನವನ್ನು ಪೂರ್ವದಿಂದಾರಂಭಿಸಿ ೧ರಿಂದ ೧೭ ಸಂಖ್ಯೆಯ ವರೆಗಿನ ಬಲಿಯನ್ನು ವೃತ್ತಾಕಾರವಾಗಿ ಇಡಬೇಕು.




೧) ಓಂ ಸೂರ್ಯಾಯ ಸ್ವಾಹಾ............ ೧೩) ಓಮ್ ಅದ್ಭ್ಯಃ ಸ್ವಾಹಾ । ೧೪) ಓಮ್ ಓಷಧಿವನಸ್ಪತಿಭ್ಯಃ ಸ್ವಾಹಾ । ೧೫) ಓಂ ಗೃಹಾಯ ಸ್ವಾಹಾ । ೧೬) ಓಂ ಗೃಹದೇವತಾಭ್ಯಃ ಸ್ವಾಹಾ । ೧೭) ಓಂ ವಾಸ್ತುದೇವತಾಭ್ಯಃ ಸ್ವಾಹಾ ॥ ಹೀಗೆ ಚಕ್ರಾಕಾರದಲ್ಲಿ ಬಲಿ ಇಟ್ಟು ಮಂಡಲದ ಹೊರಭಾಗದಲ್ಲಿ (ಪೂರ್ವದಿಂದ ಪೂರ್ವಕ್ಕೆ) ೧೮) ಓಮ್ ಇಂದ್ರಾಯ ಸ್ವಾಹಾ ।೧೯) ಓಮ್ ಇಂದ್ರಪುರುಷೇಭ್ಯಃ ಸ್ವಾಹಾ । ದಕ್ಷಿಣದಿಂದ ಉತ್ತರಕ್ಕೆ– ೨೦) ಓಂ ಯಮಾಯ ಸ್ವಾಹಾ । ೨೧) ಓಂ ಯಮಪುರುಷೇಭ್ಯಃ ಸ್ವಾಹಾ । (ಪಶ್ಚಿಮದಿಂದ ಪೂರ್ವಕ್ಕೆ) ೨೨) ಓಂ ವರುಣಾಯ ಸ್ವಾಹಾ । ೨೩) ಓಂ ವರುಣಪುರುಷೇಭ್ಯಃ ಸ್ವಾಹಾ । (ಉತ್ತರದಿಂದ ಉತ್ತರಕ್ಕೆ)

**೨೪) ಓಂ ಸೋಮಾಯ ಸ್ವಾಹಾ । ೨೫) ಓಂ ಸೋಮಪುರುಷೇಭ್ಯಃ ಸ್ವಾಹಾ ।** (ಮಧ್ಯದಲ್ಲಿ) **೨೬) ಓಂ ಬ್ರಹ್ಮಣೇ ಸ್ವಾಹಾ । ೨೭) ಓಂ ಬ್ರಹ್ಮಪುರುಷೇಭ್ಯಃ ಸ್ವಾಹಾ ।** (ಬ್ರಹ್ಮನ ದಕ್ಷಿಣದಲ್ಲಿ) **೨೮) ಓಂ ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ।** (ಮೇಲ್ಭಾಗದಲ್ಲಿ) **೨೯) ಓಂ ಸರ್ವೇಭ್ಯೋ ಭೂತೇಭ್ಯಃ ಸ್ವಾಹಾ ।** (ಬ್ರಹ್ಮನ ಉತ್ತರದಲ್ಲಿ) **೩೦) ಓಂ ದಿವಾಚಾರಿಭ್ಯ ಸ್ವಾಹಾ ।** (ಮೇಲ್ಭಾಗದಲ್ಲಿ) **೩೧) ಓಂ ನಕ್ತಂಚಾರಿಭ್ಯಃ ಸ್ವಾಹಾ ।** (ಈಶಾನ್ಯಭಾಗದಲ್ಲಿ) – **೩೨) ಓಂ ರಕ್ಷೋಭ್ಯಃ ಸ್ವಾಹಾ ।** –ಎಂದು ೩೨ ಬಲಿಯನ್ನು ಇಟ್ಟು ಉಳಿದ ಅನ್ನವನ್ನು ಹಾಗೂ ಮೂರನೆಯ ಭಾಗದ ಹವಿಸ್ಸನ್ನು ಶ್ರಾದ್ಧದ ಬಲಿಯ ಸಂದರ್ಭದಲ್ಲಿ ಅದರೊಂದಿಗೆ ಸೇರಿಸಬೇಕು. ಈಗ ವೈಶ್ವದೇವದ ಕೃಷ್ಣಾರ್ಪಣ ಬಿಟ್ಟು, ದೇವರಿಗೆ, ಗುರುಹಿರಿಯರಿಗೆ ನಮಸ್ಕರಿಸಿ ಶ್ರಾದ್ಧ ಮಾಡುವವನಾಗಬೇಕು.

## ಪೀಠಿಕೆ

ಸಾಂವತ್ಸರಿಕಶ್ರಾದ್ಧ ಹಾಗೂ ಮಹಾಲಯಶ್ರಾದ್ಧಕ್ರಮವು ಸಪಿಂಡೀಕರಣಶ್ರಾದ್ಧದ ಕ್ರಮದಂತೆ ಮಾಡಬೇಕು. ಆದರೆ ಕೆಲವೊಂದು ಚಿಕ್ಕ ವ್ಯತ್ಯಾಸಗಳಿದ್ದು ಆ ವ್ಯತ್ಯಾಸಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಿದ್ದು ವ್ಯತ್ಯಾಸಗಳನ್ನು ತಿಳಿದು ಕರ್ಮಾಂಗಾಚರಣೆ ಮಾಡಬೇಕು.

೧) ಪ್ರಮುಖವಾಗಿ ಪ್ರೇತಕ್ಕೆ ಸಂಬಂಧಿಸಿದ ವಿಧಿಯನ್ನು ಬಿಡಬೇಕು. ಉದಾ:– ಸಂಕಲ್ಪಾದಿಗಳಲ್ಲಿ ಬರುವ **'ಅಸ್ಮತ್ಪಿತುಃ ......ಗೋತ್ರಸ್ಯ ......ಶರ್ಮಣಃ .......ಪ್ರೇತಸ್ಯ'** ಎಂಬ ವಾಕ್ಯವನ್ನು ಹೇಳಲಿಕ್ಕಿಲ್ಲ. ಅಲ್ಲದೆ, **ಪ್ರೇತಕಮಂಡಲುಸ್ಥಾಪನ, ಪ್ರೇತಬರ್ಹಿಷಶುದ್ಧಿಃ ಪ್ರೇತಬರ್ಹಿಷ್ಯಾವಾಹನೆ, ಪ್ರೇತಕ್ಷಣಪಾದ್ಯಾದಿ, ಪ್ರೇತಾರ್ಘ್ಯಪಾತ್ರಾಸಾದನಮ್, ಪ್ರೇತಾರಾಧನಮ್, ಪ್ರೇತಾರ್ಘ್ಯಪಾತ್ರಸ್ಥಜಲಸಂಯೋಜನಮ್, ಪ್ರೇತಪಾಣಿಹೋಮ, ಪ್ರೇತಭೋಜನವಿಧಿ, ಪ್ರೇತಪಿಂಡಪ್ರದಾನ, ವೈತರಣೀದಾನ, ಪ್ರೇತಘಟದಾನಾದಿ, ಪ್ರೇತಪಿಂಡಸಂಯೋಜನೆ, ಪ್ರೇತೋದ್ವಾಸನೆ, ಕರ್ಮವಸ್ತ್ರವಿಸರ್ಜನೆ** –ಇವೆಲ್ಲವನ್ನೂ ಬಿಡಬೇಕು.

೨) ಕಾಮಕಾಲಸಂಜ್ಞಕವಿಶ್ವೇದೇವಸ್ಥಾನದಲ್ಲಿ **ಪುರೂರವಾರ್ದ್ರಕಸಂಜ್ಞಕ** ವಿಶ್ವೇದೇವತೆಗಳ ಆರಾಧನೆ.

೩) **ಪಿತಾಮಹ ಪ್ರಪಿತಾಮಹ ವೃದ್ಧಪ್ರಪಿತಾಮಹ** ಸ್ಥಾನದಲ್ಲಿ **ಪಿತೃಪಿತಾಮಹಪ್ರಪಿತಾಮಹ** ಎಂದು ಹೇಳಬೇಕು.

೪) ಸಪಿಂಡೀಕರಣದಲ್ಲಿ ಸಾಕ್ಷಾತ್ ಬ್ರಾಹ್ಮಣರ ಆರಾಧನೆ ವಿಧಾನವನ್ನು ತಿಳಿಸಲಾಗಿದೆ. ಸಾಂವತ್ಸರಿಕದಲ್ಲಿ ಕೂರ್ಚಬ್ರಾಹ್ಮಣಾರಾಧನೆಯನ್ನು ಮಾಡುವುದಾದರೆ ಕೂರ್ಚವನ್ನು ಬ್ರಾಹ್ಮಣ ಎಂದು ತಿಳಿದು ಬ್ರಾಹ್ಮಣರಿಗೆ ಮಾಡುವ ಕ್ರಿಯಾವಿಶೇಷತೆಗಳನ್ನು ಕೂರ್ಚದಲ್ಲಿ ಆಯಾ ಭಾಗದಲ್ಲಿ ಮಾಡಬೇಕು. ಉದಾ: ಬ್ರಾಹ್ಮಣರ ಬಲಗೈಯಲ್ಲಿ ಅರ್ಘ್ಯ ಕೊಟ್ಟು ಎಂದು ಇದ್ದಲ್ಲಿ ಕೂರ್ಚದ ಬಲಭಾಗಕ್ಕೆ ಕೊಡುವುದು. ಬ್ರಾಹ್ಮಣರ ಎಡ ಭಾಗವನ್ನು ಮುಟ್ಟಿ ಎಂದಿದ್ದಲ್ಲಿ ಕೂರ್ಚದ ಎಡಭಾಗವನ್ನು ಮುಟ್ಟುವುದು.

೫) ಕೆಲವು ಕಡೆಗಳಲ್ಲಿ ಶ್ರಾದ್ಧರಕ್ಷಕ ವಿಷ್ಣುವಿನ ಶಾಲಗ್ರಾಮಾದಿಗಳನ್ನಿಟ್ಟು ಆರಾಧನೆ ಮಾಡುತ್ತಾರೆ. ಇಂತಹ ಸಂಪ್ರದಾಯ ಇಲ್ಲದವರು ಆ ಸಂದರ್ಭದಲ್ಲಿ ಕೈಮುಗಿದು ಪ್ರಾರ್ಥನೆ ಮಾಡಬಹುದು.

೬) ಶ್ರಾದ್ಧಕಾಲದಲ್ಲಿ **ಗಯಾಗದಾಧರನ ಸ್ತೋತ್ರ, ರಾಮಸ್ತೋತ್ರ, ಕಠೋಪನಿಷತ್, ಅನ್ನಸೂಕ್ತ, ಅಭಿಶ್ರವಣಸೂಕ್ತ** ಹಾಗೂ ಪಿತೃಸೂಕ್ತಗಳನ್ನು ಅವಶ್ಯವಾಗಿ ಪಠಿಸಬೇಕು.

೭) ಆಚಾರ್ಯರಿಂದ ಮೂರು ಎಳೆಯ ಮೂರು ಪವಿತ್ರಗಳನ್ನು ಪಡೆದು ಒಂದು ಪವಿತ್ರವನ್ನು ಧರಿಸಿ ಉಳಿದ ಎರಡು ಪವಿತ್ರಗಳನ್ನು ಬದಿಯಲ್ಲಿಟ್ಟು ಸಂಕಲ್ಪ ಮಾಡಬೇಕು.

ಪವಿತ್ರಧಾರಣೆಯ ಅವಧಿ–

೧. ಸಂಕಲ್ಪದಿಂದ ಪಾದಪ್ರಕ್ಷಾಲನದವರೆಗೆ, ಅನಂತರ ವಿಸರ್ಜನೆ.

೨. ಪಾದಪ್ರಕ್ಷಾಲನದಿಂದ ಘ್ರಾಣಭಕ್ಷಣದವರೆಗೆ, ಅನಂತರ ವಿಸರ್ಜನೆ.

೩. ಘ್ರಾಣಭಕ್ಷಣದಿಂದ ಭೋಜನಾಂತ್ಯದವರೆಗೆ, ಅನಂತರ ವಿಸರ್ಜನೆ.

(ಕೆಲವರಲ್ಲಿ ಮೂರು ಎಳೆಯ ಐದು ಪವಿತ್ರಗಳನ್ನು ಕೊಡುವ ಕ್ರಮವಿದೆ.)

೧. ಸಂಕಲ್ಪದಿಂದ ಪಾದಪ್ರಕ್ಷಾಲನದವರೆಗೆ

೨. ಪಾದಪ್ರಕ್ಷಾಲನದಿಂದ ಪ್ರಕಿರಬಲಿಯವರೆಗೆ

೩. ಪ್ರಕಿರಬಲಿಯಿಂದ ಘ್ರಾಣಭಕ್ಷಣದವರೆಗೆ

೪. ಘ್ರಾಣಭಕ್ಷಣದಿಂದ ಶ್ರಾದ್ಧಕರ್ಮಾಂತ್ಯದವರೆಗೆ (ಕೆಲವರಲ್ಲಿ ಘ್ರಾಣಭಕ್ಷಣದಿಂದ ವಾಯಸಬಲಿಯವರೆಗೆ)

೫. ತರ್ಪಣದಿಂದ ಬ್ರಾಹ್ಮಣರ ಆರಾಧನೆಯವರೆಗೆ (ವಾಯಸಬಲಿಯಿಂದ ಬ್ರಾಹ್ಮಣಾ ರಾಧನೆಯವರೆಗೆ).

## ಸಂಕಲ್ಪಃ

**ವಿಷ್ಣು ಪುಣ್ಯತಿಥೌ** (ಎಡ) **ಪಿತೃಪಿತಾಮಹಪ್ರಪಿತಾಮಹಾನಾಂ ........ಶರ್ಮಣಾಂ ...........ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥ ಶ್ರೀಪ್ರದ್ಯುಮ್ನಸಂಕರ್ಷಣವಾಸುದೇವಾನಾಂ ತೃಪ್ತ್ಯರ್ಥಂ** (ಬಲ) **ಪುರೂರವಾರ್ದ್ರವ ಸಂಜ್ಞಕವಿಶ್ವೇದೇವಾಂತರ್ಯಾಮಿ ಪ್ರಾಣಸ್ಥನಾರಾಯಣಾನಿರುದ್ಧ ಪ್ರೀತ್ಯರ್ಥಂ ಪಾರ್ವಣ ವಿಧಾನೇನ ಪಿತುಃ ಸಾಂವತ್ಸರಿಕಶ್ರಾದ್ಧಾಖ್ಯಂ ಕರ್ಮ ಕರಿಷ್ಯೇ ॥**

**[ಅಸ್ಮನ್ಮಾತೃಪಿತಾಮಹಿಪ್ರಪಿತಾಮಹೀನಾಂ .....ದಾನಾಂ ......ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಮ್ ಪ್ರೀತ್ಯರ್ಥಂ** (ಬಲ) **ಪುರೂರವಾರ್ದ್ರವ ಸಂಜ್ಞಕ ವಿಶ್ವೇದೇವಾಂ–ತರ್ಯಾಮಿ ಪ್ರಾಣಸ್ಥನಾರಾಯಣಾನಿರುದ್ಧಯೋಃ ಪ್ರೀತ್ಯರ್ಥಂ]**

**ಆಸನಮ್**

**'ಅಸ್ಮತ್ಪಿತುಃ ....ಶರ್ಮಣಃ .... ಗೋತ್ರಸ್ಯ ವಸುರೂಪಸ್ಯ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸ್ಯ ಇದಮಾಸನಮ್ ।'**

**[ಅಸ್ಮನ್ಮಾತುಃ ........ದಾಯಾಃ ....... ಗೋತ್ರಾಯಾಃ ವಸುರೂಪಾಯಾಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸ್ಯ ಇದಮಾಸನಮ್ । ಪಿತಾಮಹ್ಯಾಃ । ಪ್ರಪಿತಾಮಹ್ಯಾಃ ।]**

**ಏರಕಾಯಾಮ್**

**ಅಸ್ಮತ್ಪಿತೃಪಿತಾಮಹಪ್ರಪಿತಾಮಹಾನಾಂ .......ಶರ್ಮಣಾಂ ......ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಮಿದಮಿದಮಾಸನಮ್ ।**

**[ಅಸ್ಮನ್ಮಾತೃಪಿತಾಮಹಿಪ್ರಪಿತಾಮಹೀನಾಂ .....ದಾನಾಂ ......ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಮಿದಮಿದಮಾಸನಮ್ ॥]**

**ಆವಾಹನೇ**

**ಅಸ್ಮತ್ಪಿತರಂ ....ಶರ್ಮಾಣಂ ....... ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಮಾವಾಹಯಾಮಿ ।**

**[ಅಸ್ಮನ್ಮಾತರಂ ....ದಾಂ ....... ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಮಾವಾಹಯಾಮಿ ।]**

**ಕ್ಷಣೇ**

**ಪಿತುಃ .....ಶ್ರಾದ್ಧೇ ಪುರೂರವಾರ್ದ್ರವ ಸಂಜ್ಞಕ ವಿಶ್ವೇದೇವಾಂತರ್ಯಾಮಿ ಪ್ರಾಣಸ್ಥನಾರಾಯಣಾನಿರುದ್ಧಯೋಃ ಸ್ಥಾನೇ ಆವಹನೀಯಾರ್ಥೇ ಕ್ಷಣಃ ।**

**ಅಸ್ಮತ್ಪಿತೃಪಿತಾಮಹಪ್ರಪಿತಾಮಹಾನಾಂ .......ಶರ್ಮಣಾಂ ......ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ಸ್ಥಾನೇ ಆವಹನೀಯಾರ್ಥೇ ಕ್ಷಣಃ ।**

**[ಅಸ್ಮನ್ಮಾತೃಪಿತಾಮಹಿಪ್ರಪಿತಾಮಹೀನಾಂ .....ದಾನಾಂ ......ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ಸ್ಥಾನೇ ಆವಹನೀಯಾರ್ಥೇ ಕ್ಷಣಃ ।]**

ಸಾಂವತ್ಸರಿಕಶ್ರಾದ್ಧದಲ್ಲಿ ಬ್ರಾಹ್ಮಣರನ್ನು ಕುಳ್ಳಿರಿಸಿ ಕಾಲು ತೊಳೆಯಬೇಕು.

**ಅರ್ಘ್ಯೇ**

**ಅಸ್ಮತ್ಪಿತುಃ ......ಶ್ರಾದ್ಧೇ ಅಸ್ಮತ್ಪಿತಃ ......ಶರ್ಮನ್ ..... ಗೋತ್ರ ..ವಸುರೂಪ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಇದಂ ತೇ ಅರ್ಘ್ಯಂ ಸ್ವಧಾ ನಮಃ । ಓಮ್ ಓಂ ನಮೋ ನಾರಾಯಣಾಯ ಓಮ್ ॥**

**[ಅಸ್ಮನ್ಮಾತುಃ ......ಶ್ರಾದ್ಧೇ ಅಸ್ಮನ್ಮಾತಃ .......ದೇ .........ಗೋತ್ರೇ .....ರೂಪೇ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಇದಂ ತೇ ಅರ್ಘ್ಯಂ ಸ್ವಧಾ ನಮಃ । ಓಮ್ ಓಂ ನಮೋ ನಾರಾಯಣಾಯ ಓಮ್ ॥]**

**ಅಸ್ಮತ್ಪಿತೃಪಿತಾಮಹಪ್ರಪಿತಾಮಹಾಃ .......ಶರ್ಮಾಣಃ ......ಗೋತ್ರಾಃ ವಸು ರುದ್ರಾದಿತ್ಯಸ್ವರೂಪಾಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣವಾಸುದೇವಾಃ ಇದಂ ವೋ ಅರ್ಘ್ಯಮ್ ಇದಂ ವೋ ಅರ್ಘ್ಯಮ್ । ಇದಂ ವೋ ಅರ್ಘ್ಯಮ್ ॥**

**[ಅಸ್ಮನ್ಮಾತೃಪಿತಾಮಹಿಪ್ರಪಿತಾಮಹ್ಯಃ .....ದಾಃ ......ಗೋತ್ರಾಃ ವಸುರುದ್ರಾದಿತ್ಯಸ್ವರೂಪಾಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣವಾಸುದೇವಾಃ. ಇದಂ ವೋ ಅರ್ಘ್ಯಮ್ । ಇದಂ ವೋ ಅರ್ಘ್ಯಮ್ । ಇದಂ ವೋ ಅರ್ಘ್ಯಮ್ ॥]**

ಸಾಂವತ್ಸರಿಕಶ್ರಾದ್ಧದಲ್ಲಿ ಕರ್ತೃವಿಗೆ ಅಕ್ಕತಂಗಿಯರಿದ್ದರೆ ಕೂರ್ಚಸ್ಥಾನದಲ್ಲಿ (ಬ್ರಾಹ್ಮಣರಿಗೆ) ಅವರೇ ಬಡಿಸುವ ಕ್ರಮವಿದೆ.

ಹವಿಸ್ಸಿನ ಮೇಲೆ ಸಟ್ಟುಗದಿಂದ ಗುಣಿಸುವಿನಾಕಾರದ ಚಿಹ್ನೆ ಮಾಡಿ ಪೂರ್ವಭಾಗದ ಸ್ವಲ್ಪ ಅನ್ನವನ್ನು ಪಾಣಿಹೋಮಕ್ಕಾಗಿ ಪಿಂಡ ಮಾಡುವ ಎಲೆಯ ವಾಯವ್ಯಭಾಗದಲ್ಲಿ ಹಾಕಿ ದಕ್ಷಿಣಭಾಗದ ಸ್ವಲ್ಪ ಅನ್ನವನ್ನು ಗೋಗ್ರಾಸದ ಎಲೆಗೆ ಹಾಕಿ ಪಶ್ಚಿಮ ಭಾಗದ ಸ್ವಲ್ಪ ಅನ್ನವನ್ನು ವಿಶ್ವೇದೇವಸ್ಥಾನದ ಎಲೆಗೆ ಹಾಕಿ, ಉತ್ತರದಲ್ಲಿ ಪಿತೃಸ್ಥಾನದ ಎಲೆಗೆ ಸ್ವಲ್ಪ ಹಾಕಿ, ಅನಂತರ ಎಲ್ಲಾ ಅನ್ನವನ್ನು ಪಿಂಡದ ಎಲೆಗೆ ಹಾಕಬೇಕು.

ಪಾಣಿಹೋಮಾರ್ಥವಾಗಿ ಎಲೆಯಲ್ಲಿ ಬೇರೆ ತೆಗೆದಿಟ್ಟ ಅನ್ನವನ್ನು ನಾಲ್ಕು ಪಾಲು ಮಾಡಿ ಮೊದಲನೆಯ ಪಾಲನ್ನು ಪಾಣಿಹೋಮಕ್ಕೆ, ಎರಡನೆಯ ಪಾಲನ್ನು ಬ್ರಾಹ್ಮಣರ ಎಲೆಗೆ, ಮೂರನೆಯ ಪಾಲನ್ನು ವಿಕಿರಬಲಿಗೆ, ನಾಲ್ಕನೆಯ ಪಾಲನ್ನು ಪಿಂಡಕ್ಕೆ ಉಪಯೋಗಿಸಬೇಕು. ಅನಂತರ ಬ್ರಾಹ್ಮಣರ ಕೈಯಲ್ಲಿರುವ ಪಾಣಿಹೋಮದ ಅನ್ನವನ್ನು ಅಗ್ನಿಗೆ ಹಾಕಬೇಕು. (ಕೆಲವರಲ್ಲಿ ಯಜಮಾನನು ತನ್ನ ಹೆಬ್ಬೆರಳು, ತೋರುಬೆರಳುಗಳಿಂದ 'ಸ್ವಧೇಯಂ' ಎಂದು ಮೂರು ಬಾರಿ ತೆಗೆದು ಪಿತೃಸ್ಥಾನದ ಬ್ರಾಹ್ಮಣರ ಎಲೆಗೆ ಹಾಕುವ ಕ್ರಮವಿದೆ.)

**ಭೋಜನೇ**

**ಅಸ್ಮತ್ಪಿತೃಪಿತಾಮಹಪ್ರಪಿತಾಮಹೇಭ್ಯಃ .......ಶರ್ಮಭ್ಯಃ ......ಗೋತ್ರೇಭ್ಯಃ**

ವಸುರುದ್ರಾದಿತ್ಯಸ್ವರೂಪೇಭ್ಯಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣವಾಸುದೇವೇಭ್ಯ ಇದಮನ್ನಮಮೃತರೂಪಂ.......

[ಅಸ್ಮನ್ಮಾತೃಪಿತಾಮಹಿಪ್ರಪಿತಾಮಹೀಭ್ಯಃ .....ದಾಭ್ಯಃ ....ಗೋತ್ರಾಭ್ಯಃ ವಸು ರುದ್ರಾದಿತ್ಯಸ್ವರೂಪಾಭ್ಯಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವೇಭ್ಯ ಇದಮನ್ನಮಮೃತರೂಪಂ....... ]

### ತಿಲೋದಕೇ

ಮಾರ್ಜಯಂತಾಂ ಪಿತರಃ । ಮಾರ್ಜಯಂತಾಂ ಪಿತಾಮಹಾಃ ಮಾರ್ಜ-ಯಂತಾಂ ಪ್ರಪಿತಾಮಹಾಃ ॥

[ಮಾರ್ಜಯಂತಾಂ ಮಾತರಃ । ಮಾರ್ಜಯಂತಾಂ ಪಿತಾಮಹ್ಯಃ । ಮಾರ್ಜ-ಯಂತಾಂ ಪ್ರಪಿತಾಮಹ್ಯಃ ।]

### ಪಿಂಡಪ್ರದಾನೇ

ಅಸ್ಮತ್ಪಿತುಃ ......ಶ್ರಾದ್ಧೇ ಅಸ್ಮತ್ಪಿತಃ ......ಶರ್ಮನ್ ..... ಗೋತ್ರ .....ವಸುರೂಪ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಯೇ ಚ ತ್ವಾಮತ್ರಾನು । ಪಿತ್ರೇ ....ಶರ್ಮಣೇ ......ಗೋತ್ರಾಯ ವಸುರೂಪಾಯ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಾಯ ಯೇ ಚ ತಮನುಗಚ್ಛಂತಿ ತೇಭ್ಯಶ್ಚಾಯಂ ಪಿಂಡಃ ತಸ್ಮೈ ತೇ ಸ್ವಧಾ ನಮಃ । ಓಮ್ ಓಂ ನಮೋ ನಾರಾಯಣಾಯ ಓಮ್ ॥

[ಅಸ್ಮನ್ಮಾತುಃ ......ಶ್ರಾದ್ಧೇ ಅಸ್ಮನ್ಮಾತಃ ...ದೇ .... ಗೋತ್ರೇ .....ರೂಪೇ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಯಾಶ್ಚ ತ್ವಾಮತ್ರಾನು । ಮಾತ್ರೇ ...ದಾಯೈ ..... ಗೋತ್ರಾಯೈ ......ರೂಪಾಯೈ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಾಯ ಯಾಶ್ಚ ತಮನುಗಚ್ಛಂತಿ ತಾಭ್ಯಶ್ಚಾಯಂ ಪಿಂಡಃ ತಸ್ಯೈ ತೇ ಸ್ವಧಾ ನಮಃ । ಓಮ್ ಓಂ ನಮೋ ನಾರಾಯಣಾಯ ಓಮ್ ।]

ಯಜಮಾನನು ವಾಯಸಬಲಿ ಇಡಲು ಹೊರಗೆ ಹೋದಾಗ ಯಜಮಾನನ ಹೆಂಡತಿ ಹೊಸ್ತಿಲು ಬರೆದು, ಹಣೆಗೆ ಕುಂಕುಮ ತಲೆಗೆ ಹೂವನ್ನು ಧರಿಸಬೇಕು.

### ತೃಪ್ತಿಜಲೇ

ಅಸ್ಮತುಃ .......ಶ್ರಾದ್ಧೇ ಪಿತುಃ .....ಶರ್ಮಣಃ ...ಗೋತ್ರಸ್ಯ ವಸುರೂಪಸ್ಯ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸ್ಯ ಅಕ್ಷಯ್ಯತಿಲೋದಕಮ್ । ತೃಪ್ತಿರಸ್ತು ತೃಪ್ತಿರಸ್ತು । ತೃಪ್ತಿರಸ್ತು ॥ ಓಂ ನಮೋ ನಾರಾಯಣಾಯ ॥

**[ಅಸ್ಮನ್ಮಾತುಃ .......ಶ್ರಾದ್ಧೇ ಮಾತುಃ .......ದಾಯಾಃ ......ಗೋತ್ರಾಯಾಃ ವಸುರೂಪಾಯಾಃ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸ್ಯ ಅಕ್ಷಯ್ಯತಿಲೋದಕಮ್ । ತೃಪ್ತಿರಸ್ತು ತೃಪ್ತಿರಸ್ತು । ತೃಪ್ತಿರಸ್ತು ॥ ಓಂ ನಮೋ ನಾರಾಯಣಾಯ ॥]**

ಮಂತ್ರಾಕ್ಷತೆಯ ಅನಂತರ ಹೆಂಡತಿಗೆ ಪಿಂಡಕ್ಕೆ ನೈವೇದ್ಯ ಮಾಡಿದ ಪ್ರಸಾದವನ್ನು ಎತ್ತಿಕೊಡಬೇಕು. ಶ್ರಾದ್ಧದಲ್ಲಿ ಉಳಿದ ಎಳ್ಳನ್ನು ಹಾಗೂ ಬರ್ಹಿಸ್ಸಿನ ಎರಡು ದರ್ಭೆಯನ್ನು ಮರುದಿನದ ಪರೇಽಹನಿತರ್ಪಣಕ್ಕೆ ತೆಗೆದಿಡುವ ಕ್ರಮವಿದೆ. ಶ್ರಾದ್ಧದ ಅನಂತರ ಬ್ರಹ್ಮಯಜ್ಞದ ಪಿತೃತರ್ಪಣ, ಯಮತರ್ಪಣಾದಿಗಳನ್ನು ಕೊಡಬೇಕು.

## ಪಿತೃತರ್ಪಣಮ್



ಯಜ್ಞೋಪವೀತವನ್ನು ಎಡ ಮಾಡಿ ದಕ್ಷಿಣ ಮುಖಮಾಡಿ ತೀರ್ಥ ಹಾಗೂ ಎಳ್ಳು ಹಿಡಿದು ದರ್ಭೆಯ ತುದಿ ಬುಡದಿಂದ ತೋರುಬೆರಳು ಹಾಗೂ ಹೆಬ್ಬೆರಳಿನ ಮೂಲದಿಂದ ಹೇಳಿದ ಸಂಖ್ಯೆಗೆ ಅನುಗುಣವಾಗಿ ನಾಮ ಗೋತ್ರೋಚ್ಚಾರಣಪೂರ್ವಕ ತರ್ಪಣ ಕೊಡಬೇಕು.

* ಪಿತೃ, ಮಾತೃ, ಮಾತಾಮಹವರ್ಗಕ್ಕೆ ಮೂರು ಮೂರು ತರ್ಪಣ.
* ಸಾಪತ್ನಜನನಿಗೆ, ಗುರು (ವಿದ್ಯೆ ಕೊಟ್ಟವರು), ಆಚಾರ್ಯ (ಪುರೋಹಿತರು) ಹಾಗೂ ಸ್ವಾಮಿಗೆ (ಪೋಷಕರು) ಎರಡು ತರ್ಪಣ.
* ಮಾತಾಮಹೀ, ಪಿತೃವ್ಯಾದಿಗಳಿಗೆ ಒಂದು ತರ್ಪಣ.

**ಅಸ್ಮತ್ಪಿತರಂ** ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥

**ಅಸ್ಮತ್‌ಪಿತಾಮಹಂ** ....ಶರ್ಮಾಣಂ ....ಗೋತ್ರಂ ರುದ್ರರೂಪಂ ತದಂತರ್ಯಾಮಿ ಸಂಕರ್ಷಣಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥

**ಅಸ್ಮತ್‌ಪ್ರಪಿತಾಮಹಂ** ....ಶರ್ಮಾಣಂ ....ಗೋತ್ರಮ್ ಆದಿತ್ಯರೂಪಂ ತದಂತರ್ಯಾಮಿವಾಸುದೇವಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥

**ಅಸ್ಮನ್ಮಾತರಂ** ....ದಾಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥

**ಅಸ್ಮತ್‌ಪಿತಾಮಹೀಂ** ....ದಾಂ ....ಗೋತ್ರಾಂ ರುದ್ರರೂಪಾಂ ತದಂತರ್ಯಾಮಿ ಸಂಕರ್ಷಣಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥

**ಅಸ್ಮತ್ಪ್ರಪಿತಾಮಹೀಂ** ....ದಾಂ ....ಗೋತ್ರಾಮ್ ಆದಿತ್ಯರೂಪಾಂ ತದಂತರ್ಯಾಮಿ ವಾಸುದೇವಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥

**ಸಾಪತ್ನಜನನೀಂ** ....ದಾಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ ॥

**ಮಾತಾಮಹಂ** ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥

**ಮಾತುಃ ಪಿತಾಮಹಂ** ....ಶರ್ಮಾಣಂ ....ಗೋತ್ರಂ ರುದ್ರರೂಪಂ ತದಂತರ್ಯಾಮಿಸಂಕರ್ಷಣಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥

**ಮಾತುಃ ಪ್ರಪಿತಾಮಹಂ** ....ಶರ್ಮಾಣಂ ....ಗೋತ್ರಮ್ ಆದಿತ್ಯರೂಪಂ ತದಂತರ್ಯಾಮಿವಾಸುದೇವಂ ಸ್ವಧಾ ನಮಸ್ತರ್ಪಯಾಮಿ । ತರ್ಪಯಾಮಿ । ತರ್ಪಯಾಮಿ ॥

**ಮಾತಾಮಹೀಂ** ....ದಾಂ ....ಗೋತ್ರಾಂ ವಸುರೂಪಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥

**ಮಾತುಃ ಪಿತಾಮಹೀಂ** ....ದಾಂ ....ಗೋತ್ರಾಂ ರುದ್ರರೂಪಾಂ ತದಂತರ್ಯಾಮಿ ಸಂಕರ್ಷಣ ಸ್ವಧಾ ನಮಸ್ತರ್ಪಯಾಮಿ ॥

**ಮಾತುಃ ಪ್ರಪಿತಾಮಹೀಂ** ....ದಾಂ ....ಗೋತ್ರಾಮ್ ಆದಿತ್ಯರೂಪಾಂ ತದಂತರ್ಯಾಮಿವಾಸುದೇವಂ ಸ್ವಧಾ ನಮಸ್ತರ್ಪಯಾಮಿ ॥

**ಆತ್ಮಪತ್ನೀಂ** ....ನಾಮ್ನೀಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥

**ಅಸ್ಮತ್ಸುತಂ** ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥

**ಭ್ರಾತರಂ** ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥ **ತತ್ಪತ್ನೀಂ** ॥ **ತತ್ಪುತ್ರಂ** ॥

**ಪಿತೃವ್ಯಂ** ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥ **ತತ್ಪತ್ನೀಂ** ॥ **ತತ್ಪುತ್ರಂ** ॥

**ಮಾತುಲಂ** ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥ **ತತ್ಪತ್ನೀಂ** ॥ **ತತ್ಪುತ್ರಂ** ॥

**ದುಹಿತರಂ** ....ದಾಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥ **ತದ್ಭರ್ತಾರಂ** ॥

**ಭಗಿನೀಂ** ....ದಾಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥ **ದೌಹಿತ್ರಂ** ॥ **ದೌಹಿತ್ರೀಂ** ॥ **ಭಾಗಿನೇಯಕಂ** ॥

**ಪಿತೃಷ್ವಸಾರಂ** ....ದಾಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥ **ತದ್ಭರ್ತಾರಂ** ॥ **ತತ್ಪುತ್ರಂ** ॥

**ಮಾತೃಷ್ವಸಾರಂ** ....ದಾಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥ **ತದ್ಭರ್ತಾರಂ** ॥ **ತತ್ಪುತ್ರಂ** ॥

**ಶ್ವಶುರಂ** ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥ **ಶ್ವಶ್ರೂಂ** ॥

**ಸ್ಯಾಲಕಂ** ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥ **ತತ್ಪತ್ನೀಂ** ॥

**ಭಾವುಕಂ** ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ॥

**ಗುರುಂ** ತರ್ಪಯಾಮಿ । **ತತ್ಪತ್ನೀಂ** ತರ್ಪಯಾಮಿ ॥

**ಆಚಾರ್ಯಂ** ತರ್ಪಯಾಮಿ । **ತತ್ಪತ್ನೀಂ** ತರ್ಪಯಾಮಿ ॥

**ಸ್ವಾಮಿನಂ** ತರ್ಪಯಾಮಿ । **ತತ್ಪತ್ನೀಂ** ತರ್ಪಯಾಮಿ ॥

**ಅಸ್ಮತ್ಸಖಂ** ತರ್ಪಯಾಮಿ । **ತತ್ಪತ್ನೀಂ** ತರ್ಪಯಾಮಿ ॥

## ಯಮತರ್ಪಣಮ್

ಪೂರ್ವಮುಖವಾಗಿ ಕುಳಿತು ಎಡದಿಂದ (ಅಧಿಕಾರ ಇಲ್ಲದವರು ಬಲದಿಂದ) ದರ್ಭೆಯ ತುದಿ ಹಾಗೂ ಬೆರಳಿನ ತುದಿಗಳು ಪೂರ್ವಕ್ಕೆ ಇರುವಂತೆ ಮಾಡಿಕೊಂಡು ತರ್ಪಣಕೊಡಬೇಕು.

**ಓಂ ಯಮಂ ತರ್ಪಯಾಮಿ । ಧರ್ಮರಾಜಂ ತರ್ಪಯಾಮಿ । ಮೃತ್ಯುಂ ತರ್ಪಯಾಮಿ । ಅಂತಕಂ ತರ್ಪಯಾಮಿ । ವೈವಸ್ವತಂ ತರ್ಪಯಾಮಿ । ಕಾಲಂ ತರ್ಪಯಾಮಿ । ಸರ್ವಭೂತಕ್ಷಯಂ ತರ್ಪಯಾಮಿ । ಔದುಂಬರಂ ತರ್ಪಯಾಮಿ । ದಧ್ನಂ ತರ್ಪಯಾಮಿ । ನೀಲಂ ತರ್ಪಯಾಮಿ । ಪರಮೇಷ್ಠಿನಂ। ವೃಕೋದರಂ ತರ್ಪಯಾಮಿ । ಚಿತ್ರಂ ತರ್ಪಯಾಮಿ । ಚಿತ್ರಗುಪ್ತಂ ತರ್ಪಯಾಮಿ ॥**

**ಯಮೋ ನಿಹಂತಾ ಪಿತೃಧರ್ಮರಾಜೋ ವೈವಸ್ವತೋ ದಂಡಧರಶ್ಚ ಕಾಲಃ ।**
**ಪ್ರೇತಾಧಿಪೋ ದತ್ತಕೃತಾನುಸಾರೀ ಕೃತಾಂತ ಏತದ್ದಶಕೃಜ್ಜಪಂತಿ ॥**

## ಸಙ್ಕ್ಷೇಪತರ್ಪಣಮ್

(ಎಡ) ಪಿತೃತೀರ್ಥದಿಂದ-

ಆಬ್ರಹ್ಮಸ್ತಂಬಪರ್ಯಂತಂ ದೇವರ್ಷಿಪಿತೃಮಾನವಾಃ ।
ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ ॥

ಅತೀತಕುಲಕೋಟೀನಾಂ ಸಪ್ತದ್ವೀಪನಿವಾಸಿನಾಮ್ ।
ಆಬ್ರಹ್ಮಭುವನಾಲ್ಲೋಕಾದಿದಮಸ್ತು ಕುಶೋ[ತಿಲೋ]ದಕಮ್ ॥

## ಸೂತ್ರನಿಷ್ಪೀಡನಮ್

ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ ।
ತೇ ಗೃಹ್ಣಂತು ಮಯಾ ದತ್ತಂ ಸೂತ್ರನಿಷ್ಪೀಡನೋದಕಮ್ ॥

-ಎಂದು ವಸ್ತ್ರವನ್ನು ತನ್ನ ಎಡಭಾಗದಲ್ಲಿ ಹಿಂಡಬೇಕು.

## ಕುಶೋತ್ಸರ್ಜನಮ್

ಯೇಷಾಂ ಪಿತಾ ಚ ನ ಭ್ರಾತಾ ನ ಪುತ್ರೋ ನಾನ್ಯಗೋತ್ರಿಣಃ ।
ತೇ ಸರ್ವೇ ತೃಪ್ತಿಮಾಯಾಂತು ಮಯೋತ್ಸೃಷ್ಟೈಃ ಕುಶೈಸ್ತಥಾ ॥

-ಎಂದು ದರ್ಭೆಯನ್ನು ವಿಸರ್ಜಿಸಿ, ತುಳಸಿ ನೀರು ಹಿಡಿದು-

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾಽಽತ್ಮನಾ ವಾಽನುಸೃತಸ್ವಭಾವಃ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

**ಪ್ರಾಣಸ್ಥಶ್ರೀಗೋಪಾಲಕೃಷ್ಣಃ ಪ್ರೀಯತಾಮ್** ಎಂದು ಕೃಷ್ಣಾರ್ಪಣ ಬಿಡಬೇಕು.

॥ ಶ್ರೀಕೃಷ್ಣಾರ್ಪಣಮಸ್ತು ॥

ಯಜಮಾನನು ತನ್ನ ಮಕ್ಕಳಿಂದ, ಸಂಬಂಧಿಕರಿಂದ ಇಲ್ಲವೇ ಪುರೋಹಿತರಿಂದ ಮನೆಯ ದೇವರಿಗೆ ಪೂಜೆಯನ್ನು ಮಾಡಿಸಬೇಕು. ನೈವೇದ್ಯಸಮಯದಲ್ಲಿ ಬ್ರಾಹ್ಮಣಾರಾಧನೆಗೆ ಮಾಡಿದ ಪದಾರ್ಥಗಳನ್ನು ದೇವರ ಮುಂದಿಟ್ಟು ಸಮರ್ಪಿಸಿ, ವೈಶ್ವದೇವಕ್ಕೆ ಹಾಗೂ ವಿಷ್ವಕ್ಸೇನನಿಗೆ ಬೇರೆಯೇ ತೆಗೆದಿಟ್ಟು ವಿಷ್ವಕ್ಸೇನನಿಗೆ ತೆಗೆದಿಟ್ಟ ಅನ್ನಕ್ಕೆ ಮೊಸರು ಹಾಕಿ ಸಮರ್ಪಿಸಿ, ಉಳಿದ ನೈವೇದ್ಯವನ್ನು ಪ್ರಾಣದೇವರಿಗೆ ಸಮರ್ಪಿಸಿ, ಅನಂತರ ಆರತಿ ಮಾಡಿ, ಆಚಾರ್ಯರಿಂದ ವೈಶ್ವದೇವವನ್ನು ಮಾಡಿಸಬೇಕು.

ವೈಶ್ವದೇವವನ್ನು ಪುಟಸಂಖ್ಯೆ 486ರಲ್ಲಿ ಕೊಟ್ಟಿರುವಂತೆ ೩೨ ಮಂತ್ರಗಳಿಂದ ವೈಶ್ವದೇವದ ಬಲಿಕೊಟ್ಟು (ಎಡ) ಮೂರನೇ ಪಾಲಿನ ಅನ್ನದಿಂದ. (ಆಗ್ನೇಯಭಾಗೇ) ೩೩) **'ಓಂ ಸ್ವಧಾ ಪಿತೃಭ್ಯಃ ಸ್ವಾಹಾ ॥'** ಎಂದು ಬಲಿ ಇಟ್ಟು ಕೈಗೆ ನೀರು ಮುಟ್ಟಿಸಿ (ಬಲ) ಎರಡನೇ ಪಾಲಿನ ಅನ್ನದಿಂದ (ನೈಋತ್ಯಭಾಗೇ) ೩೪) **'ಓಂ ಶ್ಯಾಮಾಯ ಸ್ವಾಹಾ ॥'** (ವಾಯವ್ಯಭಾಗೇ) ೩೫) **'ಓಂ ಶಬಲಾಯ ಸ್ವಾಹಾ ॥'** ಇದರ ಮೇಲ್ಭಾಗದಲ್ಲಿ ೩೬) **'ಓಂ ಸನಕಾದಿಮನುಷ್ಯೇಭ್ಯೋ ಹಂತಾ ॥'** ಎಂದು ಕೊಟ್ಟು ಉಳಿದ ಅನ್ನವನ್ನು ಹಾಗೂ ನೀರನ್ನು ಹಿಡಿದುಕೊಂಡು ಮನೆಯ ಹೊರಗೆ ಅಂಗಳದಲ್ಲಿ ನೀರು ಹಾಕಿ **'ಓಂ ಯೇ ಭೂತಾಃ ಪ್ರಚರಂತಿ ದಿವಾ ನಕ್ತಂ ಬಲಿಮಿಚ್ಛಂತೋ ವಿತುದಸ್ಯ ಪ್ರೇಷ್ಯಾಃ । ತೇಭ್ಯೋ ಬಲಿಂ ಪುಷ್ಟಿಕಾಮೋ ದದಾಮಿ ಮಯಿ ಪುಷ್ಟಿಂ ಪುಷ್ಟಿಪತಿರ್ದದಾತು ಸ್ವಾಹಾ ॥'**

**ಐಂದ್ರವಾರುಣವಾಯವ್ಯಾ ಯಾಮ್ಯಾ ವೈ ನೈರ್ಋತಿಕಾಶ್ಚ ಯೇ ।**
**ತೇ ಕಾಕಾಃ ಪ್ರತಿಗೃಹ್ಣಂತು ಭೂಮ್ಯಾಂ ಪಿಂಡಂ ಮಯೋಜ್ಝಿತಮ್ ॥**

**ದೇವಾ ಮನುಷ್ಯಾ ಪಶವೋ ವಯಾಂಸಿಸಿದ್ಧಾಃ ಸ ಯಕ್ಷೋರಗದೈತ್ಯಸಂಘಾಃ ।**
**ಪ್ರೇತೋ ಪಿಶಾಚಾಸ್ತರವಃ ಸಮಸ್ತಾ ಯೇ ಚಾನ್ನಮಿಚ್ಛಂತಿ ಮಯಾ ಪ್ರದತ್ತಮ್ ॥**

**ಪಿಪೀಲಿಕಾಃ ಕೀಟಪತಂಗಕಾದ್ಯಾ ಬುಭುಕ್ಷಿತಾಃ ಕರ್ಮನಿಬಂಧಬದ್ಧಾಃ ।**
**ತೇಷಾಂ ಹಿ ತೃಪ್ತ್ಯರ್ಥಮಿದಂ ಮಯಾನ್ನಂ ತೇಭ್ಯೋ ವಿಸೃಷ್ಟಂ ಸುಖಿನೋ ಭವಂತು ॥** –ಎಂದು ಅನ್ನವನ್ನೆಲ್ಲ ನೆಲದಲ್ಲಿ ಹರಡಿ ಅತಿಥಿಗಳನ್ನು ನಿರೀಕ್ಷಣೆ ಮಾಡಿ ಅನಂತರ ಕೈಕಾಲು ತೊಳೆದು ಮನೆಯೊಳಗೆ ಬಂದು ಆಚಮನ ಮಾಡಿ,

ಓಂ ಶಾಂತಾ ಪೃಥಿವೀ ಶಿವಮಂತರಿಕ್ಷಂ ದ್ಯೌರ್ನೋ ದೇವ್ಯಭಯಂ ನೋ ಅಸ್ತು । ಶಿವಾ ದಿಶಃ ಪ್ರದಿಶ ಉದ್ದಿಶೋ ನ ಆಪೋ ವಿಶ್ವತಃ ಪರಿಪಾಂತು ಸರ್ವತಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

–ಎಂದು ಕೃಷ್ಣಾರ್ಪಣ ಬಿಡಬೇಕು. ಅನಂತರ, ಆಚಾರ್ಯರಿಗೆ ಪೂಜೆಯ ಹಾಗೂ ವೈಶ್ವದೇವ ಮಾಡಿದ ದಕ್ಷಿಣೆ ಕೊಟ್ಟು, ಬ್ರಾಹ್ಮಣಾರಾಧನೆ ಮಾಡಿ ಬ್ರಾಹ್ಮಣರ ಆಶೀರ್ವಾದವನ್ನು ಪಡೆಯಬೇಕು. ಮರುದಿನ ಪರೇಽಹನಿತರ್ಪಣ ಕೊಡಬೇಕು.

## ಪರೇಽಹನಿ ತರ್ಪಣಮ್

'ಸಕೃನ್ಮಹಾಲಯಶ್ರಾದ್ಧ'ದಲ್ಲಿ ಹಾಗೂ ಸಾಂವತ್ಸರಿಕಶ್ರಾದ್ಧದಲ್ಲಿ ಮರುದಿನ ಬೆಳಗ್ಗೆ ಪರೇಽಹನಿ ತರ್ಪಣ ಕೊಡಬೇಕು. ಈ ಪರೇಽಹನಿ ತರ್ಪಣವು ತಂದೆತಾಯಿಯರ ಶ್ರಾದ್ಧದಲ್ಲಿ ಮಾತ್ರ. ತಾಯಿ ಸತ್ತು ತಂದೆ ಬದುಕಿದ್ದಲ್ಲಿ ತಿಲತರ್ಪಣ ಕೊಡುವಾಗ

ತಂದೆಯ ವರ್ಗಕ್ಕೆ ಕೊಡಲಿಕ್ಕಿಲ್ಲ. ಹಾಗೆಯೇ ತಂದೆ ಮರಣಹೊಂದಿ ತಾಯಿ ಬದುಕಿದ್ದಲ್ಲಿ ತಾಯಿಯ ವರ್ಗಕ್ಕೆ ತರ್ಪಣ ಇದೆ. ಪಿಂಡಪ್ರದಾನ ಇಲ್ಲ. ಅನುಮಾಸಿಕಶ್ರಾದ್ಧ, ಅಬ್ದಿವಿಮೋಕಶ್ರಾದ್ಧ, ಸಪಿಂಡೀಕರಣಶ್ರಾದ್ಧ, ಪ್ರಥಮಾಬ್ದಿಕಶ್ರಾದ್ಧ, ಇವುಗಳಲ್ಲಿ ಪರೇಽಹನಿ ತರ್ಪಣ ಇಲ್ಲ.

ರಾತ್ರಿ ಸಂಧ್ಯಾವಂದನೆ ಮಾತ್ರ ಮಾಡಿ, ದೇವಪೂಜಾದಿಗಳನ್ನು ಮಾಡದೆ, ಮರುದಿನ ಸೂರ್ಯೋದಯಕ್ಕೆ ಮುಂಚೆ ಸ್ನಾನ ಮಾಡಿ ಪರೇಽಹನಿತರ್ಪಣಗಳನ್ನು ಕೊಟ್ಟು ಪುನಃ ಸ್ನಾನ ಮಾಡಿ ಸಂಧ್ಯಾವಂದನೆ ಮಾಡಬೇಕು. ಒಂದು ವೇಳೆ ಉದಯಾನಂತರ ಪರೇಽಹನಿ ತರ್ಪಣ ಕೊಡುವುದಾದರೆ ಸಂಧ್ಯಾವಂದನೆ ಮಾತ್ರ ಮಾಡಿ ತರ್ಪಣ ಕೊಟ್ಟು ಪುನಃ ಸ್ನಾನ ಮಾಡಿ, ಜಪಾದಿಗಳನ್ನು ಮಾಡಬೇಕು.

ದಶಮೀದಿನ ಶ್ರಾದ್ಧವಾದರೆ ಮರುದಿನ ಏಕಾದಶಿಯಾದ್ದರಿಂದ ತರ್ಪಣ ಕೊಡಲು ಇಲ್ಲವಾದ್ದರಿಂದ ದಶಮೀದಿನವೇ ಶ್ರಾದ್ಧದ ಮೊದಲು ತರ್ಪಣ ಕೊಟ್ಟು ಶ್ರಾದ್ಧ ಮಾಡಬೇಕು.

ಒಂದು ವೇಳೆ ಚತುರ್ದಶಿ ಶ್ರಾದ್ಧವಾಗಿ ಮರುದಿನ ದರ್ಶಶ್ರಾದ್ಧವಿದ್ದಲ್ಲಿ ಪರೇಽಹನಿ ತರ್ಪಣದಲ್ಲಿಯೇ ಅಮಾವಾಸ್ಯೆಯ ತರ್ಪಣವೂ ಸೇರಿಬಿಡುವುದರಿಂದ ಪ್ರತ್ಯೇಕ ದರ್ಶತರ್ಪಣಕೊಡಬೇಕಾಗಿಲ್ಲ. ಹೀಗೆ ಉಳಿದ ಷಣ್ಣವತಿಶ್ರಾದ್ಧದಲ್ಲಿಯೂ ತಿಳಿಯಬೇಕು.

**ಸಂಕಲ್ಪಃ** –ತಂದೆ(ತಾಯಿ)ಯ ನಾಮ, ಗೋತ್ರೋಚ್ಚಾರಣಪೂರ್ವಕ '**ಪರೇಽಹನಿ ತರ್ಪಣಂ ಕರಿಷ್ಯೇ ॥**' –ಎಂದು ಸಂಕಲ್ಪ ಮಾಡಿ ಹಿಂದಿನ ದಿನದ ಎಳ್ಳನ್ನು ಹಾಗೂ ಬರ್ಹಿಸ್ ತೆಗೆದಿಟ್ಟಿದ್ದಲ್ಲಿ ಎಳ್ಳನ್ನು ನೀರಿಗೆ ಹಾಕಿ (ಇಲ್ಲವೇ ಎಳ್ಳನ್ನು ತೊಳೆದು ಹಾಕಿ) '**ಅತ್ರಾಽಗಚ್ಛಂತು ಪಿತರಃ**' –ಎಂದು ಹೇಳಿ, ದರ್ಭೆ, ತುಳಸಿಯೊಂದಿಗೆ

**ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ।**
**ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ನಮೋನಮಃ ॥**

–ಎಂದು ತಂದೆಯ ಶ್ರಾದ್ಧವಾಗಿದ್ದರೆ ಪಿತೃಪಿತಾಮಹ ಪ್ರಪಿತಾಮಹರಿಗೆ, ತಾಯಿಯ ಶ್ರಾದ್ಧವಾಗಿದ್ದರೆ ಮಾತೃಪಿತಾಮಹಿಪ್ರಪಿತಾಮಹಿಯರಿಗೆ ನಾಮ ಗೋತ್ರಪೂರ್ವಕ ತರ್ಪಣ ಕೊಟ್ಟು,

**ಆಬ್ರಹ್ಮಸ್ತಂಬಪರ್ಯಂತಂ ಯತ್ಕಿಂಚಿತ್ ಸಚರಾಚರಮ್ ।**
**ಮಯಾ ದತ್ತೇನ ತೋಯೇನ ತೃಪ್ತಿಮಾಯಾತು ಪುಷ್ಕಲಾಮ್ ॥**

'**ಸ್ವರ್ಗಂ ಗಚ್ಛಂತು ಪಿತರಃ**' –ಎಂದು ಹೇಳಿ ಯಜ್ಞೋಪವೀತ ಬಲಮಾಡಿ ಕೃಷ್ಣಾರ್ಪಣ ಬಿಡಬೇಕು.

ಹೀಗೆ ನಿತ್ಯದಲ್ಲಿ ಕೊಡುವಾಗಲೂ ತರ್ಪಣಜಲಕ್ಕೆ ಎಳ್ಳನ್ನು ತೊಳೆದು ದೇವರಿಗೆ ಸಮರ್ಪಿಸಿ ನೀರಿಗೆ ಹಾಕಿ '**ಅತ್ರಾಽಗಚ್ಛಂತು ಪಿತರಃ**' –ಎಂದು ಹೇಳಿ ತರ್ಪಣ ಕೊಟ್ಟು '**ಸ್ವರ್ಗಂ ಗಚ್ಛಂತು ಪಿತರಃ**' –ಎಂದು ಹೇಳಬೇಕು.

* * *

# ಮಹಾಲಯಶ್ರಾದ್ಧವಿಧಿಃ

[ಭಾದ್ರಪದ ಕೃಷ್ಣಪಕ್ಷದ ಹದಿನೈದು ದಿನ ಮತ್ತು ಆಶ್ವಯುಜ ಶುಕ್ಲ ಪಾಡ್ಯ ತಿಥಿ ಕೂಡಿ ಹದಿನಾರು ದಿನಗಳು ಮಹಾಲಯತಿಥಿಗಳು. ಪಾಡ್ಯ, ಷಷ್ಠೀ, ಏಕಾದಶೀ, ದ್ವಾದಶೀ, ಚತುರ್ದಶೀ ಹಾಗೂ ಮಂಗಳವಾರ, ಶುಕ್ರವಾರ ಬಿಟ್ಟು ದ್ವಿತೀಯಾ, ಅಷ್ಟಮೀ, ತ್ರಯೋದಶೀ, ಅಮಾವಾಸ್ಯಾ, ವ್ಯತೀಪಾತ, ಭರಣಿ –ಇವು ಮಹಾಲಯಕ್ಕೆ ಪ್ರಶಸ್ತವಾಗಿವೆ. ಅಲ್ಲದೆ, ಪಿತೃತಿಥಿನಿಯಮವನ್ನು ಹಿಡಿದು 'ಸಕೃನ್ಮಹಾಲಯಶ್ರಾದ್ಧ' ಮಾಡಬಹುದು. ಅಲ್ಲದೆ, ಪಿತೃಪಿತಾಮಹಪ್ರಪಿತಾಮಹರು ದುರ್ಮರಣಹೊಂದಿದ್ದಲ್ಲಿ ಚತುರ್ದಶಿಯಂದು ಪಿಂಡಪ್ರದಾನ ಮಾಡಬೇಕು. ಒಂದು ವೇಳೆ ಚತುರ್ದಶಿಯು ಮೃತತಿಥಿಯಾಗಿದ್ದಲ್ಲಿ ಆ ದಿನದಲ್ಲಿ ಪಿಂಡಪ್ರದಾನ ಮಾಡದೆ ಮರುದಿನ ಮಾಡಬೇಕು. ದ್ವಾದಶಿಯಂದು ಸಂನ್ಯಾಸಿಗಳಿಗೆ ಎಂದು ಹೇಳಲ್ಪಟ್ಟಿದೆ. ತಂದೆ ಬದುಕಿದ್ದು ತಾಯಿ ಮೃತಪಟ್ಟಿದ್ದರೆ ತಂದೆ ಬದುಕಿರುವಷ್ಟು ದಿನ ನವಮೀತಿಥಿಯಂದು ಪುತ್ರರು ಶ್ರಾದ್ಧವನ್ನು ಈ ಪಕ್ಷದಲ್ಲಿ ಮಾಡಬೇಕು.

ಮಹಾಲಯಶ್ರಾದ್ಧ ಮಾಡಲು ಜ್ಯೇಷ್ಠ ಪುತ್ರನೊಬ್ಬನೇ ಅಧಿಕಾರಿ. ಜ್ಯೇಷ್ಠನು ಮೃತನಾದರೆ ಉಳಿದ ಸಹೋದರರಲ್ಲಿ ಕನಿಷ್ಠ ಪುತ್ರನೇ ಅಧಿಕಾರಿ. ತಾಯಿ ಬದುಕಿದ್ದಲ್ಲಿ ಮಾತೃವರ್ಗವನ್ನು ಹಾಗೆಯೇ ಖಾಲಿ ಬಿಡಬೇಕು. ಮಹಾಲಯಪಕ್ಷದಲ್ಲಿ ತಂದೆತಾಯಿಯರ ವಾರ್ಷಿಕ ತಿಥಿಶ್ರಾದ್ಧ ಬಂದರೆ ಆ ದಿನ ಮೊದಲು ವಾರ್ಷಿಕಶ್ರಾದ್ಧ ಮಾಡಿ, ಅನಂತರ ಮಹಾಲಯ ಶ್ರಾದ್ಧ ಮಾಡಬೇಕು. ಆಶೌಚಾದಿಗಳಿಂದ ಮಹಾಲಯ ಮಾಡಲು ಆಗದಿದ್ದರೆ ಮುಂದಿನ ಅಶ್ವಯುಜಮಾಸದ ತಿಥಿಯಲ್ಲಿ ಆಚರಿಸಬೇಕು.

ಮಹಾಲಯಶ್ರಾದ್ಧವನ್ನು ಸಾಂವತ್ಸರಿಕಶ್ರಾದ್ಧಕ್ರಮದಂತೆ ಮಾಡುವುದು. ಕೆಲವೊಂದು ವ್ಯತ್ಯಾಸಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

೧) ಮಹಾಲಯದಲ್ಲಿ **'ಧುರಿಲೋಚನ'** ಎಂಬ ವಿಶ್ವೇದೇವತೆಗಳ ಆರಾಧನೆ.

೨) ಪಿತೃಸ್ಥಾನದಲ್ಲಿ ಮೂರು, ಐದು, ಏಳು, ಹದಿಮೂರು ಅರ್ಘ್ಯಪಾತ್ರವನ್ನು ಹಾಗೂ ಕೂರ್ಚಸ್ಥಾನಗಳನ್ನು ಇಡಬಹುದು. ಇಲ್ಲಿ ಮೂರು ಅರ್ಘ್ಯಪಾತ್ರಗಳನ್ನು ಹಾಗೂ ಮೂರು ಕೂರ್ಚಸ್ಥಾನಗಳನ್ನು ಉಲ್ಲೇಖಿಸಿದ್ದು.

* **'ಸಪತ್ನೀಕ ಪಿತೃಪಿತಾಮಹಪ್ರಪಿತಾಮಹ ॥'** ಎಂದು
* **'ಸಪತ್ನೀಕ ಮಾತಾಮಹಮಾತುಪಿತಾಮಹ ಮಾತುಃಪ್ರಪಿತಾಮಹ ॥'** ಎಂದು,
* **ಜ್ಞಾತಾಜ್ಞಾತಾದಿ ಉಭಯಕುಲಸಮಸ್ತಪಿತೄಣಾಮ್** ॥ ಎಂದು ಮೂರು ಅರ್ಘ್ಯ ಪಾತ್ರಗಳನ್ನು ಹಾಗೂ ಮೂರು ಕೂರ್ಚಸ್ಥಾನಗಳನ್ನು ಇಡಬೇಕು.

ಬೆಳಗ್ಗಿನ ಸಂಧ್ಯಾವಂದನೆ, ದೇವರಪೂಜೆ ಮಾಡಿ, ಬ್ರಹ್ಮಯಜ್ಞ, ದೇವರ್ಷಿ ತರ್ಪಣ ಕೊಟ್ಟು ಪಿತ್ರಾದಿಗಳ ತರ್ಪಣವನ್ನು ಶ್ರಾದ್ಧದ ಅನಂತರ ಕೊಡಬೇಕು. ಔಪಾಸನಾದಿ ನಿತ್ಯಕರ್ಮಗಳನ್ನು ಮುಗಿಸಿ, ಸ್ನಾನ ಮಾಡಿ, ಷಟ್ಪುಚ್ಛ ವಸ್ತ್ರವನ್ನುಟ್ಟು ಔಪಾಸನಾಗ್ನಿಯಿಂದ ಹವಿಸ್ಸನ್ನು ಮಾಡಬೇಕು. ಅನಂತರ ದೇವರಿಗೆ ಹವಿಸ್ಸನ್ನು ಸಮರ್ಪಿಸಿ, ಆ ಹವಿಸ್ಸಿನ

ಸ್ವಲ್ಪ ಅನ್ನವನ್ನು ತೆಗೆದು, ವೈಶ್ವದೇವ ಮಾಡಿ, ಬಲಿಭಾಗವನ್ನು ತೆಗೆದಿಟ್ಟು, ಆಗ ಕೊಡದೆ ಅದನ್ನು ಶ್ರಾದ್ಧದ ಬಲಿಹರಣದಲ್ಲಿ ಸೇರಿಸಬೇಕು. ಮೊದಲ ಪಿತ್ರಾದಿ ನಾಲ್ಕು ವರ್ಗದ ಪಿಂಡಗಳು ಹಾಗೂ ಜ್ಞಾತಾಜ್ಞಾತಾದಿಗಳ ಒಂದೊಂದು ಪಿಂಡವು ತೆಂಗಿನಕಾಯಿ ಪ್ರಮಾಣದಷ್ಟು ದೊಡ್ಡದಾಗಿರಬೇಕು. ಪಿತೃವ್ಯಾದಿ ಪಿಂಡಗಳು ಹಾಗೂ ಅನುಲೇಪನ ಪಿಂಡ, ಬಿಲ್ವಹಣ್ಣಿನ ಪ್ರಮಾಣದಷ್ಟು ದೊಡ್ಡದಾಗಿರಬೇಕು. ಧರ್ಮಪಿಂಡಗಳು ನೆಲ್ಲಿಕಾಯಿ ಪ್ರಮಾಣದಷ್ಟು ದೊಡ್ಡದಾಗಿರಬೇಕು.]

**ಅದ್ಯ ಪೂರ್ವೋಚ್ಚರಿತೈವಂಗುಣ ........ ಪ್ರಾಣಸ್ಥಶ್ರೀಲಕ್ಷ್ಮೀಜನಾರ್ದನಪ್ರೇರಣಯಾ ಲಕ್ಷ್ಮೀ ಜನಾರ್ದನಪ್ರೀತ್ಯರ್ಥಮ್ ಆಷಾಢಾದಿಪಂಚಮಾಪರಪಕ್ಷೇ ಕನ್ಯಾಗತೇ ಸವಿತರಿ ಸಕೃನ್ಮಹಾಲಯಶ್ರಾದ್ಧೇ** (ಎಡ)

೧. **ಅಸ್ಮತ್ಪಿತೃಪಿತಾಮಹಪ್ರಪಿತಾಮಹಾನಾಂ ......ಶರ್ಮಣಾಂ ......ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಮ್ ॥**

೨. **ಮಾತೃಪಿತಾಮಹಿಪ್ರಪಿತಾಮಹೀನಾಂ ......ದಾನಾಂ ......ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಮ್ ॥**

೩. **ಮಾತಾಮಹಮಾತುಃಪಿತಾಮಹ ಮಾತುಃಪ್ರಪಿತಾಮಹಾನಾಂ ......ಶರ್ಮಣಾಂ ......ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಮ್ ॥**

೪. **ಮಾತಾಮಹಿಮಾತುಃಪಿತಾಮಹಿಮಾತುಃಪ್ರಪಿತಾಮಹೀನಾಂ ......ದಾನಾಂ ......ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಮ್ ॥**

೫. **ಸಾಪತ್ನಜನನ್ಯಾಃ ......ದಾಯಾಃ ......ಗೋತ್ರಾಯಾಃ ॥**

೬. **ಜ್ಯೇಷ್ಠ (ಕನಿಷ್ಠ) ಪಿತೃವ್ಯಸ್ಯ ......ಶರ್ಮಣಃ ......ಗೋತ್ರಸ್ಯ ॥ ತತ್ಪತ್ನ್ಯಾಃ ......ದಾಯಾಃ .....ಗೋತ್ರಾಯಾಃ ॥ ತತ್ಪುತ್ರಸ್ಯ ......ಶರ್ಮಣಃ ......ಗೋತ್ರಸ್ಯ ॥**

೭. **ಆತ್ಮಜ್ಯೇಷ್ಠ (ಕನಿಷ್ಠ) ಭ್ರಾತುಃ ......ಶರ್ಮಣ ......ಗೋತ್ರಸ್ಯ ॥ ತತ್ಪತ್ನ್ಯಾಃ .....ದಾಯಾಃ ......ಗೋತ್ರಾಯಾಃ ॥ ತತ್ಪುತ್ರಸ್ಯ ......ಶರ್ಮಣಃ ......ಗೋತ್ರಸ್ಯ ॥**

೮. **ಆತ್ಮಪತ್ನ್ಯಾಃ ......ದಾಯಾಃ ......ಗೋತ್ರಾಯಾಃ ॥**

೯. **ಆತ್ಮಪುತ್ರಸ್ಯ ......ಶರ್ಮಣಃ ......ಗೋತ್ರಸ್ಯ ॥ ಸ್ನುಷಾಯಾಃ ......ದಾಯಾಃ ......ಗೋತ್ರಾಯಾಃ ॥**

೧೦. **ಪಿತೃಜ್ಯೇಷ್ಠ(ಕನಿಷ್ಠ)ಭಗಿನ್ಯಾಃ ......ದಾಯಾಃ ......ಗೋತ್ರಾಯಾಃ ॥ ತದ್ಭರ್ತುಃ ......ಶರ್ಮಣಃ ......ಗೋತ್ರಸ್ಯ ॥**

೧೧. **ಮಾತುಲಸ್ಯ ......ಶರ್ಮಣ ......ಗೋತ್ರಸ್ಯ ॥ ತತ್ಪತ್ನ್ಯಾಃ ......ದಾಯಾಃ ......ಗೋತ್ರಾಯಾಃ ॥ ತತ್ಪುತ್ರಸ್ಯ ......ಶರ್ಮಣಃ ......ಗೋತ್ರಸ್ಯ ॥**

೧೨. **ಮಾತೃಜ್ಯೇಷ್ಠ(ಕನಿಷ್ಠ)ಭಗಿನ್ಯಾಃ ......ದಾಯಾಃ ......ಗೋತ್ರಾಯಾಃ ॥**

೧೩. **ಆತ್ಮಜ್ಯೇಷ್ಠ(ಕನಿಷ್ಠ)ಭಗಿನ್ಯಾಃ ......ದಾಯಾಃ ......ಗೋತ್ರಾಯಾಃ ॥ ಭಾವುಕಸ್ಯಃ ......ಶರ್ಮಣ ......ಗೋತ್ರಸ್ಯ ॥ ಭಾಗಿನೇಯಕಸ್ಯ ......ಶರ್ಮಣ ......ಗೋತ್ರಸ್ಯ ॥**

೧೪. **ಆತ್ಮದುಹಿತುಃ ......ದಾಯಾಃ ......ಗೋತ್ರಾಯಾಃ ॥ ಜಾಮಾತುಃ ......ಶರ್ಮಣಃ ......ಗೋತ್ರಸ್ಯ ॥ ದೌಹಿತ್ರಸ್ಯ ......ಶರ್ಮಣಃ ......ಗೋತ್ರಸ್ಯ ॥**

೧೫. **ಶ್ವಶುರಸ್ಯ ......ಶರ್ಮಣಃ ......ಗೋತ್ರಸ್ಯ ॥ ಶ್ವಶ್ರ್ವಾಃ ......ದಾಯಾಃ ......ಗೋತ್ರಾಯಾಃ ॥ ಸ್ಯಾಲಕಸ್ಯ ......ಶರ್ಮಣಃ ......ಗೋತ್ರಸ್ಯ ॥**

೧೬. **ಸಪತ್ನೀಕಸ್ಯ ಸಪುತ್ರಕಸ್ಯ ಗುರೋಃ ......ಶರ್ಮಣಃ ......ಗೋತ್ರಸ್ಯ ॥ ಸಪತ್ನೀಕಸ್ಯ ಸಪುತ್ರಕಸ್ಯ ಆಚಾರ್ಯಸ್ಯ ......ಶರ್ಮಣಃ ......ಗೋತ್ರಸ್ಯ ॥ ಸಪತ್ನೀಕಸ್ಯ ಸಪುತ್ರಕಸ್ಯ ಸ್ವಾಮಿನಃ ......ಶರ್ಮಣಃ ......ಗೋತ್ರಸ್ಯ ॥ ಸಪತ್ನೀಕಸ್ಯ ಸಪುತ್ರಕಸ್ಯ ಸಖ್ಯುಃ ......ಶರ್ಮಣಃ ......ಗೋತ್ರಸ್ಯ ॥**

೧೭. **ಜ್ಞಾತಾಜ್ಞಾತಾದಿ ಸಮಸ್ತ ಉಭಯಕುಲಪಿತೄಣಾಂ ವಸುರೂಪಸ್ಯ ತದಂತರ್ಯಾಮಿ ಪ್ರಾಣಸ್ಥಪ್ರದ್ಯುಮ್ನಸ್ಯ ತೃಪ್ತ್ಯರ್ಥಂ (ಬಲ) ಧುರಿಲೋಚನ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ತದಂತರ್ಯಾಮಿ ಪ್ರಾಣಸ್ಥ ನಾರಾಯಣಾನಿರುದ್ಧಪ್ರೀತ್ಯರ್ಥಂ ಹವಿಷಾಪಾರ್ವಣವಿಧಾನೇನ ಅನ್ಯೇಷಾಂ ಏಕೋದ್ದಿಷ್ಟವಿಧಾನೇನ ಸಕೃನ್ಮಹಾಲಯಶ್ರಾದ್ಧಮಗ್ನೌಕರಣ ಪಿಂಡಪ್ರದಾನಂ ಚ ಕರಿಷ್ಯೇ ॥**

ಬ್ರಹ್ಮದಂಡಾದಿ ಮುಂದಿನ ಸಂಕಲ್ಪದಲ್ಲಿ '**ಪಿತ್ರಾದಿಸಮಸ್ತಪಿತ್ರಂತರ್ಗತ ಪ್ರಾಣಸ್ಥಲಕ್ಷ್ಮೀ ಜನಾರ್ದನ ಪ್ರೇರಣಯಾ........॥**' ಎಂದು ಒಟ್ಟಿಗೆ ಸಂಕಲ್ಪ ಮಾಡಿಕೊಳ್ಳಬೇಕು.

ಬರ್ಹಿಸ್ಸಿನಲ್ಲಿ '**ಪಿತೃಭ್ಯೋ ವ ಇಮಾನಿ ಸ್ಥಾನಾನಿ ॥**' ಎಂದು ಹನ್ನೆರಡು ಸ್ಥಾನಗಳಲ್ಲಿ ಮಂತ್ರವ್ಯತ್ಯಾಸದೊಂದಿಗೆ ಪ್ರತ್ಯೇಕವಾಗಿ ಸ್ಥಾನಕಲ್ಪನೆ ಮಾಡಿ ಅಂಜಲಿಮುದ್ರೆಯಿಂದ '**ಜ್ಞಾತಾಜ್ಞಾತಾದಿ ಸಮಸ್ತ ಉಭಯಕುಲ ಪಿತೃಭ್ಯೋ ವ ಇಮಾನಿ ಸ್ಥಾನಾನಿ ॥**' ಎಂದು ಕೈಯನ್ನು ಒಂದು ಸುತ್ತು ತರುವುದು. ಅನಂತರ ಆಸನ, ಆವಾಹನೆ, ಪ್ರತ್ಯೇಕವಾಗಿ ಮಂತ್ರ ಹೇಳಿ ಮಾಡಬೇಕು. ಅರ್ಘ್ಯವನ್ನು ಹನ್ನೆರಡು ಸ್ಥಾನದಲ್ಲಿ ಪ್ರತ್ಯೇಕವಾಗಿ ಮಾಡಿ '**ಜ್ಞಾತಾಜ್ಞಾತಾದಿ ಸಮಸ್ತ ಉಭಯಕುಲಪಿತ್ರಂತರ್ಗತ ಪ್ರಾಣಸ್ಥಲಕ್ಷ್ಮೀಜನಾರ್ದನ ಇದಂ ವೋ ಅರ್ಘ್ಯಮ್ ॥**' ಪಿತ್ರಾದಿ ಜ್ಞಾತಾಜ್ಞಾತಪಿತೃಗಳಿಗೆ ಪಿಂಡಪ್ರದಾನ ಮಾಡಿದ ಅನಂತರ

(ಚಿತ್ರದಲ್ಲಿ ಸಂಖ್ಯೆ ೧೯) ಪೂರ್ವದಿಂದ ಪ್ರಾರಂಭಿಸಿ ಮುಂದಿನ ಒಂದೊಂದು ಮಂತ್ರಕ್ಕೆ ಒಂದೊಂದು ಪಿಂಡಪ್ರದಾನ ಮಾಡಬೇಕು.




೧. ಪಿತೃವರ್ಗ, ೨. ಮಾತೃವರ್ಗ, ೩. ಮಾತಾಮಹವರ್ಗ, ೪. ಮಾತಾಮಹೀ ವರ್ಗ, ೫. ಸಾಪತ್ನಜನನೀ, ೬. ಪಿತೃವ್ಯವರ್ಗ, ೭. ಆತ್ಮಭ್ರಾತೃವರ್ಗ, ೮. ಪತ್ನೀ, ೯. ಪುತ್ರಃ ಸ್ನುಷಾ, ೧೦. ಪಿತೃಭಗಿನೀವರ್ಗ, ೧೧. ಮಾತುಲವರ್ಗ, ೧೨. ಮಾತೃಭಗಿನೀ, ೧೩. ಆತ್ಮಭಗಿನೀವರ್ಗ, ೧೪. ಆತ್ಮದುಹಿತೃವರ್ಗ, ೧೫. ಶ್ವಶುರವರ್ಗ, ೧೬. ಗುರುವರ್ಗ, ೧೭. ಜ್ಞಾತಾಜ್ಞಾತಪಿಂಡಃ, ೧೮. ಪೂರ್ವಾದಿಪಿಂಡಃ, ೧೯. ಧರ್ಮ ಪಿಂಡಾಃ, ೨೦. ಅನುಲೇಪನಪಿಂಡಃ.

(ಪೂರ್ವೇ)

ಪಿತೃವಂಶೇ ಮೃತಾ ಯೇ ಚ ಗತಿರ್ಯೇಷಾಂ ನ ವಿದ್ಯತೇ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧ ॥

ಪಿತೃವಂಶೇ ಮೃತಾಯಾಶ್ಚ ಗತಿರ್ಯಾಸಾಂ ನ ವಿದ್ಯತೇ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨ ॥

(ಪಶ್ಚಿಮೇ)

ಮಾತೃವಂಶೇ ಮೃತಾ ಯೇ ಚ ಗತಿರ್ಯೇಷಾಂ ನ ವಿದ್ಯತೇ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩ ॥

ಮಾತೃವಂಶೇ ಮೃತಾ ಯಾಶ್ಚ ಗತಿರ್ಯಾಸಾಂ ನ ವಿದ್ಯತೇ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೪ ॥

ಬಂಧುವರ್ಗಕುಲೇ ಯೇ ಚ ಗತಿರ್ಯೇಷಾಂ ನ ವಿದ್ಯತೇ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೫ ॥

ಬಂಧುವರ್ಗಕುಲೇ ಯಾಶ್ಚ ಗತಿರ್ಯಾಸಾಂ ನ ವಿದ್ಯತೇ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೬ ॥

(ಉತ್ತರೇ)

ಗುರುಶ್ವಶುರಬಂಧೂನಾಂ ಯೇ ಚಾನ್ಯೇ ಬಾಂಧವಾ ಮೃತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೭ ॥
ಗುರುಶ್ವಶುರಬಂಧೂನಾಂ ಯಾಶ್ಚಾನ್ಯಾ ಬಾಂಧವಾ ಮೃತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೮ ॥

(ನೈರ್ಋತ್ಯಾಮ್)

ಯೇ ಮೇ ಕುಲೇ ಲುಪ್ತಪಿಂಡಾಃ ಪುತ್ರದಾರವಿವರ್ಜಿತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೯ ॥

ಯಾ ಮೇ ಕುಲೇ ಲುಪ್ತಪಿಂಡಾಃ ಪುತ್ರಭರ್ತೃವಿವರ್ಜಿತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೦ ॥

(ವಾಯವ್ಯಾಮ್)

ಕ್ರಿಯಾಲೋಪಗತಾಶ್ಚೈವ ಜಾತ್ಯಂಧಾಃ ಪಂಗವಸ್ತಥಾ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೧ ॥

ಕ್ರಿಯಾಲೋಪಗತಾಶ್ಚೈವ ಜಾತ್ಯಂಧಾಃ ಪಂಗವಸ್ತಥಾ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೨ ॥

(ಈಶಾನ್ಯೇ)

ಅರೂಪಾ ಆಮಗರ್ಭಾಶ್ಚ ಜ್ಞಾತಾಜ್ಞಾತಾ ಕುಲೇ ಮಮ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೩ ॥

ಅರೂಪಾ ಆಮಗರ್ಭಾಶ್ಚ ಜ್ಞಾತಾಜ್ಞಾತಾ ಕುಲೇ ಮಮ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೪ ॥

(ಆಗ್ನೇಯ್ಯಾಮ್)

ಅಸ್ಮತ್ಕುಲದ್ವಯೇ ಚೈವ ಅಪುತ್ರಾ ಯೇ ಅಸಂಸ್ಕೃತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೫ ॥

ಅಸ್ಮತ್ಕುಲದ್ವಯೇ ಚೈವ ಅಪುತ್ರಾ ಯಾ ಅಸಂಸ್ಕೃತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೬ ॥

(ದಕ್ಷಿಣೇ)

ಅಜಾತದಂತಾ ಯೇ ಕೇಚಿದ್ಯೇ ಚ ಗರ್ಭೇ ಪ್ರಪೀಡಿತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೭ ॥

ಅಜಾತದಂತಾ ಯಾಃ ಕಾಶ್ಚಿದ್ಯಾಶ್ಚ ಗರ್ಭೇ ಪ್ರಪೀಡಿತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೮ ॥

(ಚಿತ್ರದಲ್ಲಿ ಸಂಖ್ಯೆ ೨೦)

(ದಕ್ಷಿಣಾದಿ ಪ್ರದಕ್ಷಿಣತಃ)

ಅಗ್ನಿದಗ್ಧಾಶ್ಚ ಯೇ ಕೇಚಿನ್ನಾಗ್ನಿದಗ್ಧಾಸ್ತಥಾಪರೇ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೧೯ ॥

ಅಗ್ನಿದಗ್ಧಾಶ್ಚ ಯಾಃ ಕಾಶ್ಚಿನ್ನಾಗ್ನಿದಗ್ಧಾಸ್ತಥಾಪರಾ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೦ ॥

ಅಸಂಖ್ಯಯಾತನಾಸಂಸ್ಥಾಃ ಪ್ರೇತಲೋಕೇಷು ಯೇ ಗತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೧ ॥

ಅಸಂಖ್ಯಯಾತನಾಸಂಸ್ಥಾಃ ಪ್ರೇತಲೋಕೇಷು ಯಾ ಗತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೨ ॥

ವಿದ್ಯುಚ್ಚೋರಹತಾ ಯೇ ಚ ಜಲಪಾಷಾಣಕಾಯಸೈಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೩ ॥

ವಿದ್ಯುಚ್ಚೋರಹತಾ ಯಾಶ್ಚ ಜಲಪಾಷಾಣಕಾಯಸೈಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೪ ॥

ದಾವದಾಹೇ ಮೃತಾ ಯೇ ಚ ಸಿಂಹವ್ಯಾಘ್ರಹತಾಶ್ಚ ಯೇ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೫ ॥

ದಾವದಾಹೇ ಮೃತಾ ಯಾಶ್ಚ ಸಿಂಹವ್ಯಾಘ್ರಹತಾಶ್ಚ ಯಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೬ ॥

ದಂಷ್ಟ್ರಿಭಿ: ಶೃಂಗಿಭಿರ್ವಾಽಪಿ ರಜ್ಜುಭಿರ್ವಾ ಮೃತಿಂ ಗತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೭ ॥

ದಂಷ್ಟ್ರಿಭಿಃ ಶೃಂಗಿಭಿರ್ವಾಽಪಿ ರಜ್ಜುಭಿರ್ವಾ ಮೃತಿಂ ಗತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೮ ॥

ಉದ್ಬಂಧನಮೃತಾ ಯೇ ಚ ವಿಷಶಸ್ತ್ರಹತಾಶ್ಚ ಯೇ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೨೯ ॥

ಉದ್ಬಂಧನಮೃತಾ ಯಾಶ್ಚ ವಿಷಶಸ್ತ್ರಹತಾಶ್ಚ ಯಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೦ ॥

ಆತ್ಮೋಪಘಾತಿನೋ ಯೇ ಚ ಬ್ರಹ್ಮಘ್ನಾ ಗುರುತಲ್ಪಗಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೧ ॥

ಆತ್ಮೋಪಘಾತಿನಾವತ್ಯೋ ಬ್ರಹ್ಮಘ್ನಾ ಗುರುತಲ್ಪಗಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೨ ॥

ಅನೇಕಯಾತನಾಸಂಸ್ಥಾ ಯೇ ನೀತಾ ಯಮಶಾಸನೈಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೩ ॥

ಅನೇಕಯಾತನಾಸಂಸ್ಥಾ ಯಾ ನೀತಾ ಯಮಶಾಸನೈಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೪ ॥

ಅಸಿಪತ್ರವನೇ ಘೋರೇ ಕುಂಭೀಪಾಕೇ ಚ ಯೇ ಗತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೫ ॥

ಅಸಿಪತ್ರವನೇ ಘೋರೇ ಕುಂಭೀಪಾಕೇ ಚ ಯಾ ಗತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೬ ॥

ರೌರವೇ ಚಾಂಧತಾಮಿಸ್ರೇ ಕಾಲಸೂತ್ರೇ ಚ ಯೇ ಗತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೭ ॥

ರೌರವೇಚಾಂಧತಾಮಿಸ್ರೇ ಕಾಲಸೂತ್ರೇ ಚ ಯಾ ಗತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೮ ॥

ನರಕೇಷು ಸಮಸ್ತೇಷು ಯಾತನಾಭಿಶ್ಚ ಪೀಡಿತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೩೯ ॥

ನರಕೇಷು ಸಮಸ್ತೇಷು ಯಾತನಾಭಿಶ್ಚ ಪೀಡಿತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೪೦ ॥

ಪಶುಯೋನಿಗತಾ ಯೇ ಚ ಪಕ್ಷಿಕೀಟಸರೀಸೃಪಾಃ ।
ಅಥವಾ ವೃಕ್ಷಯೋನಿಸ್ಥಾಸ್ತೇಭ್ಯಃ ಪಿಂಡಂ ದದಾಮ್ಯಹಮ್ ॥ ೪೧ ॥

ಪಶುಯೋನಿಗತಾ ಯಾಶ್ಚ ಪಕ್ಷಿಕೀಟಸರೀಸೃಪಾಃ ।
ಅಥವಾ ವೃಕ್ಷಯೋನಿಸ್ಥಾಸ್ತಾಭ್ಯಃ ಪಿಂಡಂ ದದಾಮ್ಯಹಮ್ ॥ ೪೨ ॥

ಜಾತ್ಯಂತರಸಹಸ್ರೇಷು ಭ್ರಮತಾಂ ಸ್ವೇನ ಕರ್ಮಣಾ ।
ಮಾನುಷಂ ದುರ್ಲಭಂ ಯೇಷಾಂ ತೇಭ್ಯಃ ಪಿಂಡಂ ದದಾಮ್ಯಹಮ್ ॥ ೪೩ ॥

ಜಾತ್ಯಂತರಸಹಸ್ರೇಷು ಭ್ರಮತೀನಾಂ ಸ್ವಕರ್ಮಣಾ ।
ಮಾನುಷಂ ದುರ್ಲಭಂ ಯಾಸಾಂ ತಾಭ್ಯಃ ಪಿಂಡಂ ದದಾಮ್ಯಹಮ್ ॥ ೪೪ ॥

ಅಂಡಜಾಃ ಸ್ವೇದಜಾಶ್ಚೈವ ಉದ್ಭಿದಶ್ಚಜರಾಯುಜಾಃ ।
ಯೇಽನ್ಯಯೋನಿಸಮುದ್ಭೂತಾಸ್ತೇಭ್ಯಃ ಪಿಂಡಂ ದದಾಮ್ಯಹಮ್ ॥ ೪೫ ॥

ಅಂಡಜಾಃ ಸ್ವೇದಜಾಶ್ಚೈವ ಉದ್ಭಿದಶ್ಚಜರಾಯುಜಾಃ ।
ಯಾಶ್ಚಾನ್ಯಯೋನಿಸಂಭೂತಾಸ್ತಾಭ್ಯಃ ಪಿಂಡಂ ದದಾಮ್ಯಹಮ್ ॥ ೪೬ ॥

ಬಂಧುವರ್ಗಕುಲೇ ಯೇ ಚ ನಾಮಗೋತ್ರವಿವರ್ಜಿತಾಃ ।
ಸ್ವಗೋತ್ರೇ ಪರಗೋತ್ರೇ ಚ ತೇಭ್ಯಃ ಪಿಂಡಂ ದದಾಮ್ಯಹಮ್ ॥ ೪೭ ॥

ಬಂಧುವರ್ಗಕುಲೇ ಯಾಶ್ಚ ನಾಮಗೋತ್ರವಿವರ್ಜಿತಾಃ ।
ಸ್ವಗೋತ್ರೇ ಪರಗೋತ್ರೇ ಚ ತಾಭ್ಯಃ ಪಿಂಡಂ ದದಾಮ್ಯಹಮ್ ॥ ೪೮ ॥

ದಿವ್ಯಂತರಿಕ್ಷಭೂಮಿಷ್ಠಾಃ ಪಿತರೋ ಬಾಂಧವಾದಯಃ ।
ಅಸಂಸ್ಕೃತಾಃ ಸಂಸ್ಕೃತಾಶ್ಚ ತೇಭ್ಯಃ ಪಿಂಡಂ ದದಾಮ್ಯಹಮ್ ॥ ೪೯ ॥

ದಿವ್ಯಂತರಿಕ್ಷಭೂಮಿಷ್ಠಾಃ ಪಿತರೋ ಬಾಂಧವಾದಯಃ ।
ಅಸಂಸ್ಕೃತಾಃ ಸಂಸ್ಕೃತಾಶ್ಚ ತಾಭ್ಯಃ ಪಿಂಡಂ ದದಾಮ್ಯಹಮ್ ॥ ೫೦ ॥

ಅಸುರಾದೇವಗಂಧರ್ವಾ ವಿದ್ಯಾಧರಹೋರಗಾಃ ।
ಸುಕೃತೈರ್ಲೋಕಮಾಶ್ರಿತ್ಯ ತೇಭ್ಯಃ ಪಿಂಡಂ ದದಾಮ್ಯಹಮ್ ॥ ೫೧ ॥

ಅಸುರಾದೇವಗಂಧರ್ವಾ ವಿದ್ಯಾಧರಹೋರಗಾಃ ।
ಸುಕೃತೈರ್ಲೋಕಮಾಶ್ರಿತ್ಯ ತಾಭ್ಯಃ ಪಿಂಡಂ ದದಾಮ್ಯಹಮ್ ॥ ೫೨ ॥

ಕಿನ್ನರಾಃ ಸಾಧ್ಯಭೂತಾಶ್ಚ ಪುಣ್ಯಸಲ್ಲೋಕಮಾಶ್ರಿತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೫೩ ॥

ಕಿನ್ನರಾಃ ಸಾಧ್ಯಭೂತಾಶ್ಚ ಪುಣ್ಯಸಲ್ಲೋಕಮಾಶ್ರಿತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೫೪ ॥

ಅಸ್ಮತ್ಕುಲದ್ವಯೇ ಚೈವ ಯೇ ಮೃತಾಃ ಪತಿತಾ ಭುವಿ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೫೫ ॥

ಅಸ್ಮತ್ಕುಲದ್ವಯೇ ಚೈವ ಯಾ ಮೃತಾಃ ಪತಿತಾ ಭುವಿ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೫೬ ॥

ಜಾತ್ಯಂಧಾ ಬದಿರಾ ಮೂಕಾ ನಿಶ್ಚೌಚಾ ಜರಯಾ ಮೃತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೫೭ ॥

ಜಾತ್ಯಂಧಾ ಬಧಿರಾ ಮೂಕಾ ನಿಶ್ಚೌಚಾ ಜರಯಾ ಮೃತಾಃ ।
ತಾಸಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಮ್ ॥ ೫೮ ॥

ಯೇ ಕೇಚಿತ್ಪ್ರೇತರೂಪೇಣ ವರ್ತಂತೇ ಪಿತರೋ ಮಮ ।
ತೇ ಸರ್ವೇ ತೃಪ್ತಿಮಾಯಾಂತು ಪಿಂಡೇನಾನೇನ ಸರ್ವದಾ ॥ ೫೯ ॥

ಯಾ ಕಾಶ್ಚಿತ್ಪ್ರೇತರೂಪೇಣ ವರ್ತಂತೇ ಪಿತರೋ ಮಮ ।
ತಾಃ ಸರ್ವಾಸ್ತೃಪ್ತಿಮಾಯಾಂತು ಪಿಂಡೇನಾನೇನ ಸರ್ವದಾ ॥ ೬೦ ॥

ಅರಣ್ಯೇ ವಾ ರಣೇ ಚೈವ ಯೇ ಹತಾಃ ಕ್ಷುಧಯಾ ತೃಷಾ ।
ಭೂತಪ್ರೇತಪಿಶಾಚೇಭ್ಯಸ್ತೇಭ್ಯಃ ಪಿಂಡಂ ದದಾಮ್ಯಹಮ್ ॥ ೬೧ ॥

ಅರಣ್ಯೇ ವಾ ರಣೇ ಚೈವ ಯಾ ಹತಾಃ ಕ್ಷುಧಯಾ ತೃಷಾ ।
ಭೂತಪ್ರೇತಪಿಶಾಚಿಭ್ಯಸ್ತಾಭ್ಯಃ ಪಿಂಡಂ ದದಾಮ್ಯಹಮ್ ॥ ೬೨ ॥

ಯೇಽಬಾಂಧವಾ ಬಾಂಧವಾ ಯೇ ಯೇ ಮೇ ಜನ್ಮನಿ ಬಾಂಧವಾಃ ।
ತೇಷಾಂ ಪಿಂಡೋ ಮಯಾ ದತ್ತೇ ಹ್ಯಕ್ಷಯ್ಯ ಉಪತಿಷ್ಠತು ॥ ೬೩ ॥

ಅಬಾಂಧವಾ ಬಾಂಧವಾ ಯಾ ಯಾ ಮೇ ಜನ್ಮನಿ ಬಾಂಧವಾಃ ।
ತಾಸಾಂ ಪಿಂಡೋ ಮಯಾ ದತ್ತೇ ಹ್ಯಕ್ಷಯ್ಯ ಉಪತಿಷ್ಠತು ॥ ೬೪ ॥

**ದ್ವೌ ಶ್ವಾನೌ ಶ್ಯಾಮಶಬಲೌ ವೈವಸ್ವತಕುಲೋದ್ಭವೌ ।**
**ತಾಭ್ಯಾಂ ಬಲಿಂ ಪ್ರದಾಸ್ಯಾಮಿ ಪಿತೄಣಾಂ ಮುಕ್ತಿಸಿದ್ಧಯೇ ॥ ೬೫ ॥**

ಧರ್ಮಪಿಂಡದ ಅನಂತರ ಆಗ್ನೇಯದಲ್ಲಿ ಧರ್ಮಪಿಂಡಗಳಿಗೆ ತಾಗದಂತೆ ಮೂರು ವೃತ್ತಾಕಾರದ ಮಂಡಲ ಮಾಡಿ ಮೂರು ಮಂಡಲಕ್ಕೆ ದರ್ಭೆ ಹರಡಿ ತಿಲೋದಕ ಕೊಟ್ಟು ಎರಡು ಪಿಂಡ ಹಿಡಿದು,

**ಯಮರಾಜೋ ಧರ್ಮರಾಜೋ ನಿಶ್ಚಿತಾರ್ಥಂ ವ್ಯವಸ್ಥಿತೌ ।**
**ತಾಭ್ಯಾಂ ಬಲಿಂ ಪ್ರದಾಸ್ಯಾಮಿ ಪಿತೄಣಾಂ ಮುಕ್ತಿಸಿದ್ಧಯೇ ॥**

–ಎಂದು ಮೊದಲ ಮಂಡಲದಲ್ಲಿ ಪಿಂಡದಾನ ಮಾಡಿ ಪುನಃ ಎರಡು ಪಿಂಡ ಹಿಡಿದು,

**ದ್ವೌ ಶ್ವಾನೌ ಶ್ಯಾಮಶಬಲೌ ವೈವಸ್ವತಕುಲೋದ್ಭವೌ ।**
**ತಾಭ್ಯಾಂ ಬಲಿಂ ಪ್ರದಾಸ್ಯಾಮಿ ಸ್ಯಾತಾಮೇತಾವಹಿಂಸ್ರಕೌ ॥ ೬೫ ॥**

–ಎಂದು ಎರಡನೆಯ ಮಂಡಲದಲ್ಲಿ ಪಿಂಡದಾನ ಮಾಡಿ ಪುನಃ ಎರಡು ಪಿಂಡ ಹಿಡಿದು,

**ಐಂದ್ರವಾರುಣವಾಯವ್ಯಯಾಮ್ಯನೈರ್ಋತಿಕಾಸ್ತಥಾ ।**
**ತೇ ಕಾಕಾಃ ಪ್ರತಿಗೃಹ್ಣಂತು ಭೂಮೌ ಪಿಂಡಂ ಮಯಾಽರ್ಪಿತಮ್ ॥**

–ಎಂದು ಮೂರನೇ ಮಂಡಲದಲ್ಲಿ ಪಿಂಡದಾನ ಮಾಡಿ, ಆಚಮನ ಮಾಡಿ, ಪವಿತ್ರ ಬಿಚ್ಚಿ, ಪುನಃ ಆಚಮನ ಮಾಡಿ, ಬೇರೆ ಪವಿತ್ರ ಧರಿಸಿ, ಅನುಲೇಪನಪಿಂಡ ಇಡಬೇಕು. ಅನಂತರ ಘ್ರಾಣಭಕ್ಷಣ ಇತ್ಯಾದಿ ಶ್ರಾದ್ಧಕ್ರಮದಂತೆ ಮಾಡಬೇಕು. ತೃಪ್ತಿಜಲ ಕೊಡುವಾಗ ಹನ್ನೆರಡು ಸ್ಥಾನದಲ್ಲಿ ಪ್ರತ್ಯೇಕವಾಗಿ ಮಾಡಿ, ಅನಂತರ–

**ಜ್ಞಾತಾಜ್ಞಾತಾದಿ ಸಮಸ್ತ ಉಭಯಕುಲಪಿತ್ರಂತರ್ಗತ ಪ್ರಾಣಸ್ಥಲಕ್ಷ್ಮೀಜನಾರ್ದನಸ್ಯ ಪಿಂಡಾನಾಮುಪರಿ ಅಕ್ಷಯ್ಯತಿಲೋದಕಮ್ । ತೃಪ್ತಿರಸ್ತು ॥**

–ಎಂದು ತೃಪ್ತಿಜಲ ಕೊಡಬೇಕು. ಪಿಂಡವಿಸರ್ಜನೆ ಸಮಯದಲ್ಲಿ ಒಂದೊಂದು ಪಿಂಡವನ್ನು ಪ್ರತ್ಯೇಕವಾಗಿ ತೆಗೆದು ಹವಿಸ್ಸಿನ ಪಾತ್ರೆಗೆ ಹಾಕಬೇಕು.

## ನಾಂದೀಶ್ರಾದ್ಧಮ್

**ಮಾತೃಶ್ರಾದ್ಧಂ ತು ಪೂರ್ವಂ ಸ್ಯಾತ್ ಪಿತೄಣಾಂ ತದನಂತರಮ್ ।**
**ಯತೋ ಮಾತಾಮಹಾನಾಂ ತು ವೃದ್ಧೌ ಶ್ರಾದ್ಧಂ ತ್ರಯಂ ಸ್ಮೃತಮ್ ॥**

**ವಿಶ್ವೇದೇವಾ ಇಷ್ಟಿಶ್ರಾದ್ಧೇಷು ಕ್ರತುದಕ್ಷಃ ಸಂಕೀರ್ತ್ಯೌ ವೈಶ್ವದೇವಕೌ ।**
**ನಾಂದೀಮುಖೇ ಸತ್ಯವಸೂ ಕಾಮ್ಯೇ ಚ ಧುರಿಲೋಚನೌ ॥**

**ಪುರೂರವಾರ್ದ್ರವೌ ಚೈವ ಪಾರ್ವಣೇ ಸಮುದಾಹೃತೌ ।**
**ನೈಮಿತ್ತಿಕೇ ಕಾಲಕಾಮಾವೇವಂ ಸರ್ವತ್ರ ಕೀರ್ತಯೇತ್ ॥**

ಪಾರ್ವಣಾದಿಶ್ರಾದ್ಧಗಳಲ್ಲಿ ಪಿತೃಗಳಿಗೆ ಆದ್ಯತೆಯಾದರೆ ವೃದ್ಧಿಶ್ರಾದ್ಧದಲ್ಲಿ ಮಾತೃವರ್ಗ, ಬಳಿಕ ಪಿತೃವರ್ಗ, ಅನಂತರ ಸಪತ್ನೀಕಮಾತಾಹವರ್ಗವೆಂದು ಆರಾಧಿಸಬೇಕು.

ಗೃಹಸ್ಥನು ಯಜ್ಞ, ಯಾಗ, ಶಾಂತಿ, ಮಂಗಲಕಾರ್ಯಗಳಲ್ಲಿ ವೃದ್ಧಿಶ್ರಾದ್ಧವನ್ನು ಆಚರಿಸದಿದ್ದರೆ ಆ ಕರ್ಮವು ಸಾತ್ತ್ವಿಕಕರ್ಮವೆಂದೆನಿಸದೆ ತಾಮಸಕರ್ಮವೆನಿಸುವುದು. ವೃದ್ಧಿಶ್ರಾದ್ಧದಿಂದ ತೃಪ್ತರಾದ ಪಿತೃದೇವತೆಗಳ ಅನುಗ್ರಹದಿಂದ ಮಂಗಲಕಾರ್ಯಗಳಿಗೆ ಕೌಟುಂಬಿಕವಾಗಿ ಉಂಟಾಗುವ ಪ್ರತಿಬಂಧಕದೋಷವೂ ಬಾಧಕವಾಗುವುದಿಲ್ಲ. ಮಾತೃಕಾರಾಧನೆ ಮಾಡದೆ ವೃದ್ಧಿಶ್ರಾದ್ಧ ಆಚರಿಸಿದರೆ ಆ ದೇವತೆಗಳು ಕೋಪಗೊಂಡು ಮಂಗಲಕಾರ್ಯಕ್ಕೆ ಹಿಂಸೆಯನ್ನುಂಟುಮಾಡಲಿಚ್ಛಿಸುತ್ತಾರೆ.

ಮಾತೃಕಾಪೂಜಾಸಹಿತ ನಾಂದೀಶ್ರಾದ್ಧವನ್ನು ಮಾಡಿದ ಬಳಿಕ ಕರ್ಮದ. ಕೊನೆಯಲ್ಲಿ ಮಾತೃಕಾವಿಸರ್ಜನ ಮಾಡುವವರೆಗೆ ದರ್ಶಶ್ರಾದ್ಧ, ಸಾಂವತ್ಸರಿಕಶ್ರಾದ್ಧ, ತಣ್ಣೀರಿನಲ್ಲಿ ಸ್ನಾನ, ಅಪಸವ್ಯ, ಸ್ವಧಾಶಬ್ದದ ಉಚ್ಚಾರಣೆ, ನಿತ್ಯತರ್ಪಣ, ಬ್ರಹ್ಮಯಜ್ಞ, ವೇದಾಧ್ಯಯನ, ನದಿ ಮತ್ತು ಗಡಿಯನ್ನು ದಾಟಿ ಹೋಗುವುದು, ನೈಮಿತ್ತಿಕ ಉಪವಾಸ, ವ್ರತಾಚರಣೆ, ಶ್ರಾದ್ಧಭೋಜನಗಳನ್ನು ಮಾಡಬಾರದು.

ನಾಂದೀಶ್ರಾದ್ಧಕ್ಕಿಂತ ಮೊದಲು ಗೌರೀ ಪದ್ಮಾದಿ ಷೋಡಶಮಾತೃಕಾ ದೇವತೆಗಳನ್ನೂ ಬ್ರಾಹ್ಮ್ಯಾದಿ ಸಪ್ತಮಾತೃಗಳನ್ನೂ ದುರ್ಗಾದಿಪರಿವಾರದೇವತೆಗಳನ್ನೂ ಕರ್ಮಾಂಗಕ್ಕಾಗಿ ಉಪಯೋಗಿಸಲು ಸಿದ್ಧಗೊಳಿಸಿದ ಅಕ್ಷತೆಪುಂಜದಲ್ಲಿ ಮಂತ್ರಪೂರ್ವಕ ಆವಾಹಿಸಬೇಕು. ದೇವತಾವಾಹನೆ ಮಾಡಿದ ಮಂತ್ರಾಕ್ಷತೆಯನ್ನು ಕರ್ಮಭಾಗದಲ್ಲಿ ಉಪಯೋಗಿಸಿದಾಗ **'ಇಂದ್ರಃ ಶ್ರೇಷ್ಠಾನಿ...'** ಇತ್ಯಾದಿ ಮಂತ್ರಗಳಿಂದ ಶ್ರೇಯಸ್ಸನ್ನು ಹಾರೈಸಿದ ಬಳಿಕ ಈ ಮಂತ್ರಗಳ ಅರ್ಥಗಳು ಸತ್ಯವಾಗುವುದು ಹಾಗೂ ಸಾರ್ಥಕವಾಗುತ್ತದೆ.

ಮಾತೃಕಾದೇವತೆಗಳನ್ನೂ ಕುಲದೇವತೆಗಳನ್ನೂ ಅಕ್ಷತಾಪುಂಜದಲ್ಲಿ ಆವಾಹಿಸಿ ಬಳಿಕ ನಾಲ್ಕು ಎಳೆಯ ಕೂರ್ಚಮುಖೇನ ಶ್ರಾದ್ಧವನ್ನು ಮಾಡಬೇಕು. ಆದರ ಅಂಗವಾಗಿ ಅಮಾನ್ನವನ್ನು ವಿಪ್ರರಿಗೆ ಕೊಡಬೇಕು.

ಮಾತೃಕಾದೇವತೆಗಳನ್ನು ಆವಾಹಿಸಿದ್ದ ಮಂತ್ರಾಕ್ಷತೆಯನ್ನು ಮಾತ್ರ ಕರ್ಮಸಮಾಪ್ತಿಯ ತನಕ ಉಪಯೋಗಿಸಿ ಬಳಿಕ ವಿಸರ್ಜಿಸಬೇಕು. ಒಂದು ವೇಳೆ ಮಾತೃಕಾದೇವತೆಗಳನ್ನು ಕೂರ್ಚ ಹಾಗೂ ಫಲ(ಅಡಕೆ)ಗಳಲ್ಲಿ ಆವಾಹಿಸಿ ಆರಾಧಿಸಿದ್ದರೆ ಕರ್ಮಸಮಾಪ್ತಿಯವರೆಗೆ ಆರಾಧಿಸಿ, ಅನಂತರ ವಿಸರ್ಜಿಸಬೇಕು.

ಪಾರ್ವಣದಂತೆ ಬ್ರಾಹ್ಮಣರಲ್ಲಿ ಪಿತೃದೇವತೆಗಳನ್ನು ಆವಾಹಿಸಿ ಭೋಜನಾದಿಗಳಿಂದ ಉಪಚರಿಸಿದ ಬಳಿಕವೂ ಕರ್ಮಸಮಾಪ್ತಿಯ ತನಕ ಪೂಜಿಸುವುದು ಶಾಸ್ತ್ರದಲ್ಲಿ ಹೇಳಿಲ್ಲ.

ಹೀಗಿರಲು ಕೂರ್ಚವನ್ನು ತನ್ನಿಮಿತ್ತ ಇಟ್ಟು ಪೂಜಿಸುವುದರಲ್ಲಿ ಔಚಿತ್ಯವಿಲ್ಲ. ಆದರೆ ರೂಢಿಯಲ್ಲಿದೆ. ನಾಂದೀಶ್ರಾದ್ಧದಲ್ಲಿ ಮಾತೃಕಾಪೂಜೆಯನ್ನು ಮಾಡಿ ಸತ್ಯವಸು ಸಂಜ್ಞಕವಿಶ್ವೇದೇವಾವಾಹನೆ ಮಾಡಿ ಪಿತೃದೇವತೆಗಳನ್ನು ಆವಾಹಿಸಿ ಪೂಜಿಸಬೇಕು.

ಆಶೌಚಪ್ರತಿಬಂಧಕವಾಗದಿರುವ ಅವಧಿಯು ಯಜ್ಞಯಾಗಾದಿಗಳಿಗೆ ಇಪ್ಪತ್ತೊಂದು ದಿವಸಗಳೆಂದೂ ವಿವಾಹಕ್ಕೆ ಹತ್ತು ದಿನಗಳೆಂದೂ ಉಪನಯನಕ್ಕೆ ಯಜ್ಞಯಾಗಾದಿಗಳಿಗೆ ಆರು ದಿನಗಳೆಂದೂ ಚೂಡಾಕರ್ಮಕ್ಕೆ ಮೂರು ದಿನಗಳೆಂದೂ ಇತರ ಶಾಂತಿ ಹಾಗೂ ಸಂಸ್ಕಾರಗಳಲ್ಲಿ ಕರ್ಮಪ್ರಾರಂಭದಿಂದ ಸಮಾಪ್ತಿಯವರೆಗೂ ಎಂದು ತಿಳಿಯಬೇಕು. ಆದರೆ ಯಜ್ಞಾದಿಕರ್ಮಗಳಲ್ಲಿ ಮೇಲೆ ತಿಳಿಸಿದ ಅವಧಿಯೊಳಗೆ ಕರ್ಮಸಮಾಪ್ತಿಯಾದರೆ ಬಳಿಕ ಆಶೌಚಾದಿಗಳು ದೋಷವೆನಿಸುವುವು.

ನಾಂದೀಶ್ರಾದ್ಧವು ಮೂರು ವಿಧ– ೧) ಬ್ರಾಹ್ಮಣಭೋಜನ, ೨) ಪಿಂಡದಾನ, ೩) ದಕ್ಷಿಣೆಸಹಿತ ಅಕ್ಕಿ, ತೆಂಗಿನಕಾಯಿ, ತರಕಾರಿ ಮೊದಲಾದ ಪದಾರ್ಥಗಳನ್ನು ದಾನ ಮಾಡಿ ದಕ್ಷಿಣೆ ಕೊಟ್ಟರೂ ನಾಂದೀಶ್ರಾದ್ಧವಾಗುವುದು. ಒಂದು ಸಂಸ್ಕಾರಕ್ಕೆ ಆದ್ಯಂತದಲ್ಲಿ ಪುಣ್ಯಾಹ ಮಾಡಬೇಕು. ಆದರೆ ನಾಂದೀಶ್ರಾದ್ಧ ಮಾತ್ರ ಒಂದೇ ಸಲ ಮಾಡಬೇಕು. ನಾಂದೀಶ್ರಾದ್ಧ ಲೋಪವಾದರೆ ಮಾತೃಕಾಪೂಜೆ ಇಲ್ಲ. ಮಗನಿಗೆ ಮಾಡುವ ಹದಿನಾರು ಸಂಸ್ಕಾರಗಳಿಗೂ ತಂದೆಯು ನಾಂದೀಶ್ರಾದ್ಧವನ್ನು ಮಾಡುವಾಗ ತನ್ನ ಮೃತಪಿತೃಗಳಿಗೆ ಶ್ರಾದ್ಧವನ್ನು ಮಾಡಬೇಕು. ಮಗನ ಮೊದಲ ವಿವಾಹದಲ್ಲಿ ಮಾತ್ರ ತಂದೆಯು ನಾಂದೀಶ್ರಾದ್ಧವನ್ನು ಮಾಡಬೇಕು. ಆದರೆ ಮಗನ ಎರಡನೆಯ ವಿವಾಹದಲ್ಲಿ ಮಗನೇ ನಾಂದೀಶ್ರಾದ್ಧವನ್ನು ಮಾಡಬೇಕು. ಮಗನ ಸಂಸ್ಕಾರಗಳಲ್ಲಿ ತಂದೆಯು ಇಲ್ಲದ ಪಕ್ಷದಲ್ಲಿ ಅಣ್ಣಂದಿರು, ಚಿಕ್ಕಪ್ಪ, ದೊಡ್ಡಪ್ಪ ಇಲ್ಲವೇ ತಾಯಿಯ ಸಹೋದರರು ನಾಂದೀಶ್ರಾದ್ಧವನ್ನು ಮಾಡಬೇಕು.

ತಂದೆ, ಸಹೋದರರನ್ನು ಬಿಟ್ಟು ಇತರರು ನಾಂದೀಶ್ರಾದ್ಧವನ್ನು ಮಾಡುವ ಪಕ್ಷದಲ್ಲಿ ತಮ್ಮ ಪಿತೃಗಳಿಗೆ ನಾಂದೀಶ್ರಾದ್ಧವನ್ನು ಮಾಡದೆ ಸಂಸ್ಕಾರ್ಯನ ಪಿತೃಗಳಿಗೆ ನಾಂದೀ ಶ್ರಾದ್ಧವನ್ನು ಮಾಡಬೇಕು. ಸಮಾವರ್ತನಾದಿಗಳಲ್ಲಿ ಅಣ್ಣಂದಿರು ಅಥವಾ ಬಂಧುಗಳಿಲ್ಲದ ಪಕ್ಷದಲ್ಲಿ ತಾನೇ ನಾಂದೀಶ್ರಾದ್ಧವನ್ನು ಮಾಡಬೇಕು.

ಸಂಸ್ಕಾರ ಮಾಡುವ ತಂದೆಗೆ ತಂದೆತಾಯಿಯರಿದ್ದ ಪಕ್ಷದಲ್ಲಿ ತಂದೆಯು ಯಾರಿಗೆ ಶ್ರಾದ್ಧವನ್ನು ಮಾಡುವನೋ ಅವರಿಗೆ ಶ್ರಾದ್ಧವನ್ನು ಮಾಡಬೇಕು– '**ಮಮ ಜನಕಸ್ಯ ಮಾತೃಪಿತಾಮಹಿಪ್ರಪಿತಾಮಹ್ಯಃ**' ಎಂದು '**ಮಮ ಜನಕಸ್ಯ ಪಿತೃಪಿತಾಮಹ ಪ್ರಪಿತಾಮಹಾಃ**' ಎಂದು '**ಮಮ ಜನಕಸ್ಯ ಸಪತ್ನೀಕಮಾತಾಮಹ ಮಾತುಃಪಿತಾಮಹ ಮಾತುಃಪ್ರಪಿತಾಮಹಾಃ**' ಎಂದು,

ತನ್ನ ತಂದೆಗೆ ತಾಯಿ, ತಂದೆ, ಮಾತಾಮಹರಿದ್ದ ಪಕ್ಷದಲ್ಲಿ '**ಜನಕಸ್ಯ ಮಾತೃ, ಜನಕಸ್ಯ ಪಿತೃ, ಜನಕಸ್ಯ ಸಪತ್ನೀಕ ಮಾತಾಮಹ**' ಎಂದು ಹೇಳಿ ಶ್ರಾದ್ಧವನ್ನು ಮಾಡದೆ ಬಾಕಿ ವರ್ಗಗಳಿಗೆ '**ಜನಕಸ್ಯ ಪಿತಾಮಹಿ..... । ಜನಕಸ್ಯ ಪಿತಾಮಹಃ..... । ಜನಕಸ್ಯ ಸಪತ್ನೀಕ ಮಾತುಃಪಿತಾಮಹಃ.....।**' ಎಂದು ಶ್ರಾದ್ಧವನ್ನು ಮಾಡಬೇಕು.

ಸಂಸ್ಕಾರ ಮಾಡುವವನ ತಂದೆಗೆ ತಾಯಿ ಇಲ್ಲದೆ ಅಜ್ಜಿ ಇದ್ದ ಪಕ್ಷದಲ್ಲಿ ಆಗ **'ಜನಕಸ್ಯ ಮಾತೃ ಪ್ರಪಿತಾಮಹಿ ವೃದ್ಧಪ್ರಪಿತಾಮಹಿ'** ಎಂದು ಹೇಳಬೇಕು. ಹಾಗೇ ತಂದೆಗೆ ತಂದೆ ಇಲ್ಲದೆ, ಅಜ್ಜ ಇದ್ದ ಪಕ್ಷದಲ್ಲಿ **'ಜನಕಸ್ಯ ಪಿತೃ ಪ್ರಪಿತಾಮಹ ವೃದ್ಧಪ್ರಪಿತಾಮಹ'** ಎಂದು ಹೇಳಬೇಕು. ತಂದೆಗೆ ಮಾತಾಮಹನಿಲ್ಲದೆ, ಮಾತೃಪಿತಾಮಹನಿದ್ದ ಪಕ್ಷದಲ್ಲಿ **'ಜನಕಸ್ಯ ಮಾತಾಮಹ ಮಾತುಃಪ್ರಪಿತಾಮಹ ಮಾತುಃವೃದ್ಧಪ್ರಪಿತಾಮಹ'** ಎಂದು ಹೇಳಬೇಕು.

ತನ್ನ ತಾಯಿ ಇದ್ದು, ಮಲತಾಯಿ ತೀರಿಹೋಗಿದದ್ದರೂ **'ಮಾತೃ ಪಿತಾಮಹಿ ಪ್ರಪಿತಾಮಹಿ'** ಎಂದು ಹೇಳಿ ಶ್ರಾದ್ಧವನ್ನು ಮಾಡಬಾರದು. ಮೊದಲ ಹೆಂಡತಿಯ ಮಗನ ಸಂಸ್ಕಾರದಲ್ಲಿ ಅವನ ತಾಯಿ ತೀರಿಕೊಂಡಲ್ಲಿ ಮಲತಾಯಿ ಬದುಕಿದ್ದರೂ ಕೂಡ **'ಮಾತೃಪಿತಾಮಹಿ ಪ್ರಪಿತಾಮಹಿ'** ಎಂದು ಶ್ರಾದ್ಧವನ್ನು ಮಾಡಬೇಕು.

ಯಾವಾಗಲಾದರೂ ಮಾತಾಮಹಾದಿಗಳಿಗೆ ಶ್ರಾದ್ಧವನ್ನು ಮಾಡುವಾಗ ಮಾತಾ ಮಹಾದಿಗಳಲ್ಲಿ ಸೇರಿದ ಮಾತಾಮಹ ಮಾತುಃಪಿತಾಮಹಾದಿಗಳಲ್ಲಿ ಒಬ್ಬರದ್ದಾದರೂ ಹೆಂಡತಿ ಇದ್ದ ಪಕ್ಷದಲ್ಲಿ **'ಸಪತ್ನೀಕ ಮಾತಾಮಹ ಮಾತುಃಪಿತಾಮಹ ಮಾತುಃಪ್ರಪಿತಾಮಹ'** ಎಂಬುದಾಗಿ ಶ್ರಾದ್ಧವನ್ನು ಮಾಡದೆ, ಕೇವಲ **'ಮಾತಾಮಹ ಮಾತುಃಪಿತಾಮಹ ಮಾತುಃಪ್ರಪಿತಾಮಹ'** ಎಂದು ಹೇಳಿ ಶ್ರಾದ್ಧವನ್ನು ಮಾಡಬೇಕು.

ಮಾತುಃಪಿತಾಮಹ ಬದುಕಿದ್ದಲ್ಲಿ **'ಸಪತ್ನೀಕ ಮಾತಾಮಹ ಮಾತುಃ ಪ್ರಪಿತಾಮಹ ಮಾತುಃ ವೃದ್ಧಪ್ರಪಿತಾಮಹ'** ಎಂದು ಹೇಳಿ ಶ್ರಾದ್ಧವನ್ನು ಮಾಡಬೇಕು.

ಮಾತಾಮಹನಿದ್ದು ಮಾತಾಮಹಿ ಮರಣಹೊಂದಿದ್ದಲ್ಲಿ, ನಾಂದೀಶ್ರಾದ್ಧದಲ್ಲಿ ಮಾತಾಮಹಿಗೆ ಶ್ರಾದ್ಧವಿಲ್ಲ. ಮತಾಮಹನಿಗೆ ಮಾತ್ರ ಶ್ರಾದ್ಧವಿರುವುದರಿಂದ ಮಾತಾಮಹಿ ವರ್ಗಕ್ಕೆ ಶ್ರಾದ್ಧ ಇಲ್ಲ. ತನ್ನ ತಂದೆಗೆ ಮಾತಾಮಹ ಇದ್ದ ಪಕ್ಷದಲ್ಲಿ ಮಾತಾಮಹಾದಿವರ್ಗಕ್ಕೆ ಶ್ರಾದ್ಧವನ್ನು ಮಾಡಬಾರದು. ಮೂರು ವರ್ಗದಲ್ಲಿ ಯಾರೇ ಮೊದಲಿನವರು ಜೀವಂತವಾಗಿದ್ದರೆ ಆ ವರ್ಗಕ್ಕೆ ನಾಂದೀಶ್ರಾದ್ಧವಿಲ್ಲ. ಉಳಿದ ವರ್ಗಕ್ಕೆ ನಾಂದೀಶ್ರಾದ್ಧ ಮಾಡಬೇಕು.

* * *



# ಅಷ್ಟಮ ಗುಚ್ಛ

## ಸಾಂವತ್ಸರಿಕಶ್ರಾದ್ಧೇ ಸಾಮಾನ್ಯಜ್ಞಾನಾನಿ

ಶ್ರಾದ್ಧ ಮಾಡುವವನು ಶಾಲಗ್ರಾಮ, ಸುದರ್ಶನದೇವರ ಸನ್ನಿಧಾನ ಇಟ್ಟುಕೊಂಡು ಮಾಡಬೇಕು.

ಎರಡೂ ಕೈಗಳ ಅನಾಮಿಕ ಬೆರಳಿನಲ್ಲಿ ಎರಡು ಪವಿತ್ರ ಧರಿಸಿದವನಾಗಿಯೂ ಶ್ರಾದ್ಧವನ್ನು ಮಾಡಬೇಕು (–ನಿರ್ಣಯಸಿಂಧು).

ಬೆಳ್ಳಿಯ ಪವಿತ್ರವನ್ನು ತರ್ಜನಿ (ತೋರು)ಬೆರಳಿನಲ್ಲಿ, ಬಂಗಾರದ ಪವಿತ್ರವನ್ನು ಅನಾಮಿಕ (ಉಂಗುರ)ಬೆರಳಿನಲ್ಲಿ ಧರಿಸಿ ದೇವ, ಋಷಿ, ಪಿತೃತರ್ಪಣ ನೀಡಿದರೆ ಕೋಟಿಫಲವಿದೆ.

ಅಮಾವಾಸ್ಯೆಯು ಪಿತೃತಿಥಿಯಾಗಿದೆ. ಹಾಗಾಗಿ ಅಮಾವಾಸ್ಯೆಯ ದಿನ ದರ್ಶಶ್ರಾದ್ಧವನ್ನು ಮಾಡುವುದು ಉತ್ತಮ.

ಬೇರೆಯವರ ಶ್ರಾದ್ಧವು ಒಂದೇ ದಿನ ಬಂದೊದಗಿದರೆ ಮೊದಲು ಮೃತಹೊಂದಿದವರ ಶ್ರಾದ್ಧ ಮೊದಲು ಮಾಡಿ, ಸ್ನಾನ ಮಾಡಿ ಹವಿಸ್ಸನ್ನು ಸಿದ್ಧಪಡಿಸಿ, ಅನಂತರ ಮೃತಿ ಹೊಂದಿದವರ ಶ್ರಾದ್ಧವನ್ನು ಮಾಡಬೇಕು.

ಒಂದೇ ದಿನ ಮೂರು ಶ್ರಾದ್ಧಗಳನ್ನು ಮಾಡಬಾರದು. ಹಾಗಾಗಿ ಮೊದಲನೆಯ ದಿನ ಎರಡು ಶ್ರಾದ್ಧ ಮಾಡಿ, ಮರುದಿನ ಇನ್ನೊಬ್ಬರ ಶ್ರಾದ್ಧ ಮಾಡಬೇಕು. ಇಲ್ಲವೇ ತಮ್ಮಂದಿರಿದ್ದರೆ ಒಂದು ಶ್ರಾದ್ಧವನ್ನು ಅವರು ಮಾಡಬೇಕು.

ಪಿತಾಮಹಿ ಮೃತಳಾದರೆ ಶ್ರಾದ್ಧ ಮಾಡುವಾಗ 'ಪಿತಾಮಹಿ ತದ್ಭರ್ತುರ್ಮಾತೃಪಿತಾಮಹಿ' ಎಂದು ಮಾತಾಮಹಿ ಮೃತಳಾದರೆ 'ಮಾತಾಮಹಿ ತದ್ಭರ್ತುರ್ಮಾತೃಪಿತಾಮಹಿ' ಎಂದು ಹೇಳಿ ಶ್ರಾದ್ಧ ಮಾಡಬೇಕು.

ಸಾಂವತ್ಸರಿಕಶ್ರಾದ್ಧದ ಅನಂತರ ನಿತ್ಯತರ್ಪಣ ಕೊಡಬೇಕು. ಆದರೆ ಪರೇಽಹನಿ ತರ್ಪಣ ಕೊಡಬಾರದು.

ಬ್ರಹ್ಮದಂಡ ಎಂದರೆ ಬ್ರಾಹ್ಮಣನು ಅವಶ್ಯವಾಗಿ ಕಲಿಯಬೇಕಾದ ಹದಿನಾಲ್ಕು ವಿದ್ಯೆಗಳಿಗೆ ಪ್ರಾಯಶ್ಚಿತ್ತರೂಪವಾದ ದಕ್ಷಿಣೆ ನೀಡುವುದೆಂದರ್ಥ. ನಾಲ್ಕು ವೇದಗಳು, ಆರು ವೇದಾಂಗಗಳು, ಧರ್ಮಶಾಸ್ತ್ರ, ಪುರಾಣಗಳು, ಪೂರ್ವ ಹಾಗೂ ಉತ್ತರಮೀಮಾಂಸಾ ಶಾಸ್ತ್ರಗಳು –ಇವು ಹದಿನಾಲ್ಕು ವಿದ್ಯೆಗಳಾಗಿವೆ.

ಕೆಲವು ಕಡೆ ವಿಶ್ವೇದೇವತಾಸ್ಥಾನ, ಪಿತೃಸ್ಥಾನವಲ್ಲದೆ ವಿಷ್ಣುಸ್ಥಾನ ಎಂದು ಪ್ರತ್ಯೇಕ

ಸ್ಥಾನ ಕಲ್ಪಿಸಿ ಒಬ್ಬ ಬ್ರಾಹ್ಮಣನನ್ನು ಆವಾಹನೆ ಮಾಡುವ ಕ್ರಮವಿದೆ. ಕೆಲವರಲ್ಲಿ ಹೀಗೆ ಮಾಡುವುದು ನಿಷಿದ್ಧ.

ಚಟಕಶ್ರಾದ್ಧದ ಎಲೆಗೆ ಬಡಿಸಿದ ಅನ್ನವನ್ನು ಪಿಂಡದೊಂದಿಗೇ ಸೇರಿಸದೆ ಹೂಳಬೇಕು. ಹಸುವಿಗೆ ಹಾಗೂ ನದಿಗೆ ಹಾಕಬಾರದು.

ತಂದೆ ತಾಯಿಯರ ಚಿಕ್ಕಪ್ಪ ದೊಡ್ಡಪ್ಪ, ಅಣ್ಣ –ಹೀಗೆ ತನ್ನ ಗೋತ್ರದವರ ಹಾಗೂ ಮಾತಾಮಹ ಮಾತಾಮಹಿರ ಪಿತೃಪ್ರಸಾದವನ್ನು ಸ್ವೀಕಾರ ಮಾಡಬೇಕು. ಸೋದರಮಾವ, ಹೆಣ್ಣು ಕೊಟ್ಟ ಮಾವ –ಹೀಗೆ ಅನ್ಯಗೋತ್ರದವರ ಶ್ರಾದ್ಧದಲ್ಲಿ ಪಿತೃಪ್ರಸಾದವನ್ನು ಸ್ವೀಕಾರ ಮಾಡುವಂತಿಲ್ಲ. ಸರ್ವಪಿತೃಗಳನ್ನುದ್ದೇಶಿಸಿ ಮಾಡುವ ತೀರ್ಥಶ್ರಾದ್ಧ ಹಾಗೂ ಮಹಾಲಯ ಶ್ರಾದ್ಧದಲ್ಲಿ ಪಿತೃಪ್ರಸಾದ ಸ್ವೀಕರಿಸಬಹುದು.

ಹವಿಸ್ಸು ಮಾಡುವ ಮುಂಚೆ ಆಶೌಚದ ಸುದ್ದಿ ತಿಳಿದರೆ ಆ ದಿನ ಶ್ರಾದ್ಧವನ್ನು ಮಾಡುವಂತಿಲ್ಲ. ಹವಿಸ್ಸು ಮಾಡಿ ಪಾಕಕ್ಕೆ ಪ್ರೋಕ್ಷಣೆ ಮಾಡಿದ ಅನಂತರದಲ್ಲಿ ಆಶೌಚ ತಿಳಿದರೆ ಶ್ರಾದ್ಧ ಸಮಾಪ್ತಿಯ ವರೆಗೆ ಆಶೌಚವಿಲ್ಲ.

ಪ್ರದಕ್ಷಿಣೆ–ಸ್ವಾಗತ–ಅರ್ಘ್ಯಪಾತ್ರಾಸಾದನ. ಅರ್ಘ್ಯ–ಸೂಕ್ತಸ್ತೋತ್ರಜಪ–ಅನ್ನ ಪರಿವೇಷಣ (ಬಡಿಸುವಿಕೆ) ಪಿತೃಶೇಷಾನ್ನಘ್ರಾಣ, ಸ್ವಸ್ತಿವಾಚನ, ವಿಸರ್ಜನ, ಗೋತ್ರಾಭಿವಂದನ, ತಾಂಬೂಲ, ದಕ್ಷಿಣಾ, ದಾನ –ಇವಿಷ್ಟರಲ್ಲಿ ಸವ್ಯ (ಉಪವೀತಿ) ಎಂದು ಹೇಳಿರುತ್ತಾರೆ.

ಆಸನಕಲ್ಪನೆ, ಆವಾಹನೆ, ಪಾದ್ಯ, ಅನ್ನದಾನ, ಅಕ್ಷಯ್ಯತಿಲೋದಕ, ಪಿಂಡದಾನ ಹಾಗೂ ಸಂಕಲ್ಪ, ತಿಲತರ್ಪಣಗಳಲ್ಲೂ ಸಂಬಂಧ, ಗೋತ್ರ, ರೂಪಗಳನ್ನು ಹೇಳಬೇಕು.

ಕೈಯಲ್ಲಿ ದರ್ಭೆಯ ಪವಿತ್ರವನ್ನು ಧರಿಸಿ ಗಂಧದಾನವನ್ನು ಮಾಡಬಾರದು ಹಾಗೆ ಮಾಡಿದಲ್ಲಿ ಕೊಟ್ಟವನು, ಸ್ವೀಕರಿಸಿದವನು ಹಾಗು ದಾತೃವಿನ ಪಿತೃ –ಹೀಗೆ ಮೂವರು ನರಕಭಾಜನರಾಗುವರು. ದರ್ಭೆ ಪವಿತ್ರವನ್ನು ಧರಿಸಿ ಗಂಧವನ್ನು ಲೇಪಿಸಿಕೊಳ್ಳಲೂ ಬಾರದು.

ಸೀನಿನಿಂದ ಮತ್ತು ಕಣ್ಣೀರಿನಿಂದ ದೂಷಿತವಾದ ಪದಾರ್ಥಗಳನ್ನು ಶ್ರಾದ್ಧಕರ್ಮದಲ್ಲಿ ವರ್ಜಿಸಬೇಕು.

ಶ್ರಾದ್ಧದಿನದಂದು ವಸ್ತ್ರದಾನ ಮಾಡಬೇಕು. ವಸ್ತ್ರ ಕೊಡದೇ ಇದ್ದರೆ ಪಿತೃಗಳು ಒಂದು ವರ್ಷ ನಗ್ನರಾಗಿರುತ್ತಾರೆ. ಕನಿಷ್ಠಪಕ್ಷ ಯಜ್ಞೋಪವೀತವನ್ನಾದರೂ ಕೊಡಬೇಕು.

ಶ್ರಾದ್ಧಹವಿಸ್ಸನ್ನು ನಾಲ್ಕು ವಿಭಾಗ ಮಾಡಬೇಕು– ಪಾಣಿಹೋಮಕ್ಕೆ, ವೈಶ್ವದೇವಕ್ಕೆ, ಬ್ರಾಹ್ಮಣಭೋಜನಕ್ಕೆ, ಪಿಂಡದಾನಕ್ಕೆ.

ಭೋಜನವಿಧಿಯಂತೆ ಪಾಯಸ ಮೊದಲ್ಗೊಂಡು ಬಡಿಸುವುದು ಸಹಜವಾದರೂ ಶ್ರಾದ್ಧದಲ್ಲಿ ಮೊದಲು ಅನ್ನ ಅನಂತರ ಪಾಯಸ, ಭಕ್ಷ್ಯ, ತೋವೆ, ಮೇಲೋಗರ (ಸಾರು ಮೊದಲಾದ ವ್ಯಂಜನಗಳು), ಲೇಹ್ಯ, ಪೇಯ ಇತ್ಯಾದಿಗಳನ್ನು ಕ್ರಮದಂತೆ ದೈವಪೂರ್ವಕವಾಗಿ ಬಡಿಸುವುದು ಶಾಸ್ತ್ರವಿಹಿತವಾಗಿದೆ.

ಪಿತೃಗಳು ಹೆಸರುಬೇಳೆಯ ಪದಾರ್ಥದಿಂದ ಒಂದು ತಿಂಗಳು, ಉದ್ದಿನ

ಪದಾರ್ಥದಿಂದ (ವಡೆಯಿಂದ) ಮೂರು ತಿಂಗಳು, ಪರಮಾನ್ನದಿಂದ ಆರು ತಿಂಗಳು, ಹಾಗೆಯೇ ಗೋಧಿಯ ಪದಾರ್ಥದಿಂದ ಒಂದು ವರ್ಷದ ವರೆಗೆ ತೃಪ್ತರಾಗುವರು. ಹಾಗೆಯೇ ಎಣ್ಣೆಯಲ್ಲಿ ಹುರಿದ ಪದಾರ್ಥ ಇವುಗಳಿಲ್ಲದ ಪಿತೃಕಾರ್ಯ ನಿಷ್ಫಲವಾಗುವುದು.

ಮಾನವನ ಒಂದು ವರ್ಷವು ಪಿತೃಗಳಿಗೆ ಒಂದು ದಿನವೆನಿಸುವುದು.

ಕೆಲವರಲ್ಲಿ ಬ್ರಾಹ್ಮಣರನ್ನು ಎತ್ತರದ ಆಸನದಲ್ಲಿ ಕುಳ್ಳಿರಿಸಿ ಅವರ ಎದುರು ಅವರ ಎರಡು ಪಾದ ನಿಲ್ಲುವಷ್ಟು ಅಳತೆಯ ಹೊಂಡಮಾಡಿ ಅವರ ಪಾದಗಳೆರಡನ್ನು ಹೊಂಡದ ಮೇಲಿಟ್ಟು ಮೊಣಕಾಲಿನವರೆಗೆ ಕಾಲು ತೊಳೆಯುವ ಕ್ರಮ.

ಮೊಸರು ಬಡಿಸುವಿಕೆಯಿಂದ ಮೊದಲ್ಗೊಂಡು ಉತ್ತರಾಪೋಶನ, ವಿಕಿರಬಲಿ (ಉತ್ತರಾಪೋಶನಕ್ಕಿಂತ ಮೊದಲೇ ಇಟ್ಟರೆ ವಿಶ್ವೇದೇವಸ್ಥಾನದಲ್ಲಿ ಮೊದಲು) ಪಂಕ್ತಿಯಿಂದ ಏಳಿಸುವಿಕೆ, ಕರಶುದ್ಧಿ, ಆಚಮನ ಹಾಗೂ ವಿಸರ್ಜನ –ಇವು ಆರು ಪಿತೃಸ್ಥಾನದಲ್ಲಿರುವ ಬ್ರಾಹ್ಮಣರಿಗೆ ಮೊದಲು ಆಗಬೇಕು. ಅನಂತರ ವಿಶ್ವೇದೇವಸ್ಥಾನದಲ್ಲಿರುವ ಬ್ರಾಹ್ಮಣರಿಗೆ ಮಾಡಬೇಕು. ವಿಪ್ರರು ಎದ್ದು ಹಸ್ತಪ್ರಕ್ಷಾಳನ, ಗಂಡೂಷ ಮುಗಿಸಿ ಬಂದು ಯಥಾ ಸ್ಥಾನದಲ್ಲಿರಲು ಬರ್ಹಿಸ್ಸಿನಲ್ಲಿ ಪಿಂಡಪ್ರದಾನ ಮಾಡಬೇಕು.

ಅಮೂರ್ತರಾದ ಪಿತೃಗಳಿಗೆ ಶ್ರಾದ್ಧದ ಸಂದರ್ಭದಲ್ಲಿ 'ಪಿಂಡ' ಅಂತಲೇ ಶಬ್ದವನ್ನು ಬಳಸಬೇಕು. ಮೂರ್ತರಾದ ಪಿತೃದೇವತಾಸ್ವರೂಪರಾದ ಬ್ರಾಹ್ಮಣರಿಗೆ ಅನ್ನ ಎಂಬುದಾಗಿಯೇ ನೀಡಬೇಕು.

ವರ್ಗದ ಆದಿವ್ಯಕ್ತಿ ಜೀವಂತವಿದ್ದರೆ ಆ ಸಂಬಂಧದವರು ಮೃತರಾದಾಗ ಆಶೌಚವಿದೆ ಆದರೆ ತರ್ಪಣ ಇಲ್ಲ. ಉದಾ– ದೊಡ್ಡಪ್ಪ ಚಿಕ್ಕಪ್ಪ (ತಂದೆಯ ಅಣ್ಣ–ತಮ್ಮ) ಜೀವಂತವಿದ್ದು ಚಿಕ್ಕಮ್ಮ ಮೃತರಾದರೆ ಆಶೌಚವಿದೆ; ತರ್ಪಣ ಇಲ್ಲ. ತಾಯಿಯ ತಂಗಿಯ ಗಂಡ ಮೃತನಾದರೆ ಆಶೌಚ ಇದೆ; ತರ್ಪಣ ಇಲ್ಲ. ಚಿಕ್ಕಪ್ಪ ಮೃತನಾಗಲು ಆಶೌಚ ಹಾಗೂ ತರ್ಪಣ ಇದೆ. ತಾಯಿಯ ತಂಗಿ ಯಾ ಅಕ್ಕ ಮೃತರಾದರೆ, ಅವರ ಗಂಡಂದಿರು ಇದ್ದರೂ ಆಶೌಚ ಮತ್ತು ತರ್ಪಣ ಎರಡೂ ಇವೆ.

ಸಾಮಾನ್ಯವಾಗಿ ಭೋಜನದಲ್ಲಿ ಎಂಜಲು ತೆಗೆದು ಶುದ್ಧಗೊಳಿಸಿದ ಮೇಲೆ ಬ್ರಾಹ್ಮಣರ ನಿರ್ಗಮಿಸಬೇಕು. ಆದರೆ ಶ್ರಾದ್ಧದಲ್ಲಿ ಭೋಜನಪಾತ್ರ ಸ್ಥಳಗಳನ್ನು ಬ್ರಾಹ್ಮಣರ ನಿರ್ಗಮನದ ಅನಂತರವೇ ಶುದ್ಧಿಗೊಳಿಸಬೇಕು.

ಶ್ರಾದ್ಧದಲ್ಲಿ ಬ್ರಾಹ್ಮಣಾರಾಧನೆಗೆ ಎಷ್ಟು ಮಹತ್ವವಿದೆಯೋ ಅಷ್ಟೇ ಮಹತ್ವ ಪಿಂಡಪ್ರದಾನಕ್ಕೂ ಇದೆ. ಹಿಂದೆ ಹೇಳಿದಂತೆ ಅಮೂರ್ತರಾಗಿದ್ದು ಬರ್ಹಿಸ್ಥಾನದಲ್ಲಿ ನೀಡಿದ ಪಿಂಡದಿಂದ ತೃಪ್ತಿಪಡುವ ಪಿತೃಗಳೂ ಇದ್ದಾರೆ. ಯಜಮಾನನು, ದೇವಪೂಜೆಯಲ್ಲಿ ಪ್ರತಿಮೆಯನ್ನು ಮಾಧ್ಯಮವನ್ನಾಗಿ ಇಟ್ಟುಕೊಳ್ಳುವಂತೆ, ತನ್ನ ವಂಶಾಭಿವೃದ್ಧಿಗೋಸುಗ ಪಾರ್ವಣದೇವತೆಗಳ ಆರಾಧನೆಗಾಗಿ ಪಿಂಡವನ್ನು ಮಾಧ್ಯಮವನ್ನಾಗಿರಿಸಿ ಚಿಂತಿಸಬೇಕು.

ರಜಸ್ವಲೆಯಾಗಿ ಮೊದಲ ನಾಲ್ಕು ದಿನಗಳನ್ನು ಬಿಟ್ಟು ಬಳಿಕ ಹನ್ನೆರಡು ದಿನಗಳ ಒಳಗೆ ಶ್ರಾದ್ಧದಿನ ಒದಗಿದರೆ, ಸಂತಾನಾಪೇಕ್ಷೆಯಿಂದ ಪತ್ನಿಗೆ ಪ್ರಾಶನಕ್ಕಾಗಿ ಮಧ್ಯ (ಪಿತಾಮಹ)ಪಿಂಡವನ್ನು **'ವೀರಂ ಮೇ ದತ್ತ ಪಿತರಃ'** ಎಂಬ ಮಂತ್ರವನ್ನು ಹೇಳುತ್ತಾ

ತೆಗೆದುಕೊಡಬೇಕು. ಅವಳು ಅದನ್ನು ಭಕ್ತಿಯಿಂದ **'ಓಮ್ ಆಧತ್ತ ಪಿತರೋ ಗರ್ಭಂ ಕುಮಾರಂ ಪುಷ್ಕರಸ್ರಜಮ್ । ಯಥಾಯಮರಪಾ ಅಸತ್ ॥'** ಮಂತ್ರಪೂರ್ವಕವಾಗಿ ಪ್ರಾಶನ ಮಾಡಿದರೆ ಬಂಜೆಯಾಗಿದ್ದರೂ ಪುತ್ರವತಿಯಾಗುತ್ತಾಳೆ.

ಶ್ರಾದ್ಧದಲ್ಲಿ ಕರ್ತೃ ಹಾಗೂ ಹೆಂಡತಿ ಎರಡು ಸ್ಥಾನಗಳಲ್ಲಿ ಪ್ರತ್ಯೇಕವಾಗಿ ನಮಸ್ಕಾರ ಮಾಡಬೇಕು. ಬಂಧುಗಳ ಜೊತೆಗೆ ಮೊದಲು ಪಿಂಡಗಳಲ್ಲಿ ಸನ್ನಿಹಿತರಾದ ಪಾರ್ವಣದೇವತೆಗಳಿಗೆ ನಮನ, ಪುನಃ ವಿಶ್ವೇದೇವತೆಗಳ ಹಾಗೂ ಪಿತೃದೇವತೆಗಳ ಸ್ಥಾನದಲ್ಲಿರುವ ಬ್ರಾಹ್ಮಣರಿಗೆ ಎಂದರ್ಥ. ಯಜಮಾನನೂ ಗೋತ್ರಾಭಿವಂದನ ಮಾಡಿ ಹಿರಿಯರ ಶ್ರಾದ್ಧಕ್ರಿಯೆಯು 'ಗಯಾಶ್ರಾದ್ಧಸಮಾನವಾಗಲಿ' ಎಂದೂ ಪ್ರಾರ್ಥಿಸಬೇಕು.

ಪಿಂಡದಾನಕ್ಕೆಂದು ಸಿದ್ಧವಾಗಿಟ್ಟಿದ್ದ ಪಿಂಡವು ಒಡೆದರೆ ವಿಷ್ಣುಸೂಕ್ತ ಪಠಿಸಿ ಪುನಃ ಪಿಂಡ ಮಾಡಬೇಕು. ಪಿಂಡದಾನವಾದ ಮೇಲೆ ಒಡೆದರೆ ಹಾಗೂ ಬೆಕ್ಕು-ಇಲಿ ಸ್ಪರ್ಶವಾದರೆ, ಶ್ರಾದ್ಧಮಧ್ಯದಲ್ಲಿ ದೀಪ ನಂದಿದರೆ, ತಾತ್ಕಾಲಿಕ ಕರ್ಮ ಮುಗಿಸಿ ಉಪವಾಸವಿದ್ದು, ಮರುದಿನ ಪುನಃ ಶ್ರಾದ್ಧ ಮಾಡಬೇಕೆಂದಿದೆ.

'ಪಿತೃಶೇಷ'ವೆಂದರೆ ಬ್ರಾಹ್ಮಣರಿಗಾಗಿ ಮಾಡಿದ ಅಡುಗೆ, ಭೋಜನಪದಾರ್ಥಗಳು ಉಳಿದುದು ಎಂದರ್ಥ. ಪಿಂಡಕ್ಕಾಗಿ ಸಿದ್ಧಗೊಳಿಸಿದ ಅನ್ನವನ್ನು ಹವಿಸ್ಸು ಎಂದು ಪರಿಗ್ರಹಿಸಿ- ಮೂರು ಪಿಂಡ, ಪಾಣಿಹೋಮ, ಉಚ್ಛಿಷ್ಟಪಿಂಡ, ಲೇಪಪಿಂಡ, ವಿಕಿರಬಲಿ, ಬಲಿಹರಣ, ವಾಯಸಬಲಿ ಹಾಗೂ ಘ್ರಾಣಭಕ್ಷಣ -ಇಷ್ಟಕ್ಕೆ ಮಾತ್ರ ಉಪಯೋಗಿಸ ಲಾಗುವುದು. ಹಾಗಾಗಿ ಈ ಕವ್ಯವು ಭೋಜ್ಯವಾಗುವುದಿಲ್ಲ.

ಅನೇಕ ಪುತ್ರರಿದ್ದರೂ ತಮ್ಮಂದಿರ ಸಹಕಾರದೊಂದಿಗೆ ಜ್ಯೇಷ್ಠಪುತ್ರನೇ ಶ್ರಾದ್ಧ ಮಾಡುವಂತೆ ಶಾಸ್ತ್ರವಿದೆ. ಹಿರಿಯವನು ಪಿತೃಕರ್ಮ ಮಾಡುವುದರಿಂದ ಎಲ್ಲರೂ ಋಣಮುಕ್ತರಾಗುವರು. ಪಿತ್ರಾರ್ಜಿತ ಆಸ್ತಿಯು ಪಾಲಾಗಿದ್ದರೆ ಮಾತ್ರ ಬೇರೆಬೇರೆಯಾಗಿ ನಡೆಸಬೇಕು. ತಂದೆಯ ಆಸ್ತಿ ಪಾಲಾಗದೆ ಸಹೋದರರು ಒಂದೇ ಊರಲ್ಲಿ ಬೇರೆಬೇರೆ ಇದ್ದರೂ ಒಮ್ಮತದಿಂದ ಒಂದೇ ಸ್ಥಳದಲ್ಲಿ ಸೇರಿ ನಡೆಸುವುದು ಉತ್ತಮ. ಪರದೇಶದಲ್ಲಿ ಇದ್ದರೆ ಬೇರೆಯಾಗಿ ನಡೆಸುವಂತೆ ಹೇಳಿದೆ. ದರ್ಶಾದಿ ಪರ್ವದಿನಗಳಲ್ಲಿ ತರ್ಪಣಾದಿಗಳನ್ನು ಬೇರೆಬೇರೆಯಾಗಿ ಕೊಡಬಹುದು.

ಓರ್ವ ಜೀವಿಯು ೨೪ ವರ್ಷದಲ್ಲಿ ಸ್ವಧರ್ಮಾಚರಣೆಯನ್ನು ಕಡೆಗಣಿಸಿ, ಪತಿತ ನಾಗಿದ್ದರೆ ಪೈಶಾಚಜನ್ಮ ಸಹಜ. ಹಾಗೂ ಶರೀರ ತ್ಯಜಿಸಿದ ಜೀವಿಯು ಭೋಗದೇಹವನ್ನು ಪಡೆಯಲು ಒಂದು ವರುಷ ಬೇಕಾಗುವುದು. ಮಗನು ಹತ್ತು-ಹನ್ನೆರಡು ದಿನಗಳಲ್ಲಿ ಕ್ರಿಯಾದಿಗಳನ್ನು ಮುಗಿಸಿ ತನ್ನ ಪಾಡಿಗೆ ತಾನು ಇರುವಂತಿಲ್ಲ. ಪ್ರತಿ ತಿಂಗಳೂ ಮಾಸಿಕಶ್ರಾದ್ಧಗಳನ್ನು ವರ್ಷಪರ್ಯಂತ ಮಾಡುತ್ತಾ ಕರ್ಮನಿಷ್ಠೆಯವನಾಗಿರಬೇಕು. ಇಲ್ಲದಿದ್ದರೆ ಹನ್ನೆರಡು ದಿನದವರೆಗೆ ಮಾಡಿದ ಎಲ್ಲಾ ಕರ್ಮಗಳು ವ್ಯರ್ಥವಾಗಿ ಮೃತಜೀವಿಗೆ ಪೈಶಾಚಜನ್ಮ ಬರುತ್ತದೆ ಇದರಿಂದಾಗಿ ಕುಟುಂಬದವರಿಗೆ ದೈಹಿಕ ನಿಃಶಕ್ತಿ, ಅಪಸ್ಮಾರ, ಕಂಪನ, ಪ್ರಜ್ಞಾಹೀನತ್ವ, ಹುಚ್ಚುತನ, ವಂಶನಾಶ, ವೈದ್ಯಕೀಯ ತಪಾಸಣೆಗೆ ಸಿಗದ ರೋಗ, -ಹೀಗೆಲ್ಲ ಅನಿಷ್ಟಗಳು ಉಂಟಾಗುವುವು.

ತಂದೆ ಬದುಕಿದ್ದು ತಾಯಿ ಮರಣ ಹೊಂದಿದ್ದಲ್ಲಿ ಕೇವಲ ತಾಯಿಯ ಶ್ರಾದ್ಧ ಮಾಡಬೇಕು, ವಿನಾ ಇತರ ಯಾವುದೇ ಶ್ರಾದ್ಧ, ತಿಲತರ್ಪಣ ಕೊಡುವಂತಿಲ್ಲ.

ಆಶ್ರಮಸ್ವೀಕಾರದಲ್ಲಿ ಆಚರಿಸುವ ಶ್ರಾದ್ಧವು ಇನ್ನೊಂದು ವಿಧಾನ, ಆತ್ಮ(ಜೀವ) ಶ್ರಾದ್ಧವೆಂದು ಹೆಸರು. ಪಿತ್ರಾದಿಗಳಿಗೆ ವಸ್ತ್ರಾದಿ ರೂಪಚಿಂತನೆ ಇಲ್ಲ. ಎಳ್ಳು, ಅಪಸವ್ಯ, ದಕ್ಷಿಣಾಮುಖ, ಸ್ವಧಾಶಬ್ದ, ನಾಮ, ಗೋತ್ರ ಯಾವುದೂ ಇಲ್ಲದೆ, ಅನಿರುದ್ಧ–ಪ್ರದ್ಯುಮ್ನ–ಸಂಕರ್ಷಣ–ವಾಸುದೇವ –ಎಂಬ ಭಗವಂತನ ನಾಲ್ಕು ರೂಪಗಳನ್ನು ಚಿಂತಿಸುತ್ತಾ ವಿಶ್ವೇದೇವತೆ–ಪಿತೃ–ಪಿತಾಮಹ–ಪ್ರಪಿತಾಮಹ ಎಂದೂ 'ನಮಃ'ಶಬ್ದದಿಂದಲೇ ಆರಾಧನೆ, ಪಿಂಡಪ್ರದಾನ ನಡೆಸುವುದು ಗಮನೀಯವಾಗಿದೆ.

ಸಂನ್ಯಾಸಿಯು ಗಯೆಯಲ್ಲಿ ಪಿಂಡದಾನ ಮಾಡಬಾರದು. ಕೇವಲ ದಂಡ ಪ್ರದರ್ಶನ ವನ್ನು ಮಾಡಬೇಕು. ವಿಷ್ಣುಪಾದಕ್ಕೆ ದಂಡಸ್ಪರ್ಶವನ್ನು ಮಾಡಿದ್ದರಿಂದಲೇ ಪಿತೃಗಳಿಗೂ ಸಂನ್ಯಾಸಿಗಳಿಗೂ ಮೋಕ್ಷಪ್ರಾಪ್ತಿಯಾಗುತ್ತದೆ. ಪೂರ್ವಾಶ್ರಮದ ಸಹೋದರರು ಮಾಡುವ ಶ್ರಾದ್ಧದಲ್ಲೂ ಸಂನ್ಯಾಸಿಗಳು ದಂಡಧಾರಿಗಳಾಗಿ ಕೃತಜ್ಞತೆಯನ್ನು ಸಲ್ಲಿಸುವ ರೂಢಿಯಿದೆ.

'ಅಮಾವಾಸ್ಯಾಶ್ರಾದ್ಧ'ದಲ್ಲಿ ತಿಲೋದಕ ಮೊದಲು; ಸಾಂವತ್ಸರಿಕ ಹಾಗೂ ಮಹಾಲಯ ದಲ್ಲಿ ಮರುದಿನ ತಿಲತರ್ಪಣ ಕೊಡಬೇಕು.

ಕೆಲವರಲ್ಲಿ ಬ್ರಾಹ್ಮಣರನ್ನು ಎತ್ತರದ ಆಸನದಲ್ಲಿ ಕುಳ್ಳಿರಿಸಿ ಅವರ ಎದುರು. ಅವರ ಎರಡು ಪಾದ ನಿಲ್ಲುವಷ್ಟು ಅಳತೆಯ ಹೊಂಡ ಮಾಡಿ ಅವರ ಪಾದಗಳೆರಡನ್ನು ಹೊಂಡದ ಮೇಲಿಟ್ಟು ಮೊಣಕಾಲಿನವರೆಗೆ ಕಾಲು ತೊಳೆಯುವ ಕ್ರಮ.

'ಪಾರ್ವಣಶ್ರಾದ್ಧ'ದಲ್ಲಿ ಮೂವರ ಉದ್ದಿಶ್ಯ ಪಿಂಡದಾನ ಮಾಡಿ, ಕೈಗಂಟಿದ ಪಿಂಡದ್ರವ್ಯ ವನ್ನು ದರ್ಭೆಯಿಂದ ಒರಸಿ ಪಿಂಡಸ್ಥಳಕ್ಕೆ ಹಾಕಬೇಕು. ಇಲ್ಲವೇ ಅದರಿಂದ 'ಲೇಪಪಿಂಡ' ವೆಂದು ಇನ್ನೊಂದು ಚಿಕ್ಕ ಪಿಂಡ ಇಡುವ ರೂಢಿ ಬಂದಿದೆ.

ನಿಮಂತ್ರಿತ ಬ್ರಾಹ್ಮಣರಿಗೆ ಪಿಂಡಕ್ಕೆ ನೈವೇದ್ಯ ಮಾಡಿದ ವಸ್ತುಗಳನ್ನೂ, ವಿಕಿರಾನ್ನ (ಪಿಂಡ ಮಾಡಿ ಉಳಿದ ಶೇಷಾನ್ನ) ಬಡಿಸಬಾರದು. ಪ್ರಮಾದದಿಂದ ಬಡಿಸಿದರೆ, ಇಲ್ಲವೇ ತಿಂದರೆ ಹೀನಾವಸ್ಥೆಗೆ ಕಾರಣವಾಗುತ್ತದೆ. ಪವಮಾನಪಾರಾಯಣದಿಂದ ಈ ದೋಷನಿವೃತ್ತಿಯಾಗುತ್ತದೆ.

ಅನ್ನವನ್ನು ಸೇರಿಸಿ ಏಳು ದ್ರವ್ಯಗಳನ್ನು ಪಿಂಡದಲ್ಲಿ ಸೇರಿಸುವುದರಿಂದ ಪಿಂಡದಲ್ಲಿ ದೇಹಲಕ್ಷಣಗಳು ಉಂಟಾಗುತ್ತವೆ. ಹೇಗೆಂದರೆ, ಎಳ್ಳು ಮತ್ತು ಅನ್ನದಿಂದ ತಲೆಯ ಭಾಗ, ಮೊಸರಿನಿಂದ ಮೂಗು, ತುಪ್ಪದಿಂದ ಕಿವಿ, ಬೆಲ್ಲದಿಂದ ತೋಳು, ಹಾಲಿನಿಂದ ಎದೆ, ಜೇನುತುಪ್ಪದಿಂದ ರೋಮಗಳು, ತೀರ್ಥದಿಂದ ಕೈಕಾಲುಗಳು ಉಂಟಾಗುತ್ತವೆ.

ಶ್ರಾದ್ಧಕಾಲದಲ್ಲಿ ಕರ್ತೃ, ಭೋಕ್ತೃಗಳ ಮಧ್ಯೆ ಬೆಕ್ಕು ಹೋದರೆ ಹಾಗೂ ಭೋಜನ ಮಾಡುತ್ತಿದ್ದ ಬ್ರಾಹ್ಮಣ ವಾಂತಿ ಮಾಡಿದರೆ ಶ್ರಾದ್ಧವನ್ನು ಅಷ್ಟಕ್ಕೇ ನಿಲ್ಲಿಸಿ, ತಾನು ಉಪವಾಸವಿದ್ದು ಮಾರನೇ ದಿನ ಅದೇ ಬ್ರಾಹ್ಮಣರನ್ನು ಕರೆದು ಶ್ರಾದ್ಧವನ್ನು ಮಾಡಬೇಕು.

ಶುಭಾಶುಭಕರ್ಮಗಳನ್ನು ಮಾಡುವಾಗ ಉತ್ತರೀಯವನ್ನು ಸೊಂಟಕ್ಕೆ ಸುತ್ತಿ ಕರ್ಮಾಂಗ ಮಾಡಬಾರದು. ಉತ್ತರೀಯವನ್ನು ಸವ್ಯ ಅಪಸವ್ಯ ನೀವೀತೀ ಕ್ರಮಗಳಿಗೆ ಸರಿಯಾಗಿ ಬದಲಾಯಿಸಬೇಕು ಎಂಬುದು ಆಶ್ವಲಾಯನರ ಅಭಿಮತವಿದ್ದರೂ ನಮಸ್ಕಾರ, ತರ್ಪಣ, ಶ್ರಾದ್ಧ, ಸ್ನಾನ ಮಾಡುವಾಗ ಸೊಂಟಕ್ಕೆ ಉತ್ತರೀಯವನ್ನು ಕಟ್ಟಿಕೊಳ್ಳಬೇಕು ಎಂಬುದಕ್ಕೆ ಪ್ರಮಾಣಗಳಿರುವುದರಿಂದ ಅವರವರ ಸಂಪ್ರದಾಯದಂತೆ ಅಳವಡಿಸಿಕೊಳ್ಳಬೇಕು.

ತಂದೆತಾಯಿಯರು ಮೃತರಾದ ವರ್ಷದ ಮಧ್ಯದಲ್ಲಿ ಅಧಿಕಮಾಸ ಬಂತೆಂದರೆ ಆ ತಿಂಗಳ ಮಾಸಿಕವನ್ನು ಅಧಿಕ ಹಾಗೂ ನಿಜಮಾಸಗಳೆರಡರಲ್ಲಿಯೂ ಆ ತಿಂಗಳ ಮಾಸಿಕದ ಹೆಸರು ಹೇಳಿ ಮಾಡಬೇಕು.

ಸೌರಮಾನ ವೃಶ್ಚಿಕಾದಿ ಮೂರು ಮಾಸಗಳಲ್ಲಿ ಪ್ರತಿಸಾರಿಯು ಒಂದಲ್ಲ ಒಂದು ತಿಥಿಲೋಪವಿರುತ್ತದೆ. ಅಂತಹ ಸಂದರ್ಭದಲ್ಲಿ ಮೊದಲ ಮಾಸ, ತಿಥಿಯಲ್ಲಿ ಅಥವಾ ಚಾಂದ್ರಮಾನ ರೀತಿಯ ತಿಥಿಯಲ್ಲಾದರೂ ಮಾಸಿಕಶ್ರಾದ್ಧ ಹಾಗೂ ಸಾಂವತ್ಸರಿಕಶ್ರಾದ್ಧವನ್ನು ಮಾಡಬೇಕು.

ಮೃತರ ಮರಣಮಾಸ ಗೊತ್ತಿದ್ದು ತಿಥಿ ತಿಳಿಯದೆ ಇದ್ದಲ್ಲಿ ಅಮಾವಾಸ್ಯೆ ತಿಥಿಯಂದು ಶ್ರಾದ್ಧ ಮಾಡಬೇಕು. ತಿಥಿ ಗೊತ್ತಿದ್ದು ಮಾಸ ಗೊತ್ತಿಲ್ಲದೆ ಇದ್ದಲ್ಲಿ ಭಾದ್ರಪದ, ಮಾರ್ಗಶೀರ್ಷ, ಮಾಘಮಾಸದಲ್ಲಿ ಶ್ರಾದ್ಧ ಮಾಡಬೇಕು. ಎರಡೂ ಗೊತ್ತಿಲ್ಲದೇ ಇದ್ದರೆ ಮೇಲಿನ ಮಾಸದ ಅಮಾವಾಸ್ಯೆಯ ತಿಥಿಯಲ್ಲಿ ಶ್ರಾದ್ಧ ಮಾಡಬೇಕು.

ಅಧಿಕಮಾಸದಲ್ಲಿ ಮೃತರಾಗಿದ್ದು ಪ್ರಥಮಾಬ್ದಿಕವನ್ನು ಯಾವ ಹೆಸರಿನ ಅಧಿಕಮಾಸದಲ್ಲಿ ಮೃತರಾಗಿದ್ದಾರೋ ಅದೇ ಹೆಸರಿನ (ನಿಜ)ಮಾಸದಲ್ಲಿ ಮಾಡಬೇಕು. ಕಾಲಾಂತರದಲ್ಲಿ ಅದೇ ಅಧಿಕಮಾಸ ಬಂದಾಗ ಆ ಅಧಿಕಮಾಸದ ತಿಥಿಯಲ್ಲಿ ಸಾಂವತ್ಸರಿಕ ಶ್ರಾದ್ಧ ಮಾಡಬೇಕು. ನಿಜಮಾಸದಲ್ಲಿ ಶ್ರಾದ್ಧ ಮಾಡಬೇಕಾಗಿಲ್ಲ.

ನಿಜಮಾಸದಲ್ಲಿ ಮೃತಪಟ್ಟು ಅದೇ ಹೆಸರಿನ ಮಲಮಾಸವು ಮರುವರ್ಷ ಬಂದರೆ ಅದೇ ಮಲಮಾಸದಲ್ಲಿ ಪ್ರಥಮಾಬ್ದಿಕವನ್ನು ಮಾಡಬೇಕು. ಅನಂತರದ ಸಾಂವತ್ಸರಿಕವನ್ನು ಶುದ್ಧದಲ್ಲಿ ಮಾಡಿ ಮಲಮಾಸದಲ್ಲಿ ಪಿಂಡರಹಿತವಾಗಿ ಮಾಡಬೇಕು.

ಮರಣ ಹೊಂದಿದವರ ಹನ್ನೊಂದು ದಿನಗಳ ಕರ್ಮ ಮತ್ತು ಸಪಿಂಡೀಕರಣಗಳು ಅಧಿಕ ಮಾಸದಲ್ಲಿ ಬಂದರೆ ಅವುಗಳನ್ನು ಅಧಿಕಮಾಸದಲ್ಲಿಯೇ ಮಾಡಬೇಕು. ಎರಡನೆಯ ತಿಂಗಳಿಗೆ ಮಾಸಿಕದಿಂದ ಹನ್ನೆರಡನೆಯ ತಿಂಗಳಿನ ಮಾಸಿಕದವರೆಗೆ ಮಧ್ಯದಲ್ಲಿ ಅಧಿಕಮಾಸ ಬಂದರೆ ಆ ತಿಂಗಳಿನ ಮಾಸಿಕವನ್ನು ಅಧಿಕಮಾಸದಲ್ಲಿಯೂ ಶುದ್ಧಮಾಸದಲ್ಲಿಯೂ ಮಾಡಬೇಕು.

ಹನ್ನೆರಡನೆಯ ತಿಂಗಳು ಅಧಿಕಮಾಸವಾಗಿ ಬಂದರೆ ಆ ತಿಂಗಳಿನ ಮಾಸಿಕವನ್ನು ಹನ್ನೆರಡನೆಯ ತಿಂಗಳಾದ ಅಧಿಕಮಾಸದಲ್ಲಿಯೂ, ಹದಿಮೂರನೆಯ ತಿಂಗಳಾದ ಶುದ್ಧಮಾಸದಲ್ಲಿಯೂ ಮಾಡಿ ಹದಿನಾಲ್ಕನೆಯ ತಿಂಗಳಲ್ಲಿ ಪ್ರಥಮಾಬ್ದಿಕವನ್ನು ಮಾಡಬೇಕು.

ಪ್ರತಿವರ್ಷವೂ ಮೃತನ ಹನ್ನೆರಡನೆಯ ತಿಂಗಳಿನಲ್ಲಿ ಮೃತನಾದ ವ್ಯಕ್ತಿಯನ್ನುದ್ದೇಶಿಸಿ ಸಾಂವತ್ಸರಿಕಶ್ರಾದ್ಧವನ್ನು ಮಾಡಬೇಕು. ಆದರೆ ಅಧಿಕಮಾಸವು ಬಂದಾಗ ಹನ್ನೆರಡರ ಬದಲಾಗಿ ಹದಿಮೂರನೆಯ ತಿಂಗಳಿನಲ್ಲಿ ಸಾಂವತ್ಸರಿಕ ಶ್ರಾದ್ಧವನ್ನು ಮಾಡಬೇಕಾಗುತ್ತದೆ.

ಬೇರೆ ಮಾಸದಲ್ಲಿ ಮೃತನಾದ ವ್ಯಕ್ತಿಯ ಪ್ರಥಮ ಸಾಂವತ್ಸರಿಕಶ್ರಾದ್ಧವು ಅಧಿಕಮಾಸದಲ್ಲಿ ಬಂದರೆ ಅಧಿಕಮಾಸದಲ್ಲಿಯೇ ಪ್ರಥಮ ಸಾಂವತ್ಸರಿಕಶ್ರಾದ್ಧವನ್ನು ಮಾಡಬೇಕು. ಏಕೆಂದರೆ ಶ್ರಾದ್ಧಕ್ಕೆ ಯಾವ ಮಾಸ, ಯಾವ ಪಕ್ಷ ಯಾವ ತಿಥಿಯಿರುವಾಗ ಮೃತನಾಗಿರುವನೋ, ಪ್ರತಿವರ್ಷದಲ್ಲಿಯೂ ಅದೇ ಮಾಸ, ಅದೇ ಪಕ್ಷ, ಅದೇ ತಿಥಿಯಲ್ಲಿ ಮೃತಾಹಶ್ರಾದ್ಧವನ್ನು ಮಾಡಬೇಕೆಂಬ ವಿಧಿಯಿದೆ.

ನಾಂದಿಯಲ್ಲಿ 'ಸತ್ಯವಸು', ಪಾರ್ವಣದಲ್ಲಿಯೂ ಸಾಂವತ್ಸರಿಕಶ್ರಾದ್ಧದಲ್ಲೂ 'ಪುರೂರ ವಾರ್ದ್ರವ', ತೀರ್ಥಶ್ರಾದ್ಧ ಹಾಗೂ ಮಹಾಲಯಶ್ರಾದ್ಧದಲ್ಲಿ 'ಧುರಿಲೋಚನ', ಸಪಿಂಡಿಯಲ್ಲಿ 'ಕಾಮಕಾಲ', ಕಾಮ್ಯ(ಇಷ್ಟಿ)ಶ್ರಾದ್ಧದಲ್ಲಿ 'ಕ್ರತುದಕ್ಷಕ', ಹಿರಣ್ಯಶ್ರಾದ್ಧದಲ್ಲಿ 'ಧನೂರುಚಿ', ಏಕೋದ್ದಿಷ್ಟಶ್ರಾದ್ಧದಲ್ಲಿ 'ರುದ್ರ' ಎಂದು ವಿಶ್ವೇದೇವತೆಗಳನ್ನು ಆರಾಧಿಸಬೇಕು.

ಮನುಷ್ಯರ ಒಂದು ತಿಂಗಳು ಪಿತೃಗಳ ಒಂದು ಅಹೋರಾತ್ರ. ಅಮಾವಾಸ್ಯೆಯು ಅವರ ಮಧ್ಯಾಹ್ನ, ಪೂರ್ಣಿಮೆಯು ಅವರ ಮಧ್ಯರಾತ್ರಿ. ಎರಡು ಅಷ್ಟಮಿ ಅವರ ಸಂಧಿಕಾಲಗಳು. ಶುಕ್ಲಾಷ್ಟಮಿಯು ಅವರಿಗೆ ಸೂರ್ಯಾಸ್ತ, ಕೃಷ್ಣಾಷ್ಟಮಿಯು ಅವರಿಗೆ ಸೂರ್ಯೋದಯ.

ಜ್ಯೇಷ್ಠ ಕೃಷ್ಣ ತ್ರಯೋದಶೀಯಲ್ಲಿ ಮಾಡುವ ಶ್ರಾದ್ಧ ವಿಶೇಷ ಫಲಪ್ರದವಾಗಿದೆ.

ಪುಷ್ಯಮಾಸದಲ್ಲಿ ಭಾನುವಾರ, ಅಮಾವಾಸ್ಯೆ, ಶ್ರವಣನಕ್ಷತ್ರ ಮತ್ತು ವ್ಯತೀಪಾತ ಯೋಗಗಳು ಒಂದೇ ದಿನ ಸೇರಿದಲ್ಲಿ ಅದಕ್ಕೆ '**ಅರ್ಧೋದಯಪುಣ್ಯಕಾಲ**' ಎನ್ನುತ್ತಾರೆ ಹಾಗೂ ಆ ನಾಲ್ಕರಲ್ಲಿ ಎರಡು ಅಥವಾ ಮೂರು ಸೇರಿದರೆ 'ಮಹೋದಯಪುಣ್ಯಕಾಲ' ಎನ್ನುತ್ತಾರೆ. ಹಾಗಾಗಿ ಈ ಕಾಲದಲ್ಲಿ ಶ್ರಾದ್ಧ ಶ್ರೇಷ್ಠ.

ಭಾದ್ರಪದ ಮಾಸದ ಷಷ್ಠಿಯಂದು ವ್ಯತೀಪಾತಯೋಗ, ರೋಹಿಣೀನಕ್ಷತ್ರ, ಮಂಗಳವಾರ –ಹೀಗೆ ಈ ನಾಲ್ಕು ಸೇರಿದರೆ '**ಕಪಿಲಾಷಷ್ಠಿ**' ಎಂದು ಹೇಳುತ್ತಾರೆ. ಈ ಸಮಯದಲ್ಲಿ ಶ್ರಾದ್ಧ ಶ್ರೇಷ್ಠ ಹಾಗೂ ಈ ಸಮಯದಲ್ಲಿ ಹಸ್ತಾನಕ್ಷತ್ರದಲ್ಲಿ ಸೂರ್ಯನಿದ್ದರೆ ಮತ್ತಷ್ಟು ವಿಶೇಷ.

ಚಂದ್ರಗ್ರಹಣ ಸೋಮವಾರ ಬಂದರೆ, ಸೂರ್ಯಗ್ರಹಣ ಭಾನುವಾರ ಬಂದರೆ ಅದಕ್ಕೆ '**ಚೂಡಾಮಣೀ**' ಎಂದು ಹೇಳುತ್ತಾರೆ. ಇದು ಸಾಮಾನ್ಯ ಗ್ರಹಣಕ್ಕಿಂತ ಕೋಟಿಪಾಲು ಶ್ರೇಷ್ಠ

ಯಜ್ಞೋಪವೀತದಾನದಿಂದ ವೇದದಾನದ ಫಲ ಬರುತ್ತದೆ ಹಾಗೂ ಗೋಪೀಚಂದನ ದಾನದಿಂದ ಬ್ರಹ್ಮಹತ್ಯಾದಿ ದೋಷ ಪರಿಹಾರವಾಗುತ್ತದೆ.

ಏಕೋದ್ದಿಷ್ಟ ಹಾಗೂ ಸಪಿಂಡೀಕರಣದಲ್ಲಿ ಬೇಲದ ಹಣ್ಣಿನ ಗಾತ್ರದ ಪಿಂಡವನ್ನು ಮಾಸಿಕ ಹಾಗೂ ಸಾಂವತ್ಸರಿಕಶ್ರಾದ್ಧಗಳಲ್ಲಿ ತೆಂಗಿನಕಾಯಿಯ ಗಾತ್ರದ ಪಿಂಡವನ್ನು,

ತೀರ್ಥಶ್ರಾದ್ಧ ಹಾಗೂ ದರ್ಶಶ್ರಾದ್ಧದಲ್ಲಿ ಕೋಳಿಮೊಟ್ಟೆ ಗಾತ್ರದ ಪಿಂಡವನ್ನು ಮಹಾಲಯ ಹಾಗೂ ಗಯಾಶ್ರಾದ್ಧದಲ್ಲಿ ಕಿರುನೆಲ್ಲಿಯ ಗಾತ್ರದ ಪಿಂಡವನ್ನು ಇಡಬೇಕು.

ಅಣ್ಣತಮ್ಮಂದಿರ ಆಸ್ತಿ ವಿಭಾಗವಾಗಿದ್ದರೆ ಪ್ರತ್ಯೇಕವಾಗಿ ಶ್ರಾದ್ಧ ಮಾಡಬೇಕು. ಆಸ್ತಿ ವಿಭಾಗವಾಗದಿದ್ದರೆ ಬೇರೆಬೇರೆಯಾಗಿದ್ದು ಪ್ರತ್ಯೇಕವಾಗಿ ಅಡುಗೆ ಮಾಡಿಕೊಂಡು ಊಟ ಮಾಡುತ್ತಿದ್ದರೆ ಕೂಡ ಶ್ರಾದ್ಧ ಬೇರೆಬೇರೆ ಮಾಡಬೇಕು.

ಶ್ರಾದ್ಧಕರ್ಮಕ್ಕೆ ಆಶೌಚವುಂಟಾದಾಗ ಆಶೌಚವು ಮುಗಿದು ಮಂಗಳಸ್ನಾನದ ದಿನದಂದು ಪುಣ್ಯಾಹಾದಿಗಳನ್ನು ಮಾಡಿ, ಮನೆಯನ್ನು ಶುದ್ಧಿಗೊಳಿಸಿ ಅನಂತರ ಹೊಸದಾಗಿ ನೀರನ್ನು ತಂದು ಮಡಿಯನ್ನು ಹಾಕಿ ಮುಂದಿನ ಕಾರ್ಯ ನಡೆಸಬೇಕು. ಯಾವುದೇ ಕಾರಣಕ್ಕೂ ಕಾರ್ಯವನ್ನು ಮುಂದೂಡುವಂತಿಲ್ಲ.

ಪವಿತ್ರವಿಲ್ಲದೆ ಮಾಡಬೇಕಾದ ಕಾರ್ಯಗಳು– ಪಾದಪ್ರಕ್ಷಾಳನೆ ಮತ್ತು ಗಂಧದಾನದಲ್ಲಿ ಪವಿತ್ರವಿರಬಾರದು. ಇತರ ಎಲ್ಲ ಕಾರ್ಯಗಳಿಗೂ ಪವಿತ್ರ ಅಗತ್ಯ.

ಶ್ರಾದ್ಧಶೇಷ ಎಂದರೆ ಅನ್ನ ಮಾತ್ರ, ಹಣ್ಣು, ತರಕಾರಿ, ಗೊಜ್ಜು, ಪಲ್ಯ ಮುಂತಾದುವು, ಹಾಲು, ಮೊಸರು, ತುಪ್ಪ, ಜೇನು ಮತ್ತು ಬೇಯಿಸಿದ ಮತ್ತು ಬೇಯಿಸದ ಇತರ ವಸ್ತುಗಳೂ ಶೇಷವಲ್ಲ.

**'ಸುಲಭಕೋಪಾ ಪಿತರಃ'** ಪಿತೃಗಳು ಸುಲಭವಾಗಿ ಕೋಪಿಸಿಕೊಳ್ಳುವರು. ಅವರ ಕೋಪಕ್ಕೆ ತುತ್ತಾಗಬಾರದು. ಬೇಗನೆ ನಮ್ಮ ಅಭಿಲಾಷೆಗಳನ್ನು ಅನುಗ್ರಹಿಸುವವರು. ಆದುದರಿಂದ ಸಮರ್ಪಕವಾದ ಕರ್ಮವನ್ನು ನೆರವೇರಿಸಿ ಅನುಗ್ರಹಕ್ಕೆ ಪಾತ್ರರಾಗಬೇಕು.

ಶ್ರಾದ್ಧ, ಯಜ್ಞ, ಯಾಗಗಳು, ಬ್ರಹ್ಮಯಜ್ಞಗಳಲ್ಲಿ, ಓಂಕಾರ, ಋಷಿ, ದೇವತೆ, ಮತ್ತು ಛಂದಸ್ಸನ್ನು ಸ್ಮರಿಸಬಾರದು.

**ನ ಚ ಸ್ಮರೇದ್ ಋಷಿಂ ಛಂದಃ ಶ್ರಾದ್ಧಂ ವೈತಾನಿಕೇ ಮಖೇ ।**
**ಬ್ರಹ್ಮಯಜ್ಞೇ ಚ ವೈ ತದ್ವತ್ ತಥೋಂಕಾರಂ ತು ನೋಚ್ಚರೇತ್ ॥**

ಆಚಮನವನ್ನು ಶರೀರಶುದ್ಧಿಗಾಗಿ, ಮೊದಲು ಎರಡು ಬಾರಿ ಆಚಮನ ಮಾಡುವುದು. ಅನಂತರ, ಪಾದಪ್ರಕ್ಷಾಳನೆ, ವಾಯಸಪಿಂಡಪ್ರದಾನ, ಘ್ರಾಣಭಕ್ಷಣೆ ಹಾಗೂ ಕರ್ಮದ ಕೊನೆ ಇಷ್ಟು ಸಂದರ್ಭಗಳಲ್ಲಿ ಆಚಮನ ಮಾಡಬೇಕು.

ಪ್ರಥಮಾಬ್ದಿಕದಲ್ಲಿ ಪಂಚದರ್ಭೆಯಿಂದ ಸಾಂವತ್ಸರಿಕಶ್ರಾದ್ಧದಲ್ಲಿ ಏಳು ದರ್ಭೆಯಿಂದ ತೀರ್ಥಕ್ಷೇತ್ರದಲ್ಲಿ ಹಾಗೂ ಮಹಾಲಯಶ್ರಾದ್ಧದಲ್ಲಿ ಒಂಬತ್ತು ದರ್ಭೆಯ ಜಲಕೂರ್ಚವನ್ನು ಮಾಡಬೇಕು.

ಬ್ರಾಹ್ಮಣರು ಪಾರ್ವಣದಲ್ಲಿ ೨೪ ಬಾರಿ, ಸಪಿಂಡೀಕರಣದಲ್ಲಿ ೩೨ ಬಾರಿ ಗಂಡೂಷವನ್ನು ಮಾಡಬೇಕು.

ಪಿತೃಸ್ಥಾನದ ಬ್ರಾಹ್ಮಣರ ಪಾದಮೂಲದಲ್ಲಿ ಪಿತೃಗಳೂ, ಮಧ್ಯದಲ್ಲಿ ಪಿತಾಮಹರೂ, ತುದಿಯಲ್ಲಿ ಪ್ರಪಿತಾಮಹರೂ ಇದ್ದಾರೆಂದು ಭಾವಿಸಿ ಪವಿತ್ರವಿಲ್ಲದೆ, ಹಿಮ್ಮಡಿಯಿಂದ

ಕೆಳಗೆ ಪಾದಗಳನ್ನು ತೊಳೆದು, ತೀರ್ಥವನ್ನು ಸಕಲ ಪುಣ್ಯಕ್ಷೇತ್ರಗಳ ತೀರ್ಥವೆಂದು ಭಾವಿಸಿ, ತಲೆಗೆ ಪ್ರೋಕ್ಷಿಸಿಕೊಳ್ಳಬೇಕು.

ಶ್ರಾದ್ಧವನ್ನು ವಿಸ್ತಾರವಾಗಿ ಮಾಡಲು ಹೋದರೆ ಶಾಸ್ತ್ರಪ್ರಕಾರ ಕೆಲಸ ಮಾಡಲಿಕ್ಕೂ, ಸ್ಥಳದ ಅನುಕೂಲತೆಗೂ, ಕುತಪಕಾಲಕ್ಕೆ ಸರಿಯಾಗಿ ಎಲ್ಲವೂ ತಯಾರಿಸಲಿಕ್ಕೂ, ಶುದ್ಧಾಚಾರಕ್ಕೂ, ಆಮಂತ್ರಿತ ಬ್ರಾಹ್ಮಣರನ್ನು ಸಂತೋಷಪಡಿಸಲಿಕ್ಕೂ, ನಿಯಮದಂತೆ ಯೋಗ್ಯರೀತಿಯಲ್ಲಿ ಮಾಡಲಿಕ್ಕಾಗದ ಕಾರಣ ಶ್ರಾದ್ಧವನ್ನು ವಿಸ್ತಾರವಾಗಿ ಮಾಡಲು ಹೋಗಬಾರದು.

ಕೆಲವರಲ್ಲಿ ಪಂಚಬಲಿಯನ್ನು ಕೊಡುವ ವಿಧಾನ :

**ಗಾವೋ ಮೇ.......ಪ್ರಸೀದತು ॥ ಇದಂ ಗೋಭ್ಯೋ ನ ಮಮ ॥**

**ದ್ವೌ ಶ್ವಾನೌ .........ಸ್ಯಾತಾಮೇತಾವಹಿಂಸ್ರಕೌ ॥ ಇದಂ ಶ್ವಭ್ಯಾಂ ನ ಮಮ ॥**

**ಐಂದ್ರವಾರುಣ.... ಅರ್ಪಿತಮ್ ॥ ಇದಮನ್ನಂ ವಾಯಸೇಭ್ಯೋ ನ ಮಮ ॥**

**ದೇವಾಮನುಷ್ಯಾ.... ಮಯಾ ಪ್ರದತ್ತಮ್ ॥ ಇದಮನ್ನಂ ದೇವಾದಿಭ್ಯೋ ನ ಮಮ ॥**

**ಪಿಪೀಲಿಕಾಃ ಕೀಟ...... ಸುಖಿನೋ ಭವಂತು ॥ ಇದಮನ್ನಂ ಪಿಪೀಲಿಕಾದಿಭ್ಯೋ ನ ಮಮ ॥** –ಎಂದು ಪಂಚಬಲಿಯನ್ನು ಕೊಡಬೇಕು.

ಕೆಲವರಲ್ಲಿ ಚಟಕಶ್ರಾದ್ಧದಲ್ಲಿ ಪಾಣಿಹೋಮದ ಆಹುತಿಯನ್ನು ಕೂರ್ಚದಲ್ಲಿ ಕೊಟ್ಟು, ವಿಪ್ರಹಸ್ತದಲ್ಲಿ ಹೋಮಿಸಿದೆನೆಂದು ಭಾವಿಸಿ, ಅಗ್ನಿಯಲ್ಲಿ ಆ ಆಹುತಿಗಳನ್ನು ಸಮರ್ಪಿಸುವ ಕ್ರಮವಿದೆ.

ಕೆಲವರಲ್ಲಿ ತಾಯಿ ಮುತ್ತೈದೆಯಾಗಿ ಮರಣಹೊಂದಿದ್ದಲ್ಲಿ ಶ್ರಾದ್ಧಕರ್ಮದಲ್ಲಿ. ಕರ್ತೃವಿನ ಹೆಂಡತಿ ಸುವಾಸಿನಿಯ ಕಾಲು ತೊಳೆದು ಕುಂಕುಮ ಅರಸಿನ ಕೊಟ್ಟು ಹೂ ಮುಡಿಸಬೇಕು. ಕರ್ತೃವು ಬ್ರಾಹ್ಮಣರ ಭೋಜನಸಮಯದಲ್ಲಿ ಸುವಾಸಿನಿಯನ್ನು ಉತ್ತರಾಭಿಮುಖವಾಗಿ ಕುಳ್ಳಿರಿಸಿ ಚೌಕಾಕಾರದ ಮಂಡಲ ಮಾಡಿ ಬಡಿಸುವಾಗ ಪಿತೃಸ್ಥಾನದಲ್ಲಿ ಬಡಿಸಿದ ಅನಂತರ ಸುವಾಸಿನಿಗೆ ಬಡಿಸಬೇಕು. ಪಿತೃಸ್ಥಾನದಲ್ಲಿ ಪರಿಷೇಚನೆ ಮಾಡಿದ ಬಳಿಕ ಸುವಾಸಿನಿಯ ಎಲೆಗೆ ಕೂರ್ಚದಿಂದ ಪರಿಷೇಚನ ಮಾಡಬೇಕು. ಆಪೋಶನದ ಸಮಯದಲ್ಲಿ ಸುವಾಸಿಯರಿಗೂ ಆಪೋಶನಕೊಟ್ಟು [ಅಮೃತಮಸ್ತು] ಎಂದು ಪ್ರತಿವಚನ ಪಡೆದು ಅವರೂ ಆಪೋಶನ ತೆಗೆದುಕೊಳ್ಳಬೇಕು. ಜೇನುತುಪ್ಪವನ್ನು ಸುವಾಸಿನಿಯರಿಗೂ ಬಡಿಸಬೇಕು. ಉತ್ತರಾಪೋಶನವನ್ನು ವಿಶ್ವೇದೇವಸ್ಥಾನದಲ್ಲಿ ಕೊಟ್ಟ ಬಳಿಕ ಸುವಾಸಿನಿಗೆ ಕೊಡಬೇಕು ಬ್ರಾಹ್ಮಣರಿಗೆ ತಾಂಬೂಲದಕ್ಷಿಣೆ ಕೊಟ್ಟ ಬಳಿಕ ಕರ್ತೃವಿನ ಹೆಂಡತಿ ಸುವಾಸಿನಿಗೆ ತಾಂಬೂಲದಕ್ಷಿಣೆ ಕೊಡಬೇಕು.

ಶ್ರಾದ್ಧಾನಂತರದಲ್ಲಿ ಪಿಂಡವನ್ನು ಭೋಜನ ಮಾಡಿಯಾದ ಮೇಲಾದರೂ, ಕರ್ತೃವು, ಮೈಲಿಗೆ ಮುಟ್ಟಿಕೊಳ್ಳದೆ, ಆ ಪಿಂಡವನ್ನು ಆ ದಿನ ಸಾಯಂಕಾಲದ ಒಳಗೆ ವಿಸರ್ಜಿಸಬೇಕು.

ಸ್ಕಾಂದದಲ್ಲಿ ಶ್ರಾದ್ಧದಲ್ಲಿ ಬ್ರಾಹ್ಮಣರು ಉಂಡ ಎಲೆಯನ್ನು ಕರ್ತೃವೇ ತೆಗೆಯಬೇಕೆಂದಿದೆ.

**ನ ಸ್ತ್ರೀಭಿರ್ನ ಚ ಬಾಲೇನ ನಾನ್ಯೇನೈವ ಚ ಕೇನಚಿತ್ ।**
**ಶ್ರಾದ್ಧೀಯ ವಿಪ್ರಪಾತ್ರಾಂ ಚ ಸ್ವಯಮೇವ ಪ್ರಚಾಲಯೇತ್ ॥**

–ಎಂಬ ವಚನವಿದೆ. ಸ್ತ್ರೀಯರು, ಮಕ್ಕಳು ತೆಗೆಯುವ ಹಾಗಿಲ್ಲ.

ಕೆಲವರಲ್ಲಿ ಶ್ರಾದ್ಧದಲ್ಲಿ ಉಳಿದ ಎಳ್ಳನ್ನು ಮರುದಿನದ ಪರೇಃಹನಿ ತರ್ಪಣಕ್ಕೆ ತೆಗೆದಿಡುವಕ್ರಮವಿದೆ.

ಗತಿಸಿದ ಜೀವವು ಮುಕ್ತಾತ್ಮನು ಆಗಿದ್ದರೆ ಅಥವಾ ಸ್ವರ್ಗಸುಖವನ್ನನುಭವಿಸುತ್ತಿದ್ದರೆ ಆತನಿಗೆ ಈ ಲೋಕದಲ್ಲಿ ಸಮರ್ಪಿಸಲಾಗುವ ಯಾವುದೇ ಭೋಜ್ಯವಸ್ತುವಿನ ಆವಶ್ಯಕತೆಯಿರುವುದಿಲ್ಲ.

**'ನ ಹಿ ತೇನ ಪಥಾ ತನುತ್ಯಜ ತನಯಾವರ್ಜಿತಪಿಂಡಕಾಂಕ್ಷಿಣಃ ।'** ಆದರೆ ಅವರನ್ನು ಕುರಿತು ಮಾಡುವ ಶ್ರಾದ್ಧವು, ದೇವತಾಪೂಜೆಯ ರೂಪವನ್ನು ತಾಳಿ, ಕರ್ತೃವಿಗೆ ದೇವತಾಪೂಜೆಯ ಫಲವಾದ ಪುರುಷಾರ್ಥಗಳನ್ನು ಕೊಡುತ್ತದೆ.

ತೀರ್ಥಶ್ರಾದ್ಧ, ಗಯಾಶ್ರಾದ್ಧ, ಪ್ರೇತಶ್ರಾದ್ಧ, ಅನುಮಾಸಿಕಶ್ರಾದ್ಧ, ಅಬ್ಧಿವಿಮೋಕಶ್ರಾದ್ಧ, ಸಪಿಂಡೀಕರಣಶ್ರಾದ್ಧ, ಪ್ರಥಮಾಬ್ಧಿಕಶ್ರಾದ್ಧ, ವೃದ್ಧಿಶ್ರಾದ್ಧಗಳಲ್ಲಿ ತಿಲತರ್ಪಣ ಕೊಡಬಾರದು.

## ದಿನತ್ರಯದಲ್ಲಿ ಶ್ರಾದ್ಧಕ್ರಮ

ಶ್ರಾದ್ಧಾದಿಗಳಿಗೆ ಶ್ರೋತ್ರಿಯರಾದ ದೇವಪ್ರಿಯರನ್ನೇ ಗುರುತಿಸಿದ್ದಾರೆ. ಹಾಗಾಗಿ ಏಕಾದಶಿಯ ಶುದ್ಧ ಉಪವಾಸವೆಂದರೆ ಅದು ದಶಮಿ–ಏಕಾದಶೀ–ದ್ವಾದಶೀ ದಿನತ್ರಯದ ಉಪವಾಸ ವರಾಹಪುರಾಣದಲ್ಲಿ ಪರಾನ್ನ ಊಟದಿಂದಾಗುವ ನಷ್ಟವನ್ನು ವ್ಯಾಸರು ತಿಳಿಸಿದ್ದಾರೆ. ದಶಮಿ ವ್ರತಾಚರಣೆಯಿಂದ ಬಂದ ಆತನ ಪುಣ್ಯದ ಕಾಲುಭಾಗ ಮತ್ತು ದ್ವಾದಶಿಯಂದು ಸಂಪಾದನೆಗೈದ ಪುಣ್ಯದ ಅರ್ಧಭಾಗವು ಅನ್ನದಾನ ಮಾಡಿದವನಿಗೆ ಸಂದಾಯವಾಗಲಿದೆ.

ಹಾಗಾಗಿ ದಶಮಿ–ದ್ವಾದಶಿಗಳಲ್ಲಿ ಪರಾನ್ನಭೋಜನವು ನಿಷಿದ್ದ. ಶಾಕ, ಮೂಲ, ತಿಲಗಳ ಸ್ವೀಕಾರವು ತೈಲಾಭ್ಯಂಗ, ತಾಂಬೂಲ, ದಂತಧಾವನ ಇವನ್ನೆಲ್ಲಾ ನಿಷೇಧಿಸಿದ್ದಾರೆ. ಇದರಲ್ಲಿ ಎರಡನೇ ಬಾರಿ ನೀರು ಕುಡಿಯುವುದನ್ನು ನಿಷೇಧಿಸುವ ಮೂಲಕ ಒಂದು ಬಾರಿ ನೀರು ಕುಡಿಯುವುದನ್ನು ಒಪ್ಪಿದ್ದಾರೆ. ದಶಮಿ ಮಧ್ಯಾಹ್ನದ ಹಾಗೂ ದ್ವಾದಶಿ ಬೆಳಗ್ಗೆಯ ಎರಡು ದಿನದ ಊಟದಲ್ಲಿ ಉಪ್ಪು ಹುಳಿ ಖಾರದ ತ್ಯಾಗದೊಂದಿಗೆ ಕಾಯಿಹಾಲಿನ ಗಂಜಿ ಹಾಗೂ ಹಾಲು, ತುಪ್ಪದ ಊಟವನ್ನು ಮಾತ್ರ ಹೇಳಿದ್ದಾರೆ.

ಶ್ರಾದ್ಧದ ನಿಯಮಗಳನ್ನು ಅರ್ಥೈಸಿಕೊಂಡರೆ ದಶಮಿ ದ್ವಾದಶಿಗಳಂದು ಶ್ರಾದ್ಧಮಾಡಲು ಬರುವುದಿಲ್ಲ. ಅಲ್ಲಿ ಅಭ್ಯಂಗಸ್ನಾನವಿದೆ. ತಿಲವಿಲ್ಲದೇ ಶ್ರಾದ್ಧವಿಲ್ಲ.

ಪಿತೃಭೋಜನದಲ್ಲಿ ಶಾಕ, ಮೂಲಾದಿಗಳನ್ನು ಬಳಸುವಂತೆ ಹೇಳಿರುವುದರಿಂದ ಅಂದು ಸಪ್ಪೆ ಊಟವು ಶ್ರಾದ್ಧದ ಅನ್ನದಾನವನ್ನು ಸಂಕೋಚಗೊಳಿಸುವುದು. ಶ್ರಾದ್ಧಭೋಜಿಯು ಶ್ರಾದ್ಧದ ಹಿಂದಿನ ದಿನ ಕರ್ತೃವಿನ ಮನೆಗೆ ಬಂದಿರಬೇಕು. ಅವರಿಬ್ಬರಿಗೂ ರಾತ್ರಿ ಊಟವಿರದು. ಅಂದರೆ ದಶಮಿಯಂದು ಶ್ರಾದ್ಧವಾದರೆ ನವಮಿ ರಾತ್ರಿ ಇಬ್ಬರಿಗೂ ಊಟವಿಲ್ಲ. ಹಾಗಾಗಿ ದಶಮಿಯಂದು ಮಾಡುವ ಕುತಪಕಾಲದ ಶ್ರಾದ್ಧಕ್ಕೆ ಉಣ್ಣುವ ವ್ಯಕ್ತಿಗೆ ಅಡ್ಡಿಬರಲಿದೆ. ದಶಮಿಯಂದು ರಾತ್ರಿ ತಡವಾಗಿ ಗಟ್ಟಿ ಉಣ್ಣುವ ಯೋಚನೆ ಮಾಡಿದರೆ ಏಕಾದಶಿಗೆ ಅಡ್ಡಿಯಾಗಲಿದೆ ಹಾಗಾಗಿ ದಿನತ್ರಯದಂದು ಶ್ರಾದ್ಧಾದಿಗಳನ್ನು ನಿಯಮಪೂರ್ವಕ ನಡೆಸಲು ಆಗುವುದೂ ಇಲ್ಲ. ಶ್ರಾದ್ಧಾದಿಗಳನ್ನು ನಿಯಮಪೂರ್ವಕ ನಡೆಸಿದರೆ ದಿನತ್ರಯವನ್ನು ನಿಯಮಪೂರ್ವಕ ನಡೆಸಲು ಬರುವುದಿಲ್ಲ. ಹಾಗಾಗಿ, ಪಿತೃಕರ್ಮಕ್ಕಿಂತ ದೇವಕರ್ಮ ಮುಖ್ಯ. ದೇವಕರ್ಮವಿದು ಪಾಕ್ಷಿಕವಾಗಿದ್ದು ನಿತ್ಯವೆನಿಸಿದರೆ, ಪಿತೃಕರ್ಮವು ವಾರ್ಷಿಕವಾಗಿ ನೈಮಿತ್ತಿಕವೆನಿಸಿದ್ದು ಯೋಗ್ಯಬ್ರಾಹ್ಮಣ ಸಿಕ್ಕಾಗ ಶ್ರಾದ್ಧ ಮಾಡಲು ವಿಧಿ ಇರುವಾಗ ದಿನತ್ರಯದ ಶ್ರಾದ್ಧವನ್ನು ಅಮಾವಾಸ್ಯಾದಿದಿನಗಳಲ್ಲಿ ಮಾಡಬಹುದು.

ವರ್ಷಕ್ಕೊಮ್ಮೆ ಬರುವ ದಿನ ಬಿಡಬೇಡಿ, ಸಂಕೋಚ ಬೇಡ. ನಡೆಸುವ ಎಂದರೆ ಆಶೌಚ ಬಂದರೆ ಆ ದಿನ ಬಿಟ್ಟೇ ಬಿಡುವೆವು, ಶ್ರಾದ್ಧ ಮುಂದೂಡಲಿದೆ, ಹೆಂಡತಿ ರಜಸ್ವಲೆಯಾದರೂ ವಾರ್ಷಿಕ ಶ್ರಾದ್ಧ ನಿಲ್ಲಲಿದೆ. ಹಾಗೆಯೇ ಗ್ರಹಣ ಬಂದರೂ ಆ ದಿನ ಶ್ರಾದ್ಧ ನಡೆಸಲಾಗದು. ಮರುದಿನವೆಂದರೆ ಹಿಂದಿನ ದಿನಕ್ಕೂ ಶ್ರಾದ್ಧಭೋಜಿಯ ಸಂಬಂಧ ಇರಲಾಗಿ ಗ್ರಹಣದ ಮರುದಿನ ಶ್ರಾದ್ಧ ಎಂದು ಮಾಡುವುದು ತಪ್ಪೇ ಆಗಲಿದೆ. ಇದಕ್ಕೆ ದ್ವಾದಶಿ ದಶಮಿಯೂ ಸೇರಿದೆ ಎಂದೇ ಮಧ್ವಾಚಾರ್ಯರ ಮಾತಿನ ಅಭಿಪ್ರಾಯ.

## ಆಶೌಚಪ್ರಕರಣಮ್

ಮನುಷ್ಯನಿಗೆ ಬರುವ ಅಶುದ್ಧಿಗೆ '**ಆಶೌಚ**' ಎಂದು ಹೆಸರು. ಏಳು ತಲೆಮಾರಿನ ವರೆಗೂ ಸಪಿಂಡರೆಂದು ಹೆಸರು. ಸಪಿಂಡರಲ್ಲಿ ಯಾರೇ ಸತ್ತರೂ, ಹುಟ್ಟಿದರೂ, ಹತ್ತು ದಿನದ ಆಶೌಚ, ಏಳು ತಲೆಮಾರಿನಿಂದ ಹದಿನಾಲ್ಕು ತಲೆಮಾರಿನ ವರೆಗೆ '**ಸಮಾನ**'ರೆಂದು ಹೆಸರು. ಸಮಾನರಲ್ಲಿ ಯಾರೇ ಸತ್ತರೂ, ಹುಟ್ಟಿದರೂ, ಮೂರು ದಿನದ ಅಶೌಚ. ಹದಿನಾಲ್ಕು ತಲೆಮಾರಿನಿಂದ ಇಪ್ಪತ್ತೊಂದು ತಲೆಮಾರಿನ ವರೆಗೆ '**ಸಗೋತ್ರ**'ರೆಂದು ಹೆಸರು. ಇವರಲ್ಲಿ ಮೃತರಾದರೆ ಸ್ನಾನದಿಂದ ಶುದ್ಧಿ.

ಆಶೌಚ ಐದು ಬಗೆ–

೧ **ದಶಾಹಾಶೌಚ** (ಹತ್ತುದಿನದ ಆಶೌಚ)

೨ **ತ್ರ್ಯಹಾಶೌಚ** (ಮೂರುದಿನದ ಆಶೌಚ)

೩ **ಪಕ್ಷಿಣ್ಯಾಶೌಚ** (ಒಂದೂವರೆ ದಿನದ್ದು)

೪ **ಏಕಾಹಾಶೌಚ** (ಒಂದು ದಿನದ್ದು)

೫ **ಸ್ನಾನಪರ್ಯಂತಾಶೌಚ**

**ಪಕ್ಷಿಣೀ :** ಸೂರ್ಯಾಸ್ತದ ಅನಂತರ ಮರಣವಾದರೆ ಆ ರಾತ್ರಿ ಹಾಗೂ ಮರುದಿನ ಪೂರ್ತಿ ಆಶೌಚವಿದ್ದು ಅನಂತರದ ಸೂರ್ಯೋದಯಕ್ಕೆ ಸ್ನಾನದಿಂದ ಶುದ್ಧಿ.

ಒಂದು ವೇಳೆ ಹಗಲು ಮರಣವಾದರೆ ಆ ದಿನಪೂರ್ತಿ ಹಾಗೂ ಮರುದಿನ ರಾತ್ರಿ ನಕ್ಷತ್ರವನ್ನು ನೋಡಿ ಸ್ನಾನಮಾಡುವುದು. ಅನಂತರ ಮರುದಿನ ಉಪವೀತಧಾರಣೇ ಮಾಡಬೇಕು.

ಸ್ನಾನಪರ್ಯಂತ ಆಶೌಚದಲ್ಲಿ ಸ್ನಾನಮಾತ್ರ ಮಾಡಬೇಕು. ಉಪವೀತ ಬದಲಿಸ ಬೇಕಾಗಿಲ್ಲ. ಹಾಗೂ ನಿಕಟಸಂಪರ್ಕ, ಪ್ರೀತಿಸೌಹಾರ್ದಗಳುಳ್ಳ ದೂರಸಂಬಂಧಿಗಳ ಹೆಸರು. ಆಶೌಚದಾಯಿಗಳ ಪಟ್ಟಿಯಲ್ಲಿ ಸೇರಿರದಿದ್ದರೂ ಅವರ ಮರಣನಿಮಿತ್ತ ಸ್ನೇಹಕ್ಕಾಗಿ ಮೃತಾತ್ಮತೃಪ್ತಿಗಾಗಿ ಸ್ನಾನಮಾಡುವುದು ಶ್ರೇಷ್ಠವಾಗಿದೆ.

ತಂದೆತಾಯಿಗಳು ಮೃತಹೊಂದಿದ್ದಲ್ಲಿ ಒಂದು ವರ್ಷ ಆಶೌಚ, ಮಲತಾಯಿಗಾದರೆ ಆರು ತಿಂಗಳು, ಪತ್ನಿಗಾದರೆ ಮೂರು ತಿಂಗಳು, ಅಣ್ಣತಮ್ಮಂದಿರು ಹಾಗೂ ಮಕ್ಕಳು ಮರಣದಲ್ಲಿ ಒಂದೂವರೆ ತಿಂಗಳು ಆಶೌಚ ಎಂದು ಕೆಲವರ ಅಭಿಪ್ರಾಯ.

## ಮೂರು ದಿನದ ಆಶೌಚಗಳು

**ಪುರುಷರಿಗೆ–**

* ತಾಯಿಯ ತಂದೆ, ತಾಯಿ, ಸೋದರಿ, ಅಣ್ಣ (ಸೋದರಮಾವ) ಮಾವನ ಹೆಂಡತಿ.
* ತಂದೆಯ ಸೋದರಿ, ತನ್ನ ಸೋದರಿ ಹಾಗೂ ಸೋದರಿಯ ಮಗ, ತನ್ನ ಮಗಳು ಹಾಗೂ ಮಗಳ ಮಗ, ಹೆಂಡತಿಯ ತಂದೆ, ತಾಯಿ.

## ಒಂದೂವರೆ ದಿನದ ಆಶೌಚಗಳು

* ತಾಯಿಯ ಸೋದರಿಯ ಮಗಳು, ಮಗ ಹಾಗೂ ಮಗನ ಹೆಂಡತಿ.
* ತಂದೆಯ ಸೋದರಿಯ ಮಗಳು, ಮಗ ಹಾಗೂ ಮಗನ ಹೆಂಡತಿ.
* ತನ್ನ ಸೋದರನ ಮಗಳು.
* ತನ್ನ ಮಗಳ ಮಗನ ಹೆಂಡತಿ ಹಾಗೂ ಮಗಳ ಮಗಳು.
* ಸೋದರಮಾವನ ಮಗ ಹಾಗೂ ಹೆಂಡತಿ, ಸೋದರಮಾವನ ಮಗಳು.

**ಸದ್ಯಾಶೌಚ** (ಸ್ನಾನದಿಂದ ಶುದ್ಧಿ)

* ತಾಯಿಯ ಸೋದರಿಯ ಗಂಡ.

* ತಂದೆಯ ಸೋದರಿಯ ಗಂಡ.
* ತನ್ನ ಸೋದರಿಯ ಗಂಡ.
* ತನ್ನ ಮಗಳ ಗಂಡ.
* ಹೆಂಡತಿಯ ಸಹೋದರ ಹಾಗೂ ಹೆಂಡತಿ.

* * *

## ಮೂರು ದಿನದ ಆಶೌಚಗಳು

**ವಿವಾಹಿತ ಹೆಣ್ಣುಮಕ್ಕಳಿಗೆ–**

* ತಂದೆ, ತಾಯಿ.
* ತಾಯಿಯ ತಂದೆ ತಾಯಿ.
* ಮಲತಾಯಿ.
* ತನ್ನ ಸೋದರ ಹಾಗೂ ಸೋದರನ ಮಗ.
* ತನ್ನ ಸೋದರಿಯ ಮಗ.
* ತನ್ನ ಮಗಳು, ಮಗಳ ಮಗ.

## ಒಂದೂವರೆ ದಿನದ ಆಶೌಚಗಳು.

* ತಾಯಿಯ ಸೋದರಿ ಹಾಗೂ ಅವಳ ಮಗ ಮತ್ತು ಮಗನ ಹೆಂಡತಿ ಹಾಗೂ ಸೋದರಿ ಮಗಳು.
* ತಂದೆಯ ತಂದೆ, ತಾಯಿ.
* ತಂದೆಯ ಸೋದರ, ಅವರ ಹೆಂಡತಿ ಹಾಗು ಅವರ ಮಗ ಮತ್ತು ಮಗನ ಹೆಂಡತಿ; ಹಾಗೂ ತಂದೆಯ ಸೋದರನ ಮಗಳು.
* ತಂದೆಯ ಸೋದರಿ ಹಾಗೂ ಮಗ ಮತ್ತು ಅವನ ಹೆಂಡತಿ ಹಾಗೂ ಸೋದರಿಯ ಮಗಳು.
* ತನ್ನ ಸೋದರನ ಹೆಂಡತಿ, ಸೋದರನ ಮಗನ ಹೆಂಡತಿ, ಸೋದರನ ಮಗಳು.
* ತನ್ನ ಸೋದರಿ ಹಾಗೂ ಸೋದರಿಯ ಮಗನ ಹೆಂಡತಿ ಹಾಗೂ ಸೋದರಿಯ ಮಗಳು.
* ತನ್ನ ಮಗಳ ಮಗನ ಹೆಂಡತಿ; ಮಗಳ ಮಗಳು.
* ತನ್ನ ಮಗನ ಮಗಳು.
* ಸೋದರಮಾವ ಹಾಗೂ ಅವರ ಹೆಂಡತಿ, ಸೋದರಮಾವನ ಮಗ ಹಾಗೂ ಅವನ ಹೆಂಡತಿ; ಸೋದರಮಾವನ ಮಗಳು.

## ಸದ್ಯಾಶೌಚ (ಸ್ನಾನದಿಂದ ಶುದ್ಧಿ)

* ತಾಯಿಯ ಸೋದರಿಯ ಗಂಡ.
* ತಂದೆಯ ಸೋದರಿಯ ಗಂಡ.
* ತನ್ನ ಸೋದರಿಯ ಗಂಡ.
* ತನ್ನ ಮಗಳ ಗಂಡ.

* * *

♦ ಹತ್ತು ದಿನಗಳ ಮೃತಾಶೌಚದ ನಡುವೆ ಮತ್ತೊಂದು ಮೃತಾಶೌಚ ತಿಳಿದರೆ ಆ ಮೃತಾಶೌಚವು ಮೊದಲಿನ ಮೃತಾಶೌಚದೊಂದಿಗೇ ಶುದ್ಧಿಯಾಗುತ್ತದೆ.

♦ ಹತ್ತು ದಿನಗಳ ಜನನಾಶೌಚದ ಮಧ್ಯದಲ್ಲಿ ಹತ್ತು ದಿನಗಳ ಮೃತಾಶೌಚ ಕಳೆಯುವುದಿಲ್ಲ; ಆದರೆ ಮೂರು ದಿನದ ಮೃತಾಶೌಚ ಶುದ್ಧವಾಗುತ್ತದೆ.

♦ ಹತ್ತು ದಿನದ ಮೃತಾಶೌಚದಲ್ಲಿ ಹತ್ತು ದಿನದ ಜಾತಾಶೌಚ ಕಳೆಯುತ್ತದೆ. ಆದರೆ ಮೂರು ದಿನದ ಮೃತಾಶೌಚದಲ್ಲಿ ಹತ್ತು ದಿನದ ಜಾತಾಶೌಚ ಕಳೆಯುವುದಿಲ್ಲ.

♦ ಮೊದಲ ಬಾರಿ ಮಗಳು ಗಂಡು ಇಲ್ಲವೇ ಹೆಣ್ಣು ಮಗುವನ್ನು ಹೆತ್ತರೆ ಮಗಳ ತಂದೆತಾಯಿಗೆ ಹಾಗೂ ಅಣ್ಣತಮ್ಮಂದಿರಿಗೆ ಮೂರು ದಿನದ ಆಶೌಚ ಹಾಗೂ ಎರಡನೇ ಬಾರಿ ಗಂಡುಮಗು ಹೆತ್ತರೆ ಮಾತ್ರ ಜಾತಾಶೌಚ; ಹೆಣ್ಣು ಮಗುವಾದರೆ ಇಲ್ಲ.

♦ ಮೂರು ಮಾಸದೊಳಗೆ ಗರ್ಭಸ್ರಾವವಾದರೆ ತಾಯಿಗೆ ಮಾತ್ರ ಮೂರು ದಿನದ ಸ್ರಾವಾಶೌಚ. ನಾಲ್ಕನೆಯ ತಿಂಗಳಲ್ಲಿ ಗರ್ಭಸ್ರಾವವಾದರೆ ಗರ್ಭಿಣಿಗೆ ನಾಲ್ಕು ದಿನದ ಆಶೌಚ ಪಿತ್ರಾದಿಗಳಿಗೆ ಸ್ನಾನ ಮಾತ್ರ. ಐದು, ಆರು, ತಿಂಗಳಲ್ಲಿ ಗರ್ಭನಾಶವಾದರೆ ಅದಕ್ಕೆ 'ಪಾತ' ಎಂದು ಹೆಸರು. ಇಲ್ಲಿ ಗರ್ಭಿಣಿಗೆ ಕ್ರಮವಾಗಿ, ಐದು ಹಾಗೂ ಆರು ದಿನಗಳ ಆಶೌಚ. ಆದರೆ ಪಿತ್ರಾದಿಗಳಿಗೆ, ಸಪಿಂಡರಿಗೆ ಸ್ನಾನದಿಂದ ಶುದ್ಧಿ. ಮೂರು ದಿನದ ಜನನಾಶೌಚ ಮಾತ್ರ, ಮರಣಾಶೌಚವಲ್ಲ. ಆರನೆಯ ತಿಂಗಳ ಅನಂತರ ಮರಣ ಹೊಂದಿದರೆ ಎಲ್ಲರಿಗೂ ಹತ್ತು ದಿನದ ಜನನಾಶೌಚವಿರುತ್ತದೆ.

♦ ನಾಲಚ್ಛೇದನಕ್ಕಿಂತ ಮುಂಚೆಯೇ ಮಗು ಮರಣಹೊಂದಿದರೆ ತಾಯಿಗೆ ಹತ್ತು ದಿನ ಮೃತಾಶೌಚ, ಪಿತ್ರಾದಿಗಳಿಗೆ ಮೂರು ದಿನದ ಜನನಾಶೌಚ ಮಾತ್ರ, ಮೃತಾಶೌಚ ಇಲ್ಲ. ನಾಲಚ್ಛೇದನದ ಅನಂತರ ಮಗು ಮರಣಹೊಂದಿದರೆ ಎಲ್ಲರಿಗೂ ಹತ್ತು ದಿನದ ಜನನಾಶೌಚ ಮಾತ್ರ, ಮೃತಾಶೌಚ ಇಲ್ಲ.

♦ ಶಿಶುವು ಹೊಟ್ಟೆಯಲ್ಲೇ ಸತ್ತು ಜನಿಸಿದರೆ ಇಲ್ಲವೇ ಹುಟ್ಟಿ ಹತ್ತು ದಿನಗಳ ಒಳಗೆ ಮರಣವಾದರೆ ಶಿಶುವನ್ನು ದಹನ ಮಾಡಲಿಕ್ಕಿಲ್ಲ, ಹೂತು ಹಾಕಬೇಕು. ಹಾಗಾಗಿ ಮನೆಯಿಂದ ಹೊರಗೆ ಸಂಸ್ಕಾರಕ್ಕೆ ಕೊಂಡುಹೋಗುತ್ತಲೇ ತಾಯಿಯನ್ನು ಬಿಟ್ಟು ಉಳಿದ ಪಿತ್ರಾದಿ ಸರ್ವಜ್ಞಾತಿಗಳು ತತ್ಕಾಲ ಸ್ನಾನ ಮಾಡಿದರೆ ಮೃತಾಶೌಚಾನುಷ್ಠಾನ

ಮಾಡಿದಂತೆ ಆಗುತ್ತದೆ. ಅನಂತರ ಹತ್ತು ದಿನಗಳ ವರೆಗೆ ಜಾತಾಶೌಚಮಾತ್ರ, ಮೃತಾಶೌಚ ಇರುವುದಿಲ್ಲ. ಆದರೆ ತಾಯಿಗೆ ಮಾತ್ರ ಹತ್ತು ದಿನಗಳ ಮೃತಾಶೌಚವಿದೆ.

♦ ಗಂಗೆಯ ಸಮೀಪ ಮಗು ಮೃತವಾದರೆ ಗಂಗೆಗೆ ಹಾಕಬೇಕು. ಇಪ್ಪತ್ತೇಳು ತಿಂಗಳ ವರೆಗಿನ ಮಗು ಮೃತವಾದರೆ ಹೂತಿಡಬೇಕು. ಇಪ್ಪತ್ತೇಳು ತಿಂಗಳ ಅನಂತರ ಮೃತವಾದರೆ ಕೇವಲ ದಹನಸಂಸ್ಕಾರ ಮಾತ್ರ; ಮಂತ್ರಾಗ್ನಿಯಿಲ್ಲ.

♦ ಹತ್ತು ದಿನಗಳ ಮೇಲೆ ನಾಮಕರಣಕ್ಕಿಂತ ಪೂರ್ವದಲ್ಲಿ ಸತ್ತರೆ ಸಪಿಂಡರಿಗೆ ಸ್ನಾನ ಮಾತ್ರ, ತಂದೆತಾಯಿಗಳಿಗೆ ಗಂಡುಮಗುವಾದರೆ ಮೂರು ದಿನದ ಆಶೌಚ. ಸತ್ತ ಮಗುವನ್ನು ಅಲಂಕಾರ ಮಾತ್ರ ಮಾಡಿ ಹೂಳಬೇಕು; ತರ್ಪಣಾದಿಗಳಿಲ್ಲ.

♦ ಆರು ತಿಂಗಳ ವರೆಗಿನ ಮಗು ಮೃತಿ ಹೊಂದಿದ ಸಂದರ್ಭದಲ್ಲಿ ತಂದೆ ತಾಯಿ ಹಾಗೂ ಸಹೋದರರಿಗೆ ಹತ್ತು ದಿನಗಳ ವರೆಗೆ ಆಶೌಚ ಹಾಗೂ ಜ್ಞಾತಿಗಳಿಗೆ ಸ್ನಾನದಿಂದ ಶುದ್ಧಿ.

♦ ನಾಮಕರಣವಾಗಿ ಒಂದು ವರ್ಷದ ಒಳಗೆ ಸತ್ತರೆ ಹೂತಿಡಲೂಬಹುದು ಇಲ್ಲವೇ ದಹನವನದನ್ನೂ ಮಾಡಬಹುದು. ನಾಮಕರಣ ಆದ ಮೇಲೆ ದಂತೋತ್ಪತ್ತಿಕ್ಕಿಂತ ಮುಂಚೆ ಸತ್ತು, ದಹನ ಮಾಡಿದರೆ ಸಪಿಂಡರಿಗೆ ಒಂದು ದಿನದ ಮೃತಾಶೌಚ. ಮಗುವನ್ನು ಹೂತಿಟ್ಟರೆ ಸ್ನಾನಮಾತ್ರ, ತಂದೆತಾಯಿಯರಿಗೆ ಎರಡರಲ್ಲೂ ಮೂರು ದಿನದ ಆಶೌಚ ಹಾಗೂ ದಂತಜನನ ಆದ ಮೇಲೆ ಮೂರು ವರ್ಷದ ವರೆಗೆ ಹೂತಿಟ್ಟರೆ ಇಲ್ಲವೇ ದಹನ ಮಾಡಿದರೆ ಸಪಿಂಡರಿಗೆ ಒಂದು ದಿವಸ ಹಾಗೂ ತಂದೆತಾಯಿಯರಿಗೆ ಎರಡರಲ್ಲೂ ಮೂರು ದಿನದ ಆಶೌಚ.

♦ ಒಂದನೇ ವರ್ಷದಲ್ಲಿ ಮಗುವಿಗೆ ಚೌಲವಾಗಿ ಮರಣವಾದರೆ ದಹನವನ್ನೇ ಮಾಡಬೇಕು ಹಾಗೂ ಎಲ್ಲರಿಗೂ ಮೂರು ದಿನದ ಆಶೌಚ.

♦ ಆರು ತಿಂಗಳ ಅನಂತರ ಮೂರು ವರ್ಷದ ತನಕ ಮೃತಿಹೊಂದಿದ ಸಂದರ್ಭದಲ್ಲಿ ತಂದೆತಾಯಿಯರಿಗೆ ಮೂರು ದಿನದ ಹಾಗೂ ಜ್ಞಾತಿಗಳಿಗೆ ಒಂದು ದಿನದ ಆಶೌಚ.

♦ ಮೂರು ವರ್ಷದಿಂದ ಏಳು ವರ್ಷದ ತನಕ ಚೌಲವಾಗಿರಲೀ ಆಗದೇ ಇರಲಿ ಎಲ್ಲರಿಗೂ ಮೂರು ದಿನದ ಆಶೌಚ.

♦ ಮೂರು ವರ್ಷದ ಮೇಲೆ ಚೌಲವಾಗಲಿ ಆಗದೇ ಇರಲಿ ಮೃತನಾದರೆ ದಹನ ಮಾಡಬೇಕು. ಎಲ್ಲರಿಗೂ ಮೂರು ದಿನಗಳ ಆಶೌಚ 4ನೇ ದಿನ ಪುಣ್ಯಾಹವಾಚನ, ವ್ಯಾಹೃತಿ ಮಂತ್ರದಿಂದ ತಿಲಹೋಮ ಮಾಡಿ ಮೃತನ ಪ್ರಾಯಕ್ಕೆ ಸರಿಯಾದ ಮಕ್ಕಳಿಗೆ ಊಟ, ವಸ್ತ್ರ, ಜಲಪಾತ್ರ ದಕ್ಷಿಣೆ ಕೊಡಬೇಕು. ಹಾಗೂ ಮಂತ್ರವಿಲ್ಲದೇ ತರ್ಪಣ ಹಾಗೂ ಉದಕದಾನ ಮತ್ತು ನೆಲದಲ್ಲೇ ಪಿಂಡದಾನ ಮಾಡಬೇಕು.

♦ ಹತ್ತು ದಿನಗಳ ಮೇಲೆ ನಾಮಕರಣಕ್ಕಿಂತ ಪೂರ್ವದಲ್ಲಿ ಹೆಣ್ಣುಮಗು ಸತ್ತರೆ ಸಪಿಂಡರಿಗೆ ಸ್ನಾನ ಮಾತ್ರ, ತಂದೆತಾಯಿಗಳಿಗೆ, ಹೆಣ್ಣುಮಗುವಿಗೆ ಒಂದು ದಿನದ ಮರಣಾಶೌಚ. ಸತ್ತ ಮಗುವನ್ನು ಅಲಂಕಾರ ಮಾತ್ರ ಮಾಡಿ ಹೂಳಬೇಕು, ತರ್ಪಣಾದಿಗಳಿಲ್ಲ.

- ಏಳನೇ ವರ್ಷದಿಂದ ಹೆಣ್ಣಾಗಲಿ ಗಂಡಾಗಲಿ ಉಪನಯನ ವಿವಾಹಾದಿ ಸಂಸ್ಕಾರ ಆಗಿರಲಿ ಆಗದೇ ಇರಲಿ ಹತ್ತು ದಿನದ ಪೂರ್ಣಾಶೌಚ.
- ನಾಮಕರಣ ಮಾಡಿ ದಂತೋತ್ಪತ್ತಿಗಿಂತ ಮುಂಚೆ ಹೆಣ್ಣುಮಗು ಸತ್ತರೆ ಮಗುವನ್ನು ಹೂತಿಟ್ಟರೇ ಇಲ್ಲವೇ ದಹನ ಮಾಡಿದರೆ ಸಪಿಂಡರಿಗೆ ಸ್ನಾನದಿಂದ ಶುದ್ಧಿ ತಂದೆತಾಯಿಯರಿಗೆ ಎರಡರಲ್ಲೂ ಒಂದು ದಿನದ ಆಶೌಚ.
- ದಂತೋತ್ಪತ್ತಿಯಾಗಿ ಮೂರು ವರ್ಷದ ಒಳಗೆ ಹೆಣ್ಣುಮಗು ಮೃತವಾದರೆ ಹೆಣ್ಣು ಮಗುವನ್ನು ಹೂತಿಟ್ಟರೇ ಇಲ್ಲವೇ ದಹನ ಮಾಡಿದರೆ ಸಪಿಂಡರಿಗೆ ಸ್ನಾನದಿಂದ ಶುದ್ಧಿ; ತಂದೆತಾಯಿಯರಿಗೆ ಎರಡರಲ್ಲೂ ಮೂರು ದಿನದ ಆಶೌಚ.
- ಕನ್ನಿಕೆಗೆ ಮೂರು ವರ್ಷದ ಮೇಲೆ ವಾಗ್ದಾನಕ್ಕಿಂತ ಮುಂಚೆ ಸತ್ತರೆ ದಹನ ಮಾಡಬೇಕು. ಸಪಿಂಡರಿಗೆ ಒಂದು ದಿನದ ಹಾಗೂ ತಂದೆತಾಯಿಯರಿಗೆ ಮೂರು ದಿನಗಳ ಆಶೌಚ ತರ್ಪಣ ಕೊಡಬೇಕು.
- ಕನ್ನಿಕೆಗೆ ವಾಗ್ದಾನಾನಂತರದಲ್ಲಿ ವಿವಾಹಕ್ಕಿಂತ ಮುಂಚೆ ಮೃತವಾದರೆ ತಂದೆ ಹಾಗೂ ಮುಂದಿನ ಪತಿ ಹಾಗೂ ಇವರ ಸಪಿಂಡರಿಗೆ ಮೂರು ದಿನದ ಅಶೌಚ.
- ವಿವಾಹವಾದ ಕನ್ನಿಕೆಯು ತಂದೆಯ ಮನೆಯಲ್ಲಿ ಸತ್ತರೆ ತಂದೆತಾಯಿ, ಅಣ್ಣತಮ್ಮಂದಿರಿಗೆ ಮೂರು ದಿನಗಳ ಆಶೌಚ ದೊಡ್ಡಪ್ಪ ಮೊದಲಾದವರಿಗೆ ಒಂದು ದಿನದ ಆಶೌಚ.
- ವಿವಾಹವಾದ ಮಗಳು ತಂದೆಯ ಮನೆಯಲ್ಲಿ ಹೆತ್ತರೆ ತಂದೆತಾಯಿಯರಿಗೆ ಮೂರು ದಿನದ ಆಶೌಚ, ಅಣ್ಣತಮ್ಮಂದಿರು ಹಾಗೂ ದೊಡ್ಡಪ್ಪನಿಗೆ ಒಂದು ದಿನದ ಆಶೌಚ.
- ವಿವಾಹವಾದ ಮಗಳು ಗಂಡನ ಮನೆಯಲ್ಲಿ ಹೆತ್ತರೆ ತಂದೆತಾಯಿಯರಿಗೆ ಮೂರು ದಿನದ ಆಶೌಚ.
- ಹುಡುಗನನ್ನು ದತ್ತು ತೆಗೆದುಕೊಂಡು ಉಪನಯನಗಳನ್ನು ನಡೆಸಿದರೆ ದತ್ತುಮಗನಾಗುವನು. ಆ ದತ್ತುಮಗನು ಸತ್ತರೆ ಎರಡು ಕುಲದ ತಂದೆತಾಯಿಯರಿಗೆ ಮೂರು ದಿನಗಳ ಆಶೌಚ; ಸಪಿಂಡರಿಗೆ ಒಂದು ದಿನದ ಆಶೌಚ.
- ಇಬ್ಬರೂ ತಂದೆ ತಾಯಿಗಳು ಸತ್ತರೆ ದತ್ತುಪುತ್ರನಿಗೆ ಮೂರು ದಿನದ ಆಶೌಚ.
- ದತ್ತುಪುತ್ರನಿಗೆ ಮಕ್ಕಳು, ಮೊಮ್ಮಕ್ಕಳು ಹುಟ್ಟಿದರೂ ಸತ್ತರೂ ಸಪಿಂಡರಿಗೆ ಒಂದು ದಿನದ ಆಶೌಚ.
- ಸಪಿಂಡರಿಂದ ದತ್ತು ಪಡೆದು ದತ್ತುಪುತ್ರ ಮರಣ ಹೊಂದಿದರೆ ಇಬ್ಬರಿಗೂ ಹತ್ತು ದಿನಗಳ ಆಶೌಚ.
- ಆಚಾರ್ಯ (ಉಪನಯನ ಮಾಡಿಸಿ ವೇದ ಹೇಳಿಕೊಟ್ಟವರು) ಮೃತರಾದರೆ ಶಿಷ್ಯನಿಗೆ ಮೂರು ದಿನದ ಆಶೌಚ. ಆಚಾರ್ಯನ ಪತ್ನಿ, ಮಕ್ಕಳು ಮೃತವಾದರೆ ಒಂದು ದಿವಸದ ಆಶೌಚ.
- ಉಪಾಧ್ಯಾಯ (ವೇದದ ಒಂದು ಭಾಗ ಹೇಳಿಕೊಟ್ಟವರು) ಮೃತರಾದರೆ ಒಂದು ದಿನದ ಆಶೌಚ.

♦ ತನ್ನಿಂದ ಉಪನಯನ ಹೊಂದಿದ ಶಿಷ್ಯನು ಮೃತಪಟ್ಟರೆ ಗುರುವಿಗೆ ಮೂರು ದಿನಗಳ ಆಶೌಚ.

♦ ಬೇರೆಯವರಿಂದ ಉಪನಯನ ಹೊಂದಿದ ಶಿಷ್ಯನು ಮರಣ ಹೊಂದಿದರೆ ಗುರುವಿಗೆ ಒಂದು ದಿನದ ಆಶೌಚ.

♦ ಸಹಾಧ್ಯಾಯಿಯು ಮೃತಪಟ್ಟರೆ, ಗ್ರಾಮದಲ್ಲಿರುವ ಅನೂಚಾನ (ಅಂಗಸಹಿತ ವೇದಾಧ್ಯಯನ ಮಾಡಿದವನು) ಹಾಗೂ ಶ್ರೋತ್ರಿಯ (ವೇದವನ್ನು ಅರ್ಥಜ್ಞಾನ ಪೂರ್ವಕವಾಗಿ ಅಧ್ಯಯನ ಮಾಡಿದವನು) ಮೃತಪಟ್ಟರೆ ಒಂದು ದಿನದ ಆಶೌಚ.

♦ ಶ್ರೋತ್ರಿಯನು ಯಾರ ಮನೆಯಲ್ಲಿ ಮೃತಹೊಂದುವನೊ ಆ ಮನೆಯ ಯಜಮಾನ ನಿಗೆ ಒಂದು ದಿನದ ಆಶೌಚ.

♦ ವಾನಪ್ರಸ್ಥ ಸಂನ್ಯಾಸಿ, ನಪುಂಸಕ, ಮೃತಪಟ್ಟರೆ ಸಪಿಂಡರಿಗೆ ಸ್ನಾನ ಮಾತ್ರ.

♦ ಅಗ್ನಿಹೋತ್ರಿಯು ಮೃತನಾದರೆ ದಹನಾನಂತರದಲ್ಲಿ ಮಕ್ಕಳಿಗೆ ಆಶೌಚ. ಅದಕ್ಕಿಂತ ಪೂರ್ವದಲ್ಲಿ ಆಶೌಚವಿಲ್ಲ.

♦ ಶವವನ್ನು ಹಗಲು ಮುಟ್ಟಿದರೆ ರಾತ್ರಿ ನಕ್ಷತ್ರದರ್ಶನದ ವರೆಗೂ ರಾತ್ರಿ ಮುಟ್ಟಿದರೆ ಮರುದಿನ ಸೂರ್ಯೋದಯದ ವರೆಗೂ ಆಶೌಚ ಇದೆ.

♦ ವಿಶ್ವಾಸದಿಂದ ತನ್ನ ಜಾತಿಯ ಶವವನ್ನು ಹೊತ್ತು ಮೃತನ ಮನೆಯಲ್ಲಿ ಊಟ ಮಾಡಿ ಆ ಮನೆಯಲ್ಲೇ ವಾಸ ಮಾಡಿದರೆ ಹತ್ತು ದಿನಗಳ ಆಶೌಚ ಇದೆ.

♦ ಶವವನ್ನು ಹೊರದೇ ಮೃತನ ಮನೆಯಲ್ಲಿ ಊಟ ಮಾಡಿ ಆ ಮನೆಯಲ್ಲೇ ವಾಸ ಮಾಡಿದರೆ ಮೂರು ದಿನಗಳ ಆಶೌಚ ಇದೆ.

♦ ವಿಶ್ವಾಸದಿಂದ ತನ್ನ ಜಾತಿಯ ಶವವನ್ನು ಹೊತ್ತು ಮೃತನ ಮನೆಯಲ್ಲಿ ಊಟ ಹಾಗೂ ವಾಸ ಮಾಡದೇ ಇದ್ದರೆ ಒಂದು ದಿನದ ಆಶೌಚ ಇದೆ.

♦ ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಯ ಹೆಣವನ್ನು ಹೊತ್ತರೆ ಕ್ರಮವಾಗಿ ೧೨, ೧೫, ಮತ್ತು ೩೦ ದಿನದ ಆಶೌಚಗಳು.

♦ ಸಪಿಂಡನಲ್ಲದವನ ಹೆಣಕ್ಕೆ ಅಲಂಕಾರಾದಿಗಳನ್ನು ಮಾಡಿದರೆ ಉಪವಾಸದಿಂದಲೇ ಶುದ್ಧಿ.

♦ ಅನಾಥವಾದ ಬ್ರಾಹ್ಮಣಶವದ ಹಿಂದೆ ಹೋದರೆ ದೋಷವಿಲ್ಲ. ಆದರೆ ಕ್ಷತ್ರಿಯ, ವೈಶ್ಯ, ಶೂದ್ರ, ಶವಸ ಹಿಂದೆ ಹೋದರೆ ಕ್ರಮವಾಗಿ ಒಂದು, ಒಂದೂವರೆ, ಮೂರು ದಿನದಲ್ಲಿ ಶುದ್ಧಿ.

♦ ಮನೆಯ ಸಂಪರ್ಕವಿಲ್ಲದೆ ಗುರುಕುಲದಲ್ಲಿರುವ ಬ್ರಹ್ಮಚಾರಿಗೆ ಕುಟುಂಬದ ಯಾವುದೇ ಆಶೌಚವಿಲ್ಲ. ತಂದೆ, ತಾಯಿ, ಗುರು, ಉಪಾಧ್ಯಾಯ, ಅಜ್ಜ, ಅಜ್ಜಿ ಇವರ ಸಂಸ್ಕಾರವನ್ನು ಮಾಡಬಹುದು. ಆಶೌಚ ಇದೆ, ಆದರೆ ಇವನನ್ನು ಯಾರೂ ಮುಟ್ಟಬಾರದು. ಅಶುದ್ಧರು ಮಾಡಿದ ಅನ್ನವನ್ನು ಊಟ ಮಾಡಬಾರದು, ನಿತ್ಯಕರ್ಮಗಳನ್ನು

ಮಾಡಬಹುದು. ಇತರರ ಸಂಸ್ಕಾರವನ್ನು ಮಾಡಬಾರದು ಹಾಗೂ ಮುಟ್ಟಬಾರದು. ಒಂದು ವೇಳೆ ವ್ಯತ್ಯಾಸವಾದಲ್ಲಿ ಪುನಃ ಉಪನಯನ ಮಾಡಬೇಕು.

- ಗುರುಕುಲದಲ್ಲಿರುವ ಬ್ರಹ್ಮಚಾರಿಯು ತಂದೆತಾಯಿಯ ಅಪರಕ್ರಿಯೆ ಮಾಡದೇ ಇರುವಾಗ ಆಶೌಚ ಇಲ್ಲ. ಆದರೆ ಗುರುಕುಲದಿಂದ ಬಂದು ಸಮಾವರ್ತನೆ ಮಾಡಿಕೊಂಡ ಮೇಲೆ ಮೂರು ದಿನದ ಆಶೌಚವನ್ನು ಆಚರಿಸಲೇಬೇಕು.
- ಜೀವಶ್ರಾದ್ಧವನ್ನು ಮಾಡಿಕೊಂಡವನು ಯಾರ ಆಶೌಚವನ್ನೂ ಆಚರಿಸಬೇಕಾಗಿಲ್ಲ.
- ವಾನಪ್ರಸ್ಥಾಶ್ರಮಿ, ಸಂನ್ಯಾಸಿ, ಪತಿತನಿಗೆ ಕುಟುಂಬದ ಆಶೌಚವಿಲ್ಲ ಹಾಗೂ ಇವರ ಆಶೌಚವನ್ನು ಕುಟುಂಬದವರೂ ಆಚರಣೆ ಮಾಡಬೇಕಾಗಿಲ್ಲ.
- ಅಗ್ನಿಹೋತ್ರಿಯ ಎಲುಬನ್ನು ಅಥವಾ ಪಿಷ್ಟದ ಪ್ರತಿಮೆಯನ್ನು ದಹನ ಮಾಡಿದರೆ ಅಂದಿನಿಂದ ಸಪಿಂಡರಿಗೆ ಹತ್ತು ದಿನಗಳ ಆಶೌಚ.
- ಅಗ್ನಿಹೋತ್ರಿ ಅಲ್ಲದವನ ಎಲುಬನ್ನು ಅಥವಾ ಪಿಷ್ಟದ ಪ್ರತಿಮೆಯನ್ನು ದಹನ ಮಾಡಿದರೆ ಹೆಂಡತಿಮಕ್ಕಳಿಗೆ ಹತ್ತು ದಿನಗಳ ಆಶೌಚ.
- 'ಸ್ನಾನಮಾತ್ರ' ಎಂಬ ಬಗೆಯ ಆಶೌಚ ಇದ್ದಾಗ ಯಜ್ಞೋಪವೀತವನ್ನು ಬದಲಾಯಿಸಬೇಕಾಗಿಲ್ಲ. ಉಳಿದೆಲ್ಲಾ ಆಶೌಚಗಳಲ್ಲೂ ಉಪವೀತ ಬದಲಾವಣೆ ಅನಿವಾರ್ಯ, ಸಾಪಿಂಡ್ಯ ಸಂಬಂಧವಿಲ್ಲದಿದ್ದರೂ ಶವದ ಹಿಂದೆ ಪ್ರೀತಿನಿಮಿತ್ತ ನಾಲ್ಕು ಹೆಜ್ಜೆ ಇಟ್ಟರೆ ಆಶೌಚವು ಪ್ರಾಪ್ತವಾಗುತ್ತದೆ. ಸ್ನಾನ ಮಾಡಿ ಉಪವೀತ ಬದಲಾಯಿಸುವುದರಿಂದ ಶುದ್ಧಿ.
- ಗಂಡನಿಗೆ ಬಂದ ಆಶೌಚವು ಸಹಧರ್ಮಿಣಿಯಾದ ಪತ್ನಿಗೂ ಸ್ವಾಭಾವಿಕವಾಗಿಯೇ ಬರುತ್ತದೆ. ಹಾಗಿದ್ದರೂ ಗಂಡನಿಗೆ ಸಂಪರ್ಕಾಶೌಚ ಎಂದರೆ ಆಶೌಚ ಬಂದವನ ಅನ್ನಪಾನಾದಿಗಳ ಸೇವನೆಯಿಂದ ಬಂದ ಆಶೌಚವು ಪತ್ನಿಗೆ ಬರುವುದಿಲ್ಲ. (ಹತ್ತು ದಿನಗಳಿಗಿಂತ ಕಡಿಮೆಯಾದ ಆಶೌಚವು ಗಂಡನಿಗೆ ಬಂದಲ್ಲಿ ಅದು ಪತ್ನಿಗೆ ಇಲ್ಲವೆಂದು ಕೆಲವರ ಅಭಿಪ್ರಾಯ.)
- ಆಶೌಚವುಳ್ಳವನ ಸ್ಪರ್ಶದಿಂದುಂಟಾದ ಆಶೌಚವು ಸ್ನಾನಮಾತ್ರದಿಂದ ಶುದ್ಧವಾಗುತ್ತದೆ. ಆಶೌಚಾನ್ನಸಂಪರ್ಕದಿಂದ ಬಂದ ಆಶೌಚವು ತಿಂದ ಅನ್ನವು ಜೀರ್ಣವಾಗಿ ಪತನವಾಗುವ ತನಕ ಇರುತ್ತದೆ. ಅಂದರೆ ತ್ರಿದಿನಾಶೌಚ.
- ಭೋಕ್ತೃವಿಗೂ ಭೋಜಕನಿಗೂ ಆಶೌಚವಿದ್ದು ಅದು ತಿಳಿಯದಿದ್ದರೆ ಭೋಜನವಾದ ಮೇಲೆ ತಿಳಿದರೂ ದೋಷವಿಲ್ಲ. ಒಬ್ಬನಿಗೆ ತಿಳಿದಿದ್ದು ಇನ್ನೊಬ್ಬನಿಗೆ ತಿಳಿಯದೇ ಉಂಡರೂ ಭೋಕ್ತೃವಿಗೆ ಆಶೌಚ ಬಂದೇ ಬರುತ್ತದೆ. ಉಂಡರೆ ಮೂರುದಿನ, ಕುಡಿದರೆ ಒಂದು ದಿನ, ಆಶೌಚಾನ್ನವನ್ನು ಉಂಡವನಿಗೆ ಅನ್ನವಿತ್ತವನ ಆಶೌಚವು ಮುಗಿಯುವಲ್ಲಿಯ ತನಕವೂ ಆಶೌಚವೆಂಬ ಮಾತೂ 'ಆಶೌಚನಿರ್ಣಯ'ದಲ್ಲಿದೆ.
- ನಿಕಟಸಂಪರ್ಕ, ಪ್ರೀತಿ, ಸೌಹಾರ್ದಗಳುಳ್ಳ ದೂರಸಂಬಂಧಿಗಳ ಹೆಸರು ಆಶೌಚದಾಯಿಗಳ ಪಟ್ಟಿಯಲ್ಲಿ ಸೇರಿರದಿದ್ದರೂ ಅವರ ಮರಣನಿಮಿತ್ತ ಸ್ನೇಹಕ್ಕಾಗಿ ಮೃತಾತ್ಮತೃಪ್ತಿಗಾಗಿ ಸ್ನಾನ ಮಾಡುವುದು ಉಚಿತ.

♦ ಸ್ತ್ರೀಯರು ತಮ್ಮ ತವರುಕಡೆಯಲ್ಲಿ ಸೋದರರು ಹತ್ತುದಿನ ಆಶೌಚಪಡೆಯುವ ಮರಣನಿಮಿತ್ತ ಶ್ರವಣವಾದೊಡನೆ ಸ್ನಾನ ಮಾಡುವ ಸಂಪ್ರದಾಯ ಕೆಲವರಲ್ಲಿದೆ.

♦ ಜಾತಾಶೌಚದಲ್ಲಿ ಮಗನು ತಂದೆಗೆ ಶಿಶುದರ್ಶನ ಮಾಡಿಸಿ ಸಚೇಲಸ್ನಾನ ಮಾಡುವವರೆಗೆ ಅಸ್ಪೃಶ್ಯತೆ ಇದೆ ಎಂದು 'ಪಾರಾಶರೀಯ'ದಲ್ಲಿದೆ.

♦ ಗಂಡುಶಿಶುವನ್ನು ಪ್ರಸವಿಸಿದ ಬಾಣಂತಿಗೆ ಮೂವತ್ತು ದಿನದ ಆಶೌಚವಿರುತ್ತದೆ. ಹೆಣ್ಣು ಶಿಶುವನ್ನು ಪ್ರಸವಿಸಿದ ಬಾಣಂತಿಗೆ ನಲುವತ್ತು ದಿನದ ಆಶೌಚವಿರುತ್ತದೆ. ಆದರೆ ಹತ್ತುದಿನಗಳ ಅನಂತರ ನಾಮಕರಣಾದಿಗಳನ್ನು ಮಾಡಬಹುದು.

♦ ಜಾತಾಶೌಚದಲ್ಲಿ ಅಸ್ಪೃಶ್ಯತೆಯಿರುವುದಿಲ್ಲ. ಹುಟ್ಟಿದ ಮಗುವಿನ ತಂದೆಗೂ ಹತ್ತುದಿನ ಸಂಧ್ಯಾದಿಕರ್ಮಗಳಲ್ಲಿ ಅನಧಿಕಾರ ಮಾತ್ರ, ಅಸ್ಪೃಶ್ಯತೆಯಿಲ್ಲ. ಇವರನ್ನು ಮುಟ್ಟಿಸಿ ಕೊಳ್ಳಬಹುದು. ಆದರೆ ತಂದೆಗೆ ಶಿಶುದರ್ಶನಮಾಡಿ ಸಚೇಲಸ್ನಾನ ಮಾಡುವಲ್ಲಿಯ ತನಕ ಸ್ಪೃಶ್ಯತೆ ಇದೆ. ಅನಂತರ, ಇವರು ದೇವಸ್ಥಾನಗಳ ಅಂಗಣವನ್ನು ಪ್ರವೇಶಿಸ ಬಹುದು. ಗರ್ಭಗುಡಿಯ ಪ್ರವೇಶವಿಲ್ಲ.

♦ ಮೃತಾಶೌಚದಲ್ಲಿ ಅಸ್ಪೃಶ್ಯತೆಯಿದೆ. ಮೃತಾಶೌಚವಿದ್ದವರನ್ನು ಮುಟ್ಟಿಸಿಕೊಂಡರೆ ಸ್ನಾನದಿಂದ ಶುದ್ಧಿ, ಉಪವೀತಬದಲಾವಣೆ ಬೇಕಾಗಿಲ್ಲ, ಆದರೆ ಔರ್ಧ್ವದೈಹಿಕ ಕರ್ಮದ ಕರ್ತೃಗಳನ್ನು ಮುಟ್ಟಿಸಿಕೊಂಡರೆ ಸ್ನಾನದೊಂದಿಗೆ ಉಪವೀತ ಬದಲಾವಣೆಯೂ ಕರ್ತವ್ಯ.

♦ ಮೃತಾಶೌಚದಲ್ಲೂ ಮೊದಲ ನಾಲ್ಕು ದಿನಮಾತ್ರ ಅಸ್ಪೃಶ್ಯತೆ.

♦ ಮೃತಾಶೌಚವನ್ನು ಮೂರುಭಾಗ ಮಾಡಿ ಅದರಲ್ಲಿ ಮೊದಲ ಒಂದುಭಾಗ ಮುಗಿಯುವಲ್ಲಿಯ ತನಕ ಸರ್ವರೂ ಅಸ್ಪೃಶ್ಯರಾಗಿರುತ್ತಾರೆ. ಅಸ್ಥಿಸಂಚಯನದ ತನಕ ಮಾತ್ರ ಆಶೌಚವುಳ್ಳವನನ್ನು ಓರ್ವ ಸ್ಪರ್ಶಿಸಿ, ಅವನನ್ನು ಮೂರನೆಯವನು ಮುಟ್ಟಿದರೆ ಮೂರನೆಯವನಿಗೆ ಕೈಕಾಲು ತೊಳೆದು ಆಚಮನದಿಂದ ಶುದ್ಧಿ, ಸ್ನಾನ ಕೃತಾಕೃತ. ಮಾಡಬೇಕಾದ ಅನಿವಾರ್ಯತೆಯಿಲ್ಲ.

♦ ಹತ್ತುದಿನ, ಮೂರುದಿನ ಮುಂತಾಗಿ ಹಿಂದೆ ಹೇಳಿದ ದಿನದಂದು ಆಶೌಚವು ನಿವೃತ್ತವಾಗುತ್ತದೆ. ದಶಾಹಾಶೌಚವಿದ್ದಾಗ ಹನ್ನೊಂದನೆಯ ದಿನ ಶುದ್ಧಿ; ಪ್ರಾತಃಕಾಲ ದಾಟಿ ಸಂಗವಕಾಲಕ್ಕೆ (ಸಮಯ ಬೆಳಗ್ಗೆ ೮.೩೦ಕ್ಕೆ) ಆಶೌಚನಿವೃತ್ತಿ ಎಂಬ ಮಾತುಗಳಿದ್ದರೂ ಪ್ರಾತಃಕಾಲದ ಸೂರ್ಯೋದಯಕ್ಕೆ ಶುದ್ಧಿಯೆಂಬುದು ಎಲ್ಲೆಡೆ ವಾಡಿಕೆಯಲ್ಲಿದೆ.

♦ ಸೂರ್ಯದರ್ಶನ ಮಾಡಿ ಸ್ನಾನ ಮಾಡಿ, ಆಶೌಚಕಾಲದಲ್ಲಿ ತಾನು ಉಪಯೋಗಿಸಿದ ವಸ್ತ್ರಗಳನ್ನೆಲ್ಲಾ ನೀರಿನಿಂದ ಶುದ್ಧಿಗೊಳಿಸಿ ನೂತನ ಉಪವೀತವನ್ನು ಧರಿಸುವುದರಿಂದ ಶುದ್ಧಿ, ಸಪಿಂಡರ ಮರಣದಲ್ಲಿ ಶವಸ್ಪರ್ಶಾದಿಗಳನ್ನು ಮಾಡಿದ್ದರೆ ಶುದ್ಧಿಯ ದಿನದಂದು ಪಂಚಗವ್ಯಪ್ರಾಶನ ಮಾಡಬೇಕು.

♦ ಶವವನ್ನು ಸ್ಪರ್ಶ ಮಾಡಿದರೆ ಸ್ನಾನಮಾಡಿ ಅಗ್ನಿಸ್ಪರ್ಶ ಮಾಡಿದರೆ ಶುದ್ಧಿ, ಉಪವೀತ

ಬದಲಾವಣೆಯೂ ಅಪೇಕ್ಷಿತ. ಶವಸ್ಪರ್ಶ ಮಾಡಿದಂದು ಆತನು ದೇವಪೂಜಾದಿಗಳನ್ನು ಮಾಡುವ ಸಂಪ್ರದಾಯವಿಲ್ಲ.

- ಜನನಾಶೌಚದ ಮಧ್ಯೆ ಅಷ್ಟೇ ದಿನಗಳ ಅಥವಾ ಅದಕ್ಕೂ ಕಡಿಮೆ ದಿನಗಳ ಜನನಾಶೌಚವು ಬಂದರೆ; ಮೊದಲಿನ ಆಶೌಚದಲ್ಲಿಯೇ ಅನಂತರ ಬಂದುದೂ ನಿವೃತ್ತಿಯಾಗುತ್ತದೆ.
- ಮರಣಾಶೌಚದಲ್ಲಿ ಅದಕ್ಕೆ ಸಮಾನವಾದ ಅಥವಾ ಕಡಮೆ ದಿನಗಳ ಮರಣಾಶೌಚವಾಗಲಿ ಜಾತಾಶೌಚವಾಗಲಿ ಬಂದರೆ ಮೊದಲಿನ ಮೃತಾಶೌಚದಲ್ಲಿಯೇ ಅನಂತರ ಬಂದ ಆಶೌಚವು ನಿವೃತ್ತಿಯಾಗುತ್ತದೆ.
- ಇಂತಹ ಸಂದರ್ಭದಲ್ಲಿ ಒಂದು ಆಶೌಚದ ಮಧ್ಯದಲ್ಲಿ ಇನ್ನೊಂದು ಆಶೌಚವು ತಿಳಿದುಬಂದರೆ ಮಾತ್ರ ನಿವೃತ್ತಿಯಾಗುತ್ತದೆ.
- ಅಲ್ಪದಿನಗಳ ಮೊದಲ ಆಶೌಚದ ಮಧ್ಯೆ ಹೆಚ್ಚು ದಿನಗಳ ಜಾತಾಶೌಚ ಅಥವಾ ಮೃತಾಶೌಚ ಬಂದರೆ ಮೊದಲು ಆಶೌಚದಲ್ಲಿ ನಿವೃತ್ತಿಯಾಗುವುದಿಲ್ಲ. ಕಡೆಗೆ ಬಂದ ಹೆಚ್ಚು ದಿನದ ಪ್ರಬಲಾಶೌಚ ನಿವೃತ್ತಿಯಾಗುವಾಗಲೇ ಆಶೌಚನಿವೃತ್ತಿ.
- ತಂದೆ–ತಾಯಿಯರ ಮರಣನಿಮಿತ್ತ ಆಶೌಚವು ಯಾವ ಆಶೌಚದ ಮಧ್ಯೆ ಬಂದರೂ ನಿವೃತ್ತಿಯಾಗದು.

## ಆಶೌಚೇ ಸಂಧ್ಯಾವಂದನಮ್

ಗೋಪೀಚಂದನ, ಮುದ್ರಾಧಾರಣ ಮಾಡಿ ಎರಡು ಬಾರಿ ಆಚಮನ ಅಮಂತ್ರಕವಾಗಿ ಪ್ರಾಣಾಯಾಮ ಮಾಡಿ ಸಂಕಲ್ಪ ಮಾಡಿ 'ಆಪೋಹಿಷ್ಠಾ' ಮಂತ್ರಗಳನ್ನು ಮನಸ್ಸಿನಲ್ಲೇ ಸ್ಮರಿಸಿ, ಮಾರ್ಜನೆ ಮಾಡಿಕೊಂಡು ಗಾಯತ್ರೀ ಮಂತ್ರವನ್ನು ಸ್ಪಷ್ಟವಾಗಿ ಉಚ್ಚರಿಸಿ ಮೂರು ಅರ್ಘ್ಯಪ್ರಧಾನ ಮಾಡಬೇಕು. ಮನಸ್ಸಿನಲ್ಲೇ ಗಾಯತ್ರೀಮಂತ್ರದ ಋಷಿಚ್ಛಂದೋ ದೇವತಾನ್ಯಾಸದೊಂದಿಗೆ ಹತ್ತು ಗಾಯತ್ರೀಜಪ ಹಾಗೂ ಹತ್ತು ಅಷ್ಟಾಕ್ಷರಜಪ ಮಾಡಿ, ಒಂದೊಂದು ತರ್ಪಣ ಕೊಟ್ಟು ಕೃಷ್ಣಾರ್ಪಣ ಬಿಡಬೇಕು.

ರಾಷ್ಟ್ರವು ಶೋಭೆಗೊಳಗಾದಾಗ, ತಾನು ರೋಗದಿಂದ ಬಳಲುತ್ತಿರುವಾಗ ಜಾತಾಶೌಚ ಮೃತಾಶೌಚಗಳಿದ್ದಾಗ ಸಂಧ್ಯಾವಂದನೆಯನ್ನು ಬಿಡುವುದು ದೋಷ ಕರವಲ್ಲ.

ಸಂಧ್ಯಾವಂದನೆ ಬಿಡುವುದೆಂದರೆ ಪೂರ್ತಿ ಬಿಡುವುದಲ್ಲ. ಸೂತಕ ಮೃತಕಗಳಲ್ಲಿ ಬ್ರಾಹ್ಮಣ್ಯವು ಉಳಿಯುವುದಕ್ಕೆ ಎಷ್ಟು ಅನಿವಾರ್ಯವೋ ಅಷ್ಟೇ ಸಂಖ್ಯೆಯನ್ನು ಮಾಡಬೇಕು. ವಿಸ್ತರಿಸಿ ಮಾಡುವಂತಿಲ್ಲ. ಅದೆಷ್ಟೆಂದರೆ 'ಮನಸಾ ದಶಗಾಯತ್ರೀಜಪಃ ಕಾರ್ಯಃ' (ಧರ್ಮಸಿಂಧು).

## ಆಶೌಚೇ ನಿಷಿದ್ಧಕರ್ಮಾಣಿ

ಔಪಾಸನ, ವೈಶ್ವದೇವ, ಬ್ರಹ್ಮಯಜ್ಞಗಳು, ತೀರ್ಥಸೇವನೆ, ಸಾಂವತ್ಸರಿಕಾದಿ ಶ್ರಾದ್ಧಗಳು ವರ್ಜ್ಯ, ದಾನ ಕೊಡುವುದು, ತೆಗೆದುಕೊಳ್ಳುವುದು, ಯಜ್ಞ ಮಾಡುವುದು, ಯಜ್ಞ ಮಾಡಿಸುವುದು, ಅಧ್ಯಯನ ಮಾಡುವುದು, ಇನ್ನೊಬ್ಬರಿಗೆ ಹೇಳಿಕೊಡುವುದು, ನಮಸ್ಕಾರ ಮಾಡುವುದು, ಆಶೀರ್ವಾದ ಮಾಡುವುದು, ಏಕಾದಶಿ ಬಿಟ್ಟು ಉಳಿದ ವಿಷ್ಣುಪಂಚಕಾದಿ ವ್ರತಾಚರಣೆ ಮಾಡಬಾರದು. ಭೋಜನಕಾಲದಲ್ಲಿ ಪರಿಷೇಕ ಮಾತ್ರ ಮಾಡಿ, ಚಿತ್ರಾಹುತಿ ನೀಡುವುದು ನಿಷಿದ್ಧ. ಆಶೌಚದಲ್ಲಿ ಭಗವಂತನ ಭಜನೆ ಸಂಕೀರ್ತನೆ ಮಾಡಬಹುದು.

ಆದರೆ ಜಾತಾಶೌಚದಲ್ಲಿ ದೇವರಿಗೆ ಮಾತ್ರ ನಮಸ್ಕಾರ ಮಾಡಬೇಕು. ಹಾಗೆಯೇ ಹಿರಿಯರಿಗೆ ಕೈಮುಗಿದು ನಮಸ್ಕಾರ ಮಾಡಬೇಕು. ಪುರಾಣಶ್ರವಣ, ಭಜನೆ, ಸಂಕೀರ್ತನೆ ಮಾಡಬಹುದು, ವೇದಪಾಠವನ್ನು ಕೇಳುವಂತಿಲ್ಲ, ಶ್ರೋತ್ರಿಯ ಬ್ರಾಹ್ಮಣರೊಂದಿಗೆ ಪಂಕ್ತಿ ಇಲ್ಲ, ವಿವಾಹಾದಿಮಂಗಲಕಾರ್ಯದಲ್ಲಿ ಭಾಗವಹಿಸಿ ದರೂ ಆಶೀರ್ವಾದ ಮಾಡುವಂತಿಲ್ಲ ಹಾಗೂ ಬಡಿಸುವಂತಿಲ್ಲ. ದೇವಸ್ಥಾನದಲ್ಲಿ ಅಂಗಣಕ್ಕೆ ಮಾತ್ರ ಪ್ರವೇಶ ಮಾಡಬಹುದು.

## ವಿಭಕ್ತಿನಿಯಮಾಃ

ಪ್ರೇತಸ್ಥಾನದಲ್ಲಿ ಷಷ್ಠೀವಿಭಕ್ತಿಯಿಂದ 'ಗೋತ್ರ' ಹೇಳಿ ಅನಂತರ 'ಹೆಸರು' ಹೇಳಿ ಕರ್ಮಾಂಗ ಮಾಡುವುದು ಹಾಗೂ ಹೆಂಗುಸರಿಗೆ 'ದಾ' ಬದಲು 'ನಾಮ' ಶಬ್ದ ಹೇಳುವುದು.

ಉದಾ:– ಪಿತುಃ .....ಗೋತ್ರಸ್ಯ .....ಶರ್ಮಣಃ ಪ್ರೇತಸ್ಯ;
ಮಾತುಃ .....ಗೋತ್ರಾಯಾಃ .....ನಾಮ್ನ್ಯಾಃ ಪ್ರೇತಾಯಾಃ ॥
(ನಾಮ್ನಿ, ನಾಮ್ನೀಂ, ನಾಮ್ನ್ಯಾ, ನಾಮ್ನ್ಯೈ, ನಾಮ್ನ್ಯಾಃ.)

– **ಋಕಾರಾಂತ ಪುಲ್ಲಿಂಗ ಏಕವಚನ : ಪಿತೃ** (=ತಂದೆ); **ಭ್ರಾತೃ** (=ಸಹೋದರ); **ಭರ್ತೃ** (=ಗಂಡ); **ಜಾಮಾತೃ** (=ಅಳಿಯ) ॥

– **ಅರ್ಘ್ಯದಲ್ಲಿ ಸಂಬೋಧನ ವಿಭಕ್ತಿ :** ಭ್ರಾತಃ .......ಶರ್ಮನ್ .......ಗೋತ್ರ .......ರೂಪ ॥

– **ಆವಾಹನೆಯಲ್ಲಿ ದ್ವಿತೀಯಾವಿಭಕ್ತಿ :**
ಭ್ರಾತರಮ್ .......ಶರ್ಮಾಣಂ .......ಗೋತ್ರಂ .......ರೂಪಮ್ ॥

– **ಪಿಂಡದಾನ ಹಾಗೂ ಆಹುತಿಯಲ್ಲಿ ಚತುರ್ಥೀವಿಭಕ್ತಿ :**
ಭ್ರಾತ್ರೇ .....ಶರ್ಮಣೇ .....ಗೋತ್ರಾಯ ....ರೂಪಾಯ .....ಪ್ರದ್ಯುಮ್ನಾಯ ॥

– **ಸಂಕಲ್ಪ ಹಾಗೂ ಆಸನ ಕೊಡುವಾಗ ಷಷ್ಠೀವಿಭಕ್ತಿ :**
ಭ್ರಾತುಃ .....ಶರ್ಮಣಃ .....ಗೋತ್ರಸ್ಯ .....ರೂಪಸ್ಯ .....ಪ್ರದ್ಯುಮ್ನಸ್ಯ ॥

– **ಸಂಯೋಜನೆಯಲ್ಲಿ ತೃತೀಯಾ :** ಭ್ರಾತ್ರಾ .....ಶರ್ಮಣಾ .....ಗೋತ್ರೇಣ .....ರೂಪೇಣ ॥

– **ಅಕಾರಾಂತ ಪುಲ್ಲಿಂಗ ಏಕವಚನ : ಪಿತಾಮಹ** (=ತಂದೆಯ ಅಜ್ಜ) । **ಪ್ರಪಿತಾಮಹ** (=ತಂದೆಯ ಮುತ್ತಜ್ಜ) ॥ **ವೃದ್ಧಪ್ರಪಿತಾಮಹ** (=ತಂದೆಯ ಮುತ್ತಾತ) । **ಮಾತಾಮಹ** (=ತಾಯಿಯ ತಂದೆ) **ಮಾತುಃಪಿತಾಮಹ** (=ತಾಯಿಯ ಅಜ್ಜ) । **ಮಾತುಃಪ್ರಪಿತಾಮಹ** (=ತಾಯಿಯ ಮುತ್ತಜ್ಜ)। **ಸುತ** (=ಮಗ) **ಪೌತ್ರ** (=ಮಗನ ಮಗ) **ಭ್ರಾತೃಜ** (=ಅಣ್ಣನ ಮಗ) **ಶ್ವಶುರ** (=ಹೆಣ್ಣು ಕೊಟ್ಟ ಮಾವ) **ಮಾತುಲ** (=ಸೋದರಮಾವ) **ಪಿತೃವ್ಯ** (=ಚಿಕ್ಕಪ್ಪ, ದೊಡ್ಡಪ್ಪ) **ದೌಹಿತ್ರ** (=ಮಗಳ ಮಗ) **ಸ್ಯಾಲಕ** (=ಹೆಂಡತಿಯ ಅಣ್ಣ, ತಮ್ಮ) **ಭಾಗಿನೇಯಕ** (=ಅಕ್ಕಿ, ತಂಗಿಯ ಮಗ) **ಭಾವುಕ** (=ಅಕ್ಕ, ತಂಗಿ ಗಂಡ)

ಪ್ರಪಿತಾಮಹ .....ಶರ್ಮನ್ .....ಗೋತ್ರ .....ರೂಪ .....ಪ್ರದ್ಯುಮ್ನ । ಪ್ರಪಿತಾಮಹಂ .....ಶರ್ಮಾಣಂ .....ಗೋತ್ರಂ .....ರೂಪಂ .....ಪ್ರದ್ಯುಮ್ನಮ್ । ಪ್ರಪಿತಾಮಹಾಯ .....ಶರ್ಮಣೇ .....ಗೋತ್ರಾಯ .....ರೂಪಾಯ .....ಪ್ರದ್ಯುಮ್ನಾಯ। ಪ್ರಪಿತಾಮಹಸ್ಯ .....ಶರ್ಮಣಃ .....ಗೋತ್ರಸ್ಯ .....ರೂಪಸ್ಯ .....ಪ್ರದ್ಯುಮ್ನಸ್ಯ । (ಪ್ರಪಿತಾಮಹೇನ .....ಶರ್ಮಣಾ .....ಗೋತ್ರೇಣ .....ರೂಪೇಣ).

– **ಅಕಾರಾಂತ ಪುಲ್ಲಿಂಗ ಬಹುವಚನ :** ಪಿತುಃ .....ಪ್ರಪಿತಾಮಹಾಃ .....ಶರ್ಮಾಣಃ .....ಗೋತ್ರಾಃ .....ರೂಪಾಃ .....ವಾಸುದೇವಾಃ ॥

ಪಿತುಃ .....ಪ್ರಪಿತಾಮಹೇಭ್ಯಃ .....ಶರ್ಮಭ್ಯಃ .....ಗೋತ್ರೇಭ್ಯಃ .....ರೂಪೇಭ್ಯಃ .....ವಾಸುದೇವೇಭ್ಯಃ ॥

ಪಿತುಃ .....ಪ್ರಪಿತಾಮಹಾನಾಂ .....ಶರ್ಮಣಾಂ .....ಗೋತ್ರಾಣಾಂ ರೂಪಾಣಾಂ ವಾಸುದೇವಾನಾಮ್ ॥

– **ಋಕಾರಾಂತ ಸ್ತ್ರೀಲಿಂಗ ಏಕವಚನ : ಮಾತೃ** (=ತಾಯಿ) **ದುಹಿತೃ** (=ಮಗಳು)
ದುಹಿತಃ ......ದೇ ......ಗೋತ್ರೇ .....ರೂಪೇ .....ಪ್ರದ್ಯುಮ್ನ ॥
ದುಹಿತರಂ .....ದಾಂ .....ಗೋತ್ರಾಂ .....ರೂಪಾಂ .....ಪ್ರದ್ಯುಮ್ನಮ್ ॥
ದುಹಿತ್ರೇ .....ದಾಯೈ .....ಗೋತ್ರಾಯೈ .....ರೂಪಾಯೈ .....ಪ್ರದ್ಯುಮ್ನಾಯ ॥
ದುಹಿತುಃ .....ದಾಯಾಃ .....ಗೋತ್ರಾಯಾಃ .....ರೂಪಾಯಾಃ ಪ್ರದ್ಯುಮ್ನಸ್ಯ ॥
(ದುಹಿತ್ರಾ .....ದಯಾ .....ಗೋತ್ರಯಾ .....ರೂಪಯಾ)

– **ಈಕಾರಾಂತ ಸ್ತ್ರೀಲಿಂಗ ಏಕವಚನ :**

**ಪಿತಾಮಹೀ** (=ತಂದೆಯ ಅಜ್ಜಿ) । **ಪ್ರಪಿತಾಮಹೀ** (=ತಂದೆಯ ಮುತ್ತಜ್ಜಿ) । **ವೃದ್ಧ ಪ್ರಪಿತಾಮಹೀ** (=ತಂದೆಯ ಹಿರಿಯಜ್ಜ) **ಮಾತಾಮಹೀ** (=ತಾಯಿಯ ಅಜ್ಜಿ) । **ಮಾತುಃ ಪಿತಾಮಹೀ** (=ತಾಯಿಯ ಮುತ್ತಜ್ಜಿ) । **ಮಾತುಃ ಪ್ರಪಿತಾಮಹೀ** (=ತಾಯಿ ಹಿರಿಯಜ್ಜಿ)। **ಸಾಪತ್ನಜನನೀ** (=ತಂದೆಯ ಎರಡನೆಯ ಹೆಂಡತಿ) **ಪತ್ನೀ** (=ಹೆಂಡತಿ) **ಭಗಿನೀ** (=ತಂಗಿ) **ಪೌತ್ರೀ** (= ಮಗನ ಮಗಳು) **ದೌಹಿತ್ರೀ** (=ಮಗಳ ಮಗಳು).

ಪಿತಾಮಹಿ .....ದೇ .....ಗೋತ್ರೇ .....ರೂಪೇ ॥
ಪಿತಾಮಹೀಂ .....ದಾಂ .....ಗೋತ್ರಾಂ .....ರೂಪಾಮ್ ॥
ಪಿತಾಮಹ್ಯೈ .....ದಾಯೈ .....ಗೋತ್ರಾಯೈ .....ರೂಪಾಯೈ ॥
ಪಿತಾಮಹ್ಯಾಃ .....ದಾಯಾಃ .....ಗೋತ್ರಾಯಾಃ .....ರೂಪಾಯಾಃ ॥
(ಪಿತಾಮಹ್ಯಾ .....ದಯಾ .....ಗೋತ್ರಯಾ .....ರೂಪಯಾ).

– **ಈಕಾರಾಂತ ಸ್ತ್ರೀಲಿಂಗ ಬಹುವಚನ :**

ಮಾತೃ .....ಪ್ರಪಿತಾಮಹ್ಯಃ .....ದಾಃ .....ಗೋತ್ರಾಃ .....ರೂಪಾಃ ॥
ಮಾತೃ .....ಪ್ರಪಿತಾಮಹೀಃ .....ದಾಃ .....ಗೋತ್ರಾಃ .....ರೂಪಾಃ ॥
ಮಾತೃ .....ಪ್ರಪಿತಾಮಹೀಭ್ಯಃ .....ದಾಭ್ಯಃ .....ಗೋತ್ರಾಭ್ಯಃ .....ರೂಪಾಭ್ಯಃ ॥
ಮಾತೃ .....ಪ್ರಪೀತಾಮಹೀನಾಂ .....ದಾನಾಂ .....ಗೋತ್ರಾಣಾಂ .....ರೂಪಾಣಾಮ್ ॥

– **ಆಕಾರಾಂತ ಸ್ತ್ರೀಲಿಂಗ :**

**ಸ್ನುಷಾ** (=ಮಗನ ಹೆಂಡತಿ) ಸ್ನುಷೇ .....ದೇ .....ಗೋತ್ರೇ .....ರೂಪೇ .....ಪ್ರದ್ಯುಮ್ನ ॥
ಸ್ನುಷಾಂ .....ದಾಂ .....ಗೋತ್ರಾಂ .....ರೂಪಾಂ .....ಪ್ರದ್ಯುಮ್ನಮ್ ॥
ಸ್ನುಷಾಯೈ .....ದಾಯೈ .....ಗೋತ್ರಾಯೈ .....ರೂಪಾಯೈ .....ಪ್ರದ್ಯುಮ್ನಾಯ ॥
ಸ್ನುಷಾಯಾಃ .....ದಾಯಾಃ .....ಗೋತ್ರಾಯಾಃ .....ರೂಪಾಯಾಃ ಪ್ರದ್ಯುಮ್ನಸ್ಯ ॥
(ಸ್ನುಷಯಾ .....ದಯಾ .....ಗೋತ್ರಯಾ .....ರೂಪಯಾ).

– **ಋಕಾರಾಂತ ಸ್ತ್ರೀಲಿಂಗ :**

**ಸ್ವಸೃ** (=ತಂಗಿ) **ಪಿತೃಷ್ವಸೃ/ಮಾತೃಷ್ವಸೃ** (=ತಂದೆಯ ಸಹೋದರಿ/ತಾಯಿಯ ಸಹೋದರಿ) ।

ಸ್ವಸಃ .....ದೇ .....ಗೋತ್ರೇ .....ರೂಪೇ ॥
ಸ್ವಸಾರಂ .....ದಾಂ .....ಗೋತ್ರಾಂ .....ರೂಪಾಮ್ ॥
ಸ್ವಸ್ರೇ .....ದಾಯೈ .....,ಗೋತ್ರಾಯೈ .....ರೂಪಾಯೈ ॥
ಸ್ವಸುಃ .....ದಾಯಾಃ .....ಗೋತ್ರಾಯಾಃ .....ರೂಪಾಯಾಃ ॥
(ಸ್ವಸ್ರಾ .....ದಯಾ .....ಗೋತ್ರಯಾ .....ರೂಪಯಾ).

– **ಊಕಾರಾಂತ ಸ್ತ್ರೀಲಿಂಗ :**

**ಶ್ವಶ್ರೂ** (=ಹೆಂಡತಿಯ ತಾಯಿ)
ಶ್ವಶ್ರು .....ದೇ .....ಗೋತ್ರೇ .....ರೂಪೇ ॥
ಶ್ವಶ್ರೂಂ .....ದಾಂ .....ಗೋತ್ರಾಂ .....ರೂಪಾಮ್ ॥
ಶ್ವಶ್ರ್ವೈ .....ದಾಯೈ .....ಗೋತ್ರಾಯೈ .....ರೂಪಾಯೈ ॥

ಶ್ವಶ್ರ್ವೈ .....ದಾಯಾಃ .....ಗೋತ್ರಾಯಾಃ .....ರೂಪಾಯಾಃ ॥

(ಶ್ವಶ್ರ್ವಾ .....ದಯಾ .....ಗೋತ್ರಯಾ .....ರೂಪಯಾ).

– **ಉಕಾರಾಂತ ಪುಲ್ಲಿಂಗ 'ಗುರು' ಶಬ್ದ :**

ಗುರೋ .....ಶರ್ಮನ್ .....ಗೋತ್ರ ...... ರೂಪ ॥

ಗುರುಂ .....ಶರ್ಮಾಣಂ .....ಗೋತ್ರಂ .....ರೂಪಮ್ ॥

ಗುರವೇ .....ಶರ್ಮಣೇ .....ಗೋತ್ರಾಯ ......ರೂಪಾಯ ॥

ಗುರೋಃ .....ಶರ್ಮಣಃ .....ಗೋತ್ರಸ್ಯ .....ರೂಪಸ್ಯ ॥

(ಗುರುಣಾ .....ಶರ್ಮಣಾ .....ಗೋತ್ರೇಣ .....ರೂಪೇಣ)

~~~o~~~

# ಕ್ಷೇತ್ರವಿಧಿಃ



ಗಯಾಕ್ಷೇತ್ರ, ಕುರುಕ್ಷೇತ್ರ, ಬದರಿಯಲ್ಲಿ ಮುಂಡನ ಮತ್ತು ಕ್ಷೇತ್ರೋಪವಾಸವಿಲ್ಲ. ಗಯಾದಲ್ಲಿ ಶ್ರಾದ್ಧ ಮಾಡುವ ಮುನ್ನೂರ ಅರುವತ್ತು ಸ್ಥಳಗಳಿದ್ದು ಅವುಗಳಲ್ಲಿ ಫಲ್ಗುಣೀಶ್ರಾದ್ಧ, ವಿಷ್ಣುಪಾದಶ್ರಾದ್ಧ, ಅಕ್ಷಯವಟಶ್ರಾದ್ಧ ಪ್ರಮುಖವಾಗಿವೆ. ಗಯಾದಲ್ಲಿ ಶ್ರಾದ್ಧ ಮಾಡಿದ ಮೇಲೆ ಹತ್ತು ತಿಂಗಳು ಬೇರೆ ಯಾವ ಕ್ಷೇತ್ರದಲ್ಲೂ ಶ್ರಾದ್ಧ ಮಾಡಬಾರದೆಂಬ ಸಂಪ್ರದಾಯ ಕೆಲವರಲ್ಲಿದೆ.

ಹರಿದ್ವಾರದಲ್ಲಿ ಕ್ಷೇತ್ರೋಪವಾಸ ಹಾಗೂ ಮುಂಡನ ಮಾಡಿಕೊಂಡು ತೀರ್ಥಶ್ರಾದ್ಧ ಮಾಡಿ, ಆರು ಪ್ರಯಾಗಗಳಲ್ಲಿ ತರ್ಪಣಕೊಟ್ಟು ಬದರಿಯ ಬ್ರಹ್ಮಕಪಾಲದಲ್ಲಿ ಶ್ರಾದ್ಧ ಮಾಡಬೇಕು. ಬ್ರಹ್ಮಕಪಾಲದಲ್ಲಿ ಶ್ರಾದ್ಧ ಮಾಡಿದ ಮೇಲೆ ಬೇರೆ ಯಾವ ಕ್ಷೇತ್ರದಲ್ಲೂ ಪಿಂಡಪ್ರದಾನ ಮಾಡಬಾರದು. ಬೇರೆ ಕ್ಷೇತ್ರದಲ್ಲಿ ತರ್ಪಣ ಮಾತ್ರ ಕೊಡಬೇಕೆಂದಿದೆ ಹಾಗೂ ಮೂರು ವರ್ಷಗಳ ಅನಂತರ ಮತ್ತೆ ಬದರಿಗೆ ಹೋದರೆ ಪುನಃ ಶ್ರಾದ್ಧ ಮಾಡಬೇಕೆಂಬ ಸಂಪ್ರದಾಯವಿದೆ.

ಪ್ರಯಾಗದಲ್ಲಿ ಜೀವತ್ಪಿತೃಕರಿಗೂ ಮುಂಡನವಿದೆ. ಸ್ತ್ರೀಯರಿಗೆ ಮುಂಡನದ ಬದಲಾಗಿ ವೇಣೀದಾನವಿದೆ. ಹಾಗೂ ಕಾಶಿ ವಿಶ್ವನಾಥನ ದರ್ಶನ ಮತ್ತು ಕ್ಷೇತ್ರವಿಧಿ ಶ್ರೇಷ್ಠವಾಗಿದೆ. ಕುರುಕ್ಷೇತ್ರದಲ್ಲಿ ಮುಂಡನ ಹಾಗು ಉಪವಾಸ ಪ್ರಶಸ್ತವಲ್ಲ. ಗಂಗಾ, ಗೋದಾವರೀ, ನರ್ಮದಾ, ಸಿಂಧು, ಕಾವೇರಿ, ಕೃಷ್ಣಾ –ಎಂಬ ಆರು ಸಮುದ್ರಗಾಮಿ ಮಹಾನದಿಗಳು ಹಾಗೂ ಯಮುನೆಯ ಕಾಲಿಯಮಡು. ಕಾವೇರಿ ಮೊದಲಾದ ಮಹಾನದಿಗಳಲ್ಲಿ, ಸಪ್ತಮೋಕ್ಷದಾಯಕಕ್ಷೇತ್ರಗಳಲ್ಲಿ, ಶ್ರೀಮುಷ್ಣಮಾದಿ ಸ್ವಯಂವ್ಯಕ್ತ ಕ್ಷೇತ್ರಗಳಲ್ಲಿ,
~~~

ತೀರ್ಥಪ್ರಬಂಧದಲ್ಲಿ ಹೇಳಿದ ಬಿದರಹಳ್ಳಿಯೇ ಮೊದಲಾದ ನದೀಸಂಗಮಕ್ಷೇತ್ರಗಳಲ್ಲಿ ಶ್ರಾದ್ಧವು ಶ್ರೇಷ್ಠವಾಗಿದೆ.

ತೀರ್ಥಯಾತ್ರೆಗೆ ಹೊರಡುವ ದಿನ ಉಪವಾಸ ಮಾಡಬೇಕು. ಪ್ರಾಯಶ್ಚಿತ್ತಕ್ಕಾಗಿ ತೀರ್ಥಯಾತ್ರೆ ಮಾಡುವುದಾದರೆ ಮುಂಡನ ಮಾಡಿಕೊಳ್ಳಬೇಕು.

ಯಾವ ತೀರ್ಥವನ್ನು ಕುರಿತು ಯಾತ್ರೆ ಮಾಡಬೇಕಾಗಿದೆಯೋ ಆ ತೀರ್ಥಕ್ಷೇತ್ರದ ಹೆಸರನ್ನು ಹೇಳಿ ಸಂಕಲ್ಪ ಮಾಡಿ ಪುಣ್ಯಾಹವಾಚನ ಮಾಡಿ, ನಾಂದೀಶ್ರಾದ್ಧದ ಕ್ರಮದಿಂದ ಹೆಚ್ಚು ತುಪ್ಪ ಹಾಕಿದ ಅನ್ನದಿಂದ ಶ್ರಾದ್ಧ ಮಾಡಬೇಕು. ಇದಕ್ಕೆ **'ಘೃತಶ್ರಾದ್ಧ'** ಎಂದು ಹೆಸರು. ಶ್ರಾದ್ಧದ ಅನಂತರ ಶ್ರಾದ್ಧಶೇಷದ ತುಪ್ಪವನ್ನು ಹಿಡಿದುಕೊಂಡು ಹತ್ತು ಕಿ.ಮೀ. ದೂರವನ್ನು ಉಪವಾಸದಿಂದ ನಡೆದುಕೊಂಡು ಪ್ರಯಾಣಿಸಿ ಅಲ್ಲಿ ಭೋಜನ ಮಾಡಿ ಶ್ರಾದ್ಧಶೇಷವನ್ನು ಸ್ವೀಕರಿಸಿ, ಅಲ್ಲಿಯೇ ಇದ್ದು ಮಾರನೇ ದಿನ ಪುನಃ ಹತ್ತು ಕಿ.ಮೀ. ದೂರವನ್ನು ನಡೆದು ಪ್ರಯಾಣಿಸಿ, ಅನಂತರ ವಾಹನದಲ್ಲಿ ಪ್ರಯಾಣ ಮುಂದುವರಿಸಬೇಕು. ಹೀಗೆ ದಾರಿ ಮಧ್ಯದಲ್ಲಿ ಬೇರೆ ಕ್ಷೇತ್ರಗಳು ಸಿಕ್ಕಿದಲ್ಲಿ ಅಲ್ಲಿಯೂ ಮುಂಡನ, ಕ್ಷೇತ್ರೋಪವಾಸ ತೀರ್ಥಶ್ರಾದ್ಧಗಳನ್ನು ಮಾಡಬೇಕು.

ಅನಂತರ ನಮ್ಮ ಉದ್ದಿಷ್ಟವಾದ ಕ್ಷೇತ್ರವು ಸಿಗಲು ಹತ್ತು ಕಿ.ಮೀ. ಬಾಕಿ ಇರುವಾಗ ವಾಹನದಿಂದ ಇಳಿದು ಪಾದಯಾತ್ರೆ ಮಾಡಿ, ಪುಣ್ಯಕ್ಷೇತ್ರ ತಲುಪಿದಾಗ ಆ ಭೂಮಿಯಲ್ಲಿ ಹೊರಳಾಡಬೇಕು. ಅನಂತರ ಆ ದಿನವೇ ಮುಂಡನ ಮಾಡಿ, ಕ್ಷೇತ್ರೋಪವಾಸ ಮಾಡಿ ಮರುದಿನ ಮೊದಲು ತರ್ಪಣಕೊಟ್ಟು, ತೀರ್ಥಶ್ರಾದ್ಧ ಮಾಡಬೇಕು. ತೀರ್ಥಶ್ರಾದ್ಧದಲ್ಲಿ ಆವಾಹನೆ, ಅರ್ಘ್ಯ, ದ್ವಿಜಾಂಗುಷ್ಠನಿವೇಷನ, ತೃಪ್ತಿಪ್ರಶ್ನೆ, ವಿಕಿರ, ಪಾಣಿಹೋಮ, ಉಚ್ಛಿಷ್ಟ ಪಿಂಡಕರ್ಮಗಳು ಇರುವುದಿಲ್ಲ. ಅನಂತರ ಆ ದಿನ ಅಲ್ಲಿಯೇ ಇದ್ದು ಮರುದಿನ ಹೊರಡಬೇಕು. ತೀರ್ಥಯಾತ್ರೆ ಮಾಡಿ ಹಿಂತಿರುಗಿದ ಮೇಲೆ ಪುನಃ ಘೃತಶ್ರಾದ್ಧ ಮಾಡಿ ಯಾತ್ರೆಯನ್ನು ಪೂರ್ಣಗೊಳಿಸಬೇಕು.

ಒಂದು ತೀರ್ಥಕ್ಷೇತ್ರದಲ್ಲಿ ತೀರ್ಥಶ್ರಾದ್ಧ ಮಾಡಿದ ಮೇಲೆ ಅದೇ ಕ್ಷೇತ್ರಕ್ಕೆ ಹತ್ತು ವರ್ಷದ ಅನಂತರ ಹೋದರೆ ಆ ಕ್ಷೇತ್ರದಲ್ಲಿ ತೀರ್ಥಶ್ರಾದ್ಧ ಮಾಡಬೇಕು. ಆದರೆ ಪ್ರಯಾಗಕ್ಕೆ ಹದಿನೈದು ದಿನ ಬಿಟ್ಟು ಪುನಃ ಹೋದಲ್ಲಿ ಪುನಃ ತೀರ್ಥಶ್ರಾದ್ಧ ಮಾಡಬೇಕು.

ಅರ್ಘ್ಯ, ಆವಾಹನೆ, ಕೈಹಿಡಿದು ಕೂರಿಸುವುದು, ತೃಪ್ತಿಪ್ರಶ್ನೆ, ವಿಕಿರಬಲಿ –ಈ ಐದನ್ನು ತೀರ್ಥಶ್ರಾದ್ಧದಲ್ಲಿ ಬಿಡಬೇಕು ಹಾಗೂ ಪರೇಽಹನಿ ತಿಲತರ್ಪಣ ಕೊಡಲೂಬಾರದು.

ಸೇತುಸ್ನಾನ, ಗಯಾಶ್ರಾದ್ಧ, ಸಂಹಿತಾಹವನ, ವೇದಪಾರಾಯಣ, ಪುರುಷಸೂಕ್ತ ಮಹಾಮಂತ್ರಾದಿಗಳ ಯಥಾಕ್ರಮ ಜಪ, ಭಾಗವತ ಸಪ್ತಾಹಾದಿಗಳಿಂದ ಪ್ರೇತತ್ವ ನಿವೃತ್ತಿಯಾಗಿ ಉತ್ತಮ ಲೋಕಪ್ರಾಪ್ತಿಗೆ ಕಾರಣವಾಗುತ್ತದೆ.

ಅಯೋಧ್ಯಾ, ಮಥುರಾ, ಹರಿದ್ವಾರ (ಮಾಯಾ), ಕಾಶೀ, ಕಾಂಚೀ, ಅವಂತೀಪುರಿ (ಉಜ್ಜಯಿನೀ), ದ್ವಾರಕಾ –ಈ ಏಳು ಮೋಕ್ಷದಾಯಕಕ್ಷೇತ್ರಗಳು, ಶ್ರೀರಂಗ, ಶ್ರೀಮುಷ್ಣ ವೇಂಕಟಾಚಲ, ನೈಮಿಷಾರಣ್ಯ, ತೋತಾದ್ರಿ, ಪುಷ್ಕರ ಹಾಗೂ ಸಾಲಿಗ್ರಾಮ –ಎಂಬ ಸ್ವಯಂವ್ಯಕ್ತಕ್ಷೇತ್ರಗಳು. ಭಾಗವತ ತಿಳಿಸಿರುವ ಪಂಪಾಕ್ಷೇತ್ರ, ನಾರಾಯಣಸರೋವರ,

ಗಂಡಕೀ, ಪುಲಹಾಶ್ರಮಗಳೂ ಪಿತೃಕಾರ್ಯಕ್ಕೆ ಹಾಗೂ ಸಿದ್ಧಪುರಿಯ ಬಿಂದುಸರೋವರ ಮಾತೃಕಾರ್ಯಕ್ಕೆ ಪ್ರಶಸ್ತಕ್ಷೇತ್ರಗಳು.

ಕೃಷ್ಣಾಕ್ಕೆ ಗಂಗಾಸಾನ್ನಿಧ್ಯವು ೧೨ ವರ್ಷಗಳಿಗೊಮ್ಮೆ ಬರುತ್ತದೆ. ಇದಕ್ಕೆ 'ಕನ್ಯಾಗತ'ವೆಂದು ಕರೆಯುತ್ತಾರೆ. ಆಗ ಪುತ್ರನಾದವನು ಕೃಷ್ಣಾಯಾತ್ರೆಯನ್ನು ಕೈಕೊಂಡು ಪಿತೃಗಳ ಉದ್ದಿಶ್ಯವಾಗಿ ಕ್ಷೌರ ಮಾಡಿಸಿಕೊಂಡು, ಪಿಂಡಪ್ರದಾನಪೂರ್ವಕ ಶ್ರಾದ್ಧ ಮಾಡಬೇಕು. ಈ ಕಾಲದಲ್ಲಿ ಮೂರುವರೆ ಕೋಟಿ ತೀರ್ಥಗಳು ಕೃಷ್ಣವೇಣಿ ತೀರ್ಥದಲ್ಲಿ ಸನ್ನಿಹಿತವಾಗಿರುತ್ತವೆ.

ಗೋದಾವರೀ ನದಿಗೆ ಗಂಗಾಸಾನ್ನಿಧ್ಯವು ಬಂದಾಗ ಕೂಡ ಗುರು ಸಿಂಹ ರಾಶಿಗೆ ಬಂದಾಗ, ಗಂಗಾಭಾಗೀರಥಿಯರ ಸಾನ್ನಿಧ್ಯವು ಗೋದಾವರಿಗೆ ಬರುತ್ತದೆ. ಆದ್ದರಿಂದ ೧೨ ವರ್ಷಗಳಿಗೊಮ್ಮೆ ಬರುವ ಒಳ್ಳೆಯ ಸಮಯದಲ್ಲಿ ಪುತ್ರನಾದವನು ಗೋದಾವರೀತೀರ್ಥಯಾತ್ರೆ ಕೈಕೊಂಡು, ಕ್ಷೌರ ಮಾಡಿಸಿಕೊಂಡು ಪಿಂಡಪ್ರದಾನಪೂರ್ವಕ ಶ್ರಾದ್ಧ ಮಾಡಬೇಕು.

## ಶ್ರಾದ್ಧಮಹಿಮಾ



ಶ್ರಾದ್ಧವು ನಿತ್ಯಕರ್ಮ ಹಾಗೂ ನೈಮಿತ್ತಿಕ ಕರ್ಮಗಳಾಗಿವೆ. ಸೂಕ್ಷ್ಮ ದೃಷ್ಟಿಯಿಂದ ವಿಚಾರ ಮಾಡಿದಾಗ ಶ್ರಾದ್ಧದಲ್ಲಿ ಪಿತೃಗಳ ಅಂತರ್ಯಾಮಿಯಾಗಿ ವಸುರುದ್ರಾದಿತ್ಯರನ್ನು ಅನುಸಂಧಾನ ಮಾಡಿ ಅವರ ಅಂತರ್ಯಾಮಿ ಪರಮಾತ್ಮನಿಗೆ ಕರ್ಮವನ್ನು ಅರ್ಪಿಸುವುದರಿಂದ ಮುಖ್ಯಪ್ರಾಣ ದೇವರ ಮುಖಾಂತರ ತಾನೇ ಶ್ರಾದ್ಧವನ್ನು ಸ್ವೀಕರಿಸಿ ಪಿತೃಗಳು ಯಾವುದೇ ಯೋನಿಯಲ್ಲಿ ಯಾವುದೇ ರೂಪದಿಂದ ಇದ್ದಾರೋ ಅದಕ್ಕೆ ಸರಿಯಾದ ರೂಪದಿಂದ ಇದ್ದು ಪಿತೃಗಳು ದೇವಲೋಕದಲ್ಲಿದ್ದರೆ ಅಮೃತ ಮುಟ್ಟುತ್ತದೆ. ಮನುಷ್ಯಲೋಕದಲ್ಲಿದ್ದರೆ ಭೋಜನ ದೊರೆಯುತ್ತದೆ. ಪಕ್ಷಿಗಳಾಗಿದ್ದರೆ ಕಾಳು ದೊರೆಯುತ್ತದೆ. ಹೀಗೆ ಒಂದೊಂದು ರೂಪದಲ್ಲಿ ಅದರ ಫಲವನ್ನು ತಲುಪಿಸುತ್ತಾರೆ. ಹಾಗಾಗಿ ಭಕ್ತಿ ಶ್ರದ್ಧೆಯಿಂದ ಪಿತೃಕಾರ್ಯವನ್ನು ಮಾಡಿದರೆ ನರಕಕ್ಕೆ ಬಿದ್ದ ಪಿತೃಗಳೂ ಕೂಡ ಉದ್ಧಾರವಾಗಿ ಪಿತೃದೇವತೆಗಳ ಪ್ರಸಾದದಿಂದ ಆಯುಸ್ಸು, ಆರೋಗ್ಯಾದಿ ಐಹಿಕ ಫಲಗಳು ಸ್ವರ್ಗಾದಿ ಪರಲೋಕದ ಫಲಗಳು ಪ್ರಾಪ್ತಿಯಾಗಿ ಅಂತಃಕರಣಶುದ್ಧಿಯಾಗಿ ಜ್ಞಾನದ್ವಾರಾ ಭಗವಂತನ ಪ್ರಸಾದದಿಂದ ಮೋಕ್ಷವೇ ದೊರೆಯುತ್ತದೆ.

### ಪಿಂಡದಾನದ ಹಿನ್ನಲೆ

ಹಿಂದೆ ಭೂಮಿಯು ತನ್ನ ಕಕ್ಷೆಯಿಂದ ಜಾರಲು ಸಾಗರಗಳಿಂದ ಸುತ್ತುವರಿಯಲ್ಪಟ್ಟಿರುವ

ಈ ಭೂಮಿಯನ್ನು ವರಾಹರೂಪಧರಿಸಿ ಬೇಗನೆ ಮೇಲಕ್ಕೆತ್ತಿದ್ದನು. ಲೋಕಹಿತದ ಕಾರ್ಯವನ್ನು ಆರಂಭಿಸಿದ ಆ ಭಗವಂತನು ಭೂಮಿಯನ್ನು ಉದ್ಧಾರಮಾಡಿ ಸ್ವಸ್ಥಾನವನ್ನು ಸ್ಥಾಪಿಸಿದನು. ಆಗ ಸೂರ್ಯನು ಹಗಲಿನ ಮಧ್ಯಭಾಗಕ್ಕೆ ಬಂದು ಮಾಧ್ಯಾಹ್ನಿಕಕಾಲವು ಪ್ರಾಪ್ತವಾಗಲು, ವರಾಹರೂಪೀ ಭಗವಂತನು ತನ್ನ ಕೋರೆಹಲ್ಲುಗಳಿಗೆ ಮೆತ್ತಿಕೊಂಡಿದ್ದ ಮಣ್ಣಿನಿಂದ ಮೂರು ಪಿಂಡಗಳನ್ನು ಮಾಡಿ ನೆಲದ ಮೇಲೆ ದರ್ಭೆ ಹಾಸಿ ಅದರ ಮೇಲೆ ಮೂರು ಪಿಂಡಗಳನ್ನು ಸ್ಥಾಪಿಸಿ ತನ್ನನ್ನೇ ಉದ್ದೇಶಿಸಿ ಆ ಪಿಂಡಗಳಲ್ಲಿ ಪಿತೃಗಳನ್ನು ಆವಾಹಿಸಿ ಯಥಾವಿಧಿಯಾಗಿ ಪೂಜಿಸಿದನು. ಈ ಮೂರು ಪಿಂಡಗಳ ಮೇಲೆ ಅಪಸವ್ಯದಿಂದ ತನ್ನ ದೇಹದಿಂದಲೇ ಹುಟ್ಟಿದ ಎಳ್ಳುಗಳಿಂದ ಪ್ರೋಕ್ಷಿಸಲು, ದೇಹರಹಿತರಾದ ಪಿತೃಗಳು ಪಿಂಡಾಕಾರವನ್ನು ಧರಿಸುತ್ತಾರೆ. ನನ್ನಿಂದ ಸೃಷ್ಟರಾದ ಪಿಂಡರೂಪದಲ್ಲಿರುವ ಈ ಮೂವರು ಸನಾತನ ಪಿತೃಗಳಾಗಲಿ. ಈ ಮೂರು ಪಿಂಡಗಳು ಪಿತೃ, ಪಿತಾಮಹ, ಪ್ರಪಿತಾಮಹ ರೂಪವಾಗಿವೆ. ಈ ಮೂರು ಪಿಂಡಗಳಲ್ಲಿಯೂ ವಸುರುದ್ರಾದಿತ್ಯಗಣದಲ್ಲಿ ವರುಣ ಬ್ರಹ್ಮ ಅಗ್ನಿ ದೇವತಾಸ್ವರೂಪದಿಂದ ಅಂತರ್ಯಾಮಿಯಾಗಿ ನಾನೇ ಇರುತ್ತೇನೆ. ಈ ಪ್ರಪಂಚದಲ್ಲಿ ನನಗೆ ತಂದೆ ಯಾರು? ಎಲ್ಲರಿಗೂ ಪಿತಾಮಹನಾಗಿರುತ್ತೇನೆ. ಪಿತಾಮಹನಿಗೂ ನಾನೇ ತಂದೆಯಾಗಿದ್ದೇನೆ. ಈ ಜಗತ್ತಿಗೆ ನಾನೇ ಕಾರಣನಾಗಿದ್ದೇನೆ.

ಹೀಗೆ ಸಂದೇಶ ನೀಡಿ ವರಾಹರೂಪೀ ಭಗವಂತನು ತನ್ನನ್ನು ತಾನೇ ಆರಾಧಿಸಿಕೊಂಡು ಅಂತರ್ಧಾನನಾದನು. ಈ ರೀತಿಯಲ್ಲಿ ಶ್ರೀವರಾಹರೂಪೀ ಭಗವಂತನ. ಸಂದೇಶಕ್ಕನುಸಾರವಾಗಿ ಪಿತೃಗಳು ಪಿಂಡದಲ್ಲಿದ್ದುಕೊಂಡು ಪೂಜೆಯನ್ನು ಸ್ವೀಕರಿಸುವರು.

ಭೀಷ್ಮನು ತನ್ನ ತಂದೆ ಶಂತನುವಿನ ಶ್ರಾದ್ಧವನ್ನು ಮಾಡುತ್ತಿದ್ದಾಗ, ಶಂತನುವಿನ ಕೈಗಳು ಭೂಮಿಯನ್ನು ಭೇದಿಸಿಕೊಂಡು ಮೇಲೆ ಬಂದು, "ಮಗನೇ! ನನ್ನ ಕೈಗಳಲ್ಲಿ ಪಿಂಡವನ್ನು ಕೊಡು" ಎಂದು ಕೇಳಿದಾಗ, ಭೀಷ್ಮರು ಧರ್ಮಶಾಸ್ತ್ರದ ಪ್ರಮಾಣದಂತೆ ಪಿಂಡವನ್ನು ಕೈಯಲ್ಲಿ ಕೊಡದೇ ಭೂಮಿಯ ಮೇಲೆ ಬರ್ಹಿಸ್ಸನ್ನು ಹರಡಿ ಪಿಂಡವನ್ನು ಬರ್ಹಿಸ್ಸಿನ ಮೇಲಿಟ್ಟು ಕೊಟ್ಟರು. ಹಾಗಾಗಿ ಶಂತನು ಮಗನ ಧರ್ಮಶ್ರದ್ಧೆಗೆ ಮೆಚ್ಚಿ 'ಸ್ವೇಚ್ಛಾಮರಣಿಯಾಗು' ಎಂದು ವರವನ್ನು ಕೊಟ್ಟನು. ಅನಂತರ ತಂದೆಯ ಆಜ್ಞೆಯಂತೆ ಭೀಷ್ಮರು ಮಾರ್ಕಂಡೇಯರನ್ನು ಭೇಟಿಯಾಗಿ ಪಿತೃಗಳ ಹಾಗೂ ಶ್ರಾದ್ಧದ ಮಹಿಮೆಯನ್ನು ತಿಳಿದರು.

ಬ್ರಹ್ಮದೇವರು ದೇವತೆಗಳನ್ನು ಹಾಗೂ ಯಜ್ಞಗಳನ್ನು ಸೃಷ್ಟಿಸಿದ ಅನಂತರ ಎಲ್ಲರೂ ಯಜ್ಞ ಮಾಡಿದರೆಂದು ಅಪ್ಪಣೆ ಕೊಟ್ಟರು. ಆಗ ದೇವತೆಗಳೆಲ್ಲ ಯಜ್ಞದಲ್ಲಿ ಭಗವಂತನಿಗೆ ಆಹುತಿ ಕೊಡುವುದರ ಬದಲು ತಮಗೆ ತಾವೇ ಆಹುತಿ ಕೊಟ್ಟುಕೊಂಡಿದ್ದರ ಪರಿಣಾಮವಾಗಿ ಜ್ಞಾನಭ್ರಷ್ಟರಾಗಿಹೋದರು. ಅನಂತರ ಬ್ರಹ್ಮನ ಆಜ್ಞೆಯಂತೆ ತಮ್ಮ ತಮ್ಮ ಮಕ್ಕಳ ಬಳಿ ಹೋಗಿ ಪುನಃ ಜ್ಞಾನವನ್ನು ಪಡೆದರು. ಮಕ್ಕಳಾದರೊ ದೇವತೆಗಳಿಗೆ ಉಪದೇಶಿಸಿದ ಅನಂತರ 'ಮಕ್ಕಳೇ! ಹೋಗಿಬನ್ನಿ' ಎಂದು ಹೇಳಿದರು. ತಮ್ಮ ಮಕ್ಕಳೇ ತಮ್ಮನ್ನು 'ಮಕ್ಕಳೇ' ಎಂದು ಹೇಳಿದ್ದನ್ನು ಕೇಳಿ, ಚಿಂತಾಕ್ರಾಂತರಾಗಿ ಬ್ರಹ್ಮನ ಬಳಿ ಈ ವಿಚಾರವನ್ನು ತಿಳಿಸಿದರು. ಆಗ ಬ್ರಹ್ಮದೇವರು ದೇವತೆಗಳನ್ನುದ್ದೇಶಿಸಿ, 'ನೀವು ಅವರಿಗೆ ಜನ್ಮಕೊಟ್ಟ

ಪಿತೃಗಳಾಗಿದ್ದೀರಿ. ಅವರು ನಿಮಗೆ ಜ್ಞಾನ ಕೊಟ್ಟ ಪಿತೃಗಳಾಗಿದ್ದಾರೆ. ಹೀಗೆ ನೀವು ಪರಸ್ಪರ ಪಿತೃದೇವತೆಗಳಾಗಿದ್ದೀರಿ' ಎಂದು ಹೇಳಿದರು. ಹೀಗೆ ದೇವತೆಗಳಿಗೆ ಜ್ಞಾನೋಪದೇಶ ಮಾಡಿದ ದೇವತಾಪುತ್ರರೇ ಪಿತೃದೇವತೆಗಳೆಂದು ಪ್ರಸಿದ್ಧರಾದರು.

## ಶ್ರಾದ್ಧದಲ್ಲಿ ಪಿತೃದೇವತೆಗಳು

ಪಿತೃದೇವತೆಗಳಲ್ಲಿ ಏಳು ಗುಂಪುಗಳಿವೆ. ಅವರಲ್ಲಿ **'ವೈರಾಜರು'**, **'ಅಗ್ನಿಷ್ವಾತ್ತರು'**, **'ಬರ್ಹಿಷದರು'** ಎಂಬ ಮೂರು ಗುಂಪಿನವರು ಅತಿಸೂಕ್ಷ್ಮವಾದ ಶರೀರವುಳ್ಳವರಾಗಿದ್ದು ಅವರನ್ನು ಅಮೂರ್ತಿಮಂತರೆಂದು ಕರೆಯುತ್ತಾರೆ. ಇನ್ನುಳಿದ **ಸುಕಾಲರು, ಆಂಗೀರಸರು, ಸುಸ್ವಧರು, ಸೋಮಪರು** ಎಂಬ ನಾಲ್ಕು ಗುಂಪಿನವರು ಮೂರ್ತಿಮಂತರು.

**'ವೈರಾಜ'** ಹೆಸರಿನಿಂದ ಪಿತೃಗಳು ಮೊದಲ ಗಣದವರು. ಇವರು 'ವಿರಾಜ' ಎಂಬ ಪ್ರಜಾಪತಿಯ ಮಾನಸಪುತ್ರರು. ಇವರಿಗೆ 'ಮೇನಾ' ಎಂಬ ಮಾನಸಪುತ್ರಿ ಹುಟ್ಟಿದಳು. ಇವಳು ಹಿಮವಂತನಿಗೆ ಪತ್ನಿಯಾದಳು. ಇವಳಿಗೆ 'ಮೈನಾಕ' ಎಂಬ ಮಗ ಹಾಗೂ 'ಅಪರ್ಣಾ', 'ಏಕಪರ್ಣಾ', ಮತ್ತು 'ಏಕಪಾಟಲಾ' ಎಂಬ ಮೂರು ಪುತ್ರಿಯರು ಜನಿಸಿದರು. ಏಕಪರ್ಣೆಯು ಒಂದೇ ಒಂದು ಎಲೆಯನ್ನು ತಿಂದು ಹಾಗೂ ಏಕಪಾಟಲೆಯು ಒಂದೇ ಒಂದು ಪುಷ್ಪವನ್ನು (ಎಸಳನ್ನು) ತಿಂದು ತಪಸ್ಸು ಮಾಡುತ್ತಿದ್ದಳು. ಅಪರ್ಣೆಯು ಉಪವಾಸದಿಂದ ತಪಸ್ಸು ಮಾಡುತ್ತಿದ್ದಳು. ಅಪರ್ಣೆಯು ರುದ್ರದೇವರಿಗೆ ಪತ್ನಿಯಾದಳು. ಏಕಪರ್ಣೆಯು ದೇವಲರ ಪತ್ನಿಯಾದಳು, ಏಕಪಾಟಲೆಯು ಜೈಗೀಷವ್ಯರ ಪತ್ನಿಯಾದಳು.

**'ಅಗ್ನಿಷ್ವಾತ್ತ'** ಹೆಸರಿನ ಪಿತೃಗಳು ಎರಡನೆಯ ಗಣದವರು. ಇವರು ಸೋಮಪದ ಎಂಬ ಲೋಕದಲ್ಲಿರುವರು. ಮರೀಚಿಋಷಿಗಳ ಮಕ್ಕಳು. ಇವರಿಗೆ 'ಅಚ್ಛೋದಾ' ಎಂಬ ಮಗಳು ಹುಟ್ಟಿದಳು. ಇವಳಿಂದ 'ಅಚ್ಛೋದಾ' ಎಂಬ ಸರೋವರವು ನಿರ್ಮಾಣವಾಯಿತು. ಹುಟ್ಟಿದಾರಭ್ಯ ಇವಳು ತಂದೆಯನ್ನು ತಿಳಿದಿರಲಿಲ್ಲ. ಒಂದು ದಿನ ಆಕಾಶದಲ್ಲಿ ವಿಮಾನದಲ್ಲಿ 'ಅದ್ರಿಕಾ' ಎಂಬ ಅಪ್ಸರಸ್ತ್ರೀಯನ್ನು ಹಾಗೂ ಅವಳ ಜೊತೆ 'ಉಪರಿಚರ' ಎಂಬ ವಸುರಾಜನನ್ನು ನೋಡಿ ಇವನೇ ನನ್ನ ತಂದೆ ಎಂದು ತಿಳಿದ ತಪ್ಪಿಗೆ ಯೋಗಭ್ರಷ್ಟಳಾಗಿ ಮೇಲಿನ ಲೋಕದಿಂದ ಕೆಳಗೆ ಬೀಳುತ್ತಿರುವಾಗ ಅತಿಸೂಕ್ಷ್ಮವಾದ ಮೂರು ವಿಮಾನಗಳಲ್ಲಿ ಕುಳಿತಿರುವ ತನ್ನ ಪಿತೃಗಳನ್ನು ನೋಡಿ ಕೂಡಲೇ ಕೈಯೆತ್ತಿ "ಸ್ವಾಮಿ! ನನ್ನನ್ನು ರಕ್ಷಿಸಿರಿ!" –ಎಂದು ಬೇಡಿಕೊಂಡಾಗ ಅವಳು ಆಕಾಶದಲ್ಲೇ ನಿಂತಳು. ಆಗ ಇವರೇ ತನ್ನ ಪಿತೃಗಳೆಂದು ಖಾತ್ರಿಯಾಗಿ ಅವರಿಂದ ವರವನ್ನು ಪಡೆದು "ವಸುರಾಜನಿಗೆ ಮಗಳಾಗಿ ಹುಟ್ಟುವಿ. ಈ ಅದ್ರಿಕೆಯು ಮೀನಾಗಿ ಹುಟ್ಟಲಿದ್ದು ಮೀನಿನ ಹೊಟ್ಟೆಯಿಂದ ನೀನು ಹುಟ್ಟಿ ಬರುವಿ. ಅನಂತರ ಭೂಮಿಯಲ್ಲಿ ಪರಾಶರರಿಂದ ಭಗವಂತನಾದ 'ವೇದವ್ಯಾಸ'ರನ್ನು ಮಗನನ್ನಾಗಿ ಪಡೆಯುವಿ ಮತ್ತು ಶಂತನು ರಾಜನನ್ನು ವಿವಾಹವಾಗಿ ಚಿತ್ರಾಂಗದ, ವಿಚಿತ್ರವೀರ –ಎಂಬ ಇಬ್ಬರು ಮಕ್ಕಳನ್ನು ಪಡೆದು ಉತ್ತಮಲೋಕಗಳನ್ನು ಹೊಂದುವಿ" ಎಂದು ಹೇಳಿ ಸಂತೈಸಿದರು.

**'ಬರ್ಹಿಷದ'** ಹೆಸರಿನ ಪಿತೃಗಳು ಮೂರನೆಯ ಗಣದವರು. ಇವರು ವೈಭ್ರಾಜ ಎಂಬ ಲೋಕದಲ್ಲಿರುವರು. ಇವರನ್ನು ಯಕ್ಷಗಂಧರ್ವರು ಪೂಜಿಸುತ್ತಾರೆ. ಇವರು 'ಪುಲಸ್ಯ' ಎಂಬ ಪ್ರಜೇಶ್ವರರ ಮಕ್ಕಳು. ಇವರಿಗೆ 'ಪೀವರಿ' ಎಂಬ ಒಬ್ಬ ಮಾನಸಪುತ್ರಿ ಇದ್ದಳು. ಇವಳು ದ್ವಾಪರಯುಗದಲ್ಲಿ ಜನ್ಮ ತಾಳಿ ಶ್ರೀವೇದವ್ಯಾಸರ ಮಕ್ಕಳಾದ ಶುಕಾಚಾರ್ಯರಿಗೆ ಪತ್ನಿಯಾಗಿ, ಕೃಷ್ಣ, ಗೌರ, ಪ್ರಭು, ಶಂಭು –ಎಂಬ ನಾಲ್ಕು ಗಂಡುಮಕ್ಕಳನ್ನು, 'ಕೃತ್ವೀ' ಎಂಬ ಹೆಣ್ಣುಮಗಳನ್ನು ಪಡೆದು, ಕೃತ್ವಿಯು ಅಣುಹ ಎಂಬ ರಾಜನನ್ನು ಮದುವೆಯಾಗಿ ಬ್ರಹ್ಮದತ್ತನೆಂಬ ಪುತ್ರನನ್ನು ಪಡೆದಳು.

**'ಸುಕಾಲ'** ಹೆಸರಿನ ಪಿತೃಗಳು ನಾಲ್ಕನೆಯ ಗಣದವರು. ಇವರು ವಸಿಷ್ಠ ಪ್ರಜಾಪತಿಯ ಮಕ್ಕಳು. ಸ್ವರ್ಗದಲ್ಲಿ ಪ್ರಕಾಶಮಾನವಾದ ಲೋಕದಲ್ಲಿ ಇರುವರು. ಇವರನ್ನು ಬ್ರಾಹ್ಮಣರು ಪೂಜಿಸುವರು. ಇವರಿಗೆ 'ಗೌಃ' ಎಂಬ ಪ್ರಸಿದ್ಧಳಾದ ಮಾನಸಪುತ್ರಿಯಾಗಿದ್ದಳು. ಇವಳು ಭೂಮಿಯಲ್ಲಿ ಹುಟ್ಟಿಬಂದು 'ಏಕಶೃಂಗಾ' ಎಂಬ ಹೆಸರಿನಿಂದ ಪ್ರಸಿದ್ಧಳಾದಳು. ಶುಕನೆಂಬ ರಾಜನಿಗೆ ಭಾರ್ಯೆಯಾದಳು.

**'ಅಂಗಿರಸ'** ಹೆಸರಿನ ಪಿತೃಗಳು ಐದನೆಯ ಗಣದವರು. ಕ್ಷತ್ರಿಯರು ಇವರನ್ನು ಪೂಜಿಸಿ ಆರಾಧಿಸುತ್ತಾರೆ. 'ಯಶೋದಾ' ಎಂಬವಳು ಇವರ ಮಾನಸಪುತ್ರಿಯ. ಇವಳು 'ವಿಶ್ವಮಹಾನ್' ಎಂಬವನ ಪತ್ನಿಯಾಗಿದ್ದಳು, ವೃದ್ಧಶರ್ಮನ ಸೊಸೆಯು. ದಿಲೀಪರಾಜನ ತಾಯಿಯಾಗಿದ್ದಳು.

**'ಸುಸ್ವಧಾ'** ಹೆಸರಿನ ಪಿತೃಗಳು ಆರನೆಯ ಗಣದವರು. ಇವರು ಕರ್ದಮ ಪ್ರಜಾಪತಿಯ ಪಿತೃಗಳಾಗಿದ್ದಾರೆ. ಇವರು ಪುಲಹ ಮಹರ್ಷಿಗಳಿಂದ ಹುಟ್ಟಿದವರು. ಇವರನ್ನು ವೈಶ್ಯರು ಪೂಜಿಸುತ್ತಾರೆ. 'ವಿರಜಾ' ಎಂಬುವಳು ಇವರ ಮಾನಸಪುತ್ರಿ, ಇವಳು ನಹುಷರಾಜನ ಭಾರ್ಯೆ, ಇವಳ ಮಗನೇ ಯಯಾತಿರಾಜನು.

**'ಸೋಮಪಾ'** ಹೆಸರಿನ ಪಿತೃಗಳು ಏಳನೆಯ ಗಣದವರು. ಇವರು ಕವಿಯ ಮಗಳಾದ 'ಸ್ವಧಾ' ದೇವಿಯಲ್ಲಿ ಅಗ್ನಿದೇವರಿಂದ ಹುಟ್ಟಿದ ಮಕ್ಕಳು. ಇವರನ್ನು ಶೂದ್ರರು ಪೂಜಿಸುತ್ತಾರೆ. ಇವರು 'ಮಾನಸ' ಎಂಬ ಲೋಕದಲ್ಲಿರುವರು. ಮಾನಸಪುತ್ರಿಯು ನರ್ಮದೆ. ಇವಳು ನದೀಶ್ರೇಷ್ಠಳು. ಪುರುಕುತ್ಸರಾಜನ ಹೆಂಡತಿಯು ತ್ರಸದ್ದಸ್ಯುವಿನ ತಾಯಿ.

ಯಮನು ಈ ಏಳು ಬಗೆಯ ಪಿತೃಗಣಗಳಿಗಿಂತ ಮೊದಲು ಹುಟ್ಟಿದವನಾದರಿಂದ ಯಮನನ್ನು 'ಶ್ರಾದ್ಧದೇವ'ನೆಂದು ಕರೆಯುತ್ತಾರೆ.

ಮನುಪ್ರಜಾಪತಿಯು ಪ್ರತಿಯುಗದ ಆರಂಭದಲ್ಲಿ ಅಗ್ನಿಷ್ವಾತ್ತಾದಿ ಪಿತೃಗಳನ್ನು ಪೂಜ್ಯರೆಂದು ಭಾವಿಸಿ ಲುಪ್ತವಾದ ಶ್ರಾದ್ಧಧರ್ಮಗಳನ್ನು ಉದ್ಧಾರ ಮಾಡುವ ಸಲುವಾಗಿ ಶ್ರಾದ್ಧಗಳನ್ನು ಪ್ರಚುರಗೊಳಿಸುತ್ತಾನೆ. ಇವರನ್ನು 'ಅಮೂರ್ತರು' ಎಂದು ಕರೆಯುವರು.

**ಅಮೂರ್ತರು**

೧) ಅಗ್ನಿಯ ಮೂಲಕ ನೀಡುವ ಹವಿಸ್ಸನ್ನು ಸ್ವೀಕರಿಸುವವರು, ೨) ದರ್ಭೆಯ

ಮೂಲಕ ನೀಡುವ ಹವಿಸ್ಸನ್ನು ಸ್ವೀಕರಿಸುವವರು, ೩) ತುಪ್ಪದ ಮೂಲಕ ನೀಡುವ ಹವಿಸ್ಸನ್ನು ಸ್ವೀಕರಿಸುವವರು, ೪) ಜೇನಿನ ಮೂಲಕ ನೀಡುವ ಹವಿಸ್ಸನ್ನು ಸ್ವೀಕರಿಸುವವರು –ಎಂಬುದಾಗಿ ಮೊದಲ ನಾಲ್ಕು ಗಣಗಳು. ಇವರನ್ನು **ಅಮೂರ್ತ**ರೆಂದು ಕರೆಯುವರು.

**ಸಮೂರ್ತರು**

೫) ಪಿತೃ, ೬) ಪಿತಾಮಹ, ೭) ಪ್ರಪಿತಾಮಹರನ್ನು ಉದ್ದೇಶಿಸಿ ನಡೆಸುವ ಬ್ರಾಹ್ಮಣಾರಾಧನೆಯಿಂದ ತೃಪ್ತರಾಗುವ ಮೂರು ಪಿತೃದೇವತಾಗಣಗಳಿದ್ದು ಈ ದೇವತೆಗಳನ್ನು **'ಸಮೂರ್ತ'**ರೆಂದು ಕರೆಯುವರು.

ಅಮೂರ್ತರೆಂಬ ಪಿತೃದೇವತೆಗಳು ಬ್ರಹ್ಮನ ಮಗನಾದ ಸ್ವಾಯಂಭುವ ಮನುವಿನ ಪುತ್ರರಾದ ಮರೀಚಿ, ಅತ್ರಿ ಮೊದಲಾದವರು. ಇವರು 'ಸ್ವಧಾ' ಶಬ್ದದ ಮೂಲಕ ಶ್ರಾದ್ಧದಲ್ಲಿ ನೀಡಲ್ಪಡುವ ಹವಿರ್ಭಾಗವನ್ನು ತಲುಪಿಸುವರು.

ಸಮೂರ್ತರೆಂಬ ಪಿತೃದೇವತೆಗಳು– ವಸು–ರುದ್ರ–ಆದಿತ್ಯರು. ಹವಿಸ್ಸನ್ನು ಪಿತೃಗಳಿಗೆ ತಲುಪಿಸುವವರು. ಇವರಿಗೆ ಪ್ರತ್ಯೇಕ ಗಣಗಳಿದ್ದು ಅದನ್ನು 'ವಸುಗಣ', 'ರುದ್ರಗಣ', 'ಆದಿತ್ಯಗಣ'ವೆಂದು ಕರೆಯುವರು. ವಸುಗಣದಲ್ಲಿ ಎಂಟು, ರುದ್ರಗಣದಲ್ಲಿ ಹನ್ನೊಂದು, ಆದಿತ್ಯಗಣದಲ್ಲಿ ಹನ್ನೆರಡು ದೇವತೆಗಳಿರುವರು.

**ವಸುದೇವತೆಗಳು** ಸದಾ ಹಸನ್ಮುಖಿಗಳಾಗಿದ್ದು, ಶಾಂತಸ್ವಭಾವದವರು, ರಕ್ತವರ್ಣವಿಶಿಷ್ಟರೂ ಆಗಿರುತ್ತಾರೆ. ಕರದಲ್ಲಿ ವರಮುದ್ರೆಯನ್ನು, ಇನ್ನೊಂದು ಕೈಯಲ್ಲಿ ಶಕ್ತಿ ಆಯುಧವನ್ನೂ ಧರಿಸಿದ್ದು ಪದ್ಮಾಸನಸ್ಥರಾಗಿರುತ್ತಾರೆ.

**ರುದ್ರದೇವತೆಗಳು** ಸರ್ವಾಲಂಕಾರಭೂಷಿತರೂ, ಶ್ವೇತವರ್ಣವಿಶಿಷ್ಟರೂ, ಶ್ವೇತವಸ್ತ್ರ ಧಾರಿಗಳೂ ಆಗಿರುತ್ತಾರೆ. ಮೂರು ಕಣ್ಣುಳ್ಳವರಾಗಿದ್ದು, ಜಟಾಧಾರಿಗಳಾಗಿದ್ದು ನಾಲ್ಕು ಕೈಗಳಲ್ಲಿ ಅಭಯಮುದ್ರೆ, ಪರಶು, ವರಮುದ್ರೆ, ಕೃಷ್ಣಮೃಗ ಇವುಗಳನ್ನು ಧರಿಸಿರುತ್ತಾರೆ.

**ಆದಿತ್ಯದೇವತೆಗಳು** ಸರ್ವಾಭರಣಯುಕ್ತರು, ಕಿರೀಟಾನ್ವಿತರು, ಉಪವೀತಧಾರಿಗಳೂ ಆಗಿರುತ್ತಾರೆ. ರಕ್ತವರ್ಣದ ವಸ್ತ್ರಧಾರಿಗಳಾಗಿದ್ದು, ಎರಡು ಭುಜವುಳ್ಳವರು. ಕೈಗಳಲ್ಲಿ ಕಮಲವನ್ನು ಧರಿಸಿದವರು. ದ್ವಿನೇತ್ರರು. ಕಿರಣಗಳ ಸಮೂಹದಿಂದೊಡಗೂಡಿದವ ರಾಗಿದ್ದು ಕಮಲದ ಮೇಲೆ ಆಸೀನರಾಗಿರುತ್ತಾರೆ.

**ಅನಿರುದ್ಧನು** ಬಿಳಿಯ ವರ್ಣದವನು. ಶಂಖ, ಚಕ್ರ, ಖಡ್ಗ ಮತ್ತು ಚರ್ಮವನ್ನು (ಗುರಾಣಿಯನ್ನು) ಧರಿಸಿರುವನು.

**ಪ್ರದ್ಯುಮ್ನನು** ಹಳದಿವರ್ಣದವನಾಗಿದ್ದು ಧನುಸ್ಸು, ಬಾಣ, ಶಂಖ ಮತ್ತು ಚಕ್ರವನ್ನು ಧರಿಸಿರುವನು.

**ಸಂಕರ್ಷಣನು** ಕೆಂಪುಬಣ್ಣದವನಾಗಿದ್ದು ಒನಕೆ, ನೇಗಿಲು, ಚಕ್ರ ಮತ್ತು ಶಂಖಗಳನ್ನು ಧರಿಸಿರುವನು.

**ವಾಸುದೇವನು** ಶುಕ್ಲವರ್ಣದವನಾಗಿದ್ದು ಶಂಖಚಕ್ರಗದಾಪದ್ಮಗಳಿಂದ ಕೂಡಿದವ ನಾಗಿರುವನು.

ಈ ರೀತಿಯಾಗಿ ಬೇರೆಬೇರೆ ದೇವತೆಗಳಲ್ಲಿರುವ ಭಗವಂತನ ಬೇರೆಬೇರೆಯಾದ ರೂಪಗಳನ್ನು ಧ್ಯಾನಿಸಿ ಆರಾಧಿಸಬೇಕು.

ಮಾತಾ ಪಿತೃವರ್ಗಕ್ಕೆ ರೂಪಗಳನ್ನು ಹೇಳಿರುವ ಐತಿಹ್ಯವೇನೆಂದರೆ, ಬೃಹದಾರಣ್ಯಕ ಉಪನಿಷತ್ತಿನಂತೆ 'ವಸು' ಎಂದರೆ, ಅಷ್ಟ ಪ್ರಕೃತಿ ರೂಪ ಸ್ಥೂಲಶರೀರ (ಆ ಶರೀರ ಧರಿಸಿದ್ದ ನಮ್ಮ ಪಿತೃ, ಮಾತೃಗಳು – ಅಷ್ಟವಸುಗಳು).

'ರುದ್ರ ಎಂದರೆ, ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ ಮತ್ತು ಮನಸ್ಸಿನಿಂದ ಕೂಡಿದ ೧೧ ಇಂದ್ರಿಯಗಳುಳ್ಳ, ಸ್ಥೂಲ ಶರೀರಕ್ಕೆ ಕಾರಣವಾದ ಸೂಕ್ಷ್ಮ ಶರೀರ (ಅಂದರೆ, ಪಿತೃಗಳಿಗೆ ಕಾರಣರಾದ ಪಿತಾಮಹ, ಪಿತಾಮಹಿಗಳು – ಏಕಾದಶ ರುದ್ರರು.

'ಆದಿತ್ಯ' ಎಂದರೆ ಈ ಸೂಕ್ಷ್ಮ ಶರೀರಕ್ಕೆ ಕಾರಣವಾದ ಹನ್ನೆರಡು ಮಾಸಗಳುಳ್ಳ 'ಕಾಲ' ಮತ್ತು ಪ್ರಾಣಿಗಳು ಮಾಡಿದ ಕರ್ಮಗಳ ಫಲ, ಇವುಗಳಿಂದ ಚೋದಿತವಾದ 'ಕಾರಣ ಶರೀರ (ಅಂದರೆ, ಪಿತಾಮಹ, ಪಿತಾಮಹಗಳಿಗೆ ಕಾರಣರಾದ ಪ್ರಪಿತಾಮಹ, ಪ್ರಪಿತಾಮಹಿಗಳು – ದ್ವಾದಶಾದಿತ್ಯರು.) ಇದು ಬುದ್ಧಿ ಅಹಂಕಾರ ಭೂತವಾದುದು. ಇವು ವಸು, ರುದ್ರ ಆದಿತ್ಯರುಗಳ ರೂಪಗಳು.

ವಸು, ರುದ್ರ, ಆದಿತ್ಯ ರೂಪಗಳನ್ನು ಸ್ಥಳ ನಿರ್ದೇಶನದಿಂದ ತಿಳಿಸಬೇಕಾದರೆ: ಸ್ಥೂಲಶರೀರಕ್ಕೆ ಆಶ್ರಯವಾದ, ೧) ಸ್ಥೂಲಶರೀರದಿಂದಿದ್ದ ನಮ್ಮ ಮಾತಾಪಿತೃಗಳು ವಾಸಿಸುತ್ತಿದ್ದ, ಭೂಲೋಕವೇ 'ವಸು' ಅಂದರೆ ಪಿತೃಲೋಕ. ೨) ಸೂಕ್ಷ್ಮ ಶರೀರಕ್ಕೆ ಆಶ್ರಯವಾದ ಭೂಲೋಕದಿಂದ ನಮ್ಮ ಮಾತಾಪಿತೃಗಳು ಸೇರುವ ಚತುರ್ಮುಖ ಬ್ರಹ್ಮನಿರುವ ಸ್ವರ್ಗಲೋಕವೇ 'ರುದ್ರ' ಅಂದರೆ ಪಿತಾಮಹರ ಲೋಕ. ಇದರಿಂದಲೇ ಬ್ರಹ್ಮನನ್ನು 'ಪರಮೇಷ್ಠೀ ಪಿತಾಮಹಃ' ಎನ್ನುವರು. ೩) ಕಾರಣ ಶರೀರಕ್ಕೆ ಆಶ್ರಯವಾದ, ನಮ್ಮ ಪ್ರಪಿತಾಮಹ ಪ್ರಪಿತಾಮಹಿಗಳು ಸೇರುವ 'ವೈಕುಂಠ'ವೇ ವಿಷ್ಣುವಿನ ಲೋಕವಾಗಿ, 'ಆದಿತ್ಯ'ವೆನ್ನಲ್ಪಡುವುದು. ಇದರಿಂದಲೇ ವಿಷ್ಣುವನ್ನು 'ಸವಿತಾ ಪ್ರಪಿತಾಮಹಃ' ಎನ್ನುವರು.

## ಶ್ರಾದ್ಧಕರ್ಮದಲ್ಲಿ ವಿಶ್ವೇದೇವತೆಗಳು

ದಕ್ಷ ಪ್ರಜಾಪತಿಗೆ 'ವಿಶ್ವಾ' ಎಂಬ ಮಗಳಿದ್ದಳು. ಅವಳನ್ನು ಧರ್ಮ(ಯಮ)ನಿಗೆ ಕೊಟ್ಟು ಮದುವೆ ಮಾಡಿದನು. ಅವಳಲ್ಲಿ ಜನಿಸಿದ ಹದಿಮೂರು ದೇವತೆಗಳಿಗೆ ವಿಶ್ವೇದೇವತೆಗಳೆಂದು ಕರೆಯುತ್ತಾರೆ. ಇವರು ತ್ರಿಲೋಕಪ್ರಸಿದ್ಧರು. ಇವರು ಸದಾ ಧನುರ್ಬಾಣಧಾರಿಗಳಾಗಿದ್ದು ಆಸುರೀಶಕ್ತಿಗಳ ಆಪತ್ತಿನಿಂದ ದೇವತೆಗಳನ್ನು ರಕ್ಷಿಸುತ್ತಾರೆ.

ಒಂದು ಬಾರಿ ಇವರು ಹಿಮವತ್‌ಪರ್ವತದ ಮೇಲೆ ಘೋರ ತಪಸ್ಸನ್ನು ಮಾಡಿದರು. ಆಗ ಸಂತುಷ್ಟರಾದ ಪಿತೃದೇವತೆಗಳು ಮತ್ತು ಬ್ರಹ್ಮನು ಪ್ರತ್ಯಕ್ಷರಾಗಿ "ವರ ಕೇಳಿಕೊಳ್ಳಿರಿ" ಎಂದರು. ಆಗ ಇವರು "ಶ್ರಾದ್ಧದಲ್ಲಿ ನಮಗೆ ಭಾಗವು ಸಿಗಲಿ" ಎಂದು ವರ ಕೇಳಿಕೊಂಡರು. ಬ್ರಹ್ಮನು "ಹಾಗೆ ಆಗಲಿ" ಎಂದನು. ಆಗ ಪಿತೃಗಳು "ಶ್ರಾದ್ಧ ಮಾಡುವವರು ನಮ್ಮ ಜೊತೆಯಲ್ಲಿಯೇ ನಿಮ್ಮನ್ನು ಪೂಜಿಸಲಿ, ಗಂಧ, ಮಾಲ್ಯ, ವಸ್ತ್ರ ಅನ್ನಾದಿಗಳನ್ನು ನಮಗಿಂತ ಮೊದಲು ನಿಮಗೆ ಕೊಡಲಿ. ಮಂಡಲವಿಸರ್ಜನೆ ಮಾತ್ರ ಮೊದಲು ನಮ್ಮದಾಗಲಿ.

ಅನಂತರ ನಿಮ್ಮದಾಗಲಿ" ಎಂದು ವರ ಕೊಟ್ಟರು. ಈ ವರಕ್ಕೆ ಅನುಗುಣವಾಗಿ ವಿಶ್ವೇ ದೇವತೆಗಳಿಗೆ ಶ್ರಾದ್ಧವನ್ನು ರಕ್ಷಿಸುವ ಜವಾಬ್ದಾರಿಯನ್ನು ಕೊಟ್ಟಿದ್ದಾನೆ. ಇವರು ಶ್ರಾದ್ಧಕ್ಕೆ ವಿಘ್ನವನ್ನುಂಟುಮಾಡುವ ದುಷ್ಟಶಕ್ತಿಗಳಾದ ಆಲಸ್ಯ, ಔದಾಸೀನ್ಯ ಮೊದಲಾದವುಗಳನ್ನು ದೂರಗೊಳಿಸಿ ಶ್ರಾದ್ಧಕರ್ಮವನ್ನು ರಕ್ಷಿಸುವರು.

ವಿಶ್ವೇದೇವತೆಗಳನ್ನು ಪ್ರಧಾನವಾಗಿ, 'ಅಗ್ನಿಜಿಹ್ವಾ' ಮತ್ತು 'ವಿಪ್ರಜಿಹ್ವಾ' ಎಂದು ಎರಡು ವಿಧವಾಗಿ ವಿಂಗಡಿಸಲಾಗಿದೆ. ದಾಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ –ಈ ಮೂರುದೇವತೆಗಳು 'ಅಗ್ನಿಜಿಹ್ವ'ರೆಂದು ಕರೆಯಲ್ಪಡುತ್ತಾರೆ.

ವಿಪ್ರಜಿಹ್ವರೆಂದರೆ ಬ್ರಾಹ್ಮಣಾರಾಧನೆಯಿಂದ ತೃಪ್ತಿಪಡುವ ಹದಿಮೂರು ದೇವತೆಗಳು. ಬೇರೆಬೇರೆ ಶ್ರಾದ್ಧಗಳಲ್ಲಿ ವಿಶ್ವೇದೇವತೆಗಳ ಹೆಸರು ಈ ರೀತಿಯಾಗಿದೆ–

೧) ನಾಂದೀಶ್ರಾದ್ಧದಲ್ಲಿ ಸತ್ಯ, ವಸು; ೨) ಪಾರ್ವಣಶ್ರಾದ್ಧದಲ್ಲಿ (ಸಾಂವತ್ಸರಿಕ ಶ್ರಾದ್ಧದಲ್ಲಿ ಕೂಡ) ಪುರೂರವ, ಆರ್ದ್ರವ; ೩) ತೀರ್ಥಶ್ರಾದ್ಧದಲ್ಲಿ ಹಾಗೂ ಮಹಾಲಯ ಶ್ರಾದ್ಧದಲ್ಲಿ ಧುರಿ, ಲೋಚನ; ೪) ಸಪಿಂಡೀಕರಣಶ್ರಾದ್ಧದಲ್ಲಿ (ನೈಮಿತ್ತಿಕ) ಕಾಮ, ಕಾಲ, ೫) ಕಾಮ್ಯ(ಇಷ್ಟಿ)ಶ್ರಾದ್ಧದಲ್ಲಿ ಕ್ರತು, ದಕ್ಷ; ೬) ಹಿರಣ್ಯಶ್ರಾದ್ಧದಲ್ಲಿ ಧನು, ರುಚಿ; ೭) ಏಕೋದ್ದಿಷ್ಟಶ್ರಾದ್ಧದಲ್ಲಿ ರುದ್ರ, –ಹೀಗೆ ಆಯಾ ಶ್ರಾದ್ಧದ ವಿಶ್ವೇದೇವತೆಗಳು ಆಯಾ ಪಿತೃಗಳನ್ನು ಜೊತೆಯಲ್ಲಿ ಕರೆದುಕೊಂಡು ಬರುವರೆಂದೂ, ಹೋಗುವಾಗ ಪಿತೃಗಳು ಮುಂದೆಯೂ ವಿಶ್ವೇದೇವತೆಗಳು ಹಿಂದೆಯೂ ಹೋಗುವರು.

## ಬ್ರಾಹ್ಮಣರ ಪಾದಧೂಳಿನ ಮಹಿಮೆ

ಒಂದು ದಿನ ಭೃಗುಮುನಿಗಳು ಯಾರು ಸರ್ವೋತ್ತಮ ಎಂದು ತಿಳಿಯಲು ಮೊದಲು ಕೈಲಾಸವಾಸಿಯಾದ ರುದ್ರದೇವರ ಹತ್ತಿರ ಬರುತ್ತಾರೆ. ಆಗ ರುದ್ರದೇವರು ಪಾರ್ವತೀದೇವಿಯರೊಂದಿಗೆ ಕ್ರೀಡಿಸುತ್ತ ಇರುತ್ತಾರೆ. ತಮ್ಮಲ್ಲಿಗೆ ಬಂದ ಭೃಗುಮುನಿಗಳನ್ನು ಸತ್ಕರಿಸದೇ ಇದ್ದ ಪ್ರಯುಕ್ತ ಭೃಗುಮುನಿಗಳು ಶಾಪಕೊಟ್ಟು ಅಲ್ಲಿಂದ ಹೊರಟು ಸತ್ಯಲೋಕದಲ್ಲಿದ್ದ ಬ್ರಹ್ಮದೇವರ ಹತ್ತಿರ ಬರುತ್ತಾರೆ. ಬ್ರಹ್ಮದೇವರೂ ಕೂಡ ಅವರನ್ನು ಸತ್ಕರಿಸಲಿಲ್ಲ. ಆಗ ಭೃಗುಮುನಿಗಳು ಬ್ರಹ್ಮದೇವರನ್ನು ಕುರಿತು "ಯಾರೂ ನಿನ್ನನ್ನು ಪೂಜಿಸದಿರಲಿ' –ಎಂದು ಹೇಳಿ ವೈಕುಂಠಕ್ಕೆ ಬರುತ್ತಾರೆ. ಕ್ಷೀರಸಮುದ್ರದ ಉತ್ತರತಟದಲ್ಲಿದ್ದ ವಿಷ್ಣುಲೋಕದಲ್ಲಿ ಅವರನ್ನು ಯಾರೂ ತಡೆಯಲಿಲ್ಲ. ಶೇಷಪರ್ಯಂಕದಲ್ಲಿದ್ದ ಶ್ರೀವಿಷ್ಣುವು ಲಕ್ಷ್ಮೀದೇವಿಯರಿಂದ ಸೇವಿತನಾಗಿದ್ದನ್ನು ನೋಡುತ್ತಲೇ ಕೋಪದಿಂದ ಭೃಗುಮುನಿಗಳು ಶ್ರೀವಿಷ್ಣುವಿನ ವಕ್ಷಃಸ್ಥಳಕ್ಕೆ ತಮ್ಮ ಎಡಗಾಲಿನಿಂದ ಒದ್ದುಬಿಡುತ್ತಾರೆ. ಕೂಡಲೇ ಶ್ರೀವಿಷ್ಣುವು ಎದ್ದು ಭೃಗುಮುನಿಗಳಿಗೆ ನಮಸ್ಕಾರ ಮಾಡಿ, ಮೆಲ್ಲನೆ ಅವರ ಕಾಲನ್ನು ಎತ್ತಿ ಒತ್ತುತ್ತ ಮಧುರ ಮಾತುಗಳನ್ನಾಡುತ್ತಾ, **ಸಮಸ್ತಸಂಪತ್ .......... ಬ್ರಾಹ್ಮಣಪಾದಪಾಂಸವಃ ॥** ಎಲ್ಲ ವಿಧವಾದ ಸಂಪತ್ತು ಬರಲು ಕಾರಣವಾದ, ಆಪತ್ತುಕುತ್ತುಗಳಿಗೆಲ್ಲ ಧೂಮಕೇತು ವಿನಂತಿರುವ, ಅಪಾರ ಸಂಸಾರವೆಂಬ ಸಮುದ್ರಸೇತುವಿನಂತಿರುವ ಬ್ರಾಹ್ಮಣರ ಪಾದ ಧೂಳಿಯು ನನ್ನನ್ನು ಪವಿತ್ರನನ್ನಾಗಿ ಮಾಡಲಿ. ಹೀಗೆಂದು ಹೇಳಿ ಶ್ರೀವಿಷ್ಣುವು ಲಕ್ಷ್ಮೀ ದೇವಿಯರಿಂದೊಡಗೂಡಿ ಅರ್ಘ್ಯ, ಪಾದ್ಯ, ಆಚಮನ, ಗಂಧ, ಚಂದನ, ದಿವ್ಯಹಾರಗಳಿಂದ

ಭೃಗುಮುನಿಗಳನ್ನು ಪೂಜೆ ಮಾಡುತ್ತಾನೆ. ಭಗವಂತನ ಈ ಕ್ಷಮಾಗುಣವನ್ನು ನೋಡಿ ಭೃಗುಮುನಿಗಳು ಆನಂದಭರಿತರಾಗಿ ಶ್ರೀವಿಷ್ಣುವೇ ಸರ್ವೋತ್ತಮನೆಂದು ಸಾರುತ್ತ ತಮ್ಮಸ್ಥಾನಕ್ಕೆ ಹೊರಟು ಹೋಗುತ್ತಾರೆ.

## ಪಾಣಿಹೋಮದ ಮಹತ್ವ

ಹಿಂದೆ ನಿಮಿರಾಜನು ಶ್ರಾದ್ಧಕರ್ಮವನ್ನು ಪ್ರಾರಂಭಿಸಿದ ಅನಂತರ ಎಲ್ಲ ಮಹರ್ಷಿಗಳು ಶಾಸ್ತ್ರವಿಧಿಗೆ ಅನುಸಾರವಾಗಿ ಶ್ರಾದ್ಧವನ್ನು ಮಾಡಲು ಆರಂಭಿಸಿದರು. ಹೀಗೆ ಶ್ರಾದ್ಧ ಮಾಡುವವರ ಸಂಖ್ಯೆ ಬೆಳೆದಂತೆ ದೇವತೆಗಳು ಮತ್ತು ಪಿತೃಗಳು ಅಜೀರ್ಣರೋಗದಿಂದ ಪೀಡಿತರಾಗಿ ಅಜೀರ್ಣರೋಗನಿವಾರಣೋಪಾಯವನ್ನು ಕಂಡುಕೊಳ್ಳಲು ಸೋಮನ ಬಳಿಗೆ ಹೋದರು ಆಗ ಸೋಮನು, "ದೇವತೆಗಳೇ! ಬ್ರಹ್ಮಭವನಕ್ಕೆ ಹೋಗಿ ಬ್ರಹ್ಮದೇವರನ್ನು ಪ್ರಾರ್ಥಿಸಿರಿ" –ಎಂದನು. ಸೋಮನು ತಿಳಿಸಿದಂತೆ ದೇವತೆಗಳು ಬ್ರಹ್ಮದೇವರ ಬಳಿಗೆ ಬಂದು ತಮ್ಮ ಕಷ್ಟವನ್ನು ನಿವೇದಿಸಿದರು.

ಆಗ ಬ್ರಹ್ಮದೇವರು, "ದೇವ, ಪಿತೃಗಳೇ! ನನ್ನ ಸಮೀಪದಲ್ಲಿರುವ ಈ ಅಗ್ನಿದೇವನು ನಿಮಗೆ ಶ್ರೇಯಸ್ಸನ್ನುಂಟುಮಾಡುತ್ತಾನೆ." –ಎಂದು ಹೇಳಲು ಅಗ್ನಿಯು ದೇವತೆಗಳನ್ನು ಸಂತೈಸುತ್ತ ಹೇಳಿದನು– "ದೇವ ಪಿತೃಗಳೇ! ಶ್ರಾದ್ಧದ ಸಮಯದಲ್ಲಿ ನಾವೆಲ್ಲರೂ ಸೇರಿಯೇ ಭೋಜನವನ್ನು ಮಾಡೋಣ. ನನ್ನೊಡನೆ ಭೋಜನ ಮಾಡುವ ನೀವು ಶ್ರಾದ್ಧಾನ್ನವನ್ನು ಅರಗಿಸಿಕೊಳ್ಳುವಿರಿ, ಇದರಲ್ಲಿ ಸಂಶಯವೇ ಇಲ್ಲ. ಅಗ್ನಿಯ ಈ ಮಾತನ್ನು ಕೇಳಿ ಪಿತೃದೇವತೆಗಳು ನಿಶ್ಚಿಂತರಾದರು. ಈ ಕಾರಣದಿಂದ ಶ್ರಾದ್ಧಕಾಲದಲ್ಲಿ ಅಗ್ನಿಗೆ ಆಹುತಿ ಕೊಡುವುದು ವಾಡಿಕೆಯಾಗಿ ಬಂದಿತು. ಹೀಗೆ ಅಗ್ನಿಗೆ ಹವಿರ್ಭಾಗವನ್ನು ಕೊಟ್ಟ ಅನಂತರ ಪಿತೃಗಳಿಗೆ ಪಿಂಡಪ್ರದಾನ ಮಾಡುವುದರಿಂದ ಪಿಂಡವನ್ನು ಬ್ರಹ್ಮರಾಕ್ಷಸರು ದೂಷ್ಯವನ್ನಾಗಿ ಮಾಡದೆ ಓಡಿ ಹೋಗುತ್ತಾರೆ.

ಪಾಣಿಹೋಮದ ಗೂಢಾರ್ಥವೆಂದರೆ–

ಅಮೂರ್ತ ಪಿತೃಗಳೆನಿಸಿ ಬ್ರಹ್ಮಲೋಕದ ಮೇಲೆ '**ಸುಮನಸ**'ವೆಂಬಲ್ಲಿ ಇರುವ ಸೋಮಪರೆಂಬ ಪಿತೃಗಳು ಮತ್ತು ಅವರ ವಂಶ, ತೃಪ್ತಿ ಹೊಂದಲಿ. '**ಕವಿ**' ಎಂಬ ಅಗ್ನಿ ಮತ್ತು ಆತನ ಪತ್ನಿ '**ಸ್ವಧಾ**' ಇವರಲ್ಲಿ ಜನಿಸಿದ '**ಕಾವ್ಯ**' ಎಂಬ ದೇವಲೋಕದಲ್ಲಿ ವಾಸಿಸುವ ಪಿತೃಗಳೂ ಅವರ ವಂಶೀಕರೂ ತೃಪ್ತರಾಗಲಿ, '**ಸಾಧ್ಯ**' ಎಂಬ ದೇವಯೋನಿ ವಿಶೇಷದಿ ಜನಿಸಿದ ಅಂಗಿರೋಮುನಿ ಪುತ್ರರಾದ '**ಉಪಹೂತ**' ಎಂಬ ಪಿತೃಗಳೂ ಮತ್ತು ಅವರ ವಂಶೀಕರೂ ತೃಪ್ತರಾಗಲಿ, ಶ್ರಾದ್ಧಕರ್ಮಗಳಿಂದ ತೃಪ್ತಿ ಹೊಂದಿ, ಸಮಸ್ತ ಭುವನವನ್ನೂ ಪಿತೃಗಳನ್ನೂ ತೃಪ್ತಿಪಡಿಸುವ '**ಸೋಮ**'ನಿಗೆ ಈ ಆಹುತಿ ಅರ್ಪಿತವಾಗಲಿ. ಈ ಸೋಮನು ಪ್ರೇತರೂಪದಲ್ಲಿರುವ ಸಮಸ್ತಪಿತೃಗಳನ್ನೂ ಕಾಪಾಡಲೆಂದು ಅವನ ತೃಪ್ತಿಗೆ ಈ ಆಹುತಿ ಅರ್ಪಿತವಾಗಲಿ. ಒಟ್ಟಿನಲ್ಲಿ ಅಮೂರ್ತಿಗಳೂ ಸಮೂರ್ತಿಗಳೂ ಆಗಿರುವ ಎಲ್ಲಾ ಪಿತೃಗಳಿಗೂ, ಕವ್ಯವಾಹಕ ಅಗ್ನಿಗೂ, ಅಮೃತ ಕಿರಣಗಳಿಂದ ಪಿತೃಗಳನ್ನು ತೃಪ್ತಿ ಪಡಿಸುವ ಸೋಮನಿಗೂ ಈ ಹವಿಸ್ಸು ಅರ್ಪಿತವಾಗಲಿ ಎಂದರ್ಥ.

### ಉಚ್ಛಿಷ್ಟಭಾಗಿಗಳು

ಮೂವತ್ತೆರಡು ಸಾವಿರ ಭೃತ್ಯರು, ಎಂಬತ್ತನಾಲ್ಕು ಲಕ್ಷ ಯೋನಿಗಳಲ್ಲಿ ಜನ್ಮಜನ್ಮಾಂತರ ಗಳಲ್ಲಿಯೂ ಹುಟ್ಟು ಸಾವು ಹೊಂದಿ ನಮ್ಮ ರಕ್ತಸಂಬಂಧಿಗಳೇ ಆಗಿದ್ದು ನಮ್ಮನ್ನು ಅನುಸರಿಸಿಕೊಂಡು ಬಂದಿರುವರು. ಅವರ ಪ್ರೀತಿಗಾಗಿ ನಿತ್ಯದಲ್ಲೂ ಗೃಹಸ್ಥನು ಭೋಜನಾಂತ್ಯದಲ್ಲಿ ಉತ್ತರಾಪೋಶನಕ್ಕಿಂತ ಮೊದಲು ಕಿಂಚಿದನ್ನವನ್ನು ನೀರುಸಹಿತ ಭೂಮಿಗೆ ಹಾಕುವ ಪದ್ಧತಿಯಿದೆ.

## ಕಾಕಬಲಿಮಹತ್ತ್ವ

ಸೂರ್ಯವಂಶದ ಕ್ಷತ್ರಿಯವೀರ ಮರುತ್. ಅವನು ಬೃಹಸ್ಪತಿಯ ಸಹೋದರನಾದ ಸಂವರ್ತನೆಂಬ ಬ್ರಹ್ಮರ್ಷಿಯ ಪೌರೋಹಿತ್ಯದಲ್ಲಿ ದೊಡ್ಡ ಯಜ್ಞವೊಂದನ್ನು ನಡೆಸಿದ. ಅದು ರಾವಣನ ಕಾಲ. ಅವನಿಗೆ ಹೆದರಿದ ದೇವತೆಗಳು ಒಬ್ಬೊಬ್ಬರು ಒಂದೊಂದು ಪಕ್ಷಿಯ ರೂಪತಾಳಿ ಮರುತನ ಯಜ್ಞಕ್ಕೆ ಬಂದರು. ದೇವೇಂದ್ರ ನವಿಲಿನ ರೂಪದಲ್ಲಿ, ಬ್ರಹ್ಮದೇವರು ಹಂಸ ರೂಪದಲ್ಲಿ, ಯಮದೇವರು ಕಾಗೆಯ ರೂಪದಲ್ಲಿ ಬಂದರು. ಹೀಗೆ ಯಜ್ಞದಲ್ಲಿ ಭಾಗವಹಿಸಿದ ಅವರು ತಮ್ಮ ಗೌಪ್ಯತೆಗೆ ಕಾರಣವಾದ ಆ ಪಕ್ಷಿಪ್ರಾಣಿಗಳಿಗೆ ಒಂದೊಂದು ವರ ನೀಡಿದರು. ಯಮದೇವರು ಕಾಗೆಗಳಿಗೆ ದೀರ್ಘಾಯುಷ್ಯವನ್ನು ನೀಡಿದರು. "ಯಾವ ರೋಗಭಯವೂ ನಿಮಗೆ ಬರದಿರಲಿ. ನನ್ನ ಲೋಕದಲ್ಲಿರುವ ಪಿತೃಗಳು, ನೀವು ಅನ್ನವನ್ನು ಸ್ವೀಕರಿಸಿದರೆ ಆ ಮೂಲಕ ಅವರು ಸಂತೃಪ್ತರಾಗುತ್ತಾರೆ. ಮನುಷ್ಯರು ಕೊಂದರಷ್ಟೇ ನಿಮಗೆ ಸಾವು ಬರುತ್ತದೆ" ಎಂದು ವರ ನೀಡಿದನು. ಈ ಕಾರಣದಿಂದ 'ಕಾಕಬಲಿ'ಯ ಮೂಲಕ ಪಿತೃಗಳು ತೃಪ್ತರಾಗುವರೆಂಬ ನಂಬಿಕೆ ರೂಢಿಯಲ್ಲಿ ಬಂದಿದೆ.

## ದರ್ಭೆಯ ಮಹತ್ವ

ಗರುಡನು ತನ್ನ ತಾಯಿಯನ್ನು ದಾಸ್ಯದಿಂದ ವಿಮೋಚನೆಗೊಳಿಸುವುದಕ್ಕಾಗಿ ಅಮೃತವನ್ನು ಇಂದ್ರನಿಂದ ಪಡೆದುಕೊಂಡು ಬಂದು ಸರ್ಪಗಳನ್ನು ಕುರಿತು ಹೇಳುತ್ತಾನೆ- "ಸರ್ಪಗಳಿರಾ! ನಿಮ್ಮ ಅಭಿಲಾಷೆಯಂತೆ ನಾನು ಅಮೃತವನ್ನು ತಂದಿರುತ್ತೇನೆ, ಅದನ್ನು ದರ್ಭೆಗಳ ಮೇಲೆ ಇಡುತ್ತೇನೆ. ನೀವು ಶುಚಿರ್ಭೂತರಾಗಿ ಬಂದು ಅಮೃತವನ್ನು ಸೇವಿಸಿರಿ. ಇಂದಿಗೆ ನನ್ನ ತಾಯಿಯ ದಾಸ್ಯಜೀವನಕ್ಕೆ ವಿಮೋಚನೆಯಾಯಿತು." ಎನ್ನಲು, ಅಮೃತ ಸಿಕ್ಕಿದ ಸಂತೋಷದಿಂದ ಸರ್ಪಗಳು 'ತಥಾಸ್ತು' ಎಂಬ ಪ್ರತಿವಚನವಿತ್ತು ಸ್ನಾನಕ್ಕಾಗಿ ಹೊರಟು ಹೋಗುತ್ತವೆ. ಅಷ್ಟರಲ್ಲಿಯೇ ಇಂದ್ರದೇವರು ಬಂದು, ಆ ಅಮೃತಕಲಶವನ್ನು ಅಪಹರಿಸಿಕೊಂಡು ಹೋಗಿಬಿಡುತ್ತಾರೆ. ಅನಂತರ ಸರ್ಪಗಳು ಸ್ನಾನ ಆಹ್ನಿಕಗಳನ್ನು ಪೂರೈಸಿಕೊಂಡು ಬರುತ್ತಲೇ ಇಂದ್ರದೇವರು ಅಮೃತಕಲಶವನ್ನು ಅಪಹರಿಸಿದ ವಿಷಯ ತಿಳಿದುಬರುತ್ತದೆ. ತಾವು ಹಿಂದೆ ಮಾಡಿದ ಮೋಸಕ್ಕೆ ಪ್ರತಿ

ಮೋಸ ನಡೆಯಿತೆಂದು ಭಾವಿಸಿ ಸುಮ್ಮನಾಗುತ್ತವೆ. ಅಮೃತಕಲಶವಿಟ್ಟಿದ್ದ ದರ್ಭೆಯಾದರೂ ಉಳಿದುಕೊಂಡಿದೆ ಎಂಬುದಾಗಿ ತಿಳಿದು ದರ್ಭೆಗಳನ್ನು ನೆಕ್ಕುತ್ತವೆ. ಆಗ ಅವುಗಳ ನಾಲಿಗೆ ಎರಡು ಭಾಗವಾಗುತ್ತದೆ. ಸ್ವಲ್ಪ ಕಾಲವಾದರೂ ಅಮೃತಕಲಶದ ಸಂಪರ್ಕ ಹೊಂದಿದ್ದ ದರ್ಭೆಗಳು ಪರಮಪಾವನವಾದವು ಹಾಗೂ 'ಪವಿತ್ರ'ವೆಂಬ ಹೆಸರನ್ನು ಪಡೆದವು.

## ಉಪವೀತೀ ಪ್ರಾಚೀನಾವೀತಿಗಳ ವಿಚಾರ

ಮನುಷ್ಯನ ದೇಹದ ಬಲಭಾಗದಲ್ಲಿ 'ಪಿಂಗಲಾ' ಎಂಬ ನಾಡಿಯಿದ್ದು ಅದು ದೇವ ಯಾನಸೂಚಕವಾದ್ದರಿಂದ ಸಾಧಾರಣವಾಗಿ ನಿತ್ಯದಲ್ಲಿ ಯಜ್ಞೋಪವೀತವನ್ನು ಬಲಭಾಗದಲ್ಲೇ–ಸವ್ಯರೂಪದಲ್ಲೇ– ಹಾಕಿಕೊಳ್ಳಬೇಕು. 'ಇಡಾ' ಎಂಬ ನಾಡಿಯು ದೇಹದ ಎಡಭಾಗದಲ್ಲಿದ್ದು ಇದು ಪಿತೃಯಾನಸೂಚಕವಾಗಿರುವುದರಿಂದ ಪರಿಚರ್ಯವೆಲ್ಲ ಪಿತೃಗಳಿಗೆ ತಲುಪಬೇಕಾದರೆ ಯಜ್ಞೋಪವೀತವನ್ನು ಅಪಸವ್ಯದಲ್ಲಿ ಹಾಕಿಕೊಳ್ಳಬೇಕು. ಬಲಭಾಗದಲ್ಲಿ ವಾಯುದೇವರು ಸವ್ಯರೂಪದ ಅವಾಂತರದೇವತೆಯಾಗಿಯೂ, ಭಾರತೀ ದೇವಿಯರು ಪಿತೃಯಾನಭಾಗದಲ್ಲಿ ಅವಾಂತರದೇವತೆಗಳಾಗಿಯೂ ಸನ್ನಿಹಿತರಾಗಿರುತ್ತಾರೆ.

# ಶ್ರಾದ್ಧಕಾಲೇ ಪಠನೀಯಾನಿ ಸೂಕ್ತಾನಿ

ಶ್ರಾದ್ಧಕಾಲದಲ್ಲಿ ಪಿಂಡಪೂಜೆಯ ಮೊದಲು ಮತ್ತು ಅನಂತರ ಈ '**ಆದಿಗದಾಧರಸ್ತುತಿ**', '**ಶ್ರೀರಾಮಸ್ತೋತ್ರ**' ಹಾಗೂ '**ಕಾಠಕೋಪನಿಷತ್**'ನ್ನು ಪಠಿಸಿದರೆ ಶ್ರಾದ್ಧವು ಅಕ್ಷಯವಾಗುವುದು.

## ಆದಿಗದಾಧರಸ್ತುತಿಃ

ಅವ್ಯಕ್ತರೂಪೋ ಯೋ ದೇವೋ ಮುಂಡಪೃಷ್ಠಾದ್ರಿರೂಪತಃ ।
ಪಲ್ಗುತೀರ್ಥಾದಿರೂಪೇಣ ನಮಾಮ್ಯಾದಿಗದಾಧರಮ್ ॥

ವ್ಯಕ್ತಾಽವ್ಯಕ್ತಸ್ವರೂಪೇಣ ಪದರೂಪೇಣ ಸಂಸ್ಥಿತಃ ।
ಮುಖಾದಿಲಿಂಗರೂಪೇಣ ನಮಾಮ್ಯಾದಿಗದಾಧರಮ್ ॥

ಶಿಲಾಯಾಂ ದೇವರೂಪಿಣ್ಯಾಂ ಸ್ಥಿತಂ ಬ್ರಹ್ಮಾದಿಭಿಃ ಸುರೈಃ ।
ಪೂಜಿತಂ ಸತ್ಕೃತಂ ದೇವೈಸ್ತ್ವಂ ನಮಾಮ್ಯಾದಿಗದಾಧರಮ್ ॥

ಯಂ ಚ ದೃಷ್ಟ್ವಾ ತತಃ ಸ್ಪೃಷ್ಟ್ವಾ ಪೂಜಯಿತ್ವಾ ಪ್ರಣಮ್ಯ ಚ ।
ಶ್ರಾದ್ಧಾದೌ ಬ್ರಹ್ಮಲೋಕಾಪ್ತಿರ್ನಮಾಮ್ಯಾದಿಗದಾಧರಮ್ ॥

ಮಹದಾದೇಶ್ಚ ಜಗತೋ ವ್ಯಕ್ತಸ್ಯೈಕಂ ಹಿ ಕಾರಣಮ್ ।
ಅವ್ಯಕ್ತಜ್ಞಾನರೂಪಂ ತಂ ನಮಾಮ್ಯಾದಿಗದಾಧರಮ್ ॥

ದೇಹೇಂದ್ರಿಯಮನೋಬುದ್ಧಿಪ್ರಾಣಾಹಾಂಕಾರವರ್ಜಿತಮ್ ।
ಜಾಗ್ರತ್ಸ್ವಪ್ನವಿನಿರ್ಮುಕ್ತಂ ನಮಾಮ್ಯಾದಿಗದಾಧರಮ್ ॥

ನಿತ್ಯಾಽನಿತ್ಯವಿನಿರ್ಮುಕ್ತಂ ಸತ್ಯಮಾನಂದಮವ್ಯಯಮ್ ।
ತುರೀಯಂ ಜ್ಯೋತಿರಾತ್ಮಾನಂ ನಮಾಮ್ಯಾದಿಗದಾಧರಮ್ ॥

* * *

ಸಂಸಾರವೃಕ್ಷಶಸ್ತ್ರಾಯ ಶೇಷಪಾಪಕ್ಷಯಾಯ ಚ ।
ಅಕ್ಷಯ್ಯಬ್ರಹ್ಮದಾತ್ರೇ ಚ ನಮೋಽಕ್ಷಯ್ಯವಟಾಯ ಚ ॥

ಶಿಲಾಸ್ಥಿತೇಷು ತೀರ್ಥೇಷು ಸ್ನಾತ್ವಾ ಕೃತ್ವಾಥ ತರ್ಪಣಮ್ ।
ಶ್ರಾದ್ಧಂ ಸಪಿಂಡಕಂ ಏಷಾಂ ಬ್ರಹ್ಮಲೋಕಂ ಪ್ರಯಂತು ತೇ ॥

ಪಲ್ಗುತೀರ್ಥೇ ವಿಷ್ಣುಜಲೇ ಕರೋಮಿ ಸ್ನಾನಮದ್ಯ ವೈ ।
ಪಿತೃಣಾಂ ವಿಷ್ಣುಲೋಕಾಯ ಭುಕ್ತಿಮುಕ್ತಿಪ್ರಸಿದ್ಧಯೇ ॥

ಅತ್ರ ವಿಷ್ಣುಪದಂ ದಿವ್ಯಂ ದರ್ಶನಾತ್ಪಾಪನಾಶನಮ್ ।
ಸ್ಪರ್ಶನಾತ್ಪೂಜನಾಚ್ಚೈವ ಪಿತೃಣಾಂ ಮುಕ್ತಿಹೇತವೇ ॥

* * *

# ಶ್ರೀರಾಮಸ್ತೋತ್ರಮ್

ಭಗವಾನ್ ನಾರಾಯಣಃ ಶ್ರೀಮಾನ್ ದೇವಶ್ಚಕ್ರಾಯುಧೋ ಹರಿಃ ।
ಶಾರ್ಙ್ಗಧಾರೀ ಹೃಷೀಕೇಶಃ ಪುರಾಣಪುರುಷೋತ್ತಮಃ ॥ ೧ ॥

ಪ್ರಭವಶ್ಚಾವ್ಯಯಸ್ತ್ವಂ ಚ ಉಪೇಂದ್ರೋ ಮಧುಸೂದನಃ ।
ಪೃಶ್ನಿಗರ್ಭೋ ಧೃತಾರ್ಚಿಸ್ತ್ವಂ ಪದ್ಮನಾಭೋ ರಣಾಂತಕೃತ್ ॥ ೨ ॥

ಏಕಶೃಂಗೋ ವರಾಹಸ್ತ್ವಂ ಭೂತಭವ್ಯಂ ಭವಾತ್ಮಕಃ ।
ಅಕ್ಷರಂ ಬ್ರಹ್ಮಸತ್ಯಂ ತು ಆದೌ ಚಾಂತೇ ಚ ರಾಘವ ॥ ೩ ॥

ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮೋಂಕಾರಃ ಪರಂತಪಃ ।
ಶತಧನ್ವಾ ವಸುಃ ಪೂರ್ವವಸೂನಾಂ ತ್ವಂ ಪ್ರಜಾಪತಿಃ ॥ ೪ ॥

ತ್ರಯಾಣಾಮಪಿ ಲೋಕಾನಾಮಾದಿಕರ್ತಾ ಸ್ವಯಂ ಪ್ರಭುಃ ।
ರುದ್ರಾಣಾಮಷ್ಟಮೋ ರುದ್ರಃ ಸಾಧ್ಯಾನಾಮತಿ ಪಂಚಮಃ ॥ ೫ ॥

ಅಶ್ವಿನೌ ಚಾಪಿ ಕರ್ಣೌ ತೇ ಸೂರ್ಯಚಂದ್ರೌ ಚ ಚಕ್ಷುಷೀ ।
ಅಂತೇ ಚಾದೌ ಚ ಮಧ್ಯೇ ಚ ದೃಶ್ಯಸೇ ತ್ವಂ ಪರಂತಪಃ ॥ ೬ ॥

ಪ್ರಭವೋ ನಿಧನಂ ಚಾಸ್ಯ ನ ವಿದುಃ ಕೋ ಭವಾನಿತಿ ।
ದೃಶ್ಯಸೇ ಸರ್ವಲೋಕೇಷು ಗೋಷು ಚ ಬ್ರಾಹ್ಮಣೇಷು ಚ ॥ ೭ ॥

ತ್ರೀನ್ ಲೋಕಾನ್ ಧಾರಯನ್ನಾಸೇ ದೇವಗಂಧರ್ವ ದಾನವಾನ್ ।
ಅಹಂ ತೇ ಹೃದಯಂ ರಾಮ ಜಿಹ್ವಾ ದೇವೀ ಸರಸ್ವತೀ ॥ ೮ ॥

ದೇವಾ ರೋಮಾಣಿ ಗಾತ್ರೇಷು ನಿರ್ಮಿತಾಸ್ತೇ ಸ್ವಮಾಯಯಾ ।
ನಿಮಿಷಸ್ತೇ ಸ್ಮೃತಾ ರಾತ್ರಿರುನ್ಮೇಷೋ ದಿವಾಸ್ತಥಾ ॥ ೯ ॥

ಸೀತಾಲಕ್ಷ್ಮೀರ್ಭವಾನ್ ವಿಷ್ಣುರ್ದೇವಃ ಕೃಷ್ಣಃ ಪ್ರಜಾಪತಿಃ ।
ಪದಾರ್ಥಂ ರಾವಣಸ್ಯ ತ್ವಂ ಪ್ರವಿಷ್ಟೋ ಮಾನುಷೀಂ ತನುಮ್ ॥ ೧೦ ॥

ತದಿದಂ ಚ ತ್ವಯಾ ಕಾರ್ಯಂ ಕೃತಂ ಧರ್ಮಭೃತಾಂ ವರಃ ।
ನಿಹತೋ ರಾವಣೋ ರಾಮ ಪ್ರಹೃಷ್ಟಾ ದೇವತಾಃ ಕೃತಾಃ ॥ ೧೧ ॥

ಅಮೋಘಂ ದೇವ ವೀರ್ಯಂ ತೇ ನ ತೇ ಮೋಘಃ ಪರಾಕ್ರಮಃ ।
ಅಮೋಘದರ್ಶನಂ ರಾಮ ನ ಚ ಮೋಘಸ್ತವ ಸ್ತವಃ ॥ ೧೨ ॥

॥ ಶ್ರೀಮದ್ದೇಶಾರ್ಪಣಮಸ್ತು ॥

# ಕಾಠಕೋಪನಿಷತ್

ಋತಂ ಪಿಬಂತೌ ಸುಕೃತಸ್ಯ ಲೋಕೇ
ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ।
ಛಾಯಾತಪೌ ಬ್ರಹ್ಮವಿದೋ ವದಂತಿ
ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ ॥ ೧ ॥

ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮತತ್ಪರಮ್ ।
ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಸಿ ॥ ೨ ॥

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥ ೩ ॥

ಇಂದ್ರಿಯಾಣಿ ಹಯಾನ್ಯಾಹುರ್ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥ ೪ ॥

ಯಸ್ತ್ವವಿಜ್ಞಾನವಾನ್ ಭವತಿ ಅಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥ ೫ ॥

ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವ ಇವ ಸಾರಥೇಃ ॥ ೬ ॥

ಯಸ್ತ್ವವಿಜ್ಞಾನವಾನ್ ಭವತಿ ಅಮನಸ್ಕಃ ಸದಾಽಶುಚಿಃ ।
ನ ಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥ ೬ ॥

ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥ ೭ ॥

ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥ ೮ ॥

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ ॥ ೧೦ ॥

ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।
ಪುರುಷಾನ್ನಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಃ ಗತಿಃ ॥ ೧೧ ॥

ಏಷ ಸರ್ವೇಷು ಭೂತೇಷು ಗೂಢೋತ್ಮಾನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥ ೧೨ ॥

ಯಚ್ಛೇದ್ವಾಙ್ಮನಸೀ ಪ್ರಾಜ್ಞಃ ತದ್ ಯಚ್ಛೇದ್ ಜ್ಞಾನ ಆತ್ಮನಿ ।
ಜ್ಞಾನಮಾತ್ಮನಿ ಮಹತಿ ತದ್ಯಚ್ಛೇಚ್ಛಾಂತ ಆತ್ಮನಿ ॥ ೧೩ ॥

ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ ।
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ
ದುರ್ಗಂ ಪಥಸ್ತತ್ ಕವಯೋ ವದಂತಿ ॥ ೧೪ ॥

ಅಶಬ್ದಮಸ್ಪರ್ಶಮರೂಪಮವ್ಯಯಂ
ತಥಾಽರಸಂ ನಿತ್ಯಮಗಂಧವಚ್ಚ ಯತ್ ।
ಅನಾದ್ಯನಂತಂ ಮಹತಃ ಪರಂ ಧ್ರುವಂ
ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ ॥ ೧೫ ॥

ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಮ್ ।
ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ ॥ ೧೬ ॥

ಯ ಇದಂ ಪರಮಂ ಗುಹ್ಯಂ ಶ್ರಾವಯೇದ್ ಬ್ರಹ್ಮಸಂಸದಿ ।
ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ ॥ ೧೭ ॥

ತದಾನಂತ್ಯಾಯ ಕಲ್ಪತ ಇತಿ ॥

॥ ಇತಿ ಕಾಠಕೋಪನಿಷತ್ಸು ಪ್ರಥಮಾಧ್ಯಾಯಸ್ಯ ತೃತೀಯಾ ವಲ್ಲೀ ॥

* * *

## ನದೀಸ್ತೋತ್ರಮ್

ನದೀಸ್ತೋತ್ರಂ ಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶಿನೀ ।
ಭಾಗೀರಥೀ ವಾರಣಾಸೀ ಯಮುನಾಯೈ ಸರಸ್ವತೀ ॥

ಫಲ್ಗುಣೀ ಶ್ರವಣಭದ್ರಾ ಚ ನರ್ಮದಾ ಗಂಡಕೀ ತಥಾ ।
ಮಣಿಕರ್ಣಿಕಾ ಗೋಮತೀ ಪ್ರಯಾಗೇ ಚ ಪುನಃ ಪುನಃ ॥

ಗೋದಾವರೀ ಸಿಂಧುನದೀ ಸರಯೂ ಜಾಹ್ನವೀ ತಥಾ ।
ಕೃಷ್ಣವೇಣೀ ಭೀಮರಥೀ ಕಾಕಿನೀ ಭವನಾಶಿನೀ ॥

ತುಂಗಭದ್ರಾ ಮಲಾಪಹಾರೀ ವರದಾ ಕುಮುದ್ವತೀ ತಥಾ ।
ಕಾವೇರೀ ಕಪಿಲಾ ಕುಮುದಾ ಹೇಮವತೀ ಹರಿದ್ರಾವತೀ ॥

ವೇದಾವತೀ ನೇತ್ರಾವತೀ ಸಂಭೂತಾ ವೈಷ್ಣವೀ ತಥಾ ।
ತಾಮ್ರಪರ್ಣೀ ಸ್ವರ್ಣಮುಖೀ ಪಿನಾಕ್ಯಂಬು ಕುಶಾವತೀ ॥

ಮಂದಾರೀ ತಪತೀ ಕಾಳಿ ಕಾಳಿಂದೀ ಗಣಪತೀ ತಥಾ ।
ಕೌಮೋದಕೀ ಕುರುಕ್ಷೇತ್ರೋ ಗೋವಿಂದೋ ದ್ವಾರಕೀ ಭವೇತ್ ॥

ಮಹೇಶ್ವರೀ ಧರ್ಮವೇಣೀ ಚಂದ್ರಾಣೀ ಅತ್ರಿಣೀ ತಥಾ ।
ನಂದಿನೀ ನಳಿನೀ ಸೀತಾ ಮಾಲತೀ ಚ ಮಲಾಪಹಾ ॥

ಕಮಂಡಲು ಧನುಷ್ಕೋಟಿ ಕಪಿನೀ ಗೌತಮೀ ತಥಾ ।
ಪಂಚಗಂಗಾ ಭರದ್ವಾಜ ಸೇತು ರಾಮೇಶ್ವರಂ ತಥಾ ॥

ನಾರದೇ ಚ ನದಿಃ ಪೂರ್ವೇ ಸರ್ವನದ್ಯಾ ಪ್ರಕೀರ್ತಿತಾಃ ।
ಪ್ರಾತಃಕಾಲೇ ಪಠೇನ್ನಿತ್ಯಂ ಸ್ನಾನಕಾಲೇ ವಿಶೇಷತಃ ॥

ಕೋಟಿಜನ್ಮಕೃತಂ ಪಾಪಂ ಸ್ಮರಣೇನ ವಿನಶ್ಯತಿ ।
ಬ್ರಹ್ಮಹತ್ಯಾದಿ ಪಾಪಘ್ನಂ ಮಹಾಪಾತಕನಾಶನಮ್ ।
ಇಹಲೋಕೇ ಸುಖಂ ಪ್ರಾಪ್ತುಮಂತೇ ಸಾಯುಜ್ಯಮಾಪ್ನುಯಾತ್ ॥

॥ ಇತಿಶ್ರೀನದೀಸ್ತೋತ್ರಂ ಸಂಪೂರ್ಣಮ್ ॥

# ಅನ್ನಸೂಕ್ತಮ್

ಮೂರ್ಧಾನಮಿತಿ ಬಾರ್ಹಸ್ಪತ್ಯೋ ಭರದ್ವಾಜೋ ವೈಶ್ವಾನರೋಽಗ್ನಿಸ್ತ್ರಿಷ್ಟುಪ್। ಆಮಾಸು ನೃಮೇಧಪುರುಮಥಾವಂಗಿರಸೌ, ಇಂದ್ರೋ ಬೃಹತೀ । ಸೋಮೋ ಧೇನುಮಿತ್ಯಸ್ಯ ರಾಹೂಗಣೋ ಗೌತಮಃ ಸೋಮಸ್ತ್ರಿಷ್ಟುಪ್ । ಉಪಹ್ವಯೇ ಇತಿ ದ್ವಯೋಃ ದೀರ್ಘತಮಾ ಔಚಥ್ಯಃ ವಿಶ್ವೇದೇವಾಸ್ತ್ರಿಷ್ಟುಪ್ । ಇಂದ್ರ ದೃಹ್ಯ ಗಾಥಿನೋ ವಿಶ್ವಾಮಿತ್ರ ಇಂದ್ರಸ್ತ್ರಿಷ್ಟುಪ್। ವಾಶೀಮಂತ ಶ್ಯಾವಾಶ್ವ ಆತ್ರೇಯೋ ಮರುತೋ ಜಗತೀ । ಚತುಷ್ಕಪರ್ದೇತಿ ತಿಸೃಣಾಂ ವೈರೂಪಃ ಸಧ್ರಿಸ್ತಾಪಸೋ ಘರ್ಮೋ ವಾ ವಿಶ್ವೇದೇವಾಸ್ತ್ರಿಷ್ಟುಪ್ । ದ್ವಿತೀಯಾ ಜಗತೀ । ಪಿತುಂ ನುಸ್ತೋಷಮಿತಿ ಏಕಾದಶರ್ಚಸ್ಯ ಸೂಕ್ತಸ್ಯ ಮೈತ್ರಾವರುಣಿರಗಸ್ತ್ಯೋಽನ್ನಂ ಗಾಯತ್ರೀ ಉಷ್ಣಿಗನುಷ್ಟುಪ್ ಬಹತೀಛಂದಾಂಸಿ। ಕಯಾ ನಶ್ಚಿತ್ರ ಇತಿ ತಿಸೃಣಾಂ ವಾಮದೇವೋ ಗೌತಮ ಇಂದ್ರೋ ಗಾಯತ್ರೀ, ಪಾದ ನಿಚೃತ್ । ಸ್ವಾದೋರಭಿಕ್ಷೀತಿ ಪಂಚದಶರ್ಚಸ್ಯ

ಕಾಣ್ವಃ ಪ್ರಗಾಥಃ ಸೋಮಸ್ತ್ರಿಷ್ಟುಪ್ ಜಗತೀ । ಹವಿಷ್ಕೃಣುಷ್ವಮಿತ್ಯಷ್ಟಾದಶರ್ಚಸ್ಯ ಹರ್ಯತಃ ಪ್ರಾಗಾಥೋಽಗ್ನಿರ್ಗಾಯತ್ರೀ । ನವಾ ಉ ದೇವಾ ಇತಿ ನವರ್ಚಸ್ಯ ಭಿಕ್ಷುರಾಂಗಿರಸೋ ಧನಾನ್ನದಾನಂ ತ್ರಿಷ್ಟುಬಾದ್ಯೇ ಜಗತ್ಯೌ । ಶ್ರದ್ಧಾಯಾಂಗಿರಿತಿ ಪಂಚರ್ಚಸ್ಯ ಶ್ರದ್ಧಾ ಕಾಮಾಯನೀ ಶ್ರದ್ಧಾ ಅನುಷ್ಟುಪ್ ॥ ಅತೋ ದೇವಾ ಇತಿ ಪಂಚಚತ್ವಾರಿಂಶನ್ಮಂತ್ರಾಣಾಂ ಮೇಧಾತಿಥಿಃ ಔಚಥ್ಯೋ ದೀರ್ಘತಮಾಃ ಬಾರ್ಹಸ್ಪತ್ಯೋ ಭಾರದ್ವಾಜಃ ಮೈತ್ರಾವರುಣಿರ್ವಸಿಷ್ಠಃ ಗಾಯತ್ರೀ ತ್ರಿಷ್ಟುಪ್ ಜಗತೀ ಛಂದಾಂಸಿ । ವಿಷ್ಣುಃ, ಇಂದ್ರಾವಿಷ್ಣುರ್ದೇವತಾ ॥ ಅನ್ನಸೂಕ್ತಮಂತ್ರಪಠನೇ ವಿನಿಯೋಗಃ ॥

ಓಂ ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ವೈಶ್ವಾನರಮೃತ ಆಜಾತಮಗ್ನಿಮ್ । ಕವಿಂ ಸಮ್ರಾಜಮತಿಥಿಂ ಜನಾನಾಮಾಸನ್ನಾ ಪಾತ್ರಂ ಜನಯಂತ ದೇವಾಃ ॥

ಓಮ್ ಆಮಾಸು ಪಕ್ವಮೈರಯ ಆ ಸೂರ್ಯಂ ರೋಹಯೋ ದಿವಿ । ಘರ್ಮಂ ನ ಸಾಮಂತಪತಾ ಸುವೃಕ್ತಿಭಿರ್ಜುಷ್ಟಂ ಗಿರ್ವಣಸೇ ಬೃಹತ್ ॥

ಓಂ ಸೋಮೋ ಧೇನುಂ ಸೋಮೋ ಅರ್ವಂತಮಾಶುಂ ಸೋಮೋ ವೀರಂ ಕರ್ಮಣ್ಯಂ ದದಾತಿ । ಸಾದನ್ಯಂ ವಿದಥ್ಯಂ ಸಭೇಯಂ ಪಿತೃಶ್ರವಣಂ ಯೋ ದದಾಶದಸ್ಮೈ ॥

ಓಮ್ ಉಪ ಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗುತ ದೋಹದೇನಾಮ್ । ಶ್ರೇಷ್ಠಂ ಸವಂ ಸವಿತಾ ಸಾವಿಷನ್ನೋ-ಽಭೀದ್ಧೋ ಘರ್ಮಸ್ತದು ಷು ಪ್ರ ವೋಚಮ್ ॥ ೧ ॥ ಹಿಂಕೃಣ್ವತೀ ವಸುಪತ್ನೀ ವಸೂನಾಂ ವತ್ಸಮಿಚ್ಛಂತೀ ಮನಸಾಭ್ಯಾಗಾತ್ । ದುಹಾಮಶ್ವಿಭ್ಯಾಂ ಪಯೋ ಅಘ್ನ್ಯೇಯಂ ಸಾ ವರ್ಧತಾಂ ಮಹತೇ ಸೌಭಗಾಯ ॥ ೨ ॥

